# ಶ್ರೀಮನ್ಮಹಾಭಾರತ

ಭಾರತ ದರ್ಶನ ಪ್ರಕಾಶನ



ಸಭಾಪರ್ವ
ವನಪರ್ವ

ನಾರಾಯಣಂ ನಮಸ್ಕೃತ್ಯ ನರಂ ಚೈವ ನರೋತ್ತಮಮ್ ।
ದೇವೀಂ ಸರಸ್ವತೀಂ ಚೈವ ತತೋ ಜಯಮುದೀರಯೇತ್ ॥

ಸಂಪುಟ ೪

ಭಾರತ ದರ್ಶನ ಪ್ರಕಾಶನ

# ಶ್ರೀಮನ್ಮಹಾಭಾರತ

(ವ್ಯಾಸಭಾರತದ ಕನ್ನಡ ಸರಳಾನುವಾದ)

ಭಾತಿ ಸರ್ವೇಷು ವೇದೇಷು
ರತಿಃ ಸರ್ವೇಷು ಜನ್ತುಷು ।
ತರಣಂ ಸರ್ವತೀರ್ಥಾನಾಂ
ತೇನ ಭಾರತಮುಚ್ಯತೇ ॥

**ಸಂಪುಟ 4**

*ಮುದ್ರಕರು:*
**ಭಾರತ ದರ್ಶನ ಮುದ್ರಣಾಲಯ**
163, ಮಂಜುನಾಥ ರಸ್ತೆ, 2ನೇ ಬ್ಲಾಕ್, ತ್ಯಾಗರಾಜನಗರ,
ಬೆಂಗಳೂರು - 560 028
ದೂರವಾಣಿ: 080-26765381

ಪ್ರಥಮ ಇ-ಮುದ್ರಣ ಜನವರಿ ೨೦೧೪

*ಆದಿ ಅಧ್ಯಕ್ಷರು:*
**ಪರಮಪೂಜ್ಯ ಶ್ರೀ ಶ್ರೀ**
**ರಂಗಪ್ರಿಯಮಹಾದೇಶಿಕಸ್ವಾಮಿಗಳವರು**

*ಆದಿ ವ್ಯವಸ್ಥಾಪಕ ಸಂಪಾದಕರು:*
**ದಿ|| ಕೆ.ಎಸ್. ಕೌಶಿಕ್ ('ವಿಶ್ವಾಮಿತ್ರ')**

*ಆದಿ ಸಂಪಾದಕರು:*
**ದಿ|| ವಿದ್ವಾನ್ ಹೆಚ್.ಎನ್. ರಂಗಸ್ವಾಮೀ**

*ಆದಿ ಸಂಪಾದಕರು:*
**ದಿ|| ವಿದ್ವಾನ್ ರಾಮೇಶ್ವರಾವಧಾನೀ**



ಸಂಪಾದಕ ಮಂಡಲಿ:

ಶ್ರೀ ಶ್ರೀಹರಿ
ಶ್ರೀ ನೆ.ವೆಂ. ಶ್ರೀನಿವಾಸರಾಯ

ಶ್ರೀ ವಿ. ಸೂರ್ಯನಾರಾಯಣ್, M.A. B.Com., B.L.,
ಕೋಶಾಧ್ಯಕ್ಷರು

III

# ವಿನಮ್ರವಚನಗಳು

ಪರಮಾತ್ಮನ ದಯೆಯಿಂದಲೂ, ಸದ್ಗುರುವಿನ ಅನುಗ್ರಹದಿಂದಲೂ, ಸತ್ಪುರುಷರ ಸಹಕಾರ-ಸದಾಶಯಗಳಿಂದಲೂ ಶ್ರೀಮನ್ಮಹಾಭಾರತದ ನಾಲ್ಕನೆಯ ಸಂಪುಟವನ್ನು ಪ್ರಿಯವಾಚಕರ ಅಂಜಲಿಪುಟಗಳಲ್ಲಿಡುತ್ತಿದ್ದೇವೆ. ಈ ಸಂಪುಟವೂ ಹೊರಬರಲು ಸ್ವಲ್ಪ ಸಾವಕಾಶವೇ ಆಯಿತು. ವಿದ್ಯುತ್ತಿನ ಕೊರತೆ–ಮುದ್ರಣಯಂತ್ರವು ಮುರಿದುಹೋದುದು–ಇತ್ಯಾದಿಗಳು ಸಾವ ಕಾಶಕ್ಕೆ ಕಾರಣವೆಂದು ಹೇಳಬಹುದಾದರೂ ಭಗವದಿಚ್ಛೆಯಂತೆ ನಿಯಮಿತಕಾಲಕ್ಕೆ ಪ್ರಕಟವಾಗುತ್ತಿದೆಯೆಂದು ಹೇಳಬಯಸುತ್ತೇವೆ. ನಾವೆಷ್ಟೇ ಪ್ರಯತ್ನಿಸಿದರೂ 'ಸಪ್ತಮಂ ದೈವಚಿಂತನಂ' ಎಂಬಂತೆ ಅವನ ಸಂಕಲ್ಪಾನು ಸಾರವಾಗಿ ನಾವು ನಡೆಯಬೇಕಾಗಿರುವುದೇ ಹೊರತು 'ನಾವು ಹೀಗೆಯೇ ಮಾಡುವೆವು' – ಎಂದು ಹೇಳುವ ಧೈರ್ಯವು ನಮಗೆ ಖಂಡಿತವಾಗಿಯೂ ಇರುವುದಿಲ್ಲ. ಇನ್ನೂ ಮುಂಚಿತವಾಗಿ ಸಂಪುಟಗಳು ಮುಗಿಯುವಂತೆ ಕೃಪೆಮಾಡಿ ಸಂಪುಟರೂಪವಾದ ಈ ದಿವ್ಯಕುಸುಮಗಳನ್ನು ನಿನ್ನ ಪಾದಾರವಿಂದಗಳಲ್ಲರ್ಪಿಸಿಕೊಳ್ಳೆಂದು ಅಂಗಲಾಚಿಬೇಡಿಕೊಳ್ಳುವುದೊಂದೇ ನಮ್ಮ ಕರ್ತವ್ಯವಾಗಿರುತ್ತದೆ. ದಯಾಮಯನಾದ ಪರಮಾತ್ಮನ ಕರುಣೆಯಿದ್ದರೆ ಐದನೆಯ ಸಂಪುಟವನ್ನು ಸಾಧ್ಯವಾದಷ್ಟು ಬೇಗನೆ ವಾಚಕರಿಗೆ ಅರ್ಪಿಸುವೆವು.

ನಮ್ಮ ಈ ಪ್ರಕಟಣೆಯು ದಿನ-ದಿನಕ್ಕೂ ಜನಪ್ರಿಯವಾಗುತ್ತಿರುವು ದೆಂಬುದಕ್ಕೆ ಮೊದಲನೆಯ ಸಂಪುಟವು ಪೂರ್ಣವಾಗಿ ಖರ್ಚಾಗಿರುವುದೇ ನಿದರ್ಶನವಾಗಿರುತ್ತದೆ. ಇನ್ನು ಕೇವಲ ಸ್ವಲ್ಪವೇ ಪ್ರತಿಗಳಿದ್ದು ಅದರ ಪುನರ್ಮುದ್ರಣದ ಸಮಸ್ಯೆಯು ನಮ್ಮನ್ನು ಈಗಾಗಲೇ ಬಾಧೆಪಡಿಸುತ್ತಿದೆ. ಇದು ಆರೆಂಟು ವರ್ಷಗಳ ಯೋಜನೆಯಾದುದರಿಂದ ಪುನರ್ಮುದ್ರಣವು ಅನಿವಾರ್ಯ. ಪುನರ್ಮುದ್ರಣಕ್ಕಾಗಿಯೇ ಪೂರ್ಣಮಾಲೆಗೆ ಒಂದು ಸಾವಿರ ಮಂದಿ ಸದಸ್ಯರನ್ನು ಮಾಡಿಕೊಳ್ಳಬೇಕೆಂಬ ನಮ್ಮ ಪ್ರಯತ್ನವಿನ್ನೂ ಪೂರ್ಣವಾಗಿ ಸಫಲವಾಗಿರುವುದಿಲ್ಲ. ಪರಮಾತ್ಮನ ದಯೆಯಿಂದ ಸಫಲ ವಾದಲ್ಲಿ ಪುನರ್ಮುದ್ರಣವು ಅಷ್ಟು ಕಷ್ಟವೆನಿಸುವುದಿಲ್ಲ.

ಕಳೆದ ಸಂಪುಟದ ಪ್ರಕಾಶನದ ಸಮಯದಲ್ಲಿಯೇ ನಮಗೆ ಕಾಗದದ

ತೊಂದರೆಯು ತಲೆದೋರಿತ್ತು. ಆದರೆ ದಯಾಮಯನಾದ ಪರಮಾತ್ಮನು ಅದಕ್ಕೊಂದು ಮಾರ್ಗವನ್ನು ಕಲ್ಪಿಸಿಕೊಟ್ಟಿರುವುದರಿಂದ ಈ ಸಂಪುಟದ ಕಾಗದಕ್ಕೆ ನಮಗೆ ಯಾವ ವಿಧವಾದ ತೊಂದರೆಯೂ ಆಗಲಿಲ್ಲ. ಭದ್ರಾವತಿಯ ಮೈಸೂರು ಪೇಪರ್ ಮಿಲ್ಸ್‌ನಿಂದ ನೇರವಾಗಿ ನಮಗೆ ಬೇಕಾಗುವಷ್ಟು ಕಾಗದವನ್ನು ಪಡೆಯುತ್ತಿದ್ದೇವೆ. ಇದು ಲಭ್ಯವಾಗಲು ನೆರವು ನೀಡಿದ ಭದ್ರಾವತಿಯ ಕಬ್ಬಿಣ ಮತ್ತು ಉಕ್ಕಿನ ಕಾರ್ಖಾನೆಯ ಡಿವಿಷನಲ್ ಮಾನೇಜರ್ ಆದ ಶ್ರೀ ಕೆ. ಭೀಮೇಗೌಡರಿಗೂ ಮತ್ತು ಅವರ ಸ್ನೇಹಿತರಾದ ಭದ್ರಾವತಿ ಪೇಪರ್ ಮಿಲ್ಸ್‌ನ ಕಮರ್ಷಿಯಲ್ ಸೇಲ್ಸ್ ಮ್ಯಾನೇಜರ್ ಶ್ರೀ ಪ್ರಸನ್ನಕುಮಾರ್ ಅವರಿಗೂ ನಾವು ಆಭಾರಿಗಳಾಗಿದ್ದೇವೆ. ಮುಂದಿನ ಎಲ್ಲ ಸಂಪುಟಗಳಿಗೂ ಅವರು ಇದೇ ವಿಧವಾದ ನೆರವು ನೀಡುವರೆಂಬ ಭರವಸೆಯಿದೆ.

ಕಾಗದವು ಸಿಕ್ಕಿತಾದರೂ ಉಳಿದ ವಸ್ತುಗಳ ಬೆಲೆ, ಮಜೂರಿ–ಇತ್ಯಾದಿ ಗಳು ದಿನ-ದಿನಕ್ಕೂ ಹೆಚ್ಚುತ್ತಲೇ ಇವೆ. ಹೆಚ್ಚು ವೆಚ್ಚದ ಕಾರಣದಿಂದಾಗಿ ಈ ಬಾರಿ ಪ್ರಕಟಣೆಗೆ ಮುಂಚಿನ ರಿಯಾಯಿತಿ ದರದ ಮಾರಾಟವನ್ನು ನಿಲ್ಲಿಸಿಬಿಡಲು ಯೋಚಿಸಲಾಗಿತ್ತು. ಸುಹೃದರ ಸಲಹೆಯಂತೆ ಈ ಬಾರಿಯೂ ಅನೇಕ ಗ್ರಾಹಕರಿಗೆ ನಿರಾಶೆಯನ್ನುಂಟುಮಾಡಕೂಡದೆಂಬ ಕಾರಣದಿಂದ ಸಮಾರಂಭದ ದಿನದವರೆಗೆ ಒಂದು ರೂ. ರಿಯಾಯಿತಿ ದರದಲ್ಲಿ ಕೊಡಲು ನಿರ್ಧರಿಸಲಾಯಿತು. ಆದರೆ ಮುಂದಿನ ಸಂಪುಟಗಳಿಗೆ ಇದೂ ಸಾಧ್ಯವಾಗದೇ ಇರಬಹುದು. ಗ್ರಾಹಕರು ದಯಮಾಡಿ ಸಹಕರಿಸಬೇಕಾಗಿ ಪ್ರಾರ್ಥಿಸುತ್ತೇವೆ.

ಜಗದ್ಗುರು ಶ್ರೀ ಶಂಕರಾಚಾರ್ಯ ಶ್ರೀ ಶ್ರೀ ರಾಘವೇಂದ್ರಭಾರತೀ ಸ್ವಾಮಿಗಳವರೂ ಮತ್ತು ಜಗದ್ಗುರು ಶ್ರೀ ಶಂಕರಾಚಾರ್ಯ ಶೃಂಗೇರಿ ಶ್ರೀ ಶ್ರೀ ಶ್ರೀಮದಭಿನವ ವಿದ್ಯಾತೀರ್ಥಸ್ವಾಮಿಗಳವರೂ ಪೂರ್ಣಾನುಗ್ರಹ ಮಾಡಿರುತ್ತಾರೆ.

ಅನೇಕ ಸಜ್ಜನರು ನಿಸ್ವಾರ್ಥತೆಯಿಂದ ಇದರ ಪ್ರಚಾರಕಾರ್ಯವನ್ನು ಮಾಡುತ್ತಿದ್ದಾರೆ. ಇವರೇ ನಮ್ಮ ಬೆನ್ನೆಲುಬೆಂದು ಹೇಳಿದರೂ ಅತಿಶಯೋಕ್ತಿ ಯಲ್ಲ. ವೇ॥ ಬ್ರ॥ ಶ್ರೀ ಟಿ. ನಾರಾಯಣಶಾಸ್ತ್ರಿಗಳು, ಶ್ರೀ ಸಿ. ಎಸ್.

ಕೃಷ್ಣಪ್ಪನವರು, ಶ್ರೀ ಚಂದ್ರಶೇಖರಭಟ್ಟರು, ಶ್ರೀ ರಾಮಸ್ವಾಮಿಗಳು, ಶ್ರೀ ಕೇಶವಮೂರ್ತಿಗಳು, ಶ್ರೀ ಕಾಶೀಪತಯ್ಯನವರು, ಶ್ರೀ ಟಿ. ಆರ್. ವೆಂಕಟರಾಯರು, ಶ್ರೀ ಜಿ. ಶಿವರಾಮುರವರು, ಶ್ರೀ ಪುಟ್ಟಣ್ಣನವರು, ಶ್ರೀ ರಾಮಕೃಷ್ಣರವರು, ಶ್ರೀ ಕೃಷ್ಣಮೂರ್ತಿಗಳು—ಇವರೇ ಮುಂತಾದ ಇನ್ನೂ ಅನೇಕ ಮಹನೀಯರು ಇದರ ಪ್ರಚಾರಕ್ಕೆ ಸೊಂಟಕಟ್ಟಿ ನಿಂತಿದ್ದಾರೆ. ಮಹಾಭಾರತ ಪ್ರಚಾರಕ್ಕಾಗಿ ಇವರೆಲ್ಲರೂ ಮಾಡುತ್ತಿರುವ ನಿಸ್ವಾರ್ಥ ಸೇವೆಗೆ ಮಹಾಭಾರತದ ನಾಯಕನಾದ ಶ್ರೀಕೃಷ್ಣಪರಮಾತ್ಮನು ಸುಪ್ರೀತನಾಗಿ ಇವರೆಲ್ಲರಿಗೂ ಸಕಲೇಷ್ಟಾರ್ಥಗಳನ್ನೂ ದಯಪಾಲಿಸಲಿ.

ಸಂಪಾದಕಮಂಡಲಿಯವರ ವಿಷಯವಾಗಿ ಎಷ್ಟು ಬರೆದರೂ ಕಡಿಮೆಯೇ. ದಿನಕ್ಕೆ ನಾಲ್ಕಾರು ಘಂಟೆಗಳ ಕಾಲ ಶ್ರಮಿಸಿ ನಿಃಸ್ವಾರ್ಥತೆಯಿಂದ ಈ ಪ್ರಕಟಣೆಗೆ ನೆರವು ನೀಡುತ್ತಿದ್ದಾರೆ. ಇಂತಹ ಸತ್ಪುರುಷರೆಲ್ಲರ ಸಹಾಯ ಸಂಪತ್ತಿಯನ್ನು ದಯಾಮಯನಾದ ಪರಮಾತ್ಮನು ಒದಗಿಸಿರುವುದರಿಂದಲೇ ಪಂಗುವಾದೊಬ್ಬನಿಗೆ ಮೂವತ್ತು ಶಿಖರಗಳುಳ್ಳ ಪರ್ವತದಲ್ಲಿ ನಾಲ್ಕು ಶಿಖರಗಳನ್ನು ಹತ್ತಲು ಸಾಧ್ಯವಾಗಿದೆ.

ನಾಲ್ಕನೆಯ ಸಂಪುಟಕ್ಕೆ ಮುನ್ನುಡಿಯನ್ನು ಬರೆದುಕೊಟ್ಟು ಆಶೀರ್ವದಿಸಿರುವ ಹಿರಿಯ ಸಾಹಿತಿಗಳಾದ ಶ್ರೀ ಮಾಸ್ತಿವೆಂಕಟೇಶ ಅಯ್ಯಂಗಾರ್ ಅವರಿಗೆ ಕೃತಜ್ಞರಾಗಿರುತ್ತೇವೆ. ಮುನ್ನುಡಿಯೊಡನೆ ಈ ಮಹನೀಯರು ಸೂಕ್ತವಾದ ಸಲಹೆಗಳನ್ನೂ ನೀಡಿರುತ್ತಾರೆ.

ಐದನೆಯ ಸಂಪುಟವನ್ನು ಸಾಧ್ಯವಾದಷ್ಟು ಬೇಗ ವಾಚಕರಿಗೆ ಒದಗಿಸಿಕೊಡಬೇಕೆಂಬ ಹಂಬಲವಿದೆ. ನಲೋಪಾಖ್ಯಾನವು ಪೂರ್ಣ ವಾಗದೇ ಇರುವುದರಿಂದ ಅನೇಕ ವಾಚಕರು ಮುಂದಿನ ಸಂಪುಟವನ್ನು ಬಹುಶೀಘ್ರವಾಗಿ ಪಡೆದುಕೊಳ್ಳಲು ಆತುರರಾಗುವುದು ಸಹಜ. ಪರಮಾತ್ಮನ ದಯೆ ಮತ್ತು ಸದ್ಗುರುವಿನ ಅನುಗ್ರಹಗಳಿಂದ ನಮ್ಮ ಹಂಬಲವು ಪೂರ್ಣವಾಗುವುದೆಂದು ಭಾವಿಸಿದ್ದೇವೆ.

—ಪ್ರಕಾಶಕರು.

# ಸೇಸೆನುಡಿ

ಶ್ರೀಮದ್ರಾಮಾಯಣ-ಮಹಾಭಾರತಗ್ರಂಥಗಳು ಇಂದಿನ ಭರತ ವರ್ಷದ ನಮ್ಮ ಪಿತ್ರಾರ್ಜಿತ ಸಂಪತ್ತು. ಈ ಮಹಾಕಾವ್ಯ-ಇತಿಹಾಸಗಳೂ, ಇವನ್ನು ಅನುಸರಿಸಿ ದೇಶ ಭಾಷೆಗಳಲ್ಲಿ ನಿರ್ಮಾಣವಾದ ನೂರಾರು ಕೃತಿಗಳೂ ನಮ್ಮ ರಾಷ್ಟ್ರದ ಒಂದೊಂದು ಪ್ರಾಂತದಲ್ಲೂ ಜನರಲ್ಲಿ ಧರ್ಮಪ್ರಚಾರ ಮಾಡಿ ಜನಾಂಗದ ಜೀವನದಲ್ಲಿ ಬೆಳಕಾಗಿ ಬಾಳಿವೆ. ಈ ಮಾತು ಕನ್ನಡಕ್ಕೂ ಅನ್ವಯಿಸುತ್ತದೆ. ಮೈಸೂರು ಅರಮನೆಯ ಆಶ್ರಯದಲ್ಲಿ ರಾಮಾಯಣ-ಮಹಾಭಾರತಗಳ ಭಾಷಾಂತರಗಳು ಹಿಂದೆ ಪ್ರಕಟವಾದುವು. ಈಚೆಗೆ ರಾಮಾಯಣದ ಪರಿಷ್ಕೃತ ಭಾಷಾಂತರಗಳು ಪ್ರಕಟವಾಗಿವೆ. ಭಾರತದ ಒಂದು ಭಾಷಾಂತರ ದಿವಂಗತ ಶ್ರೀ ದೇವಶಿಖಾಮಣಿ ಅಳಸಿಂಗರಾ ಚಾರ್ಯರು ರಚಿಸಿ ಮದರಾಸಿನ ಒಂದು ಸಂಸ್ಥೆಯಿಂದ ಪ್ರಕಟವಾಯಿತು. ಅದರ ಪ್ರತಿಗಳು ಸುಲಭವಾಗಿ ದೊರೆಯುತ್ತಿಲ್ಲ. ಆದ್ದರಿಂದ ನಮ್ಮ ಜನಕ್ಕೆ ಹೊಸ ಒಂದು ಭಾಷಾಂತರ ಬೇಕಾಗಿದೆ. ಇದನ್ನು ಒದಗಿಸಲು ಭಾರತ ದರ್ಶನ ಪ್ರಕಾಶನ ಸಂಸ್ಥೆಯ ನಮ್ಮ ಪಂಡಿತರು ಯತ್ನ ನಡೆಸಿದ್ದಾರೆ. ಈ ಬಗ್ಗೆ ನಾನು ಈ ಮಹನೀಯರನ್ನು ವಂದಿಸುತ್ತೇನೆ. ಅರಮನೆಯ ಭಾಷಾಂತರ ಆಗಿನ ದಿನಕ್ಕೆ ತಕ್ಕಂತೆ ಆಯಿತು. ಶ್ರೀ ಅಳಸಿಂಗರಾಚಾರ್ಯರ ಭಾಷಾಂತರ ಒಟ್ಟಿನಲ್ಲಿ ತೃಪ್ತಿಕರವಾಗಿತ್ತು. ಈ ಭಾಷಾಂತರದಲ್ಲಿ ಪಂಡಿತರು ಬೇರೆ ಒಂದು ಕ್ರಮವನ್ನು ಹಿಡಿದಿದ್ದಾರೆ. ಈ ವಿಷಯದಲ್ಲಿ ನನಗೆ ತೋರಿರುವ ಕೆಲವು ವಿವರಗಳನ್ನು ಈ ವಿದ್ವನ್ಮಂಡಲಿಯ ಕಾರ್ಯಕರ್ತರಾದ ಶ್ರೀ ಕೌಶಿಕರವರಲ್ಲಿ ವಿಜ್ಞಾಪಿಸಿದ್ದೇನೆ.

ಈ ಭಾಷಾಂತರಕಾರ್ಯ ಅಗತ್ಯವಾಗಿ ಮುಂದುವರಿಸಬೇಕಾದ ಕಾರ್ಯ. ಇದು ಚೆನ್ನಾಗಿ ನಡೆಯಲಿ ಎಂದು ನಾನು ಹಾರೈಸುತ್ತೇನೆ. ಈ ಕೆಲಸಕ್ಕೆ ನಮ್ಮ ಜನತೆ, ಸರ್ಕಾರ, ಸಾರ್ವಜನಿಕಸಂಸ್ಥೆಗಳ ನೆರವು ದೊರೆಯಬೇಕು ; ದೊರೆಯುತ್ತವೆ–ಎಂದು ನಾನು ನಂಬಿದ್ದೇನೆ.

ಲೋಕದ ಇತಿಹಾಸದಲ್ಲಿ ಭರತವರ್ಷ ಯೋಗ್ಯಪಾತ್ರವನ್ನು ವಹಿಸ ಬೇಕೆಂದರೆ ಅದು ಭರತವರ್ಷವಾಗಿ ಉಳಿಯಬೇಕು. ಅದು ಹಾಗೆ ಉಳಿಯಬೇಕೆಂದರೆ ನಮ್ಮ ಹಿರಿಯರು ತೋರಿಸಿದ ಧರ್ಮಮಾರ್ಗ ರಾಷ್ಟ್ರದ ಜೀವನಮಾರ್ಗ ಆಗಬೇಕು. ಇದು ಸಿದ್ಧಿಸಬೇಕಾದರೆ ಆ ಮಾರ್ಗ ಯಾವುದು

ಎನ್ನುವುದು ಒಟ್ಟು ಜನತೆಗೆ ತಿಳಿಯಬೇಕು. ಈ ತಿಳಿವನ್ನು ಹರಡುವುದರಲ್ಲಿ ಒಂದು ಭಾಗ ಇಂಥ ಪ್ರಕಟಣೆಗಳಿಂದ ಕೈಗೂಡುತ್ತದೆ. ಜನಾಂಗದ ಜೀವನದ ಅತಿಮುಖ್ಯಭಾಗವಾದ ಜ್ಞಾನಪ್ರಸಾರದ ಈ ಕಾರ್ಯ ಸುಗಮವಾಗಿ ಸಾಗಲಿ, ಉದ್ದೇಶವನ್ನು ಸಾಧಿಸಲಿ–ಎಂದು ನಾನು ಪ್ರಾರ್ಥಿಸುತ್ತೇನೆ.

ಬೆಂಗಳೂರು
5.11.73

ಮಾಸ್ತಿ ವೆಂಕಟೇಶ ಅಯ್ಯಂಗಾರ್

## ಎರಡನೆಯ ಮುದ್ರಣದ ಪ್ರಸ್ತಾವನೆ

ಪರಮಾತ್ಮನ ದಯೆಯಿಂದಲೂ, ಸಂಪಾದಕಮಂಡಲಿಯವರ ಅಮೋಘ ಸಹಕಾರದಿಂದಲೂ–ನಾಲ್ಕನೆಯ ಸಂಪುಟದ ಪುನರ್ಮುದ್ರಣವು ನಿರೀಕ್ಷಿತ ಕಾಲಕ್ಕಿಂತಲೂ ಮೊದಲಾಗಿಯೇ ಮುಗಿಯಿತೆಂದು ಹೇಳಲು ಹರ್ಷಿಸುತ್ತೇವೆ. ಹತ್ತನೆಯ ಸಂಪುಟದ ಮುದ್ರಣವು ಪ್ರಾರಂಭವಾಗಿದೆ. ನಮ್ಮ ಈ ವರ್ಷದ ಕಾರ್ಯಕ್ರಮದಂತೆ ಈ ಸಂಪುಟವು ಆಗಸ್ಟ್ ತಿಂಗಳಲ್ಲಿ ಹೊರಬೀಳುವುದೆಂದು ಭಾವಿಸಿದ್ದೆವು. ಜೂನ್ ತಿಂಗಳಲ್ಲೇ ಹೊರಬಂದಿದೆ.

ಈ ಸಂದರ್ಭದಲ್ಲಿ ಒಂದು ಸಂತೋಷದ ವಿಷಯವನ್ನು ಪ್ರಸ್ತಾಪಿಸುವ ಅವಶ್ಯಕತೆಯಿದೆ. ನಿರ್ದೇಶಕರು, ಸಾಹಿತ್ಯ ಮತ್ತು ಸಾಂಸ್ಕೃತಿಕ ವಿಭಾಗ–ಇವರು ನಮ್ಮ ಮಹಾಭಾರತದ ಸಂಪುಟಗಳ ಉಪಯೋಗಕ್ಕಾಗಿ ರಿಯಾಯಿತಿ ದರದಲ್ಲಿ ಕಾಗದವನ್ನು ಒದಗಿಸಿರುತ್ತಾರೆ. ಈ ಸಂಪುಟಕ್ಕೆ ಅವರು ಒದಗಿಸಿರುವ ಕಾಗದವನ್ನೇ ಉಪಯೋಗಿಸಿದ್ದೇವೆ. ಮುಂದಿನ ಸಂಪುಟಗಳಿಗೂ ಇವರು ಇದೇ ರೀತಿಯಲ್ಲಿ ಕಾಗದವನ್ನು ಒದಗಿಸಿಕೊಡುವರೆಂಬ ಭರವಸೆಯಿಂದಿರುತ್ತೇವೆ. ಇವರಿಗೆ ನಮ್ಮ ಹೃತ್ಪೂರ್ವಕವಂದನೆಗಳು.

ಅವಿಶ್ರಾಂತವಾಗಿ ಕಾರ್ಯಮಾಡುತ್ತಿರುವ ಸಂಪಾದಕಮಂಡಲಿಯವರಿಗೂ, ಸುಹೃದರಾದ ಪ್ರಚಾರಕರಿಗೂ ಅನಂತಾನಂತವಂದನೆಗಳು. ಇವರೆಲ್ಲರ ಸಹಾಯ-ಸಹಕಾರಗಳಿಂದಲೂ, ಪರಮಾತ್ಮನ ದಯೆಯಿಂದಲೂ ಈ ಮಹಾಕಾರ್ಯವು ಪೂರ್ಣವಾಗಬೇಕಾಗಿದೆ.

–ಪ್ರಕಾಶಕರು.

## ತೃತೀಯ ಮುದ್ರಣದ ಪ್ರಸ್ತಾವನೆ

ಪರಮಾತ್ಮನ ದಯೆಯಿಂದ ನಾಲ್ಕನೆಯ ಸಂಪುಟದ ಮೂರನೆಯ ಮುದ್ರಣವನ್ನು ಮುಗಿಸಿದ್ದೇವೆ. ಮೊದಲನೆಯ ಮುದ್ರಣದ ವಿನಮ್ರವಚನ

ಗಳಲ್ಲಿ ವಿನಂತಿಸಿಕೊಂಡಿರುವ ಹೆಚ್ಚುಭಾಗ ವಿಷಯಗಳು ಮೂರನೆಯ ಮುದ್ರಣಕ್ಕೂ ಅನ್ವಯಿಸುತ್ತವೆ. ರಿಯಾಯಿತಿ ದರದಲ್ಲಿ ಸಿಕ್ಕುತ್ತಿದ್ದ ಕಾಗದವು ಈಗ ಸಿಕ್ಕುತ್ತಿಲ್ಲ. ಬಹಿರಂಗ ಪೇಟೆಯಲ್ಲಿ ಕಾಗದವನ್ನು ತೆಗೆದುಕೊಂಡು ಮುದ್ರಿಸಬೇಕಾಗಿದೆ. ಬೆಲೆಯ ಅಂತರ ಅಜಗಜಾಂತರ. ಸ್ವಲ್ಪ ಹೆಚ್ಚು-ಕಡಿಮೆ ನೂರು ಪಟ್ಟು ಹೆಚ್ಚು. ಆದರೂ ಹಿಂದಿನ ಮತ್ತು ಮುಂದಿನ ಸಂಪುಟಗಳನ್ನು ಮುದ್ರಿಸಲೇಬೇಕು. ಮುದ್ರಿಸುತ್ತೇವೆ. ವಿದ್ಯುತ್ತಿನ ಕಡಿತ-ಕಾಲಕ್ಕೆ ಸರಿಯಾಗಿ ಕಾಗದ ದೊರೆಯದೇ ಇರುವುದು–ಮುಂತಾದ ಕಾರಣಗಳಿಂದಾಗಿ ಆಗುವ ಅಲ್ಪಸ್ವಲ್ಪ ಸಾವಕಾಶವನ್ನು ನಮ್ಮ ಪ್ರಿಯಗ್ರಾಹಕರು ತಾಳಿಕೊಳ್ಳಬೇಕಾಗಿ ಪ್ರಾರ್ಥಿಸುತ್ತೇವೆ. ಗ್ರಾಹಕರ ಆತುರವನ್ನು ನಾವು ಅರಿತಿದ್ದೇವೆ. ಮೂರನೆಯ ಸಂಪುಟವನ್ನು ಓದಿದ ನಂತರ ನಾಲ್ಕನೆಯ ಸಂಪುಟವು ಓದಲು ಸಿಕ್ಕದಿದ್ದರೆ ಚಡಪಡಿಸುವಂತಾಗುತ್ತದೆ. ಆದರೆ ಪುನರ್ಮುದ್ರಣದಲ್ಲಿಯೂ ಮೊಳೆ ಜೋಡಿಸುವುದರಿಂದ ಮೊದಲ್ಗೊಂಡು ಎಲ್ಲ ಕಾರ್ಯಗಳೂ ಅನುಕ್ರಮ ವಾಗಿಯೇ ಆಗಬೇಕಾಗಿರುವುದರಿಂದ ಸಾವಕಾಶವಾಗುವುದು ಅನಿವಾರ್ಯ ವಾಗಿದೆ. ಬೇರೆಯ ಕಡೆ ಮುದ್ರಣಮಾಡಿಸುವ ಸ್ಥಿತಿಯಲ್ಲಿ ಈಗ ನಾವು ಇಲ್ಲ. ನಮ್ಮ ಮುದ್ರಣಾಲಯದಲ್ಲಿ ಮುದ್ರಿಸಿಯೇ ನಮ್ಮ ಜಮಾ-ಖರ್ಚುಗಳು ಸರಿ ದೂಗುತ್ತಿಲ್ಲ. ಹೀಗಿರುವಾಗ ಒಂದಕ್ಕೆ ಎರಡರಷ್ಟು ಹೆಚ್ಚು ಕೊಟ್ಟು ಬೇರೆಯ ಕಡೆ ಮುದ್ರಿಸಲು ಹೇಗೆ ಸಾಧ್ಯವಾಗುವುದು? ನಮ್ಮ ಗ್ರಾಹಕರಲ್ಲಿಯೇ ಉದಾರಿಗಳಾದ ಮುದ್ರಕರು ಯಾರಾದರೂ ಇದ್ದು ಸುಲಭ ಬೆಲೆಗೆ ಮಾಡಿಕೊಡಲು ಮುಂದೆ ಬಂದರೆ ಅಂತಹ ನೆರವನ್ನು ಸಂತೋಷದಿಂದ ಅಂಗೀಕರಿಸಲಾಗುವುದು.

ಪುನರ್ಮುದ್ರಣ ಮಾಡಬೇಕಾಗಿರುವ ಸಂಪುಟಗಳ ಸಂಖ್ಯೆ ಹೆಚ್ಚುತ್ತಿದೆ. ಇದು ಶುಭಸಂಕೇತವೆಂಬುದು ನಿಜ. ಗ್ರಾಹಕರು ದಿನ-ದಿನಕ್ಕೂ ಹೆಚ್ಚುತ್ತಿದ್ದಾರೆ. ಪುನರ್ಮುದ್ರಣವೆಂಬ ಪರ್ವತಾಕಾರದ ಜವಾಬ್ದಾರಿಯನ್ನು ನೆನೆದಾಗ ಭಯವಾಗುತ್ತದೆ. ಆದರೆ ಈ ಮಹಾಕಾರ್ಯಕ್ಕೆ ಪರಮಾತ್ಮನ ಒಲುಮೆಯಿದೆ. ಸಂಪಾದಕಮಂಡಲಿಯ ವಿದ್ವಾಂಸರ ಒತ್ತಾಸೆಯಿದೆ. ನಮ್ಮ ಸಾವಿರಾರು ಮಿತ್ರರ ಸಹಾಯ-ಸಹಕಾರಗಳಿವೆ. ಆದುದರಿಂದ ಎಲ್ಲರಿಗೂ ಹಿಂದಿನ ಸಂಪುಟಗಳನ್ನು ಖಂಡಿತವಾಗಿಯೂ ಒದಗಿಸಿಕೊಡುತ್ತೇವೆ. ಈ ವಿಷಯದಲ್ಲಿ ಯಾರೂ ಸಂಶಯಪಡಬೇಕಾಗಿಲ್ಲ. ಈ ಸಮಯದಲ್ಲಿ ಪೂರ್ಣಮಾಲೆಗೆ

ಹೆಚ್ಚು ಗ್ರಾಹಕರಾದರೆ ನಮ್ಮ ಆರ್ಥಿಕ ಪರಿಸ್ಥಿತಿಯು ಸುಧಾರಿಸುವುದು. ಆದುದರಿಂದ ದಯಮಾಡಿ ನಿಮ್ಮ ಬಂಧು-ಮಿತ್ರರಲ್ಲಿ ಇಬ್ಬರನ್ನಾದರೂ ಗ್ರಾಹಕರನ್ನಾಗಿ ಮಾಡಿಕೊಡಲು ಇಂದೇ ಪ್ರತಿಜ್ಞೆಮಾಡಿರಿ. ಪುಣ್ಯ-ಪುರುಷಾರ್ಥಗಳೆರಡೂ ಲಭಿಸುತ್ತವೆ.

ನಮ್ಮ ಸಂಪಾದಕಮಂಡಲಿಯ ವಿದ್ವಾಂಸರು ಈ ಸಂಪುಟದ ತಪ್ಪು-ಒಪ್ಪುಗಳನ್ನು ನೋಡಿಕೊಟ್ಟು ಸಹಕರಿಸಿರುತ್ತಾರೆ. ಇವರಿಗೆ ನಮ್ಮ ಹೃತ್ಪೂರ್ವಕವಂದನೆಗಳು.

ಈ ಸಂಪುಟವು ಹೊರಬೀಳುವ ವೇಳೆಗೆ 27ನೆಯ ಸಂಪುಟದ ಮುದ್ರಣ ಕಾರ್ಯವು ಪ್ರಾರಂಭವಾಗಿರುತ್ತದೆ. ಅದನ್ನು ಆಗಸ್ಟ್ ಮಾಹೆಯಲ್ಲಿ ಹೊರತರುವ ಆಶಯವಿದೆ. ನೂತನಗ್ರಾಹಕರಿಗೆ ಮುಂದಿನ ಐದನೆಯ ಸಂಪುಟವು ಅಕ್ಟೋಬರ್ ವೇಳೆಗೆ ಸಿಕ್ಕಬಹುದು. ನಮ್ಮ ಗ್ರಾಹಕರೆಲ್ಲರಿಗೂ ಪರಮಾತ್ಮನು ಸಕಲಸೌಭಾಗ್ಯಗಳನ್ನೂ ನೀಡಲೆಂಬ ಪ್ರಾರ್ಥನೆಯೊಡನೆ ವಿರಮಿಸುವೆವು.

ಶಾನ್ತಿಃ ಪುಷ್ಟಿಸ್ತುಷ್ಟಿಶ್ಚಾಸ್ತು ಸಮಸ್ತಸನ್ಮಙ್ಗಲಾನಿ ಭವನ್ತು.

—ಪ್ರಕಾಶಕರು.

## ನಾಲ್ಕನೆಯ ಮುದ್ರಣದ ಪ್ರಸ್ತಾವನೆ

ದಯಾಮಯನಾದ ಪರಮಾತ್ಮನ ದಯೆಯಿಂದ ನಾಲ್ಕನೆಯ ಸಂಪುಟದ ನಾಲ್ಕನೆಯ ಮುದ್ರಣವನ್ನು ಮುಗಿಸಿದ್ದೇವೆ. ಇದನ್ನು ಮುದ್ರಿಸಿದ ನಂತರವೂ ನಾವು ಹೊಸಗ್ರಾಹಕರಿಗೆ 32 ಸಂಪುಟಗಳಲ್ಲಿ 16ಕ್ಕಿಂತಲೂ ಹೆಚ್ಚು ಸಂಪುಟಗಳನ್ನು ಕೊಡಲು ಸಾಧ್ಯವಾಗುವುದಿಲ್ಲ. ಇನ್ನೂ ಕೆಲವು ಸಂಪುಟಗಳು ಮುಗಿದಿರುವುದು ಮತ್ತು ಮುಗಿಯಲಿರುವುದೇ ಇದಕ್ಕೆ ಕಾರಣ. ಎರಡು ತಿಂಗಳಿಗೆ ಒಂದು ಸಂಪುಟವನ್ನು ಹೊರತರಲು ಸಾಧ್ಯ. ಶ್ರೀಮದ್ವಾಲ್ಮೀಕಿ ರಾಮಾಯಣದ ಸಂಪುಟಗಳನ್ನೂ ಮುದ್ರಿಸುತ್ತಾ ಮಹಾಭಾರತದ ಸಂಪುಟಗಳನ್ನು ಎರಡು ತಿಂಗಳಿಗೆ ಒಂದರಂತೆ ಪೂರೈಸಲು ಸಾಧ್ಯವಾಗುವುದೇ ಎಂಬುದನ್ನು ಪರಿಶೀಲಿಸುತ್ತಿದ್ದೇವೆ. ಈಗಾಗಲೇ ಶ್ರೀಮದ್ವಾಲ್ಮೀಕಿ ರಾಮಾಯಣದ ಮೊದಲನೆಯ ಸಂಪುಟದ ಪ್ರತಿಗಳು ಮುಗಿದುಹೋಗಿದ್ದು ಅದನ್ನು ಪುನರ್ಮುದ್ರಿಸುವುದು ಅನಿವಾರ್ಯವಾಗಿದೆ. ಸಂಪುಟಗಳನ್ನು ಇನ್ನೂ ಬೇಗ ಮುದ್ರಿಸಲು ಪರಮಾತ್ಮನು ಇನ್ನೂ ಹೆಚ್ಚಿನ ಸಹಾಯ ಸಂಪತ್ತಿಗಳನ್ನು

ಒದಗಿಸಿಕೊಡಬೇಕಾಗಿದೆ. ಹತ್ತು ವರ್ಷಗಳಲ್ಲಿ ಲಕ್ಷ ಜನರಿಗೆ ಮಹಾ ಭಾರತವನ್ನು ಹಂಚಬೇಕೆನ್ನುವ ನಮ್ಮ ಸದಾಶಯವು ಕೈಗೂಡಬೇಕಾದರೆ ಇನ್ನೂ ಹೆಚ್ಚಿನ ಮುದ್ರಣ ಸೌಕರ್ಯ ಅಗತ್ಯವಾಗಿ ಬೇಕು. ನಮ್ಮ ಸದಿಚ್ಛೆಗಳನ್ನು ಇದುವರೆಗೂ ಆಗುಮಾಡಿಸಿಕೊಟ್ಟಿರುವ ದಯಾಮಯನಾದ ಪರಮಾತ್ಮನು ಇದಕ್ಕೂ ಒಂದು ಮಾರ್ಗವನ್ನು ಕಲ್ಪಿಸಿಕೊಡುವನೆಂಬ ಭರವಸೆಯಿದೆ.

ಈ ಹಿಂದೆ ನಾವು 1985ನೇ ಜನವರಿಯಲ್ಲಿ ಸಂಪುಟದ ಬೆಲೆಯನ್ನು ನವೀಕರಿಸಿದ್ದೆವು. ಈ ಎರಡು ವರ್ಷಗಳಲ್ಲಿ ಕಚ್ಚಾವಸ್ತುಗಳ ಬೆಲೆಯು ಅತ್ಯಧಿಕವಾಗಿದೆ. ಅಂಚೆ, ದೂರವಾಣಿ, ಸಾಗಾಣಿಕೆ ಇವುಗಳ ಬೆಲೆಯು ಸಹ ಗಗನಕ್ಕೆ ಮುಟ್ಟಿದೆ. ಈ ಸಂದರ್ಭದಲ್ಲಿ ಮನಸ್ಸಿಲ್ಲದಿದ್ದರೂ ಮಹಾಭಾರತ ಸಂಪುಟಗಳ ಬೆಲೆಯನ್ನು ಸ್ವಲ್ಪ ಹೆಚ್ಚಿಸುವುದು ಅನಿವಾರ್ಯವಾಗಿದೆ. 1-1-1987ರಿಂದ ಮಹಾಭಾರತದ ಎಲ್ಲ ಸಂಪುಟಗಳ ಬೆಲೆ ಸಂಪುಟ 1ಕ್ಕೆ ಸಾಧಾರಣ ಪ್ರತಿ 15/- ರೂ.ಗಳು. ಕ್ಯಾಲಿಕೋ ಪ್ರತಿ 18/- ರೂ.ಗಳು. ಪೂರ್ಣಮಾಲೆಯ ಚಂದಾ ಮಾತ್ರ 1987ನೇ ಡಿಸೆಂಬರ್ ಕಡೆಯವರೆಗೆ ಈಗಿರುವಂತೆಯೇ ಸಾಧಾರಣ ಮಾಲೆಗೆ 360/- ರೂ.ಗಳೂ ಕ್ಯಾಲಿಕೋ ಮಾಲೆಗೆ 440/- ರೂ.ಗಳೂ ಇರುತ್ತದೆ.

ಮಹಾಭಾರತದ ಗ್ರಾಹಕರೆಲ್ಲರೂ ಶ್ರೀಮದ್ವಾಲ್ಮೀಕಿರಾಮಾಯಣಕ್ಕೂ ಗ್ರಾಹಕರಾಗಬೇಕು. ಇದು ನಮ್ಮ ಕಳಕಳಿಯ ಪ್ರಾರ್ಥನೆ.

640 ಪುಟಗಳ ಹತ್ತು ಸಂಪುಟಗಳಲ್ಲಿ ರಾಮಾಯಣವನ್ನು ಹೊರತರ ಲಾಗುವುದು. 2 ಸಂಪುಟಗಳು ಈಗಾಗಲೇ ಹೊರಬಿದ್ದಿವೆ. ಹತ್ತು ಸಂಪುಟ ಗಳ ಪೂರ್ಣಮಾಲೆ ಸಾಧಾರಣ ಪ್ರತಿಗಳಿಗೆ 120/- ರೂ.ಗಳು. ಕ್ಯಾಲಿಕೋ ಪ್ರತಿಗಳಿಗೆ 150/- ರೂ.ಗಳು. ನಂಬಲಾರದಷ್ಟು ಕಡಿಮೆ ಬೆಲೆ. ಸನಾತನ ಧರ್ಮದಲ್ಲಿ ಅಭಿಮಾನವಿರುವ ಎಲ್ಲರ ಮನೆಗಳಲ್ಲಿಯೂ ಮಹಾಭಾರತ-ರಾಮಾಯಣಗಳೆಂಬ ಎರಡು ದಿವ್ಯಜ್ಯೋತಿಗಳು ಬೆಳಗಬೇಕೆಂಬ ಮತ್ತು ಕಡುಬಡವರಿಗೂ ಈ ಮಹಾಗ್ರಂಥಗಳು ಲಭಿಸಬೇಕೆಂಬ ಆಶಯದಿಂದ ಲಾಭ-ನಷ್ಟಗಳ ಪರಿವೆಯೇ ಇಲ್ಲದೆ ಬೆಲೆಯನ್ನು ಕಡಿಮೆಯಾಗಿ ಇಡಲಾಗಿದೆ. ಇದೇ ಬೆಲೆಯು ನಿರಂತರವಾಗಿರುವುದೆಂದೂ ಹೇಳಬರುವುದಿಲ್ಲ. ಆದುದ ರಿಂದ ಮಹಾಭಾರತ ಗ್ರಾಹಕರೆಲ್ಲರೂ ಈ ಕೂಡಲೇ ರಾಮಾಯಣಕ್ಕೂ ಗ್ರಾಹಕರಾಗಬೇಕಾಗಿ ಪ್ರಾರ್ಥಿಸುತ್ತೇವೆ.

ಪುನರ್ಮುದ್ರಣದ ತಪ್ಪು-ಒಪ್ಪುಗಳನ್ನು ಶ್ರದ್ಧೆಯಿಂದಲೂ ಅಭಿಮಾನ ದಿಂದಲೂ ನೋಡಿಕೊಟ್ಟ ಸಂಪಾದಕ ಮಂಡಲಿಯ ವಿದ್ವಾಂಸರಿಗೆ ನಮ್ಮ ಹೃತ್ಪೂರ್ವಕವಂದನೆಗಳು. ಮಹಾಭಾರತ-ರಾಮಾಯಣಗಳ ಪ್ರಚಾರಕ್ಕಾಗಿ ಶ್ರಮಿಸುತ್ತಿರುವ ಎಲ್ಲರಿಗೂ ದಯಾಮಯನಾದ ಪರಮಾತ್ಮನು ಸಮಸ್ತ ಸನ್ಮಂಗಳಗಳನ್ನು ದಯಪಾಲಿಸಲೆಂಬ ಪ್ರಾರ್ಥನೆಯೊಡನೆ ವಿರಮಿಸುವೆವು.

—ಪ್ರಕಾಶಕರು.

## ಐದನೆಯ ಮುದ್ರಣದ ಪ್ರಸ್ತಾವನೆ

ಪರಮಾತ್ಮನ ದಯೆಯಿಂದಲೂ, ಗುರುಭಗವಂತನ ಆಶೀರ್ವಾದ ದಿಂದಲೂ ನಾಲ್ಕನೆಯ ಸಂಪುಟದ 5ನೆಯ ಪುನರ್ಮುದ್ರಣವನ್ನು ಮುಗಿಸು ತ್ತಿದ್ದೇವೆ. ಹಿಂದಿನ ಪ್ರಸ್ತಾವನೆಗಳಲ್ಲಿರುವ ವಿಷಯವನ್ನೇ ಈಗ ಪುನಃ ಪ್ರಸ್ತಾಪಿಸಬೇಕಾಗಿದೆ. ಕಾಗದಕ್ಕೆ ಹೆಚ್ಚು ಬೆಲೆ. ಎಲ್ಲ ಪದಾರ್ಥಗಳಿಗೂ ಊಹಿಸಲೂ ಕೂಡ ಆಗದಷ್ಟು ಹೆಚ್ಚು ಬೆಲೆ. ಬೆಲೆಗಳಿಗೆ ಕಡಿವಾಣವಿಲ್ಲ. ಕಡಿವಾಣಹಾಕಲು ಯಾರಿಗೂ ಸಾಮರ್ಥ್ಯವೂ ಇಲ್ಲ. ಲಂಗು-ಲಗಾಮು ಗಳಿಲ್ಲದ ಹುಚ್ಚುಕುದುರೆಯಂತೆ ಬೆಲೆಗಳು ಯದ್ವಾ-ತದ್ವಾ ಗಗನಕ್ಕೇರುತ್ತಿವೆ. ಲಕ್ಷ ಶ್ಲೋಕಗಳ ಭಾರತವನ್ನು ಲಕ್ಷ ಗ್ರಾಹಕರಿಗೆ ಹಂಚಬೇಕೆನ್ನುವ ನಮ್ಮ ಆಶಾಗೋಪುರ ಕುಸಿದು ಬಿದ್ದಿದೆಯೆಂದೇ ಹೇಳಬಹುದು. ಇನ್ನೂ ನಾವು ಸುಮಾರು 17 ಸಂಪುಟಗಳನ್ನು ಪುನರ್ಮುದ್ರಣ ಮಾಡಬೇಕಾಗಿದೆ. ಗಗನಕ್ಕೇರುತ್ತಿರುವ ಈ ಬೆಲೆಯಲ್ಲಿ ಕಾಗದಕ್ಕೆ ಹೇಗೆ ಬಂಡವಾಳವನ್ನು ಒದಗಿಸಿಕೊಳ್ಳಬೇಕೆಂಬುದೇ ದೊಡ್ಡ ಸಮಸ್ಯೆಯಾಗಿದೆ.

ಪರಮಾತ್ಮನ ಪ್ರೇರಣೆಯಂತೆ ಧಾರ್ಮಿಕರಾದ ಧನಿಕರು ಮುಂದೆಬರ ಬೇಕು. ನಮ್ಮ ಅನುಭವದಂತೆ ಬಂದಾರು! ನಮ್ಮ ಕನಸೂ ನನಸಾಗಬಹುದು. 'ಆಗಲಿ'—ಎಂದು ಪರಮಾತ್ಮನನ್ನು ನಾವೆಲ್ಲರೂ ಅನನ್ಯಭಕ್ತಿಯಿಂದ ಪ್ರಾರ್ಥಿಸೋಣ.

ಈ ಸಂಪುಟದ ತಪ್ಪು-ಒಪ್ಪುಗಳನ್ನೂ ಸಂಪಾದಕಮಂಡಲಿಯ ವಿದ್ವಾಂಸರು ನೋಡಿಕೊಟ್ಟು ಉಪಕರಿಸಿರುತ್ತಾರೆ. ಅವರೆಲ್ಲರಿಗೂ ನಮ್ಮ ಹೃತ್ಪೂರ್ವಕ ವಂದನೆಗಳು.

ಸಮಸ್ತರಿಗೂ ಸನ್ಮಂಗಳವುಂಟಾಗಲಿ. —ಪ್ರಕಾಶಕರು.

# ಮಹಾಭಾರತ–ಸಭಾಪರ್ವ–ನಾಲ್ಕನೆಯ ಸಂಪುಟದ
# ವಿಷಯಾನುಕ್ರಮಣಿಕೆ



## ಷಷ್ಠ ಮುದ್ರಣದ ಪ್ರಸ್ತಾವನೆ

ದಯಾಮಯನಾದ ಪರಮಾತ್ಮನ ಕರುಣೆಯಿಂದಲೂ ಗುರು ಭಗವಂತನ ಅಮೋಘವಾದ ಆಶೀರ್ವಾದಗಳಿಂದಲೂ ಭಗವದ್ಭಕ್ತರ ಸಹಕಾರ-ಸದಾಶಯಗಳಿಂದಲೂ ಶ್ರೀಮನ್ಮಹಾಭಾರತದ 4ನೇ ಸಂಪುಟದ 6ನೇ ಪುನರ್ಮುದ್ರಣವನ್ನು ಮುಗಿಸುತ್ತಿದ್ದೇವೆ. ಈ ಗ್ರಂಥರತ್ನಗಳನ್ನು ನಾವು ದೇಶಾದ್ಯಂತವಾಗಿ ಪ್ರಚಾರಮಾಡುವ ಇಚ್ಛೆಯುಳ್ಳವರಾಗಿದ್ದೇವೆ. ಇದನ್ನು ಸಾಧಿಸಲು ಭಗವಂತನ ದಯೆ, ಗುರುಗಳ ಆಶೀರ್ವಾದ, ಸಾಧು-ಸಂತರ ಸಹಕಾರ ಅತ್ಯಾವಶ್ಯಕ. ಇದುವರೆಗೂ ನಡೆದುಬಂದಿರುವುದು ಈ ಹಿನ್ನೆಲೆಯಲ್ಲಿಯೇ. ಆದುದರಿಂದ ದೈವಸಹಾಯ, ಗುರು ಅನುಗ್ರಹ, ಸಾಧು-ಸಂತರ ಸಹಕಾರ–ಇವುಗಳು ಅವಶ್ಯವಾಗಿ ಬೇಕಾಗಿರುತ್ತದೆ. ಕಳೆದ 47 ವರ್ಷಗಳಿಂದಲೂ ಸಹಕರಿಸುತ್ತಾ ಈ ಮಹಾಗ್ರಂಥಗಳ ಪ್ರಕಟಣೆಗೆ ಕಾರಣಭೂತರಾದ ಈ ಮಹನೀಯರೆಲ್ಲರೂ ಇನ್ನು ಮುಂದೆಯೂ ಇದೇ ರೀತಿಯಲ್ಲಿ ಸಹಕರಿಸುತ್ತಾ ನಮ್ಮ ಈ ಪ್ರಕಾಶನಕ್ಕೆ ತನು-ಮನ-ಧನಗಳಿಂದಲೂ ಸಹಕರಿಸಬೇಕಾಗಿ ವಿನಂತಿಸುತ್ತೇವೆ.

**–ಪ್ರಕಾಶಕರು.**



ಶ್ರೀಮಹಾಗಣಪತಯೇ ನಮಃ   ಶ್ರೀಮಹಾಸರಸ್ವತ್ಯೈ ನಮಃ   ಶ್ರೀಸದ್ಗುರವೇ ನಮಃ



**ನಾರಾಯಣಂ ನಮಸ್ಕೃತ್ಯ ನರಂ ಚೈವ ನರೋತ್ತಮಮ್ ।**
**ದೇವೀಂ ಸರಸ್ವತೀಂ ಚೈವ ತತೋ ಜಯಮುದೀರಯೇತ್ ॥**

# ಶ್ರೀಮನ್ಮಹಾಭಾರತ-ಸಭಾಪರ್ವ; ನಾಲ್ಕನೆಯ ಭಾಗ

೭೧ನೆಯ ಅಧ್ಯಾಯ                ದ್ಯೂತಪರ್ವ (ಮುಂದುವರಿದಿದೆ.)

## ಶಕುನಿಯ ಕಪಟತನದಿಂದ ದ್ಯೂತದಲ್ಲಿ ಯುಧಿಷ್ಠಿರನ ಪರಾಜಯ

ಜೂಜಾಡುವವನಿಗೆ ಇಹ-ಪರಗಳ ಜ್ಞಾನವಿರುವುದಿಲ್ಲ. ಯುಕ್ತಾಯುಕ್ತವಿವೇಚನೆಯಿರುವುದಿಲ್ಲ. 'ತಾನೊಮ್ಮೆ ಗೆದ್ದುಬಿಟ್ಟರೆ!' ಎಂಬ ಒಂದೇ ಒಂದು ಆಶೆಯನ್ನಿಟ್ಟುಕೊಂಡು ಆಟವನ್ನು ಮುಂದುವರಿಸುತ್ತಲೇ ಇರುತ್ತಾನೆ. ಮೊದಲನೆಯ ಆಟದಲ್ಲಿ ಯುಧಿಷ್ಠಿರನು ಸೋತುಹೋದನು. ಆದರವನಿಗೆ ಆಟವು ಸಾಕೆನ್ನಿಸಲಿಲ್ಲ.

ವೈಶಂಪಾಯನರು ಹೇಳುತ್ತಾರೆ :

"ಜನಮೇಜಯ! ಸೋತ ಮರುಕ್ಷಣದಲ್ಲಿಯೇ ಶಕುನಿಯನ್ನು ಕುರಿತು ಯುಧಿಷ್ಠಿರನೇ ಹೇಳುತ್ತಾನೆ :

**ಮತ್ತಃ ಕೈತವಕೇನೈವ ಯಜ್ಜಿತೋಽಸ್ಮಿ ದುರೋದರೇ ।**
**ಶಕುನೇ ಹನ್ತ ದೀವ್ಯಾಮೋ ಗ್ಲಹಮಾನಾಃ ಪರಸ್ಪರಮ್ ॥೧॥**

"ಶಕುನಿಯೇ! ನೀನು ಮೋಸದಿಂದಲೇ ಆಟದಲ್ಲಿ ನನ್ನನ್ನು ಗೆದ್ದಿರುವೆ. ಆದರೂ ಅಹಂಕಾರಪಡುತ್ತಿರುವೆ. ಸಹಸ್ರಸಂಖ್ಯೆಯಲ್ಲಿ ಪಣಗಳನ್ನಿಟ್ಟು ಪುನಃ ಆಟವಾಡೋಣ; ಸಿದ್ಧನಾಗು. ನನ್ನ ಬಳಿಯಲ್ಲಿ ಒಂದೊಂದು ಸಾವಿರ ನಿಷ್ಕಗಳಿಂದ ( ಸುವರ್ಣನಾಣ್ಯಗಳಿಂದ ) ತುಂಬಿರುವ

ಸುಂದರವಾದ ಅನೇಕ ಭಾಂಡಗಳಿವೆ. ನನ್ನ ಬೊಕ್ಕಸವು ಅಕ್ಷಯವಾದ ಸುವರ್ಣನಾಣ್ಯ ಗಳಿಂದಲೂ, ಬೆಳ್ಳಿಯಿಂದಲೂ ಮತ್ತು ಇನ್ನೂ ಇತರ ಲೋಹಗಳ ರಾಶಿ ಗಳಿಂದಲೂ ಸಮೃದ್ಧವಾಗಿದೆ. ಅಪಾರವಾದ ಈ ಐಶ್ವರ್ಯವನ್ನೇ ಪಣವನ್ನಾಗಿಟ್ಟು ನಿನ್ನೊಡನೆ ಆಟವಾಡುತ್ತೇನೆ"–ಹೀಗೆ ಹೇಳಿ ಯುಧಿಷ್ಠಿರನು ದಾಳಗಳನ್ನು ಬಿಟ್ಟನು.

ಆಟವು ಪ್ರಾರಂಭವಾಯಿತು. ಶಕುನಿಯು ಮೋಸದಿಂದ ಆಟವಾಡು ತ್ತಿದ್ದನು. ಸ್ವಲ್ಪಹೊತ್ತಿನಲ್ಲಿಯೇ ಶಕುನಿಯು ಕುರುವಂಶಪ್ರದೀಪನಾದ, ಪಾಂಡುವಿನ ಜ್ಯೇಷ್ಠಪುತ್ರನಾದ, ಅಕಳಂಕಕೀರ್ತಿಶಾಲಿಯಾದ ಯುಧಿಷ್ಠಿರ ನನ್ನು ಕುರಿತು–'ಜಿತಂ'–ಎಂದು ಕೇಕೆಹಾಕಿ ನಗುತ್ತಾ ಹೇಳಿದನು.

ಯುಧಿಷ್ಠಿರನು ಪುನಃ ಆಟವನ್ನು ಮುಂದುವರಿಸಿದನು.

"ಪವಿತ್ರವಾದ, ಅಜೇಯವಾದ, ಸಹಸ್ರರಥತುಲ್ಯವಾದ, ವ್ಯಾಘ್ರ ಚರ್ಮದಿಂದ ಆಚ್ಛಾದಿತವಾಗಿರುವ, ಸುಭದ್ರವಾದ ಚಕ್ರಗಳನ್ನೂ ಮತ್ತು ಧ್ವಜವನ್ನೂ ಹೊಂದಿರುವ, ಅತಿಸುಂದರವಾದ, ಸುತ್ತಲೂ ಸಣ್ಣ-ಸಣ್ಣ ಗಂಟೆಗಳಿಂದ ಅಲಂಕೃತವಾಗಿರುವ, ಸಮುದ್ರದ ಅಥವಾ ಮೇಘದ ಗರ್ಜನೆ ಯನ್ನು ಅನುಕರಿಸುವ ನಿನಾದದಿಂದ ಕೂಡಿರುವ, ಉತ್ತಮಜಾತಿಯ ಕುರರ ವೆಂಬ ಪಕ್ಷಿಗೆ ಸಮಾನವಾದ ಕಾಂತಿಯುಳ್ಳ ಎಂಟು ಕುದುರೆಗಳಿಂದ ಎಳೆಯ ಲ್ಪಡುವ, ಬಹುವೇಗಗತಿಯುಳ್ಳ ಮತ್ತು ನಮ್ಮೈವರನ್ನೂ ಇಲ್ಲಿಗೆ ಒಯ್ದು ತಂದಿರುವ ನನ್ನ ಜೈತ್ರರಥವನ್ನು ಪಣವನ್ನಾಗಿಡುತ್ತೇನೆ. ಭೂಮಿಯನ್ನು ಸ್ಪರ್ಶಿಸುವ (ಭೂಮಿಯಲ್ಲಿ ಸಂಚರಿಸುವ) ಯಾರೇ ಆದರೂ ವೇಗವಾಗಿ ಓಡುತ್ತಿರುವ ಈ ಕುದುರೆಗಳಿಗೆ ಎದುರಾಗಿ ಬಂದರೆ ಕುದುರೆಗಳ ಕಾಲುಗಳಿಗೆ ಸಿಕ್ಕಿ ವಿನಾಶಹೊಂದುವರೇ ಹೊರತು ತಪ್ಪಿಸಿಕೊಂಡು ಹೋಗಲಾರರು."

ಶಕುನಿಯು ಯುಧಿಷ್ಠಿರನ ಮಾತುಗಳನ್ನು ಕೇಳಿ ಅವನನ್ನು ಪುನಃ ಸೋಲಿಸಲು ನಿಶ್ಚಯಿಸಿ, ಕಪಟಮಾರ್ಗವನ್ನೇ ಅವಲಂಬಿಸಿ ಯುಧಿಷ್ಠಿರ ನೊಂದಿಗೆ ಆಟವಾಡಿದನು.

ದಾಳಗಳು ಕ್ಷಣಕಾಲ ಉರುಳಾಡಿದುವು. ಶಕುನಿಯ–'ಜಿತಂ'–ಎಂಬ ಗರ್ಜನೆಯೊಡನೆ ಆ ಆಟವೂ ಮುಗಿಯಿತು.

"ನನ್ನ ಬಳಿಯಲ್ಲಿ ಒಂದು ಲಕ್ಷ ದಾಸಿಯರಿರುತ್ತಾರೆ. ಅವರೆಲ್ಲರೂ ಯುವತಿಯರು. ಕನಕಾಂಗದ-ಕೇಯೂರಗಳನ್ನೂ, ಕತ್ತಿನಲ್ಲಿ ಸ್ವರ್ಣಹಾರ ಗಳನ್ನೂ ಧರಿಸಿರುತ್ತಾರೆ. ಸುಮನೋಹರವಾದ ಹಾರಗಳನ್ನು ಧರಿಸಿರುವ ರಲ್ಲದೇ ಅಮೂಲ್ಯವಾದ ಪೀತಾಂಬರಗಳನ್ನೂ ಉಟ್ಟಿರುತ್ತಾರೆ. ಚಂದ ನಾಗುರುಗಳಿಂದ ಲೇಪಿತರಾಗಿರುವ ಅವರು ಅರುವತ್ತುನಾಲ್ಕು ಕುಶಲವಿದ್ಯೆ ಗಳಲ್ಲಿಯೂ ಪರಿಶ್ರಮಪಡೆದವರಾಗಿರುತ್ತಾರೆ. ನೃತ್ಯ-ಗೀತಕುಶಲೆಯರಾಗಿ ದ್ದಾರೆ. ಅವರು ನನ್ನ ಆಜ್ಞಾನುಸಾರವಾಗಿ ಅಮಾತ್ಯರನ್ನೂ, ಸ್ನಾತಕವ್ರತ ನಿಷ್ಠರಾದ ಬ್ರಾಹ್ಮಣರನ್ನೂ, ರಾಜರನ್ನೂ, ಉಪಚರಿಸುವುದರಲ್ಲಿ ನಿಯುಕ್ತ ರಾಗಿದ್ದಾರೆ. ಅವರೆಲ್ಲರನ್ನೂ ಈ ಆಟಕ್ಕೆ ಪಣವನ್ನಾಗಿಟ್ಟಿರುತ್ತೇನೆ."

ಶಕುನಿಯು ಯುಧಿಷ್ಠಿರನ ಮಾತುಗಳನ್ನು ಕೇಳಿ ಅವನನ್ನು ಪುನಃ ಸೋಲಿಸಲು ನಿಶ್ಚಯಿಸಿ ಮೋಸದ ಮಾರ್ಗವನ್ನವಲಂಬಿಸಿ ಯುಧಿಷ್ಠಿರ ನೊಂದಿಗೆ ಆಟವಾಡಿದನು.

ಗಡ-ಗಡ ಶಬ್ದಮಾಡುತ್ತಾ ದಾಳಗಳು ಉರುಳತೊಡಗಿದುವು. 'ನವ! ನವ!'–ಎಂದೊಬ್ಬರೂ, 'ಪದಿ! ಪದಿ!'–ಎಂದು ಮತ್ತೊಬ್ಬರೂ ಕೂಗಿ ದಾಳ ಹಾಕುತ್ತಿದ್ದರು. ಆದರೆ ಶಕುನಿಯು ಹೇಳುತ್ತಿದ್ದ ಗರಗಳೆಲ್ಲಾ ಬೀಳುತ್ತಿದ್ದುವು. ಯುಧಿಷ್ಠಿರನು ಹೇಳಿದ ಗರಗಳು ಒಂದು ಸಂಖ್ಯೆಯನ್ನು ಮಿಂಚಿಸಿ ಬೀಳುತ್ತಿದ್ದುವು. ಫಲಿತಾಂಶದಲ್ಲಿ ಪುನಃ ಶಕುನಿಯ–'ಜಿತಂ' ಎಂಬ ಅಟ್ಟಹಾಸಪೂರ್ವಕವಾದ ಗರ್ಜನೆಯು ಕೇಳಿಸಿತು.

ಯುಧಿಷ್ಠಿರನು ಅಮೂಲ್ಯವಾದ ಒಂದೊಂದು ವಸ್ತುವನ್ನೂ ಸೋತ ನಂತರ ಮತ್ತೊಂದು ಸಂಪತ್ತಿನ ನೆನಪುಮಾಡಿಕೊಂಡು ಹೇಳತೊಡಗಿದನು :

"ನನ್ನಲ್ಲಿ ಸಾವಿರಾರು ಮಂದಿ ಸಂಭಾವಿತರಾದ, ವಿಧೇಯರಾದ ಸೇವಕರಿದ್ದಾರೆ. ಅವರೆಲ್ಲರೂ ಅತಿಥಿಗಳ ಇಂಗಿತವನ್ನರಿತು ಸೇವೆಮಾಡುವುದ ರಲ್ಲಿ ಅತಿಚತುರರಾಗಿರುವರು. ಅವರೆಲ್ಲರೂ ರೇಷ್ಮೆಯ ವಸ್ತ್ರಗಳನ್ನು ಧರಿಸಿರು ತ್ತಾರೆ. ಪ್ರಜ್ಞಾವಂತರಾದ, ಮೇಧಾವಿಗಳಾದ ಅವರು ಯುವಕರಾಗಿದ್ದಾರೆ. ಜಿತೇಂದ್ರಿಯರಾಗಿದ್ದಾರೆ. ಕರ್ಣಕುಂಡಲಧಾರಿಗಳಾದ ಆ ಸೇವಕರು ಹಗಲು-ರಾತ್ರಿಗಳೆಂಬ ವಿವೇಚನೆಯಿಲ್ಲದೇ ಕೈಯಲ್ಲಿ ಪಾತ್ರೆಗಳನ್ನು ಹಿಡಿದು ಅತಿಥಿ-

ಅಭ್ಯಾಗತರ ಸೇವೆಯಲ್ಲಿ ನಿರತರಾಗಿರುತ್ತಾರೆ. ಆ ಐಶ್ವರ್ಯವನ್ನು ಈ ಆಟಕ್ಕೆ ಪಣವನ್ನಾಗಿಡುತ್ತೇನೆ."

ಯುಧಿಷ್ಠಿರನ ಮಾತುಗಳನ್ನು ಕೇಳಿ ಅವನನ್ನು ಪುನಃ ಸೋಲಿಸಲು ನಿಶ್ಚಯಿಸಿದ ಶಕುನಿಯು ಮೋಸದ ಮಾರ್ಗವನ್ನವಲಂಬಿಸಿ ಯುಧಿಷ್ಠಿರ ನೊಡನೆ ಆಟವಾಡಿದನು.

ಆ ಆಟವು ಪ್ರಾರಂಭವಾಗಿ ಕೆಲವು ನಿಮಿಷಗಳನಂತರ ಶಕುನಿಯ ಅಟ್ಟಹಾಸಪೂರಿತವಾದ–'ಜಿತಂ'–ಎಂಬ ಶಬ್ದವು ಎಲ್ಲರಿಗೂ ಕೇಳಿಸಿತು. ಯುಧಿಷ್ಠಿರನ ಸೇವಕರು ಕಣ್ಣೀರುಗರೆದರು.

ಯುಧಿಷ್ಠಿರನು ಪುನಃ ಶಕುನಿಗೆ ಹೇಳಿದನು :

"ಸೌಬಲನೇ! ನನ್ನಲ್ಲಿ ಒಂದು ಸಾವಿರ ಮದಿಸಿದ ಆನೆಗಳಿವೆ. ಅವೆಲ್ಲಕ್ಕೂ ಸುವರ್ಣರಜ್ಜುಗಳನ್ನು ಹಾಕಲಾಗಿದೆ. ಅವುಗಳ ಕುಂಭಸ್ಥಳಗಳಲ್ಲಿ ಪದ್ಮದ ಚಿಹ್ನೆಗಳಿವೆ. ಅವು ಸ್ವರ್ಣಮಾಲೆಗಳಿಂದಲೂ, ಇನ್ನೂ ಇತರ ಆಭರಣಗಳಿಂದಲೂ ಅಲಂಕರಿಸಲ್ಪಟ್ಟಿವೆ. ಚೆನ್ನಾಗಿ ಪಳಗಿವೆ. ಅವುಗಳಿಗೆ ನೇಗಿಲಿನ ದಂಡದಂತೆ ಉದ್ದವಾಗಿರುವ, ಮೊನಚಾದ ಮತ್ತು ಬಿಳುಪಾದ ದಂತಗಳಿವೆ. ರಾಜರನ್ನು ಒಯ್ಯಲು ಆ ಪಟ್ಟದ ಆನೆಗಳು ಯೋಗ್ಯವಾಗಿವೆ. ಯುದ್ಧಕಾಲಗಳಲ್ಲಿ ಎಂತಹ ರಣಘೋಷಗಳನ್ನೂ ಲೆಕ್ಕಿಸದೇ ಅವು ಮುನ್ನುಗ್ಗುತ್ತವೆ. ಶತ್ರುಗಳ ನಗರಗಳನ್ನು ಭೇದಿಸುತ್ತವೆ. ಅವು ಕಪ್ಪಾದ ಮೋಡದ ಕಾಂತಿಯನ್ನು ಹೊಂದಿರುತ್ತವೆ. ಪ್ರತಿಯೊಂದು ಮದಗಜದೊಡನೆ ಎಂಟೆಂಟು ಹೆಣ್ಣಾನೆಗಳಿರುತ್ತವೆ. ಆ ಐಶ್ವರ್ಯವನ್ನು ನಾನು ಈ ಆಟಕ್ಕೆ ಪಣವನ್ನಾಗಿಟ್ಟಿರುತ್ತೇನೆ."

ವೈಶಂಪಾಯನರು ಹೇಳುತ್ತಾರೆ :

ಜನಮೇಜಯ! ಹೀಗೆಂಬುದಾಗಿ ಹೇಳಿದ ಯುಧಿಷ್ಠಿರನನ್ನು ಅಪಹಾಸ್ಯಮಾಡುತ್ತಿರುವನೋ ಎಂಬಂತೆ ಶಕುನಿಯು ಗಹಗಹಿಸಿ ನಗುತ್ತಾ ದಾಳಗಳನ್ನೆಸೆದನು.

'ನವ-ನವ! ಪದಿ-ಪತ್ತು! ಪದಿ-ಪತ್ತು!' ಎಂಬ ಕೂಗಾಟಗಳು ಪ್ರಾರಂಭವಾದುವು. ಶಕುನಿಯು ತನ್ನ ಕಪಟದ್ಯೂತವನ್ನೇ ಮುಂದುವರಿ

ಸಿದನು. ಕ್ಷಣಮಾತ್ರದಲ್ಲಿ ಯುಧಿಷ್ಠಿರನನ್ನು ಕುರಿತು–'ಗೆದ್ದೆನು!' – ಎಂದು ಹೇಳಿ ಎದೆತಟ್ಟಿಕೊಂಡನು.

ಸೋತೊಡನೆಯೇ ಯುಧಿಷ್ಠಿರನು ಮತ್ತೊಂದು ಆಟಕ್ಕೆ ಪಣವನ್ನು ಸಿದ್ಧಪಡಿಸುತ್ತಾ ಹೇಳಿದನು :

"ನನ್ನಲ್ಲಿ ಆನೆಗಳಷ್ಟೇ ರಥಗಳೂ ಇವೆ. ಆ ರಥಗಳೆಲ್ಲವೂ ಚಿನ್ನದ ಧ್ವಜಸ್ತಂಭಗಳಿಂದ ಕೂಡಿವೆ. ಎಲ್ಲ ರಥಗಳಿಗೂ ಯುದ್ಧದ ನಡಿಗೆಯಲ್ಲಿ ಪೂರ್ಣಪರಿಶ್ರಮಹೊಂದಿರುವ ಕುದುರೆಗಳನ್ನೂ ಯೋಜಿಸಲಾಗಿದೆ. ಒಳ್ಳೆಯ ಚತುರರಾದ ಮತ್ತು ಯುದ್ಧವಿಶಾರದರಾದ ರಥಿಕರು ಆ ರಥಗಳಲ್ಲಿ ಕುಳಿತಿರುತ್ತಾರೆ. ಅವರೆಲ್ಲರಿಗೂ ಯುದ್ಧಸಮಯದಲ್ಲಾಗಲೀ, ಶಾಂತಿಯ ಸಮಯದಲ್ಲಾಗಲೀ ಒಂದು ಸಾವಿರ ಸುವರ್ಣನಾಣ್ಯಗಳನ್ನು ಮಾಸಾಶನ ವಾಗಿ ಕೊಡುತ್ತಿರುವೆನು. ಆ ಐಶ್ವರ್ಯವನ್ನು ಪಣವನ್ನಾಗಿಟ್ಟು ಆಟವಾಡು ತ್ತೇನೆ."

ಯುಧಿಷ್ಠಿರನ ಮೇಲೆ ನಿಷ್ಕಾರಣವಾಗಿ ವೈರವನ್ನು ತಾಳಿದ್ದ ದುರಾತ್ಮ ನಾದ ಶಕುನಿಯು ಆ ಮಾತನ್ನು ಅಂಗೀಕರಿಸಿ, ತನಗೆ ಬೇಕಾದ ಗರಗಳೇ ಬೀಳುವಂತೆ ವಂಚನೆಯಿಂದ ಆಟವನ್ನಾಡಿ ಯುಧಿಷ್ಠಿರನನ್ನು ಗೆದ್ದು 'ಯುಧಿಷ್ಠಿರ! ನಾನೇ ಗೆದ್ದೆನು'–ಎಂದು ಗಟ್ಟಿಯಾಗಿ ಕೂಗಿಕೊಂಡನು.

ಯುಧಿಷ್ಠಿರನ ಮುಖವು ಬಾಡಿತು. ಆದರೂ ಆಟದ ಛಲವು ಹೋಗಿರಲಿಲ್ಲ. ಪುನಃ ಪಣವನ್ನಿಟ್ಟನು.

"ನನ್ನಲ್ಲಿ ತಿತ್ತಿರಿಪಕ್ಷಿಗಳಂತೆ ವಿಚಿತ್ರವರ್ಣಗಳಿಂದ ಕೂಡಿರುವ ಗಂಧರ್ವಲೋಕದ ಅನೇಕಸಹಸ್ರ ಕುದುರೆಗಳಿವೆ. ಗಾಂಡೀವಧರನಾದ ಅರ್ಜುನನು ಚಿತ್ರರಥನೆಂಬ ಗಂಧರ್ವನನ್ನು ಸೋಲಿಸಿದಾಗ ಆ ಗಂಧರ್ವನು ಆದರಪೂರ್ವಕವಾಗಿ ಅರ್ಜುನನಿಗೆ ಸಮರ್ಪಿಸಿದ ಅಶ್ವಗಳಿವು. ಅವುಗಳನ್ನೇ ಪಣವನ್ನಾಗಿಡುತ್ತೇನೆ."

ಜನಮೇಜಯ! ಯುಧಿಷ್ಠಿರನ ಮಾತುಗಳನ್ನು ಕೇಳಿ ಶಕುನಿಯು ಅವನನ್ನು ಪುನಃ ಪರಾಭವಗೊಳಿಸಲು ನಿಶ್ಚಯಿಸಿ ವಂಚನೆಯನ್ನೇ ಅವ

ಲಂಬಿಸಿ ಆಟವಾಡಿ ಗೆದ್ದು, ಯುಧಿಷ್ಠಿರನನ್ನು ಕುರಿತು– ' ಜಿತಂ'– ನೀನಿ ಟ್ಟ ಪಣವನ್ನು ಗೆದ್ದುಕೊಂಡೆನು' ಎಂದು ಕೂಗಿ ಹೇಳಿದನು.

ತನ್ನಲ್ಲಿರುವುದನ್ನೆಲ್ಲಾ ಪಣವನ್ನಾಗಿಟ್ಟು ಯುಧಿಷ್ಠಿರನು ಕಳೆದು ಕೊಳ್ಳಲೇಬೇಕಾಗಿತ್ತು. ಕೌರವರ ಉದ್ದೇಶವೇ ಅದಾಗಿತ್ತಲ್ಲವೇ? ವಿಧಿಯನ್ನೇ ನಂಬಿ ಬಂದಿದ್ದ ಯುಧಿಷ್ಠಿರನು ಪುನಃ ಆಟವನ್ನು ಪ್ರಾರಂಭಿಸುತ್ತಾ ಹೇಳಿದನು:

"ನನ್ನಲ್ಲಿ ಹತ್ತುಸಾವಿರ ಉತ್ತಮವಾದ ವಾಹನಗಳಿವೆ. ಅವುಗಳನ್ನು ಎಳೆಯಲು ಬಲಿಷ್ಠವಾದ ಪ್ರಾಣಿಗಳನ್ನು ಯೋಜಿಸಲಾಗಿದೆ. ನಾನಾವರ್ಣ ಗಳಿಂದ ಆರಿಸಲ್ಪಟ್ಟ ಅರುವತ್ತು ಸಾವಿರ ಯೋಧರಿರುತ್ತಾರೆ. ಅವರೆಲ್ಲರೂ ವಿಶಾಲವಕ್ಷರಾಗಿ ಪರಾಕ್ರಮಿಗಳಾಗಿದ್ದಾರೆ. ಹಾಲು ಮತ್ತು ಅನ್ನ ಅವರಿಗೆ ಆಹಾರವಾಗಿದೆ. ಆ ವಿಪುಲೈಶ್ವರ್ಯವನ್ನು ನಾನು ಈ ಆಟಕ್ಕೆ ಪಣ ವನ್ನಾಗಿಟ್ಟಿರುತ್ತೇನೆ."

ಯುಧಿಷ್ಠಿರನಿಗೆ ಗೆದ್ದೆನೆಂದು ಹೇಳಿಕೊಳ್ಳುವ ಅವಕಾಶವೇ ಸಿಕ್ಕಲಿಲ್ಲ. ಸೋತು ತನ್ನಲ್ಲಿದ್ದ ಐಶ್ವರ್ಯವನ್ನೆಲ್ಲಾ ಪಣವನ್ನಾಗಿಡುವುದೊಂದೇ ಅವನ ಕೆಲಸವಾಗಿತ್ತು. ಯುಧಿಷ್ಠಿರನು ತನ್ನ ಪಣವನ್ನು ಘೋಷಿಸಿದೊಡನೆಯೇ ಶಕುನಿಯು ಯಥಾಪೂರ್ವಕವಾಗಿ ಯುಧಿಷ್ಠಿರನನ್ನು ಪರಾಭವಗೊಳಿಸಲು ನಿಶ್ಚಯಿಸಿ ವಂಚನೆಯ ಮಾರ್ಗದಿಂದಲೇ ಆಟದಲ್ಲಿ ಗೆದ್ದು 'ಜಿತಂ' ಎಂದು ಕೂಗುತ್ತಿದ್ದನು.

ಆದರೆ ಯುಧಿಷ್ಠಿರನು ಎಲ್ಲ ಐಶ್ವರ್ಯಗಳನ್ನೂ ಕಳೆದುಕೊಂಡರೂ ಆಟವನ್ನು ನಿಲ್ಲಿಸುವ ಮನೋಭಾವದಿಂದಿರಲಿಲ್ಲ. ಪುನಃ ತನ್ನಲ್ಲಿದ್ದ ಇತರ ಐಶ್ವರ್ಯವನ್ನು ವಿವರಿಸುತ್ತಾ ಹೇಳಿದನು :

"ನನ್ನಲ್ಲಿ ನಾಲ್ಕು ನೂರು ನಿಧಿಗಳಿವೆ. ಅವುಗಳನ್ನು ತಾಮ್ರದ ಮತ್ತು ಕಬ್ಬಿಣದ ಪೆಟ್ಟಿಗೆಗಳಲ್ಲಿಡಲಾಗಿದೆ. ಪುಟಕ್ಕೆ ಹಾಕಲ್ಪಟ್ಟ ಚಿನ್ನದ ಐದು ದ್ರೋಣಗಳಷ್ಟು* ಒಂದೊಂದು ನಿಧಿಯ ಪರಿಮಾಣವಾಗಿರುತ್ತದೆ. ಆಪತ್ಕಾಲಕ್ಕೆಂದು ಸಂಗ್ರಹಿಸಿಟ್ಟಿರುವ ಆ ನಿಧಿಗಳನ್ನೂ ಪಣವನ್ನಾಗಿಡುತ್ತೇನೆ."

---

* ದ್ರೋಣ = ಮರದಿಂದ ಮಾಡಿದ ಅಳತೆಯ ಪಾತ್ರೆ ; ಬಳ್ಳದ ಮಾದರಿ.

ವೈಶಂಪಾಯನರು ಹೇಳಿದರು :

**ಏತಚ್ಛ್ರುತ್ವಾ ವ್ಯವಸಿತೋ ನಿಕೃತಿಂ ಸಮುಪಾಶ್ರಿತಃ ।**
**ಜಿತಮಿತ್ಯೇವ ಶಕುನಿರ್ಯುಧಿಷ್ಠಿರಮಭಾಷತ ॥೩೧॥**

“ಮಹಾರಾಜ! ಯುಧಿಷ್ಠಿರನ ಅನರ್ಘವಾದ ಆ ಪಣವನ್ನು ಕಿತ್ತುಕೊಳ್ಳಬೇಕೆಂದೂ, ಅವನನ್ನು ಪರಾಭವಗೊಳಿಸಬೇಕೆಂದೂ ನಿಶ್ಚಯಿಸಿದ ಶಕುನಿಯು ನಂಬಿಕೆಗೆ ದ್ರೋಹವೆನಿಸಿದ ಮಾರ್ಗವನ್ನನುಸರಿಸಿ ದಾಳಗಳನ್ನು ಬಿಟ್ಟನು. ಅವನು ಹೇಳಿದಂತೆ ಕೇಳುತ್ತಿದ್ದ ದಾಳಗಳು ಅವನಿಗೇ ಜಯ ಗಳಿಸಿಕೊಟ್ಟುವು. ಸೌಬಲನು ಯುಧಿಷ್ಠಿರನನ್ನು ಕುರಿತು–‘ಈ ಆಟವನ್ನೂ ನಾನೇ ಗೆದ್ದುಬಿಟ್ಟೆನು’–ಎಂದು ಅಟ್ಟಹಾಸದಿಂದ ಹೇಳಿದನು.”

ಅ೬೧ನೆಯ ಅಧ್ಯಾಯವು ಮುಗಿಯಿತು.

೬೨ನೆಯ ಅಧ್ಯಾಯ ದ್ಯೂತಪರ್ವ (ಮುಂದುವರಿದಿದೆ.)

## ಧೃತರಾಷ್ಟ್ರನಿಗೆ ವಿದುರನ ಉಪದೇಶ

ವೈಶಂಪಾಯನರು ಮುಂದುವರಿಸಿ ಹೇಳುತ್ತಾರೆ :

**ಏವಂ ಪ್ರವರ್ತಿತೇ ದ್ಯೂತೇ ಘೋರೇ ಸರ್ವಾಪಹಾರಿಣಿ ।**
**ಸರ್ವಸಂಶಯನಿರ್ಮೋಕ್ತಾ ವಿದುರೋ ವಾಕ್ಯಮಬ್ರವೀತ್ ॥೧॥**

“ಜನಮೇಜಯ! ಸರ್ವಾಪಹಾರಿಯಾದ ಮತ್ತು ಸುಘೋರವಾದ ದ್ಯೂತವು ಮುಂದುವರಿಯುತ್ತಿರಲಾಗಿ, ಸಕಲವಿಧವಾದ ಸಂಶಯಗಳನ್ನೂ ನಿವಾರಿಸಲು ಅತ್ಯಂತಸಮರ್ಥನಾದ ವಿದುರನು ಧೃತರಾಷ್ಟ್ರನಿಗೆ ಹೇಳಿದನು :

**ಮಹಾರಾಜ ವಿಜಾನೀಹಿ ಯತ್ತ್ವಾಂ ವಕ್ಷ್ಯಾಮಿ ಭಾರತ ।**
**ಮುಮೂರ್ಷೋರೌಷಧಮಿವ ನ ರೋಚೇತಾಪಿ ತೇ ಶ್ರುತಮ್ ॥೨॥**

“ಮಹಾರಾಜ! ನಾನು ಹೇಳುವುದನ್ನು ಕೇಳು. ನನ್ನ ಮಾತುಗಳು ನಿನಗೆ ರುಚಿಸಲಾರವೆಂದು ನನಗೆ ತಿಳಿದಿದೆ. ಮರಣಕಾಲವು ಸಮೀಪಿಸಿರುವ ರೋಗಿಗೆ ಔಷಧವು ರುಚಿಸದಿರುವಂತೆ–ಶಾಸ್ತ್ರಸಮ್ಮತವಾದ ನನ್ನ ಮಾತುಗಳು

ನಿನಗೆ ಪ್ರಿಯವಾಗಲಾರವು. ಆದರೂ ಸಹ ನನ್ನ ಕರ್ತವ್ಯವೆಂದು ತಿಳಿದು ಈ ಮಾತುಗಳನ್ನು ಹೇಳುತ್ತಿರುವೆನು.

**ಯದ್ವೈ ಪುರಾ ಜಾತಮಾತ್ರೋ ರುರಾವ**
**ಗೋಮಾಯುವದ್ವಿಸ್ವರಂ ಪಾಪಚೇತಾಃ ।**
**ದುರ್ಯೋಧನೋ ಭರತಾನಾಂ ಕುಲಘ್ನಃ**
**ಸೋಽಯಂ ಯುಕ್ತೋ ಭವತಾಂ ಕಾಲಹೇತುಃ ॥೩॥**

ನಿನಗೆ ತಿಳಿದಿರುವಂತೆಯೇ ಪಾಪಬುದ್ಧಿಯ ಈ ದುರ್ಯೋಧನನು ಹುಟ್ಟಿದೊಡನೆಯೇ ಗುಳ್ಳೇನರಿಯಂತೆ ವಿಕೃತಧ್ವನಿಗೈದನು. ಧ್ವನಿಶಾಸ್ತ್ರ ಪ್ರವೀಣರು ಇವನು ಕುಲಕ್ಕೇ ಘಾತವನ್ನುಂಟುಮಾಡತಕ್ಕವನೆಂದು ಆಗಲೇ ಹೇಳಿದ್ದರು. ಭರತಕುಲವಿನಾಶಕ್ಕಾಗಿಯೇ ಇವನು ಹುಟ್ಟಿರುವನೆಂಬುದು ಅಂದೇ ನಮಗೆ ಅರಿವಾಗಿದ್ದಿತು. ಧೃತರಾಷ್ಟ್ರ! ನಿಶ್ಚಯವಾಗಿಯೂ ನಿಮ್ಮೆಲ್ಲರ ಮೃತ್ಯುವಿಗೂ ಇವನೇ ಕಾರಣನಾಗುತ್ತಾನೆ.

**ಗೃಹೇ ವಸನ್ತಂ ಗೋಮಾಯುಂ ತ್ವಂ ವೈ ಮೋಹಾನ್ನ ಬುಧ್ಯಸೇ ।**
**ದುರ್ಯೋಧನಸ್ಯ ರೂಪೇಣ ಶೃಣು ಕಾವ್ಯಾಂ ಗಿರಂ ಮಮ ॥೪॥**

ನಿನ್ನ ಮನೆಯಲ್ಲಿ ದುರ್ಯೋಧನನ ರೂಪದಲ್ಲಿ ಮೃತ್ಯುಸ್ವರೂಪವಾದ ನರಿಯು ಸೇರಿಕೊಂಡಿದೆ. ನೀನು ಮೋಹವಶನಾಗಿರುವುದರಿಂದ ಇದನ್ನು ಅಲಕ್ಷಿಸಿರುವೆ. ನಿನ್ನ ಕ್ರಿಯೆಯು ಹೇಗಿರುವುದೆಂಬುದಕ್ಕೆ ಶುಕ್ರನೀತಿಯ ಒಂದು ವಾಕ್ಯವನ್ನು ಹೇಳುವೆನು ; ಕೇಳು :

**ಮಧು ವೈ ಮಾಧ್ವಿಕೋ ಲಬ್ಧ್ವಾ ಪ್ರಪಾತಂ ನೈವ ಬುಧ್ಯತೇ ।**
**ಆರುಹ್ಯ ತಂ ಮಜ್ಜತಿ ವಾ ಪತನಂ ಚಾಧಿಗಚ್ಛತಿ ॥೫॥**

ಪ್ರಪಾತದ ಅಂಚಿನಲ್ಲಿರುವ ವೃಕ್ಷಾದಿಗಳ ಮೇಲ್ಭಾಗದಲ್ಲಿ ಜೇನುಹುಳುಗಳು ಗೂಡುಕಟ್ಟಿರುತ್ತವೆ. ಮಧುವನ್ನು ತೆಗೆದುಕೊಳ್ಳಬೇಕೆಂಬ ಆಸೆಯಿಂದ ಮಾನವನು ಮರದ ಮೇಲಕ್ಕೆ ಹತ್ತಲು ಯತ್ನಿಸುತ್ತಾನೆ. ಆದರೆ ಹಾಗೆ ಹತ್ತುವಾಗ ಅವನ ಮನಸ್ಸಿನಲ್ಲಿ ಮಧುವಿನ ಆಶೆಯು ತುಂಬಿರುವುದೇ ಹೊರತು ಕಾಲುಜಾರಿ ಪ್ರಪಾತಕ್ಕೆ ಬಿದ್ದರೆ ತನ್ನ ಪರಿಣಾಮವೇನಾಗುವುದೆಂಬುದನ್ನು ಅವನು ಲೆಕ್ಕಿಸುವುದಿಲ್ಲ. ಈ ಕಾರಣದಿಂದಾಗಿ ಮಧುವಿನ

ಆಶೆಯಿಂದ ಬಹಳ ಅಪಾಯಕರವಾದ ಸ್ಥಳಕ್ಕೆ ಹೋಗಲು ಯತ್ನಿಸಿ ಕಮರಿಯಲ್ಲಿ ಬಿದ್ದು ಸಾಯುತ್ತಾನೆ.

**ಸೋಽಯಂ ಮತ್ತೋಽಕ್ಷದ್ಯೂತೇನ ಮಧುವನ್ನ ಪರೀಕ್ಷತೇ ।**
**ಪ್ರಪಾತಂ ಬುಧ್ಯತೇ ನೈವ ವೈರಂ ಕೃತ್ವಾ ಮಹಾರಥೈಃ ॥೬॥**

ಈ ದುರ್ಯೋಧನನಾದರೋ ಜೂಜಿನ ಅಮಲಿನಿಂದ ಅಸಾಧ್ಯವಾದುದನ್ನು ಸುಲಭವಾಗಿ ಸಾಧಿಸುವೆನೆಂದು ಭ್ರಮಿಸಿದ್ದಾನೆ. ಇದರ ಪರಿಣಾಮವೇನಾಗಬಹುದು–ಎಂಬುದರ ಅರಿವು ಇವನಿಗೆ ಉಂಟಾಗಿಲ್ಲ. ಮಹಾರಥಿಗಳಾದ ಪಾಂಡವರೊಡನೆ ದ್ವೇಷಬೆಳೆಸಿದರೆ ತನ್ನ ಅವಸಾನವು ಅತಿಶೀಘ್ರದಲ್ಲಿಯೇ ಆಗುವುದೆಂಬುದನ್ನು ಇವನು ತಿಳಿದಿಲ್ಲ. ಮಹಾರಾಜ! ಇವನನ್ನು ಪರಿತ್ಯಜಿಸುವುದೇ ನಿನಗೆ ಯುಕ್ತವಾಗಿದೆ.

ಭೋಜವಂಶದಲ್ಲಿ ಅಸಮಂಜಸನೆಂಬ ರಾಜಕುಮಾರನೊಬ್ಬನಿದ್ದನು. ನಾಗರಿಕರ ಹಿತಚಿಂತನೆಯಿಂದ ಆ ದೇಶದ ಅರಸನು ತನ್ನ ಮಗನನ್ನೇ ಪರಿತ್ಯಜಿಸಿದ ವಿಷಯವು ನಿನಗೂ ತಿಳಿದಿರಬಹುದು.

ಹೀಗೆಯೇ ಅಂಧಕ-ಯಾದವ-ಭೋಜವಂಶದವರು ಒಟ್ಟಾಗಿ ಯೋಚಿಸಿ ಕುಲಕಳಂಕನಾದ ಕಂಸನನ್ನು ಪರಿತ್ಯಜಿಸಿದರು. ಶ್ರೀಕೃಷ್ಣನಿಂದ ಕಂಸನು ವಧಿಸಲ್ಪಟ್ಟನಂತರ ಸುಮಾರು ನೂರು ವರ್ಷಗಳ ಪರ್ಯಂತವಾಗಿ ಯಾದವರು ಯಾವ ವಿಧವಾದ ಉಪದ್ರವವೂ ಇಲ್ಲದೇ ಸುಖ-ಸಂತೋಷಗಳಿಂದಿದ್ದಾರೆ.

ಅದೇ ರೀತಿಯಲ್ಲಿ ನಿನ್ನ ಆಜ್ಞೆಯಂತೆ ಗಾಂಡೀವಿಯು ದುರುಳನಾದ ಈ ದುರ್ಯೋಧನನನ್ನು ಈಗಲೇ ನಿಗ್ರಹಿಸಲಿ. ಇವನ ನಿಗ್ರಹದಿಂದಾಗಿ ಕುರುವಂಶದವರೆಲ್ಲರೂ ತಮ್ಮ ದಿನಗಳನ್ನು ಈತಿಬಾಧೆಗಳಿಲ್ಲದೇ ಸುಖ-ಸಂತೋಷಗಳಿಂದ ಕಳೆಯುವಂತಾಗಲಿ.

**ಕಾಕೇನೇಮಾಂಶ್ಚಿತ್ರಬರ್ಹಾಞ್ಶಾರ್ದೂಲಾನ್ಕ್ರೋಷ್ಟುಕೇನ ಚ ।**
**ಕ್ರೀಣೀಷ್ವ ಪಾಣ್ಡವಾನ್ರಾಜನ್ಮಾ ಮಜ್ಜೀಃ ಶೋಕಸಾಗರೇ ॥೧೦॥**

ಒಂದು ಕಾಗೆಯನ್ನು ಕೊಟ್ಟು ನವಿಲುಗಳನ್ನೂ, ನರಿಯನ್ನು ಕೊಟ್ಟು ಹುಲಿಗಳನ್ನೂ ಪಡೆಯುವಂತೆ–ಈ ದುರ್ಯೋಧನನನ್ನು ಪರಿತ್ಯಾಗಮಾಡಿ

ಪಾಂಡವರನ್ನು ನಿನ್ನವರನ್ನಾಗಿ ಮಾಡಿಕೋ. ಹಾಗೆ ಮಾಡದೆ ನೀನು ಶೋಕಸಾಗರದಲ್ಲಿ ಮುಳುಗಬೇಡ.

**ತ್ಯಜೇತ್ಕುಲಾರ್ಥೇ ಪುರುಷಂ ಗ್ರಾಮಸ್ಯಾರ್ಥೇ ಕುಲಂ ತ್ಯಜೇತ್ ।**
**ಗ್ರಾಮಂ ಜನಪದಸ್ಯಾರ್ಥೇ ಆತ್ಮಾರ್ಥೇ ಪೃಥಿವೀಂ ತ್ಯಜೇತ್ ॥೧೧॥**

ಕುಲದ ರಕ್ಷಣೆಯ ಸಲುವಾಗಿ ತನ್ನ ಆತ್ಮೀಯನನ್ನಾದರೂ ಪರಿತ್ಯಾಗ ಮಾಡಬೇಕು. ಒಂದು ಹಳ್ಳಿಯ ರಕ್ಷಣೆಗಾಗಿ ಒಂದು ಕುಲದ ತ್ಯಾಗವನ್ನಾದರೂ ಮಾಡಬೇಕು. ಒಂದು ಪ್ರಾಂತದ ರಕ್ಷಣೆಗಾಗಿ ಒಂದು ಹಳ್ಳಿಯನ್ನೇ ಪರಿತ್ಯಾಗಮಾಡಬೇಕು. ಆತ್ಮೋನ್ನತಿಗಾಗಿ ಪೃಥ್ವಿಯನ್ನೇ ಪರಿತ್ಯಜಿಸಬೇಕು.

ಮಹಾತ್ಮನಾದ, ಎಲ್ಲ ಪ್ರಾಣಿಗಳ ಮನೋವಿಕಾರವೇನೆಂಬುದನ್ನು ಚೆನ್ನಾಗಿ ತಿಳಿದಿರುವ, ಸರ್ವಶತ್ರುಭಯಂಕರನಾದ ಶುಕ್ರನು–ಜಂಭಾಸುರನು ಹುಟ್ಟಿದಾಗ ಅವನನ್ನು ಪರಿತ್ಯಾಗಮಾಡಬೇಕೆಂದು ಅಸುರರೊಡನೆ ಹೇಳಿದನು. (ಕುಲನಾಶಕನೆಂದು ತಿಳಿದನಂತರ ಪುತ್ರನೇ ಆದರೂ ಅವನನ್ನೂ ವಿಸರ್ಜಿಸುವುದು ಹಿಂದಿನಿಂದಲೂ ನಡೆದುಬಂದಿದೆ.)

ಮಹಾರಾಜ! ಇಂದು ನೀನು ಅನುಸರಿಸುತ್ತಿರುವುದಕ್ಕೆ ಅನುಗುಣವಾದ, ಹಿಂದೆ ನಡೆದ ಒಂದು ಕಥೆಯನ್ನು ಹೇಳುವೆನು ; ಕೇಳು :

ಒಂದು ದೇಶದಲ್ಲಿ ಒಬ್ಬ ರಾಜನಿದ್ದನು. ಅವನೊಂದು ದಿನ ಬೇಟೆಯಾಡಲು ಕಾಡಿಗೆ ಹೋದಾಗ ಸ್ವರ್ಣವನ್ನು ವಮನಮಾಡುವ (ವಾಂತಿ ಮಾಡುವ) ವಿಶೇಷಜಾತಿಯ ಪಕ್ಷಿಗಳು ಸಿಕ್ಕಿದುವು. ಅವುಗಳನ್ನು ಹಿಡಿದು ಅರಮನೆಗೆ ತಂದನು. ಅವುಗಳು ಪ್ರತಿನಿತ್ಯವೂ ಸ್ವಲ್ಪ ಸ್ವಲ್ಪ ಚಿನ್ನವನ್ನು ವಮನಮಾಡುತ್ತಿದ್ದುವು. ಒಂದು ದಿನ ರಾಜನು ಹೀಗೆಂದು ಯೋಚಿಸಿದನು : ಇವುಗಳು ಕೊಡುತ್ತಿರುವ ಸ್ವಲ್ಪವೇ ಚಿನ್ನದಿಂದ ನನಗೆ ಹೆಚ್ಚಿನ ಪ್ರಯೋಜನವುಂಟಾಗುವುದಿಲ್ಲ. ಒಂದೇ ಬಾರಿ ನನಗೆ ವಿಪುಲವಾದ ಚಿನ್ನವು ಪ್ರಾಪ್ತವಾಗಬೇಕು. ಇದಕ್ಕೇನು ಮಾಡಲಿ?"–ಕ್ಷಣಕಾಲ ಯೋಚಿಸಿದನು. ಅವನಿಗೊಂದು ದುಷ್ಟವಾದ ಉಪಾಯವು ಹೊಳೆಯಿತು. ಒಡನೆಯೇ ಪಕ್ಷಿಗಳನ್ನು ಪಂಜರದಿಂದ ಹೊರತೆಗೆದು ಕತ್ತಿಯಿಂದ ಎಲ್ಲ ಪಕ್ಷಿಗಳ ಕತ್ತುಗಳನ್ನೂ ಕತ್ತರಿಸಿದನು. ರಾಜನ ಆಜ್ಞೆಯಂತೆ ಸೇವಕರು ಬಂದು ಸತ್ತು

ಹೋದ ಪಕ್ಷಿಗಳನ್ನು ಸೀಳಿದರು. ಅಪಾರವಾದ ಚಿನ್ನವನ್ನು ಪಡೆಯುವ ಅಭಿಲಾಷೆಯಿಂದ ಎವೆಯಿಕ್ಕದೇ ನೋಡುತ್ತಿದ್ದ ರಾಜನು ಪಕ್ಷಿಗಳ ಹೃದಯ ಗಳಲ್ಲಿ ರಕ್ತ-ಮಾಂಸಗಳನ್ನು ಮಾತ್ರವೇ ಕಂಡು ವ್ಯಾಕುಲನಾದನು. ಅಲ್ಪ- ಸ್ವಲ್ಪ ಚಿನ್ನವು ಅಂದಿಗಂದಿಗೆ ಸಿಕ್ಕುವುದೂ ನಿಂತುಹೋಯಿತು. ಮುಂದೆ ಸಿಕ್ಕುವ ಸಾಧ್ಯತೆಯೂ ಇಲ್ಲವಾಯಿತು.

**ತದರ್ಥಕಾಮಸ್ತದ್ವತ್ತ್ವಂ ಮಾ ದ್ರುಹಃ ಪಾಣ್ಡವಾನ್ನೃಪ ।**
**ಮೋಹಾತ್ಮಾ ತಪ್ಯಸೇ ಪಶ್ಚಾತ್ಪಕ್ಷಿಹಾ ಪುರುಷೋ ಯಥಾ ॥೧೪॥**

ಇದೇ ರೀತಿಯಲ್ಲಿ ನೀನು ಪಾಂಡವರ ಐಶ್ವರ್ಯಕ್ಕೆ ಆಶೆಪಟ್ಟು ಅವರನ್ನು ವಿನಾಶಮಾಡಲು ಉದ್ಯುಕ್ತನಾಗಬೇಡ. ಚಿನ್ನದಾಸೆಗೆ ಪಕ್ಷಿಗಳನ್ನು ಕೊಂದು ಪಶ್ಚಾತ್ತಾಪಪಟ್ಟ ರಾಜನಂತೆಯೇ ನೀನೂ ಮುಂದೆ ನಿನ್ನ ಕ್ರಿಯೆಗೆ ಪಶ್ಚಾತ್ತಾಪಪಡಬೇಕಾಗುವುದು.

**ಜಾತಂ ಜಾತಂ ಪಾಣ್ಡವೇಭ್ಯಃ ಪುಷ್ಪಮಾದತ್ಸ್ವ ಭಾರತ ।**
**ಮಾಲಾಕಾರ ಇವಾರಾಮೇ ಸ್ನೇಹಂ ಕುರ್ವನ್ಪುನಃ ಪುನಃ ॥೧೫॥**

**ವೃಕ್ಷಾನಙ್ಗಾರಕಾರೀವ ಮೈನಾನ್ಧಾಕ್ಷೀಃ ಸಮೂಲಕಾನ್ ।**
**ಮಾ ಗಮಃ ಸಸುತಾಮಾತ್ಯಃ ಸಬಲಶ್ಚ ಯಮಕ್ಷಯಮ್ ॥೧೬॥**

ತೋಟಗಾರನು ದಿನ-ದಿನವೂ ಗಿಡಗಳಿಗೆ ನೀರು ಹಾಕಿ ಅದರಲ್ಲಿ ಬಿಡುವ ಸುಮನೋಹರವಾದ ಕುಸುಮಗಳನ್ನು ಕಿತ್ತುಕೊಳ್ಳುತ್ತಾನೆ. ಅದ ರಂತೆಯೇ ನೀನು ಪಾಂಡುಕುಮಾರರನ್ನು ಬಾರಿ-ಬಾರಿಗೂ ಪ್ರೀತಿಯಿಂದ ಆದರಿಸು. ಅವರು ನಿನಗೆ ಉತ್ತಮ ಫಲಕೊಡಲು ಸಮರ್ಥರಾಗಿರುವರು.

ಗಾಳಿಯು ತನ್ನ ಹೊಡೆತದಿಂದ ಒಂದು ವೃಕ್ಷದಲ್ಲಿರುವ ಎರಡು ರೆಂಬೆಗಳು ಘರ್ಷಣೆಯಾಗುವಂತೆ ಮಾಡಿ ಬೆಂಕಿಯನ್ನು ಹೊತ್ತಿಸಿ ವೃಕ್ಷವನ್ನೇ ದಗ್ಧಮಾಡಿಬಿಡುವಂತೆ–ಅಥವಾ ಕೆಂಡಗಳನ್ನು ಮಾಡಲಿಚ್ಛಿಸುವವರು (ಇದ್ದಲಿಗಾಗಿ) ಮರಗಳನ್ನು ಸುಡುವಂತೆ–ಪಾಂಡವರನ್ನು ಸಮೂಲವಾಗಿ ಸುಡಲು ಯತ್ನಿಸಬೇಡ. ಪುತ್ರ-ಮಿತ್ರ-ಬಲಸಮೇತನಾಗಿ ಯಮಾಲಯಕ್ಕೆ ಹೋಗಬೇಡ. ಪ್ರಪಂಚದಲ್ಲಿ ಪಾಂಡುಪುತ್ರರ ಎದುರಿಗೆ ನಿಂತು ಯುದ್ಧ ಮಾಡುವವರು ಯಾರಿದ್ದಾರೆ? ಮಾನವರಂತಿರಲಿ ; ದೇವತೆಗಳ ಅಧಿಪತಿ

ಯಾದ ಇಂದ್ರನೇ ದೇವತೆಗಳಿಂದೊಡಗೂಡಿ ಬಂದರೂ ಪಾಂಡವರೊಡನೆ ಯುದ್ಧಮಾಡಿ ವಿಜಯಿಯಾಗಲು ಸಮರ್ಥನಾಗುವನೇ?"

೬೨ನೆಯ ಅಧ್ಯಾಯವು ಮುಗಿಯಿತು.

೬೩ನೆಯ ಅಧ್ಯಾಯ ದ್ಯೂತಪರ್ವ (ಮುಂದುವರಿದಿದೆ.)

## ದ್ಯೂತಕ್ಕೆ ವಿದುರನ ಪ್ರತಿರೋಧ

(ಯಾವ ತಂದೆಯಾದರೂ ಮಗನ ಬಲಿದಾನಕ್ಕೆ ಒಪ್ಪುವನೇ? ತನ್ನ ಮಗನು ವಂಶವಿನಾಶಕನಾಗುವನೆಂಬ ವಿಷಯವು ಧೃತರಾಷ್ಟ್ರನಿಗೆ ತಿಳಿಯದೇ ಇರಲಿಲ್ಲ. ದುರ್ಯೋಧನನು ಹುಟ್ಟಿದಾಗಲೂ ವಿದುರನು ಈ ಮಾತನ್ನೇ ಹೇಳಿದ್ದನು. (**ವ್ಯಕ್ತಂ ಕುಲಾಂತಕರಣಃ** –ಆದಿಪರ್ವ, ಅಧ್ಯಾಯ ೧೧೫, ಶ್ಲೋಕ ೩೯) ಈಗ ತನ್ನ ಮಗನು ದ್ಯೂತದಿಂದ ಯುಧಿಷ್ಠಿರನಿಗೆ ಸೇರಿದ್ದ ಸಕಲವನ್ನೂ ಗೆದ್ದುಕೊಳ್ಳುತ್ತಿರುವಾಗ ಅವನನ್ನು ತ್ಯಾಗಮಾಡುವ ಸಾಧ್ಯತೆ ಯಿರುವುದೇ?) ವಿದುರನು ಯದ್ಯಪಿ ಸತ್ಯಾಂಶವನ್ನೇ ಹೇಳಿದ್ದರೂ ಅದು ಅಪ್ರಿಯವಾದ ಸತ್ಯವಾಗಿದ್ದಿತು. ರಾಜನಿಗೆ ಅಥವಾ ರಾಜಕುಮಾರನಿಗೆ ಬಹುವಿರೋಧವಾಗಿ ಮಾತನಾಡಿದುದಕ್ಕಾಗಿ ವಿದುರನಿಗೆ ಧೃತರಾಷ್ಟ್ರನು ರಾಜದಂಡನೆಯನ್ನು ವಿಧಿಸದಿದ್ದರೂ ಅವನ ಮಾತಿಗೆ ಉತ್ತರವನ್ನೇನೂ ಕೊಡಲಿಲ್ಲ. ವಿದುರನೂ ಸುಮ್ಮನಾಗಲಿಲ್ಲ. ತನ್ನ ಮಾತನ್ನು ಮುಂದುವರಿಸಿ ಹೇಳಿದನು.

ದ್ಯೂತದಿಂದ ವಂಶದ ವಿನಾಶವಾಗುವುದೆಂಬ ಮುಂದಾಲೋಚನೆ ಯಿದ್ದುದೇ ವಿದುರನು ಮಾತು ಮುಂದುವರಿಸಲು ಮುಖ್ಯಕಾರಣವಾಗಿದ್ದಿತು. ವಿದುರನಿಗೆ ದುರ್ಯೋಧನನ ಮೇಲೆ ಅಸೂಯೆಯಾಗಲೀ, ದ್ವೇಷವಾಗಲೀ ಇರಲು ಕಾರಣವಿಲ್ಲ. ಈ ಕಾರಣದಿಂದಾಗಿ ಅವನು ದ್ಯೂತದಿಂದುಂಟಾಗುವ ಪರಿಣಾಮವೇನೆಂಬುದನ್ನು ಬಹುಸ್ಪಷ್ಟವಾಗಿ ಹೇಳತೊಡಗಿದನು :)

**ದ್ಯೂತಂ ಮೂಲಂ ಕಲಹಸ್ಯಾಭ್ಯುಪೈತಿ**
**ಮಿಥೋ ಭೇದಂ ಮಹತೇ ದಾರುಣಾಯ ।**
**ಯದಾ ಸ್ಥಿತೋಽಯಂ ಧೃತರಾಷ್ಟ್ರಸ್ಯ ಪುತ್ರೋ**
**ದುರ್ಯೋಧನಃ ಸೃಜತೇ ವೈರಮುಗ್ರಮ್ ॥೧॥**

"ಧೃತರಾಷ್ಟ್ರ! ದ್ಯೂತವು ಕಲಹಕ್ಕೆ ಕಾರಣವಾಗುವುದು. ದ್ಯೂತವು ಪರಸ್ಪರ ಭೇದಕ್ಕೆ ಕಾರಣವಾಗುವುದು. ದ್ಯೂತದ ಫಲವು ಬಹಳ ಕ್ರೂರ ವಾದುದು. ಹೀಗಿದ್ದರೂ ನಿನ್ನ ಮಗನು ಉಗ್ರವಾದ ವೈರವನ್ನು ಸೃಷ್ಟಿ ಮಾಡುತ್ತಲಿದ್ದಾನೆ.

ದುರ್ಯೋಧನನು ಮಾಡುತ್ತಿರುವ ಪಾಪದ ಕಾರಣದಿಂದಾಗಿ ಪ್ರತೀಪನ ವಂಶದರಸರು, ಶಾಂತನುವಿನ ವಂಶಜರು, ಭೀಮರಾಜನ ವಂಶದವರು ಮತ್ತು ಬಾಹ್ಲಿಕರು–ಇವರೆಲ್ಲರೂ ಸೈನ್ಯಸಮೇತರಾಗಿ ವಿನಾಶ ಹೊಂದುವರು.

**ದುರ್ಯೋಧನೋ ಮದೇನೈಷ ಕ್ಷೇಮಂ ರಾಷ್ಟ್ರಾದಪೋಹತಿ ।**
**ವಿಷಾಣಂ ಗೌರಿವ ಮದಾತ್ಸ್ವಯಮಾರುಜತೇಽಽತ್ಮನಃ ॥೩॥**

ದುರ್ಯೋಧನನು ಮದೋನ್ಮತ್ತನಾಗಿ ಈ ರಾಷ್ಟ್ರದಿಂದಲೇ ಕ್ಷೇಮವನ್ನು ಉಚ್ಚಾಟಿಸುತ್ತಿದ್ದಾನೆ. (ರಾಷ್ಟ್ರಕ್ಕೆ ಪೀಡೆಯನ್ನುಂಟುಮಾಡುತ್ತಿದ್ದಾನೆ.) ಹೋರಿಯು ಮದದಿಂದ ಕಲ್ಲನ್ನು ಹಾಯಲು ಹೋಗಿ ತನ್ನ ಕೊಂಬನ್ನು ತಾನೇ ಮುರಿದುಕೊಳ್ಳುವಂತೆ ಈ ದುರ್ಯೋಧನನು ತನಗೆ ತಾನೇ ಕೇಡನ್ನು ತಂದುಕೊಳ್ಳುತ್ತಾನೆ.

**ಯಶ್ಚಿತ್ತಮನ್ವೇತಿ ಪರಸ್ಯ ರಾಜ-**
**ನ್ವೀರಃ ಕವಿಃ ಸ್ವಾಮವಮನ್ಯ ದೃಷ್ಟಿಮ್ ।**
**ನಾವಂ ಸಮುದ್ರೇ ಇವ ಬಾಲನೇತ್ರಾ-**
**ಮಾರುಹ್ಯ ಘೋರೇ ವ್ಯಸನೇ ನಿಮಜ್ಜೇತ್ ॥೪॥**

ಮಹಾರಾಜ! ಯಾವಾತನು ತಿಳಿವಳಿಕೆಯಿಂದಲೂ, ಧೈರ್ಯ ದಿಂದಲೂ ಕೂಡಿದ್ದರೂ ಮುಂದಾಲೋಚನೆಯನ್ನು ಮಾಡದೇ ಇತರರ ಮಾತಿಗೆ ಕಿವಿಗೊಟ್ಟು, ಇತರರು ಹೇಳಿದಂತೆ ನಡೆಯುವನೋ–ಅವನು ಬಾಲಕನೊಬ್ಬನು ನಡೆಸುವ ದೋಣಿಯಲ್ಲಿ ಪ್ರಯಾಣಮಾಡಲು ಹೊರಟವ ನಂತೆ–ದಾರುಣವಾದ ಕಷ್ಟಕ್ಕೆ ಗುರಿಯಾಗುತ್ತಾನೆ.

ಧೃತರಾಷ್ಟ್ರ! ದುರ್ಯೋಧನನು ಪಾಂಡುಪುತ್ರನೊಡನೆ ದ್ಯೂತ ವಾಡುತ್ತಿದ್ದಾನೆ. ನಿನ್ನ ಪುತ್ರನು ಪ್ರತಿಯೊಂದು ಆಟದಲ್ಲಿಯೂ ಗೆಲ್ಲುತ್ತಿರುವ

ನೆಂದು ನೀನು ಸಂತೋಷಪಡುತ್ತಿದ್ದೀಯೆ. ಸಾರಿ-ಸಾರಿ ಹೇಳುತ್ತೇನೆ. ಇಂದಿನ ಈ ದ್ಯೂತದ ವಿಜಯವೇ ಮುಂದೆ ಯುದ್ಧಕ್ಕೆ ಕಾರಣವಾಗಿ ಮಾನವಕೋಟಿಯ ವಿನಾಶಕ್ಕೆ ಕಾರಣವಾಗುತ್ತದೆ. ಸುಲಭೋಪಾಯದಿಂದ ಪಾಂಡವರ ಐಶ್ವರ್ಯವನ್ನು ಅಪಹರಿಸಲು ಮಾಡಿರುವ ಈ ದ್ಯೂತದ ಯೋಜನೆಯು ಬಹಳ ಕೆಟ್ಟದಾದ ಪರಿಣಾಮವನ್ನುಂಟುಮಾಡುತ್ತದೆ.

ಈ ಕುತ್ಸಿತಸಲಹೆಗೆ ಮನಸೋತು ನೀನು ಮುಂದೆ ದಾರುಣವಾದ ಮನೋವೇದನೆಗೆ ಗುರಿಯಾಗಲಿರುವೆ. ನೀನು ಈ ದ್ಯೂತಕ್ಕೆ ಒಪ್ಪಿದುದರ ಪರಿಣಾಮವೇನೆಂದರೆ : ನಿನಗೆ ಅತ್ಯಂತ ನಿಕಟಸಂಬಂಧಿಯಾದ ಸುತಪ್ರಾಯನಾದ ಯುಧಿಷ್ಠಿರನೊಡನೆಯೇ ಯುದ್ಧಮಾಡಲು ಒಪ್ಪಿದಂತಾಗಿದೆ. ಯುದ್ಧವಾಗುವುದೆಂಬುದನ್ನು ನೀನು ಯೋಚಿಸದಿರಬಹುದು. ಆದರೆ ಈ ದ್ಯೂತದ ಪರಿಣಾಮವು ಯುದ್ಧದಲ್ಲಿಯೇ ಪರ್ಯವಸಾನ ಹೊಂದುವುದು.

ಧೃತರಾಷ್ಟ್ರನು ಏನೊಂದೂ ಉತ್ತರಿಸದಿರಲಾಗಿ ಅಲ್ಲಿ ನೆರೆದಿದ್ದ ರಾಜರನ್ನು ಕುರಿತು ವಿದುರನು ಹೇಳುತ್ತಾನೆ :

"ಶಂತನುವಿನ ಮತ್ತು ಪ್ರತೀಪನ ವಂಶಜರಾದ ರಾಜರೇ! ನಾನು ಹೇಳುವುದನ್ನು ಆಲಿಸಿರಿ. ಈ ದುಷ್ಟನೊಬ್ಬನನ್ನು ಅನುಸರಿಸಿ ನೀವೆಲ್ಲರೂ ಧಗ-ಧಗನೆ ಉರಿಯುತ್ತಿರುವ ಅಗ್ನಿಯಲ್ಲಿ ಪ್ರವೇಶಮಾಡಬೇಡಿರಿ. ದ್ಯೂತದ ಅಮಲಿನಲ್ಲಿ ಕುಳಿತಿರುವ ಈ ಯುಧಿಷ್ಠಿರನೇನಾದರೂ ಕುಪಿತನಾದರೆ ಮತ್ತು ಅವನ ಪಕ್ಕದಲ್ಲಿ ಕುಳಿತಿರುವ ಭೀಮಾರ್ಜುನ-ನಕುಲ-ಸಹದೇವರೂ ಕೋಪಗೊಂಡರೆ ನಿಮಗೆ ರಕ್ಷಕರಾರು?"

**ಮಹಾರಾಜ ಪ್ರಭವಸ್ತ್ವಂ ಧನಾನಾಂ**
**ಪುರಾ ದ್ಯೂತಾನ್ಮನಸಾ ಯಾವದಿಚ್ಛೇಃ ।**
**ಬಹುವಿತ್ತಾನ್ಪಾಣ್ಡವಾಂಶ್ಚೇಜ್ಜಯಸ್ತ್ವಂ**
**ಕಿಂ ತೇ ತತ್ಸ್ಯಾದ್ವಸು ವಿನ್ದೇಹ ಪಾರ್ಥಾನ್ ॥೯॥**

ಮಹಾರಾ ಜ! ನಿನಗೆ ಐಶ್ವರ್ಯಕ್ಕೆ ಕಡಿಮೆಯೇ? ನಿನ್ನ ಸಮೀಪದಲ್ಲಿ ಐಶ್ವರ್ಯದ ಗಣಿಯೇ ಇರುವುದು. ಇನ್ನೂ ಹೆಚ್ಚಿನ ಐಶ್ವರ್ಯವನ್ನು

ಸಂಪಾದಿಸಬೇಕೆಂಬ ಅಭಿಲಾಷೆಯಿರುವುದಾದರೆ ಅದಕ್ಕೆ ಅನೇಕಮಾರ್ಗಗಳಿವೆ. ಕುತ್ಸಿತವಾದ ಈ ದ್ಯೂತದಿಂದಲೇ ಐಶ್ವರ್ಯವನ್ನು ಗಳಿಸಬೇಕೇ? ದ್ಯೂತದ ಮೂಲಕ ಪಾಂಡವರ ಅಪಾರವಾದ ಐಶ್ವರ್ಯವನ್ನು ಗೆಲ್ಲುವುದರಿಂದ ಅವರೊಡನೆ ಶತ್ರುತ್ವವೊಂದು ಹೊರತಾಗಿ ಬೇರಾವ ಲಾಭವುಂಟಾಗುವುದು? ಹಾಗೆಂದೂ ಮಾಡಬೇಡ. ಪಾಂಡವರ ಐಶ್ವರ್ಯವನ್ನು ಸೆಳೆದುಕೊಳ್ಳಲು ಯತ್ನಿಸಬೇಡ. ಪಾಂಡವರನ್ನೇ ಸೆಳೆದುಕೊಳ್ಳಲು ಯತ್ನಿಸು. ಅವರನ್ನು ನಿನ್ನವರನ್ನಾಗಿ ಮಾಡಿಕೋ. ಅವರಿಗಿಂತಲೂ ಮಿಗಿಲಾದ ಐಶ್ವರ್ಯವು ಬೇರೊಂದಿಲ್ಲ. ಅವರನ್ನೇ ಮಹಾನಿಧಿಯೆಂದು ಭಾವಿಸು.

ಧೃತರಾಷ್ಟ್ರ! ಶಕುನಿಯ ಜೂಜಾಟದ ಕೌಶಲ್ಯವು ನಮಗೆಲ್ಲರಿಗೂ ತಿಳಿದಿದೆ. ಇವನು ಆಟದಲ್ಲಿ ನಾನಾವಿಧವಾದ ಕುಟಿಲತೆಗಳನ್ನೂ ಪ್ರಯೋಗಿಸಲು ತಿಳಿದಿದ್ದಾನೆ. ಈ ಮಹಾನುಭಾವನು ತನ್ನ ಸ್ವದೇಶಕ್ಕೆ ತೆರಳಲಿ. ಪಾಂಡವರೊಡನೆ ಈ ದ್ಯೂತದ ಕಾರಣದಿಂದಾಗಿ ಯುದ್ಧಮಾಡುವುದು ಖಂಡಿತವಾಗಿಯೂ ಬೇಡ. ಈಗಲಾದರೂ ಈ ದ್ಯೂತವು ನಿಲ್ಲಲಿ."

ಅರವತ್ತಮೂರನೆಯ ಅಧ್ಯಾಯವು ಮುಗಿಯಿತು.

೬೪ನೆಯ ಅಧ್ಯಾಯ ದ್ಯೂತಪರ್ವ (ಮುಂದುವರಿದಿದೆ.)

## ದುರ್ಯೋಧನನಿಂದ ವಿದುರನ ಭರ್ತ್ಸನೆ : ವಿದುರನ ಸಮಾಧಾನೋಕ್ತಿ

ಧೃತರಾಷ್ಟ್ರನು ವಿದುರನಿಗೆ ಉತ್ತರಿಸಲು ಅಸಮರ್ಥನಾಗಿ ಕುಳಿತಿದ್ದರೂ ದುರ್ಯೋಧನನಿಗೆ ವಿದುರನ ಅಂತಹ ಮಾತುಗಳನ್ನು ಕೇಳಿಕೊಂಡು ಕುಳಿತಿರಲು ಸಾಧ್ಯವಾಗಲಿಲ್ಲ.

ವಿದುರನ ಮಾತುಗಳನ್ನು ಕೇಳಿ ಕುಪಿತನಾದ ದುರ್ಯೋಧನನು ವಿದುರನನ್ನು ಕುರಿತು ಹೇಳತೊಡಗಿದನು :

**ಪರೇಷಾಮೇವ ಯಶಸಾ ಶ್ಲಾಘಸೇ ತ್ವಂ**
**ಸದಾ ಕ್ಷತ್ತಃ ಕುತ್ಸಯನ್ಧಾರ್ತರಾಷ್ಟ್ರಾನ್ ।**
**ಜಾನೀಮಹೇ ವಿದುರ ಯತ್ಪ್ರಿಯಸ್ತ್ವಂ**
**ಬಾಲಾನಿವಾಸ್ಮಾನವಮನ್ಯಸೇ ನಿತ್ಯಮೇವ ॥೧॥**

"ವಿದುರ! ನೀನು ಯಾವಾಗಲೂ ನಮ್ಮ ಶತ್ರುಗಳ ಯಶಸ್ಸನ್ನು ಶ್ಲಾಘನೆಮಾಡುವೆ. ಧೃತರಾಷ್ಟ್ರನ ಮಕ್ಕಳಾದ ನಮ್ಮನ್ನು ಸದಾ ತೆಗಳುವೆ. ನಿನಗೆ ಯಾರ ಮೇಲೆ ಹೆಚ್ಚಿನ ಪ್ರೇಮವಿದೆಯೆಂಬುದು ನಮಗೂ ತಿಳಿದಿರುವುದು. ನೀನು ನಮ್ಮನ್ನು ಎಳೆಯ ಮಕ್ಕಳೆಂದೇ ಭಾವಿಸಿ ಬಹಳ ತಾತ್ಸಾರದಿಂದ ಕಾಣುತ್ತಿರುವೆ.

**ಸ ವಿಜ್ಞೇಯಃ ಪುರುಷೋಽನ್ಯತ್ರಕಾಮೋ**
**ನಿನ್ದಾಪ್ರಶಂಸೇ ಹಿ ತಥಾ ಯುನಕ್ತಿ ।**
**ಜಿಹ್ವಾ ಕಥಂ ತೇ ಹೃದಯಂ ವ್ಯನಕ್ತಿ ಯೋ**
**ನ ಜ್ಯಾಯಸಃ ಕೃಥಾ ಮನಸಃ ಪ್ರಾತಿಕೂಲ್ಯಮ್ ॥೨॥**

ಇಷ್ಟರಾದವರಿಗೆ ಜಯವನ್ನು ಅಭಿಲಾಷಿಸುವುದು ; ಪರರಿಗೆ ಅಪ ಜಯವನ್ನು ಅಭಿಲಾಷಿಸುವುದು–ಇದು ಮನುಷ್ಯನ ಸ್ವಭಾವವಾಗಿರುತ್ತದೆ. ಅವನು ಮಾಡುವ ಶ್ಲಾಘನೆ-ನಿಂದನೆಗಳು ಇದಕ್ಕೆ ಅನುಸಾರವಾಗಿಯೇ ಇರು ತ್ತವೆ. ನಿನ್ನ ಹೃದಯದಲ್ಲಿರುವ ನಮ್ಮ ವಿಷಯವಾದ ದ್ವೇಷಭಾವನೆಯನ್ನು ನಿನ್ನ ನಾಲಿಗೆಯು ಪ್ರಕಟಪಡಿಸುತ್ತಿದೆ. ನಿನಗಿಂತಲೂ ಶ್ರೇಷ್ಠರಾದವರ ವಿಷಯದಲ್ಲಿ ಈ ರೀತಿ ಮನಸ್ಸಿನ ವಿರೋಧವನ್ನು ವ್ಯಕ್ತಪಡಿಸಬೇಡ.

**ಉತ್ಸಙ್ಗೇ ಚ ವ್ಯಾಲ ಇವಾಹಿತೋಽಸಿ**
**ಮಾರ್ಜಾರವತ್ಪೋಷಕಂ ಚೋಪಹಂಸಿ ।**
**ಭರ್ತೃಘ್ನಂ ತ್ವಾಂ ನ ಹಿ ಪಾಪೀಯ ಆಹು-**
**ಸ್ತಸ್ಮಾತ್ಕ್ಷತ್ತಃ ಕಿಂ ನ ಬಿಭೇಷಿ ಪಾಪಾತ್ ॥೩॥**

ವಿಷಸರ್ಪವನ್ನು ತೊಡೆಯ ಮೇಲಿರಿಸಿಕೊಂಡು ಸಾಕುವಂತೆ–ನಿನ್ನನ್ನು ನಾವು ಅಶನ-ವಸತಿಗಳನ್ನು ಕೊಟ್ಟು ರಕ್ಷಿಸುತ್ತಿದ್ದೇವೆ. ಮನೆಯಲ್ಲಿ ಸಾಕಿದ ಬೆಕ್ಕು ಯಾವ ರೀತಿಯಲ್ಲಿ ಪೋಷಕನು (ಯಜಮಾನಿಯು) ಸಾಯಲೆಂದು ಅಭಿಲಾಷಿಸುವುದೋ–ಅದೇ ರೀತಿಯಲ್ಲಿ ನೀನು ನಿನ್ನ ಪೋಷಕರಾದ ನಮ್ಮ ಅವಸಾನವನ್ನೇ ಅಭಿಲಾಷಿಸುತ್ತಿರುವೆ. (ಬೆಕ್ಕು, ತಾನು ಕುಡಿಯಬೇಕೆಂದಿಚ್ಛಿ ಸುವ ಹಾಲನ್ನು ಯಾವಾಗಲೂ ಮುಚ್ಚಿಡುವ ಮನೆಯ ಯಜಮಾನಿಯು ಸಾಯಲೆಂದು ಶಪಿಸುವುದೆಂಬ ಪ್ರತೀತಿಯಿದೆ.) ಯದ್ಯಪಿ ನೀನು

ಸ್ವಾಮಿಯ ಹಂತಕನೇ ಆಗಿದ್ದರೂ (ಸ್ವಾಮಿಗೆ ಸದಾಕಾಲದಲ್ಲಿಯೂ ಕೇಡು ಬಯಸುವವನೇ ಆಗಿದ್ದರೂ) ನಿನ್ನನ್ನು ಪಾಪಿಷ್ಠನೆಂದು ಯಾರೂ ಹೇಳುತ್ತಿಲ್ಲ. ಈ ಕಾರಣದಿಂದಲೇ ನೀನು ಈ ಪಾಪಕಾರ್ಯವನ್ನು ಮಾಡಲು ಹೆದರುತ್ತಿಲ್ಲವೇನು?

ನಾವು ನಮ್ಮ ಶತ್ರುಗಳನ್ನು ಪರಾಜಯಗೊಳಿಸಿ ಅನೇಕವಿಧವಾದ ಆನುಕೂಲ್ಯಗಳನ್ನು ಪಡೆದಿರುತ್ತೇವೆ. ಇದಕ್ಕಾಗಿ ನೀನು ನಮ್ಮ ವಿಷಯದಲ್ಲಿ ಕಠಿನವಾದ ಮಾತುಗಳನ್ನು ಆಡಬೇಡ. ನೀನು ಯಾವಾಗಲೂ ಶತ್ರುಗಳೊಡನೆ ಸಂಧಾನವನ್ನು ಮಾಡಿಕೊಳ್ಳಬೇಕೆಂದು ಹೇಳುತ್ತಿರುವೆ. (ಈ ಸಂಧಾನದ ಮಾತಿನಿಂದ ನಮ್ಮ ದ್ವೇಷವನ್ನು ಮತ್ತಷ್ಟು ಹೆಚ್ಚಾಗಿ ಕಟ್ಟಿಕೊಳ್ಳುವೆ.)

**ಅಮಿತ್ರತಾಂ ಯಾತಿ ನರೋಽಕ್ಷಮಂ ಬ್ರುವ-**
**ನ್ನಿಗೂಹತೇ ಗುಹ್ಯಮಮಿತ್ರಸಂಸ್ತವೇ ।**
**ತದಾಶ್ರಿತೋಽಪತ್ರಪ ಕಿಂ ನು ಬಾಧಸೇ**
**ಯದಿಚ್ಛಸಿ ತ್ವಂ ತದಿಹಾಭಿಭಾಷಸೇ ॥೫॥**

ಅಯುಕ್ತವಾದ ಮಾತುಗಳನ್ನಾಡುವ ಮನುಷ್ಯನು ಶತ್ರುವೆಂದೇ ಪರಿಗಣಿಸಲ್ಪಡುತ್ತಾನೆ ಒಂದು ವೇಳೆ ಶತ್ರುವನ್ನು ಪ್ರಶಂಸೆಮಾಡಿದರೂ ವಿವೇಕಿಯಾದವನು ತನ್ನ ಪಕ್ಷದ ರಹಸ್ಯವನ್ನು ಬಹಿರಂಗಪಡಿಸುವುದಿಲ್ಲ. ನಾಚಿಕೆಗೆಟ್ಟ ವಿದುರನೇ! ನೀನು ಈ ನೀತಿಯನ್ನಾದರೂ ಅನುಸರಿಸಬಹುದಾಗಿದ್ದಿತು. ಶತ್ರುಗಳನ್ನು ಪ್ರಶಂಸೆಮಾಡುವುದರಿಂದ ಮಾತ್ರವೇ ತೃಪ್ತನಾಗದೇ ನಮ್ಮ ಕಾರ್ಯಕ್ಕೆ ಪ್ರತಿಬಂಧಕವನ್ನೂ ಉಂಟುಮಾಡುತ್ತಿರುವೆಯೇಕೆ? ಮನಬಂದಂತೆ ನೀನಿಲ್ಲಿ ಮಾತನಾಡುತ್ತಿರುವೆ. ಸ್ವೇಚ್ಛೆಯಿಂದ ಅಪಲಾಪಮಾಡುತ್ತಿರುವೆ. ನಿನಗಿರುವ ವಾಕ್ಸ್ವಾತಂತ್ರ್ಯವನ್ನು ನಮ್ಮ ನಿಂದೆಯಲ್ಲೇ ಉಪಯೋಗಿಸಬೇಡ. ನಾವು ನಿನ್ನ ಮನಸ್ಸನ್ನು ಪೂರ್ಣವಾಗಿ ತಿಳಿದಿರುತ್ತೇವೆ. ಜ್ಞಾನವೃದ್ಧರಾದವರ ಮತ್ತು ವಯೋವೃದ್ಧರಾದವರ ಪಾದಗಳಡಿಯಲ್ಲಿ ಕುಳಿತು ನೀನು ವಿಷಯಗಳನ್ನು ತಿಳಿದುಕೋ.

ನೀನಲ್ಲಿಗೆ ಹೋಗುವುದು ಯುಕ್ತವಾಗಿದೆ. ನೀನು ಇದುವರೆಗೆ ನಿನ್ನ ಹೃದಯವನ್ನು ಬಹಿರಂಗಪಡಿಸದೇ ಇದ್ದು ಧರ್ಮಾತ್ಮನೆಂಬ ಸೋಗಿನಿಂದ ಗಳಿಸಿರುವ ಯಶಸ್ಸನ್ನು ಉಳಿಸಿಕೋ. ಶತ್ರುಗಳ ಕಾರ್ಯಗಳನ್ನು ಮಾಡುವುದರಲ್ಲಿಯೇ ನಿರತನಾಗಿರಬೇಡ. ನೀನು ನಮ್ಮ ನಾಯಕನೆಂದು ಭ್ರಮಿಸಬೇಡ. ಹಿರಿಯರಾಡುವ ರೀತಿಯಲ್ಲಿ ನೀನು ನಮ್ಮ ವಿಷಯದಲ್ಲಿ ಕಠಿನೋಕ್ತಿಗಳನ್ನಾಡಬೇಡ. ನಮ್ಮ ಹಿತಾಹಿತಗಳ ವಿಷಯವಾಗಿ ನಿನ್ನನ್ನು ಕೇಳಿ ಅದರಂತೆ ನಡೆಯಲು ನಾವು ಸಿದ್ಧರಾಗಿಲ್ಲ. ನೀನಾರು? ನಿನ್ನ ಸ್ವಭಾವವೇನು? ನಿನ್ನ ಹೃದಯವೇನು?–ಇತ್ಯಾದಿ ವಿಷಯಗಳೆಲ್ಲವನ್ನೂ ಬಹಳ ದಿನಗಳಿಂದ ನಾವು ತಿಳಿದಿರುತ್ತೇವೆ. ಇನ್ನಾದರೂ ನಿನ್ನ ಕಠಿನೋಕ್ತಿಗಳಿಂದ ಸಹನಶೀಲರಾದ ನಮ್ಮ ಮನನೋಯಿಸಲು ಯತ್ನಿಸಬೇಡ.

**ಏಕಃ ಶಾಸ್ತಾ ನ ದ್ವಿತೀಯೋಽಸ್ತಿ ಶಾಸ್ತಾ**
**ಗರ್ಭೇ ಶಯಾನಂ ಪುರುಷಂ ಶಾಸ್ತಿ ಶಾಸ್ತಾ ।**
**ತೇನಾನುಶಿಷ್ಟಃ ಪ್ರವಣಾದಿವಾಮ್ಭೋ**
**ಯಥಾ ನಿಯುಕ್ತೋಽಸ್ಮಿ ತಥಾ ಭವಾಮಿ ॥೮॥**

ವಿದುರ! ಸರ್ವರಿಗೂ ಒಬ್ಬನೇ ಶಾಸಕನು. ಎರಡನೆಯವನಿರುವುದಿಲ್ಲ. ತಾಯಿಯ ಗರ್ಭದಲ್ಲಿರುವ ಶಿಶುವಿಗೂ ಕೂಡ ಆ ಒಬ್ಬನೇ ಶಾಸಕನಾಗಿರುತ್ತಾನೆ. ಅವನಿಂದಲೇ ನಾನೂ ನಿಯಂತ್ರಿತನಾಗಿರುತ್ತೇನೆ. ಇಳಿಜಾರಾದ ಪ್ರದೇಶಕ್ಕೇ ನೀರು ಪ್ರವಹಿಸಿ ಹೋಗುವಂತೆ–ಜಗನ್ನಿಯಾಮಕನ ನಿರ್ದೇಶಕ್ಕೆ ಅನುಗುಣವಾಗಿಯೇ ನಾನೂ ನಡೆಯುತ್ತಿರುತ್ತೇನೆ.

**ಭಿನತ್ತಿ ಶಿರಸಾ ಶೈಲಮಹಿಂ ಭೋಜಯತೇ ಚ ಯಃ ।**
**ಧೀರೇವ ಕುರುತೇ ತಸ್ಯ ಕಾರ್ಯಾಣಾಮನುಶಾಸನಮ್ ॥೯॥**

**ಯೋ ಬಲಾದನುಶಾಸ್ತೀಹ ಸೋಽಮಿತ್ರಂ ತೇನ ವಿನ್ದತಿ ।**
**ಮಿತ್ರತಾಮನುವೃತ್ತಂ ತು ಸಮುಪೇಕ್ಷೇತ ಪಣ್ಡಿತಃ ॥೧೦॥**

ದೈವಪ್ರೇರಿತನಾಗಿ ತಲೆಯಿಂದ ಪರ್ವತವನ್ನು ಯಾವನು ಒಡೆಯಲು ಹೋಗುವನೋ, ಯಾವನು ಸರ್ಪಕ್ಕೆ ಹಾಲುಣಿಸುವನೋ–ಅಂತಹವನಿಗೆ ಅವನ ಬುದ್ಧಿಯೇ ಕಾರ್ಯಗಳ ಅನುಶಾಸನಮಾಡುತ್ತದೆ. ಅದರಂತೆಯೇ

ನಾನೀ ವಿಷಯದಲ್ಲಿ ನನ್ನ ಆತ್ಮದ ಪ್ರೇರಣೆಯಂತೆಯೇ ನಡೆಯುತ್ತಿದ್ದೇನೆ. ಕೇಳುವವರಿಗೆ ಇಚ್ಛೆಯಿಲ್ಲದಿದ್ದರೂ ಬಲಾತ್ಕಾರವಾಗಿ ಉಪದೇಶವನ್ನು ಮಾಡುವವನು ಶತ್ರುವೆಂದು ಪರಿಗಣಿಸಲ್ಪಡುತ್ತಾನೆ. ಪಂಡಿತರಾದವರು ಅಂತಹವರೊಡನೆ ಮಿತ್ರತ್ವವನ್ನು ಉಪೇಕ್ಷಿಸುತ್ತಾರೆ.

**ಪ್ರದೀಪ್ಯ ಯಃ ಪ್ರದೀಪ್ತಾಗ್ನಿಂ ಪ್ರಾಕ್ಚಿರಂ ನಾಭಿಧಾವತಿ ।**
**ಭಸ್ಮಾಪಿ ನ ಸ ವಿನ್ದೇತ ಶಿಷ್ಟಂ ಕ್ವಚನ ಭಾರತ ॥೧೧॥**

ಅಗ್ನಿಯ ಸ್ಪರ್ಶವಾದೊಡನೆಯೇ ಜಾಜ್ವಲ್ಯಮಾನವಾಗಿ ಉರಿಯುವ ಸ್ವಭಾವವುಳ್ಳ ಕರ್ಪೂರಕ್ಕೆ ಅಗ್ನಿಸ್ಪರ್ಶವನ್ನು ಮಾಡಿದನಂತರ, ಒಡನೆಯೇ ಅದನ್ನು ಆರಿಸದಿದ್ದರೆ ಕಡೆಗೆ ಭಸ್ಮವೂ ಕೂಡ ಉಳಿಯುವುದಿಲ್ಲ.

**ನ ವಾಸಯೇತ್ಪಾರವರ್ಗ್ಯಂ ದ್ವಿಷನ್ತಂ**
**ವಿಶೇಷತಃ ಕ್ಷತ್ತರಹಿತಂ ಮನುಷ್ಯಮ್ ।**
**ಸ ಯತ್ರೇಚ್ಛಸಿ ವಿದುರ ತತ್ರ ಗಚ್ಛ**
**ಸುಸಾನ್ತ್ವಿತಾ ಹ್ಯಸತೀ ಸ್ತ್ರೀ ಜಹಾತಿ ॥೧೨॥**

ಶತ್ರುಗಳಿಗೆ ಮಿತ್ರನಾದವನಿಗೂ, ತನ್ನ ಸ್ವಾಮಿಯ ವಿಷಯದಲ್ಲಿ ಮಾತ್ಸರ್ಯವುಳ್ಳವನಿಗೂ ಮತ್ತು ಕುತ್ಸಿತಬುದ್ಧಿಯುಳ್ಳವನಿಗೂ ಆಶ್ರಯವನ್ನು ಕೊಡಬಾರದು. ಆದುದರಿಂದ, ವಿದುರ! ಇಚ್ಛೆಯಿದ್ದೆಡೆಗೆ ನೀನು ಹೊರಟುಹೋಗು. ವ್ಯಭಿಚಾರಿಣಿಯಾದ ಪತ್ನಿಯನ್ನು ಎಷ್ಟೇ ಮಮತೆಯಿಂದ ಕಂಡರೂ ಜಾರನಿರುವೆಡೆಗೇ ಓಡಿಹೋಗುವಳಲ್ಲವೇ?"

ವಿದುರನಾಡಿದುದಕ್ಕಿಂತಲೂ ದುರ್ಯೋಧನನಾಡಿದುದು ಬಹಳ ತೀಕ್ಷ್ಣವಾದ ಮಾತು. ವಿದುರನಿಗೆ ಬಹಳ ಖೇದವಾಯಿತು. ಧೃತರಾಷ್ಟ್ರನಿಗೆ ಹೇಳಿದನು :

**ಏತಾವತಾ ಪುರುಷಂ ಯೇ ತ್ಯಜನ್ತಿ**
**ತೇಷಾಂ ವೃತ್ತಂ ಸಾಕ್ಷಿವದ್ಬ್ರೂಹಿ ರಾಜನ್ ।**

"ಮಹಾರಾಜ! ಉತ್ತಮವಾದ ಸಲಹೆಗಳನ್ನು ನೀಡುವ ಹಿತೈಷಿಯನ್ನು ದೂರಮಾಡಲಿಚ್ಛಿಸಿರುವ ಇಂತಹವರ ಸ್ವಭಾವವು ಎಷ್ಟು ದುಷ್ಟವಾದುದೆಂಬುದನ್ನು ನೀನೇ ನಿಷ್ಪಕ್ಷಪಾತವಾಗಿ ಹೇಳು. ನೀನಿಲ್ಲಿ ಸಾಕ್ಷಿಯಂತೆ ಕುಳಿತಿರುವೆಯಲ್ಲವೇ?"

ಹೀಗೆ ಪ್ರಶ್ನಿಸಿದಾಗಲೂ ಧೃತರಾಷ್ಟ್ರನೇನೂ ಮಾತನಾಡಲಿಲ್ಲ. ವಿದುರನು ನಿಟ್ಟುಸಿರುಬಿಟ್ಟು ಹೇಳಿದನು :

**ರಾಜ್ಞಾಂ ಹಿ ಚಿತ್ತಾನಿ ಪರಿಪ್ಲುತಾನಿ**
**ಸಾನ್ತ್ವಂ ದತ್ವಾ ಮುಸಲೈರ್ಘಾತಯನ್ತಿ ||೧೩||**

"ನಿಜ! ರಾಜರ ಹೃದಯವು ಚಂಚಲವಾದುದು. ಮೊದಲು ಆಶ್ರಯ ವನ್ನಿತ್ತು ಒಳ್ಳೆಯ ಮಾತನ್ನು ಹೇಳಿ ಅನಂತರದಲ್ಲಿ ಒನಕೆಗಳಿಂದ ( ದೊಣ್ಣೆ ಗಳಿಂದ ) ಹೊಡೆದೋಡಿಸುತ್ತಾರೆ."

ಅನಂತರದಲ್ಲಿ ವಿದುರನು ಪುನಃ ದುರ್ಯೋಧನನನ್ನೇ ಕುರಿತು ಹೇಳಿದನು :

**ಅಬಾಲತ್ವಂ ಮನ್ಯಸೇ ರಾಜಪುತ್ರ**
**ಬಾಲೋಽಹಮಿತ್ಯೇವ ಸುಮನ್ದಬುದ್ಧೇ ।**
**ಯಃ ಸೌಹೃದೇ ಪುರುಷಂ ಸ್ಥಾಪಯಿತ್ವಾ**
**ಪಶ್ಚಾದೇನಂ ದೂಷಯತೇ ಸ ಬಾಲಃ ||೧೪||**

"ದುರ್ಯೋಧನ! ನೀನು ನನ್ನನ್ನು ಬಾಲನೆಂದೂ ಮತ್ತು ನಿನ್ನನ್ನು ಪರಿಪಕ್ವವಾದ ಬುದ್ಧಿಯುಳ್ಳವನೆಂದೂ ಭಾವಿಸಿರುವೆಯಲ್ಲವೇ? ಮಂದ ಬುದ್ಧಿಯವನೇ! ಯಾವನು ಮೊದಲು ಒಬ್ಬನನ್ನು ಸ್ನೇಹಿತನನ್ನಾಗಿ ಮತ್ತು ಹಿತೈಷಿಯನ್ನಾಗಿ ಅಂಗೀಕರಿಸಿ, ಅನಂತರದಲ್ಲಿ ಆ ಸ್ನೇಹಿತನಲ್ಲಿ ಮತ್ತು ಹಿತೈಷಿಯಲ್ಲಿ ಇಲ್ಲದ ದೋಷವನ್ನು ಹುಡುಕಿ ಅವನನ್ನು ದೂಷಿಸುವನೋ– ಅವನೇ ಬಾಲಕನು.

**ನ ಶ್ರೇಯಸೇ ನೀಯತೇ ಮನ್ದಬುದ್ಧಿಃ**
**ಸ್ತ್ರೀ ಶ್ರೋತ್ರಿಯಸ್ಯೇವ ಗೃಹೇ ಪ್ರದುಷ್ಟಾ ।**
**ಧ್ರುವಂ ನ ರೋಚೇದ್ಭರತರ್ಷಭಸ್ಯ**
**ಪತಿಃ ಕುಮಾರ್ಯಾ ಇವ ಷಷ್ಟಿವರ್ಷಃ ||೧೫||**

ನಿಜ ; ಮಂದಬುದ್ಧಿಯವನಾದ ಮನುಷ್ಯನನ್ನು ಒಳ್ಳೆಯ ಮಾತಿನಿಂದ ಶ್ರೇಯಸ್ಸಿನ ಮಾರ್ಗಕ್ಕೆ ಒಯ್ಯಲು ಸಾಧ್ಯವಿಲ್ಲ. ದುರಾಚಾರಿಣಿಯಾದ ಪತ್ನಿಯು ಶ್ರೋತ್ರಿಯನ ಅಗ್ನಿಹೋತ್ರಾದಿ ಕಾರ್ಯಗಳಿಗೆ ಹೊಂದಿ

ಕೊಳ್ಳದಂತೆ ಮಂದಬುದ್ಧಿಯು ಶ್ರೇಯಸ್ಸಿನ ಮಾರ್ಗಕ್ಕೆ ಹೊಂದಿಕೊಂಡು ನಡೆಯುವುದಿಲ್ಲ. ಷಷ್ಟ್ಯಬ್ದಪೂರ್ತಿಯಾದವನು ಷೋಡಶವರ್ಷಪ್ರಾಯದ ನಾರೀಮಣಿಗೆ ಇಷ್ಟನಾಗದಿರುವಂತೆ–ನನ್ನ ಹಿತೋಕ್ತಿಗಳು ಈ ದುಷ್ಟನಾದ ದುರ್ಯೋಧನನಿಗೆ ರುಚಿಸಲಾರವು.

ಮಹಾರಾಜ! ಇನ್ನು ಮುಂದೆ ನೀನು ಕೈಗೊಳ್ಳಲಿರುವ ಒಳ್ಳೆಯ ಮತ್ತು ಕೆಟ್ಟ ಕೆಲಸಗಳಲ್ಲಿ ನಿನಗೆ ಪ್ರಿಯವಾಗುವಂತಹ ಸಲಹೆಗಳನ್ನೇ ಪಡೆಯುವ ಅಭಿಲಾಷೆಯಿರುವುದಾದರೆ–ಹೆಂಗಸರನ್ನೂ, ಜಡರನ್ನೂ, ಅವಯವ ಹೀನರನ್ನೂ ಕೇಳು.

**ಲಭ್ಯತೇ ಖಲು ಪಾಪೀಯಾನ್ನರೋ ನು ಪ್ರಿಯವಾಗಿಹ ।**
**ಅಪ್ರಿಯಸ್ಯ ಹಿ ಪಥ್ಯಸ್ಯ ವಕ್ತಾ ಶ್ರೋತಾ ಚ ದುರ್ಲಭಃ ॥೧೬॥**

ಮಹಾರಾಜ! ಯಾವಾಗಲೂ ಪ್ರಿಯವಾಕ್ಯಗಳನ್ನೇ ಹೇಳಿ ಪ್ರಭುವಿನ ಮನವೊಲಿಸಿಕೊಳ್ಳುವ ಪಾಪಿಷ್ಠರು (ಹೀನರು) ಈ ಭೂಮಿಯಲ್ಲಿ ಅನೇಕರಿದ್ದಾರೆ. ಆದರೆ ಕೇಳಲು ಅಪ್ರಿಯವಾಗಿದ್ದರೂ ಪ್ರಭುವಿಗೆ ಹಿತವಾದ ಸಲಹೆಗಳನ್ನು ಧೈರ್ಯವಾಗಿ ಹೇಳುವವರೂ ವಿರಳ : ಅಂತಹ ಸಲಹೆಗಳನ್ನು ಕೇಳುವವರೂ ಅತಿವಿರಳ.

**ಯಸ್ತು ಧರ್ಮಪರಶ್ಚ ಸ್ಯಾದ್ಧಿತ್ವಾ ಭರ್ತುಃ ಪ್ರಿಯಾಪ್ರಿಯೇ ।**
**ಅಪ್ರಿಯಾಣ್ಯಾಹ ಪಥ್ಯಾನಿ ತೇನ ರಾಜಾ ಸಹಾಯವಾನ್ ॥೧೭॥**

ಧರ್ಮಾತ್ಮನಾದ ಯಾವನು ತನ್ನ ಸ್ವಾಮಿಗೆ ತನ್ನ ಸಲಹೆಯು ಪ್ರಿಯವೆನಿಸಲಿ, ಅಪ್ರಿಯವೆನಿಸಲಿ–ಅದನ್ನು ಗಮನಿಸದೇ ಪರಿಣಾಮದಲ್ಲಿ ಹಿತವಾಗುವ ಸಲಹೆಯನ್ನು ಧೈರ್ಯದಿಂದ ಹೇಳುವನೋ–ಅವನೇ ನಿಶ್ಚಯವಾಗಿಯೂ ರಾಜನಿಗೆ ಸಹಾಯನೆನಿಸುವನು. (ಸ್ನೇಹಿತನೆನಿಸುವನು.)

**ಅವ್ಯಾಧಿಜಂ ಕಟುಜಂ ತೀಕ್ಷ್ಣಮುಷ್ಣಂ**
**ಯಶೋಮುಷಂ ಪರುಷಂ ಪೂತಿಗನ್ಧಿ ।**
**ಸತಾಂ ಪೇಯಂ ಯನ್ನ ಪಿಬನ್ತ್ಯಸನ್ತೋ**
**ಮನ್ಯುಂ ಮಹಾರಾಜ ಪಿಬ ಪ್ರಶಾಮ್ಯ ॥೧೮॥**

ಯಾವ ವಿಧವಾದ ರೋಗದಿಂದಲೂ ಹುಟ್ಟದಿರುವುದೂ, ರೋಗದ ಸಂಬಂಧವಿಲ್ಲದುದೂ, ಕಹಿಯಾದ ವಾತಾವರಣದಿಂದಲೇ ಉತ್ಪನ್ನವಾದುದೂ, ಬಹುತೀಕ್ಷ್ಣವಾದುದೂ ಮತ್ತು ಹೆಚ್ಚು ಬಿಸಿಯಾದುದೂ, ಯಶಸ್ಸನ್ನು ಅಪಹರಿಸತಕ್ಕದ್ದೂ, ಬಹಳ ಕಠೋರವಾದುದೂ, ದುರ್ಗಂಧಯುಕ್ತವಾದುದೂ, ಸತ್ಪುರುಷರಿಂದ ಮಾತ್ರವೇ ನುಂಗಿಕೊಳ್ಳಲು ಸಾಧ್ಯವಾದುದೂ, ದುಷ್ಟಾತ್ಮರು ಖಂಡಿತವಾಗಿಯೂ ಕುಡಿಯಲು ಸಾಧ್ಯವಾಗದುದೂ ಆದ ಇಂತಹ ಕೋಪವನ್ನು ನುಂಗಿಬಿಡು, ಮಹಾರಾಜ! ಶಾಂತನಾಗು. (ಇದು ಈ ಶ್ಲೋಕದ ಸ್ವಾಭಾವಿಕವಾದ ಅರ್ಥ. ಇಲ್ಲಿ ವ್ಯಾಖ್ಯಾನಕಾರರು ಸಂದರ್ಭಾನುಸಾರವಾಗಿ ವ್ಯಾಖ್ಯಾನಮಾಡಿರುತ್ತಾರೆ : ಅವ್ಯಾಧಿಜಂ= **ಅವ್ಯಾಧಯೇ ಜಾಯತೇ ತದವ್ಯಾಧಿಜಂ**–ರೋಗರಾಹಿತ್ಯಕ್ಕಾಗಿಯೇ ಸೃಷ್ಟಿಯಾದುದು ಔಷಧ. ಅದು **ಕಟುಜಂ = ಕಟುದ್ರವ್ಯಜಂ** - ಕಹಿಯಾದ ಪದಾರ್ಥಗಳಿಂದ ಮಾಡಲ್ಪಟ್ಟಿದ್ದು. **ತೀಕ್ಷ್ಣಂ= ವೇದನಾಕರಂ**–ಕುಡಿದೊಡನೆಯೇ ವೇದನೆಯನ್ನುಂಟುಮಾಡತಕ್ಕದ್ದು. ಉಷ್ಣಂ= **ಜಾಡ್ಯನಾಶಕಂ**–ರೋಗನಾಶಕವಾದುದು. **ಯಶೋಮುಷಂ = ಕಾಮೋದ್ದೀಪನೇನ**–ಕಾಮವನ್ನು ಉದ್ದೀಪನಮಾಡುವುದರಿಂದ ಯಶಸ್ಸನ್ನು ಅಪಹರಿಸತಕ್ಕದ್ದು. **ಪರುಷಂ= ಘೃತಾದಿನಾ ಹೀನಂ**–ತುಪ್ಪವೇ ಮೊದಲಾದ ಜಿಡ್ಡಿನ ವಸ್ತುಗಳಿಂದ ಹೀನವಾದದ್ದು. **ಪೂತಿಗನ್ಧಿ=** ಲಶುನಾದಿಗಳಂತೆ ದುರ್ಗಂಧಯುಕ್ತವಾದದ್ದು. **ಪಿಬ ಮನ್ಯುಂ = ಔಷಧಂ ಪಿಬ ಪ್ರಶಾಮ್ಯ = ಪ್ರಶಮಂ ಆರೋಗ್ಯಂ ಚ ಪ್ರಾಪ್ನುಹಿ**–ಇಂತಹ ಔಷಧದ ಸೇವನೆಯಿಂದ ಆರೋಗ್ಯವಂತನಾಗು.

ಇಲ್ಲಿ ವ್ಯಾಖ್ಯಾನಕಾರರ ಅಭಿಪ್ರಾಯವನ್ನು ಹೀಗೆಂದು ಊಹಿಸಬಹುದಾಗಿದೆ :

"ದುರ್ಯೋಧನ! ನೀನು ಆರೋಗ್ಯವಂತನಾಗಬೇಕಾದರೆ ಔಷಧವನ್ನು ಕುಡಿಯಬೇಕಲ್ಲವೇ? ಆದರೆ ಔಷಧವು ಬಹಳ ಕಹಿಯಾಗಿರುತ್ತದೆ. ಒಗರಾಗಿರುತ್ತದೆ. ದುರ್ವಾಸನೆಯಿಂದ ಕೂಡಿರುತ್ತದೆ. ಉಷ್ಣವಾಗಿರುತ್ತದೆ. ಘೃತಾದಿಗಳಿಂದ ಹೀನವಾಗಿರುತ್ತದೆ. ನಿನಗಿದು ಅನಪೇಕ್ಷ್ಯವಾಗಿರುತ್ತದೆ. ಅಂತಹ ಔಷಧವನ್ನು ರೋಗನಿವಾರಣೆಗಾಗಿ ಸೇವಿಸಲೇಬೇಕಲ್ಲವೇ?

ಹಾಗೆಯೇ ನಿನ್ನ ಹಿತಚಿಂತನೆಗಾಗಿ ನಿನ್ನ ನಿಷ್ಠಾವಂತ ಸಲಹೆಗಾರರು

ಕೊಡುವ ಸಲಹೆಗಳು ಕರ್ಣಕಠೋರವಾಗಿರಬಹುದು ; ತಾತ್ಕಾಲಿಕವಾಗಿ ನಿನ್ನ ಕೀರ್ತಿಗೆ ಕುಂದನ್ನು ತರುವುದಾಗಿರಬಹುದು ; ಸಲಹೆಯು ದುಷ್ಟವಾದು ದೆಂದೂ ನಿನಗೆ ಭಾಸವಾಗಬಹುದು. ಆದರೂ ಆ ಮಾತುಗಳು ಸತ್ಪುರುಷ ರಿಂದ ಆಸ್ವಾದಿಸಲು ಯೋಗ್ಯವಾಗಿರುತ್ತವೆ. ಅಸತ್ಪುರುಷರು ಆ ಮಾತುಗಳನ್ನು ತಿರಸ್ಕರಿಸುವರು. ನೀನು ಅಂತಹ ಮಾತುಗಳನ್ನು ಪುರಸ್ಕರಿಸಿ ರೋಗ ರಹಿತನಾಗು. ಯಶೋವಂತನಾಗಿ ಬಾಳು.")

ನಾನು ಯಾವಾಗಲೂ ಧೃತರಾಷ್ಟ್ರನಿಗೂ ಮತ್ತು ಅವನ ಮಕ್ಕಳಿಗೂ ಯಥೇಷ್ಟವಾದ ಯಶೋಧನಗಳನ್ನು ಅಭಿಲಾಷಿಸುತ್ತೇನೆ. ದೈವದ ಇಚ್ಛೆ ಹೇಗಿದೆಯೋ ಹಾಗೆಯೇ ಆಗಲಿ. ಮಹಾರಾಜ! ನಿನಗೆ ಅನಂತನಮಸ್ಕಾರ ಗಳು. ಬ್ರಾಹ್ಮಣರು ನನಗೂ ಸ್ವಸ್ತಿವಾಚನಮಾಡಲಿ.

ಕಟ್ಟಕಡೆಯದಾಗಿ ಒಂದು ಮಾತನ್ನು ಹೇಳಲಿಚ್ಛಿಸುತ್ತೇನೆ :

**ಆಶೀವಿಷಾನ್ನೇತ್ರವಿಷಾನ್ಕೋಪಯೇನ್ನ ಚ ಪಣ್ಡಿತಃ ।**
**ಏವಂ ತೇಽಹಂ ವದಾಮೀದಂ ಪ್ರಯತಃ ಕುರುನನ್ದನ ॥೨೦॥**

ಕುರುನಂದನನೇ! ಹಲ್ಲುಗಳಿಂದಲೇ ಅಲ್ಲದೇ ಕಣ್ಣುಗಳಿಂದಲೂ ವಿಷಕಾರುವ ಸರ್ಪಗಳಂತಿರುವವರನ್ನು (ಪಾಂಡವರನ್ನು ) ವಿವೇಕಿಯಾದ ವನು ಎಂದಿಗೂ ಕೋಪಗೊಳಿಸಬಾರದು. (ಶಸ್ತ್ರಗಳಿಂದಲೂ ಕ್ರೋಧದೃಷ್ಟಿ ಗಳಿಂದಲೂ ಪಾಂಡವರು ನಿನ್ನನ್ನು ಧ್ವಂಸಮಾಡಿಬಿಡುತ್ತಾರೆ.)"

೬೪ನೆಯ ಅಧ್ಯಾಯವು ಮುಗಿಯಿತು.

೬೫ನೆಯ ಅಧ್ಯಾಯ ದ್ಯೂತಪರ್ವ (ಮುಂದುವರಿದಿದೆ.)

## ಯುಧಿಷ್ಠಿರನು ಪಗಡೆಯಾಟದಲ್ಲಿ ರಾಜ್ಯ-ಕೋಶಗಳನ್ನೂ, ತಮ್ಮಂದಿರನ್ನೂ, ತನ್ನನ್ನೂ, ಕೊನೆಗೆ ಪತ್ನಿಯನ್ನೂ ಕಳೆದುಕೊಂಡುದು

"ಜನಮೇಜಯ! ಇತ್ತಕಡೆಯಲ್ಲಿ ಪಗಡೆಯಾಟವು ಮುಂದುವರಿ ಯುತ್ತಲೇ ಇದ್ದಿತು. ಯುಧಿಷ್ಠಿರನು ಒಂದಾದ ಮೇಲೆ ಮತ್ತೊಂದು ಪಣವನ್ನು ಸೋಲುತ್ತಲೇ ಇದ್ದನು. 'ಗೆಲುವು' ಎಂಬುದೇ ಯುಧಿಷ್ಠಿರನಿಗಿಲ್ಲ

ವಾಯಿತು. ಪರಾಜಿತನಾಗುತ್ತಿದ್ದ ಯುಧಿಷ್ಠಿರನನ್ನು ಕುರಿತು ಶಕುನಿಯು ಹೇಳಿದನು :

**ಬಹು ವಿತ್ತಂ ಪರಾಜೈಷೀಃ ಪಾಣ್ಡವಾನಾಂ ಯುಧಿಷ್ಠಿರ ।**
**ಆಚಕ್ಷ್ವ ವಿತ್ತಂ ಕೌನ್ತೇಯ ಯದಿ ತೇಽಸ್ತ್ಯಪರಾಜಿತಮ್ ॥೧॥**

"ಯುಧಿಷ್ಠಿರ! ಪಾಂಡವರಿಗೆ ಸೇರಿದ ಸಕಲೈಶ್ವರ್ಯವನ್ನೂ ಪಣವನ್ನಾಗಿಟ್ಟು ಸೋತಿರುವೆ. ಪಣವಾಗಿಡದೇ ಉಳಿದಿರುವ ಐಶ್ವರ್ಯವು ಇನ್ನೂ ಇರುವುದೇ?"

"ಸೌಬಲ! ಎಣಿಸಲಾಗದಷ್ಟು ಅಪರಿಮಿತ ಐಶ್ವರ್ಯವು ನನ್ನಲ್ಲಿ ಇನ್ನೂ ಇದೆಯೆಂಬ ವಿಷಯವು ನನಗೆ ತಿಳಿದಿದೆ. ಅದರ ವಿಷಯವಾಗಿ ನೀನೇಕೆ ಪ್ರಸ್ತಾಪಿಸುವೆ? ಸಾವಿರಾರು, ಲಕ್ಷೋಪಲಕ್ಷ, ಅಯುತ, ಪ್ರಯುತ, ಶಂಕು, ಪದ್ಮ, ಅರ್ಬುದ, ಖರ್ವ, ಶಂಖ, ನಿಖರ್ವ, ಮಹಾಪದ್ಮ, ಮಧ್ಯ, ಪರಾರ್ಧ, ಪರ, ಕೋಟ್ಯನುಕೋಟಿ ಸಂಖ್ಯೆಯಲ್ಲಿ ನೀನು ದ್ರವ್ಯಗಳನ್ನು ಪಣವನ್ನಾಗಿಟ್ಟರೂ ನಾನು ಅದಕ್ಕೆ ಪ್ರತಿಯಾಗಿ ಅಷ್ಟೇ ಸಂಖ್ಯೆಯಲ್ಲಿ ದ್ರವ್ಯಗಳನ್ನು ಪಣವನ್ನಾಗಿಡಲು ಸಿದ್ಧನಾಗಿದ್ದೇನೆ. ಈ ಅಪಾರದ್ರವ್ಯವನ್ನೇ ಈ ಆಟಕ್ಕೆ ಪಣವನ್ನಾಗಿಟ್ಟು ನಾನು ನಿನ್ನೊಡನೆ ಆಟವಾಡುತ್ತೇನೆ."

ಅಷ್ಟು ಅಪಾರವಾದ ಐಶ್ವರ್ಯವನ್ನೂ ಶಕುನಿಯು ದುರ್ಯೋಧನನಿಗಾಗಿ ಗೆದ್ದುಕೊಡಲು ನಿಶ್ಚಯಿಸಿ, ಮೋಸದ ವಿಧಾನದಿಂದ ಪಗಡೆಯಾಡಲು ಪ್ರಾರಂಭಿಸಿ ಸ್ವಲ್ಪಹೊತ್ತಿನಲ್ಲಿಯೇ ಆಟವನ್ನೂ ಅದರೊಡನೆ ಯುಧಿಷ್ಠಿರನ ಅಪಾರವಾದ ಐಶ್ವರ್ಯವನ್ನೂ ಗೆದ್ದು–'ಇದೂ ಸಹ ನನ್ನಿಂದ ಗೆಲ್ಲಲ್ಪಟ್ಟಿತು, ಯುಧಿಷ್ಠಿರ!'–ಎಂದು ಉದ್ಗಾರಹಾಕಿದನು.

"ಸೌಬಲ! ನನ್ನಲ್ಲಿ ಹಸುಗಳು, ಕುದುರೆಗಳು, ಎತ್ತುಗಳು, ಕುರಿಗಳು, ಮೇಕೆಗಳು ಕೋಟ್ಯನುಕೋಟಿಸಂಖ್ಯೆಗಳಲ್ಲಿವೆ. ಪರ್ಣಾಶಾ ಎಂಬ ನದಿಯಿಂದ ಸಿಂಧೂನದಿಯ ಪೂರ್ವದಿಕ್ಕಿನ ದಂಡೆಯವರೆಗೂ ಇರುವ ಸಕಲ ಪ್ರಾಣಿಗಳನ್ನೂ ಈ ಆಟಕ್ಕೆ ಪಣವನ್ನಾಗಿಟ್ಟಿರುತ್ತೇನೆ."

ಪ್ರೇಕ್ಷಕರೆಲ್ಲರೂ ನಿರೀಕ್ಷಿಸಿದ್ದಂತೆಯೇ ಕಪಟದ್ಯೂತದಲ್ಲಿ ನಿಷ್ಣಾತನಾದ

ಶಕುನಿಯು ಆ ಪಣವನ್ನೂ ಗೆಲ್ಲಲು ನಿಶ್ಚಯಿಸಿ ಕುಟಿಲತೆಯನ್ನು ಆಶ್ರಯಿಸಿ ಆಟವನ್ನು ಗೆದ್ದು ಯುಧಿಷ್ಠಿರನನ್ನು ಕುರಿತು ಗೆದ್ದೆನೆಂದು ಘೋಷಿಸಿದನು.

"ಬ್ರಾಹ್ಮಣರಿಗೆ ದತ್ತಿಯಾಗಿ ಕೊಟ್ಟು ಉಳಿದಿರುವ ನನ್ನ ರಾಜಧಾನೀ, ಪ್ರಾಂತ, ದೇಶ ಮತ್ತು ಅವುಗಳಲ್ಲಿ ವಾಸಮಾಡುತ್ತಿರುವ ಪ್ರಜೆಗಳು–ಬ್ರಾಹ್ಮಣರನ್ನುಳಿದು–ಎಲ್ಲರೂ ನನ್ನವರಾಗಿಯೇ ಇದ್ದಾರೆ. ಆ ಐಶ್ವರ್ಯವನ್ನು ಪಣವನ್ನಾಗಿಟ್ಟು ನಾನು ಆಟವಾಡುತ್ತೇನೆ."

ಅದೂ ಸಹ ಯುಧಿಷ್ಠಿರನಿಗೆ ಉಳಿಯಲಿಲ್ಲ. ಅದು ಕೇವಲ ಮೋಸದ ಆಟವಾಗಿದ್ದುದರಿಂದಲೇ ಒಂದೇ ಒಂದು ಆಟವನ್ನೂ ಯುಧಿಷ್ಠಿರನು ಗೆದ್ದು ಕೊಳ್ಳಲಾಗಲಿಲ್ಲ. ಆಟವು ಪ್ರಾರಂಭವಾದ ಸ್ವಲ್ಪಹೊತ್ತಿನಲ್ಲಿಯೇ ಶಕುನಿಯು ಆಟವನ್ನು ಗೆದ್ದು ಯುಧಿಷ್ಠಿರನಿಗೆ ಗೆದ್ದೆನೆಂದು ಘೋಷಿಸಿದನು.

ಯುಧಿಷ್ಠಿರನ ಐಶ್ವರ್ಯವೆಲ್ಲವೂ ಜೂಜಿನಲ್ಲಿ ಹೊರಟುಹೋದ ನಂತರ ಪ್ರಜೆಗಳನ್ನೂ ಒತ್ತೆಯಿಟ್ಟು ಅವರನ್ನೂ ಕಳೆದುಕೊಂಡನು. ಸಾಮಂತ ರಾಜರು ಮಾತ್ರವೇ ಉಳಿದುಕೊಂಡಿದ್ದರು. ಅವರನ್ನು ಸ್ಮರಿಸಿಕೊಂಡ ಯುಧಿಷ್ಠಿರನು ಶಕುನಿಗೆ ಹೇಳಿದನು :

"ಕನಕಾಂಗದ-ಕೇಯೂರಗಳಿಂದಲೂ, ಕರ್ಣಕುಂಡಲಗಳಿಂದಲೂ, ಪೀತಾಂಬರಗಳಿಂದಲೂ ಅಲಂಕೃತರಾಗಿರುವ ಇಲ್ಲಿ ನೆರೆದಿರುವ ಸಾಮಂತ ರಾಜರು ನನ್ನ ಐಶ್ವರ್ಯವಾಗಿ ಉಳಿದಿರುತ್ತಾರೆ. ಇವರನ್ನೇ ಪಣವನ್ನಾಗಿಟ್ಟು ನಾನು ಆಟವಾಡುತ್ತೇನೆ."

ಶಕುನಿಯ ಗೆಲುವಿನಲ್ಲಿ ಯಾರೊಬ್ಬರಿಗೂ ಸಂಶಯವೇ ಇರಲಿಲ್ಲ. ಯುಧಿಷ್ಠಿರನನ್ನು ಪರಾಭವಗೊಳಿಸಲೆಂದೇ ಶಕುನಿಯು ಮೋಸದ ಅಕ್ಷವಿದ್ಯೆಯನ್ನು ಸಂಪೂರ್ಣವಾಗಿ ಅಭ್ಯಾಸಮಾಡಿದ್ದಿರಬಹುದು. ಮುಹೂರ್ತಮಾತ್ರದಲ್ಲಿ ಆಟವು ಮುಗಿದು 'ಜಿತಂ' ಎಂಬ ಶಕುನಿಯ ಧ್ವನಿಯು ಪುನಃ ಧೃತರಾಷ್ಟ್ರನ ಸಭಾಭವನದಲ್ಲಿ ಪ್ರತಿಧ್ವನಿಸಿತು.

ಇನ್ನು ಮುಂದೆ ಪಣವಾಗಿಡಲು ಯುಧಿಷ್ಠಿರನಲ್ಲಿ ಯಾವ ವಸ್ತುವೂ ಉಳಿಯಲಿಲ್ಲ. ತನ್ನನ್ನೇ ಹಿಂಬಾಲಿಸಿ ಕುಳಿತಿದ್ದ ನಕುಲ-ಸಹದೇವ-ಭೀಮಾರ್ಜುನರನ್ನು ನೋಡಿದನು.

"ಈ ನಕುಲನು ಭುಜಬಲ-ಪರಾಕ್ರಮಗಳಿಂದ ಕೂಡಿದವನಾಗಿಯೂ ಸಿಂಹಸ್ಕಂಧನಾಗಿಯೂ, ರಕ್ತನೇತ್ರನಾಗಿಯೂ, ಯುವಕನಾಗಿಯೂ ಇರುವನು. ಇವನನ್ನೇ ಈ ಆಟಕ್ಕೆ ಪಣವನ್ನಾಗಿಡುತ್ತೇನೆ."

"ಯುಧಿಷ್ಠಿರ! ನಕುಲನು ನಿನಗೆ ಬಹಳ ಪ್ರಿಯನಾದವನು. ಇವನನ್ನೂ ನಾನು ಗೆದ್ದೆನೆಂದೇ ತಿಳಿದುಕೋ. ಬೇರಾರನ್ನು ಪಣವನ್ನಾಗಿಡಲಿರುವೆ?"–ಹೀಗೆಂದು ಹೇಳುತ್ತಾ ಶಕುನಿಯು ದಾಳಗಳನ್ನುರುಳಿಸಿದನು. ಕ್ಷಣಕಾಲದಲ್ಲಿಯೇ ಶಕುನಿಯ 'ಜಿತಂ' ಎಂಬ ಉತ್ಸಾಹಪೂರ್ಣವಾದ ನಿನಾದವು ಕೇಳಿಸಿತು.

"ಈ ಸಹದೇವನು ಧರ್ಮ-ನ್ಯಾಯಪರಿಪಾಲನೆಯಲ್ಲಿ ನಿಷ್ಣಾತನು. ಪಂಡಿತನೆಂದೂ, ಬಹುಶ್ರುತನೆಂದೂ ಪ್ರಸಿದ್ಧನಾಗಿರುವನು. ಇಂತಹವನನ್ನು ಪಣವನ್ನಾಗಿಡುವುದು ಸರ್ವಥಾ ಯೋಗ್ಯವಲ್ಲ. ಆದರೂ ಇವನನ್ನು ಈ ಆಟಕ್ಕೆ ಪಣವನ್ನಾಗಿಡುತ್ತೇನೆ."

ಆ ಆಟವನ್ನೂ ಗೆದ್ದ ಶಕುನಿಯು ಹೀಗೆಂದನು :

"ಜಿತಂ ಮಯಾ ಯುಧಿಷ್ಠಿರ" –"ಮಾದ್ರಿಯ ಮಕ್ಕಳಾದ ನಕುಲ-ಸಹದೇವರಿಬ್ಬರೂ ನನ್ನವರಾಗಿ ಹೋದರು. ಅವರನ್ನೂ ನಾನು ಗೆದ್ದೆನು. ಆದರೆ ಭೀಮಸೇನ ಮತ್ತು ಧನಂಜಯರು ನಿನ್ನ ಸಹೋದರರಾದುದರಿಂದ ನಿನಗೆ ಹೆಚ್ಚು ಮಾನ್ಯರಲ್ಲವೇ? (ಆದ್ದರಿಂದ ನೀನು ಅವರನ್ನು ಪಣವನ್ನಾಗಿಡಲಾರೆ.)"

ಯುಧಿಷ್ಠಿರನಿಗೆ ಆ ಮಾತು ಸಹ್ಯವಾಗಲಿಲ್ಲ. ಒಡನೆಯೇ ಹೇಳಿದನು :

**ಅಧರ್ಮಂ ಚರಸೇ ನೂನಂ ಯೋ ನಾವೇಕ್ಷಸಿ ವೈ ನಯಮ್ ।**
**ಯೋ ನಃ ಸುಮನಸಾಂ ಮೂಢ ವಿಭೇದಂ ಕರ್ತುಮಿಚ್ಛಸಿ ॥೧೮॥**

"ಮೂಢನೇ! ನೀನು ಹೀಗೆ ಹೇಳಿ ಅಧರ್ಮವನ್ನಾಚರಿಸುತ್ತಿರುವೆ. ನಿನಗೆ ನಯವಾಗಿ, ನೀತಿಯುಕ್ತವಾಗಿ ಮಾತನಾಡಲೇ ತಿಳಿಯದು. ನಾವೆಲ್ಲರೂ ಏಕಮನಸ್ಕರಾಗಿದ್ದೇವೆ. ಶುದ್ಧಹೃದಯರಾಗಿದ್ದೇವೆ. ಐಕಮತ್ಯದಿಂದಿದ್ದೇವೆ. ಇಂತಹ ನಮ್ಮಲ್ಲಿ ಭೇದವನ್ನು ಕಲ್ಪಿಸುತ್ತಿರುವೆಯಲ್ಲವೇ?"

**ಗರ್ತೇ ಮತ್ತಃ ಪ್ರಪತತೇ ಪ್ರಮತ್ತಃ ಸ್ಥಾಣುಮೃಚ್ಛತಿ ।**
**ಜ್ಯೇಷ್ಠೋ ರಾಜನ್ವರಿಷ್ಠೋಽಸಿ ನಮಸ್ತೇ ಭರತರ್ಷಭ ॥೧೯॥**

**ಸ್ವಪ್ನೇ ತಾನಿ ನ ದೃಶ್ಯನ್ತೇ ಜಾಗ್ರತೋ ವಾ ಯುಧಿಷ್ಠಿರ ।**
**ಕಿತವಾ ಯಾನಿ ದೀವ್ಯನ್ತಃ ಪ್ರಲಪನ್ತ್ಯುತ್ಕಟಾ ಇವ ॥೨೦॥**

"ಯುಧಿಷ್ಠಿರ! ಕುಪಿತನಾಗಬೇಡ. ಐಶ್ವರ್ಯಮದದಿಂದ ಕೂಡಿದವನು ಅಧರ್ಮವನ್ನೆಸಗಿ ನರಕದಲ್ಲಿ ಬೀಳುತ್ತಾನೆ. ಎಚ್ಚರದಪ್ಪಿದವನು ಅಲ್ಲಿಯೇ ಸ್ಥಾಣುವಿನಂತಿರುತ್ತಾನೆ. ನೀನು ನಮ್ಮೆಲ್ಲರಿಗೂ ಹಿರಿಯನಾಗಿರುವೆ ಮತ್ತು ವರಿಷ್ಠನಾಗಿರುವೆ. ದಯೆಯಿಟ್ಟು ಕ್ಷಮಿಸು. ನಮಸ್ಕರಿಸಿ ಕೇಳಿಕೊಳ್ಳುತ್ತೇನೆ. ಜೂಜುಗಾರರು ಆಟವಾಡುವಾಗ ಅಮಲಿನಲ್ಲಿ ಈ ವಿಧವಾಗಿ ಮಾತನಾಡುತ್ತಾರೆಯೇ ಹೊರತು ಆಟವು ಮುಗಿದನಂತರ ಜಾಗ್ರತರಾಗಿದ್ದರೂ ಸ್ವಪ್ನಾವಸ್ಥೆಯಲ್ಲಿದ್ದರೂ ಇಂತಹ ಮಾತುಗಳನ್ನಾಡುವುದಿಲ್ಲ."

ಶಕುನಿಯು ಹೀಗೆಂದು ಹೇಳಿದನಂತರ ಯುಧಿಷ್ಠಿರನು ತನಗೆ ಅತ್ಯಂತಪ್ರಿಯನಾದ ಪಾರ್ಥನನ್ನೇ ಪಣವನ್ನಾಗಿಡುತ್ತಾ ಹೇಳಿದನು :

"ಈ ಫಾಲ್ಗುನನು ಯುದ್ಧವೆಂಬ ಮಹಾಸಾಗರದಲ್ಲಿ ಬೀಳಲಿರುವ ನಮ್ಮನ್ನು ದೋಣಿಯ ರೂಪವಾಗಿ ಜಯವೆಂಬ ತೀರಕ್ಕೆ ಒಯ್ಯಲು ಸಮರ್ಥನಾಗಿರುವವನು. ಇವನಿಗೆ ಪರಾಜಯವೆಂಬುದೇ ಇಲ್ಲ. ಧನುರ್ಧಾರಿಗಳಲ್ಲಿ ಶ್ರೇಷ್ಠನು. ಪರಾಕ್ರಮಿಗಳಲ್ಲಿ ಅದ್ವಿತೀಯನು. ಇಂತಹವನನ್ನು ಪಣವನ್ನಾಗಿಡುವುದು ಸರ್ವಥಾ ಯೋಗ್ಯವಲ್ಲ. ಆದರೂ ಈ ಆಟಕ್ಕೆ ಇವನನ್ನೇ ಪಣವನ್ನಾಗಿಡುತ್ತೇನೆ."

ಅರ್ಜುನನು ಅಜೇಯನಾಗಿರಬಹುದು. ವೀರಶ್ರೇಷ್ಠನಾಗಿರಬಹುದು. ನೂರಾರು ಶಕುನಿಗಳನ್ನು ಏಕಕಾಲದಲ್ಲಿ ಎದುರಿಸುವ ಸಾಮರ್ಥ್ಯವೂ ಅವನಿಗಿರಬಹುದು. ಆದರೆ ದಾಳಗಳ ನಿಯಂತಾರನಾಗಿ ಆ ಮೂಲಕ ಧರ್ಮರಾಜನಿಗೆ ಜಯಗಳಿಸಿಕೊಡುವ ಸಾಮರ್ಥ್ಯವು ಧನಂಜಯನಿಗೂ ಇರಲಿಲ್ಲ.

ದಾಳಗಳುರುಳಿದುವು. ಶಕುನಿಯೇ ಗೆದ್ದನು.

"ಯುಧಿಷ್ಠಿರ! ಧನುರ್ವಿದ್ಯೆಯಲ್ಲಿ ಕುಶಲನಾದ ಸವ್ಯಸಾಚಿಯೂ

ನನ್ನಿಂದ ಗೆಲ್ಲಲ್ಪಟ್ಟವನಾಗಿ ನನ್ನ ಅಧೀನಕ್ಕೊಳಗಾದನು. ಮತ್ತಾರನ್ನು ನೀನು ಪಣವನ್ನಾಗಿಡುತ್ತೀಯೆ? ಭೀಮನೊಬ್ಬನು ಮಾತ್ರವೇ ಉಳಿದಿರುವನು."

"ನಿಜ ; ಸೌಬಲ! ಇವನೊಬ್ಬನು ಮಾತ್ರವೇ ಉಳಿದಿರುವನು. ಇವನನ್ನೂ ಪಣವನ್ನಾಗಿಟ್ಟು ನಾನು ನಿನ್ನೊಡನೆ ಆಟವಾಡಲು ನಿಶ್ಚಯಿಸಿರುತ್ತೇನೆ. ಇವನೇ ನಮ್ಮ ನಾಯಕನು. ದ್ವಂದ್ವಯುದ್ಧದಲ್ಲಿ ನಿಷ್ಣಾತನು. ಇಂದ್ರನಿಗೆ ಸಮನಾದ ಪರಾಕ್ರಮವುಳ್ಳವನು. ಸಿಂಹಸ್ಕಂಧನು. ನಿಂದೆಯನ್ನು ಸಹಿಸತಕ್ಕವನಲ್ಲ. ಇವನಿಗೆ ಸಮಾನರಾದ ಪರಾಕ್ರಮಿಗಳೂ ಮತ್ತು ಗದಾಯುದ್ಧದಲ್ಲಿ ನಿಷ್ಣಾತರಾದವರೂ ಪ್ರಪಂಚದಲ್ಲಿಯೇ ಬೇರೊಬ್ಬನಿಲ್ಲ. ಶತ್ರುಗಳ ನಿರ್ಮೂಲಕರನಿವನು. ಇಂತಹ ಭೀಮಸೇನನನ್ನು ಪಣವನ್ನಾಗಿಟ್ಟು ನಾನು ಈ ಆಟವಾಡುತ್ತೇನೆ."

'ಪದಿ-ಪದಿ! ನವ-ನವ!' – ಎಂಬ ಉದ್ಗಾರಗಳೊಡನೆ ದಾಳಗಳು ಕಣಿ-ಕಣಿ ಶಬ್ದಗಳೊಡನೆ ಉರುಳಿದುವು. ಶಕುನಿಯ 'ಜಿತಂ' ಎಂಬ ಶಬ್ದದೊಡನೆ ಆಟವು ಮುಗಿಯಿತು.

"ಯುಧಿಷ್ಠಿರ! ನೀನು ಐಶ್ವರ್ಯವೆಲ್ಲವನ್ನೂ ಕಳೆದುಕೊಂಡಿರುವೆ. ಹಸ್ತಿ-ತುರಗ-ಪದಾತಿಗಳೆಲ್ಲವೂ ಹೋದುವು. ನಿನ್ನ ಅನುಜರೆಲ್ಲರೂ ನನ್ನ ಅಧೀನರಾದರು. ಮುಂದೆ ಆಟವಾಡುವುದಾದರೆ ಪಣವನ್ನಾಗಿಡಲು ಬೇರಾವ ವಸ್ತುವು ಉಳಿದಿರುವುದು?"

"ನಾನೊಬ್ಬನುಳಿದಿರುವೆನಲ್ಲವೇ? ಸೌಬಲ! ನಾನು ಇವರೆಲ್ಲರಿಗೂ ಹಿರಿಯನಾಗಿದ್ದೇನೆ ಮತ್ತು ಇವರೆಲ್ಲರಿಗೂ ಪ್ರಿಯನಾಗಿಯೂ ಇದ್ದೇನೆ. ನನ್ನನ್ನಿನ್ನೂ ನೀನು ಜಯಿಸಿರುವುದಿಲ್ಲ. ಈ ಆಟಕ್ಕೆ ನನ್ನನ್ನೇ ನಾನು ಪಣವನ್ನಾಗಿಟ್ಟು ಆಡುತ್ತೇನೆ. ಈ ಆಟದಲ್ಲಿಯೂ ಜಯಲಕ್ಷ್ಮಿಯು ನಿನ್ನ ಕಡೆಗೇ ಒಲಿಯುವುದಾದರೆ ಪಣದಲ್ಲಿ ಸೋತವರು ಮಾಡಬೇಕಾದ ಕಾರ್ಯವನ್ನು ನಾನೂ ಮಾಡುತ್ತೇನೆ."

ಯುಧಿಷ್ಠಿರನು ಮಹಾಧರ್ಮಿಷ್ಠನು. ಅಜಾತಶತ್ರು. ಸಕಲಗುಣಪರಿಪೂರ್ಣನು. ರಾಜಸೂಯಯಾಗಮಾಡಿ ಮಹಾಕೀರ್ತಿಯನ್ನೂ, ಪುಣ್ಯ

ವನ್ನೂ ಗಳಿಸಿರತಕ್ಕವನು. ಮಹಾಮೇಧಾವಿಯು. ಇವಿಷ್ಟು ಗುಣಗಳೂ ಪಗಡೆಯ ದಾಳಗಳನ್ನು ನಿಯಂತ್ರಿಸಲು ಸಮರ್ಥವಾಗಲಿಲ್ಲ.

ಧರ್ಮನಿಷ್ಠನಾದ ಯುಧಿಷ್ಠಿರನು ತನ್ನನ್ನೇ ಪಣವನ್ನಾಗಿಟ್ಟುಕೊಂಡು ಶಕುನಿಯೊಡನೆ ಆಟವಾಡಿ ಸೋತುಹೋದನು.

ಆ ಮಧ್ಯದಲ್ಲಿ ಕುಟಿಲನಾದ ಶಕುನಿಗೆ ಮತ್ತೊಬ್ಬರ ನೆನಪಾಯಿತು. ಸರ್ವಾಪಹರಣವಾಗಲಿಲ್ಲವೆಂದು ಚಿಂತಿಸಿದವನಾಗಿ ಯುಧಿಷ್ಠಿರನಿಗೆ ಹೇಳಿದನು :

"ನೀನು ನಿನ್ನನ್ನೇ ಪಣವನ್ನಾಗಿಟ್ಟುಕೊಂಡು ಕೆಟ್ಟಕೆಲಸಮಾಡಿದೆ. ಯುಧಿಷ್ಠಿರ! ನಿನ್ನಲ್ಲಿ ಮತ್ತೊಂದು ಐಶ್ವರ್ಯವು ಉಳಿದಿರುವುದು. ಹೀಗಿದ್ದರೂ ನಿನ್ನನ್ನೇ ಪಣವಾಗಿಟ್ಟು ಸೋತುದು ನಿಶ್ಚಯವಾಗಿಯೂ ವಿಷಾದಕರ. ಕೃಷ್ಣೆಯೊಬ್ಬಳು ಹಾಗೆಯೇ ಉಳಿದಿರುವಳು. ಅವಳನ್ನೇ ಪಣವನ್ನಾಗಿಟ್ಟು ಆಟವಾಡಿ ನಿನ್ನ ವಿಮೋಚನೆಯನ್ನಾದರೂ ಮಾಡಿಕೊಳ್ಳಬಹುದಲ್ಲವೇ?"

"ನೀನು ಹೇಳಿದುದು ನಿಜ. ಸೌಬಲ! ದ್ರೌಪದಿಯನ್ನು ಪಣವನ್ನಾಗಿಟ್ಟು ಈ ಆಟವಾಡುತ್ತೇನೆ. ಅವಳ ಸೌಂದರ್ಯವು ಅನಿರ್ವಚನೀಯವಾದುದು. ಅವಳು ಕುಬ್ಜೆಯೂ ಅಲ್ಲ ; ದೀರ್ಘಕಾಯಳೂ ಅಲ್ಲ ; ಕೃಶಳೂ ಅಲ್ಲ ; ಸ್ಥೂಲಕಾಯಳೂ ಅಲ್ಲ. ನೀಲವರ್ಣದ ಗುಂಗುರು ಕೇಶರಾಶಿಯುಳ್ಳವಳಾಗಿದ್ದಾಳೆ.

**ಶಾರದೋತ್ಪಲಪತ್ರಾಕ್ಷ್ಯಾ ಶಾರದೋತ್ಪಲಗನ್ಧಯಾ ।**
**ಶಾರದೋತ್ಪಲಸೇವಿನ್ಯಾ ರೂಪೇಣ ಶ್ರೀಸಮಾನಯಾ ॥೩೪॥**

ಅವಳ ಕಣ್ಣುಗಳು ಶರತ್ಕಾಲದ ಕನ್ನೈದಿಲೆಯ ದಳಗಳಿಗೆ ಸಮಾನವಾದ ಕಾಂತಿಯಿಂದ ಕೂಡಿವೆ. ಅವಳು ಶರತ್ಕಾಲದ ಉತ್ಪಲಪುಷ್ಪಗಳಂತೆ ಸುಗಂಧವುಳ್ಳವಳು ಮತ್ತು ಶರತ್ಕಾಲದ ಕನ್ನೈದಿಲೆಹೂವುಗಳಲ್ಲಿ ಪ್ರೀತಿಯುಳ್ಳವಳು. ಅವಳ ಸೌಂದರ್ಯವು ಲಕ್ಷ್ಮಿಯ ಕಾಂತಿಗೆ ಸಮಾನವಾಗಿರುವುದು. ಧರ್ಮ-ಕಾಮಾರ್ಥ-ಮೋಕ್ಷಗಳನ್ನು ಅಪೇಕ್ಷಿಸುವ ಮಾನವನು ತನ್ನ ಹೆಂಡತಿಯಲ್ಲಿ ಅಪೇಕ್ಷಿಸಬಹುದಾದ ಕೋಮಲಹೃದಯ,

ಸೌಂದರ್ಯ–ಮುಂತಾದ ಎಲ್ಲ ಸದ್ಗುಣಗಳೂ ಅವಳಲ್ಲಿ ಮೂರ್ತಿಮತ್ತಾಗಿ ನೆಲೆಸಿವೆ. ಅವಳು ದಯಾರ್ದ್ರಹೃದಯಳು. ಪ್ರಿಯಭಾಷಿಣಿಯು. ಅವಳನ್ನು ಪಡೆದವನು ಧರ್ಮ, ಅರ್ಥ, ಕಾಮ ಮತ್ತು ಮೋಕ್ಷಗಳನ್ನು ಪಡೆಯಲು ಖಂಡಿತವಾಗಿಯೂ ಸಮರ್ಥನಾಗುವನು. ಅರಮನೆಯ ಪರಿವಾರ ದವರೆಲ್ಲರೂ ಮಲಗಿದನಂತರ ಅವಳು ಮಲಗುವಳು. ಎಲ್ಲರೂ ಏಳುವ ಮೊದಲೇ ಏಳುವಳು. ಗೋಪಾಲಕರೇ ಆದಿಯಾಗಿ ಸಕಲರ ಕಾರ್ಯಾ ಕಾರ್ಯಗಳನ್ನು ವಿಮರ್ಶಿಸುವಳು.

ಶ್ರಮವಹಿಸಿ ಕಾರ್ಯಮಾಡಿದ ಸಮಯದಲ್ಲಿ ಸ್ವೇದಬಿಂದುಗಳಿಂದ ಕೂಡಿದ ಅವಳ ಮುಖವು ಕಮಲದಂತೆ ಸುಂದರವಾಗಿಯೂ, ಮಲ್ಲಿಗೆಯಂತೆ ಸುಗಂಧಿತವಾಗಿಯೂ ಇರುವುದು. ಆಕೆಯು ಯಜ್ಞವೇದಿಯ ಮಧ್ಯದಿಂದ ಹುಟ್ಟಿದವಳು. ದೀರ್ಘವಾದ ಕೇಶವುಳ್ಳವಳು. ಕೆಂಪಾದ ಅಧರವುಳ್ಳವಳು ಮತ್ತು ಅತಿಲೋಮವಿಲ್ಲದವಳು. ಇಂತಹ ಸರ್ವಾಂಗಸುಂದರಿಯಾದ ದ್ರೌಪದಿಯನ್ನು ನಾನು ಈ ಆಟಕ್ಕೆ ಪಣವನ್ನಾಗಿಡುತ್ತೇನೆ."

ಯುಧಿಷ್ಠಿರನು ಹೀಗೆ ಹೇಳಿದೊಡನೆಯೇ 'ಧಿಕ್!' (ಧಿಕ್ಕಾರ!) ಎಂಬ ಶಬ್ದವು ಸಭಾಭವನದ ನಾಲ್ಕು ದಿಕ್ಕುಗಳಿಂದಲೂ ಪ್ರತಿಧ್ವನಿತ ವಾಯಿತು. ಸಭೆಯು ಉದ್ವಿಗ್ನವಾಯಿತು. ಅನೇಕರಾಜರು ದುಃಖಿತರಾದರು. ಭೀಷ್ಮ-ದ್ರೋಣ-ಕೃಪರು ಸ್ವೇದಬಿಂದುಗಳಿಂದ ತೋಯ್ದು ಹೋದರು. ವಿದುರನು ಬುದ್ಧಿಶೂನ್ಯನಾದವನಂತೆ ತನ್ನ ಎರಡು ಕೈಗಳಿಂದಲೂ ತಲೆಯನ್ನು ಬಿಗಿಯಾಗಿ ಹಿಡಿದುಕೊಂಡು ನತಶಿರನಾಗಿ–ಬುಸುಗುಟ್ಟುತ್ತಿರುವ ಹಾವಿನಂತೆ–ದೀರ್ಘವಾಗಿ ನಿಟ್ಟುಸಿರುಬಿಡುತ್ತಾ ಕುಳಿತಿದ್ದನು. ಆದರೆ ಅವರೆಲ್ಲರ ಮಧ್ಯದಲ್ಲಿ ಕುಳಿತಿದ್ದ ಧೃತರಾಷ್ಟ್ರನು ಮಾತ್ರ ಸಂತುಷ್ಟಹೃದಯನಾಗಿ–'ಪಣವು ನನ್ನ ಕಡೆಯವರಿಂದ ಗೆಲ್ಲಲ್ಪಟ್ಟಿತೇ?'– ಎಂದು ಬಾರಿ-ಬಾರಿಗೂ ವಿಕಸಿತಮುಖಭಾವದಿಂದ ಕೇಳುತ್ತಿದ್ದು ತನ್ನ ಹೃದಯದಲ್ಲಡಗಿದ್ದ ಪಾಂಡವರ ಮೇಲಿನ ಅಸೂಯೆಯನ್ನು ಗೋಪ್ಯ ವಾಗಿಟ್ಟುಕೊಳ್ಳಲು ಅಸಮರ್ಥನಾದನು.

ಉಳಿದ ಕೌರವರ ಅಟ್ಟಹಾಸವು ವರ್ಣಿಸಲು ಅಸದಳವಾಯಿತು.

ಕರ್ಣ-ದುಃಶಾಸನ-ದುರ್ಯೋಧನರು ಗಟ್ಟಿಯಾಗಿ ನಗುತ್ತಾ ಕೇಕೆಹಾಕುತ್ತಿದ್ದರು. ಧಾರ್ಮಿಕರಾದ ರಾಜರ ಕಣ್ಣುಗಳಿಂದ ಅಶ್ರುಬಿಂದುಗಳು ಉದುರುತ್ತಿದ್ದುವು.

ಶಕುನಿಯು ಯುಧಿಷ್ಠಿರನೊಡನೆ ಹೇಳಿದನು :

"ಯುಧಿಷ್ಠಿರ! ದ್ರೌಪದಿಯು ನಿನ್ನ ಪ್ರಿಯಭಾರ್ಯೆಯು. ಪಣವಾಗಿಡಲು ಉಳಿದಿರುವ ಒಂದೇ ವಸ್ತು. ಅವಳಿಂದ ನೀನು ಉಳಿಯಬೇಕು ಅಥವಾ ಅಳಿಯಬೇಕು ; ಅಲ್ಲವೇ? ಈ ಆಟದಲ್ಲಿಯಾದರೂ ಗೆಲ್ಲುವೆಯಾ? ನಿನ್ನಿಂದ ಅದು ಸಾಧ್ಯವಿಲ್ಲ, ಧರ್ಮಜ! ಪಗಡೆಯಾಟದಲ್ಲಿ ನನ್ನನ್ನು ಸೋಲಿಸುವವರು ಈ ಭೂಮಿಯಲ್ಲೇ ಯಾರೂ ಇಲ್ಲ. ಆ ಸುಂದರಿಯನ್ನೂ ನಾನು ದುರ್ಯೋಧನನಿಗಾಗಿ ಗೆಲ್ಲುವೆನು"–ಮುಂತಾಗಿ ಹೇಳುತ್ತಾ ವಿಜಯದಿಂದ ಪ್ರಕಾಶಮಾನನಾಗಿದ್ದ, ಮದೋತ್ಕಟನಾಗಿದ್ದ ಶಕುನಿಯು ಪಗಡೆಕಾಯಿಗಳೆಲ್ಲವನ್ನೂ ಒಂದೊಂದನ್ನಾಗಿ ಗೆದ್ದುಕೊಂಡನು. 'ಜಿತಂ' 'ನಾನೇ ಗೆದ್ದೆನು' ಎಂಬುದಾಗಿಯೂ ಉದ್ಘೋಷಿಸಿದನು.

ಅರವತ್ತೈದನೆಯ ಅಧ್ಯಾಯವು ಮುಗಿಯಿತು.

೬೬ನೆಯ ಅಧ್ಯಾಯ ದ್ಯೂತಪರ್ವ (ಮುಂದುವರಿದಿದೆ.)

## ವಿದುರನಿಂದ ದುರ್ಯೋಧನನ ದೂಷಣೆ

ಪಾರಿಕ್ಷಿತ! ಗೆದ್ದ ಅಮಲಿನಿಂದ ವಿವೇಕಶೂನ್ಯನಾಗಿದ್ದ ದುರ್ಯೋಧನನು ವಿದುರನಿಗೆ ಹೇಳಿದನು :

**ಏಹಿ ಕ್ಷತ್ತರ್ದ್ರೌಪದೀಮಾನಯಸ್ವ**
**ಪ್ರಿಯಾಂ ಭಾರ್ಯಾಂ ಸಮ್ಮತಾಂ ಪಾಣ್ಡವಾನಾಮ್ ।**
**ಸಮ್ಮಾರ್ಜತಾಂ ವೇಶ್ಮ ಪರೈತು ಶೀಘ್ರಂ**
**ತತ್ರಾಸ್ತು ದಾಸೀಭಿರಪುಣ್ಯಶೀಲಾ ॥೧॥**

"ವಿದುರ! ಪಾಂಡವಪ್ರಿಯಳಾದ ದ್ರೌಪದಿಯನ್ನು ಕೂಡಲೇ ಕರೆದುಕೊಂಡು ಬಾ. ಅವಳು ನನ್ನ ಮನೆಯನ್ನು ಗುಡಿಸಿ ಚೊಕ್ಕಟವಾಗಿಡಲಿ. ಆ ಅಭಾಗಿನಿಯು ಇನ್ನು ಮುಂದೆ ನಮ್ಮ ದಾಸೀಜನರೊಡನೆ ಜೀವಿಸಿರಲಿ."

ನಿಶ್ಚಯವಾಗಿಯೂ ಇದು ಸಹಿಸಲಾರದ ಮಾತು. ಅದರಲ್ಲಿಯೂ ವಿದುರನೊಡನೆ ಹೀಗೆ ಹೇಳಿದರೆ ಅವನ ಮನಸ್ಸು ಎಷ್ಟು ಕ್ಷುಬ್ಧವಾಗ ಬಹುದೆಂಬ ಪರಿವೆಯೂ ದುರಹಂಕಾರಿಯಾದ ದುರ್ಯೋಧನನಿಗಿರಲಿಲ್ಲ.

ವಿದುರನು ಮೇಲೆದ್ದು ಹೇಳಿದನು :

**ದುರ್ವಿಭಾಷಂ ಭಾಷಿತಂ ತ್ವಾದೃಶೇನ**
**ನ ಮನ್ದ ಸಮ್ಬುಧ್ಯಸಿ ಪಾಶಬದ್ಧಃ ।**
**ಪ್ರಪಾತೇ ತ್ವಂ ಲಮ್ಬಮಾನೋ ನ ವೇತ್ಸಿ**
**ವ್ಯಾಘ್ರಾನ್ಮೃಗಃ ಕೋಪಯಸೇऽತಿವೇಲಮ್ ॥೨॥**

“ಮಂದಬುದ್ಧಿಯಾದ ದುರ್ಯೋಧನನೇ! ಇತರರ ಮನನೋಯಿಸುವ ಇಂತಹ ಮಾತುಗಳನ್ನಾಡಿ ನಿನ್ನ ಕುತ್ತಿಗೆಗೆ ನೀನೇ ಹಗ್ಗವನ್ನು ಬಿಗಿದುಕೊಳ್ಳುತ್ತಿರುವೆ. (ಕಾಲಪಾಶಬದ್ಧನಾಗಿರುವೆ.) ಪ್ರಪಾತದ ಮೇಲ್ಭಾಗದಲ್ಲಿ ನೀನು ನೇತಾಡುತ್ತಿರುವೆಯೆಂಬುದನ್ನು ಮರೆಯಬೇಡ. ಹುಲ್ಲೇಕರುವು ಹುಲಿಗಳನ್ನು ರೇಗಿಸುವ ರೀತಿಯಲ್ಲಿ–ನೀನು ಪಾಂಡವರನ್ನು ನಿನ್ನೀ ದುಷ್ಟವಾದ ಮಾತುಗಳಿಂದ ಕೆರಳಿಸುತ್ತಿರುವೆ.

**ಆಶೀವಿಷಾಸ್ತೇ ಶಿರಸಿ ಪೂರ್ಣಕೋಪಾ ಮಹಾವಿಷಾಃ ।**
**ಮಾ ಕೋಪಿಷ್ಠಾಃ ಸುಮನ್ದಾತ್ಮನ್ಮಾ ಗಮಸ್ತ್ವಂ ಯಮಕ್ಷಯಮ್ ॥೩॥**

ಪೂರ್ಣವಾಗಿ ಕೋಪಗೊಂಡಿರುವ ಮಹಾಸರ್ಪಗಳು ನಿನ್ನ ತಲೆಯ ಮೇಲೆ ಹೆಡೆಯಾಡಿಸುತ್ತಿವೆ. ಅವುಗಳನ್ನು ಮತ್ತಷ್ಟು ಕೋಪಗೊಳಿಸಿ ಯಮಾಲಯಕ್ಕೆ ಹೋಗಬೇಡ.”

ಅನಂತರದಲ್ಲಿ ವಿದುರನು ಒಂದು ಸಮಸ್ಯೆಯನ್ನು ತಂದೊಡ್ಡಿದನು. ಅವನ ಅಭಿಪ್ರಾಯದಲ್ಲಿ ದ್ರೌಪದಿಯು ಕೌರವರ ದಾಸಿಯಾಗುವ ಸಂಭವವೇ ಇಲ್ಲ. ಅದನ್ನು ಸಕಾರಣವಾಗಿ ಪ್ರತಿಪಾದಿಸುತ್ತಾ ವಿದುರನು ಹೇಳುತ್ತಾನೆ :

**ನ ಹಿ ದಾಸೀತ್ವಮಾಪನ್ನಾ ಕೃಷ್ಣಾ ಭವಿತುಮರ್ಹತಿ ।**
**ಅನೀಶೇನ ಹಿ ರಾಜ್ಞೈಷಾ ಪಣೇ ನ್ಯಸ್ತೇತಿ ಮೇ ಮತಿಃ ॥೪॥**

"ಯುಧಿಷ್ಠಿರನು ಪಂದ್ಯದಲ್ಲಿ ತನ್ನನ್ನೇ ಪಣವನ್ನಾಗಿಟ್ಟುಕೊಂಡು ಸೋತುಹೋಗಿ ದಾಸನಾದನಂತರ–ಧೃತರಾಷ್ಟ್ರನ ದಾಸನಾದ ಇವನಿಗೆ–ದ್ರೌಪದಿಯನ್ನು ಪಣವನ್ನಾಗಿಡಲು ಅಧಿಕಾರವೇ ಇಲ್ಲವೆಂಬುದು ನನ್ನ ಅಭಿಪ್ರಾಯವಾಗಿದೆ. ಆದುದರಿಂದ ದ್ರೌಪದಿಯೆಂದಿಗೂ ನಿನ್ನ ದಾಸಿಯಾಗಲಾರಳು.

ಬಿದಿರುಮೆಳೆಯು ತಾನು ನಾಶಹೊಂದುವ ಮೊದಲು ಫಲಿಸುವ ರೀತಿಯಲ್ಲಿ–ಪಾಂಡವರ ಈ ಐಶ್ವರ್ಯವನ್ನು ದುರ್ಯೋಧನನು ಪಡೆದಿರುವನು. ಈ ಐಶ್ವರ್ಯವು ತನ್ನ ಕಡೆಗಾಲದ ಸೂಚಕವೆಂದಾಗಲೀ, ಪಗಡೆಯಾಟವು ತನಗೆ ಮಹಾವಿಪತ್ತನ್ನೂ ಮತ್ತು ಪಾಂಡವರೊಡನೆ ಅನಿವಾರ್ಯವಾದ ವೈರವನ್ನೂ ಉಂಟುಮಾಡೀತೆಂದಾಗಲೀ–ಈ ಮೂಢನು ತಿಳಿದಿರುವುದಿಲ್ಲ.

**ನಾರುನ್ತುದಃ ಸ್ಯಾನ್ನ ನೃಶಂಸವಾದೀ**
**ನ ಹೀನತಃ ಪರಮಭ್ಯಾದದೀತ ।**
**ಯಯಾಸ್ಯ ವಾಚಾ ಪರ ಉದ್ವಿಜೇತ**
**ನ ತಾಂ ವದೇದುಷತೀಂ ಪಾಪಲೋಕ್ಯಾಮ್ ॥೬॥**

ಯಾವನೇ ಆಗಲೀ ಇತರರ ವಿಷಯದಲ್ಲಿ ಕಠಿನೋಕ್ತಿಗಳನ್ನಾಡಿ ಅವರ ಮನಸ್ಸನ್ನು ನೋಯಿಸಬಾರದು. ತನ್ನ ಶತ್ರುಗಳನ್ನು ದ್ಯೂತವೇ ಮುಂತಾದ ಕುತ್ಸಿತಮಾರ್ಗಗಳಿಂದ ಜಯಿಸಲು ಯತ್ನಿಸಬಾರದು. ಯಾವ ಮಾತಿನಿಂದ ಬೇರೆಯವನು ಹೆದರುತ್ತಾನೆಯೋ, ನೊಂದುಕೊಳ್ಳುತ್ತಾನೆಯೋ ಅಂತಹ ಪ್ರಾಕೃತವಾದ, ನರಕಕ್ಕೆ ಒಯ್ಯಲು ಸಾಧಕವಾದ ಮಾತನ್ನಾಡಬಾರದು.

ನಿಂದೆಯ ಮಾತುಗಳು ಶಸ್ತ್ರಗಳಂತೆ ಬಾಯಿಂದ ಹೊರಬರುತ್ತವೆ. ಮರ್ಮಘಾತಿಗಳಾದ ಶಸ್ತ್ರಗಳಂತೆ ಎದುರಾಳಿಯ ಮರ್ಮಸ್ಥಳಗಳಲ್ಲಿಯೇ ಬೀಳುತ್ತವೆ. ( ಶಸ್ತ್ರಾಘಾತದಂತೆಯೇ ನೋವನ್ನುಂಟುಮಾಡುತ್ತವೆ. ) ಇಂತಹ ವಾಕ್ಶಲ್ಯಗಳ ಪ್ರಹಾರಕ್ಕೆ ಗುರಿಯಾದವನು ಹಗಲು-ರಾತ್ರಿ ಯಾವಾಗಲೂ

ದುಃಖಿಸುತ್ತಿರುತ್ತಾನೆ. ಶಸ್ತ್ರದಿಂದ ಆದ ಗಾಯವಾದರೂ ವಾಸಿಯಾಗಬಹುದು. ವಾಕ್ಶಲ್ಯದಿಂದ ಆದ ಗಾಯವು ವಾಸಿಯಾಗುವುದೇ ಇಲ್ಲ. ಆದುದರಿಂದ ತಿಳಿದವನು ಅಂತಹ ಕ್ರೂರವಾಕ್ಯಗಳನ್ನು ಬೇರೆಯವರ ಮೇಲೆ ಪ್ರಯೋಗಿಸಬಾರದು.

**ಅಜೋ ಹಿ ಶಸ್ತ್ರಮಗಿಲತ್ಕಿಲೈಕಃ**
**ಶಸ್ತ್ರೇ ವಿಪನ್ನೇ ಶಿರಸಾಸ್ಯ ಭೂಮೌ ।**
**ನಿಕೃನ್ತನಂ ಸ್ವಸ್ಯ ಕಣ್ಠಸ್ಯ ಘೋರಂ**
**ತದ್ವದ್ವೈರಂ ಮಾ ಕೃಥಾಃ ಪಾಣ್ಡುಪುತ್ರೈಃ ॥೮॥**

ಒಂದು ಆಡು ಲೋಹದ ಶಸ್ತ್ರವೊಂದನ್ನು ನುಂಗಿಬಿಟ್ಟಿತು. ಅದು ಪೂರ್ಣವಾಗಿ ಹೊಟ್ಟೆಯೊಳಗೆ ಹೋಗಲೂ ಇಲ್ಲ ; ಹೊರಕ್ಕೆ ಬರಲೂ ಇಲ್ಲ. ಆಗ ಯಜಮಾನನು ಅದನ್ನು ಮಲಗಿಸಿ ಅದರ ತಲೆಯನ್ನು ನೆಲದ ಮೇಲೆ ಭದ್ರವಾಗಿ ಅದುಮಿಕೊಂಡು ಕಬ್ಬಿಣದ ಆಯುಧವನ್ನು ಹೊರಗೆಳೆದನು. ಆಗ ಆಡಿನ ಕುತ್ತಿಗೆಯು ಕತ್ತರಿಸಿಹೋಯಿತು. ಅದರಂತೆ ಪಾಂಡವರ ಐಶ್ವರ್ಯವನ್ನು ನುಂಗಿಬಿಡಲು ಸಾಧ್ಯವಾಗುವುದಿಲ್ಲ. ಅದನ್ನವರು ಪುನಃ ಪಡೆದೇ ತೀರುವರು. ಆಗ ನೀನು ನಿನ್ನ ಪರಿವಾರಸಮೇತನಾಗಿ ಯಮಾಲಯಕ್ಕೆ ಹೋಗಬೇಕಾದೀತು. ಆದುದರಿಂದ ಪಾಂಡವರೊಡನೆ ದ್ವೇಷಕಟ್ಟಿಕೊಳ್ಳಬೇಡ. ಅವರ ಐಶ್ವರ್ಯವನ್ನು ಈ ರೀತಿಯಲ್ಲಿ ಕಬಳಿಸಲು ಯತ್ನಿಸಬೇಡ.

ನೀನಾಡಿದಂತಹ ಕುತ್ಸಿತವಾದ ವಾಕ್ಯಗಳನ್ನು ಪಾಂಡವರೆಂದಿಗೂ ಯಾರೊಂದಿಗೂ ಆಡುವುದಿಲ್ಲ. ನಾಯಿಗಳಂತಿರುವ ಕುತ್ಸಿತಮಾನವರು ಮಾತ್ರವೇ ಹೀಗೆ ಬೊಗಳುತ್ತಾರೆ. ಅವರು ಬೊಗಳುವಾಗ ಯಾವ ವಿಧವಾದ ವಿವೇಚನೆಯೂ ಇರುವುದಿಲ್ಲ.

(ಯಜಮಾನನ ಮಗನೇ ಆಗಿದ್ದರೂ ಅಪರಿಚಿತನಾದಲ್ಲಿ ಬಾಗಿಲಿಗೆ ಬಂದೊಡನೆಯೇ ಬಾಗಿಲಿನಲ್ಲಿರುವ ನಾಯಿಯು ವಿವೇಚನೆಯಿಲ್ಲದೇ ಬೊಗಳುವುದಲ್ಲವೇ? )

ಅದೇ ರೀತಿಯಲ್ಲಿ ಈ ಶ್ವಾನಮಾನವರೂ ವಾನಪ್ರಸ್ಥನಾಗಲೀ, ಗೃಹಸ್ಥ

ನಾಗಲೀ, ಸಂನ್ಯಾಸಿಯಾಗಲೀ, ಮಹಾಮಹಾವಿದ್ವಾಂಸನೇ ಆಗಲೀ–ಸ್ವಲ್ಪ ವಾದರೂ ವಿವೇಚಿಸದೇ ಅವರ ವಿಷಯವಾಗಿ ಬೊಗಳುತ್ತಿರುತ್ತಾರೆ. (ಕೆಟ್ಟ ಮಾತುಗಳನ್ನಾಡುತ್ತಾರೆ.) ಆದರೆ ಪಾರ್ಥರೆಂದಿಗೂ ಹಾಗೆ ಮಾಡುವುದಿಲ್ಲ.

ಮೋಸವು (ವಂಚನೆಯು) ನರಕಕ್ಕೆ ಮಹಾಘೋರವಾದ ದ್ವಾರವೆಂದು ಈ ಧೃತರಾಷ್ಟ್ರನ ಮಗನು ತಿಳಿದಿರುವುದಿಲ್ಲ. ಇವನೇ ಅಲ್ಲದೇ ದುಃಶಾಸನನೇ ಮೊದಲಾದ ಕುರುಪುತ್ರರೆಲ್ಲರೂ ಜೂಜಾಟದ ವಂಚನೆಯಲ್ಲಿ ಜೊತೆಗೂಡಿದ್ದಾರೆ. ಎಲ್ಲರೂ ಇವನ ಹಾದಿಯನ್ನೇ ಹಿಡಿದಿರುತ್ತಾರೆ.

ಮಜ್ಜನ್ತ್ಯಲಾಬೂನಿ ಶಿಲಾಃ ಪ್ಲವನ್ತೇ
ಮುಹ್ಯನ್ತಿ ನಾವೋಽಮ್ಭಸಿ ಶಶ್ವದೇವ ।
ಮೂಢೋ ರಾಜಾ ಧೃತರಾಷ್ಟ್ರಸ್ಯ ಪುತ್ರೋ
ನ ಮೇ ವಾಚಃ ಪಥ್ಯರೂಪಾಃ ಶೃಣೋತಿ ॥೧೧॥

ಒಂದೊಂದು ವೇಳೆ ಸೋರೆಯ ಬುರುಡೆಗಳೂ ನೀರಿನಲ್ಲಿ ಮುಳುಗುತ್ತವೆ. ಕಲ್ಲುಗಳೂ ತೇಲುತ್ತವೆ. ದೋಣಿಗಳೂ ನೀರಿನಲ್ಲಿ ಗೊತ್ತಾದ ಕಡೆಗೆ ಹೋಗದೇ ದಿಕ್ಕುಗೆಡುತ್ತವೆ. (ಅಲ್ಪರು ಮೇಲಕ್ಕೆ ಬರುತ್ತಾರೆ. ಉತ್ತಮರು ಕೆಳಕ್ಕೆ ಬೀಳುತ್ತಾರೆ. ತಿಳಿದವರು ಭ್ರಾಂತರಾಗುತ್ತಾರೆ.) ಆದರೆ ಇದು ತಾತ್ಕಾಲಿಕ. ಇದನ್ನು ತಿಳಿಯದೆ ಮೂಢನಾದ ದುರ್ಯೋಧನನು ಪಥ್ಯವಾದ ನನ್ನ ಮಾತುಗಳನ್ನು ಕೇಳುತ್ತಿಲ್ಲ.

ಕುರುಗಳೆಲ್ಲರ ಮಹಾದಾರುಣವಾದ ವಿನಾಶಕ್ಕೆ ಈ ದ್ಯೂತವ್ಯವಹಾರವು ಕಾರಣವಾಗುವುದೆಂಬುದು ಶತಾಂಶ ಸತ್ಯ. ಇದರಲ್ಲಾವ ಸಂಶಯವೂ ಇಲ್ಲ. ಸ್ನೇಹಿತರ ಪಥ್ಯರೂಪವಾದ ಹಿತೋಕ್ತಿಗಳನ್ನು ಕೇಳದಿರುವಾಗ, ಲೋಭವು ನಿಮಿಷ-ನಿಮಿಷಕ್ಕೂ ಹೆಚ್ಚುತ್ತಿರುವಾಗ–ಸರ್ವನಾಶವು ಸನ್ನಿಹಿತವಾಗಿಯೇ ತೀರುವುದು.”

ಳಿಳಿನೆಯ ಅಧ್ಯಾಯವು ಮುಗಿಯಿತು.

## ಸೂತನೊಡನೆ ಸಭೆಗೆ ಬರಲು ನಿರಾಕರಿಸಿದ ದ್ರೌಪದಿಯನ್ನು ದುಃಶಾಸನನು ಬಲಾತ್ಕಾರಪೂರ್ವಕವಾಗಿ ಸಭೆಗೆ ಸೆಳೆದು ತಂದುದು : ಸಭಾಸದರಲ್ಲಿ ದ್ರೌಪದಿಯ ಪ್ರಶ್ನೆ

ವೈಶಂಪಾಯನರು ಹೇಳುತ್ತಾರೆ :

"ಜನಮೇಜಯ! ದರ್ಪದಿಂದ ಪ್ರಮತ್ತನಾದ ದುರ್ಯೋಧನನು ವಿದುರನ ಮಾತುಗಳನ್ನು ಕೇಳಿ ಅಟ್ಟಹಾಸದಿಂದ 'ವಿದುರನಿ ಗೆ ಧಿಕ್ಕಾರವಿರಲಿ' ಎಂದು ಹೇಳಿ ಅನತಿದೂರದಲ್ಲಿ ನಿಂತಿದ್ದ ಸೂತನನ್ನು ನೋಡಿ ಸಭೆಯಲ್ಲಿ ಕುಳಿತಿದ್ದ ಶ್ರೇಷ್ಠಪುರುಷರ ಸಮ್ಮುಖದಲ್ಲಿ ಅವನಿಗೆ ಈ ಮಾತುಗಳನ್ನು ಹೇಳಿದನು :

"ಪ್ರಾತಿಕಾಮಿಯೇ! ನೀನೀಗಲೇ ಹೋಗಿ ದ್ರೌಪದಿಯನ್ನು ಈ ಸಭೆಗೆ ಕರೆದುಕೊಂಡು ಬಾ. ಪಾಂಡುಪುತ್ರರಿಂದ ನಿನಗಾವ ಭಯವೂ ಇರುವುದಿಲ್ಲ. ವಿದುರನೊಬ್ಬನೇ ಭಯಪಡತಕ್ಕವನು ; ವಿವಾದಮಾಡತಕ್ಕವನು. ಇವನಿಗೆ ನಮ್ಮ ಅಭಿವೃದ್ಧಿಯಲ್ಲಿ ಸ್ವಲ್ಪವಾದರೂ ಆಸಕ್ತಿಯಿಲ್ಲ."

ದುರ್ಯೋಧನನ ಆಜ್ಞೆಯಂತೆ ಪ್ರಾತಿಕಾಮಿಯು ಅವಸರದಿಂದ ಸಭಾ ಮಂದಿರವನ್ನು ಬಿಟ್ಟು–ಸಿಂಹದ ಗುಹೆಯೊಳಗೆ ನಾಯಿಯೊಂದು ನುಸುಳಿ ಹೊಗುವಂತೆ–ಅರಮನೆಯೊಳಗೆ ಪ್ರವೇಶಿಸಿ ಪಾಂಡವರ ಪಟ್ಟಮಹಿಷಿ ಯಾದ ದ್ರೌಪದಿಯನ್ನು ಕುರಿತು ಹೇಳಿದನು :

"ದ್ರೌಪದಿ! ಯುಧಿಷ್ಠಿರನು ಜೂಜಾಟದ ಅಮಲಿನಿಂದ ಮತ್ತನಾಗಿ ದ್ದಾನೆ. ದುರ್ಯೋಧನನು ನಿನ್ನನ್ನೂ ಗೆದ್ದುಕೊಂಡಿದ್ದಾನೆ. ಈಗ ನೀನು ದುರ್ಯೋಧನನ ದಾಸಿಯಾಗಿರುವೆ. ಆದುದರಿಂದ ನೀನೀಗಲೇ ಧೃತರಾಷ್ಟ್ರನ ಸಭಾಭವನಕ್ಕೆ ಬರುವವಳಾಗು. ದುರ್ಯೋಧನನ ಆಜ್ಞಾನುಸಾರವಾಗಿ ಅಲ್ಲಿ (ದುರ್ಯೋಧನನ ಮನೆಯಲ್ಲಿ) ಕೆಲಸಮಾಡಲು ನಿನ್ನನ್ನು ಕರೆದೊಯ್ಯು ತ್ತೇನೆ."

ಅಂತಹ ಮಾತುಗಳನ್ನು ದ್ರೌಪದಿಯು ಕನಸಿನಲ್ಲಿಯೂ ಕೇಳಿರಲಿಲ್ಲ. ಹೀಗೇಕೆ ಹೇಳುತ್ತಿರುವನೆಂದು ಭ್ರಾಂತಳಾಗಿ ಹೇಳಿದಳು :

**ಕಥಂ ತ್ವೇವಂ ವದಸಿ ಪ್ರಾತಿಕಾಮಿ-**
**ನ್ಕೋ ಹಿ ದೀವ್ಯೇದ್ಭಾರ್ಯಯಾ ರಾಜಪುತ್ರಃ ।**
**ಮೂಢೋ ರಾಜಾ ದ್ಯೂತಮದೇನ ಮತ್ತೋ**
**ಹ್ಯಭೂನ್ನಾನ್ಯತ್ಕೈತವಮಸ್ಯ ಕಿಂಚಿತ್ ॥೫॥**

"ಸೂತ! ಹೀಗೇಕೆ ಮಾತನಾಡುತ್ತಿರುವೆ? ಯಾವ ರಾಜಕುಮಾರನು ತಾನೇ ತನ್ನ ಧರ್ಮಪತ್ನಿಯನ್ನೇ ಪಣವನ್ನಾಗಿಟ್ಟು ಜೂಜಾಡುವನು? ನಮ್ಮ ರಾಜನು ಜೂಜಾಟದ ಅಮಲಿನಲ್ಲಿದ್ದಿರಬಹುದು. ಜೂಜಾಟಕ್ಕೆ ಪಣ ವನ್ನಾಗಿಡಲು ಅವನಿಗೆ ಮತ್ತಾವ ವಸ್ತುವೂ ಸಿಕ್ಕುತ್ತಿರಲಿಲ್ಲವೇ?"

"ದ್ರೌಪದಿ! ಅಜಾತಶತ್ರುವಿಗೆ ಪಣವನ್ನಾಗಿಡಲು ಬೇರಾವ ವಸ್ತುವೂ ಇಲ್ಲದಿದ್ದುದರಿಂದಲೇ ನಿನ್ನನ್ನು ಪಣವನ್ನಾಗಿಟ್ಟು ಸೋತಿರುವನು. ಯುಧಿಷ್ಠಿರನು ಸಕಲೈಶ್ವರ್ಯಗಳನ್ನೂ ಕಳೆದುಕೊಂಡನಂತರ ತನ್ನ ಅನುಜ ರನ್ನೂ ಪಣವನ್ನಾಗಿಟ್ಟನು. ಅನಂತರ ತನ್ನನ್ನೇ ಪಣವನ್ನಾಗಿಟ್ಟುಕೊಂಡನು. ತನ್ನನ್ನೂ ಸೋತುಕೊಂಡಮೇಲೆಯೇ ನಿನ್ನನ್ನೂ ಪಣವನ್ನಾಗಿಟ್ಟು ಸೋತನು."

**ಗಚ್ಛ ತ್ವಂ ಕಿತವಂ ಗತ್ವಾ ಸಭಾಯಾಂ ಪೃಚ್ಛ ಸೂತಜ ।**
**ಕಿಂ ನು ಪೂರ್ವಂ ಪರಾಜೈಷೀರಾತ್ಮಾನಮಥವಾ ನು ಮಾಮ್ ॥೭॥**

"ಸೂತಪುತ್ರನೇ! ಹಾಗಾದರೆ ನೀನಲ್ಲಿಗೆ ಹೋಗಿ ಸಭಾಭವನದಲ್ಲಿ ಕುಳಿತಿರುವ ಆ ಜೂಜುಕೋರನನ್ನೇ ಕೇಳು. 'ತಾನು ಸೋತು ದುರ್ಯೋ ಧನನ ದಾಸನಾದ ಮೇಲೆ ನನ್ನನ್ನು ಪಣವನ್ನಾಗಿಟ್ಟು ಸೋತನೋ ಅಥವಾ ತಾನು ದಾಸನಾಗುವ ಮೊದಲೇ ನನ್ನನ್ನು ಪಣವನ್ನಾಗಿಟ್ಟನೋ?'–ಈ ವಿಷಯವನ್ನು ಕೇಳಿ ಅವನು ಏನು ಹೇಳುವನೆಂಬುದನ್ನು ತಿಳಿದು ಬಾ. ದುಃಖಿತೆಯಾದ ನಾನು ಧರ್ಮರಾಜನು ಏನುಮಾಡಬೇಕೆಂದಿರುವನೆಂಬು ದನ್ನು ತಿಳಿದು ರಾಜಸಭೆಗೆ ಹೋಗುವೆನು."

ಪ್ರಾತಿಕಾಮಿಯು ದ್ರೌಪದಿಯ ಮಾತಿನಂತೆ ಪುನಃ ಸಭಾಭವನಕ್ಕೆ

ಬಂದು ಅಲ್ಲಿ ಕುಳಿತಿದ್ದವರ ಸಮ್ಮುಖದಲ್ಲಿ ಯುಧಿಷ್ಠಿರನನ್ನು ಕುರಿತು ಹೇಳಿದನು:

"ಯುಧಿಷ್ಠಿರ! ದ್ರೌಪದಿಯು ನಿನ್ನನ್ನು ಹೀಗೆ ಪ್ರಶ್ನಿಸುವಂತೆ ಹೇಳಿರುತ್ತಾಳೆ. 'ನನ್ನನ್ನು ಪಣದಲ್ಲಿ ಸೋತಾಗ ನೀನು ಯಾರಿಗೆ ಸ್ವಾಮಿಯಾಗಿದ್ದೆ? ಮೊದಲು ನನ್ನನ್ನು ಸೋತು ಅನಂತರದಲ್ಲಿ ನಿನ್ನನ್ನು ಸೋತುಕೊಂಡೆಯಾ? ಅಥವಾ ನಿನ್ನನ್ನೇ ಸೋತುಕೊಂಡು ಅನಂತರದಲ್ಲಿ ನನ್ನನ್ನು ಪಣವನ್ನಾಗಿಟ್ಟು ಸೋತೆಯಾ?' "

**ಯುಧಿಷ್ಠಿರಸ್ತು ನಿಶ್ಚೇತಾ ಗತಸತ್ತ್ವ ಇವಾಭವತ್ ।**
**ನ ತಂ ಸೂತಂ ಪ್ರತ್ಯುವಾಚ ವಚನಂ ಸಾಧ್ವಸಾಧು ವಾ ॥೧೧॥**

ಪ್ರಾತಿಕಾಮಿಯು ಕೇಳಿದ ದ್ರೌಪದಿಯ ಪ್ರಶ್ನೆಗೆ ಯುಧಿಷ್ಠಿರನು ಉತ್ತರಿಸಲಿಲ್ಲ. ಚೇತನಾರಹಿತನಂತೆಯೂ, ಸತ್ತ್ವಹೀನನಾದವನಂತೆಯೂ ಸ್ತಬ್ಧನಾಗಿ ಕುಳಿತಿದ್ದನು. ತಾನು ಮಾಡಿದ್ದು ಅಸಾಧುವೇ-ಸಾಧುವೇ ಎಂಬುದನ್ನೂ ಹೇಳಲಿಲ್ಲ. (ಯಾವ ಮಾತನ್ನೂ ಹೇಳಲಿಲ್ಲ.)

ದುರ್ಯೋಧನನು ಮಧ್ಯದಲ್ಲಿ ಪ್ರವೇಶಿಸಿ ಹೇಳಿದನು :

"ಸೂತನೇ! ದ್ರೌಪದಿಯೇ ಬಂದು ಸರ್ವರ ಸಮ್ಮುಖದಲ್ಲಿ ಯುಧಿಷ್ಠಿರನಿಗೆ ಈ ಪ್ರಶ್ನೆಯನ್ನು ಹಾಕಲಿ. ಇವರಿಬ್ಬರಿಗೂ ನಡೆಯುವ ಸಂಭಾಷಣೆಯನ್ನು ಸಭ್ಯರೆಲ್ಲರೂ ಕೇಳಲಿ. ಆದುದರಿಂದ ನೀನು ಒಡನೆಯೇ ಹೋಗಿ ದ್ರೌಪದಿಯನ್ನು ಕರೆದುಕೊಂಡು ಬಾ."

ಪ್ರಾತಿಕಾಮಿಗೆ ದ್ರೌಪದಿಯನ್ನು ಸಭಾಮಂದಿರಕ್ಕೆ ಕರೆತರುವುದು ಸರಿಯೆನ್ನಿಸಲಿಲ್ಲ. ಆದರೂ ರಾಜಾಧೀನನಾದ ಅವನು ವ್ಯಥಿತನಾಗಿ ದುರ್ಯೋಧನನ ಆಜ್ಞೆಯಂತೆ ಪುನಃ ದ್ರೌಪದಿಯ ಬಳಿಗೆ ಸಾರಿ ಅವಳೊಡನೆ ಹೇಳಿದನು:

**ಸಭ್ಯಾಸ್ತ್ವಮೀ ರಾಜಪುತ್ರ್ಯಾಹ್ವಯನ್ತಿ**
**ಮನ್ಯೇ ಪ್ರಾಪ್ತಃ ಸಂಕ್ಷಯಃ ಕೌರವಾಣಾಮ್ ।**
**ನ ವೈ ಸಮೃದ್ಧಿಂ ಪಾಲಯತೇ ಲಘೀಯಾ-**
**ನ್ಯಸ್ತ್ವಾಂ ಸಭಾಂ ನೇಷ್ಯತಿ ರಾಜಪುತ್ರಿ ॥೧೪॥**

"ಪಾಂಚಾಲಿ! ಸಭ್ಯರು ನೀನೇ ಸಭೆಗೆ ಬರಬೇಕೆಂದು ಆಹ್ವಾನಿಸು ತ್ತಿದ್ದಾರೆ. ನೀನು ಸಭೆಗೆ ಬಂದು ಅವರೆದುರಿನಲ್ಲಿಯೇ ಯುಧಿಷ್ಠಿರನನ್ನು ಪ್ರಶ್ನಿಸಬೇಕೆಂಬುದು ಅವರ ಆಶಯವಾಗಿದೆ. ಆದರೆ ಕೌರವರ ವಿನಾಶಕಾಲವು ಪ್ರಾಪ್ತವಾಗುತ್ತಿದೆಯೆಂದು ನನಗೆ ಭಾಸವಾಗುತ್ತಿದೆ. ಏಕೆಂದರೆ : ಕಾರಣವೇನೇ ಇರಲಿ–ನಿನ್ನನ್ನು ಸಭಾಭವನಕ್ಕೆ ಸೆಳೆದುತರಬೇಕೆಂದು ಅಭಿಲಾಷಿಸುವವನು ಅತ್ಯಲ್ಪನು. ದುರ್ಯೋಧನನು ತನಗೆ ಪ್ರಾಪ್ತವಾಗಿರುವ ಸಮೃದ್ಧಿಯನ್ನು ನಿಶ್ಚಯವಾಗಿಯೂ ಉಳಿಸಿಕೊಳ್ಳಲಾರನು."

ದ್ರೌಪದಿಯು ನಿಟ್ಟುಸಿರುಬಿಡುತ್ತಾ ಹೇಳಿದಳು :

**ಏವಂ ನೂನಂ ವ್ಯದಧಾತ್ಸಂವಿಧಾತಾ**
**ಸ್ಪರ್ಶಾವುಭೌ ಸ್ಪೃಶತೋ ವೃದ್ಧಬಾಲೌ ।**
**ಧರ್ಮಂ ತ್ವೇಕಂ ಪರಮಂ ಪ್ರಾಹ ಲೋಕೇ**
**ಸ ನಃ ಶಮಂ ಧಾಸ್ಯತಿ ಗೋಪ್ಯಮಾನಃ ॥೧೫॥**

**ಸೋಽಯಂ ಧರ್ಮೋ ಮಾತ್ಯಗಾತ್ಕೌರವಾನ್ವೈ**
**ಸಭ್ಯಾನ್ಗತ್ವಾ ಪೃಚ್ಛ ಧರ್ಮ್ಯಂ ವಚೋ ಮೇ ।**
**ತೇ ಮಾಂ ಬ್ರೂಯುರ್ನಿಶ್ಚಿತಂ ತತ್ಕರಿಷ್ಯೇ**
**ಧರ್ಮಾತ್ಮಾನೋ ನೀತಿಮನ್ತೋ ವರಿಷ್ಠಾಃ ॥೧೬॥**

"ಸೂತನೇ! ವಿಧಿನಿಯಮವೇ ಹೀಗಿರುವಾಗ ಅದನ್ನು ತಪ್ಪಿಸಲು ಯಾರಿಂದಲೂ ಸಾಧ್ಯವಿಲ್ಲ. ಸುಖ-ದುಃಖಗಳೆರಡೂ ನೀಚನಿಗಾಗಲೀ, ಸತ್ಪುರುಷರಿಗಾಗಲೀ, ವೃದ್ಧನಿಗಾಗಲೀ, ಬಾಲಕನಿಗಾಗಲೀ (ಪಂಡಿತನಿಗಾಗಲೀ-ಪಾಮರನಿಗಾಗಲೀ)–ಪ್ರಾಪ್ತವಾಗುತ್ತವೆ. (ಸತ್ಪುರುಷನು ಸುಖಪಡಲೇಬೇಕೆಂಬ ಮತ್ತು ದುಷ್ಟನು ಕಷ್ಟವನ್ನನುಭವಿಸಲೇಬೇಕೆಂಬ ನಿಯಮವಿಲ್ಲ. ಕೆಲವು ಸಮಯಗಳಲ್ಲಿ ಇದಕ್ಕೆ ವ್ಯತಿರಿಕ್ತವಾಗಿಯೂ ನಡೆಯಬಹುದು.) ಆದರೆ ಧರ್ಮವೇ ಶ್ರೇಷ್ಠವಾದುದು. ಧರ್ಮವನ್ನು ಪಾಲಿಸಿದ್ದೇ ಆದರೆ ಆ ಧರ್ಮವೇ ನಮ್ಮನ್ನು ರಕ್ಷಿಸುತ್ತದೆ. ಅಂತಹ ಧರ್ಮವು ಕುರುವಂಶದವರನ್ನು ಕೈಬಿಡದಿರಲಿ. ಪುನಃ ನೀನು ಸಭಾಭವನಕ್ಕೆ ಹೋಗಿ ಧರ್ಮದ ಹಿನ್ನೆಲೆಯಲ್ಲಿ ನಾನು ಕೇಳಿರುವ ಪ್ರಶ್ನೆಯನ್ನು ಸಭ್ಯರ ಮುಂದೆಯೇ

ಮಂಡಿಸು. ಧರ್ಮಾತ್ಮರೂ, ನೀತಿವಂತರೂ, ವರಿಷ್ಠರೂ ಆದ ಅವರ ತೀರ್ಪಿನಂತೆ ನಾನು ನಡೆಯಲು ಸಿದ್ಧಳಾಗಿರುವೆನು."

ದ್ರೌಪದಿಯ ಮಾತಿನಂತೆ ಸೂತನು ಪುನಃ ಸಭಾಭವನಕ್ಕೆ ಬಂದು ಅವಳು ಹೇಳಿದ ಮಾತುಗಳನ್ನೇ ಸಭ್ಯರ ಮುಂದೆ ಪುನರುಚ್ಚರಿಸಿದನು.

ಅವನ ಮಾತುಗಳನ್ನು ಕೇಳಿ ಸಭ್ಯರೆಲ್ಲರೂ ನತಶಿರರಾಗಿ ಕುಳಿತಿದ್ದರೇ ಹೊರತು ಯಾರೂ ಯಾವ ಮಾತನ್ನೂ ಆಡಲಿಲ್ಲ.

ದುರ್ಯೋಧನನ ಅಭಿಪ್ರಾಯಕ್ಕೆ ವಿರುದ್ಧವಾಗಿ ಯಾವ ಮಾತನ್ನಾಡಿದರೂ ಪ್ರಯೋಜನವಿಲ್ಲವೆಂಬುದು ಸಭ್ಯರ ಭಾವನೆಯಾಗಿದ್ದಿತು.

ದುರ್ಯೋಧನನ ಅಭಿಪ್ರಾಯವನ್ನು ತಿಳಿದ ಧಾರ್ಮಿಕನಾದ ಯುಧಿಷ್ಠಿರನು ತನ್ನ ನಂಬಿಕೆಗೆ ಅರ್ಹನಾದ ವಾರ್ತಾವಾಹಿಯನ್ನು ಕರೆದು ದ್ರೌಪದಿಗೆ ಹೇಳಿ ಕಳುಹಿಸಿದನು :

**ಏಕವಸ್ತ್ರಾ ತ್ವಧೋನೀವೀ ರೋದಮಾನಾ ರಜಸ್ವಲಾ ।**
**ಸಭಾಮಾಗಮ್ಯ ಪಾಞ್ಚಾಲಿ ಶ್ವಶುರಸ್ಯಾಗ್ರತೋ ಭವ ॥೧೯॥**

"ಪಾಂಚಾಲಿ! ನೀನು ರಜಸ್ವಲೆಯಾಗಿದ್ದರೂ, ಅಧೋವಸ್ತ್ರವೊಂದನ್ನೇ ಧರಿಸಿದ್ದರೂ ರೋದನಮಾಡುತ್ತಾ ಸಭಾಭವನಕ್ಕೆ ಬಂದು ನಿನ್ನ ಮಾವನ ಎದುರಿನಲ್ಲಿ ನಿಲ್ಲಬೇಕು.

ನೀನು ಆ ಸ್ಥಿತಿಯಲ್ಲಿ ಬಂದುದನ್ನು ಕಂಡು ಸಭ್ಯರೆಲ್ಲರೂ ಧೃತರಾಷ್ಟ್ರನ ಮಗನಾದ ದುಷ್ಟದುರ್ಯೋಧನನನ್ನು ಮನಸ್ಸಿನಲ್ಲಿಯೇ ನಿಂದಿಸುವಂತಾಗಬೇಕು."

ಧೀಮಂತನಾದ ದೂತನು ಒಡನೆಯೇ ಹೋಗಿ ರಹಸ್ಯದಲ್ಲಿ ಯುಧಿಷ್ಠಿರನ ಮಾತುಗಳನ್ನು ದ್ರೌಪದಿಯೊಡನೆ ಹೇಳಿದನು.

ಇತ್ತ ಸಭೆಯಲ್ಲಿದ್ದ ಸತ್ಯಸಂಧರಾದ ಪಾಂಡವರಿಗೆ ಮುಂದೇನುಮಾಡಬೇಕೆಂಬುದು ತೋರದಾಯಿತು. ಧರ್ಮವೆಂಬ ಪಾಶದಿಂದ ಬದ್ಧರಾಗಿದ್ದರು. ದುಃಖವನ್ನು ಕಷ್ಟದಿಂದ ಸಹಿಸಿಕೊಳ್ಳಬೇಕಾಗಿತ್ತು.

ಹೀಗೆ ದುಃಖಿತರಾಗಿ ಕುಳಿತಿದ್ದ ಪಾಂಡವರನ್ನು ನೋಡಿ ದುರ್ಯೋಧನನ

ಆನಂದಕ್ಕೆ ಪಾರವಿಲ್ಲದಾಯಿತು. “ಸೂತ! ನಿನಗಾರೂ ಉತ್ತರಿಸಲಾರರು. ದ್ರೌಪದಿಯೇ ಇಲ್ಲಿಗೆ ಬಂದು ಕೌರವರನ್ನು ಪ್ರಶ್ನಿಸಲಿ. ಆದುದರಿಂದ ನೀನು ಒಡನೆಯೇ ಹೋಗಿ ದ್ರೌಪದಿಯನ್ನು ಸೆಳೆದುಕೊಂಡು ಬಾ.”

ನಿಜ ; ಸ್ವಾಮಿಯ ಮಾತನ್ನು ಕೇಳಿಯೇ ತೀರಬೇಕು. ಬೇರೆ ಮಾರ್ಗವೇ ಇಲ್ಲ. ಆದರೆ ದ್ರೌಪದಿಗೆ ಉಂಟಾಗಬಹುದಾದ ಕೋಪದ ಮುಂದೆ ನಿಲ್ಲಲು ತನಗೆ ಸಾಧ್ಯವಿದೆಯೇ? ಸೂತನಿದನ್ನು ಯೋಚಿಸಿ ಭ್ರಾಂತನಾದನು. ಮುಂದೆ ತನಗೆ ದುರ್ಯೋಧನನಿಂದ ಉಂಟಾಗಬಹುದಾದ ದಂಡನೆಯನ್ನೂ ಪರಿಗಣಿಸದೇ ದುರ್ಯೋಧನನ ಮಾತನ್ನು ಕೇಳಿಯೂ ಕೇಳದಂತೆ ನಿರ್ಲಕ್ಷಿಸಿ ಸಭ್ಯರ ಮುಂದೆ ಕೈಜೋಡಿಸಿ ನಿಂತು ಹೇಳಿದನು :

“ಕೃಷ್ಣೆಗೆ ನಾನು ಏನೆಂದು ಹೇಳಲಿ?”

ಸೂತನ ಮಾತನ್ನು ಕೇಳಿ ದುರ್ಯೋಧನನೊಮ್ಮೆ ಅಟ್ಟಹಾಸದಿಂದ ನಕ್ಕು ದುಃಶಾಸನನಿಗೆ ಹೇಳಿದನು :

“ದುಃಶಾಸನ! ಈ ಮಂದಬುದ್ಧಿಯ ಸೂತನು ಭೀಮನನ್ನು ಕಂಡು ಹೆದರಿದ್ದಾನೆ. ಆದುದರಿಂದ ನೀನೇ ಹೋಗಿ ಯಾಜ್ಞಸೇನಿಯನ್ನು ಬಲಾತ್ಕಾರವಾಗಿ ಸೆಳೆದುಕೊಂಡು ಬಾ. ನಮ್ಮ ವಶರಾಗಿರುವ ಪಾಂಡವರು ನಿನ್ನನ್ನು ಏನು ತಾನೇ ಮಾಡಿಯಾರು?”

ಅಣ್ಣನ ಆಜ್ಞಾನುಸಾರವಾಗಿ ರಕ್ತಾಕ್ಷನಾದ ದುಃಶಾಸನನು ಮೇಲೆದ್ದು ಪಾಂಡವರ ನಿವಾಸಕ್ಕೆ ತೆರಳಿ, ಚಿಂತಾಮಗ್ನಳಾಗಿ ಕುಳಿತಿದ್ದ ರಾಜಕುಮಾರಿಯಾದ ಪಾಂಚಾಲಿಗೆ ಹೇಳಿದನು :

**ಏಹ್ಯೇಹಿ ಪಾಞ್ಚಾಲಿ ಜಿತಾಸಿ ಕೃಷ್ಣೇ**
**ದುರ್ಯೋಧನಂ ಪಶ್ಯ ವಿಮುಕ್ತಲಜ್ಜಾ ।**
**ಕುರೂನ್ಭಜಸ್ವಾಯತಪತ್ರನೇತ್ರೇ**
**ಧರ್ಮೇಣ ಲಬ್ಧಾಸಿ ಸಭಾಂ ಪರೈಹಿ ॥೨೭॥**

“ಬಾ ಬಾ, ದ್ರೌಪದಿ! ನೀನು ನಮ್ಮಿಂದ ಜಯಿಸಲ್ಪಟ್ಟಿರುವೆ. ಲಜ್ಜೆಯನ್ನು ಬದಿಗಿಟ್ಟು ರಾಜಾಧಿರಾಜನಾದ ದುರ್ಯೋಧನನ ದರ್ಶನ ಮಾಡು. ಪದ್ಮಪತ್ರಾಯತಾಕ್ಷಿಯೇ! ಕುರುವಂಶಪ್ರದೀಪರಾದ ನಮ್ಮ ಸೇವೆಗೆ ಸಿದ್ಧ

ಳಾಗು. ನಾವು ನಿನ್ನನ್ನು ಜೂಜಾಟದ ನಿಯಮಾನುಸಾರವಾಗಿಯೇ ಗೆದ್ದಿರುತ್ತೇವೆ. ಧರ್ಮದಿಂದಲೇ ನೀನು ನಮ್ಮಿಂದ ಲಬ್ಧಳಾಗಿರುವೆ. ಸಭಾಮಂದಿರಕ್ಕೆ ಬರಲು ಸಿದ್ಧಳಾಗು."

ದುಃಶಾಸನನ ಲಜ್ಜಾರಹಿತವಾದ ಮಾತುಗಳನ್ನು ಕೇಳಿ ದುಃಖಿತಳಾದ ದ್ರೌಪದಿಯು ತನ್ನೆರಡು ಕೈಗಳಿಂದಲೂ ಮುಖವನ್ನು ಮುಚ್ಚಿಕೊಂಡು ದುಷ್ಟನಾದ ದುಃಶಾಸನನಿಂದ ತಪ್ಪಿಸಿಕೊಳ್ಳಲು ವೃದ್ಧನಾದ ಧೃತರಾಷ್ಟ್ರನ ಅಂತಃಪುರದೆಡೆಗೆ ರೋದನಮಾಡುತ್ತಾ ಓಡಿದಳು.

ಅದನ್ನು ಕಂಡು ದುಃಶಾಸನನು ಕುಪಿತನಾಗಿ ಗರ್ಜನೆಮಾಡುತ್ತಾ ಅವಳನ್ನಟ್ಟಿಸಿಕೊಂಡು ಓಡಿಹೋಗಿ ಕೆದರಿದ, ನೀಳವಾದ, ನೀಲವಾದ ಮತ್ತು ಗುಂಗುರಾದ ದ್ರೌಪದಿಯ ಕೇಶರಾಶಿಯನ್ನು ಬಲವಾಗಿ ಹಿಡಿದು ನಿಲ್ಲಿಸಿದನು.

(ಈ ಪ್ರಸಂಗವನ್ನು ಬಣ್ಣಿಸುವಾಗ ವ್ಯಾಸರೂ ಬಹುದುಃಖಿತರಾಗಿ ಹೇಳುತ್ತಾರೆ.)

**ಯೇ ರಾಜಸೂಯಾವಭೃಥೇ ಜಲೇನ**
**ಮಹಾಕ್ರತೌ ಮನ್ತ್ರಪೂತೇನ ಸಿಕ್ತಾಃ ।**
**ತೇ ಪಾಣ್ಡವಾನಾಂ ಪರಿಭೂಯ ವೀರ್ಯಂ**
**ಬಲಾತ್ಪ್ರಮೃಷ್ಟಾ ಧೃತರಾಷ್ಟ್ರಜೇನ ॥೩೦॥**

"ಅಯ್ಯೋ! ರಾಜಸೂಯಯಾಗದ ಅವಭೃಥದಲ್ಲಿ ನಾನಾದಿಕ್ಕುಗಳಿಂದ ತಂದು ಮಂತ್ರಗಳಿಂದ ಶುದ್ಧಿಗೊಳಿಸಲ್ಪಟ್ಟ, ಪವಿತ್ರತಮವಾದ ತೀರ್ಥೋದಕಗಳಿಂದ ಅಭಿಷೇಚಿಸಲ್ಪಟ್ಟ ಸುಂದರವಾದ ಕೇಶರಾಶಿಯನ್ನಿಂದು ದುಷ್ಟದುಃಶಾಸನನು ಪಾಂಡವರ ಪರಾಕ್ರಮವನ್ನೂ ಲೆಕ್ಕಿಸದೇ ತನ್ನ ಬಿಗಿಯಾದ ಮುಷ್ಟಿಯಿಂದ ಹಿಡಿದುಬಿಟ್ಟನು."

**ಸ ತಾಂ ಪರಾಕೃಷ್ಯ ಸಭಾಸಮೀಪ-**
**ಮಾನೀಯ ಕೃಷ್ಣಾಮತಿದೀರ್ಘಕೇಶೀಮ್ ।**
**ದುಃಶಾಸನೋ ನಾಥವತೀಮನಾಥವ-**
**ಚ್ಚಕರ್ಷ ವಾಯುಃ ಕದಲೀಮಿವಾರ್ತಾಮ್ ॥೩೧॥**

ದುಃಶಾಸನನು ನೀಳವಾದ ಕೇಶರಾಶಿಯನ್ನು ಹೊಂದಿದ್ದ ದ್ರೌಪದಿಯನ್ನು ಹಿಡಿದು ಧೃತರಾಷ್ಟ್ರನ ಅಂತಃಪುರದ ಸಮೀಪದಿಂದ ಸಭಾಮಂದಿರದೊಳಕ್ಕೆ ದರ-ದರನೆ ಸೆಳೆದುತಂದನು. ಅವಳಿಗೆ ಮಹಾಪರಾಕ್ರಮಿಗಳಾದ ರಕ್ಷಕರಿದ್ದರೂ ಅನಾಥಳೊಬ್ಬಳನ್ನು ಸೆಳೆದುತರುವಂತೆ ದುಃಶಾಸನನು ಅವಳನ್ನು ಸೆಳೆದುತಂದನು. ಬಿರುಗಾಳಿಯು ಬಾಳೆಯ ಗಿಡವನ್ನು ಸೆಳೆದುಬಿಡುವಂತೆ–ದುಃಶಾಸನನು ದುಃಖಿತೆಯಾದ ದ್ರೌಪದಿಯನ್ನು ಸೆಳೆದುತಂದನು.



ದುಷ್ಟನಿಂದ ಸೆಳೆಯಲ್ಪಟ್ಟ ರಾಜಕುಮಾರಿಯು ಮೈಯನ್ನು ಕುಗ್ಗಿಸಿ ಕುಂದಿದ ಧ್ವನಿಯಿಂದ ದುಃಶಾಸನನನ್ನು ಕುರಿತು ಹೇಳಿದಳು :

“ಮಂದಬುದ್ಧಿಯವನೇ! ನನ್ನನ್ನು ಸೆಳೆದುಕೊಂಡು ಹೋಗುವುದು

ಖಂಡಿತವಾಗಿಯೂ ಉಚಿತವಲ್ಲ. ಅದರಲ್ಲಿಯೂ ನಾನು ರಜಸ್ವಲೆಯಾಗಿರುವಾಗ–ಏಕವಸ್ತ್ರದಿಂದ ಕೂಡಿರುವಾಗ–ಈ ಸಮಯದಲ್ಲಿ ನನ್ನನ್ನು ಸಭಾಮಂದಿರದೊಳಕ್ಕೆ ಸರ್ವಥಾ ಸೆಳೆದುಕೊಂಡು ಹೋಗಬೇಡ."

ಈ ಮಾತನ್ನು ಕೇಳಿ ದುಃಶಾಸನನು ಕಪ್ಪಾದ ಕೇಶರಾಶಿಗಳಿಂದ ಕೂಡಿದ್ದ ಮುಂದಲೆಯನ್ನು ಹಿಡಿದು ದ್ರೌಪದಿಯನ್ನು ಬಲವಾಗಿ ಸೆಳೆಯತೊಡಗಿದನು. ಆ ಸಮಯದಲ್ಲಿ ಕೃಷ್ಣೆಯು ಕೃಷ್ಣನನ್ನೂ, ಜಿಷ್ಣುವನ್ನೂ, ನರನನ್ನೂ, ನಾರಾಯಣನನ್ನೂ ರಕ್ಷಣೆಗಾಗಿ ಕೂಗಿಕೊಳ್ಳುತ್ತಿರಲಾಗಿ ದುಃಶಾಸನನು ಅವಳನ್ನು ಕುರಿತು ಹೇಳಿದನು :

**ರಜಸ್ವಲಾ ವಾ ಭವ ಯಾಜ್ಞಸೇನಿ**
**ಏಕಾಮ್ಬರಾ ವಾಪ್ಯಥವಾ ವಿವಸ್ತ್ರಾ ।**
**ದ್ಯೂತೇ ಜಿತಾ ಚಾಸಿ ಕೃತಾಸಿ ದಾಸೀ**
**ದಾಸೀಷು ವಾಸಶ್ಚ ಯಥೋಪಜೋಷಮ್ ॥೩೪॥**

"ಯಾಜ್ಞಸೇನಿ! ನೀನು ರಜಸ್ವಲೆಯಾಗಿರು ; ಏಕವಸ್ತ್ರದಲ್ಲಿರು ; ಅಥವಾ ವಸ್ತ್ರಹೀನಳಾಗಿಯೇ ಇರು. ನೀನು ನಮ್ಮಿಂದ ಪಗಡೆಯಾಟದಲ್ಲಿ ಜಯಿಸಲ್ಪಟ್ಟನಂತರ ನಮ್ಮ ದಾಸಿಯಾಗಿರುವೆ. ಆದುದರಿಂದ ನಮ್ಮ ಅಭಿಪ್ರಾಯದಂತೆ ನಮ್ಮ ದಾಸಿಯರ ಸಮೂಹದಲ್ಲಿ ಇರಬೇಕಾದುದು ನಿನ್ನ ಇಂದಿನ ಕರ್ತವ್ಯವಾಗಿದೆ. ದಾಸಿಯರು ಸವಸ್ತ್ರರಾಗಿಯೇ ಇರಬೇಕೆಂಬ ನಿಯಮವೇನೂ ಇಲ್ಲ."

ಎಂದು ಹೇಳುತ್ತಾ ದುಃಶಾಸನನು ಭವ್ಯಸಭಾಮಂದಿರದ ಮಧ್ಯಭಾಗಕ್ಕೆ ದ್ರೌಪದಿಯನ್ನು ಸೆಳೆದುತಂದು ನಿಲ್ಲಿಸಿದನು.

ಕೆದರಿದ ಕೇಶರಾಶಿಯಿಂದ ಕೂಡಿದವಳಾಗಿ, ಕಳಚಿ ಬೀಳುತ್ತಿರುವಂತಿರುವ ಏಕವಸ್ತ್ರವನ್ನು ಧರಿಸಿದವಳಾಗಿ, ದುಃಶಾಸನನಿಂದ ಸೆಳೆಯಲ್ಪಟ್ಟವಳಾಗಿ, ನಾಚಿಕೆಯಿಂದ ಕೂಡಿದವಳಾಗಿ, ಕೋಪಾವಿಷ್ಟಳಾಗಿ, ದ್ರೌಪದಿಯು ಈ ಮಾತುಗಳನ್ನು ಹೇಳಿದಳು :

**ಇಮೇ ಸಭಾಯಾಮುಪನೀತಶಾಸ್ತ್ರಾಃ**
**ಕ್ರಿಯಾವನ್ತಃ ಸರ್ವ ಏವೇನ್ದ್ರಕಲ್ಪಾಃ ।**

**ಗುರುಸ್ಥಾನಾ ಗುರವಶ್ಚೈವ ಸರ್ವೇ**
**ತೇಷಾಮಗ್ರೇ ನೋತ್ಸಹೇ ಸ್ಥಾತುಮೇವಮ್ ॥೩೬॥**

"ಈ ಭವ್ಯಸಭಾಮಂದಿರದಲ್ಲಿ ಸಕಲಶಾಸ್ತ್ರಪರಿಣತರಿದ್ದಾರೆ. ಸಕಲ ನೀತಿಗಳನ್ನೂ ತಿಳಿದವರಿದ್ದಾರೆ. ಕ್ರಿಯಾವಂತರಿದ್ದಾರೆ. ಇಂದ್ರಸಮಾನರಾದ ರಾಜರಿದ್ದಾರೆ. ನನಗೆ ಗುರುಸ್ಥಾನದಲ್ಲಿರಲು ಯೋಗ್ಯರಾದವರೂ ಇಲ್ಲಿದ್ದಾರೆ. ನನ್ನ ಗುರುಗಳೂ ಇದ್ದಾರೆ. ಇಂತಹ ಸಭ್ಯರ ಮುಂದೆ ಈ ದುರವಸ್ಥೆಯಲ್ಲಿ ನಾನು ನಿಲ್ಲಲಾರೆನು."

ದ್ರೌಪದಿಯು ಹೀಗೆ ಸಭ್ಯರನ್ನು ದೈನ್ಯದಿಂದ ಪ್ರಾರ್ಥಿಸಿಕೊಂಡರೂ ದುಃಶಾಸನನು ದ್ರೌಪದಿಯ ಕೇಶರಾಶಿಯನ್ನು ಹಿಡಿದು ಎಳೆಯುತ್ತಲೇ ಇದ್ದನು. ಬಹುದುಃಖಿತಳಾದ ಅವಳು ದುಃಶಾಸನನನ್ನು ಕುರಿತು ಗಡುಸಾದ ಈ ಮಾತುಗಳನ್ನು ಹೇಳಿದಳು :

"ದುರುಳನೇ! ನನ್ನನ್ನು ನೀನು ಸೆಳೆಯಬೇಡ. ವಸ್ತ್ರಹೀನಳನ್ನಾಗಿ ಮಾಡಬೇಡ. ನಿನ್ನೀ ಕುತ್ಸಿತಕಾರ್ಯವನ್ನು ನನ್ನ ಪತಿಗಳು ಖಂಡಿತವಾಗಿಯೂ ಕ್ಷಮಿಸಲಾರರು. ಇಂದ್ರನೊಡನೆ ದೇವತೆಗಳೆಲ್ಲರೂ ಸಹಾಯಕರಾಗಿ ಬಂದರೂ ಅವರಿಂದ ನೀನು ವಿಮೋಕ್ಷಣವನ್ನು ಪಡೆಯಲಾರೆ.

**ಧರ್ಮೇ ಸ್ಥಿತೋ ಧರ್ಮಸುತೋ ಮಹಾತ್ಮಾ**
**ಧರ್ಮಶ್ಚ ಸೂಕ್ಷ್ಮೋ ನಿಪುಣೋಪಲಕ್ಷ್ಯಃ ।**
**ವಾಚಾಪಿ ಭರ್ತುಃ ಪರಮಾಣುಮಾತ್ರ-**
**ಮಿಚ್ಛಾಮಿ ದೋಷಂ ನ ಗುಣಾನ್ವಿಸೃಜ್ಯ ॥೩೭॥**

ಮಹಾತ್ಮನಾದ ಧರ್ಮಪುತ್ರನು ಈ ಸಮಯದಲ್ಲಿ ಧರ್ಮಕ್ಕೆ ಕಟ್ಟುಬಿದ್ದು ಸುಮ್ಮನೇ ಕುಳಿತಿದ್ದಾನೆ. ಧರ್ಮವಾದರೋ ಬಹಳ ಸೂಕ್ಷ್ಮವಾದುದು. ಜ್ಞಾನಿಗಳಾದವರು ಮಾತ್ರವೇ ಧರ್ಮಸೂಕ್ಷ್ಮವೇನೆಂಬುದನ್ನು ತಿಳಿಯಲು ಸಮರ್ಥರಾಗಿರುತ್ತಾರೆ. ಧರ್ಮಾತ್ಮನಾದ ನನ್ನ ಪತಿಯಲ್ಲಿರುವ ಸಕಲಸದ್ಗುಣಗಳನ್ನೂ ಮರೆತು ಒಂದು ಅಣುವಿನಷ್ಟಾದರೂ ದೋಷವಿದೆ ಯೆಂದು ನಾನು ಮನಸ್ಸಿನಿಂದಲೂ ಎಣಿಸಲಾರೆನು ; ಮಾತಿನಿಂದಲೂ ಹೇಳಲಾರೆನು."

(ವೀರರಮಣಿಯು ಎಂತಹ ಸಮಯದಲ್ಲಿ ಎಂತಹ ರತ್ನಪ್ರಾಯವಾದ ಮಾತನಾಡಿದಳೆಂಬುದು ಗಮನಾರ್ಹ. ತನ್ನನ್ನು ಪಣವನ್ನಾಗಿಟ್ಟು ಸೋತು ಹೋಗಿ ತನ್ನ ಆ ದುರ್ದೆಸೆಗೆ ಕಾರಣನಾದ ಧರ್ಮಜನ ಮೇಲೆ ದ್ರೌಪದಿಯು ಹೌಹಾರಿ ಬೀಳಲೇಬೇಕಾಗಿತ್ತು. ಆ ಸಮಯದಲ್ಲಿ ಅವಳ ಸ್ಥೈರಣೆಯೂ ಮತ್ತು ಅವಳ ಮಾತುಗಳೂ ಅನ್ಯಾದೃಶವಾದುವು.)

ಧರ್ಮಜನ ವಿಷಯದಲ್ಲಿ ಹೀಗೆ ಹೇಳಿದನಂತರ ಸಾಧ್ವಿಯಾದ ದ್ರೌಪದಿಯು ಪುನಃ ದುಃಶಾಸನನಿಗೆ ಹೇಳಿದಳು :

**ಇದಂ ತ್ವಕಾರ್ಯಂ ಕುರುವೀರಮಧ್ಯೇ**
**ರಜಸ್ವಲಾಂ ಯತ್ಪರಿಕರ್ಷಸೇ ಮಾಮ್ ।**
**ನ ಚಾಪಿ ಕಶ್ಚಿತ್ಕುರುಷೇಽತ್ರ ಕುತ್ಸಾಂ**
**ಧ್ರುವಂ ತವೇದಂ ಮತಮಭ್ಯುಪೇತಾಃ ॥೩೯॥**

“ದುಷ್ಟನಾದ ನೀನು ರಜಸ್ವಲೆಯಾದ ನನ್ನನ್ನು ಸಭಾಮಂದಿರಕ್ಕೆ ಸೆಳೆದುತಂದಿರುವೆ. ಇದು ನಿಶ್ಚಯವಾಗಿಯೂ ಅಕಾರ್ಯವೆಂಬುದರಲ್ಲಿ ಸಂಶಯಲೇಶವೂ ಇಲ್ಲ. ಆದರೆ ನಿನ್ನ ಈ ಅಕಾರ್ಯವನ್ನು ಈ ಮಹಾ ಸಭೆಯಲ್ಲಿ ಕುಳಿತಿರುವ ಯಾರೊಬ್ಬರೂ ಖಂಡಿಸುತ್ತಿಲ್ಲ. ಇದು ನನಗೆ ಬಹಳ ಆಶ್ಚರ್ಯವೆನಿಸಿದೆ. ನಿಶ್ಚಯವಾಗಿಯೂ ಇಲ್ಲಿ ಕುಳಿತಿರುವವರೆಲ್ಲರಿಗೂ ಇದು ಸಮ್ಮತವೆಂದೇ ಭಾವಿಸಬೇಕಾಗಿದೆ.

**ಧಿಗಸ್ತು ನಷ್ಟಃ ಖಲು ಭಾರತಾನಾಂ**
**ಧರ್ಮಸ್ತಥಾ ಕ್ಷತ್ರವಿದಾಂ ಚ ವೃತ್ತಮ್ ।**
**ಯತ್ರ ಹ್ಯತೀತಾಂ ಕುರುಧರ್ಮವೇಲಾಂ**
**ಪ್ರೇಕ್ಷನ್ತಿ ಸರ್ವೇ ಕುರವಃ ಸಭಾಯಾಮ್ ॥೪೦॥**

ಇವರ ಇಂತಹ ದುಷ್ಟಭಾವನೆಗಳಿಗೆ ಧಿಕ್ಕಾರವಿರಲಿ! ಭರತವಂಶೀಯರ ಧಾರ್ಮಿಕತೆಯು ಇಂದು ಹಾಳಾಗಿಹೋಯಿತು. ಅಂತೆಯೇ ಕ್ಷಾತ್ರ ಧರ್ಮಾವಲಂಬಿಗಳಾದ ಕ್ಷತ್ರಿಯರ ಸದಾಚಾರಗಳೂ ಹಾಳಾಗಿಹೋದುವು. ಹಾಗಿಲ್ಲದಿದ್ದರೆ ಈ ಸಭಾಭವನದಲ್ಲಿ ಕುಳಿತಿರುವವರಲ್ಲಿ ಯಾರೇ ಆದರೂ ಕೌರವರ ಧರ್ಮಮರ್ಯಾದೆಯ ಉಲ್ಲಂಘನೆಯನ್ನು ಕಣ್ಣಿನಿಂದ ನೋಡುತ್ತಾ ಮೌನವಾಗಿ ಕುಳಿತುಕೊಳ್ಳುತ್ತಿರಲಿಲ್ಲ.

**ದ್ರೋಣಸ್ಯ ಭೀಷ್ಮಸ್ಯ ಚ ನಾಸ್ತಿ ಸತ್ತ್ವಂ**
**ಕ್ಷತ್ತುಸ್ತಥೈವಾಸ್ಯ ಮಹಾತ್ಮನೋಽಪಿ ।**
**ರಾಜಸ್ತಥಾ ಹೀಮಮಧರ್ಮಮುಗ್ರಂ**
**ನ ಲಕ್ಷಯನ್ತೇ ಕುರುವೃದ್ಧಮುಖ್ಯಾಃ ॥೪೧॥**

ಮಹಾಪರಾಕ್ರಮಿಗಳಾದ ಈ ದ್ರೋಣ-ಭೀಷ್ಮರೂ ನಿರ್ವೀರ್ಯರಾಗಿರುವಂತೆ ಕಾಣುತ್ತದೆ. ಮಹಾಮೇಧಾವಿಯಾದ, ಮಹಾತ್ಮನಾದ ವಿದುರನೂ, ಮಹಾರಾಜನಾದ ಧೃತರಾಷ್ಟ್ರನೂ ವಿವೇಕಶೂನ್ಯರಂತೆ ಕಾಣುತ್ತಿದ್ದಾರೆ. ಹಾಗಿಲ್ಲದಿದ್ದರೆ ಇವರೆಲ್ಲರೂ ಈ ಅಕಾರ್ಯವನ್ನು ಪ್ರತ್ಯಕ್ಷವಾಗಿ ನೋಡುತ್ತಿದ್ದರೂ ಮೌನದಿಂದ ಕುಳಿತಿರಲು ಸಾಧ್ಯವಾಗುತ್ತಿರಲಿಲ್ಲ."

ಇವೇ ಮುಂತಾಗಿ ಹೇಳುತ್ತಾ ದ್ರೌಪದಿಯು ರೋದನಮಾಡುತ್ತಿದ್ದಳು. ಆದರೆ ಆ ಸಭೆಯಲ್ಲಿ ದುರ್ಯೋಧನನಿಗೆ ಪ್ರತಿಯಾಗಿ ಮಾತನಾಡುವ ಸಾಮರ್ಥ್ಯವು ಯಾರಿಗಿರುವುದು? ಪಾಂಡವರೆಲ್ಲರೂ ಧರ್ಮಪಾಶದಿಂದ ಬದ್ಧರಾಗಿದ್ದರು. ಮಂತ್ರದಿಂದ ಬದ್ಧವಾದ ಸರ್ಪಗಳು ಬುಸುಗುಟ್ಟುವಂತೆ–ನಿಟ್ಟುಸಿರುಬಿಡುತ್ತಿದ್ದ ಪಾಂಡವರನ್ನು ದ್ರೌಪದಿಯೊಮ್ಮೆ ವೀಕ್ಷಿಸಿದಳು. ಅವಳ ದೈನ್ಯದೃಷ್ಟಿಯನ್ನು ನೋಡಿದೊಡನೆಯೇ ಅವರ ಕೋಪವು ಇಮ್ಮಡಿಯಾಯಿತು. ರಾಜ್ಯ-ಕೋಶಾದಿಗಳು, ಧನ-ಕನಕ-ವಸ್ತುಗಳು ಹೋದಾಗಲೂ ಅವರಿಗೆ ಅಷ್ಟು ಕೋಪವಾಗಲೀ, ಅಷ್ಟು ಸಂಕಟವಾಗಲೀ ಆಗಿರಲಿಲ್ಲ. ಆದರೆ ಕೃಷ್ಣೆಯ ಕಟಾಕ್ಷವೀಕ್ಷಣೆಯಾದೊಡನೆಯೇ ಅವರ ಕೋಪಾಗ್ನಿಗೆ ಆಜ್ಯಧಾರೆಯು ಬಿದ್ದಂತಾಗಿ ಪ್ರಜ್ವಲಿಸಿತು ; ದುಃಖವೂ ಹೆಚ್ಚಿತು.

ನಿಸ್ಸಹಾಯಕರಾಗಿ ಕುಳಿತಿದ್ದ ಪಂಚಪಾಂಡವರನ್ನು ದ್ರೌಪದಿಯು ನೋಡುತ್ತಿದ್ದಂತೆಯೇ ಕ್ರೂರಿಯಾದ ದುಃಶಾಸನನು ಅವಳ ಮುಂದಲೆಯನ್ನು ಗಟ್ಟಿಯಾಗಿ ಹಿಡಿದೆಳೆದು 'ಎಲ್ಲೆ ದಾಸಿ! ಎಲ್ಲೆ ದಾಸಿ!'–ಎಂದು ಮುಖಕ್ಕೆ ಕೈತಿರುವಿ ಮೂದಲಿಸಿ ಗಟ್ಟಿಯಾಗಿ ನಕ್ಕನು.

ಅವನ ಆ ಅನಾರ್ಯವರ್ತನೆಯು ಕರ್ಣನಿಗೆ ಮಹಾನಂದವನ್ನುಂಟುಮಾಡಿತು. 'ಭಲೆ! ಸಾಧು!'–ಎನ್ನುತ್ತಾ ಗಟ್ಟಿಯಾಗಿ ನಕ್ಕನು. ಶಕುನಿಯು

ಚಪ್ಪಾಳೆ ತಟ್ಟುವುದರ ಮೂಲಕ ಕರ್ಣನ ಆನಂದಕ್ಕೆ ಹಿಮ್ಮೇಳ ಹಾಕಿಕೊಟ್ಟನು. ಆ ಮಹಾಸಭೆಯಲ್ಲಿ ಕರ್ಣ, ಶಕುನಿ, ದುರ್ಯೋಧನ–ಈ ಮೂವರ ಹೊರತಾಗಿ ಮತ್ತಾರಿಗೂ ದುಃಶಾಸನನ ಕಾರ್ಯವು ಸಹ್ಯವಾಗಲಿಲ್ಲ. ಉಳಿದವರೆಲ್ಲರೂ ದ್ರೌಪದಿಯ ದುರವಸ್ಥೆಯನ್ನು ಕಂಡು ಮರುಗುತ್ತಿದ್ದರು.

ಅವೆಲ್ಲವನ್ನೂ ನೋಡುತ್ತಿದ್ದ ಭೀಷ್ಮನು ದ್ರೌಪದಿಯ ಪ್ರಶ್ನೆಗೆ ಉತ್ತರಿಸಲು ಯತ್ನಿಸಿದನು :

**ನ ಧರ್ಮಸೌಕ್ಷ್ಮ್ಯಾತ್ಸುಭಗೇ ವಿವೇಕ್ತುಂ**
**ಶಕ್ನೋಮಿ ತೇ ಪ್ರಶ್ನಮಿಮಂ ಯಥಾವತ್ ।**
**ಅಸ್ವಾಮ್ಯಶಕ್ತಃ ಪಣಿತುಂ ಪರಸ್ವಂ**
**ಸ್ತ್ರಿಯಾಶ್ಚ ಭರ್ತುರ್ವಶತಾಂ ಸಮೀಕ್ಷ್ಯ ॥೪೭॥**

“ಮಂಗಳಾಂಗಿಯೇ! ಧರ್ಮವು ಬಹಳ ಸೂಕ್ಷ್ಮವಾದುದು. ಈ ಕಾರಣದಿಂದಾಗಿ ನಾನು ನಿನ್ನ ಪ್ರಶ್ನೆಗೆ ಉತ್ತರಿಸಲು ಅಸಮರ್ಥನಾಗಿದ್ದೇನೆ. ತನ್ನನ್ನೇ ಸೋತುಕೊಂಡ ಮೇಲೆ ದಾಸನಾದವನಿಗೆ ಇತರರನ್ನು ಪಣವನ್ನಾಗಿಡುವ ಸ್ವಾತಂತ್ರ್ಯವಿರುವುದೇ?–ಎಂಬ ಪ್ರಶ್ನೆಗೆ ಉತ್ತರವಾಗಿ ನಾನಿಷ್ಟು ಹೇಳಬಲ್ಲೆನು. ಇತರರ ವಸ್ತುಗಳನ್ನು ಪಣವನ್ನಾಗಿಡಲು ಅವನು ಶಕ್ತನಲ್ಲ. ನಿಜಭಾರ್ಯೆಯನ್ನು ಪಣವನ್ನಾಗಿಟ್ಟಿದ್ದು ತಪ್ಪೇ?–ಎಂಬ ವಿಷಯವನ್ನು ಪರ್ಯಾಲೋಚಿಸಬೇಕಾಗಿದೆ. ಏಕೆಂದರೆ : ಜೂಜಾಟದಲ್ಲಿ ತಾನು ಸೋತುಹೋದರೂ ಅವನಿಗೆ ಭಾರ್ಯೆಯ ಮೇಲಿರುವ ವಿಶೇಷ ಸಂಬಂಧವು ಇದ್ದೇ ಇರುವುದು. ಹೆಂಡತಿಯು ಗಂಡನಿಗೆ ಯಾವಾಗಲೂ ಅಧೀನಳು. ಆದುದರಿಂದ ಹೆಂಡತಿಯನ್ನು ಪಣವಾಗಿಡಬಹುದೆಂದೂ ತೋರುತ್ತದೆ.

**ತ್ಯಜೇತ ಸರ್ವಾಂ ಪೃಥಿವೀಂ ಸಮೃದ್ಧಾಂ**
**ಯುಧಿಷ್ಠಿರೋ ಧರ್ಮಮಥೋ ನ ಜಹ್ಯಾತ್ ।**
**ಉಕ್ತಂ ಜಿತೋಽಸ್ಮೀತಿ ಚ ಪಾಣ್ಡವೇನ**
**ತಸ್ಮಾನ್ನ ಶಕ್ನೋಮಿ ವಿವೇಕ್ತುಮೇತತ್ ॥೪೮॥**

ಏಕೆಂದರೆ : ಧರ್ಮಜನು ಸಂಪತ್ಸಮೃದ್ಧವಾದ ಭೂವಲಯವನ್ನೇ ತ್ಯಾಗಮಾಡಿಯಾನು. ಆದರೆ ಧರ್ಮವನ್ನೆಂದಿಗೂ ತ್ಯಾಗಮಾಡಲಾರನು. ಇದು ನಿಶ್ಚಯ ಮತ್ತು ಸತ್ಯ. (ಅಧರ್ಮವೆನಿಸಿದ್ದರೆ ದ್ರೌಪದಿಯನ್ನು ಪಣವನ್ನಾಗಿಡುತ್ತಿರಲಿಲ್ಲ.) ಮೇಲಾಗಿ ಯುಧಿಷ್ಠಿರನು–'ನಾನು ದ್ರೌಪದಿಯನ್ನೂ ಆಟದಲ್ಲಿ ಸೋತಿದ್ದೇನೆ ; ಶಕುನಿಯಿಂದ ಜಯಿಸಲ್ಪಟ್ಟಿದ್ದೇನೆ'–ಎಂದು ತಾನೇ ಹೇಳಿ ತನ್ನ ಸೋಲನ್ನು ಒಪ್ಪಿಕೊಂಡಿದ್ದಾನೆ. ಹೀಗಿರುವುದರಿಂದ ಇದು ಧರ್ಮವೇ-ಅಧರ್ಮವೇ? ಎಂಬ ವಿಷಯದಲ್ಲಿ ತೀರ್ಪನ್ನೀಯಲು ನಾನು ಅಸಮರ್ಥನಾಗಿದ್ದೇನೆ.

**ದ್ಯೂತೇಽದ್ವಿತೀಯಃ ಶಕುನಿರ್ನರೇಷು**
**ಕುನ್ತೀಸುತಸ್ತೇನ ನಿಸೃಷ್ಟಕಾಮಃ ।**
**ನ ಮನ್ಯತೇ ತಾಂ ನಿಕೃತಿಂ ಯುಧಿಷ್ಠಿರ-**
**ಸ್ತಸ್ಮಾನ್ನ ತೇ ಪ್ರಶ್ನಮಿಮಂ ಬ್ರವೀಮಿ ॥೪೯॥**

ಜೂಜಾಟದಲ್ಲಿ ಶಕುನಿಯು ಅದ್ವಿತೀಯನು. ಧರ್ಮಜನು ಶಕುನಿಗೆ ಸಾಟಿಯಲ್ಲವೆಂಬುದು ನಮ್ಮೆಲ್ಲರಿಗೂ ತಿಳಿದ ವಿಷಯವೇ ಆಗಿದೆ. ಮೇಲಾಗಿ ಶಕುನಿಯು ಕುಟಿಲತೆಯಿಂದ ಆಟವಾಡಿದ್ದಾನೆ. ಆದರೆ ಧರ್ಮಜನು ಮಾತ್ರ–'ಶಕುನಿಯು ಕುಟಿಲತೆಯಿಂದ ತನ್ನನ್ನು ಸೋಲಿಸಿದನು'–ಎಂದು ಹೇಳಲು ಸಿದ್ಧನಾಗಿಲ್ಲ. ಸ್ವಪ್ರೇರಣೆಯಿಂದಲೇ ಪಣಗಳನ್ನಿಟ್ಟು ಸೋಲುತ್ತಿದ್ದು ಸೋಲನ್ನೂ ಒಪ್ಪಿಕೊಳ್ಳುತ್ತಿದ್ದನು. ಹೀಗಿರುವಾಗ ಧರ್ಮಜನು ಮಾಡಿರುವುದು ಧರ್ಮವಿರುದ್ಧವಾಗಿದೆ–ಎಂದು ಹೇಳಲೂ ಸಾಧ್ಯವಿಲ್ಲ. ಆದುದರಿಂದ ನಾನಂತೂ ಈ ವಿಷಯದಲ್ಲಿ 'ಇದಮಿತ್ಥಂ' ಎಂದು ತೀರ್ಮಾನ ಕೊಡಲು ನಿಶ್ಚಯವಾಗಿಯೂ ಅಸಮರ್ಥನಾಗಿರುವೆನು."

(ತನ್ನನ್ನೇ ಸೋತು ದಾಸನಾದವನು ಬೇರೆ ವಸ್ತುವನ್ನು ಪಣವನ್ನಾಗಿಡಬಹುದೇ? ದಾಸನಾದವನಿಗೆ ತನ್ನ ಹೆಂಡತಿಯ ಮೇಲೂ ಅಧಿಕಾರವಿಲ್ಲವೇ?–ಇದೊಂದು ಪ್ರಬಲವಾದ ಸಂದೇಹ. ಧರ್ಮಿಷ್ಠನಾದ ಯುಧಿಷ್ಠಿರನು ಅಧರ್ಮಾಚರಣೆಯನ್ನು ಮಾಡುವನೇ? ಶಕುನಿಯು ಮೋಸದ

ಜೂಜಾಡಿದನೆಂದು ಧರ್ಮರಾಜನೇ ಹೇಳದಿರುವಾಗ ಬೇರೆಯವರು ಹೇಳುವುದೇನಿದೆ? ಇದು ಮತ್ತೊಂದು ಸಂಶಯ. ಈ ಕಾರಣಗಳಿಂದ ಭೀಷ್ಮನು ತಾನು 'ಇದಮಿತ್ಥಂ' ಎಂದು ನಿಶ್ಚಯಿಸಲು ಅಶಕ್ತನೆನ್ನುತ್ತಾನೆ.)

ಭೀಷ್ಮನ ಮಾತಿನಲ್ಲಿ ಯುಧಿಷ್ಠಿರನದು ಸ್ವಯಂಕೃತಾಪರಾಧ–ಎಂಬ ಸೂಚನೆಯಿದ್ದಿತು. ಸಾಧ್ವಿಯಾದ ದ್ರೌಪದಿಯು ಅದನ್ನು ಸಂಪೂರ್ಣವಾಗಿ ನಿರಾಕರಿಸುತ್ತಾ ಭೀಷ್ಮನಿಗೆ ಹೇಳಿದಳು :

"ರಾಜನು ದ್ಯೂತಕ್ಕೆ ಆಹ್ವಾನಿತನಾಗಿ ಬಂದನು. ತಾನಾಗಿಯೇ ಬರಲಿಲ್ಲ. ಪಗಡೆಯಾಟದಲ್ಲಿ ಹೆಚ್ಚಿನ ಪರಿಶ್ರಮವಿಲ್ಲದ ಇವನನ್ನು ಆಟದಲ್ಲಿ ನಿಷ್ಣಾತನಾದ, ಕಪಟಿಯಾದ, ಪಕ್ಕಾ ಜೂಜುಕೋರನಾದ ಶಕುನಿಯೊಡನೆ ಆಡಲು ಒಪ್ಪಿಸಲಾಯಿತು. ಆ ಸಮಯದಲ್ಲಿ ಪಣವನ್ನಿಡುವುದು ರಾಜ ನಾದವನಿಗೆ ಅನಿವಾರ್ಯ. ಧರ್ಮಜನು ಸ್ವೇಚ್ಛೆಯಿಂದ ಪಣಗಳನ್ನಿಟ್ಟು ಸೋತ ನೆಂದು ನೀವು ಹೇಗೆ ಹೇಳುವಿರಿ?

**ಅಶುದ್ಧಭಾವೈರ್ನಿಕೃತಿಪ್ರವೃತ್ತೈ-**
**ರಬುಧ್ಯಮಾನಃ ಕುರುಪಾಣ್ಡವಾಗ್ರ್ಯಃ ।**
**ಸಮ್ಭೂಯ ಸರ್ವೈಶ್ಚ ಜಿತೋಽಪಿ ಯಸ್ಮಾ-**
**ತ್ಪಶ್ಚಾದಯಂ ಕೈತವಮಭ್ಯುಪೇತಃ ॥೫೧॥**

ಕುರು-ಪಾಂಡವರಿಬ್ಬರಿಗೂ ಹಿರಿಯನಾದ ಧರ್ಮಜನು ಅಶುದ್ಧಭಾವ ವುಳ್ಳ ದುರಾತ್ಮರಾದ ಜೂಜುಕೋರರ ಪ್ರೇರಣೆಯಂತೆ ಆಟವಾಡಿ ಪರಾಜಿತ ನಾದನು. ಇವನಿಗೆ ನಿಶ್ಚಯವಾಗಿಯೂ ಶಕುನಿಯ ಕುಟಿಲತೆಯು ಅರ್ಥ ವಾಗಲಿಲ್ಲ.

ತನ್ನನ್ನೇ ಪಣವನ್ನಾಗಿಟ್ಟುಕೊಂಡು ಸೋತುಹೋದನು. ತಾನೇ ಸೋತುಕೊಂಡನಂತರ, ತಾನು ಪರರಿಗೆ ದಾಸನಾದನಂತರ–ತಾನು ಮತ್ತೊ ಬ್ಬರ ದಾಸನೆಂದು ತಿಳಿದಿದ್ದರೂ ತನ್ನಲ್ಲಿ ಯಾವುದೊಂದು ವಸ್ತುವೂ ಉಳಿ ದಿಲ್ಲವೆಂದು ತಿಳಿದಿದ್ದರೂ ಅನ್ಯವಸ್ತುವನ್ನು ಹೇಗೆ ಪಣವನ್ನಾಗಿಟ್ಟನು?" (ಇದೂ ಕೂಡ ದುಷ್ಟರ ಪ್ರೇರಣೆ. ಹಾಗಿಲ್ಲದಿದ್ದರೆ ಧರ್ಮಾತ್ಮನಾದ ಧರ್ಮ

ಜನು ತನ್ನನ್ನೆಂದಿಗೂ ಪಣವನ್ನಾಗಿಡುತ್ತಿರಲಿಲ್ಲ–ಎಂಬುದು ದ್ರೌಪದಿಯ ಖಚಿತವಾದ ಅಭಿಪ್ರಾಯ. ಶಕುನಿಯು ದ್ರೌಪದಿಯ ವಿಷಯವನ್ನೆತ್ತಿದ ನಂತರವೇ ಯುಧಿಷ್ಠಿರನು ಅವಳನ್ನೂ ಪಣವನ್ನಾಗಿಡಲು ಮುಂದಾದನು.)

ಮುಂದೆ ದ್ರೌಪದಿಯು ಬಹಳ ಸಂಕಟದಿಂದ ಸಭ್ಯರನ್ನು ಪ್ರಶ್ನಿಸುತ್ತಾಳೆ:

**ತಿಷ್ಠನ್ತಿ ಚೇಮೇ ಕುರವಃ ಸಭಾಯಾ–**
**ಮೀಶಾಃ ಸುತಾನಾಂ ಚ ತಥಾ ಸ್ನುಷಾಣಾಮ್ ।**
**ಸಮೀಕ್ಷ್ಯ ಸರ್ವೇ ಮಮ ಚಾಪಿ ವಾಕ್ಯಂ**
**ವಿಬ್ರೂತ ಮೇ ಪ್ರಶ್ನಮಿಮಂ ಯಥಾವತ್ ॥೫೨॥**

"ಈ ಸಭೆಯಲ್ಲಿ ನನ್ನಂತಹ ಅಬಲೆಯರ ತಂದೆಯರೂ ಇದ್ದಾರೆ ; ಮಾವಂದಿರೂ ಇದ್ದಾರೆ. ಅವರ ಹೆಣ್ಣುಮಕ್ಕಳಿಗೆ ಅಥವಾ ಸೊಸೆಯರಿಗೆ ಇದೇ ವಿಧವಾದ ದುರವಸ್ಥೆಯೊದಗಿದ್ದರೆ ಏನು ಮಾಡುತ್ತಿದ್ದರೆಂಬುದನ್ನು ಮನದಲ್ಲಿಯೇ ಪರ್ಯಾಲೋಚಿಸಿಯಾದರೂ ನನ್ನ ಪ್ರಶ್ನೆಗೆ ಉತ್ತರ ವನ್ನೀಯಲಿ."

ಈ ರೀತಿಯಾಗಿ ಕರುಣಾಜನಕವಾದ ಮಾತುಗಳನ್ನಾಡುತ್ತಿದ್ದ, ಬಿಕ್ಕಿ-ಬಿಕ್ಕಿ ಅಳುತ್ತಿದ್ದ, ದೈನ್ಯದಿಂದ ನಿಸ್ಸಹಾಯಕರಾಗಿ ಕುಳಿತಿದ್ದ ತನ್ನ ಐವರು ಪತಿಗಳನ್ನೂ ಬಾರಿ-ಬಾರಿಗೂ ವೀಕ್ಷಿಸುತ್ತಿದ್ದ ದ್ರೌಪದಿಯನ್ನು ಕುರಿತು ಅನಾರ್ಯನಾದ ದುಃಶಾಸನನು ಕರ್ಣಕಠೋರವಾದ, ಬಹಳ ಅಪ್ರಿಯವಾದ ಬಹುನಿಂದ್ಯವಾದ ಅನೇಕ ವಾಕ್ಯಗಳನ್ನಾಡಿದನು. ಇಷ್ಟುಮಾತ್ರವಲ್ಲ ; ರಜಸ್ವಲೆಯಾಗಿದ್ದ ಏಕವಸ್ತ್ರಧರಳಾಗಿದ್ದ ಆ ಸಾಧ್ವಿಯನ್ನು ಇತ್ತಲಿಂದತ್ತ ಅತ್ತಲಿಂದಿತ್ತ ಎಳೆದಾಡುತ್ತಾ ಕೇಕೆಹಾಕಿಕೊಂಡು ನಗುತ್ತಿದ್ದನು. ಅವಳ ಸೆರಗು ಕ್ಷಣ-ಕ್ಷಣಕ್ಕೂ ಜಾರಿಹೋಗುತ್ತಿದ್ದಿತು. ಅಂತಹ ಅಮಾನುಷವಾದ ವರ್ತನೆಗೆ ದ್ರೌಪದಿಯೆಂದಿಗೂ ಅರ್ಹಳಾದವಳಲ್ಲ. ಆದರೂ ವಿಧಿಪ್ರಚೋದನೆಯೋ ಎಂಬಂತೆ ಅವೆಲ್ಲವೂ ಧರ್ಮಾತ್ಮರೆನಿಸಿದ ಮಹಾವ್ಯಕ್ತಿಗಳ ಸಮ್ಮುಖದಲ್ಲಿಯೇ ನಡೆಯುತ್ತಿದ್ದಿತು.

ವೃಕೋದರನು ಆ ಘೋರದೃಶ್ಯವನ್ನು ನೋಡಿ ಯುಧಿಷ್ಠಿರನನ್ನೂ

ಒಮ್ಮೆ ನೋಡಿದನು. ಬಹುವಾಗಿ ಸಂಕಟಗೊಂಡ ಅವನು ಒಡನೆಯೇ ಕುಪಿತನಾಗಿ ಧರ್ಮಜನನ್ನು ಕುರಿತು ಹೇಳತೊಡಗಿದನು.

೬೭ನೆಯ ಅಧ್ಯಾಯವು ಮುಗಿಯಿತು.

೬೮ನೆಯ ಅಧ್ಯಾಯ ದ್ಯೂತಪರ್ವ (ಮುಂದುವರಿದಿದೆ.)

## ಭೀಮಸೇನನ ಕ್ರೋಧ : ಅರ್ಜುನನಿಂದ ಸಾಂತ್ವನ : ವಿಕರ್ಣನ ಧರ್ಮಯುಕ್ತವಚನ : ಕರ್ಣನ ವಿರೋಧ : ದುಃಶಾಸನನಿಂದ ದ್ರೌಪದಿಯ ವಸ್ತ್ರಾಪಹರಣ : ಶ್ರೀಕೃಷ್ಣನಿಂದ ದ್ರೌಪದಿಯ ಮಾನರಕ್ಷಣೆ : ವಿದುರನಿಂದ ಪ್ರಹ್ಲಾದೋಪಾಖ್ಯಾನ

ಪಾರಿಕ್ಷಿತ! ಭೀಮಸೇನನ ಕಣ್ಣುಗಳು ಕೆಂಪಾಗಿದ್ದುವು. ತುಟಿಗಳು ಅದುರುತ್ತಿದ್ದುವು. ಕೋಪವೇ ಮೂರ್ತಿಮತ್ತಾಗಿರುವಂತೆ ಕಾಣುತ್ತಿದ್ದನು. ಗಡುಸಾದ ಧ್ವನಿಯಿಂದ ಧರ್ಮಜನನ್ನು ಕುರಿತು ಹೇಳಿದನು :

**ಭವನ್ತಿ ಗೇಹೇ ಬನ್ಧಕ್ಯಃ ಕಿತವಾನಾಂ ಯುಧಿಷ್ಠಿರ ।**
**ನ ತಾಭಿರುತ ದೀವ್ಯನ್ತಿ ದಯಾ ಚೈವಾಸ್ತಿ ತಾಸ್ವಪಿ ॥೧॥**

“ಅಣ್ಣ! ಜೂಜುಗಾರರ ಮನೆಗಳಲ್ಲಿ ಅನೇಕ ಮಂದಿ ವೇಶ್ಯೆಯರಿರುತ್ತಾರೆ. ತಮ್ಮ ಸ್ವಾಧೀನಕ್ಕೊಳಪಟ್ಟಿರುವ ಅಂತಹ ವೇಶ್ಯೆಯರನ್ನೂ ಜೂಜುಗಾರರು ಜೂಜಾಟಗಳಲ್ಲಿ ಪಣವನ್ನಾಗಿಡುವುದಿಲ್ಲ. ಇದಕ್ಕೆ ಅವರ ಮೇಲಿರುವ ದಯೆಯೇ ಕಾರಣವಾಗಿರುತ್ತದೆ. ಅಂತಹ ದಯೆಯೂ ನಿನಗಿಲ್ಲವಾಗಿದೆ.

ಕಾಶಿರಾಜನೂ ಮತ್ತು ಇತರ ರಾಜರೂ ಕಪ್ಪ-ಕಾಣಿಕೆಗಳ ರೂಪವಾಗಿ ಕೊಟ್ಟ ಅಪಾರವಾದ ರತ್ನರಾಶಿಗಳನ್ನೂ, ಗಜ-ತುರಗಾದಿ ಪ್ರಾಣಿಗಳನ್ನೂ, ಕವಚ-ಕತ್ತಿ-ಗುರಾಣಿಗಳನ್ನೂ, ನಾವು ಜಯಿಸಿದ್ದ ರಾಜ್ಯಗಳನ್ನೂ ಎಲ್ಲಕ್ಕಿಂತಲೂ ಮಿಗಿಲಾಗಿ ನಮ್ಮನ್ನೂ ಮತ್ತು ನಿನ್ನನ್ನೂ ನಮ್ಮ ಶತ್ರುಗಳು ಜೂಜಾಟದಲ್ಲಿ ಗೆದ್ದುಕೊಂಡರು. ಇವೆಲ್ಲದರಿಂದಲೂ ನನ್ನ ಕೋಪಾಗ್ನಿಯು ಉಲ್ಬಣಿಸಲಿಲ್ಲ. ಏಕೆಂದರೆ : ನೀನು ನಮ್ಮೆಲ್ಲರಿಗೂ ಒಡೆಯನಾಗಿರುವೆ. ಆದರೆ ದ್ರೌಪದಿಯನ್ನೂ ಪಣವನ್ನಾಗಿಟ್ಟೆ. ಈ ನಿನ್ನ ಕಾರ್ಯವನ್ನು ಮಾತ್ರ

ನಾನು ಒಪ್ಪಲಾರೆನು. ಇದು ಅಕಾರ್ಯವೆಂದು ನಾನು ಭಾವಿಸುತ್ತೇನೆ. ನಿಷ್ಕಳಂಕಳಾದ ಈ ಬಾಲೆಯು ಖಂಡಿತವಾಗಿಯೂ ಈ ವಿಧವಾದ ಶಿಕ್ಷೆಗೆ ಅನರ್ಹಳು. ನಿನ್ನ ಕಾರಣದಿಂದಾಗಿ ಇಂದಿವಳು ಈ ಪಾಪಾತ್ಮರು ಕೊಡುತ್ತಿರುವ ಹಿಂಸೆಗೆ ಗುರಿಯಾಗಿದ್ದಾಳೆ. ಈ ಒಂದೇ ಒಂದು ಕಾರಣಕ್ಕಾಗಿ ನನ್ನ ಕೋಪವು ನಿನ್ನ ವಿಷಯದಲ್ಲಿ ಪ್ರಜ್ವಲಿತವಾಗಿದೆ. ಜೂಜಾಡಿದ ನಿನ್ನ ಕೈಗಳನ್ನು ನಾನು ಸುಟ್ಟುಬಿಡುತ್ತೇನೆ." ಹೀಗೆ ಹೇಳಿ– "ಓ ಸಹದೇವ! ಒಡನೆಯೇ ಹೋಗಿ ಬೆಂಕಿಯನ್ನು ತೆಗೆದುಕೊಂಡು ಬಾ" – ಎಂದು ಗರ್ಜಿಸಿದನು.

ದ್ರೌಪದಿಯ ಅಂದಿನ ಅವಸ್ಥೆಯು ಇತರರಿಗೇ ರೋಷವನ್ನುಂಟು ಮಾಡುವುದಾಗಿರುವಾಗ ಗಂಡನಾದವನಿಗೆ ಅವಳ ದುರವಸ್ಥೆಯನ್ನು ಪ್ರತ್ಯಕ್ಷವಾಗಿಯೇ ನೋಡಿ ಕೋಪವುಂಟಾದುದರಲ್ಲಿ ಆಶ್ಚರ್ಯವೇನಿಲ್ಲ. ಆದರೂ ಧರ್ಮಮೂರ್ತಿಯಾದ ಯುಧಿಷ್ಠಿರನಿಗೆ ಆ ಮಾತುಗಳು ಸಲ್ಲವೆಂದು ಅರ್ಜುನನಿಗನ್ನಿಸಿತು. ಅಂತೆಯೇ ಭೀಮನನ್ನು ಕುರಿತು ಹೇಳಿದನು :

"ಅಣ್ಣ! ನೀನು ಈ ಹಿಂದೆ ಯಾವಾಗಲೂ ಈ ವಿಧವಾದ ಮಾತುಗಳನ್ನಾಡಿರಲಿಲ್ಲ. ನಿಶ್ಚಯವಾಗಿಯೂ ಕ್ರೂರಕರ್ಮಿಗಳಾದ ಈ ನಮ್ಮ ಶತ್ರುಗಳಿಂದ ನಿನ್ನ ಧಾರ್ಮಿಕಮನೋವೃತ್ತಿಯೂ ವಿನಾಶಗೊಳಿಸಲ್ಪಟ್ಟಿದೆ. ನೀನೇನಾದರೂ ಕೋಪಕ್ಕೆ ಈ ಸಮಯದಲ್ಲಿ ಎಡೆಗೊಟ್ಟರೆ ನಮ್ಮ ಶತ್ರುಗಳ ಅಭಿಲಾಷೆಯನ್ನು ನಾವೇ ಪೂರ್ಣಗೊಳಿಸಿದಂತಾಗುತ್ತದೆ. ಹಾಗೆಂದಿಗೂ ಮಾಡಬೇಡ, ಭೀಮಸೇನ!. ಎಂತಹ ಕಷ್ಟದಲ್ಲಿಯೇ ಆಗಲಿ, ಧರ್ಮಮಾರ್ಗವನ್ನು ಬಿಡಬಾರದು. ಸಹೋದರನೂ, ಧಾರ್ಮಿಕನೂ, ಅಗ್ರಜನೂ ಆಗಿರುವ ಯುಧಿಷ್ಠಿರನ ಆಜ್ಞೆಯನ್ನು ಮೀರಿ ನಡೆಯುವುದು ಯೋಗ್ಯವೆನಿಸುವುದೇ? ರಾಜನು ಆಹ್ವಾನಿತನಾಗಿ ಜೂಜಾಟಕ್ಕೆ ಬಂದನು. ಇದು ಕ್ಷತ್ರಿಯಧರ್ಮ. ಕ್ಷತ್ರಿಯಧರ್ಮಾನುಸಾರವಾಗಿ ನಡೆಯಬೇಕೆಂಬ ಕಾರಣದಿಂದ ತನ್ನ ಇಚ್ಛೆಗೆ ವಿರುದ್ಧವಾಗಿ ಧರ್ಮಜನು ವರ್ತಿಸಿರುವನು. ತನಗೆ ಸೋಲು ನಿಶ್ಚಿತವೆಂದು ತಿಳಿದಿತ್ತಾದರೂ ಧರ್ಮಪರಿಪಾಲನೆಯ ಕಾರಣದಿಂದ ನಮ್ಮಣ್ಣನು ಜೂಜಾಟಕ್ಕೆ ಒಪ್ಪಿಕೊಂಡುದು ನಮಗೆ ಅಪಾರವಾದ ಕೀರ್ತಿಯನ್ನುಂಟುಮಾಡತಕ್ಕ ವಿಷಯವೇ ಆಗಿದೆ."

“ನಿಜ, ಅರ್ಜುನ! ಯುಧಿಷ್ಠಿರನು ಕ್ಷತ್ರಿಯಧರ್ಮಾನುಸಾರವಾಗಿ ಜೂಜಾಡಿದನು. ಶತ್ರುಗಳಿಂದ ಬಲಾತ್ಕಾರವಾಗಿ ಜೂಜಾಟಕ್ಕೆ ಸೆಳೆಯಲ್ಪಟ್ಟನು. ಶಕುನಿಯ ಮೋಸದಿಂದಾಗಿ ಸಕಲವನ್ನೂ ಸೋತನು. ಈ ವಿಷಯಗಳೆಲ್ಲವೂ ನನಗೆ ತಿಳಿದಿರುವುದರಿಂದಲೇ ನಾನು ಇದುವರೆಗೂ ಇವನ ಕೈಗಳನ್ನು ಸುಡದೇ ಬಿಟ್ಟಿರುವೆನು. ಈ ಸಮಯದಲ್ಲಿ ನಿನ್ನ ಹಿತೋಕ್ತಿಗಳೂ ಸಮಯೋಚಿತವಾಗಿವೆ. ಇವನು ಕೇವಲ ದುರ್ವ್ಯಸನಕ್ಕೆ ಸಿಕ್ಕಿ ಜೂಜಾಡಿದ್ದರೆ ನಿಶ್ಚಯವಾಗಿಯೂ ಈ ವೇಳೆಗೆ ಇವನ ಕೈಗಳೆರಡನ್ನೂ ಬಲಾತ್ಕಾರವಾಗಿ ದಹಿಸಿಯೇ ಬಿಡುತ್ತಿದ್ದೆನು.”

ಭೀಮನ ಕೋಪವು ತಾತ್ಕಾಲಿಕವಾಗಿ ಶಾಂತವಾಯಿತು.

ದುಃಖಿತರಾದ ಪಾಂಡವರನ್ನೂ, ರೋದನಮಾಡುತ್ತಿದ್ದ ಪಾಂಚಾಲಿಯನ್ನೂ ನೋಡಿ ಮರುಕಗೊಂಡ ವಿಕರ್ಣನೆಂಬ ದುರ್ಯೋಧನನ ಸೋದರನು ಆಸನದಿಂದ ಮೇಲೆದ್ದು ಹೇಳತೊಡಗಿದನು :

“ರಾಜ-ಮಹಾರಾಜರೇ! ಯಾಜ್ಞಸೇನಿಯ ಪ್ರಶ್ನೆಗೆ ನಿಮ್ಮ ಅಭಿಪ್ರಾಯವೇನೆಂಬುದನ್ನು ತಿಳಿಸಿರಿ. ನಮ್ಮ ನಿರ್ಣಯವೇನೆಂಬುದನ್ನು ತಿಳಿಯಲು ಕೇಳಿರುವ ಇವಳ ಪ್ರಶ್ನೆಗೆ ನಾವು ಉತ್ತರಿಸದಿದ್ದರೆ ನಾವೆಲ್ಲರೂ ನರಕವಾಸವನ್ನು ಅನುಭವಿಸಬೇಕಾಗಬಹುದು. ಕುರುಗಳ ಪಿತಾಮಹ-ಪ್ರಪಿತಾಮಹರಾದ ಧೃತರಾಷ್ಟ್ರ-ಭೀಷ್ಮರೂ ಮತ್ತು ಜ್ಞಾನವೃದ್ಧನಾದ ವಿದುರ ಮುಂತಾದವರೂ ಈ ವಿಷಯದಲ್ಲಿ ಮೌನಧರಿಸಿ ಕುಳಿತಿದ್ದಾರೆ. ನಮ್ಮ ವಿದ್ಯಾಗುರುಗಳಾದ ದ್ರೋಣರೂ ಮತ್ತು ಕೃಪರೂ ಇಲ್ಲಿಯೇ ಇರುವರು. ಇವರಾರೂ ಈ ವಿಷಯವಾಗಿ ಮಾತನಾಡಲಿಲ್ಲ. ಇವರೇಕೆ ಉತ್ತರಿಸದೇ ಇರುವರೆಂಬುದು ನನಗೆ ತಿಳಿಯದಾಗಿದೆ. ಇಲ್ಲಿ ನೆರೆದಿರುವ ಉಳಿದ ರಾಜರೆಲ್ಲರೂ ಕಾಮ-ಕ್ರೋಧ-ಲೋಭ-ಮೋಹಗಳನ್ನು ದೂರಮಾಡಿ ನಿಷ್ಪಕ್ಷಪಾತವಾಗಿ ದ್ರೌಪದಿಯ ಪ್ರಶ್ನೆಗೆ ಉತ್ತರಕೊಡಲಿ. ರಾಜಾಧಿರಾಜರೇ! ನೀವು ದ್ರೌಪದಿಯು ಕೇಳಿದ ಪ್ರಶ್ನೆಗೆ ನಿಮಗೆ ‘ಸರಿ’ ಎನಿಸಿದಂತೆ ಉತ್ತರಕೊಡಿರಿ. ಇದರಲ್ಲಿ ಯಾವ ನಿರ್ಣಯಕ್ಕೆ ಎಷ್ಟು ಮಂದಿ ಬೆಂಬಲವನ್ನೀಯುತ್ತಾರೆಂಬುದನ್ನೂ ಪರಿಶೀಲಿಸಬಹುದಾಗಿದೆ.”

ಇವೇ ಮುಂತಾದ ಮಾತುಗಳಿಂದ ವಿಕರ್ಣನು ಸಭ್ಯರನ್ನು ದ್ರೌಪದಿಯ ಪ್ರಶ್ನೆಗೆ ಉತ್ತರವನ್ನೀಯುವಂತೆ ಪದೇ-ಪದೇ ಒತ್ತಾಯಪಡಿಸುತ್ತಿದ್ದನು. ಆದರೆ ಆ ಸಭೆಯಲ್ಲಿ ಯಾರೊಬ್ಬರೂ ದ್ರೌಪದಿಯ ಪ್ರಶ್ನೆಗೆ ಉತ್ತರವನ್ನೀಯಲು ಮೇಲೇಳಲಿಲ್ಲ. ಎಲ್ಲರೂ ಮೌನಧರಿಸಿಯೇ ಕುಳಿತಿದ್ದರು. ವಿಕರ್ಣನಿಗದು ಸಹ್ಯವಾಗಲಿಲ್ಲ. ಬಹಳ ಸಂಕಟಪಟ್ಟುಕೊಂಡು ಹಾವಿನಂತೆ ದೀರ್ಘವಾಗಿ ನಿಟ್ಟುಸಿರುಬಿಡುತ್ತಾ ಕೈಯಲ್ಲಿ ಕೈಯನ್ನು ಉಜ್ಜಿಕೊಂಡನು. ಕಟ್ಟಕಡೆಗೆ ತಾನೇ ಒಂದು ನಿರ್ಧಾರಕ್ಕೆ ಬಂದವನಾಗಿ ರಾಜರನ್ನು ಕುರಿತು ಹೇಳಿದನು :

"ರಾಜಕುಮಾರರೇ! ಕುರುಸಹೋದರರೇ! ನೀವು ದ್ರೌಪದಿಯ ಪ್ರಶ್ನೆಗೆ ಉತ್ತರವನ್ನೀಯಿರಿ ; ಅಥವಾ ಉತ್ತರವನ್ನೀಯದಿರಿ. ನಾನೀ ವಿಷಯದಲ್ಲಿ ನನಗೆ 'ಸರಿ' ಎನಿಸಿದುದನ್ನು ಹೇಳಿಬಿಡುತ್ತೇನೆ.

**ಚತ್ವಾರ್ಯಾಹುರ್ನರಶ್ರೇಷ್ಠಾ ವ್ಯಸನಾನಿ ಮಹೀಕ್ಷಿತಾಮ್ ।**
**ಮೃಗಯಾಂ ಪಾನಮಕ್ಷಾಂಶ್ಚ ಗ್ರಾಮ್ಯೇ ಚೈವಾತಿರಕ್ತತಾಮ್ ॥೨೦॥**

**ಏತೇಷು ಹಿ ನರಃ ಸಕ್ತೋ ಧರ್ಮಮುತ್ಸೃಜ್ಯ ವರ್ತತೇ ।**
**ಯಥಾಯುಕ್ತೇನ ಚ ಕೃತಾಂ ಕ್ರಿಯಾಂ ಲೋಕೋ ನ ಮನ್ಯತೇ ॥೨೧॥**

ನಿಮ್ಮೆಲ್ಲರಿಗೂ ತಿಳಿದಿರುವಂತೆ–ಬೇಟೆಯಾಡುವುದು, ಸುರಾಪಾನ, ಜೂಜಾಡುವುದು ಮತ್ತು ಮಿತಿಮೀರಿದ ವಿಷಯೋಪಭೋಗ–ಈ ನಾಲ್ಕೂ ರಾಜರ ದುರ್ವ್ಯಸನಗಳೆಂದು ಹಿರಿಯರು ಹೇಳುತ್ತಾರೆ. ಈ ವ್ಯಸನಾಸಕ್ತಿಯು ಮಾನವನನ್ನು ಧರ್ಮಭ್ರಷ್ಟನನ್ನಾಗಿ ಮಾಡುತ್ತದೆ. ಆದುದರಿಂದ ಇಂತಹ ದುರ್ವ್ಯಸನಗಳಲ್ಲಿ ಆಸಕ್ತನಾದವನು ಮಾಡಿದ ಕಾರ್ಯವನ್ನು ಲೋಕವು ಮಾನ್ಯಮಾಡುವುದಿಲ್ಲ.

**ತದಯಂ ಪಾಣ್ಡುಪುತ್ರೇಣ ವ್ಯಸನೇ ವರ್ತತಾ ಭೃಶಮ್ ।**
**ಸಮಾಹೂತೇನ ಕಿತವೈರಾಸ್ಥಿತೋ ದ್ರೌಪದೀಪಣಃ ॥೨೨॥**

**ಸಾಧಾರಣೀ ಚ ಸರ್ವೇಷಾಂ ಪಾಣ್ಡವಾನಾಮನಿನ್ದಿತಾ ।**
**ಜಿತೇನ ಪೂರ್ವಂ ಚಾನೇನ ಪಾಣ್ಡವೇನ ಕೃತಃ ಪಣಃ ॥೨೩॥**

**ಇಯಂ ಚ ಕೀರ್ತಿತಾ ಕೃಷ್ಣಾ ಸೌಬಲೇನ ಪಣಾರ್ಥಿನಾ ।**
**ಏತತ್ಸರ್ವಂ ವಿಚಾರ್ಯಾಹಂ ಮನ್ಯೇ ನ ವಿಜಿತಾಮಿಮಾಮ್ ॥೨೪॥**

ಪ್ರಕೃತಸಂದರ್ಭದಲ್ಲಿ ಪಾಂಡುಪುತ್ರನಾದ ಯುಧಿಷ್ಠಿರನೂ ಈ ನಾಲ್ಕರಲ್ಲೊಂದಾದ ಜೂಜಾಟವೆಂಬ ವ್ಯಸನದಲ್ಲಿ ಆಸಕ್ತನಾಗಿದ್ದನು. ಮೇಲಾಗಿ ಎದುರಾಳಿಯಾದ ಜೂಜುಕೋರನಿಂದ ದ್ರೌಪದಿಯನ್ನು ಪಣ ವನ್ನಾಗಿಡುವಂತೆ ಪ್ರಚೋದಿತನಾದನು. ದಾಸನಾದರೂ ಪತಿ-ಪತ್ನಿಯರ ಸಂಬಂಧವಿದ್ದೇ ಇರುವುದೆಂದು ಹೇಳುವುದಾದರೆ–ದ್ರೌಪದಿಯು ಯುಧಿ ಷ್ಠಿರನಿಗೆ ಮಾತ್ರವೇ ಪತ್ನಿಯಲ್ಲ ; ಐವರಿಗೂ ಸಮಾನಪತ್ನಿಯಾಗಿರುತ್ತಾಳೆ. ಅಲ್ಲದೇ ಯುಧಿಷ್ಠಿರನು ಮೊದಲು ತನ್ನನ್ನು ಸೋತುಕೊಂಡು ದಾಸನಾದ ಬಳಿಕ, ಸೌಬಲನ ಪ್ರಚೋದನೆಯಂತೆ ದ್ರೌಪದಿಯನ್ನು ಪಣವನ್ನಾಗಿಟ್ಟನು. ಇವೆಲ್ಲವನ್ನೂ ಕೂಲಂಕಷವಾಗಿ ಪರಿಶೀಲಿಸಿದರೆ ದ್ರೌಪದಿಯನ್ನು ಪಣವ ನ್ನಾಗಿಡಲು ಯುಧಿಷ್ಠಿರನಿಗೆ ಹಕ್ಕಿಲ್ಲವೆಂದೂ ಆದ್ದರಿಂದ ಶಕುನಿಯು ದ್ರೌಪದಿಯನ್ನು ಗೆದ್ದಂತಾಗಲಿಲ್ಲವೆಂದೂ, ಅವಳು ದಾಸಿಯಲ್ಲವೆಂದೂ– ನಾನು ಅಭಿಪ್ರಾಯಪಡುತ್ತೇನೆ."

ವಿಕರ್ಣನು ಮಾತು ಮುಗಿಸಿದೊಡನೆಯೇ ಸಭಾಮಂದಿರದಲ್ಲಿ ಕೋಲಾಹಲವೆದ್ದಿತು. ಅನೇಕರು ವಿಕರ್ಣನ ಮಾತುಗಳನ್ನು 'ಸಾಧು-ಸಾಧು' ಎಂದು ಘೋಷಿಸಿ ವಿಕರ್ಣನನ್ನು ಪ್ರಶಂಸಿಸಿದರು. ಸೌಬಲನನ್ನು 'ಧಿಕ್-ಧಿಕ್' ಎಂದು ಮೂದಲಿಸಿದರು.

ಆದರೆ ದುಷ್ಟಚತುಷ್ಟಯರಲ್ಲೊಬ್ಬನಾದ ಕರ್ಣನಿಗೆ ಮಾತ್ರ ವಿಕರ್ಣನ ಮಾತುಗಳು ಸ್ವಲ್ಪವೂ ಸಹ್ಯವಾಗಲಿಲ್ಲ. ಸಭ್ಯರು ವಿಕರ್ಣನನ್ನು 'ಸಾಧು- ಸಾಧು' ಎಂದು ಹೇಳಿ ಪ್ರಶಂಸಿಸಿದುದೂ, ತನ್ನ ಗೆಳೆಯನಾದ ಶಕುನಿಯನ್ನು ಮೂದಲಿಸಿದುದೂ–ಕರ್ಣನ ಕೋಪಕ್ಕೆ ಕಾರಣವಾಯಿತು. ಕ್ರೋಧ ಮೂರ್ಛಿತನಾದ ಕರ್ಣನು ತನ್ನ ಸುಂದರವಾದ ಬಾಹುಲತೆಯನ್ನು ಮೇಲೆತ್ತಿ ವಿಕರ್ಣನನ್ನು ಕುರಿತು ಹೇಳಿದನು :

"ವಿಕರ್ಣನೇ! ನಿನ್ನ ಮಾತುಗಳಿಂದ ಅನೇಕ ಪಕ್ಷ-ಪ್ರತಿಪಕ್ಷಗಳೂ ಮತ್ತು ಅಸಂಗತವಿಷಯಗಳೂ ಈ ಸಭೆಯಲ್ಲಿ ಮೂಡುವಂತಾಯಿತು.

ಅರಣಿಯನ್ನು ಕಡೆದರೆ ಬೆಂಕಿಯು ಪ್ರಾದುರ್ಭೂತವಾಗಿ ಮೊದಲು ಅರಣಿಯನ್ನೇ ಭಸ್ಮಮಾಡಿಬಿಡುವಂತೆ–ಕುರುವಂಶದಲ್ಲಿ ಹುಟ್ಟಿರುವ ನೀನು, ನಿನ್ನ ಕುಲಕ್ಕೇ ನಾಶಕನಾಗುತ್ತಿರುವೆ. ಈ ಸಭೆಯನ್ನು ಅಲಂಕರಿಸಿರುವ ಮಹಾ ಮಹಿಮರಾದ ಹಿರಿಯರು ದ್ರೌಪದಿಯು ಅಂಗಲಾಚಿ ಪ್ರಶ್ನಿಸಿದರೂ ಉತ್ತರಿಸುತ್ತಿಲ್ಲ. ಇವರೆಲ್ಲರೂ ಮೌನಧರಿಸಿರುವುದರಿಂದಲೇ ದ್ರುಪದಪುತ್ರಿಯು ನ್ಯಾಯವಾದ ರೀತಿಯಲ್ಲಿ ಜಯಿಸಲ್ಪಟ್ಟಿರುವಳೆಂಬುದನ್ನು ಇವರೆಲ್ಲರೂ ಒಪ್ಪಿರುವರೆಂದೇ ನಿರ್ಧರಿಸಬಹುದಾಗಿದೆ. ತಿಳಿವಳಿಕೆಯಿಲ್ಲದ, ಅಪ್ರಾಪ್ತವಯಸ್ಕನಾದ ನೀನೊಬ್ಬನು ಮಾತ್ರ ಬಾಲನಾಗಿದ್ದರೂ ವೃದ್ಧನಂತೆ ಈ ಸಭಾ ಮಂದಿರದಲ್ಲಿ ಮಾತನಾಡುತ್ತಿರುವೆ. ದುರ್ಯೋಧನನ ಅನುಜನಾದ ನಿನಗೆ ಧರ್ಮದ ಸ್ವರೂಪವೇನೆಂಬುದು ತಿಳಿದಿಲ್ಲ. ಏಕೆಂದರೆ : ನ್ಯಾಯಬದ್ಧವಾಗಿ ಜಯಿಸಲ್ಪಟ್ಟ ದ್ರೌಪದಿಯನ್ನು ಜಯಿಸಲ್ಪಡಲಿಲ್ಲವೆಂದು ಮೂಢನಂತೆ ಹೇಳುತ್ತಿರುವೆ.

ವಿಕರ್ಣ! ಕೃಷ್ಣೆಯು ಜಯಿಸಲ್ಪಟ್ಟಿಲ್ಲವೆಂದು ನೀನು ಹೇಗೆತಾನೇ ಹೇಳುವೆ? ಯುಧಿಷ್ಠಿರನು ಪಗಡೆಯಾಟಕ್ಕೆ ತನ್ನ ಸಕಲಭೋಗ್ಯವಸ್ತುಗಳನ್ನೂ ಪಣವಾಗಿಟ್ಟನಲ್ಲವೇ? ದ್ರೌಪದಿಯೂ ಯುಧಿಷ್ಠಿರನಿಗೆ ಸೇರಿದ ಭೋಗ್ಯವಸ್ತುಗಳಲ್ಲಿ ಒಬ್ಬಳಲ್ಲವೇ? ದ್ರೌಪದಿಯೊಬ್ಬಳು ಪಣವಾಗದೆ ಉಳಿದಿರುವಳೆಂದು ಶಕುನಿಯು ಯುಧಿಷ್ಠಿರನಿಗೆ ಜ್ಞಾಪಿಸಿದನು. ಯುಧಿಷ್ಠಿರನೂ ಅದಕ್ಕೆ ಒಪ್ಪಿಗೆಯನ್ನಿತ್ತು ದ್ರೌಪದಿಯನ್ನು ಪಣವನ್ನಾಗಿಟ್ಟು ಸೋತನು. ಹೀಗಿದ್ದರೂ ನೀನು ದ್ರೌಪದಿಯು ಜಯಿಸಲ್ಪಟ್ಟಿಲ್ಲವೆಂದು ಹೇಗೆ ತಾನೇ ಹೇಳುವೆ?

ರಜಸ್ವಲೆಯಾದ, ಏಕವಸನೆಯಾದ ಇವಳನ್ನು ಈ ಸಭಾಮಂದಿರಕ್ಕೆ ಕರೆತಂದುದು ಸರಿಯಲ್ಲವೆಂದು ನೀನು ಭಾವಿಸುವೆಯಾ? ಇದರಲ್ಲಿಯೂ ಯಾವ ವಿಧವಾದ ದೋಷವೂ ಇಲ್ಲವೆಂಬುದಕ್ಕೆ ಕೆಲವು ಕಾರಣಗಳನ್ನು ಹೇಳುವೆನು ಕೇಳು :

**ಏಕೋ ಭರ್ತಾ ಸ್ತ್ರಿಯಾ ದೇವೈರ್ವಿಹಿತಃ ಕುರುನನ್ದನ ।**
**ಇಯಂ ತ್ವನೇಕವಶಗಾ ಬನ್ಧಕೀತಿ ವಿನಿಶ್ಚಿತಾ ॥೩೫॥**

**ಅಸ್ಯಾಃ ಸಭಾಮಾನಯನಂ ನ ಚಿತ್ರಮಿತಿ ಮೇ ಮತಿಃ ।**
**ಏಕಾಮ್ಬರಧರತ್ವಂ ವಾಪ್ಯಥ ವಾಪಿ ವಿವಸ್ತ್ರತಾ ॥೩೬॥**

ಒಬ್ಬ ಸ್ತ್ರೀಗೆ ಒಬ್ಬನೇ ಪತಿಯೆಂಬುದು ಸರ್ವವಿದಿತವಾಗಿದೆ. ಇದನ್ನು ದೈವನಿಯಮವೆಂದೂ ಹೇಳುವರು. ಆದರೆ ಸಾಮಾನ್ಯವಾದ ಸಮಾಜ ಧರ್ಮಕ್ಕೆ ವಿರುದ್ಧವಾಗಿ ಇವಳಿಗೆ ಐವರು ಪತಿಗಳಿದ್ದಾರೆ. ಇದರಿಂದಲೇ ಇವಳು 'ಬಂಧಕೀ' ಎನಿಸಲ್ಪಡುತ್ತಾಳೆ. ಆದುದರಿಂದ ದುರ್ವ್ರತೆಯಾದ ಇವಳನ್ನು ಏಕವಸನೆಯಾಗಿರುವಾಗ ಈ ಸಭಾಮಂದಿರಕ್ಕೆ ಕರೆದುತಂದಿರುವುದಾಗಲೀ ಅಥವಾ ಇವಳನ್ನು ಪೂರ್ಣವಾಗಿ ವಿವಸ್ತ್ರಳನ್ನಾಗಿ ಮಾಡುವುದಾಗಲೀ–ಆಶ್ಚರ್ಯವೂ ಅಲ್ಲ ; ಅಧರ್ಮವೂ ಅಲ್ಲ.

ಪಾಂಡವರಿಗಿದ್ದ ಸಕಲೈಶ್ವರ್ಯಗಳೂ, ದ್ರೌಪದಿಯೂ ಮತ್ತು ಪಾಂಡವರೂ ಈ ಶಕುನಿಯಿಂದ ದುರ್ಯೋಧನನ ಸಲುವಾಗಿ ನ್ಯಾಯಬದ್ಧವಾದ ರೀತಿಯಲ್ಲಿಯೇ ಜಯಿಸಲ್ಪಟ್ಟಿರುತ್ತಾರೆ."

(ದುಃಶಾಸನನ ಕಡೆಗೆ ತಿರುಗಿ) "ದುಃಶಾಸನ! ವಿಕರ್ಣನ ಮಾತುಗಳನ್ನು ಕೇಳುತ್ತಾ ಕುಳಿತುಕೊಳ್ಳುವುದರಲ್ಲಿ ಯಾವ ಪ್ರಯೋಜನವೂ ಇಲ್ಲ. ಇವನು ಪ್ರೌಢನಂತೆ ಮಾತನಾಡಿದರೂ ಇನ್ನೂ ಬಾಲಕನಾಗಿದ್ದಾನೆ. ಆದುದರಿಂದ ಇವನ ಮಾತುಗಳಿಗೆ ಲಕ್ಷ್ಯಕೊಡುವ ಕಾರಣವಿಲ್ಲ. ನೀನು ಈ ಕೂಡಲೇ ನಮಗೆ ದಾಸರಾಗಿರುವ ಪಾಂಡವರ ವಸ್ತ್ರಗಳನ್ನೂ, ದಾಸಿಯಾದ ಈ ದ್ರೌಪದಿಯ ಸೀರೆಯನ್ನೂ ಸೆಳೆದುಹಾಕು."

ಕರ್ಣನ ಆ ಮಾತುಗಳನ್ನು ಕೇಳಿದ ಕೂಡಲೇ ಪಾಂಡವರೆಲ್ಲರೂ ತಮ್ಮ-ತಮ್ಮ ಉತ್ತರೀಯಗಳನ್ನು ತೆಗೆದು ದೂರ ಬಿಸುಟರು.

ದುಃಶಾಸನನು ಸರ್ವರ ಸಮ್ಮುಖದಲ್ಲಿಯೇ ದ್ರೌಪದಿಯು ಧರಿಸಿದ್ದ ಒಂದೇ ವಸ್ತ್ರವನ್ನು ಸೆಳೆಯಲು ಉಪಕ್ರಮಿಸಿದನು.

ಅಬಲೆಯಾದ ದ್ರೌಪದಿಯ ಸೀರೆಯನ್ನು ದುಃಶಾಸನನು ಬಿಗಿಯಾಗಿ ಹಿಡಿದು ಎಳೆಯುತ್ತಿದ್ದನು. ಎಷ್ಟು ಹೊತ್ತು ತಾನೇ ದ್ರೌಪದಿಯು ದುಃಶಾಸನನ ಸೆಳೆತವನ್ನು ನಿರೋಧಿಸಬಲ್ಲಳು? ಮೇಲಾಗಿ ತನ್ನ ಪತಿಗಳು ತನ್ನ ಮಾನರಕ್ಷಣೆಯನ್ನು ಮಾಡುವರೆಂಬ ಭರವಸೆಯೂ ದ್ರೌಪದಿಗುಳಿಯಲಿಲ್ಲ.

ಒಂದೆರಡು ಕ್ಷಣಗಳಲ್ಲಿ ದುಃಶಾಸನನು ದ್ರೌಪದಿಯನ್ನು ಆ ಸಭಾ ಮಂದಿರದಲ್ಲಿರುವ ಸಭ್ಯರ ಸಮಕ್ಷದಲ್ಲಿ ವಿವಸ್ತ್ರಳನ್ನಾಗಿ ಮಾಡಿಬಿಡುವನು. ಅದನ್ನು ತಪ್ಪಿಸಿಕೊಳ್ಳುವುದೆಂತು? ಮಾನವತಿಯಾಗಿ ಈ ದುಷ್ಟನಿಂದ ಬಿಡುಗಡೆ ಹೊಂದುವುದು ಹೇಗೆ?

ಮಹಾಮಹಿಮನಾದ, ದಯಾಮಯನಾದ, ಲೋಕರಕ್ಷಕನಾದ, ಚಿನ್ಮಯನಾದ, ಭಗವಂತನಾದ ಶ್ರೀಕೃಷ್ಣನು ದ್ರೌಪದಿಯ ಸ್ಮೃತಿಪಥದಲ್ಲಿ ಕಂಗೊಳಿಸಿದನು. ಒಡನೆಯೇ ದ್ರೌಪದಿಯು ಅನನ್ಯಮನಸ್ಕಳಾಗಿ ಶ್ರೀಕೃಷ್ಣ ನನ್ನು ಮನಸ್ಸಿನಲ್ಲಿಯೇ ಧ್ಯಾನಿಸಿದಳು.

**ಗೋವಿನ್ದ ದ್ವಾರಕಾವಾಸಿನ್ಕೃಷ್ಣ ಗೋಪೀಜನಪ್ರಿಯ ।**
**ಕೌರವೈಃ ಪರಿಭೂತಾಂ ಮಾಂ ಕಿಂ ನ ಜಾನಾಸಿ ಕೇಶವ ॥೪೧॥**

**ಹೇ ನಾಥ ಹೇ ರಮಾನಾಥ ವ್ರಜನಾಥಾರ್ತಿನಾಶನ ।**
**ಕೌರವಾರ್ಣವಮಗ್ನಾಂ ಮಾಮುದ್ಧರಸ್ವ ಜನಾರ್ದನ ॥೪೨॥**

**ಕೃಷ್ಣ ಕೃಷ್ಣ ಮಹಾಯೋಗಿನ್ವಿಶ್ವಾತ್ಮನ್ವಿಶ್ವಭಾವನ ।**
**ಪ್ರಪನ್ನಾಂ ಪಾಹಿ ಗೋವಿನ್ದ ಕುರುಮಧ್ಯೇಽವಸೀದತೀಮ್ ॥೪೩॥**

"ಓ ಗೋವಿಂದ! ದ್ವಾರಕಾನಾಥ! ಓ ಕೃಷ್ಣ! ಗೋಪೀಜನಪ್ರಿಯನೇ! ಓ ಕೇಶವ! ಕೌರವರು ನನ್ನ ಮಾನಾಪಹಾರಕ್ಕೆ ಯತ್ನಿಸುತ್ತಿರುವುದು ನಿನಗೆ ತಿಳಿಯಲಿಲ್ಲವೇ? ನಾಥ! ರಮಾನಾಥ! ವ್ರಜನಾಥ! ಆರ್ತಿನಾಶನ! ಜನಾರ್ದನ! ಕೌರವಸಮುದ್ರದಲ್ಲಿ ಮುಳುಗಿಹೋಗುತ್ತಿರುವ ನನ್ನನ್ನು ಉದ್ಧರಿಸು. ಓ ಕೃಷ್ಣ! ಕೃಷ್ಣ ಕೃಷ್ಣ! ಮಹಾಯೋಗೇಶ್ವರನೇ! ವಿಶ್ವಾತ್ಮನೇ! ವಿಶ್ವಭಾವನನೇ! ಈ ಕುರುಗಳ ಮಧ್ಯದಲ್ಲಿ ನಿಶ್ಚೇತನಳಾಗುತ್ತಿರುವ, ದಾಸಾನುದಾಸಿಯಾದ, ಶರಣಾಗತಳಾದ ನನ್ನನ್ನು ಕಾಪಾಡು."

ದ್ರೌಪದಿಯು ಅನನ್ಯಶರಣೆಯಾಗಿ, ಮುಖವನ್ನು ಮುಚ್ಚಿಕೊಂಡು ರೋದನಮಾಡುತ್ತಾ ಇವೇ ಮುಂತಾಗಿ ತ್ರೈಲೋಕ್ಯಾಧಿಪತಿಯಾದ ಶ್ರೀಕೃಷ್ಣನನ್ನು ಅಂಗಲಾಚಿ ಬೇಡಿದಳು.

ಭಗವಂತನಿಗೆ ದ್ರೌಪದಿಯ ರೋದನವು ಒಡನೆಯೇ ಕೇಳಿಸಿತು. ಅವಳ

ಸ್ಥಿತಿಯನ್ನು ಕಂಡು ಶ್ರೀಕೃಷ್ಣನು ಮರುಗಿದನು. ದಯಾಮಯನಾದ ಶ್ರೀಕೃಷ್ಣನು ತನ್ನ ಆಸನದಿಂದ ಮೇಲೆದ್ದು ಕ್ಷಣಮಾತ್ರದಲ್ಲಿ ಕುರುಸಭಾಮಂದಿರಕ್ಕೆ ಧಾವಿಸಿ ಬಂದನು. "ಕೃಷ್ಣ! ಹರೇ! ವಿಷ್ಣೋ! ನರೋತ್ತಮ!"–ಇವೇ ಮುಂತಾದ ನಾಮಧೇಯಗಳಿಂದ ದೈನ್ಯಧ್ವನಿಯಲ್ಲಿ ದ್ರೌಪದಿಯು ಶ್ರೀಕೃಷ್ಣನನ್ನು ರಕ್ಷಣೆಗೋಸುಗ ಕರೆಯುತ್ತಿರಲಾಗಿ, ಧರ್ಮಸ್ವರೂಪನಾದ ಮಹಾತ್ಮನಾದ ಶ್ರೀಕೃಷ್ಣನು ಎಲ್ಲರಿಗೂ ಅದೃಶ್ಯನಾಗಿದ್ದು ದ್ರೌಪದಿಯನ್ನು ಅನೇಕವಿಧವಾದ ಸೀರೆಗಳಿಂದ ಆಚ್ಛಾದಿಸಿದನು.



ಕೃಷ್ಣೈಕಚಿತ್ತಳಾಗಿದ್ದ ದ್ರೌಪದಿಗೆ ತಾನು ಹಿಡಿದಿದ್ದ ವಸ್ತ್ರದ ಬಿಗಿಯು ತಪ್ಪಿಹೋಯಿತು. ದುಃಶಾಸನನು ಸರಸರನೆ ದ್ರೌಪದಿಯ ಸೀರೆಯನ್ನೆಳೆದನು. ಆದರೆ ಆ ಮೂಢನು ಭಾವಿಸಿದಂತೆ ದ್ರೌಪದಿಯು ವಿವಸ್ತ್ರಳಾಗಲಿಲ್ಲ.

ಒಂದು ಸೀರೆಯನ್ನೆಳೆದೊಡನೆಯೇ ಅದೇ ರೀತಿಯ ಮತ್ತೊಂದು ಸೀರೆಯು ದ್ರೌಪದಿಯ ಮೈಮೇಲಿರುತ್ತಿತ್ತು. ದ್ರೌಪದಿಯು 'ಕೃಷ್ಣ-ಕೃಷ್ಣ' ಎಂದು ಕೂಗಿಕೊಳ್ಳುತ್ತಿದ್ದಳು. ದುಃಶಾಸನನು ಬಹಳ ಉತ್ಸಾಹದಿಂದ ಗರ್ಜನೆ ಮಾಡುತ್ತಾ ಹತ್ತಾರು ಸೀರೆಗಳನ್ನು ಎಳೆದೆಳೆದು ಹಾಕಿದನು.

ಹತ್ತಾಯಿತು ; ನೂರಾಯಿತು ; ಸಾವಿರವಾಯಿತು. ಕೃಷ್ಣೆಯು ವಿವಸ್ತ್ರಳಾಗಲಿಲ್ಲ. ಇಂತಹ ಅಪೂರ್ವವಾದ ಅಘಟಿತಘಟನೆಯನ್ನು ಕಂಡು ಅಲ್ಲಿ ನೆರೆದಿದ್ದ ರಾಜರೆಲ್ಲರೂ–'ಜಯ ಜಯ ದ್ರೌಪದಿ!'–ಎಂದು ಘೋಷಣೆಗಳನ್ನು ಮಾಡಿದರು. 'ಧಿಕ್ ದುಃಶಾಸನ!'–ಎಂದು ಕೆಲವೆಡೆಗಳಲ್ಲಿ ಕೇಳಿಬಂದಿತು.

ಭೀಮಸೇನನಿಗೆ ದುಃಶಾಸನನ ದುಷ್ಕ್ರಿಯೆಯಿಂದ ಕೋಪವು ಪುನಃ ಉಲ್ಬಣಿಸಿತು. ತುಟಿಗಳು ಅದುರುತ್ತಿದ್ದುವು. ಕಣ್ಣುಗಳು ಕೆಂಡದಂತೆ ಕೆಂಪಾದುವು. ತನ್ನ ಕೈಯಲ್ಲಿ ಕೈಯನ್ನು ಮಸೆಯುತ್ತಾ ಸಿಡಿಲಿಗೆ ಸಮಾನವಾದ ಧ್ವನಿಯಿಂದ ಸಭ್ಯರನ್ನು ಕುರಿತು ಹೇಳಿದನು :

**ಇದಂ ಮೇ ವಾಕ್ಯಮಾದಧ್ವಂ ಕ್ಷತ್ರಿಯಾ ಲೋಕವಾಸಿನಃ ।**
**ನೋಕ್ತಪೂರ್ವಂ ನರೈರನ್ಯೈರ್ನ ಚಾನ್ಯೋ ಯದ್ವದಿಷ್ಯತಿ ॥೫೧॥**

**ಯದ್ಯೇತದೇವಮುಕ್ತ್ವಾಹಂ ನ ಕುರ್ಯಾಂ ಪೃಥಿವೀಶ್ವರಾಃ ।**
**ಪಿತಾಮಹಾನಾಂ ಪೂರ್ವೇಷಾಂ ನಾಹಂ ಗತಿಮವಾಪ್ನುಯಾಮ್ ॥೫೨॥**

**ಅಸ್ಯ ಪಾಪಸ್ಯ ದುರ್ಬುದ್ಧೇರ್ಭಾರತಾಪಸದಸ್ಯ ಚ ।**
**ನ ಪಿಬೇಯಂ ಬಲಾದ್ವಕ್ಷೋ ಭಿತ್ತ್ವಾ ಚೇದ್ರುಧಿರಂ ಯುಧಿ ॥೫೩॥**

"ದೇಶ-ದೇಶಾಂತರನಿವಾಸಿಗಳಾದ ಕ್ಷತ್ರಿಯರೇ! ನನ್ನೀ ಮಾತುಗಳನ್ನು ಅಥವಾ ಪ್ರತಿಜ್ಞೆಯನ್ನು ಸಾವಧಾನದಿಂದ ಕೇಳಿರಿ. ಇಂತಹ ಮಾತುಗಳನ್ನು ಹಿಂದೆ ಯಾರೂ ಹೇಳಿಲ್ಲ. ಮುಂದೆ ಯಾರೂ ಹೇಳುವುದಿಲ್ಲ. ನಾನೀಗ ಕೈಗೊಳ್ಳಲಿರುವ ಪ್ರತಿಜ್ಞೆಯಂತೆ ನಡೆಯದಿದ್ದರೆ ನನ್ನ ಪಿತೃ-ಪಿತಾಮಹರು ಪಡೆದಿರುವ ಸದ್ಗತಿಯು ನನಗೆ ಪ್ರಾಪ್ತವಾಗದಿರಲಿ. ಮುಂದೆ ನಡೆಯಲಿರುವ ಯುದ್ಧದಲ್ಲಿ ಈ ನೀಚನ ವಕ್ಷಃಸ್ಥಳವನ್ನು ಉಗುರಿನಿಂದಲೇ ಸೀಳಿ, ಈ ಭರತ

ಕುಲಕಳಂಕನ ರಕ್ತವನ್ನು ಪಾನಮಾಡಿ, ಅದರೊಡನೆ ಇವನ ಪ್ರಾಣಾಪಹರಣವನ್ನೂ ಮಾಡಿಯೇ ತೀರುವೆನು. ಹಾಗೆ ಮಾಡದಿದ್ದರೆ ನನಗೆ ಸದ್ಗತಿಯು ಖಂಡಿತವಾಗಿಯೂ ಸಿಕ್ಕದಿರಲಿ!"

ಭೀಮನ ವೀರವಾಣಿಯನ್ನೂ, ವೀರಪ್ರತಿಜ್ಞೆಯನ್ನೂ ಕೇಳಿ ಸಭ್ಯರೆಲ್ಲರೂ ಚಕಿತರಾಗಿ ನಿಂತರು. 'ಭಲೇ ಭೀಮ!'–ಎಂದು ಮುಂತಾಗಿ ಪ್ರಶಂಸಿಸಿದರು. 'ಧಿಕ್ ದುಃಶಾಸನ!'–ಎಂದು ಧೃತರಾಷ್ಟ್ರಪುತ್ರನನ್ನು ಮೂದಲಿಸಿದರು.

ಪರ್ವತೋಪಮವಾಗಿ ನಾನಾವರ್ಣಗಳ ಸೀರೆಗಳ ರಾಶಿಯೇ ಬಿದ್ದಿತು. ದ್ರೌಪದಿಯು ವಿವಸ್ತ್ರಳಾಗಲಿಲ್ಲ. ದುಃಶಾಸನನು ಶಕ್ತಿಗುಂದಿದನು. ಭೀಮನ ಪ್ರತಿಜ್ಞೆಯನ್ನೂ ಕೇಳಿದನಂತರ ದುಃಶಾಸನನು ನಾಚಿದವನಾಗಿ ವಸ್ತ್ರಾಪಹರಣದ ದುಷ್ಕ್ರಿಯೆಯನ್ನು ನಿಲ್ಲಿಸಿ ಕುಳಿತುಕೊಂಡನು.

ಕುಂತೀಪುತ್ರರ ಅವಸ್ಥೆಯನ್ನು ಕಂಡು ಅಲ್ಲಿ ನೆರೆದಿದ್ದ ಸಭ್ಯರೂ ಮತ್ತು ರಾಜರೂ ದುಃಶಾಸನನ ಕಡೆಗೆ ತಿರುಗಿ 'ಧಿಕ್-ಧಿಕ್' ಎಂದು ಹೇಳುತ್ತಾ ಮೂದಲಿಸುತ್ತಲೇ ಇದ್ದರು. ಅವರ ಆ ಧಿಕ್ಕಾರಗಳು ರೋಮಾಂಚನವನ್ನುಂಟುಮಾಡುವುದಾಗಿದ್ದಿತು. ಆ ಸಭೆಯಲ್ಲಿ ಉಪವಿಷ್ಟರಾಗಿದ್ದ ಸಜ್ಜನರು–'ಈ ಕೌರವರು ದ್ರೌಪದಿಯು ಕೇಳಿದ ಪ್ರಶ್ನೆಗೆ ಉತ್ತರಿಸಲಿಲ್ಲವಲ್ಲಾ! ನಿಶ್ಚಯವಾಗಿಯೂ ಇದು ವಿಷಾದನೀಯ'–ಎಂದು ಪರಸ್ಪರವಾಗಿ ಮಾತನಾಡಿಕೊಳ್ಳುತ್ತಿದ್ದರು. ಧೃತರಾಷ್ಟ್ರನನ್ನು ಕುರಿತು ಆಡುತ್ತಿದ್ದ ನಿಂದೆಯ ಮಾತುಗಳೂ ಅಲ್ಲಲ್ಲಿ ಕೇಳಿಬರುತ್ತಿದ್ದುವು. ಗಡಿಬಿಡಿಯ ಆ ಸಮಯದಲ್ಲಿ ಸರ್ವಧರ್ಮಜ್ಞನಾದ ವಿದುರನು ಮೇಲೆದ್ದು ಕೈಯನ್ನು ಮೇಲೆತ್ತಿ ಸಭ್ಯರನ್ನು ಶಾಂತರಾಗಿ ಕುಳಿತುಕೊಳ್ಳುವಂತೆ ಸೂಚನೆಯನ್ನಿತ್ತು ಮಾತನಾಡಲು ಉಪಕ್ರಮಿಸಿದನು :

"ಸಭಾಸದರೇ! ದ್ರೌಪದಿಯು ನಿಮ್ಮನ್ನು ಪ್ರಶ್ನಿಸಿದ್ದಾಳೆ. ಅನಾಥಳಂತೆ ರೋದನಮಾಡುತ್ತಿದ್ದಾಳೆ. ಈ ಸಮಯದಲ್ಲಿ ನೀವೇನಾದರೂ ಅವಳ ಪ್ರಶ್ನೆಗೆ ಉತ್ತರಿಸದಿದ್ದಲ್ಲಿ ಧರ್ಮನಾಶವೇ ಆದೀತು.

**ಸಭಾಂ ಪ್ರಪದ್ಯತೇ ಹ್ಯಾರ್ತಃ ಪ್ರಜ್ವಲನ್ನಿವ ಹವ್ಯವಾಟ್ ।**
**ತಂ ವೈ ಸತ್ಯೇನ ಧರ್ಮೇಣ ಸಭ್ಯಾಃ ಪ್ರಶಮಯನ್ತ್ಯುತ ॥೬೦॥**

**ಧರ್ಮಪ್ರಶ್ನಮತೋ ಬ್ರೂಯಾದಾರ್ಯಃ ಸತ್ಯೇನ ಮಾನವಃ ।**
**ವಿಬ್ರೂಯುಸ್ತತ್ರ ತಂ ಪ್ರಶ್ನಂ ಕಾಮಕ್ರೋಧಬಲಾತಿಗಾಃ ॥೬೧॥**

ಆರ್ತನಾದವನು (ಸಂಕಟಕ್ಕೊಳಗಾದವನು) ಚಿಂತೆಯಿಂದ ಅಗ್ನಿಯಂತೆ ಪ್ರಜ್ವಲಿತನಾಗಿ ಸಭೆಯನ್ನು ಪ್ರವೇಶಿಸುತ್ತಾನೆ. ಅಂತಹವನ ಸಂಕಟವನ್ನು ಸತ್ಯೋಕ್ತಿಗಳಿಂದಲೂ, ಧರ್ಮಬೋಧೆಗಳಿಂದಲೂ ಉಪಶಮನ ಮಾಡುವುದು ಸಭಾಸದರ ಕರ್ತವ್ಯವಾಗಿದೆ. ಆಗಂತುಕನು ತನ್ನ ಧರ್ಮಮೂಲವಾದ ಸ್ವಾತಂತ್ರ್ಯದ ವಿಷಯವಾಗಿ ಪ್ರಶ್ನಿಸುತ್ತಿರುವಾಗ–ಸಭಾಸದರು ಕಾಮ-ಕ್ರೋಧಾದಿಗಳನ್ನು ದೂರೀಕರಿಸಿ ನಿಷ್ಪಕ್ಷಪಾತವಾಗಿ ಉತ್ತರಿಸಬೇಕು.

ನಿಮ್ಮ ಸಮ್ಮುಖದಲ್ಲಿ ವಿಕರ್ಣನು ದ್ರೌಪದಿಯ ಪ್ರಶ್ನೆಗೆ ತನಗೆ ತಿಳಿದಂತೆ, ತನಗೆ ಸಾಧು ಎಂದು ತೋರಿದುದನ್ನು–ನಿರ್ಭಯವಾಗಿ ನಿಸ್ಸಂಕೋಚವಾಗಿ ಸಭೆಯ ಮುಂದಿಟ್ಟಿರುತ್ತಾನೆ. ನೀವೂ ಕೂಡ ನಿಮಗೆ 'ಸಾಧು' ಎಂದು ತೋರಿದುದನ್ನು ಹೇಳಲೇಬೇಕು.

**ಯೋ ಹಿ ಪ್ರಶ್ನಂ ನ ವಿಬ್ರೂಯಾದ್ಧರ್ಮದರ್ಶೀ ಸಭಾಂ ಗತಃ ।**
**ಅನೃತೇ ಯಾ ಫಲಾವಾಪ್ತಿಸ್ತಸ್ಯಾಃ ಸೋಽರ್ಧಂ ಸಮಶ್ನುತೇ ॥೬೩॥**

**ಯಃ ಪುನರ್ವಿತಥಂ ಬ್ರೂಯಾದ್ಧರ್ಮದರ್ಶೀ ಸಭಾಂ ಗತಃ ।**
**ಅನೃತಸ್ಯ ಫಲಂ ಕೃತ್ಸ್ನಂ ಸಮ್ಪ್ರಾಪ್ನೋತೀತಿ ನಿಶ್ಚಯಃ ॥೬೪॥**

ಧರ್ಮದರ್ಶಿಯಾದವನು ಸಭೆಗೆ ಹೋಗಿ ಧರ್ಮಸಂಬಂಧವಾದ ಪ್ರಶ್ನೆಗೆ ಉತ್ತರಿಸದೇ ಮೌನವಾಗಿದ್ದರೆ–ಸುಳ್ಳುಹೇಳುವುದರಿಂದುಂಟಾಗುವ ಪಾಪದಲ್ಲಿ ಅರ್ಧಭಾಗದಷ್ಟು ಪಾಪಕ್ಕೆ ಭಾಗಿಯಾಗುತ್ತಾನೆ. ಧರ್ಮವೇನೆಂಬುದನ್ನು ತಿಳಿದಿದ್ದರೂ ಧರ್ಮಕ್ಕೆ ವಿರೋಧವಾಗಿ ಉತ್ತರಿಸಿದಲ್ಲಿ ಸುಳ್ಳುಹೇಳುವುದರಿಂದುಂಟಾಗುವ ಸಂಪೂರ್ಣಪಾಪಕ್ಕೇ ಗುರಿಯಾಗುತ್ತಾನೆ.

ಈ ವಿಷಯದಲ್ಲಿ ಒಂದು ಇತಿಹಾಸವನ್ನು ಹಿರಿಯರು ಹೇಳುತ್ತಾರೆ. ಅದನ್ನೇ ನಿಮಗೂ ತಿಳಿಸಲು ಇಚ್ಛಿಸುತ್ತೇನೆ.

ದೈತ್ಯರ ಅಧಿಪತಿಯಾದ ಪ್ರಹ್ಲಾದನೆಂಬ ಪ್ರಸಿದ್ಧರಾಜನಿದ್ದನು. ಅವನಿಗೆ ವಿರೋಚನನೆಂಬ ಮಗನಿದ್ದನು. ಒಂದು ಕನ್ಯೆಯನ್ನು ವಿವಾಹವಾಗುವ ಸಲುವಾಗಿ ವಿರೋಚನನಿಗೂ–ಅಂಗಿರಸಕುಲೋದ್ಭವನಾದ ಸುಧನ್ವನಿಗೂ ಪರಸ್ಪರವಿವಾದವುಂಟಾಯಿತು. ಅವರಿಬ್ಬರಲ್ಲಿ ವಿದ್ಯೆಯಲ್ಲಿಯೂ, ಪರಾಕ್ರಮದಲ್ಲಿಯೂ 'ನಾನು ಹೆಚ್ಚು', 'ತಾನು ಹೆಚ್ಚು' ಎಂಬ ಪರಸ್ಪರ ವಾದ-ವಿವಾದಗಳು ನಡೆದು ಅದರ ಇತ್ಯರ್ಥದ ಸಲುವಾಗಿ ಇಬ್ಬರೂ ತಮ್ಮ-ತಮ್ಮ ಪ್ರಾಣಗಳನ್ನೇ ಪಣವನ್ನಾಗಿಟ್ಟರೆಂದೂ ನಾವು ಕೇಳಿದ್ದೇವೆ. (ಸುಧನ್ವ ಮತ್ತು ವಿರೋಚನರು ತಮ್ಮಲ್ಲಿ ಯಾರು ಶ್ರೇಷ್ಠರೆಂಬುದನ್ನು ಪ್ರಹ್ಲಾದನ ಹತ್ತಿರ ಹೋಗಿ ಕೇಳಬೇಕೆಂದೂ, ಸುಧನ್ವನು ಶ್ರೇಷ್ಠನೆಂದು ಪ್ರಹ್ಲಾದನು ತೀರ್ಪಿತ್ತರೆ ವಿರೋಚನನು ಪ್ರಾಣತೊರೆಯುವುದಾಗಿಯೂ ವಿರೋಚನನು ಶ್ರೇಷ್ಠನೆಂದು ತೀರ್ಪಿತ್ತರೆ ಸುಧನ್ವನು ಪ್ರಾಣತೊರೆಯುವುದಾಗಿಯೂ ಆ ಇಬ್ಬರೂ ತಮ್ಮ-ತಮ್ಮಲ್ಲಿಯೇ ಒಪ್ಪಂದಮಾಡಿಕೊಂಡರು.)

ಕಟ್ಟಕಡೆಗೆ ತೀರ್ಮಾನಕ್ಕಾಗಿ ವಿರೋಚನನ ತಂದೆಯಾದ ಪ್ರಹ್ಲಾದನ ಬಳಿಗೆ ಇಬ್ಬರೂ ಹೋದರು.

"ನಮ್ಮಿಬ್ಬರಲ್ಲಿ ಯಾರು ಹೆಚ್ಚು, ಮಹಾರಾಜ! ನೀನೀ ಪ್ರಶ್ನೆಗೆ ಉತ್ತರಿಸಲೇಬೇಕು. ಸುಳ್ಳುಹೇಳಬಾರದು"–ಎಂದು ಇಬ್ಬರೂ ಕೇಳಿಕೊಂಡರು.

ಪ್ರಹ್ಲಾದನು ಅವರಿಬ್ಬರ ಪರಸ್ಪರಕಲಹದಿಂದ ಭಯಪಟ್ಟವನಾಗಿ ಸುಧನ್ವನ ಕಡೆಗೊಮ್ಮೆ ನೋಡಿದನು. ಸುಧನ್ವನ ಮುಖದಲ್ಲಿ ಕೋಪವಾವರಿಸಿದ್ದಿತು. ಅವನು ಸಾಕ್ಷಾತ್ ಬ್ರಹ್ಮದಂಡದಂತೆಯೇ ಪ್ರಜ್ವಲಿಸುತ್ತಿದ್ದನು. ಪ್ರಹ್ಲಾದನನ್ನು ಕುರಿತು ಗಡುಸಾದ ಧ್ವನಿಯಿಂದಲೇ ಹೇಳಿದನು :

**ಯದಿ ವೈ ವಕ್ಷ್ಯಸಿ ಮೃಷಾ ಪ್ರಹ್ಲಾದಾಥ ನ ವಕ್ಷ್ಯಸಿ ।**
**ಶತಧಾ ತೇ ಶಿರೋ ವಜ್ರೀ ವಜ್ರೇಣ ಪ್ರಹರಿಷ್ಯತಿ ॥೭೦॥**

"ದೈತ್ಯೇಶ್ವರನೇ! ನೀನು ಸುಳ್ಳುಹೇಳಿದರೂ, ಅಥವಾ ಉತ್ತರಿಸದೇ

ಮೌನವಾಗಿದ್ದರೂ–ಇಂದ್ರನು ನಿನ್ನ ತಲೆಯನ್ನು ತನ್ನ ವಜ್ರಾಯುಧದಿಂದ ನೂರು ಭಾಗಗಳನ್ನಾಗಿ ಸೀಳಿಬಿಡುವನು.''

ಸುಧನ್ವನ ಮಾತುಗಳನ್ನು ಕೇಳಿ ದೈತ್ಯರಾಜನು ಅಶ್ವತ್ಥಪರ್ಣದಂತೆ ಭೀತಿಯಿಂದ ತರ-ತರನೆ ನಡುಗಿದನು.

ಆ ವಿಷಯದಲ್ಲಿ ಸಲಹೆಯನ್ನು ಕೇಳುವ ಸಲುವಾಗಿ ಪ್ರಹ್ಲಾದನು ಒಡನೆಯೇ ಕಶ್ಯಪರ ಬಳಿಗೆ ಹೋಗಿ ಬದ್ಧಾಂಜಲಿಯಾಗಿ ನಿಂತು ಹೇಳಿದನು :

``ಮಹಾನುಭಾವರೇ! ತಾವು ಧರ್ಮಜ್ಞರು. ದೇವಾಸುರ-ಬ್ರಾಹ್ಮಣರ ಧರ್ಮಗಳೆಲ್ಲವನ್ನೂ ತಿಳಿದವರು. ಎಲ್ಲರೂ ತಮ್ಮ ಧರ್ಮಬೋಧೆಯಂತೆಯೇ ನಡೆಯುತ್ತಿದ್ದಾರೆ. ಕರ್ತವ್ಯದ ವಿಷಯವಾಗಿ ನಾನೊಂದು ಸಂಕಟದಲ್ಲಿ ಸಿಕ್ಕಿಬಿದ್ದಿರುತ್ತೇನೆ. ಈ ವಿಷಯದಲ್ಲಿ ತಾವು–'ಧರ್ಮಮೂಲವಾದ ಪ್ರಶ್ನೆಗೆ ಉತ್ತರಿಸದಿದ್ದರೆ ಯಾವ ಶಿಕ್ಷೆಯಾಗುತ್ತದೆ? ಮತ್ತು ಪ್ರಶ್ನೆಗೆ ಸುಳ್ಳು ಉತ್ತರವನ್ನು ಕೊಟ್ಟರೆ ಯಾವ ವಿಧವಾದ ಪಾಪವು ಪ್ರಾಪ್ತವಾಗುತ್ತದೆ?'–ಎಂಬುದನ್ನು ದಯೆಯಿಟ್ಟು ವಿವರವಾಗಿ ಹೇಳಿರಿ.''

ಕಶ್ಯಪರು ಹೇಳತೊಡಗಿದರು :

**ಜಾನನ್ನತೇಬ್ರುವನ್ಪ್ರಶ್ನಾನ್ಕಾಮಾತ್ಕ್ರೋಧಾ ದ್ಭಯಾತ್ತಥಾ ।**
**ಸಹಸ್ರಂ ವಾರುಣಾನ್ಪಾಶಾನಾತ್ಮನಿ ಪ್ರತಿಮುಞ್ಚತಿ ॥೭೪॥**

``ಪ್ರಹ್ಲಾದ! ಒಬ್ಬ ಮನುಷ್ಯನು ಪ್ರಶ್ನೆಗೆ ತಕ್ಕ ಉತ್ತರವೇನೆಂಬುದು ತಿಳಿದಿದ್ದರೂ ಕೋಪದಿಂದಾಗಲೀ, ಭಯದಿಂದಾಗಲೀ, ದುರಾಶೆಯಿಂದಾಗಲೀ–ಉತ್ತರಿಸದೇ ಮೌನವಾಗಿದ್ದರೆ ಅಂತಹವನು ಒಂದು ಸಾವಿರ ವರುಣಪಾಶಗಳಿಂದ ಬಂಧಿಸಲ್ಪಡುತ್ತಾನೆ.

**ಸಾಕ್ಷೀ ವಾ ವಿಬ್ರುವನ್ಸಾಕ್ಷ್ಯಂ ಗೋಕರ್ಣಶಿಥಿಲಶ್ಚರನ್ ।**
**ಸಹಸ್ರಂ ವಾರುಣಾನ್ಪಾಶಾನಾತ್ಮನಿ ಪ್ರತಿಮುಞ್ಚತಿ ॥೭೫॥**

**ತಸ್ಯ ಸಂವತ್ಸರೇ ಪೂರ್ಣೇ ಪಾಶ ಏಕಃ ಪ್ರಮುಚ್ಯತೇ ।**
**ತಸ್ಮಾತ್ಸತ್ಯಂ ತು ವಕ್ತವ್ಯಂ ಜಾನತಾ ಸತ್ಯಮಞ್ಜಸಾ ॥೭೬॥**

ಪ್ರತ್ಯಕ್ಷದರ್ಶಿಯಾಗಿದ್ದವನೊಬ್ಬನನ್ನು ಸಾಕ್ಷ್ಯಹೇಳಲು ಕರೆತಂದಾಗ–ಜೋಲಾಡುತ್ತಿರುವ ಹಸುಗಳ ಕಿವಿಗಳಂತೆ–ಚಂಚಲಚಿತ್ತನಾಗಿ, ಎರಡು ಪಕ್ಷಗಳಿಗೂ ಹೊಂದಿಕೊಳ್ಳುವಂತೆ ಸಂಶಯಾಸ್ಪದವಾಗಿ ಸಾಕ್ಷ್ಯ ಹೇಳಿದರೆ ಅವನೂ ಸಹಸ್ರವರುಣಪಾಶಗಳಿಂದ ಬಂಧಿತನಾಗುತ್ತಾನೆ.

ಆ ವರುಣಪಾಶಗಳು ವರ್ಷಕ್ಕೊಂದರಂತೆ ಬಿಡುಗಡೆಯಾಗುತ್ತವೆ. (ಪಾಪದಿಂದ ಮುಕ್ತನಾಗಲು ಸಹಸ್ರವರ್ಷಗಳೇ ಆಗುತ್ತವೆ.) ಆದುದರಿಂದ ವಿಷಯವನ್ನು ತಿಳಿದಿರುವವನು ಮರೆಮಾಚದೇ ಸತ್ಯವನ್ನು ಹೇಳಿಯೇ ತೀರಬೇಕು.

**ವಿದ್ಧೋ ಧರ್ಮೋ ಹ್ಯಧರ್ಮೇಣ ಸಭಾಂ ಯತ್ರೋಪಪದ್ಯತೇ ।**
**ನ ಚಾಸ್ಯ ಶಲ್ಯಂ ಕೃನ್ತನ್ತಿ ವಿದ್ಧಾಸ್ತತ್ರ ಸಭಾಸದಃ ॥೭೭॥**

ಧರ್ಮವು ಅಧರ್ಮವೆಂಬ ಭರ್ಜಿಯಿಂದ ಇರಿಯಲ್ಪಟ್ಟು ಸಭೆಯೊಳಗೆ ಬಂದಾಗ–ಆ ಶಲ್ಯವನ್ನು ತೆಗೆದುಹಾಕಿ ಧರ್ಮವನ್ನು ರಕ್ಷಿಸುವುದು ಸಭಾಸದರ ಮುಖ್ಯಕರ್ತವ್ಯ. ಹಾಗೆ ಮಾಡದಿದ್ದರೆ ಆ ಶಲ್ಯವು ಸಭ್ಯರೆಲ್ಲರನ್ನೂ ಹಿಂಸಿಸುತ್ತದೆ. (ಪಾಪದ ಫಲವನ್ನು ಸಭ್ಯರೂ ಅನುಭವಿಸಬೇಕಾಗುತ್ತದೆ.)

**ಅರ್ಧಂ ಹರತಿ ವೈ ಶ್ರೇಷ್ಠಃ ಪಾದೋ ಭವತಿ ಕರ್ತೃಷು ।**
**ಪಾದಶ್ಚೈವ ಸಭಾಸತ್ಸು ಯೇ ನ ನಿನ್ದನ್ತಿ ನಿನ್ದಿತಮ್ ॥೭೮॥**

ಒಂದು ಅಧರ್ಮಕ್ರಿಯೆಯು ನಡೆದಾಗ ಅದರ ಕರ್ತೃವನ್ನು ಸಭೆಯಲ್ಲಿ ಸಭಾಸದರು ಖಂಡಿಸದೇ ಮೌನದಿಂದಿದ್ದರೆ ಆ ಪಾಪದ ಅರ್ಧಭಾಗವು ಸಭಾಧ್ಯಕ್ಷನಿಗೂ, ಕಾಲುಭಾಗವು ಕರ್ತೃಗಳಿಗೂ, ಉಳಿದ ಕಾಲುಭಾಗವು ಸಭಾಸದರಿಗೂ ಸೇರುತ್ತದೆ.

**ಅನೇನಾ ಭವತಿ ಶ್ರೇಷ್ಠೋ ಮುಚ್ಯನ್ತೇ ಚ ಸಭಾಸದಃ ।**
**ಏನೋ ಗಚ್ಛತಿ ಕರ್ತಾರಂ ನಿನ್ದಾರ್ಹೋ ಯತ್ರ ನಿನ್ದ್ಯತೇ ॥೭೯॥**

ಇದಕ್ಕೆ ಪ್ರತಿಯಾಗಿ ಸಭೆಯಲ್ಲಿ ಪಾಪಕರ್ಮಿಯನ್ನು ಖಂಡಿಸಿದರೆ ಸಭಾಧ್ಯಕ್ಷನೂ ಸಭಾಸದರೂ ಪಾಪದಿಂದ ವಿಮುಕ್ತರಾಗಿ, ಪಾಪವು ಸಂಪೂರ್ಣವಾಗಿ ಕರ್ತೃವಿಗೇ ಸೇರುತ್ತದೆ.

ವಿತಥಂ ತು ವದೇಯುರ್ಯೇ ಧರ್ಮಂ ಪ್ರಹ್ಲಾದ ಪೃಚ್ಛತೇ ।
ಇಷ್ಟಾಪೂರ್ತಂ ಚ ತೇ ಘ್ನನ್ತಿ ಸಪ್ತ ಸಪ್ತ ಪರಾವರಾನ್ ॥೮೦॥

ಪ್ರಹ್ಲಾದನೇ! ಧರ್ಮದ ವಿಷಯವಾಗಿ ಪ್ರಶ್ನೆಕೇಳಿದಾಗ ಧರ್ಮಕ್ಕೆ ವಿರೋಧವಾಗಿ ಉತ್ತರಿಸಿದರೆ (ಸುಳ್ಳು ಹೇಳಿದರೆ)–ಅವರೂ ಅವರ ಹಿಂದಿನ ಏಳು ತಲೆಮಾರಿನವರೂ ಮತ್ತು ಮುಂದಿನ ಏಳು ತಲೆಮಾರಿನವರೂ ಮಾಡಿದ ಮತ್ತು ಮಾಡುವ ಇಷ್ಟಾಪೂರ್ತಾದಿ ಪುಣ್ಯಕರ್ಮಫಲಗಳು ನಾಶ ವಾಗುವುವು.

ಹೃತಸ್ವಸ್ಯ ಹಿ ಯದ್ದುಃಖಂ ಹತಪುತ್ರಸ್ಯ ಚೈವ ಯತ್ ।
ಋಣಿನಃ ಪ್ರತಿ ಯಚ್ಚೈವ ಸ್ವಾರ್ಥಾದ್ಭ್ರಷ್ಟಸ್ಯ ಚೈವ ಯತ್ ॥೮೧॥

ಸ್ತ್ರಿಯಾಃ ಪತ್ಯಾ ವಿಹೀನಾಯಾ ರಾಜ್ಞಾ ಗ್ರಸ್ತಸ್ಯ ಚೈವ ಯತ್ ।
ಅಪುತ್ರಾಯಾಶ್ಚ ಯದ್ದುಃಖಂ ವ್ಯಾಘ್ರಾಘ್ರಾತಸ್ಯ ಚೈವ ಯತ್ ॥೮೨॥

ಅಧ್ಯೂಢಾಯಾಶ್ಚ ಯದ್ದುಃಖಂ ಸಾಕ್ಷಿಭಿರ್ವಿಹತಸ್ಯ ಚ ।
ಏತಾನಿ ವೈ ಸಮಾನ್ಯಾಹುರ್ದುಃಖಾನಿ ತ್ರಿದಿವೇಶ್ವರಾಃ ।
ತಾನಿ ಸರ್ವಾಣಿ ದುಃಖಾನಿ ಪ್ರಾಪ್ನೋತಿ ವಿತಥಂ ಬ್ರುವನ್ ॥೮೩॥

ಐಶ್ವರ್ಯವೆಲ್ಲವನ್ನೂ ಕಳೆದುಕೊಂಡವನು, ಮಗನನ್ನು ಕಳೆದು ಕೊಂಡವನು, ಋಣಬಾಧೆಗೆ ತುತ್ತಾದವನು, ತನ್ನ ಕೆಲಸಕ್ಕೆ ಸರಿಯಾದ ಪ್ರಯೋಜನವನ್ನು ಪಡೆಯದವನು, ಗಂಡನನ್ನು ಕಳೆದುಕೊಂಡ ಹೆಂಗಸು, ರಾಜಕೋಪಕ್ಕೆ ಪಾತ್ರನಾಗಿ ಸರ್ವಸ್ವವನ್ನೂ ಕಳೆದುಕೊಂಡವನು, ಬಂಜೆ ಯಾದ ಸ್ತ್ರೀ, ಹುಲಿಯ ಬಾಯಲ್ಲಿ ಸಿಕ್ಕಿಕೊಂಡವನು, ಸವತಿಯಿರುವವಳು ಮತ್ತು ಸುಳ್ಳುಸಾಕ್ಷ್ಯದ ಕಾರಣದಿಂದಾಗಿ ತನ್ನ ಸರ್ವಸ್ವವನ್ನೂ ಕಳೆದು ಕೊಂಡಿರುವವನು–ಇವರೆಲ್ಲರ ದುಃಖಗಳೂ ಸಮಾನವಾದ ದುಃಖಗಳೆಂದು ದೇವತೆಗಳು ಅಭಿಪ್ರಾಯಪಡುತ್ತಾರೆ. ಆ ದುಃಖಗಳೆಲ್ಲವನ್ನೂ ಸುಳ್ಳುಹೇಳು ವವನು ಹೊಂದುತ್ತಾನೆ.

ಸಮಕ್ಷದರ್ಶನಾತ್ಸಾಕ್ಷೀ ಶ್ರವಣಾಚ್ಚೇತಿ ಧಾರಣಾತ್ ।
ತಸ್ಮಾತ್ಸತ್ಯಂ ಬ್ರುವನ್ಸಾಕ್ಷೀ ಧರ್ಮಾರ್ಥಾಭ್ಯಾಂ ನ ಹೀಯತೇ ॥೮೪॥

ಸಾಕ್ಷಿಯಾಗಬೇಕಾದರೆ ಅವನು ಪ್ರತ್ಯಕ್ಷದರ್ಶಿಯಾಗಿರಬೇಕು. ಕಕ್ಷಿ-ಪ್ರತಿಕಕ್ಷಿಗಳು ಏನು ಹೇಳಿದರೆಂಬುದನ್ನು ಕೇಳಿರಬೇಕು. ಸತ್ಯಾಂಶವೇನೆಂಬುದನ್ನು ತಿಳಿದಿರಬೇಕು. ಅಂತಹ ಸಾಕ್ಷಿಯು ಸತ್ಯವನ್ನೇ ಹೇಳಬೇಕಲ್ಲದೇ ಅಸತ್ಯವನ್ನೆಂದಿಗೂ ಹೇಳಬಾರದು; ಮೌನವಾಗಿರಲೂಬಾರದು. ಸತ್ಯವಾಗಿ ಸಾಕ್ಷ್ಯವನ್ನು ಹೇಳುವವನು ತನ್ನ ಧರ್ಮಾರ್ಥಗಳನ್ನೆಂದಿಗೂ ಕಳೆದುಕೊಳ್ಳುವುದಿಲ್ಲ."

ಮಹಾಮಹಿಮರಾದ ಕಶ್ಯಪರು ಹೀಗೆ ಹೇಳಿದೊಡನೆಯೇ ಪ್ರಹ್ಲಾದನು ತನ್ನ ಮಗನನ್ನು ಕುರಿತು ಹೇಳಿದನು :

**ಶ್ರೇಯಾನ್ಸುಧನ್ವಾ ತ್ವತ್ತೋ ವೈ ಮತ್ತಃ ಶ್ರೇಯಾಂಸ್ತಥಾಙ್ಗಿರಾಃ ।**
**ಮಾತಾ ಸುಧನ್ವನಶ್ಚಾಪಿ ಮಾತೃತಃ ಶ್ರೇಯಸೀ ತವ ।**
**ವಿರೋಚನ ಸುಧನ್ವಾಯಂ ಪ್ರಾಣಾನಾಮೀಶ್ವರಸ್ತವ ॥೮೬॥**

"ಮಗು, ವಿರೋಚನ! ಅಂಗಿರಸರು ನನಗಿಂತಲೂ ಶ್ರೇಷ್ಠರು. ಅಂತೆಯೇ ಅವರ ಮಗನಾದ ಸುಧನ್ವನು ನಿನಗಿಂತಲೂ ಶ್ರೇಷ್ಠನು. ಸುಧನ್ವನ ತಾಯಿಯೂ ನಿನ್ನ ತಾಯಿಗಿಂತಲೂ ಶ್ರೇಷ್ಠಳು. ಆದುದರಿಂದ ಈಗ ಸುಧನ್ವನು ನಿನ್ನ ಪ್ರಾಣಗಳಿಗೆ ಒಡೆಯನಾಗಿರುತ್ತಾನೆ."

ಪ್ರಹ್ಲಾದನ ಆ ನಿಷ್ಪಕ್ಷಪಾತವಾದ ಮಾತುಗಳನ್ನು ಕೇಳಿ ಸುಪ್ರೀತನಾದ ಸುಧನ್ವನು ಪ್ರಹ್ಲಾದನನ್ನು ಕುರಿತು ಹೇಳಿದನು :

**ಪುತ್ರಸ್ನೇಹಂ ಪರಿತ್ಯಜ್ಯ ಯಸ್ತ್ವಂ ಧರ್ಮೇ ವ್ಯವಸ್ಥಿತಃ ।**
**ಅನುಜಾನಾಮಿ ತೇ ಪುತ್ರಂ ಜೀವತ್ವೇಷ ಶತಂ ಸಮಾಃ ॥೮೭॥**

"ಪ್ರಹ್ಲಾದನೇ! ನೀನು ಪುತ್ರಪ್ರೇಮವೆಂಬ ವ್ಯಾಮೋಹಕ್ಕೆ ವಶನಾಗದೇ ಧರ್ಮದ ಪಕ್ಷವನ್ನು ವಹಿಸಿ ಉತ್ತರಿಸಿರುವೆಯಾದ ಕಾರಣ ನಿನ್ನೀ ಮಗನಿಗೆ ಸ್ವತಂತ್ರನಾಗಿ ಬಾಳಲು ಅನುಜ್ಞೆಕೊಡುವೆನು. ಈತನು ನೂರು ವರ್ಷಗಳು ಜೀವಿಸಿರಲಿ."

ಹೀಗೆಂದು ಹೇಳಿ ಸುಧನ್ವನು ತನ್ನ ಆಶ್ರಮಕ್ಕೆ ತೆರಳಿದನು.

ಎಲೈ ರಾಜರೇ! ಈ ಇತಿಹಾಸವನ್ನು ಕೇಳಿದ ಮೇಲಾದರೂ ನೀವು

ಮೌನವಾಗಿ ಕುಳಿತಿರದೇ ದ್ರೌಪದಿಯ ಪ್ರಶ್ನೆಗೆ ಧರ್ಮವಿಹಿತವಾದ ರೀತಿಯಲ್ಲಿ ಹೇಗೆ ಉತ್ತರಿಸಬೇಕೆಂಬುದನ್ನು ಸಮಾಲೋಚಿಸಿರಿ."

ಹೀಗೆ ಪದೇ ಪದೇ ವಿದುರನು ಒತ್ತಾಯಪಡಿಸಿದರೂ ಆ ಸಭಾಮಂದಿರದಲ್ಲಿ ಕುಳಿತಿದ್ದ ಯಾವನೊಬ್ಬ ರಾಜನೂ ಒಂದು ಮಾತನ್ನೂ ಆಡಲಿಲ್ಲ. ಕರ್ಣನೊಬ್ಬನು ಮಾತ್ರ ಉನ್ಮತ್ತನಾಗಿ ದುಃಶಾಸನನಿಗೆ– 'ದುಃಶಾಸನ! ನೀನೀಗಲೇ ಈ ದಾಸಿಯನ್ನು ಅಂತಃಪುರಕ್ಕೆ ಸೆಳೆದುಕೊಂಡು ಹೋಗು'–ಎಂದು ಹೇಳಿದನು.

ದುಃಶಾಸನನು ಒಡನೆಯೇ ಮೇಲೆದ್ದು ಸಭ್ಯರ ಮತ್ತು ಪಾಂಡವರ ಎದುರಿನಲ್ಲಿ ಸಂಕಟದಿಂದ ರೋದನಮಾಡುತ್ತಿದ್ದ, ದುಃಶಾಸನನ ಭಯದಿಂದಾಗಿ ನಡುಗುತ್ತಿದ್ದ, ನಾಚಿಕೆಯಿಂದ ತಲೆತಗ್ಗಿಸಿದ್ದ, ತಪಸ್ವಿನಿಯಾದ ದ್ರೌಪದಿಯನ್ನು ಸೆಳೆಯತೊಡಗಿದನು.

ಅ೬೮ನೆಯ ಅಧ್ಯಾಯವು ಮುಗಿಯಿತು.

೬೯ನೆಯ ಅಧ್ಯಾಯ ದ್ಯೂತಪರ್ವ (ಮುಂದುವರಿದಿದೆ.)

## ದ್ರೌಪದಿಯ ವಿಲಾಪ : ಭೀಷ್ಮನ ಮಾತು

ಪಾರಿಕ್ಷಿತ! ದ್ರೌಪದಿಯು ಬಹಳ ಕಷ್ಟದಿಂದ ದುರುಳನಾದ ದುಃಶಾಸನನ ಸೆಳೆತವನ್ನು ಸಹಿಸಿಕೊಂಡು ಕುರುರಾಜರನ್ನು ಕುರಿತು ಹೇಳತೊಡಗಿದಳು :

**ಪುರಸ್ತಾತ್ಕರಣೀಯಂ ಮೇ ನ ಕೃತಂ ಕಾರ್ಯಮುತ್ತರಮ್ ।**
**ವಿಹ್ವಲಾಸ್ಮಿ ಕೃತಾನೇನ ಕರ್ಷತಾ ಬಲಿನಾ ಬಲಾತ್ ॥೧॥**

"ತಮ್ಮೆಲ್ಲರನ್ನೂ ಸಂದರ್ಶಿಸಿದೊಡನೆಯೇ ಮಾಡಬೇಕಾದ ಮುಖ್ಯ ಕರ್ತವ್ಯವನ್ನು ನಿರ್ವಹಿಸಲು ನನಗೆ ಇನ್ನೂ ಸಾಧ್ಯವಾಗಿಲ್ಲ. ಬಲಿಷ್ಠನಾದ ಈ ದುಃಶಾಸನನಿಂದ ಸೆಳೆಯಲ್ಪಡುತ್ತಿರುವ ನಾನು ವ್ಯಾಕುಲಳಾಗಿದ್ದೇನೆ. ಇಲ್ಲಿರುವ ಕುರುಶ್ರೇಷ್ಠರಿಗೆ ವಿನಯಪೂರ್ವಕವಾಗಿ ಅಭಿವಾದನಮಾಡುತ್ತೇನೆ. ಇದು ನನ್ನ ಪ್ರಥಮಕರ್ತವ್ಯವಾಗಿದ್ದಿತು. ಆದರೆ ಈ ಕರ್ತವ್ಯವನ್ನು ಸಕಾಲದಲ್ಲಿ ಪಾಲಿಸದಿರುವ ಅಪರಾಧವು ನನ್ನದಾಗಿರುವುದಿಲ್ಲ."

ಎಂದು ಹೇಳುತ್ತಿದ್ದಂತೆಯೇ ದುಃಶಾಸನನು ಪುನಃ ದ್ರೌಪದಿಯನ್ನು ವೇಗವಾಗಿ ಸೆಳೆದನು. ದ್ರೌಪದಿಯು ಕೆಳಗೆ ಬಿದ್ದಳು. ಅಂತಹ ದುರವಸ್ಥೆಯನ್ನು ಅನುಭವಿಸಲು ಅನರ್ಹಳಾದ ದ್ರೌಪದಿಯು ಗದ್ಗದಸ್ವರದಿಂದ ರೋದನಮಾಡುತ್ತಾ ಸಭ್ಯರನ್ನು ಕುರಿತು ಹೇಳತೊಡಗಿದಳು :

"ಅಯ್ಯೋ! ನನ್ನ ಸ್ವಯಂವರಕಾಲದಲ್ಲಿ ಮಾತ್ರ ನಾನು ರಾಜಸಭೆಗೆ ಕರೆತರಲ್ಪಟ್ಟಿದ್ದೆನು. ಅಲ್ಲಿಂದ ಮುಂದೆ ಯಾವಾಗಲೂ, ಯಾರ ಕಣ್ಣಿಗೂ ಬಿದ್ದವಳಲ್ಲ. ಅಂತಹ ನಾನಿಂದು ಈ ರಾಜಸಭೆಗೆ ಸೆಳೆಯಲ್ಪಟ್ಟಿದ್ದೇನೆ. ಅಂತಃಪುರದಲ್ಲಿದ್ದಾಗ ಯಾವಳನ್ನು ಸೂರ್ಯ-ವಾಯುಗಳೂ ನೋಡಲು ಸಾಧ್ಯವಾಗುತ್ತಿರಲಿಲ್ಲವೋ–ಅಂತಹವಳನ್ನಿಂದು ಈ ಸಭ್ಯರ ಮುಂದೆ ಪ್ರದರ್ಶನಕ್ಕೆ ಸೆಳೆತರಲಾಗಿದೆ. ಪಾಂಡುಕುಮಾರರು ಯಾವಳ ಮೇಲೆ ವಾಯುದೇವನ ಸ್ಪರ್ಶವನ್ನೂ ಸಹಿಸುತ್ತಿರಲಿಲ್ಲವೋ ಅಂತಹವಳನ್ನಿಂದು ದುರಾತ್ಮನು ಈ ಸಭೆಗೆ ಸೆಳೆದುತಂದು ಪಶುವಿಗಿಂತಲೂ ಕಡೆಯಾಗಿ ಪರಿಗಣಿಸುತ್ತಿರುವಾಗ ಈ ಪಾಂಡವರು ಸುಮ್ಮನಿದ್ದಾರೆ.

ಸೊಸೆಯಂತೆಯೂ, ಮಗಳಂತೆಯೂ ಇರುವ ಮತ್ತು ಇಂತಹ ಕ್ರೂರಶಿಕ್ಷೆಗೆ ಅನರ್ಹಳಾಗಿರುವ ನನ್ನನ್ನು ಈ ದುಃಶಾಸನನು ಎಳೆದಾಡುತ್ತಿದ್ದರೂ ಸಹಿಸಿಕೊಂಡು ಇಲ್ಲಿರುವ ಕುರುವಂಶದ ಹಿರಿಯರು ಸುಮ್ಮನೆ ಕುಳಿತಿದ್ದಾರೆ.

ಕಾಲವೈಪರೀತ್ಯವೇ ಇವೆಲ್ಲಕ್ಕೂ ಕಾರಣವೆನಿಸುತ್ತದೆ. ಏಕೆಂದರೆ : ನಾನು ಸತ್ಕುಲಪ್ರಸೂತಳಾಗಿ ಪತಿವ್ರತೆಯಾಗಿದ್ದರೂ ನಿಷ್ಕಾರಣವಾಗಿ ಈ ಮಹಾಸಭೆಗೆ ಸೆಳೆಯಲ್ಪಟ್ಟಿರುವೆನಲ್ಲಾ! ಇದಕ್ಕಿಂತಲೂ ಹೀನವಾದ ಕೆಲಸವು ಯಾವುದು? ಧರ್ಮಿಷ್ಠರೆಂದೂ–ಸತ್ಯವ್ರತರೆಂದೂ ಕೀರ್ತಿಪಡೆದಿರುವ ಈ ರಾಜರ ಧರ್ಮವೆಲ್ಲಿಹೋಯಿತು?

**ಧರ್ಮ್ಯಾಂ ಸ್ತ್ರಿಯಂ ಸಭಾಂ ಪೂರ್ವೇ ನ ನಯನ್ತೀತಿ ನಃ ಶ್ರುತಮ್ ।**
**ಸ ನಷ್ಟಃ ಕೌರವೇಯೇಷು ಪೂರ್ವೋ ಧರ್ಮಃ ಸನಾತನಃ ॥೬॥**

ಹಿಂದೆ ರಾಜರು ಧರ್ಮಪರಾಯಣಳಾದ ಧಾರ್ಮಿಕಳಾದ ಸ್ತ್ರೀಯನ್ನು

ಯಾವ ಕಾರಣದಿಂದಲೂ ಸಭೆಗೆ ಕರೆತರುತ್ತಿರಲಿಲ್ಲವೆಂದು ನಾನು ಕೇಳಿರುತ್ತೇನೆ. ಆ ಸನಾತನಧರ್ಮವೇ ಇಂದು ಈ ಕುರುರಾಜರಲ್ಲಿ ನಾಶವಾದಂತಾಗಿದೆ. ಹಾಗಿಲ್ಲದಿದ್ದರೆ ಪಾಂಡವರ ಧರ್ಮಪತ್ನಿಯಾಗಿರುವ, ಧೃಷ್ಟದ್ಯುಮ್ನನ ತಂಗಿಯಾಗಿರುವ ಮತ್ತು ವಾಸುದೇವನ ಸಖಿಯಾಗಿರುವ ನನ್ನನ್ನು ಹೇಗೆ ತಾನೇ ಈ ಮಹಾಸಭೆಗೆ ಸೆಳೆದುತರುತ್ತಿದ್ದರು?

ಕುರುರಾಜರೇ! ನಾನು ಯುಧಿಷ್ಠಿರನ ಧರ್ಮಪತ್ನಿಯಾಗಿದ್ದೇನೆ ಮತ್ತು ಅವನಂತೆಯೇ ನಾನೂ ಕ್ಷತ್ರಿಯಕುಲೋತ್ಪನ್ನಳಾಗಿದ್ದೇನೆ. ಆದುದರಿಂದ ನಿಶ್ಚಯವಾಗಿ ಹೇಳಿರಿ. ನಾನು ದಾಸಿಯೇ ; ಅಲ್ಲವೇ? ನಾನು ತಮ್ಮ ತೀರ್ಮಾನವನ್ನು ಸಂತೋಷದಿಂದ ಅಂಗೀಕರಿಸಿ ಅದರಂತೆ ನಡೆಯುತ್ತೇನೆ. ಕುರುಗಳ ಕೀರ್ತಿಗೆ ಕಳಂಕಪ್ರಾಯನಾಗಿರುವ ಈ ದುರುಳನು ನನ್ನನ್ನು ಕ್ಷಣ-ಕ್ಷಣಕ್ಕೂ ಅತ್ತಲಿತ್ತ ಎಳೆದು ಹಿಂಸಿಸುತ್ತಿದ್ದಾನೆ. ನಾನೀ ಸಂಕಟವನ್ನು ಹೆಚ್ಚು ಹೊತ್ತು ಸಹಿಸಲಾರೆನು. ಆದುದರಿಂದ–'ನಾನು ನ್ಯಾಯದಿಂದ ಗೆಲ್ಲಲ್ಪಟ್ಟಿರುವೆನೇ? ಇಲ್ಲವೇ?'–ಎಂಬ ಪ್ರಶ್ನೆಗೆ ಉತ್ತರವನ್ನು ತಮ್ಮಿಂದ ನಿರೀಕ್ಷಿಸುತ್ತೇನೆ. ನಿಮ್ಮ ಉತ್ತರವು ನನಗೆ ಅನುಕೂಲವಾಗಿದ್ದರೂ ಅಥವಾ ಪ್ರತಿಕೂಲವಾಗಿದ್ದರೂ ಸಂತೋಷದಿಂದ ಒಪ್ಪಿಕೊಳ್ಳುತ್ತೇನೆ."

ದ್ರೌಪದಿಯ ಆ ಮಾತುಗಳನ್ನು ಕೇಳಿ ಭೀಷ್ಮನು ಪುನಃ ಉತ್ತರಿಸಿದನು:

**ಉಕ್ತವಾನಸ್ಮಿ ಕಲ್ಯಾಣಿ ಧರ್ಮಸ್ಯ ಪರಮಾ ಗತಿಃ ।**
**ಲೋಕೇ ನ ಶಕ್ಯತೇ ಜ್ಞಾತುಮಪಿ ವಿಜ್ಞೈರ್ಮಹಾತ್ಮಭಿಃ ॥೧೪॥**

"ಕಲ್ಯಾಣಿ! ನಾನು ಹಿಂದೆಯೇ ಹೇಳಿದಂತೆ ಧರ್ಮವೆಂಬುದು ಬಹಳ ಸೂಕ್ಷ್ಮವಾದುದು. ಕೆಲವು ಸಮಯಗಳಲ್ಲಿ ಮಹಾತ್ಮರಾದ, ವಿಶೇಷಜ್ಞರಾದ ಜ್ಞಾನಿಗಳಿಂದಲೂ ಧರ್ಮದ ವಿಷಯವಾಗಿ–'ಇದಮಿತ್ಥಂ'–ಎಂದು ತೀರ್ಮಾನಿಸಲು ಸಾಧ್ಯವಾಗುವುದಿಲ್ಲ. ಏಕೆಂದರೆ :

**ಬಲವಾಂಶ್ಚ ಯಥಾ ಧರ್ಮಂ ಲೋಕೇ ಪಶ್ಯತಿ ಪೂರುಷಃ ।**
**ಸ ಧರ್ಮೋ ಧರ್ಮವೇಲಾಯಾಂ ಭವತ್ಯಭಿಹತಃ ಪರಃ ॥೧೫॥**

ಪ್ರಪಂಚದಲ್ಲಿ ಬಲಿಷ್ಠನಾದವನು ಹೇಳುವುದೇ ನ್ಯಾಯವೆಂದು ಸರ್ವರಿಂದಲೂ ಮಾನ್ಯಮಾಡಲ್ಪಡುತ್ತದೆ. ದುರ್ಬಲನಾದವನು ಧರ್ಮಸೂಕ್ಷ್ಮವನ್ನರಿತು ನಿಶ್ಚಯಾಂಶವನ್ನು ಹೇಳಿದರೂ ಅದನ್ನು ಇತರರು ಮಾನ್ಯಮಾಡುವುದಿಲ್ಲ. ಇದು ಇಂದಿನ ವ್ಯವಹಾರವಾಗಿರುತ್ತದೆ. (ಆದುದರಿಂದಲೇ ಕರ್ಣ-ದುರ್ಯೋಧನರು ಹೇಳುವ ಮಾತುಗಳೇ ಇಂದು ಸರ್ವೋಚ್ಚಧರ್ಮವಾಗಿದೆ.)

ನನ್ನ ಅಭಿಪ್ರಾಯವನ್ನು ಹೇಳಬೇಕೆಂದರೆ : ನೀನು ಕೇಳುತ್ತಿರುವ ಪ್ರಶ್ನೆಯು ಸಮಸ್ಯೆಯಾಗಿದೆ. ಅನೇಕ ಸೂಕ್ಷ್ಮವಿಷಯಗಳನ್ನೊಳಗೊಂಡಿದೆ. ಈ ಕಾರಣಗಳಿಂದಾಗಿ ನಾನು 'ಇದೇ ಸಿದ್ಧಾಂತ' ಎಂದು ಹೇಳಲು ಅಸಮರ್ಥನಾಗಿದ್ದೇನೆ. ಆದರೆ ಇಷ್ಟು ಮಾತ್ರ ನಿಶ್ಚಯ. ಕುರುರಾಜರು ದಿನ-ದಿನಕ್ಕೂ ಲೋಭ-ಮೋಹಪರವಶರಾಗುತ್ತಿದ್ದಾರೆ. ಆದುದರಿಂದ ಅವರ ಅಂತ್ಯವು ಸಮೀಪಿಸಿದೆ.

ದ್ರೌಪದಿ! ನೀನು ಯಾವ ಕುಲಕ್ಕೆ ಸೊಸೆಯಾಗಿರುವೆಯೋ–ಆ ಕುಲದವರು ಮಾತ್ರ ಎಂತಹ ಕಷ್ಟಸ್ಥಿತಿಯಲ್ಲಿಯೂ ಧರ್ಮಮಾರ್ಗದಿಂದ ಚ್ಯುತರಾಗಿ ಕಾರ್ಯಮಾಡತಕ್ಕವರಲ್ಲ. ತದನುಗುಣವಾಗಿ ನೀನು ಈ ಸಂಕಟ ಪರಿಸ್ಥಿತಿಯಲ್ಲಿಯೂ ಸತ್ಯ-ಧರ್ಮಗಳೆಡೆಗೆ ದೃಷ್ಟಿಯನ್ನಿಟ್ಟು ಸಹನೆಯಿಂದ ವರ್ತಿಸುತ್ತಿರುವುದು ನಿನ್ನ ಘನತೆಗೆ ತಕ್ಕುದಾಗಿಯೇ ಇದೆ.

ವಯೋವೃದ್ಧರಾದ ಮತ್ತು ಜ್ಞಾನವೃದ್ಧರಾದ ದ್ರೋಣಾದಿಗಳೂ ಮೃತಪ್ರಾಯರಾಗಿ ತಲೆಯನ್ನು ತಗ್ಗಿಸಿ ಕುಳಿತಿದ್ದಾರೆ. ಆದುದರಿಂದ ಇವರಿಂದಲೂ ನೀನು ಉತ್ತರವನ್ನು ನಿರೀಕ್ಷಿಸುವುದು ವ್ಯರ್ಥವೇ ಸರಿ.

ಈ ವಿಷಯದಲ್ಲಿ ಧರ್ಮಾನುಗುಣವಾಗಿ ಉತ್ತರಿಸಲು ಯುಧಿಷ್ಠಿರನೊಬ್ಬನೇ ಸಮರ್ಥನೆಂದು ನಾನು ಅಭಿಪ್ರಾಯಪಡುತ್ತೇನೆ. ಆದುದರಿಂದ 'ನೀನು ಜಯಿಸಲ್ಪಟ್ಟಿರುವೆಯೋ ಅಥವಾ ಇಲ್ಲವೋ?'–ಎಂಬುದನ್ನು ಧರ್ಮಜನೇ ನಿರ್ಣಯಿಸುವುದು ಸೂಕ್ತವೆನಿಸುವುದು."

೬೯ನೆಯ ಅಧ್ಯಾಯವು ಮುಗಿಯಿತು.

೭೦ನೆಯ ಅಧ್ಯಾಯ ದ್ಯೂತಪರ್ವ (ಮುಂದುವರಿದಿದೆ.)

## ದುರ್ಯೋಧನನ ನಿಷ್ಠುರೋಕ್ತಿ : ಭೀಮಸೇನನ ಕೋಪೋದ್ಗಾರ

ವೈಶಂಪಾಯನರು ಹೇಳುತ್ತಾರೆ :

**ತಥಾ ತು ದೃಷ್ಟ್ವಾ ಬಹು ತತ್ರ ದೇವೀಂ**
**ರೋರೂಯಮಾಣಾಂ ಕುರರೀಮಿವಾರ್ತಾಮ್ ।**
**ನೋಚುರ್ವಚಃ ಸಾಧ್ವಥ ವಾಪ್ಯಸಾಧು**
**ಮಹೀಕ್ಷಿತೋ ಧಾರ್ತರಾಷ್ಟ್ರಸ್ಯ ಭೀತಾಃ ॥೧॥**

"ಜನಮೇಜಯ! ಸಂಕಟದಿಂದ ಕೂಗಿಕೊಳ್ಳುವ ಹೆಣ್ಣುಕುರರಪಕ್ಷಿಯಂತೆ–ದ್ರೌಪದಿಯು ಬಾರಿ-ಬಾರಿಗೂ ರಾಜರನ್ನು ಪ್ರಶ್ನಿಸುತ್ತಿದ್ದರೂ, ರೋದನಮಾಡುತ್ತಿದ್ದರೂ ದುರ್ಯೋಧನನ ಭಯದಿಂದಾಗಿ ರಾಜರು ಒಂದು ಮಾತನ್ನಾದರೂ ಆಡದೇ ಮೌನದಿಂದ ಕುಳಿತಿದ್ದರು. ರಾಜರು ಮತ್ತು ಅವರ ಮಕ್ಕಳು-ಮೊಮ್ಮಕ್ಕಳೆಲ್ಲರೂ ಮೌನದಿಂದ ಕುಳಿತಿರುವುದನ್ನು ಕಂಡು ದುರ್ಯೋಧನನು ಮುಗುಳ್ನಗೆಯನ್ನು ಬೀರುತ್ತಾ ಅಟ್ಟಹಾಸದಿಂದ ದ್ರೌಪದಿಯನ್ನು ಕುರಿತು ಹೇಳಿದನು :

"ಯಾಜ್ಞಸೇನಿ! ನೀನು ಕೇಳುತ್ತಿರುವ ಪ್ರಶ್ನೆಗೆ ಉತ್ತರವು ನಿನ್ನ ಪತಿಗಳನ್ನೇ ಅವಲಂಬಿಸಿದೆ. ಭೀಮ-ಅರ್ಜುನ-ನಕುಲ-ಸಹದೇವರು ನಿನ್ನ ಪ್ರಶ್ನೆಗೆ ಉತ್ತರಕೊಡಲು ಸಮರ್ಥರಾಗಿದ್ದಾರೆ. ಆದುದರಿಂದ ಇವರು ನಿನ್ನ ಪ್ರಶ್ನೆಗೆ ಉತ್ತರವನ್ನೀಯಲಿ. ಈ ನಾಲ್ವರು ನಿನ್ನ ಗಂಡಂದಿರು ನಿನ್ನ ಸಲುವಾಗಿಯಾದರೂ–'ಯುಧಿಷ್ಠಿರನು ತಮ್ಮ ಸ್ವಾಮಿಯಲ್ಲ'–ಎಂಬುದನ್ನು ಈ ಮಹಾಸಭೆಯಲ್ಲಿ ಘೋಷಿಸಿ ಧರ್ಮಜನನ್ನು ಅನೃತಭಾಷಿಯನ್ನಾಗಿ ಮಾಡಲಿ. ಆಗ ನೀನು ನಿಶ್ಚಯವಾಗಿಯೂ ಸ್ವತಂತ್ರಳಾಗುವೆ. ದಾಸ್ಯದಿಂದ ವಿಮೋಚನೆಯನ್ನೂ ಪಡೆಯುವೆ. ಅಥವಾ–

**ಧರ್ಮೇ ಸ್ಥಿತೋ ಧರ್ಮಸುತೋ ಮಹಾತ್ಮಾ**
**ಸ್ವಯಂ ಚೇದಂ ಕಥಯತ್ವಿನ್ದ್ರಕಲ್ಪಃ ।**
**ಈಶೋ ವಾ ತೇ ಹ್ಯನೀಶೋಽಥವೈಷ**
**ವಾಕ್ಯಾದಸ್ಯ ಕ್ಷಿಪ್ರಮೇಕಂ ಭಜಸ್ವ ॥೫॥**

ಮಹಾನುಭಾವನಾದ, ಧರ್ಮೈಕದೃಷ್ಟಿಯುಳ್ಳ, ಇಂದ್ರಸದೃಶನಾದ ಯುಧಿಷ್ಠಿರನೇ-ತಾನು ನಿನ್ನ ಸ್ವಾಮಿಯೇ ಅಥವಾ ಅಲ್ಲವೇ ಎಂಬುದನ್ನು ಹೇಳಲಿ. ಅವನ ಅಭಿಪ್ರಾಯದಂತೆ ನೀನು ನಮ್ಮನ್ನಾದರೂ ಸೇರಬಹುದು ಅಥವಾ ಅವರೊಡನೆಯಾದರೂ ಇರಬಹುದು. ನಿಶ್ಚಯವಾಗಿಯೂ ಇಲ್ಲಿ ನೆರೆದಿರುವ ರಾಜರೆಲ್ಲರೂ ನಿನ್ನ ದುಃಖವೆಂಬ ಸಾಗರದಲ್ಲಿ ತೇಲುತ್ತಿರುವರು. ಯಾರಿಗೇ ಆಗಲೀ ನಿನ್ನ ಈ ದುರವಸ್ಥೆಯನ್ನು ನೋಡಿಕೊಂಡು ಕುಳಿತಿರುವ ಇಚ್ಛೆಯಿರುವುದಿಲ್ಲ. ಶುದ್ಧಾಂತಃಕರಣವಿರುವ ಇವರು ನಿನ್ನ ಗಂಡಂದಿರ ದೌರ್ಭಾಗ್ಯವನ್ನು ಕಂಡು ಯಾವ ವಿಧವಾದ ನಿರ್ಧಾರವನ್ನೂ ಹೇಳಲು ಹಿಂಜರಿಯುತ್ತಿದ್ದಾರೆ."

ದುರ್ಯೋಧನನ ಆ ಮಾತುಗಳನ್ನು ಕೇಳಿ ಸಭೆಯಲ್ಲಿದ್ದ ಕೆಲವರು ಶ್ಲಾಘಿಸಿದರು. ಕಣ್ಣುಗಳ ಮತ್ತು ತುಟಿಗಳ ವಿಸ್ಫುರಣೆಗಳಿಂದಲೂ, ಜಯ ಘೋಷಗಳಿಂದಲೂ ತಮ್ಮ ಅಂಗೀಕಾರವನ್ನು ಕೆಲವರು ವ್ಯಕ್ತಪಡಿಸಿದರು. ಮತ್ತೆ ಕೆಲವರು ದುರ್ಯೋಧನನ ಆಂತರ್ಯವೇನೆಂಬುದನ್ನು ತಿಳಿದವರಾಗಿ 'ಹಾ' 'ಹಾ' ಎನ್ನುತ್ತಾ ಆರ್ತನಾದಗಳನ್ನು ಮಾಡಿದರು. ದುರ್ಯೋಧನನ ಕಡೆಯವರಿಗೆ ಅವನ ಮಾತುಗಳು ಅತ್ಯಂತ ರುಚಿಕರವಾಗಿದ್ದುವು. ಕೌರವ ರೆಲ್ಲರಿಗೂ ಬಹಳ ಆನಂದವಾಯಿತು. ಕೆಲವು ರಾಜರು ಆನಂದತುಂದಿಲರಾಗಿ ದುರ್ಯೋಧನನನ್ನು ಶ್ಲಾಘಿಸಿದರು.

ರಾಜರ ದೃಷ್ಟಿಗಳೆಲ್ಲವೂ ಯುಧಿಷ್ಠಿರನ ಕಡೆಗೆ ತಿರುಗಿದುವು. ನೀತಿ ವಿಶಾರದನಾದ, ಧರ್ಮಿಷ್ಠನಾದ ಧರ್ಮಜನು ಹೇಳುವುದನ್ನು ಕೇಳಲು ಎಲ್ಲರೂ ಕುತೂಹಲಾವಿಷ್ಟರಾಗಿದ್ದರು. ಅಜೇಯನಾದ ಅರ್ಜುನನೂ, ಮಹಾಪರಾಕ್ರಮಿಯಾದ ಭೀಮಸೇನನೂ, ನಕುಲನೂ ಮತ್ತು ಸಹ ದೇವನೂ—ದುರ್ಯೋಧನನ ಮಾತಿಗೆ ಏನುತ್ತರ ಕೊಡುವರೆಂದು ಸಕಲರೂ ಕುತೂಹಲದಿಂದ ಅವರನ್ನೇ ಎವೆಯಿಕ್ಕದೇ ನೋಡತೊಡಗಿದರು. ಸಭಾಮಂದಿರವು ನಿಶ್ಶಬ್ದವಾಗಿತ್ತು. ಆಗ ಭೀಮಸೇನನು ಚಂದನದಿಂದ ಲೇಪಿತವಾಗಿದ್ದ ತನ್ನ ದೀರ್ಘಬಾಹುವನ್ನು ಮೇಲೆತ್ತಿ ಗುಡುಗಿನ ಶಬ್ದವನ್ನು ಅನುಕರಿಸುವ ಧ್ವನಿಯಲ್ಲಿ ಹೇಳತೊಡಗಿದನು :

**ಯದ್ಯೇಷ ಗುರುರಸ್ಮಾಕಂ ಧರ್ಮರಾಜೋ ಮಹಾಮನಾಃ ।**
**ನ ಪ್ರಭುಃ ಸ್ಯಾತ್ಕುಲಸ್ಯಾಸ್ಯ ನ ವಯಂ ಮರ್ಷಯೇಮಹಿ ॥೧೨॥**

**ಈಶೋ ನಃ ಪುಣ್ಯತಪಸಾಂ ಪ್ರಾಣಾನಾಮಪಿ ಚೇಶ್ವರಃ ।**
**ಮನ್ಯತೇ ಜಿತಮಾತ್ಮಾನಂ ಯದ್ಯೇಷ ವಿಜಿತಾ ವಯಮ್ ॥೧೩॥**

**ನ ಹಿ ಮುಚ್ಯೇತ ಮೇ ಜೀವನ್ಪದಾ ಭೂಮಿಮುಪಸ್ಪೃಶನ್ ।**
**ಮರ್ತ್ಯಧರ್ಮಾ ಪರಾಮೃಶ್ಯ ಪಾಞ್ಚಾಲ್ಯಾ ಮೂರ್ಧಜಾನಿಮಾನ್ ॥೧೪॥**

**ಪಶ್ಯಧ್ವಂ ಹ್ಯಾಯತೌ ವೃತ್ತೌ ಭುಜೌ ಮೇ ಪರಿಘಾವಿವ ।**
**ನೈತಯೋರನ್ತರಂ ಪ್ರಾಪ್ಯ ಮುಚ್ಯೇತಾಪಿ ಶತಕ್ರತುಃ ॥೧೫॥**

"ಈ ನಮ್ಮ ಹಿರಿಯಣ್ಣನಾದ ಯುಧಿಷ್ಠಿರನು ನಮ್ಮ ಸ್ವಾಮಿಯಾಗಿರದಿದ್ದರೆ–ಈ ಕುರುವಂಶದವರು ಮಾಡಿದ ಮಹಾಪರಾಧವನ್ನು ಕ್ಷಣಮಾತ್ರವೂ ನಾವು ಸಹಿಸಿ ಕುಳಿತುಕೊಳ್ಳುತ್ತಿರಲಿಲ್ಲ. ನಮ್ಮ ಪುಣ್ಯ-ತಪಸ್ಸುಗಳಿಗೂ, ಮಿಗಿಲಾಗಿ ನಮ್ಮ ಪ್ರಾಣಗಳಿಗೂ ಇವನೇ ಸ್ವಾಮಿಯಾಗಿರುತ್ತಾನೆ. ಧರ್ಮಜನು ಜಯಿಸಲ್ಪಟ್ಟೆನೆಂದು ತಾನಾಗಿಯೇ ಒಪ್ಪಿಕೊಂಡಿರುವುದರಿಂದ ನಾವೆಲ್ಲರೂ ಜಯಿಸಲ್ಪಟ್ಟಿರುತ್ತೇವೆ. ಹಾಗಿರದಿದ್ದರೆ ಈ ಅಖಂಡಬ್ರಹ್ಮಾಂಡದಲ್ಲಿ ಯಾವ ಪ್ರಾಣಿಗೆ ತಾನೇ ಪಾಂಚಾಲಿಯ ಮುಂದಲೆಯನ್ನು ಮುಟ್ಟಿಯೂ ಜೀವಸಹಿತನಾಗಿ ಉಳಿದುಕೊಳ್ಳಲು ಸಾಧ್ಯವಾಗುತ್ತಿದ್ದಿತು? ಪರಿಘಗಳಂತೆ ದೀರ್ಘವಾಗಿಯೂ, ದಪ್ಪವಾಗಿಯೂ ಇರುವ ಈ ನನ್ನ ಬಾಹುಗಳನ್ನಾದರೂ ನೋಡಿರಿ! ಶತಕ್ರತುವೇ ಆದರೂ ಈ ಬಾಹುಗಳ ಮಧ್ಯದಲ್ಲಿ ಸಿಕ್ಕಿಬಿದ್ದನಂತರ ಬಿಡಿಸಿಕೊಳ್ಳಲಾರನು. ಧರ್ಮದಿಂದ ಬದ್ಧನಾಗಿರುವ ನಮ್ಮ ಹಿರಿಯಣ್ಣನಿಗೆ ಸಲ್ಲಬೇಕಾದ ಗೌರವವನ್ನು ಕೊಡುವ ಅಭಿಲಾಷೆಯಿಂದ ಮತ್ತು ಅರ್ಜುನನ ಹಿತವಾಕ್ಯಗಳಿಗೆ ಮನಸೋತು ನಾನು ಯಾವ ವಿಧವಾದ ಭಯಂಕರ ಕಾರ್ಯದಲ್ಲಿಯೂ ಪ್ರವೃತ್ತನಾಗಿಲ್ಲ. ಒಂದು ಬಾರಿ ಈ ಧರ್ಮಾತ್ಮನಾದ ಯುಧಿಷ್ಠಿರನು ಆಜ್ಞೆಮಾಡಿದನೆಂದರೆ–ಸಿಂಹವು ಸಣ್ಣ-ಪುಟ್ಟ ಪ್ರಾಣಿಗಳನ್ನು ಕೊಂದುಹಾಕುವಂತೆ–ಕ್ಷಣಮಾತ್ರದಲ್ಲಿ ಧೃತರಾಷ್ಟ್ರನ ಈ ದುಷ್ಟಪುತ್ರರೆಲ್ಲರನ್ನೂ ಒಂದೊಂದೇ ಪ್ರಹಾರದಿಂದ ತೀರಿಸಿಬಿಡುವೆನು. (ಕೈಗಳಿಂದಲೇ ಪುಡಿ-ಪುಡಿಮಾಡುವೆನು.) ನನ್ನ ಕೈಗಳೇ ಕತ್ತಿಯ ಕಾರ್ಯವನ್ನು ಮಾಡಲು ಸಮರ್ಥವಾಗಿವೆ."

ಭೀಮಸೇನನ ಮಾತುಗಳನ್ನು ಕೇಳಿ ಭೀಷ್ಮ-ದ್ರೋಣ-ವಿದುರರು ಏಕ ಕಂಠದಿಂದ–'ನೀನು ಹೇಳಿದಂತೆ ನಿನಗೆ ಎಲ್ಲವೂ ಸಾಧ್ಯವಿದೆ. ಆದರೂ ಕ್ಷಮೆ ಯಿರಲಿ, ಭೀಮಸೇನ!'–ಎಂದು ಹೇಳಿದರು.

೭೦ನೆಯ ಅಧ್ಯಾಯವು ಮುಗಿಯಿತು.

೭೧ನೆಯ ಅಧ್ಯಾಯ ದ್ಯೂತಪರ್ವ (ಮುಂದುವರಿದಿದೆ.)

## ಕರ್ಣ-ದುರ್ಯೋಧನರ ದುಷ್ಟವಾಣಿ : ಭೀಮಸೇನನ ಪ್ರತಿಜ್ಞೆ: ವಿದುರನ ಉಪದೇಶ : ದ್ರೌಪದಿಗೆ ಧೃತರಾಷ್ಟ್ರನಿಂದ ವರಪ್ರದಾನ

ಮಹಾರಾಜ! ಭೀಷ್ಮ-ದ್ರೋಣ-ವಿದುರರ ಮಾತುಗಳನ್ನು ಕೇಳಿ ಕರ್ಣನು ಪುನಃ ಭೀಮಸೇನನನ್ನು ನೋಯಿಸುವ ಇಚ್ಛೆಯಿಂದ ದ್ರೌಪದಿಯನ್ನು ಕುರಿತು ಹೇಳಿದನು :

**ತ್ರಯಃ ಕಿಲೇಮೇ ಹ್ಯಧನಾ ಭವನ್ತಿ**
**ದಾಸಃ ಪುತ್ರಶ್ಚಾಸ್ವತನ್ತ್ರಾ ಚ ನಾರೀ ।**
**ದಾಸಸ್ಯ ಪತ್ನೀ ತ್ವಧನಸ್ಯ ಭದ್ರೇ**
**ಹೀನೇಶ್ವರಾ ದಾಸಧನಂ ಚ ಸರ್ವಮ್ ॥೧॥**

"ಭದ್ರೇ! ದಾಸ, ಪುತ್ರ ಮತ್ತು ಅಸ್ವತಂತ್ರಳಾದ ಹೆಂಗಸು–ಈ ಮೂವರನ್ನೂ ಅಧನರೆಂದು ಹಿರಿಯರು ಹೇಳುತ್ತಾರೆ. ಇವರು ತಮಗಾಗಿ ಏನನ್ನೂ ಸಂಪಾದನೆ ಮಾಡಿಕೊಳ್ಳುವ ಸಾಧ್ಯತೆಯಿಲ್ಲ. ನಿರ್ಧನನಾದ ದಾಸನ ಪತ್ನಿಯೂ, ಅವನ ಸರ್ವಸ್ವವೂ ದಾಸನ ಯಜಮಾನನಿಗೇ ಸೇರುತ್ತವೆ.

ಪ್ರಸಕ್ತಸಮಯದಲ್ಲಿ ನೀನು ಇಂತಹ ಅಸ್ವತಂತ್ರನಾದ ದಾಸನ ಹೆಂಡತಿಯಾಗಿರುವೆ. ಆದುದರಿಂದ ಅವನನ್ನು ನೀನು ಸೇರುವುದರಿಂದ ನಿನಗೆ ಯಾವ ವಿಧವಾದ ಪ್ರಯೋಜನವೂ ಇಲ್ಲ. ಧೃತರಾಷ್ಟ್ರನ ಅಂತಃ ಪುರವನ್ನು ಸೇರಿ ಅಲ್ಲಿ ರಾಜಬಂಧುಗಳ ಸೇವೆಮಾಡುವುದು ನಿನಗೆ ಯೋಗ್ಯವಾಗಿದೆ. ಧೃತರಾಷ್ಟ್ರನ ನೂರು ಮಂದಿ ಮಕ್ಕಳೇ ಈಗ ನಿನಗೆ ಸ್ವಾಮಿಗಳಾಗಿದ್ದಾರೆ ; ಪಾಂಡವರಲ್ಲ. ನೀನು ನಿನ್ನ ಸ್ವಾಮಿಯನ್ನಾಗಿ ಮತ್ತಾರನ್ನಾದರೂ ಆರಿಸಿಕೊಳ್ಳುವುದೂ ಉಚಿತವೆನಿಸುತ್ತದೆ. ಹಾಗೆ

ಆರಿಸುವಾಗ ಪುನಃ ಜೂಜುಗಾರರನ್ನು ಮಾತ್ರ ಆರಿಸಬೇಡ. ದಾಸಿಯಾಗಿರುವವರು ಸ್ವೇಚ್ಛೆಯಿಂದ ಬೇರೆಯ ಸ್ವಾಮಿಯನ್ನು ಪಡೆದರೆ ನಿಂದ್ಯರಾಗುವುದಿಲ್ಲವೆಂದು ಹಿರಿಯರು ಹೇಳುತ್ತಾರೆ. ಹಾಗೆ ಮಾಡುವುದು ನಿನಗೆ ಯೋಗ್ಯವೆನಿಸುವುದು. ಧರ್ಮಜ, ನಕುಲ, ಸಹದೇವ, ಭೀಮಾರ್ಜುನರೆಲ್ಲರೂ ಪರಾಜಿತರಾಗಿದ್ದಾರೆ. ಆದುದರಿಂದ ನೀನೂ ದಾಸಿಯಾಗಿರುವೆಯೆಂಬುದರಲ್ಲಿ ಸಂಶಯಲೇಶವೂ ಇಲ್ಲ. ದಾಸರಾಗಿರುವ ನಿನ್ನ ಪತಿಗಳು ಮುಂದೆ ನಿನ್ನ ಸ್ವಾಮಿಗಳಾಗಲಾರರು.

ದ್ರುಪದಸುತೆಯಾದ ನಿನ್ನನ್ನು ಈ ಸಭಾಮಧ್ಯದಲ್ಲಿ ಪಣವನ್ನಾಗಿಟ್ಟು ಸೋತು ಕಳೆದುಕೊಂಡನಂತರ ಪಾಂಡವರ ಜೀವಿತದ ಪ್ರಯೋಜನವಾದರೂ ಏನು? ಪರಾಕ್ರಮ-ಪೌರುಷಗಳ ಪ್ರಯೋಜನವಾದರೂ ಏನು? ಸಕಲವೂ ವ್ಯರ್ಥ."

ಶೂಲಪ್ರಾಯವಾದ ಕರ್ಣನ ಮಾತುಗಳನ್ನು ಕೇಳಿ ಭೀಮಸೇನನು ದೀರ್ಘವಾಗಿ ನಿಟ್ಟುಸಿರುಬಿಟ್ಟನು. ಪ್ರತಿಕ್ರಿಯೆಮಾಡಲು ಅಸಹಾಯಕನಾಗಿದ್ದನು. ಅಣ್ಣನ ಇಚ್ಛೆಯಂತೆ ನಡೆಯಬೇಕಾಗಿತ್ತು. ಧರ್ಮವೆಂಬ ಪಾಶದಿಂದ ಬಂಧಿತನಾಗಿದ್ದನು. ಅವನ ಹೃದಯದಲ್ಲಡಗಿರುವ ಕೋಪಾಗ್ನಿಯು ಎರಡೂ ಕಣ್ಣುಗಳ ಮೂಲಕ ಹೊರಬಂದು ಸಕಲವನ್ನೂ ದಹಿಸಿಬಿಡುವುದೋ ಎಂಬಂತೆ ಎರಡು ಕಣ್ಣುಗಳೂ ಕೆಂಡದಂತೆಯೇ ಕೆಂಪಾದುವು. ಹಲ್ಲುಗಳನ್ನು ಕಟ-ಕಟನೆ ಕಡಿಯುತ್ತಾ ಯುಧಿಷ್ಠಿರನೊಡನೆ ಹೇಳಿದನು :

**ನಾಹಂ ಕುಪ್ಯೇ ಸೂತಪುತ್ರಸ್ಯ ರಾಜ-**
**ನ್ನೇಷ ಸತ್ಯಂ ದಾಸಧರ್ಮಃ ಪ್ರದಿಷ್ಟಃ ।**
**ಕಿಂ ವಿದ್ವಿಷೋ ವೈ ಮಾಮೇವಂ ವ್ಯಾಹರೇಯು-**
**ರ್ನಾದೇವೀಸ್ತ್ವಂ ಯದ್ಯನಯಾ ನರೇನ್ದ್ರ ॥೭॥**

"ಮಹಾರಾಜ! ಕರ್ಣನಾಡುತ್ತಿರುವ ಮಾತುಗಳಿಗೆ ನಾನು ಕೋಪಗೊಳ್ಳುವುದಿಲ್ಲ. ಏಕೆಂದರೆ : ದಾಸಧರ್ಮವೇ ಹೀಗಿರುತ್ತದೆ. ಆದರೆ ಇದೇ ಮಾತುಗಳನ್ನು ನಮ್ಮ ಶತ್ರುಗಳು–ನೀನು ದ್ರೌಪದಿಯನ್ನು ಪಣವನ್ನಾಗಿಡದೇ ಇದ್ದಿದ್ದರೆ–ಆಡುತ್ತಿದ್ದರೇ?"–ಎಂದು ಹೇಳಿಕೊಳ್ಳುತ್ತಾ ಎರಡು ಕೈಗಳನ್ನೂ ಬಲವಾಗಿ ಪರಸ್ಪರ ಉಜ್ಜಿದನು.

ಭೀಮಸೇನನ ಆ ಮಾತುಗಳನ್ನು ಕೇಳಿ ದುರ್ಯೋಧನನು–ಸ್ಥಾಣುವಿನಂತೆ ಮೌನವಾಗಿ, ಪ್ರಜ್ಞಾರಹಿತನಾದವನಂತೆ ಕುಳಿತಿದ್ದ ಧರ್ಮಜನನ್ನು ಕುರಿತು ಪುನಃ ಹೇಳಿದನು :

"ಧರ್ಮಜ! ಭೀಮಾರ್ಜುನ-ನಕುಲ-ಸಹದೇವರು ನಿನ್ನ ಆಜ್ಞಾಧಾರಕರಾಗಿದ್ದಾರೆ. ಆದುದರಿಂದ ಅವರು ದ್ರೌಪದಿಯು ಕೇಳಿದ ಪ್ರಶ್ನೆಗೆ ಉತ್ತರಿಸಲಾರರು. ನೀನಾದರೂ ಹೇಳು. ಕೃಷ್ಣೆಯು ನಮ್ಮಿಂದ ಗೆಲ್ಲಲ್ಪಟ್ಟಳೇ ಅಥವಾ ಇಲ್ಲವೇ?"

ಆ ಸಮಯದಲ್ಲಿ ದುರ್ಯೋಧನನಿಗೆ ಪಾಂಡವರಿಗೂ ಪಾಂಚಾಲಿಗೂ ಇನ್ನೂ ಹೆಚ್ಚಿನ ಪರಿತಾಪವನ್ನುಂಟುಮಾಡಬೇಕೆನ್ನಿಸಿತು. ಕಟ-ಕಟನೆ ಹಲ್ಲುಕಡಿಯುತ್ತಿದ್ದ, ಧರ್ಮವೆಂಬ ಮಂತ್ರದಿಂದ ಕಟ್ಟಿಹಾಕಲ್ಪಟ್ಟಿದ್ದ ಭೀಮಸೇನನನ್ನು ಮತ್ತಷ್ಟು ರೇಗಿಸಬೇಕೆಂದೂ ನಿಶ್ಚಯಿಸಿದನು. ಅದರ ಪರಿಣಾಮವೇನೆಂಬುದರ ಅರಿವು ಅವನಿಗಿರಲಿಲ್ಲ.

ಬಾಳೆಯ ಗಿಡದಂತಿದ್ದ ಅಥವಾ ಆನೆಯ ಸೊಂಡಿಲಿನಂತಿದ್ದ, ಸಕಲ ಶುಭಲಕ್ಷಣಗಳಿಂದಲೂ ಕೂಡಿದ್ದ ಮತ್ತು ಇಂದ್ರನ ವಜ್ರಾಯುಧಕ್ಕೆ ಸಮಾನವಾದ ಬಲದಿಂದ ಕೂಡಿದ್ದ ತನ್ನ ಎಡತೊಡೆಯ ಮೇಲಿದ್ದ ಧೋತ್ರವನ್ನು ಮೇಲಕ್ಕೆ ಬಿಗಿದು, ದ್ರೌಪದಿಯ ಎದುರಿನಲ್ಲಿ ಅದನ್ನು ಪ್ರದರ್ಶಿಸಿದನು.

ದ್ರೌಪದಿಯ ಮುಂದೆ ತೊಡೆಯನ್ನು ತೋರಿಸಿಕೊಂಡು ಮದೋನ್ಮತ್ತನಾಗಿದ್ದ ದುರ್ಯೋಧನನನ್ನು ಕಂಡು ಭೀಮಸೇನನು ರೋಷಾವಿಷ್ಟನಾದನು. ವಿಸ್ತೃತವಾದ ಮತ್ತು ಕೆಂಪಾಗಿದ್ದ ಕಣ್ಣುಗಳಿಂದ ದುರ್ಯೋಧನನನ್ನು ದುರ-ದುರನೆ ನೋಡುತ್ತಾ ಆ ಸಭೆಯಲ್ಲಿದ್ದ ಸದಸ್ಯರೆಲ್ಲರಿಗೂ ಕೇಳಿಸುವಂತೆ ನೆರೆದಿದ್ದ ರಾಜರ ಮಧ್ಯದಲ್ಲಿ ಉದ್ಘೋಷಿಸಿದನು :

**ಪಿತೃಭಿಃ ಸಹ ಸಾಲೋಕ್ಯಂ ಮಾ ಸ್ಮ ಗಚ್ಛೇದ್ವೃಕೋದರಃ ।**
**ಯದ್ಯೇತಮೂರುಂ ಗದಯಾ ನ ಭಿನ್ದ್ಯಾಂ ತೇ ಮಹಾಹವೇ ॥೧೪॥**

"ಮುಂಬರುವ ಮಹಾಯುದ್ಧದಲ್ಲಿ ಈ ನಿನ್ನ ತೊಡೆಯನ್ನೇ ನನ್ನ ಗದೆಯಿಂದ ಭೇದಿಸದಿದ್ದರೆ–ನನ್ನ ಪೂರ್ವಜರು ಪಡೆದಿರುವ ಪುಣ್ಯಲೋಕಗಳು ಈ ವೃಕೋದರನಿಗೆ ಲಭಿಸದಿರಲಿ!"

ಬೆಂಕಿಹೊತ್ತಿಕೊಂಡ ಒಣಗಿದ ಮರದ ಸುತ್ತಲೂ ಯಜ್ಞೇಶ್ವರನು ಪ್ರಜ್ವಲಿಸುವಂತೆ–ಭೀಮಸೇನನ ಅಂಗಾಂಗಗಳಲ್ಲಿಯೂ ಕೋಪಾಗ್ನಿ ಜ್ವಾಲೆಯು ಹೊರಹೊಮ್ಮುತ್ತಿದ್ದಿತು.

ಸರ್ವನಾಶವಾಗುವುದೆಂದು ಶಂಕಿಸುತ್ತಿದ್ದ ವಿದುರನು ಭೀಮಸೇನನ ಪ್ರತಿಜ್ಞೆಯನ್ನು ಕೇಳಿದೊಡನೆಯೇ ಪುನಃ ಸಭೆಯನ್ನುದ್ದೇಶಿಸಿ ಹೇಳಿದನು :

"ಪ್ರತೀಪಕುಲಪ್ರಸೂತರೇ! ಭೀಮಸೇನನಿಂದ ಉಂಟಾಗಲಿರುವ ಭಯವನ್ನು ಮನಗಾಣಿರಿ. ಭಾರತಕುಲವನ್ನೇ ವಿನಾಶಮಾಡಲು ಪ್ರಾದುರ್ಭೂತವಾಗಿರುವ ಈ ಅಪಘಾತವು ನಿಶ್ಚಯವಾಗಿಯೂ ದೈವಪ್ರೇರಿತವಾಗಿಯೇ ಇರುವುದು. ನ್ಯಾಯ-ನಿಬಂಧನೆಗಳನ್ನು ಅತಿಕ್ರಮಿಸಿ ದ್ಯೂತವು ಆಡಲ್ಪಟ್ಟಿತು. ಕಾರಣವಿಲ್ಲದೆ ಮಾನಿಷ್ಠೆಯಾದ ಸ್ತ್ರೀಯನ್ನು ಈ ಸಭೆಯಲ್ಲಿ ಅಪಮಾನಗೊಳಿಸಿ ವಿವಾದಕ್ಕೆ ಎಡೆಮಾಡಿಕೊಂಡಿರಿ. ಈ ನಿಮ್ಮ ರಾಷ್ಟ್ರದ ಯೋಗ-ಕ್ಷೇಮಗಳ ಅಂತ್ಯವು ಸಮೀಪಿಸಿದೆ. ವಿನಾಶವು ಅನತಿದೂರದಲ್ಲಿದ್ದರೂ ಈ ಕೌರವರು ಪಾಪಭೂಯಿಷ್ಠವಾದ ಮಂತ್ರಾಲೋಚನೆಯಲ್ಲಿಯೇ ನಿರತರಾಗಿದ್ದಾರೆ.

**ಇಮಂ ಧರ್ಮಂ ಕುರವೋ ಜಾನತಾಶು**
**ಧ್ವಸ್ತೇ ಧರ್ಮೇ ಪರಿಷತ್ಸಮ್ಪ್ರದುಷ್ಯೇತ್ ।**
**ಇಮಾಂ ಚೇತ್ಪೂರ್ವಂ ಕಿತವೋಽಗ್ಲಹಿಷ್ಯ-**
**ದೀಶೋಽಭವಿಷ್ಯದಪರಾಜಿತಾತ್ಮಾ ॥೧೮॥**

ಕುರುವಂಶಪ್ರದೀಪರೇ! ಈಗಲಾದರೂ ನಾನು ಹೇಳುವುದನ್ನು ಕೇಳಿರಿ. ಧರ್ಮಕ್ಕೆ ಪರಾಭವವಾದರೆ ಈ ಮಹಾಸಭೆಯೇ ಕಲುಷಿತವಾಗುತ್ತದೆ. ಧರ್ಮಜನೇನಾದರೂ ತಾನು ಸೋಲುವ ಮೊದಲು ದ್ರೌಪದಿಯನ್ನು ಪಣವನ್ನಾಗಿಟ್ಟಿದ್ದರೆ–ಸ್ವಾಮಿಯು ತನ್ನ ಪತ್ನಿಯನ್ನು ಪಣವನ್ನಾಗಿಟ್ಟನೆಂದು ಹೇಳಬಹುದಾಗಿದ್ದಿತು. ಆದರೆ ಧರ್ಮಜನು ತನ್ನನ್ನೇ ತಾನು ಸೋತನಂತರ ದ್ರೌಪದಿಯನ್ನು ಪಣವನ್ನಾಗಿಟ್ಟಿದ್ದಾನೆ. ದಾಸನಾದವನಿಗೆ ತನ್ನದೆಂಬ ವಸ್ತುವೇ ಇರಲು ಅವಕಾಶವಿರುವುದಿಲ್ಲ.

**ಸ್ವಪ್ನೇ ಯಥೈತದ್ವಿಜಿತಂ ಧನಂ ಸ್ಯಾ-**
**ದೇವಂ ಮನ್ಯೇ ಯಸ್ಯ ದೀವ್ಯತ್ಯನೀಶಃ ।**
**ಗಾನ್ಧಾರರಾಜಸ್ಯ ವಚೋ ನಿಶಮ್ಯ**
**ಧರ್ಮಾದಸ್ಮಾತ್ಕುರವೋ ಮಾಪಯಾತ ॥೧೯॥**

ಯಾವ ವಸ್ತುವಿನ ಮೇಲೂ ಈಶತ್ವವಿಲ್ಲದವನು (ದಾಸನು) ಪಣವನ್ನಾಗಿಟ್ಟ ವಸ್ತುವನ್ನು ಗೆದ್ದುಕೊಂಡಿದ್ದು ಕನಸಿನಲ್ಲಿ ಐಶ್ವರ್ಯವನ್ನು ಪಡೆದಂತೆಯೇ ಸರಿ. ಶಕುನಿಯ ಮಾತುಗಳನ್ನು ಪುರಸ್ಕರಿಸಿ ಧರ್ಮಜನು ದ್ರೌಪದಿಯನ್ನು ಪಣವನ್ನಾಗಿಟ್ಟನೇ ಹೊರತು ಸ್ವೇಚ್ಛೆಯಿಂದಲ್ಲ. ಆದುದರಿಂದ ನಾನು ಹೇಳುತ್ತಿರುವ, ಸಂಶಯಲೇಶವೂ ಇಲ್ಲದ ಸತ್ಯಾಂಶವನ್ನು ದೂರೀಕರಿಸಬೇಡಿರಿ."

ವಿದುರನ ಮಾತುಗಳನ್ನು ಕೇಳಿಯೂ ದುರ್ಯೋಧನನಿಗೆ ವಿವೇಕ ವುಂಟಾಗಲಿಲ್ಲ. ದುರ್ಯೋಧನನು ಪುನಃ ಸಭ್ಯರನ್ನು ಕುರಿತು ಹೇಳಿದನು :

"ಭೀಮಾರ್ಜುನ-ನಕುಲ-ಸಹದೇವರ ಮಾತುಗಳನ್ನು ನಾನು ಮಾನ್ಯ ಮಾಡುತ್ತೇನೆ. ಇವರು ಯುಧಿಷ್ಠಿರನು ತಮ್ಮ ಸ್ವಾಮಿಯಲ್ಲವೆಂದು ಹೇಳಿ ಬಿಡಲಿ. ಒಡನೆಯೇ ಯಾಜ್ಞಸೇನಿಯು ದಾಸ್ಯವೃತ್ತಿಯಿಂದ ವಿಮುಕ್ತ ಳಾಗುತ್ತಾಳೆ."

ಇದೇ ವಿಧವಾದ ಪ್ರಶ್ನೆಗೆ ಭೀಮನು ಹಿಂದೆಯೇ ಉತ್ತರಿಸಿದನಲ್ಲವೇ? ಮುಂದೆ ಅರ್ಜುನನು ದುರ್ಯೋಧನನ ಪ್ರಶ್ನೆಗೆ ಉತ್ತರವನ್ನಿತ್ತನು :

**ಈಶೋ ರಾಜಾ ಪೂರ್ವಮಾಸೀದ್ಗ್ಲಹೇ ನಃ**
**ಕುನ್ತೀಸುತೋ ಧರ್ಮರಾಜೋ ಮಹಾತ್ಮಾ ।**
**ಈಶಸ್ತ್ವಯಂ ಕಸ್ಯ ಪರಾಜಿತಾತ್ಮಾ**
**ತಜ್ಜಾನೀಧ್ವಂ ಕುರವಃ ಸರ್ವ ಏವ ॥೨೦॥**

"ಕುಂತೀಪುತ್ರನಾದ, ಧರ್ಮಾತ್ಮನಾದ ಯುಧಿಷ್ಠಿರನು ಜೂಜಾಡುವ ಮೊದಲು ನಮ್ಮೆಲ್ಲರಿಗೂ ಸ್ವಾಮಿಯಾಗಿದ್ದನು. ತನ್ನನ್ನೇ ತಾನು ಸೋತು ಕೊಂಡಮೇಲೆ ಇವನು ಯಾರಿಗೆ ಸ್ವಾಮಿಯೆಂಬುದನ್ನು ಕುರುವಂಶ ಸಂಭೂತರಾದ ನೀವೇ ತಿಳಿದುಕೊಳ್ಳಬಹುದಾಗಿದೆ. (ಆದುದರಿಂದ ದ್ರೌಪದಿಯು ಜಿತಳಾಗಿಲ್ಲ.)"

ಆ ಸಮಯಕ್ಕೆ ಸರಿಯಾಗಿ ಧೃತರಾಷ್ಟ್ರನ ಹೋಮಗೃಹದಲ್ಲಿ ನರಿಯು ಅರಚುತ್ತಿದ್ದುದು ಕೇಳಿಸಿತು. ಆ ಧ್ವನಿಯನ್ನೇ ಅನುಸರಿಸಿ ಕತ್ತೆಗಳೂ ಕಿರುಚಿದುವು. ಘೋರಪಕ್ಷಿಗಳೂ ವಿಕಾರವಾಗಿ ಪ್ರತಿಧ್ವನಿಗೈದುವು. ವಿದುರನೂ ಮತ್ತು ಗಾಂಧಾರಿಯೂ ಆ ಅಪಸ್ವರಗಳ ಮುನ್ಸೂಚನೆಯನ್ನು ತಿಳಿದುಕೊಂಡರು.



ಭೀಷ್ಮ-ದ್ರೋಣ-ಕೃಪರು ಆ ವಿಕಾರಧ್ವನಿಗಳನ್ನು ಕೇಳಿ 'ಸ್ವಸ್ತಿ- ಸ್ವಸ್ತಿ' ಎಂದರು. ಗಾಂಧಾರೀ-ವಿದುರರಿಬ್ಬರೂ ಧೃತರಾಷ್ಟ್ರನಿಗೆ ಆ ಭಯಾನಕ ಶಬ್ದಗಳ ರಹಸ್ಯವನ್ನೂ, ಮುಂಬರುವ ಘೋರವಾದ ಪೀಡೆಯನ್ನೂ ವಿವರಿಸಿ ಹೇಳಿದರು. ಧೃತರಾಷ್ಟ್ರನು ಭಯದಿಂದ ಕುಪಿತನಾಗಿ ಮಗನೊಡನೆ ಹೇಳಿದನು:

"ಮಂದಬುದ್ಧಿಯಾದ ದುರ್ಯೋಧನನೇ! ಈ ಮಹಾಸಭೆಯಲ್ಲಿ ಕುರುಪುಂಗವರ ವೀರಪತ್ನಿಯಾದ ದ್ರೌಪದಿಯನ್ನು ಅಪಮಾನಕ್ಕೆ ಗುರಿಮಾಡಿರುವ ನೀನು ಮೃತ್ಯುವಿನ ಮಡಿಲಿನಲ್ಲಿರುವೆಯೆಂಬುದನ್ನು ತಿಳಿದವನಾಗಿಲ್ಲ"–

ಎಂದು ದುರ್ಯೋಧನನನ್ನು ಮೂದಲಿಸಿ, ಕ್ಷಣಕಾಲ ತನ್ನಲ್ಲಿಯೇ ತಾನು ಯೋಚಿಸಿ, ಮುಂಬರಲಿರುವ ಮಹೋತ್ಪಾತದಿಂದ ತನ್ನ ಬಂಧು-ಮಿತ್ರರನ್ನು ಸಂರಕ್ಷಿಸಬೇಕೆಂದು ನಿಶ್ಚಯಿಸಿದವನಾಗಿ ಪಾಂಚಾಲಿಯನ್ನು ಸವಿಮಾತುಗಳಿಂದ ಸಂತೈಸತೊಡಗಿದನು :

**ವರಂ ವೃಣೀಷ್ವ ಪಾಞ್ಚಾಲಿ ಮತ್ತೋ ಯದಭಿವಾಞ್ಛಸಿ ।**
**ವಧೂನಾಂ ಹಿ ವಿಶಿಷ್ಟಾ ಮೇ ತ್ವಂ ಧರ್ಮಪರಮಾ ಸತೀ ॥೨೭॥**

"ಪಾಂಚಾಲಿ! ನೀನು ಪತಿವ್ರತೆ. ಧರ್ಮನಿಷ್ಠಳು. ನೀನು ನನ್ನ ಸೊಸೆಯರಲ್ಲಿಯೇ ಶ್ರೇಷ್ಠಳಾಗಿರುವೆ. ನಿನ್ನ ವಿಷಯದಲ್ಲಿ ನಾನು ಸುಪ್ರೀತನಾಗಿರುವೆನು. ನಿನಗೆ ಬೇಕಾಗಿರುವ ವರವನ್ನು ಕೇಳು ; ಕೊಡುವೆನು."

ಆ ಸಮಯದಲ್ಲಿ ದ್ರೌಪದಿಯು ಧೃತರಾಷ್ಟ್ರನನ್ನು ಕೇಳಿಕೊಂಡ ವರವು ಪ್ರಶಂಸನೀಯವಾದುದು.

**ದದಾಸಿ ಚೇದ್ವರಂ ಮಹ್ಯಂ ವೃಣೋಮಿ ಭರತರ್ಷಭ ।**
**ಸರ್ವಧರ್ಮಾನುಗಃ ಶ್ರೀಮಾನದಾಸೋಽಸ್ತು ಯುಧಿಷ್ಠಿರಃ ॥೨೮॥**

**ಮನಸ್ವಿನಮಜಾನನ್ತೋ ಮೈವಂ ಬ್ರೂಯುಃ ಕುಮಾರಕಾಃ ।**
**ಏಷ ವೈ ದಾಸಪುತ್ರೋ ಹಿ ಪ್ರತಿವಿನ್ಧ್ಯಂ ಮಮಾತ್ಮಜಮ್ ॥೨೯॥**

**ರಾಜಪುತ್ರಃ ಪುರಾ ಭೂತ್ವಾ ಯಥಾ ನಾನ್ಯಃ ಪುಮಾನ್ಕ್ವಚಿತ್ ।**
**ರಾಜಭಿರ್ಲಾಲಿತಸ್ಯಾಸ್ಯ ನ ಯುಕ್ತಾ ದಾಸಪುತ್ರತಾ ॥೩೦॥**

"ಭರತಕುಲಾವತಂಸನೇ! ನನಗೆ ನೀನು ವರವನ್ನು ಕೊಡಲು ನಿಶ್ಚಯಿಸಿರುವೆಯಾದರೆ–'ಸರ್ವಧರ್ಮಜ್ಞನಾದ, ಶ್ರೀಮಂತನಾದ ಈ ಯುಧಿಷ್ಠಿರನು ದಾಸ್ಯದಿಂದ ವಿಮುಕ್ತನಾಗಲಿ'–ಎಂಬ ವರವನ್ನು ಕೇಳುತ್ತೇನೆ. ನಿಜಸ್ಥಿತಿಯನ್ನು ತಿಳಿಯದ ಬಾಲಕರು ಅಭಿಮಾನಿಯಾದ, ನನ್ನ ಮಗನಾದ ಪ್ರತಿವಿಂಧ್ಯನನ್ನು ದಾಸಪುತ್ರನೆಂದು ಕರೆಯದಂತಾಗಲಿ. ರಾಜಪುತ್ರನಂತೆ, ಹುಟ್ಟಿ, ರಾಜಪುತ್ರನಾಗಿ ಬೆಳೆದು, ರಾಜರಿಂದ ಲಾಲಿತನಾದ ನನ್ನ ಪುತ್ರನಾದ ಪ್ರತಿವಿಂಧ್ಯನಿಗೆ ದಾಸಪುತ್ರನೆಂದು ಕರೆಸಿಕೊಳ್ಳುವುದು ಸರ್ವಥಾ ಯೋಗ್ಯವಲ್ಲ."

"ಮಂಗಳಾಂಗಿಯೇ! ನಿನ್ನ ಆಶಯದಂತೆಯೇ ಯುಧಿಷ್ಠಿರನು ದಾಸ್ಯ

ದಿಂದ ವಿಮುಕ್ತನಾಗಿದ್ದಾನೆ. ಕಲ್ಯಾಣಿ! ಮತ್ತೊಂದು ವರವನ್ನು ಕೇಳು. ಕೊಡುತ್ತೇನೆ. ಏಕೆಂದರೆ : ನನ್ನ ಹೃದಯವು ನಿನಗೆ ಎರಡನೆಯ ವರವನ್ನೂ ಕೊಡಲು ತವಕಿಸುತ್ತಿದೆ. ನಿನ್ನಂತಹವಳಿಗೆ ಒಂದೇ ವರವನ್ನು ಕೊಡುವುದು ಯೋಗ್ಯವೆನಿಸುವುದಿಲ್ಲ.

**ಸರಥೌ ಸಧನುಷ್ಕೌ ಚ ಭೀಮಸೇನಧನಂಜಯೌ ।**
**ಯಮೌ ಚ ವರಯೇ ರಾಜನ್ನದಾಸಾನ್ಸ್ವವಶಾನಹಮ್ ॥೩೨॥**

"ಮಹಾರಾಜ! ಭೀಮಾರ್ಜುನ-ನಕುಲ-ಸಹದೇವರೂ ದಾಸ್ಯದಿಂದ ವಿಮುಕ್ತಿಹೊಂದಿ ತಮ್ಮ ರಥಗಳು ಮತ್ತು ಧನುಸ್ಸುಗಳೊಡನೆ ಸ್ವತಂತ್ರ ರಾಗಲಿ."

"ಹಾಗೆಯೇ ಆಗಲಿ, ದ್ರೌಪದಿ! ಮತ್ತೊಂದು ವರವನ್ನು ಕೇಳು. ಏಕೆಂದರೆ ; ಕೇವಲ ಎರಡು ವರಗಳನ್ನು ಕೊಟ್ಟಿದ್ದರಿಂದ ನಿನ್ನನ್ನು ಪೂರ್ಣ ವಾಗಿ ಗೌರವಿಸಿದಂತಾಗಲಿಲ್ಲ. ಧರ್ಮಚಾರಿಣಿಯಾದ ನೀನು ನನ್ನ ಸೊಸೆ ಗಳೆಲ್ಲರಲ್ಲಿಯೂ ಶ್ರೇಷ್ಠಳಾಗಿರುವೆ. ಆದುದರಿಂದ ಮೂರನೆಯ ವರವನ್ನೂ ಕೇಳು."

ಅದಕ್ಕೆ ಪಾಂಚಾಲಿಯು ಹೇಳುತ್ತಾಳೆ :

**ಲೋಭೋ ಧರ್ಮಸ್ಯ ನಾಶಾಯ ಭಗವನ್ನಾಹಮುತ್ಸಹೇ ।**
**ಅನರ್ಹಾ ವರಮಾದಾತುಂ ತೃತೀಯಂ ರಾಜಸತ್ತಮ ॥೩೪॥**

**ಏಕಮಾಹುರ್ವೈಶ್ಯವರಂ ದ್ವೌ ತು ಕ್ಷತ್ರಸ್ತ್ರಿಯಾ ವರೌ ।**
**ತ್ರಯಸ್ತು ರಾಜ್ಞೋ ರಾಜೇನ್ದ್ರ ಬ್ರಾಹ್ಮಣಸ್ಯ ಶತಂ ವರಾಃ ॥೩೫॥**

**ಪಾಪೀಯಾಂಸ ಇಮೇ ಭೂತ್ವಾ ಸಂತೀರ್ಣಾಃ ಪತಯೋ ಮಮ ।**
**ವೇತ್ಸ್ಯನ್ತಿ ಚೈವ ಭದ್ರಾಣಿ ರಾಜನ್ಪುಣ್ಯೇನ ಕರ್ಮಣಾ ॥೩೬॥**

"ಮಹಾನುಭಾವನೇ! ಲೋಭದಿಂದ ಧರ್ಮವೇ ನಾಶವಾಗುವುದು. ನಾನು ಮೂರನೆಯ ವರವನ್ನು ಪಡೆಯಲು ಅರ್ಹಳಲ್ಲ. ಆದುದರಿಂದ ಮೂರ ನೆಯ ವರವನ್ನು ನಾನು ಕೇಳಲಾರೆನು. ಏಕೆಂದರೆ : ವೈಶ್ಯನು ಒಂದು ವರ ವನ್ನು ಕೇಳಬಹುದು. ಕ್ಷತ್ರಿಯಸ್ತ್ರೀಯರು ಎರಡು ವರಗಳನ್ನು ಕೇಳಬಹುದು.

ಕ್ಷತ್ರಿಯಪುರುಷನು ಮೂರು ವರಗಳನ್ನೂ, ಬ್ರಾಹ್ಮಣನು ನೂರು ವರಗಳನ್ನೂ ಕೇಳಬಹುದೆಂದು ಹಿರಿಯರು ಹೇಳುತ್ತಾರೆ. ಮೇಲಾಗಿ ದಾಸ್ಯರೂಪವಾದ ಮಹಾಪಾಪದಿಂದ ವಿಮೋಚನೆಹೊಂದಿರುವ ಈ ನನ್ನ ಪತಿಗಳು ತಮಗೆ ಬೇಕಾದ ಶ್ರೇಯಃ-ಪ್ರೇಯಗಳನ್ನು ಸ್ವಸಾಮರ್ಥ್ಯದಿಂದಲೂ, ಪುಣ್ಯ ಕರ್ಮಗಳಿಂದಲೂ ಪಡೆಯಲು ಸಮರ್ಥರಾಗಿದ್ದಾರೆ."

(ಈ ಪ್ರಸಂಗವು ಮಹಾಭಾರತದಲ್ಲಿರುವ ದೈವಸಂಕಲ್ಪದ ಒಗಟಿನಂತಿದೆ. ಒಂದು ವೇಳೆ ಧರ್ಮರಾಜನು ದ್ರೌಪದಿಯನ್ನು ಮೊದಲೇ ಜೂಜಿನಲ್ಲಿ ಪಣವಾಗಿಟ್ಟಿದ್ದರೆ ಪಾಂಡವರು ಮತ್ತೆ ಮೇಲೆ ಬರುವ ಪ್ರಸಂಗವೇ ಇರುತ್ತಿರಲಿಲ್ಲ. ದ್ರೌಪದಿಯಿಂದ ತಮ್ಮ ದಾಸ್ಯದ ವಿಮೋಚನೆಯಾಗಲೆಂಬ ಆಶಯವು ಪಾಂಡವರಿಗೆ ಲೇಶಮಾತ್ರವೂ ಇರಲಿಲ್ಲ. ಆದರೆ ದಾಸ್ಯದ ವಿಮೋಚನೆಯು ದ್ರೌಪದಿಯಿಂದಲೇ ಆಯಿತು. ದ್ರೌಪದಿಯು ದಾಸಿಯೇ? ಅಲ್ಲವೇ? ಧರ್ಮಜನು ತನ್ನನ್ನೇ ಸೋತುಕೊಂಡನಂತರ ದ್ರೌಪದಿಯನ್ನು ಪಣವಾಗಿಟ್ಟಿದ್ದು ಸರಿಯೇ? ಈ ಪ್ರಶ್ನೆಗಳಿಗೆ ನೇರವಾದ ಉತ್ತರವು ಸಿಗದಿದ್ದರೂ–ದ್ರೌಪದಿಯು ತನ್ನ ಗಂಡಂದಿರ ದಾಸ್ಯವಿಮೋಚನೆಮಾಡಬೇಕೆಂಬ ವರವನ್ನು ಕೇಳಿದ್ದರಿಂದಲೂ ವಿದುರನ ಅಭಿಪ್ರಾಯದಂತೆ ಧೃತರಾಷ್ಟ್ರನೂ ದ್ರೌಪದಿಯು ದಾಸಿಯಲ್ಲವೆಂಬುದನ್ನೂ ಮತ್ತು ಧರ್ಮಜನು ತಾನು ಸೋತುಹೋದಮೇಲೆ ಶಕುನಿಯ ಪ್ರೇರಣೆಯಿಂದ ದ್ರೌಪದಿಯನ್ನು ಪಣವನ್ನಾಗಿಟ್ಟು ಸೋತನಾದ ಕಾರಣ ದ್ರೌಪದಿಯು ಗೆಲ್ಲಲ್ಪಟ್ಟಂತಾಗಲಿಲ್ಲವೆಂಬುದನ್ನೂ ಮನಗಂಡನೆಂದು ಹೇಳಬಹುದಾಗಿದೆ.)

ಌ೧ನೆಯ ಅಧ್ಯಾಯವು ಮುಗಿಯಿತು.

ಌ೨ನೆಯ ಅಧ್ಯಾಯ ದ್ಯೂತಪರ್ವ (ಮುಂದುವರಿದಿದೆ.)

## ಶತ್ರುಗಳನ್ನು ಸಂಹರಿಸಲು ಹೊರಟ ಭೀಮಸೇನನನ್ನು ಯುಧಿಷ್ಠಿರನು ಸಮಾಧಾನಪಡಿಸಿದುದು

( ಇಲ್ಲಿಗೆ ಪ್ರಕರಣವು ಮುಗಿದಿದ್ದರೆ ಸುಖಾಂತ್ಯವಾಗುತ್ತಿತ್ತು. ಆದರೆ ಸುಖಾಂತ್ಯವಾಗುವುದು ಕರ್ಣಾದಿ ದುಷ್ಟಚತುಷ್ಟಯಕ್ಕೆ ಖಂಡಿತವಾಗಿಯೂ ಇಷ್ಟವಿರಲಿಲ್ಲ. )

ವೈಶಂಪಾಯನರು ಹೇಳುತ್ತಾರೆ :

ಪಾರಿಕ್ಷಿತ! ಪಾಂಡವರನ್ನು ಕೆರಳಿಸುವ ಸಲುವಾಗಿ ಕರ್ಣನು ಪುನಃ ಮಾತನಾಡಲುಪಕ್ರಮಿಸಿದನು.

**ಯಾ ನಃ ಶ್ರುತಾ ಮನುಷ್ಯೇಷು ಸ್ತ್ರಿಯೋ ರೂಪೇಣ ಸಮ್ಮತಾಃ ।**
**ತಾಸಾಮೇತಾದೃಶಂ ಕರ್ಮ ನ ಕಸ್ಯಾಶ್ಚ ನ ಶುಶ್ರುಮ ॥೧॥**

"ಮನುಷ್ಯರಲ್ಲಿ ಇದುವರೆಗೂ ನಾವು ಯಾವ ಸುಂದರಸ್ತ್ರೀಯರ ಹೆಸರನ್ನು ಕೇಳಿರುವೆವೋ–ಅವರಲ್ಲಿ ಯಾರೂ ದ್ರೌಪದಿಯು ಮಾಡಿರುವ ಇಂತಹ ಅದ್ಭುತಕಾರ್ಯವನ್ನು ಮಾಡಿರುವುದನ್ನು ನಾವು ಕೇಳಿಲ್ಲ. ಪಾಂಡವರು ಕೌರವರ ವಿಷಯದಲ್ಲಿ ಅತಿಕ್ರೋಧಾವಿಷ್ಟರಾಗಿದ್ದರೂ ಏನೂ ಮಾಡಲಾರದ ಸ್ಥಿತಿಯಲ್ಲಿದ್ದಾಗ ದ್ರೌಪದಿಯು ಪಾಂಡುಪುತ್ರರಿಗೆ ಶಾಂತಿದಾಯಕಳಾದಳು. ಪಾಂಡುಪುತ್ರರು–ಸಂಕಟವೆಂಬ ಸಮುದ್ರದಲ್ಲಿ ಆಶ್ರಯವಿಲ್ಲದೆ, (ದಾಟಿಸುವ ಹಡಗಿಲ್ಲದೆ) ಮುಳುಗಿಹೋಗುತ್ತಿದ್ದಾಗ–ಈ ಪಾಂಚಾಲಿಯು ದೋಣಿಯ ರೂಪದಲ್ಲಿ ಪಾಂಡವರನ್ನು ಕಷ್ಟದಿಂದ ಪಾರುಮಾಡಿ ದಡಕ್ಕೊಯ್ದಳು."

ಜನಮೇಜಯ! ಕುರುರಾಜರ ಮಧ್ಯದಲ್ಲಿ ಕರ್ಣನು ಹೀಗೆ ಹೇಳಿದುದನ್ನು ಕೇಳಿ ಹೆಚ್ಚು ಅಸಹನಶೀಲನಾದ ಭೀಮಸೇನನು ಬಹಳ ಖೇದಗೊಂಡವನಾಗಿ ದೀರ್ಘವಾಗಿ ನಿಟ್ಟುಸಿರುಬಿಡುತ್ತಾ ಹೇಳಿದನು :

"ಅಹೋ! ಸ್ತ್ರೀಗತಿಃ ಪಾಣ್ಡುಪುತ್ರಾಣಾಂ–ಅಯ್ಯೋ! ವೀರರೆನಿಸಿದ ಪಾಂಡುಪುತ್ರರಿಗೆ ಸ್ತ್ರೀಯು ಉದ್ಧಾರಕಳಾಗಬೇಕಾಯಿತೇ?

**ತ್ರೀಣಿ ಜ್ಯೋತೀಂಷಿ ಪುರುಷ ಇತಿ ವೈ ದೇವಲೋಽಬ್ರವೀತ್ ।**
**ಅಪತ್ಯಂ ಕರ್ಮ ವಿದ್ಯಾ ಚ ಯತಃ ಸೃಷ್ಟಾಃ ಪ್ರಜಾಸ್ತತಃ ॥೫॥**

**ಅಮೇಧ್ಯೇ ವೈ ಗತಪ್ರಾಣೇ ಶೂನ್ಯೇ ಜ್ಞಾತಿಭಿರುಜ್ಝಿತೇ ।**
**ದೇಹೇ ತ್ರಿತಯಮೇವೈತತ್ಪುರುಷಸ್ಯೋಪಯುಜ್ಯತೇ ॥೬॥**

**ತನ್ನೋ ಜ್ಯೋತಿರಭಿಹತಂ ದಾರಾಣಾಮಭಿಮರ್ಶನಾತ್ ।**
**ಧನಂಜಯ ಕಥಂ ಸ್ವಿತ್ಸ್ಯಾದಪತ್ಯಮಭಿಮೃಷ್ಟಜಮ್ ॥೭॥**

ಧನಂಜಯ! ಮನುಷ್ಯನಲ್ಲಿ ಸಂತಾನ, ಕರ್ಮ ಮತ್ತು ವಿದ್ಯೆ–ಈ ಮೂರು ಜ್ಯೋತಿಗಳು ಅಡಗಿರುವುವೆಂದು ಮಹರ್ಷಿ ದೇವಲರು ಹೇಳುತ್ತಾರೆ. ಈ ಮೂರರಿಂದಲೇ ಪ್ರಪಂಚದ ಉತ್ಪತ್ತಿಯಾಗಿದೆ. ಮನುಷ್ಯನು ಗತಪ್ರಾಣನಾದನಂತರ ದೇಹವು ಅಶುಚಿಯಾಗುತ್ತದೆ. ಬಂಧು-ಮಿತ್ರರೂ ಆ ದೇಹವನ್ನು ವಿಸರ್ಜಿಸುತ್ತಾರೆ. ಅಂತಹ ಸಮಯದಲ್ಲಿಯೂ ಮೇಲೆ ಹೇಳಿದ ಮೂರು ಬೆಳಕುಗಳು ಜೀವನನ್ನು ಪಿತೃಲೋಕ, ದೇವಲೋಕಗಳಿಗೆ ಒಯ್ಯಲು ಸಾಧಕಗಳಾಗುತ್ತವೆ. ಆದರೆ ಆ ಮೂರು ಬೆಳಕುಗಳೂ ಇಂದು ನಮ್ಮಲ್ಲಿ ಮಸುಕಾಗಿವೆ. ಏಕೆಂದರೆ : ನಮ್ಮ ಭಾರ್ಯೆಯನ್ನು ಈ ಸಭೆಯಲ್ಲಿ ದುಃಶಾಸನನು ಬಲಾತ್ಕಾರಪೂರ್ವಕವಾಗಿ ಸೆಳೆದಾಡಿ ಅಪಮಾನಗೊಳಿಸಿರುವುದರಿಂದ ಸಂತಾನರೂಪವಾದ ಜ್ಯೋತಿಯು ನಷ್ಟವಾದಂತಾಗಿದೆ. ಧನಂಜಯ! ಪರಪುರುಷಸ್ಪರ್ಶವಾದನಂತರ ಇವಳಲ್ಲಿ ಜನಿಸಿರುವ ಶಿಶುವು 'ಅಪತ್ಯಂ' ಎಂಬ ಸಂಜ್ಞೆಯನ್ನು ಹೇಗೆ ತಾನೇ ಪಡೆಯುತ್ತದೆ?"

ಅರ್ಜುನನು ಹೇಳುತ್ತಾನೆ :

"ಅಣ್ಣ! ಕೀಳುಜನರಾಡುವ ಮಾತಿಗೆ ಅಷ್ಟೊಂದು ಬೆಲೆಕೊಡುವ ಕಾರಣವಿಲ್ಲ.

**ನ ಚೈವೋಕ್ತಾ ನ ಚಾನುಕ್ತಾ ಹೀನತಃ ಪರುಷಾ ಗಿರಃ ।**
**ಭಾರತ ಪ್ರತಿಜಲ್ಪನ್ತಿ ಸದಾ ತೂತ್ತಮಪೂರುಷಾಃ ॥೮॥**

ಭಾರತನೇ! ಉತ್ತಮಪುರುಷರು ಯಾವಾಗಲೂ ಹೀನರಿಂದ ಹೇಳಲ್ಪಟ್ಟ ಅಥವಾ ಹೇಳಲ್ಪಡದಿದ್ದರೂ ಊಹ್ಯವಾಗುವ ನಿಷ್ಠುರೋಕ್ತಿಗಳಿಗೆ ಉತ್ತರಿಸಲು ಹೋಗುವುದಿಲ್ಲ. (ದುಷ್ಟರ ಸ್ವಭಾವವೇ ಕಠಿನೋಕ್ತಿಗಳನ್ನು ಹೇಳುವುದಾಗಿರುವುದರಿಂದ ಅವರಾಡಿದುದಕ್ಕೆ ಪ್ರತಿಯಾಡುವುದು ವ್ಯರ್ಥವೇ ಸರಿ.)

**ಸ್ಮರನ್ತಿ ಸುಕೃತಾನ್ಯೇವ ನ ವೈರಾಣಿ ಕೃತಾನ್ಯಪಿ ।**
**ಸನ್ತಃ ಪ್ರತಿವಿಜಾನನ್ತೋ ಲಬ್ಧಸಮ್ಭಾವನಾಃ ಸ್ವಯಮ್ ॥೯॥**

ಲಬ್ಧಪ್ರತಿಷ್ಠರಾದ ಸತ್ಪುರುಷರು ತಮ್ಮ ಶತ್ರುಗಳ ದುಷ್ಕಾರ್ಯಗಳನ್ನು ಪರಿಗಣಿಸದೇ ಅವರ ಸತ್ಕಾರ್ಯಗಳನ್ನು ಮಾತ್ರವೇ ಪರಿಗಣಿಸುವರು."

ಕೋಪಾವಿಷ್ಟನಾಗಿದ್ದ ಭೀಮಸೇನನಿಗೆ ಅರ್ಜುನನ ಹಿತವಚನಗಳು ಹಿಡಿಸಲಿಲ್ಲವೆಂದು ತೋರುತ್ತದೆ. ಹಲ್ಲುಗಳನ್ನು ಕಟ-ಕಟನೆ ಕಡಿಯುತ್ತಾ ಯುಧಿಷ್ಠಿರನನ್ನು ಕುರಿತು ಹೇಳಿದನು :

"ಮಹಾರಾಜ! ಬೇಗ ಹೇಳು. ಇಲ್ಲಿ ನೆರೆದಿರುವ ಈ ಶತ್ರುಗಳನ್ನು ಕ್ಷಣಮಾತ್ರದಲ್ಲಿ ಈ ಸಭಾಮಂದಿರದಲ್ಲಿಯೇ ಕೊಂದುಬಿಡುತ್ತೇನೆ. ಅಥವಾ ಸಭಾಮಂದಿರದ ಹೊರಕ್ಕೆ ಸೆಳೆದೊಯ್ದು ಸಮೂಲವಾಗಿ ಸದೆಬಡಿದು ಸಾಯಿಸಿಬಿಡುತ್ತೇನೆ."

ಧರ್ಮರಾಜನಿಂದ ಏನೊಂದು ಉತ್ತರವೂ ಬರಲಿಲ್ಲ. ಭೀಮನ ಕೋಪವು ಮತ್ತಷ್ಟು ಉಲ್ಬಣಿಸಿತು. ಗಟ್ಟಿಯಾಗಿ ಹೇಳಿದನು :

"ಅಥವಾ ನಮಗೆ ವಿವಾದದಿಂದ ಪ್ರಯೋಜನವೇನು? ಸಮಾಧಾನ ವನ್ನು ಹೇಳುವುದರಿಂದಲಾದರೂ ಏನು ಪ್ರಯೋಜನ? ನಿನ್ನ ಆಜ್ಞೆಗಾಗಿ ನಾನೇಕೆ ಕಾದು ಕುಳಿತಿರಲಿ? ನಾನು ಈ ಕ್ಷಣದಲ್ಲಿಯೇ ಇವರೆಲ್ಲರನ್ನೂ ಮುಗಿಸಿಯೇ ಬಿಡುತ್ತೇನೆ. ಅನಂತರದಲ್ಲಿ ಜ್ಞಾತಿಬಾಧೆಯಿಲ್ಲದ ಈ ಅಖಂಡ ಭೂಮಂಡಲವನ್ನೂ ನೀನು ಆಳುವವನಾಗು."

ಹೀಗೆಂದು ಹೇಳಿ ತಮ್ಮಂದಿರ ಮಧ್ಯದಲ್ಲಿ ಕುಳಿತಿದ್ದ ಭೀಮಸೇನನು– ಸಿಂಹವು ತನ್ನ ಸಮೀಪಗತವಾದ ಮೃಗಗಳನ್ನು ದುರ-ದುರನೆ ನೋಡು ವಂತೆ–ಆ ರಾಜರೆಲ್ಲರನ್ನೂ ಕೋಪದಿಂದ ಕಾದಕೆಂಡದಂತಾಗಿದ್ದ ಕಣ್ಣುಗಳಿಂದ ದುರ-ದುರನೆ ನೋಡಿದನು.

ಅನಾಯಾಸವಾಗಿ ಶತ್ರುಗಳನ್ನು ಸಂಹರಿಸುವ ಪರಾಕ್ರಮದಿಂದ ಕೂಡಿದ್ದ ಅರ್ಜುನನು, ಮುಂದೆ ಆಗಬಹುದಾದ ಅನರ್ಥವನ್ನು ನೆನೆದು ಭೀಮಸೇನನನ್ನು ಬಾರಿ-ಬಾರಿಗೂ ಸಂತೈಸುತ್ತಿದ್ದನು.

ಕೇಂದ್ರೀಕೃತವಾಗಿದ್ದ ಭೀಮಸೇನನ ಕೋಪವು ಕಾರ್ಯರೂಪದಲ್ಲಿ ಪರ್ಯವಸಾನವಾಗಲು ಅವಕಾಶವಾಗದಿದ್ದುದರಿಂದ ಅಗ್ನಿರೂಪವಾಗಿ ಪರಿ ವರ್ತನೆ ಹೊಂದಿ, ಪಂಚೇಂದ್ರಿಯಗಳ ಮೂಲಕವೂ ಹೊಗೆಯೊಡನೆ ಅಗ್ನಿ ಕಣಗಳು ಹೊರಬರುತ್ತಿದ್ದುವು. ಪ್ರಪಂಚದ ಪ್ರಳಯಕಾಲದಲ್ಲಿರುವ ಯಮ

ನಂತೆಯೇ ಕಾಣುತ್ತಿದ್ದ ಭೀಮಸೇನನ ಹುಬ್ಬುಗಳು ಗಂಟಿಕ್ಕಿಕೊಂಡಿದ್ದುವು. ಅವನ ಆ ಭಯಂಕರಮುಖವನ್ನು ಯಾರಿಂದಲೂ ಕ್ಷಣಮಾತ್ರವಾದರೂ ನೋಡಲು ಸಾಧ್ಯವಾಗುತ್ತಿರಲಿಲ್ಲ.

ಕಟ್ಟಕಡೆಗೆ ಧರ್ಮರಾಜನೇ ಮೇಲೆದ್ದು ಹೋಗಿ ಭೀಮಸೇನನನ್ನು ಬಾಚಿ ತಬ್ಬಿಕೊಂಡು–'ಈ ರೀತಿ ಮಾಡಕೂಡದು. ಶಾಂತನಾಗಿ ಸುಮ್ಮನೆ ಕುಳಿತಿರು, ಭೀಮಸೇನ!'–ಎಂದು ಹೇಳಿ ಸಮಾಧಾನಪಡಿಸಿದನು.

ಯುಧಿಷ್ಠಿರನು ಮಹಾಬಾಹುವಾದ, ಕೋಪದಿಂದ ರಕ್ತಲೋಚನನಾಗಿದ್ದ ಭೀಮಸೇನನನ್ನು ಮುನ್ನುಗ್ಗಿಹೋಗದಂತೆ ತಡೆಹಿಡಿದು ದೊಡ್ಡಪ್ಪನಾದ ಧೃತರಾಷ್ಟ್ರನ ಸಮೀಪದಲ್ಲಿ ಬದ್ಧಾಂಜಲಿಯಾಗಿ ನಿಂತು ವಿನಯಪೂರ್ವಕವಾಗಿ ಹೇಳತೊಡಗಿದನು.

೭೨ನೆಯ ಅಧ್ಯಾಯವು ಮುಗಿಯಿತು.

೭೩ನೆಯ ಅಧ್ಯಾಯ ದ್ಯೂತಪರ್ವ (ಮುಂದುವರಿದಿದೆ.)

## ಧೃತರಾಷ್ಟ್ರನು ಐಶ್ವರ್ಯವೆಲ್ಲವನ್ನೂ ಯುಧಿಷ್ಠಿರನಿಗೆ ಕೊಟ್ಟು ಇಂದ್ರಪ್ರಸ್ಥಕ್ಕೆ ಕಳುಹಿಸಿದುದು

ಪಾರಿಕ್ಷಿತ! ಯುಧಿಷ್ಠಿರನು ಹೇಳುತ್ತಾನೆ :

**ರಾಜನ್ಕಿಂ ಕರವಾಮಸ್ತೇ ಪ್ರಶಾಧ್ಯಸ್ಮಾಂಸ್ತ್ವಮೀಶ್ವರಃ ।**
**ನಿತ್ಯಂ ಹಿ ಸ್ಥಾತುಮಿಚ್ಛಾಮಸ್ತವ ಭಾರತ ಶಾಸನೇ ॥೧॥**

"ಮಹಾರಾಜ! ನೀನೇ ನಮ್ಮೆಲ್ಲರಿಗೂ ಪ್ರಭು. ಈಗ ನಾವೇನು ಮಾಡಬೇಕೆಂಬುದನ್ನು ಆಜ್ಞಾಪಿಸುವವನಾಗು. ನಾವು ಯಾವಾಗಲೂ ನಿನ್ನ ಆಜ್ಞಾನುಸಾರವಾಗಿಯೇ ಇರಬೇಕೆಂದು ಇಚ್ಛಿಸುತ್ತೇವೆ."

ಧೃತರಾಷ್ಟ್ರನು ಹೇಳುತ್ತಾನೆ :

"ಅಜಾತಶತ್ರೋ! ನಿನಗೆ ಮಂಗಳವಾಗಲಿ. ನನ್ನಿಂದ ಆಜ್ಞಪ್ತರಾದ ನೀವು ಸಕಲಸಂಪತ್ಸಮೃದ್ಧವಾದ ರಾಜ್ಯವನ್ನು ಶಾಸನಮಾಡಿರಿ. ವೃದ್ಧನಾದ ನಾನು ಈಗ ಹೇಳಲಿರುವ ಶ್ರೇಯಸ್ಕರವಾದ ಹಿತವಚನಗಳಂತೆ ನಡೆದುಕೋ.

ಯುಧಿಷ್ಠಿರ! ನಿನಗೆ ಧರ್ಮಸೂಕ್ಷ್ಮವೂ, ಧರ್ಮದ ಗತಿಯೂ ಸಂಪೂರ್ಣವಾಗಿ ತಿಳಿದಿರುವುದು. ನೀನು ವಿನೀತನಾಗಿಯೂ, ಮಹಾಪ್ರಾಜ್ಞ ನಾಗಿಯೂ ಇರುವೆ. ಜ್ಞಾನವೃದ್ಧರ ಸೇವೆಯನ್ನು ಮಾಡಿರುವೆ.

**ಯತೋ ಬುದ್ಧಿಸ್ತತಃ ಶಾನ್ತಿಃ ಪ್ರಶಮಂ ಗಚ್ಛ ಭಾರತ ।**
**ನಾದಾರುಣೀ ಪತೇಚ್ಛಸ್ತ್ರಂ ದಾರುಣ್ಯೇತನ್ನಿಪಾತ್ಯತೇ ॥೫॥**

ಬುದ್ಧಿಯಿರುವೆಡೆಯಲ್ಲಿ ಶಾಂತಿಯಿರುತ್ತದೆ. ನೀನು ಬುದ್ಧಿವಂತ ನಾಗಿಯೂ–ವಿವೇಕಿಯಾಗಿಯೂ ಇರುವುದರಿಂದ ಶಾಂತಿಯ ಮಾರ್ಗವನ್ನು ಅನುಸರಿಸುವವನಾಗು. ಕೊಡಲಿಯು ಸೌದೆಯನ್ನು ಸೀಳಲು ಸಮರ್ಥವಾಗು ವುದೇ ಹೊರತು ಕಲ್ಲು ಮತ್ತು ಲೋಹಗಳನ್ನು ಸೀಳಲು ಸಮರ್ಥವಾಗುವು ದಿಲ್ಲ. ಅದೇ ರೀತಿಯಲ್ಲಿ ನನ್ನ ಹಿತವಚನಗಳು ನಿನ್ನಲ್ಲಿ ಪ್ರಯೋಜನ ಹೊಂದುವುವೇ ಹೊರತು ದುರ್ಯೋಧನನಲ್ಲಿ ಪ್ರಯೋಜನಹೊಂದ ಲಾರವು. (ವಿರೋಧಿಗಳ ಪ್ರತಿಕೂಲವಾದ ಕಾರ್ಯಗಳು ನಿನ್ನಂತಹವನ ಶಾಂತಿಯನ್ನು ಕದಡಲಾರವು.)

**ನ ವೈರಾಣ್ಯಭಿಜಾನನ್ತಿ ಗುಣಾನ್ಪಶ್ಯನ್ತಿ ನಾಗುಣಾನ್ ।**
**ವಿರೋಧಂ ನಾಧಿಗಚ್ಛನ್ತಿ ಯೇ ತ ಉತ್ತಮಪೂರುಷಾಃ ॥೬॥**

**ಸ್ಮರನ್ತಿ ಸುಕೃತಾನ್ಯೇವ ನ ವೈರಾಣಿ ಕೃತಾನ್ಯಪಿ ।**
**ಸನ್ತಃ ಪರಾರ್ಥಂ ಕುರ್ವಾಣಾ ನಾವೇಕ್ಷನ್ತೇ ಪ್ರತಿಕ್ರಿಯಾಮ್ ॥೭॥**

ಉತ್ತಮಪುರುಷರು ಯಾವಾಗಲೂ ಶತ್ರುಗಳು ಕೊಟ್ಟ ಕಿರುಕುಳವನ್ನು ಸ್ಮರಣೆಯಲ್ಲಿಟ್ಟುಕೊಳ್ಳುವುದಿಲ್ಲ. ಅವರಲ್ಲಿ ಗುಣಗಳನ್ನೇ ಕಾಣುತ್ತಾರೆ. ದೋಷಗಳನ್ನು ಪರಿಗಣಿಸುವುದಿಲ್ಲ. ದ್ವೇಷಕ್ಕೆ ಸಂಬಂಧಿಸಿದಂತೆ ಹಿಂಸಾ ಕಾರ್ಯಗಳನ್ನು ಶತ್ರುಗಳು ಮಾಡಿದ್ದರೂ ಅದನ್ನು ಮರೆತು ಅವರು ಮಾಡುವ ಒಳ್ಳೆಯ ಕಾರ್ಯಗಳನ್ನೇ ಸ್ಮರಣೆಯಲ್ಲಿಟ್ಟುಕೊಳ್ಳುತ್ತಾರೆ. ಸತ್ಪುರುಷರಲ್ಲಿರುವ ಮತ್ತೊಂದು ವಿಶೇಷಗುಣವೆಂದರೆ : ಅವರು ಯಾವ ವಿಧವಾದ ಪ್ರತ್ಯಪೇಕ್ಷೆಯೂ ಇಲ್ಲದೆ ಇತರರಿಗೆ ಉಪಕಾರಮಾಡುತ್ತಾರೆ.

**ಸಂವಾದೇ ಪರುಷಾಣ್ಯಾಹುರ್ಯುಧಿಷ್ಠಿರ ನರಾಧಮಾಃ ।**
**ಪ್ರತ್ಯಾಹುರ್ಮಧ್ಯಮಾಸ್ತ್ವೇತೇಽನುಕ್ತಾಃ ಪರುಷಮುತ್ತರಮ್ ॥೮॥**

**ನ ಚೋಕ್ತಾ ನೈವ ಚಾನುಕ್ತಾಸ್ತ್ವಹಿತಾಃ ಪರುಷಾ ಗಿರಃ ।**
**ಪ್ರತಿಜಲ್ಪನ್ತಿ ವೈ ಧೀರಾಃ ಸದಾ ತೂತ್ತಮಪೂರುಷಾಃ ॥೯॥**

ಯುಧಿಷ್ಠಿರ! ದುರುಳರು ಸಂವಾದಸಮಯದಲ್ಲಿ ಕೆಟ್ಟಮಾತುಗಳನ್ನಾಡುವರು. ಮಧ್ಯಮರು ತಾವು ಕಠಿನವಾಕ್ಯಗಳನ್ನಾಡದಿದ್ದರೂ ಹಗೆಗಳು ಹೇಳಿದ ಅಂತಹ ಕೆಟ್ಟಮಾತುಗಳಿಗೆ ಪ್ರತಿಯಾಗಿ ಮಾತನಾಡುತ್ತಾರೆ. ಆದರೆ ಧೀರರಾದ ಸತ್ಪುರುಷರು ಮಾತ್ರ ಅಂತಹ ಕೆಟ್ಟಮಾತುಗಳಿಗೆ ಪ್ರತಿಯಾಗಿ ಮಾತುಗಳನ್ನೂ ಆಡುವುದಿಲ್ಲ. ಅಂತಹ ಮಾತುಗಳನ್ನು ಸ್ಮರಿಸುವುದೂ ಇಲ್ಲ. ಕಠಿನೋಕ್ತಿಗಳು ಶತ್ರುಗಳಿಂದ ಹೇಳಲ್ಪಟ್ಟವೇ ಅಥವಾ ಇಲ್ಲವೇ?– ಎಂಬ ವಿಷಯವನ್ನೂ ಅವರು ಮನಸ್ಸಿಗೆ ಹಚ್ಚಿಕೊಳ್ಳುವುದಿಲ್ಲ.

**ಸ್ಮರನ್ತಿ ಸುಕೃತಾನ್ಯೇವ ನ ವೈರಾಣಿ ಕೃತಾನ್ಯಪಿ ।**
**ಸನ್ತಃ ಪ್ರತಿವಿಜಾನನ್ತೋ ಲಬ್ಧ್ವಾ ಪ್ರತ್ಯಯಮಾತ್ಮನಃ ॥೧೦॥**

ಕೆಟ್ಟಮಾತುಗಳನ್ನು ಕೇಳುವುದರಿಂದ ತಮ್ಮ ಮನಸ್ಸಿನಲ್ಲುಂಟಾಗುವ ಖೇದವನ್ನು ಮನನಮಾಡಿಕೊಂಡು, ಅದೇ ವಿಧವಾದ ಖೇದವು ಅಥವಾ ದುಃಖವು–ತಾವೂ ಕೆಟ್ಟಮಾತುಗಳನ್ನು ಪ್ರತಿಯಾಗಿ ಆಡಿದರೆ ಶತ್ರುಪಕ್ಷದವರಿಗೂ ಉಂಟಾದೀತೆಂಬುದನ್ನು ವಿವೇಚಿಸಿ–ಸತ್ಪುರುಷರು ಕೆಟ್ಟಮಾತುಗಳನ್ನಾಡುವುದಿಲ್ಲ.

ಈ ಕಾರಣದಿಂದಲೇ ಅವರು ಅಂತಹ ಮಾತುಗಳನ್ನು ಸ್ಮರಣೆಯಲ್ಲಿಯೂ ಇಟ್ಟುಕೊಳ್ಳುವುದಿಲ್ಲ. ಶತ್ರುಪಕ್ಷದವರೇನಾದರೂ ಒಳ್ಳೆಯದನ್ನು ಮಾಡಿದ್ದರೆ ಅದನ್ನು ಮಾತ್ರ ಸ್ಮರಣೆಯಲ್ಲಿಟ್ಟುಕೊಳ್ಳುವರು.

**ಅಸಮ್ಭಿನ್ನಾರ್ಯಮರ್ಯಾದಾಃ ಸಾಧವಃ ಪ್ರಿಯದರ್ಶನಾಃ ।**
**ತಥಾ ಚರಿತಮಾರ್ಯೇಣ ತ್ವಯಾಸ್ಮಿನ್ಸತ್ಸಮಾಗಮೇ ॥೧೧॥**

ಸತ್ಪುರುಷರು ಆರ್ಯಮರ್ಯಾದೆಯನ್ನು ಯಾವಾಗಲೂ ಭಂಗಪಡಿಸತಕ್ಕವರಲ್ಲ. ಅವರ ದರ್ಶನವು ಎಲ್ಲರಿಗೂ ಪ್ರಿಯವಾಗುತ್ತದೆ. ಅಂತಹವರನ್ನು ನೋಡಬೇಕೆಂದೇ ಪ್ರಪಂಚವು ಅಪೇಕ್ಷಿಸುತ್ತದೆ. ಈ ಕೌರವ-ಪಾಂಡವರ ಸಮಾಗಮದಲ್ಲಿ ನೀನಾದರೋ ಶ್ರೇಷ್ಠಪುರುಷರಿಗೆ ಅನುಗುಣವಾಗಿ ನಡೆದುಕೊಂಡಿರುವೆ.

ಮಗು! ದುರ್ಯೋಧನನ ಕಠಿನೋಕ್ತಿಗಳನ್ನು ಸ್ಮರಣೆಯಲ್ಲಿಟ್ಟು ಕೊಳ್ಳಬೇಡ. ನೀನು ಇಲ್ಲಿ ಒಳ್ಳೆಯತನವನ್ನು ಸ್ಮರಣೆಯಲ್ಲಿಟ್ಟುಕೊಳ್ಳಬೇಕಾದರೆ ತಾಯಿಯಾದ, ಪರಮಧಾರ್ಮಿಕಳಾದ ಗಾಂಧಾರಿಯನ್ನೂ–ವೃದ್ಧನಾದ, ಅಂಧನಾದ ಮತ್ತು ತಂದೆಯಾದ ನನ್ನನ್ನೂ ನೋಡು.

ನಮ್ಮ ಬಂಧು-ಮಿತ್ರರನ್ನು ಕಾಣುವ ಸಲುವಾಗಿಯೂ ಮತ್ತು ನನ್ನ ಮಕ್ಕಳ ಬಲಾಬಲಗಳನ್ನು ತಿಳಿಯುವ ಕಾರಣದಿಂದಲೂ ನಾನು ಈ ಜೂಜಾಟವು ನಡೆಯಲು ಅವಕಾಶವನ್ನಿತ್ತೆನು. ಯುಧಿಷ್ಠಿರ! ನಿನ್ನನ್ನು ರಾಜನನ್ನಾಗಿ ಪಡೆದಿರುವ ಮತ್ತು ಮಹಾಮೇಧಾವಿಯಾದ ವಿದುರನನ್ನು ಸಲಹೆಗಾರನನ್ನಾಗಿ ಪಡೆದಿರುವ ಕುರುಗಳು ಎಂದೆಂದಿಗೂ ದುಃಖಪಡುವ ಸಂಭವವಿಲ್ಲ.

**ತ್ವಯಿ ಧರ್ಮೋಽರ್ಜುನೇ ಧೈರ್ಯಂ ಭೀಮಸೇನೇ ಪರಾಕ್ರಮಃ ।**
**ಶ್ರದ್ಧಾ ಚ ಗುರುಶುಶ್ರೂಷಾ ಯಮಯೋಃ ಪುರುಷಾಗ್ರ್ಯಯೋಃ ॥**

ಧರ್ಮಜ! ನಿನ್ನಲ್ಲಿ ಧರ್ಮವಿದೆ. ನೀನೇ ಧರ್ಮಮೂರ್ತಿ. ಅರ್ಜುನನಲ್ಲಿ ಧೈರ್ಯವಿದೆ. ಭೀಮಸೇನನಲ್ಲಿ ಪರಾಕ್ರಮವಿದೆ. ಶ್ರದ್ಧೆ ಮತ್ತು ಗುರುಶುಶ್ರೂಷೆಗಳಿಗೆ ನಕುಲ-ಸಹದೇವರು ಹೆಸರಾಂತವರು.

ನಿನಗೆ ಮಂಗಳವಾಗಲಿ, ಯುಧಿಷ್ಠಿರ! ಖಾಂಡವಪ್ರಸ್ಥಕ್ಕೆ ಹಿಂದಿರುಗುವಾಗ ನಿನ್ನ ಸಹೋದರರಲ್ಲಿಯೂ, ದಾಯಾದರಲ್ಲಿಯೂ ಪರಸ್ಪರವಿಶ್ವಾಸವು ಬೆಳೆಯಲಿ. ನಿನ್ನ ಮನಸ್ಸು ಎಂದೆಂದಿಗೂ ಧರ್ಮದಲ್ಲಿಯೇ ಲೀನವಾಗಿರಲಿ."

ಧೃತರಾಷ್ಟ್ರನು ಹೀಗೆ ಹೇಳಿ ಪಾಂಡವರಿಗೆ ಖಾಂಡವಪ್ರಸ್ಥಕ್ಕೆ ಹೋಗಲು ಅನುಮತಿಯನ್ನಿತ್ತನು.

ಯುಧಿಷ್ಠಿರನು ರಾಜನ ಅನುಜ್ಞೆಯನ್ನು ಪಡೆದವನಾಗಿ ಅಲ್ಲಿ ಹಿರಿಯರಿಗೆ ಮಾಡಬೇಕಾಗಿದ್ದ ಅಭಿವಾದನವೇ ಮುಂತಾದ ಸಮುದಾಚಾರಗಳನ್ನು ಪೂರೈಸಿದನು. ಅನಂತರ ಪಾಂಡವರು ದ್ರೌಪದಿಯಿಂದೊಡಗೂಡಿ ದಿವ್ಯವಾದ ರಥಗಳಲ್ಲಿ ಕುಳಿತು ಸಂತುಷ್ಟಹೃದಯರಾಗಿ ಇಂದ್ರಪ್ರಸ್ಥನಗರಿಯ ಕಡೆಗೆ ಪ್ರಯಾಣಮಾಡಿದರು."

ಅಧ್ಯಾಯವು ಮುಗಿಯಿತು.

# ಪಾಂಡವರೊಡನೆ ಪುನಃ ದ್ಯೂತವಾಡಲು ದುರ್ಯೋಧನನು ಧೃತರಾಷ್ಟ್ರನನ್ನು ಒಪ್ಪಿಸಿದುದು

(ಧೃತರಾಷ್ಟ್ರನು ಪಾಂಡವರನ್ನು ಸಂತೈಸಿ ಬೀಳ್ಕೊಟ್ಟಿದ್ದೇನೋ ನಿಜ. ಆದರೆ ಪಾಂಡವರಿಗೆ ಕೌರವರ ಮೇಲಿದ್ದ ಕೋಪವು ನಿವಾರಣೆಯಾಯಿತೇ? ಭೀಮಸೇನನು ದುಃಶಾಸನನ ವಿಷಯವಾಗಿ ಮಾಡಿದ ಪ್ರತಿಜ್ಞೆಯ ಫಲಿತಾಂಶ ವೇನು? ಶಾಂತಿಸಂಧಾನವಾದನಂತರ ಭೀಮನ ಪ್ರತಿಜ್ಞೆಯು ನೆರವೇರುವು ದೆಂತು? ಇತ್ತಕಡೆಯಲ್ಲಿ ಕೌರವರಾದರೂ ನಿರ್ಯೋಚನೆಯಿಂದಿರಲು ಸಾಧ್ಯ ವಾಯಿತೇ? ಸಾಧ್ವಿಯಾದ ದ್ರೌಪದಿಯ ಮಾನಭಂಗಮಾಡಿಬಿಟ್ಟನಂತರ ನಾಗರಹಾವನ್ನು ಘಾಸಿಮಾಡಿ ಬಿಟ್ಟಂತಾಯಿತಲ್ಲವೇ? ಸಕಲಸಂಪದ್ಯುಕ್ತ ರಾಗಿ ರಾಜಧಾನಿಗೆ ತೆರಳಿದ ಪಾಂಡವರ ವಿಷಯದಲ್ಲಿ ನಿರ್ಯೋಚನೆ ಯಿಂದಿರುವುದೆಂತು?)

ಜನಮೇಜಯನೂ ಮೇಲಿನ ವಿಷಯಗಳನ್ನೇ ಮನಸ್ಸಿನಲ್ಲಿ ಯೋಚಿಸಿ ದವನಾಗಿ ವೈಶಂಪಾಯನರನ್ನು ಪ್ರಶ್ನಿಸುತ್ತಾನೆ :

**ಅನುಜ್ಞಾತಾಂಸ್ತಾನ್ವಿದಿತ್ವಾ ಧೃತರಾಷ್ಟ್ರೇಣ ಧೀಮತಾ ।**
**ಪಾಣ್ಡವಾನ್ಧಾರ್ತರಾಷ್ಟ್ರಾಣಾಂ ಕಥಮಾಸೀನ್ಮನಸ್ತದಾ ॥೧॥**

"ಬ್ರಾಹ್ಮಣೋತ್ತಮರೇ! ಪಾಂಡವರು ಸಕಲೈಶ್ವರ್ಯಗಳೊಡನೆ ಧೃತರಾಷ್ಟ್ರನ ಅನುಮತಿಯನ್ನು ಪಡೆದು ಹಸ್ತಿನಾಪುರವನ್ನು ಬಿಟ್ಟು ಇಂದ್ರಪ್ರಸ್ಥಕ್ಕೆ ತೆರಳಿದುದರ ಪರಿಣಾಮವೇನಾಯಿತು? ಈ ವಿಷಯದಲ್ಲಿ ಧೃತರಾಷ್ಟ್ರನ ಮಕ್ಕಳ ಪ್ರತಿಕ್ರಿಯೆಯಾದರೂ ಏನು?–ಇವೆಲ್ಲವನ್ನೂ ನನಗೆ ವಿಶದವಾಗಿ ಹೇಳಿರಿ."

"ಜನಮೇಜಯ! ಪಾಂಡವರು ಧೃತರಾಷ್ಟ್ರನ ಅನುಮತಿಯನ್ನು ಪಡೆದು ತಮ್ಮ ರಾಜ್ಯಕ್ಕೆ ಪ್ರಯಾಣಮಾಡಿದರೆಂದು ತಿಳಿದೊಡನೆಯೇ ದುಃಶಾಸನನು ಅಮಾತ್ಯರಿಂದೊಡಗೂಡಿ ಕುಳಿತಿದ್ದ ತನ್ನಣ್ಣನ ಬಳಿಗೆ ಅವಸರದಿಂದ ಧಾವಿಸಿ, ಶೋಕಾರ್ತನಾಗಿ ಅಣ್ಣನನ್ನು ಕುರಿತು ಹೇಳತೊಡಗಿದನು :

"ನಾವು ಬಹಳ ಕಷ್ಟಪಟ್ಟು ಸಂಪಾದಿಸಿದ್ದ ಅಪಾರವಾದ ಐಶ್ವರ್ಯವನ್ನು ಈ ವೃದ್ಧನು ನಿಮಿಷಮಾತ್ರದಲ್ಲಿ ಕಳೆದುಬಿಟ್ಟಿರುವನು. ನಾವು ಪಗಡೆಯಾಟದ ಮೂಲಕ ಸಂಪಾದಿಸಿದ್ದ ಅತುಲೈಶ್ವರ್ಯವೂ ಶತ್ರುವಿಗೇ ಕೊಡಲ್ಪಟ್ಟಿತು. ಮುಂದೇನು ಮಾಡಬೇಕೆಂಬುದನ್ನು ಒಡನೆಯೇ ನಿರ್ಧರಿಸಿರಿ."

ದುಃಶಾಸನನ ಮಾತುಗಳನ್ನು ಕೇಳಿದೊಡನೆಯೇ ದುರ್ಯೋಧನನು, ಕರ್ಣ-ಸೌಬಲರೊಡನೆ ಕ್ಷಣಕಾಲ ಸಮಾಲೋಚನೆಯನ್ನು ನಡೆಸಿ, ಪಾಂಡವರ ಬಲವನ್ನು ಉಡುಗಿಸಬೇಕೆಂಬ ಏಕೈಕಧ್ಯೇಯದಿಂದ ಕರ್ಣ-ದುಃಶಾಸನಾದಿಗಳೊಡನೆ ಧೃತರಾಷ್ಟ್ರನ ಬಳಿಗೆ ಹೋಗಿ ಏಕಾಂತದಲ್ಲಿ ಮಾತನಾಡಲು ಉಪಕ್ರಮಿಸಿದನು :

"ಮಹಾರಾಜ! ದೇವತೆಗಳಿಗೆ ಪುರೋಹಿತನಾದ ವಿದ್ವಾಂಸನಾದ ಬೃಹಸ್ಪತಿಯು ಇಂದ್ರನಿಗೆ ರಾಜನೀತಿಯನ್ನು ಬೋಧಿಸಿದ ವಿಷಯವು ನಿನಗೆ ತಿಳಿಯದೇ?

**ಸರ್ವೋಪಾಯೈರ್ನಿಹನ್ತವ್ಯಾಃ ಶತ್ರವಃ ಶತ್ರುಸೂದನ ।**
**ಪುರಾ ಯುದ್ಧಾದ್ಬಲಾದ್ವಾಪಿ ಪ್ರಕುರ್ವನ್ತಿ ತವಾಹಿತಮ್ ॥೮॥**

ಎಲ್ಲ ರೀತಿಯ ಉಪಾಯಗಳಿಂದಲೂ ಶತ್ರುಗಳನ್ನು ನಾಶಪಡಿಸಬೇಕೆಂದು ಬೃಹಸ್ಪತಿಯೇ ಹೇಳಿರುವನು. ಯುದ್ಧಮಾಡಿ ಅಥವಾ ಯುದ್ಧ ಮಾಡದೆಯೇ ಯಾರು ನಿನಗೆ ಅಹಿತವನ್ನುಂಟುಮಾಡುವರೋ ಅವರು ಅಹಿತವನ್ನು ಮಾಡುವ ಮೊದಲೇ ಅವರನ್ನು ನಿರ್ಮೂಲಮಾಡಿಯೇ ತೀರಬೇಕು. ಆದುದರಿಂದ ಪಾಂಡವರಿಂದ ಅಪಾರವಾದ ಐಶ್ವರ್ಯವನ್ನು ಪಡೆದು, ಇತರ ರಾಜರ ಸಂತೃಪ್ತಿಗಾಗಿ ವಿನಿಯೋಗಿಸಿ, ಅವರೆಲ್ಲರನ್ನು ನಮ್ಮವರನ್ನಾಗಿ ಮಾಡಿಕೊಂಡು ಅನಂತರದಲ್ಲಿ ಪಾಂಡವರೊಡನೆ ಯುದ್ಧಮಾಡಿದರೆ ನಮಗೆ ಜಯವೂ ಸಿದ್ಧವಾಗುವುದು. ಮೇಲಾಗಿ ಇದರಲ್ಲಾವ ದೋಷವೂ ಇರುವುದಿಲ್ಲ. ಇದರಿಂದ ನಮಗಾವ ಅಪಾಯವೂ ಸಂಭವಿಸಲಾರದು.

**ಅಹೀನಾಶೀವಿಷಾನ್ಕ್ರುದ್ಧಾನ್ನಾಶಾಯ ಸಮುಪಸ್ಥಿತಾನ್ ।**
**ಕೃತ್ವಾ ಕಣ್ಠೇ ಚ ಪೃಷ್ಠೇ ಚ ಕಃ ಸಮುತ್ಸ್ರಷ್ಟುಮರ್ಹತಿ ॥೧೧॥**

ಕೋಪಗೊಂಡಿರುವ ವಿಷಸರ್ಪಗಳು ತಮ್ಮನ್ನು ತಡೆದವರನ್ನು ನಾಶಪಡಿಸಲು ಸಿದ್ಧವಾಗಿರುವಾಗ-ಅವುಗಳ ಕುತ್ತಿಗೆಯ ಮೇಲೂ ಬೆನ್ನಿನ ಮೇಲೂ ಘಾಸಿಮಾಡಿ ಅವುಗಳನ್ನು ಬಿಟ್ಟುಬಿಡುವುದು ಉಚಿತವೆನಿಸು ವುದೇ? (ಕ್ರೂರಸರ್ಪಗಳನ್ನು ಹಿಡಿದು ಕುತ್ತಿಗೆಯ ಮೇಲೂ ಬೆನ್ನು ಮೇಲೂ ಹಾಕಿಕೊಂಡು ಯಾವನು ತಾನೇ ಹಿಡಿತವನ್ನು ಬಿಟ್ಟುಬಿಡುವನು?)

ಆಯುಧಗಳಿಂದ ಸುಸಜ್ಜಿತರಾದ, ರಥಾರೋಹಿಗಳಾದ ಪಾಂಡವರು ಕ್ರೋಧಪರವಶರಾಗಿದ್ದಾರೆ. ಕೋಪಗೊಂಡ ವಿಷಸರ್ಪಗಳು ಘಾಸಿಮಾಡಿ ದವನನ್ನು ಸಮಯಕಾದು ನಿರ್ಮೂಲಮಾಡಿಬಿಡುವಂತೆ–ಪಾಂಡವರೂ ನಮ್ಮನ್ನು ನಿರ್ಮೂಲಮಾಡಿಬಿಡುತ್ತಾರೆ. ಈಗಾಗಲೇ ಅರ್ಜುನನು ಅಕ್ಷಯತೂಣೀರಗಳನ್ನೂ–ಕವಚವನ್ನೂ ಧರಿಸಿದವನಾಗಿ ಗಾಂಡೀವಧನು ಸ್ಸನ್ನು ಕೈಯಲ್ಲಿ ಹಿಡಿದು ನಿಟ್ಟುಸಿರುಬಿಡುತ್ತಾ, ಕೋಪಾವಿಷ್ಟವಾದ ಕಟಾಕ್ಷದಿಂದ ನಮ್ಮೆಲ್ಲರನ್ನೂ ನೋಡುತ್ತಾ ತನ್ನ ಪಟ್ಟಣದ ಕಡೆಗೆ ಧಾವಿಸಿದನು. ವೃಕೋದರನೂ ಸಹ ತನ್ನ ರಥದ ಮೇಲೆ ಕುಳಿತುಕೊಂಡು ಗದೆಯನ್ನು ವರಸೆ-ವರಸೆಯಾಗಿ ತಿರುಗಿಸುತ್ತಾ ಪ್ರಯಾಣಮಾಡಿದನೆಂದು ಗೂಢಚಾರರು ವರದಿಮಾಡಿರುವರು. ನಕುಲನೂ ಒರೆಯಿಂದ ಕತ್ತಿಯನ್ನು ಹೊರತೆಗೆದು ಝಳಪಿಸುತ್ತಾ ಅರ್ಧಚಂದ್ರಾಕಾರದ ಗುರಾಣಿಯನ್ನು ವಾಮಹಸ್ತದಲ್ಲಿ ಹಿಡಿದು ಹೋಗುತ್ತಿದ್ದನಂತೆ. ಸಹದೇವನ ಮತ್ತು ಯುಧಿಷ್ಠಿರನ ಮುಖಭಾವಗಳೂ ನಮ್ಮನ್ನು ವಿನಾಶಗೊಳಿಸುವ ಇಚ್ಛೆಯನ್ನೇ ಸೂಚಿಸುವಂತಿದ್ದುವು.

ಸಕಲವಿಧವಾದ ಆಯುಧಗಳನ್ನೂ ತೆಗೆದುಕೊಂಡು ರಥದಲ್ಲಿ ಹೊರಟ ಪಾಂಡವರ ಉದ್ದೇಶವು ಇಂದ್ರಪ್ರಸ್ಥಕ್ಕೆ ಹೋದೊಡನೆಯೇ ನಮ್ಮ ವಿನಾಶಕ್ಕಾಗಿ ಬಲವನ್ನು ಸಂಗ್ರಹಿಸುವುದೇ ಆಗಿರುತ್ತದೆ.

ನಮ್ಮಿಂದ ಅಪಕೃತರಾದ ಪಾಂಡವರು ಖಂಡಿತವಾಗಿಯೂ ನಮ್ಮನ್ನು ಕ್ಷಮಿಸಲಾರರು. ನಾವು ಅವರಿಗೆ ಮಾಡಿದ ಅಪಮಾನವನ್ನು ಅವರೆಂದಿಗೂ ಮರೆಯುವ ಸಾಧ್ಯತೆಯೇ ಇಲ್ಲ. ದ್ರೌಪದಿಗೆ ನಾವು ಮಾಡಿದ ಅಪಮಾನ ವನ್ನು ಅವರಲ್ಲಿ ಯಾವನು ತಾನೇ ಕ್ಷಮಿಸಿಯಾನು?

ಈ ಕಾರಣಗಳಿಂದ ಪಾಂಡವರು ನಮ್ಮ ನಿರ್ಮೂಲನಕ್ಕೆ ಯತ್ನಿಸುವುದಂತೂ ನಿಶ್ಚಯ. ಆದುದರಿಂದ ನಾವು ಈಗಲೇ ಉಪಾಯಾಂತರದಿಂದ ಅವರನ್ನು ದಮನಮಾಡಲು ಯತ್ನಿಸಿಯೇ ತೀರಬೇಕು. ಪ್ರಕೃತ ನಮ್ಮಲ್ಲಿರುವ ಸಾಧನವೆಂದರೆ ಪಗಡೆಯಾಡುವುದೊಂದು ಮಾತ್ರ. ಶಕುನಿಯ ಕೌಶಲದಿಂದ ಅವರನ್ನು ಪರಾಜಯಗೊಳಿಸುವ ಸಾಧ್ಯತೆಯಿರುವುದು. ಆದುದರಿಂದ ನಾವು ಪುನಃ ಅವರನ್ನು ಕಾಡಿಗಟ್ಟಲು ಉಳಿದಿರುವ ಒಂದೇ ಮಾರ್ಗವೆಂದರೆ ಈ ದ್ಯೂತವೇ ಆಗಿರುತ್ತದೆ. ಈ ಒಂದು ರೀತಿಯಲ್ಲಿ ಮಾತ್ರವೇ ನಾವು ಅವರನ್ನು ನಮ್ಮ ಸ್ವಾಧೀನಮಾಡಿಕೊಳ್ಳಲು ಸಮರ್ಥರಾಗುವೆವು.

ಮುಂದೆ ನಾವು ಆಡಲಿರುವ ಆಟಕ್ಕೆ ಅವರ ಐಶ್ವರ್ಯಗಳನ್ನು ಪಣವನ್ನಾಗಿಟ್ಟುಕೊಳ್ಳುವ ಅವಶ್ಯಕತೆಯಿಲ್ಲ. ಒಂದೇ ಒಂದು ಪಣವನ್ನಿಟ್ಟು ನಮ್ಮ ಭಾಗ್ಯವನ್ನು ನಿರ್ಧರಿಸಬಹುದಾಗಿದೆ. ಹೇಗೆಂದರೆ : ಜೂಜಿನಲ್ಲಿ ಸೋತವರು ಯಾರಾದರೂ ಸರಿಯೇ–ಹನ್ನೆರಡು ವರ್ಷಗಳ ಕಾಲ ಅಜಿನ ಧಾರಿಗಳಾಗಿ ವನವಾಸದಲ್ಲಿರಬೇಕು. ಹದಿಮೂರನೆಯ ವರ್ಷ ಪಟ್ಟಣದಲ್ಲಿ ವಾಸಮಾಡಬೇಕು. ಅಲ್ಲಿ ಅಜ್ಞಾತರಾಗಿರಬೇಕು. ಆ ಒಂದು ವರ್ಷದ ಅವಧಿಯಲ್ಲಿ ಅಜ್ಞಾತವಾಸದಲ್ಲಿರುವವರನ್ನು ಗುರುತಿಸಿಬಿಟ್ಟರೆ ಅವರು ಪುನಃ ಹನ್ನೆರಡು ವರ್ಷಗಳ ಕಾಲ ವನವಾಸವನ್ನು ಮಾಡಬೇಕು. ಈ ಸಮಯದಲ್ಲಿ ಇದೇ ನಮ್ಮ ಮುಖ್ಯಕರ್ತವ್ಯವೆಂದು ನಾನು ಭಾವಿಸಿದ್ದೇನೆ. ಶಕುನಿಯು ಪಗಡೆಯಾಟದಲ್ಲಿ ನಿಷ್ಣಾತನಾಗಿರುವುದರಿಂದ ನಮಗೆ ಗೆಲುವೂ–ಪಾಂಡವರಿಗೆ ಪರಾಭವವೂ ಸಿದ್ಧವಾಗಿಯೇ ಇರುವುದು.

ಒಂದು ವೇಳೆ ಹದಿಮೂರು ವರ್ಷಗಳನ್ನೂ ಕಳೆದು ಪಾಂಡವರು ಪುನಃ ಬರುವರೆಂದೇ ಭಾವಿಸೋಣ. ಆ ವೇಳೆಗೆ ನಾವು ಈ ರಾಜ್ಯದಲ್ಲಿ ರೂಢಮೂಲರಾಗಿರುತ್ತೇವೆ. ರಾಜರೆಲ್ಲರನ್ನು ನಮ್ಮ ಮಿತ್ರರನ್ನಾಗಿ ಮಾಡಿಕೊಳ್ಳಲು ಕಾಲಾವಕಾಶವು ಸಿಕ್ಕಿದಂತಾಗುತ್ತದೆ. ಲಕ್ಷೋಪಲಕ್ಷ ಸೈನ್ಯವನ್ನು ಸಿದ್ಧಮಾಡಿ ಅವರಿಗೆ ಯಥೇಚ್ಛವಾಗಿ ಮಾಸಾಶನ-ಬಹುಮಾನಗಳನ್ನು ಕೊಟ್ಟು ಯುದ್ಧಸನ್ನದ್ಧರನ್ನಾಗಿ ಮಾಡಬಹುದಾಗಿದೆ. ಆ ಅಪಾರವಾದ ಬಲದೊಡನೆ, ಹದಿಮೂರು ವರ್ಷಗಳು ಕಳೆದನಂತರ ಮಿತ್ರಶೂನ್ಯರಾಗಿ

ಬರುವ ಪಾಂಡವರನ್ನೆದುರಿಸಿ ಅವರನ್ನು ನಿರ್ಮೂಲಮಾಡಲು ಸಾಧ್ಯ ವಾಗುವುದು.

ಈ ಯೋಜನೆಗೆ ನೀನು ಒಪ್ಪುವುದು ಸರ್ವಥಾ ಯುಕ್ತವಾಗಿದೆ. ಮಹಾರಾಜ!"

(ದುಷ್ಟರಿಗೆ ಇತರರೂ ದುಷ್ಟರಾಗಿಯೇ ಕಾಣುತ್ತಾರೆ. ಬೇರೆಯವರು ಮಾಡುವ ಪ್ರತಿಯೊಂದು ಕಾರ್ಯವೂ ದೌಷ್ಟ್ಯದಿಂದ ಕೂಡಿರುವುದೆಂದೇ ದುಷ್ಟರ ಭಾವನೆಯಾಗಿರುತ್ತದೆ. ಇದೊಂದು ಸಾಮಾನ್ಯನಿಯಮ. ಈ ನಿಯಮದಂತೆಯೇ ದುರ್ಯೋಧನನು ಧರ್ಮಾತ್ಮನಾದ ಯುಧಿಷ್ಠಿರನನ್ನೂ ಸಂಶಯಿಸಿದ್ದರಲ್ಲಿ ವಿಶೇಷವೇನೂ ಇಲ್ಲ. ಧೃತರಾಷ್ಟ್ರನ ಪಾತ್ರವಿಲ್ಲಿ ಗಾಳಿ ಬಂದ ಕಡೆಗೆ ತಿರುಗಿಕೊಳ್ಳುವ ದಿಕ್ಸೂಚಿಯಂತೆ. ವಿದುರನ ನೀತಿಗಳನ್ನು ಕೇಳುವಾಗಲೆಲ್ಲಾ ವಿದುರನು ಹೇಳುವುದೇ ಸರಿಯೆಂದೂ–ತನ್ನ ಮಗನು ದುಷ್ಟನೆಂದೂ ನಿಶ್ಚಯಮಾಡುವನು. ತನ್ನ ಮಗನ ಮಾತುಗಳನ್ನು ಕೇಳಿ ದೊಡನೆಯೇ ವಿದುರನ ನೀತಿಯ ಮಾತುಗಳೆಲ್ಲವೂ ಸ್ಮೃತಿಪಥದಿಂದ ಅಳಿಸಿ ಹೋಗುವುವು. ಇದರ ಜೊತೆಗೆ ಪುತ್ರಪ್ರೇಮವೆಂಬ ವ್ಯಾಮೋಹವೂ ಧೃತರಾಷ್ಟ್ರನನ್ನು ಆವರಿಸಿಬಿಡುವುದು.)

ಪುತ್ರವ್ಯಾಮೋಹದಿಂದ ಕೂಡಿದ್ದ ಧೃತರಾಷ್ಟ್ರನಿಗೆ ದುರ್ಯೋಧನ ನಾಡಿದ ಮಾತು 'ಸಾಧು' ಎನಿಸಿತು. ಒಡನೆಯೇ ಹೇಳಿದನು :

"ಪಾಂಡವರು ಎಷ್ಟೇ ಹೆಚ್ಚುದೂರ ಪ್ರಯಾಣಮಾಡಿದ್ದರೂ ಸರಿಯೇ; ಅಥವಾ ತಮ್ಮ ರಾಜಧಾನಿಯನ್ನು ಸೇರಿದ್ದರೂ ಸರಿಯೇ. ಅವರನ್ನು ಹಿಂದಕ್ಕೆ ಕರೆಯಿಸು. ಅವರು ಪುನಃ ನಿಮ್ಮೊಡನೆ ಪಗಡೆಯಾಡಲಿ."

"ಜನಮೇಜಯ! ಧೃತರಾಷ್ಟ್ರನು ಪಾಂಡವರನ್ನು ಪುನಃ ಪಗಡೆ ಯಾಡಲು ಕರೆಯಿಸುವನೆಂಬ ವರ್ತಮಾನವನ್ನು ಕೇಳಿ–ದ್ರೋಣ, ಸೋಮ ದತ್ತ, ಬಾಹ್ಲಿಕ, ಗೌತಮ, ವಿದುರ, ಅಶ್ವತ್ಥಾಮಾ, ಧೃತರಾಷ್ಟ್ರನಿಗೆ ವೈಶ್ಯ ಸ್ತ್ರೀಯಲ್ಲಿ ಜನಿಸಿದ ಯುಯುತ್ಸು, ಭೂರಿಶ್ರವ, ಭೀಷ್ಮ, ವಿಕರ್ಣ–ಇವ ರೆಲ್ಲರೂ ರಾಜನ ಬಳಿಗೆ ಹೋಗಿ–ದ್ಯೂತವಾಡುವುದು ಬೇಡವೆಂದೂ, ಪರಸ್ಪರ ಶಾಂತಿಯು ಸ್ಥಿರವಾಗಲೆಂದೂ ಸಲಹೆನೀಡಿದರು. ಆದರೆ ಪುತ್ರವ್ಯಾಮೋಹ ದಿಂದ ಸಂಮೂಢನಾಗಿದ್ದ ಧೃತರಾಷ್ಟ್ರನಿಗೆ ಮಿತ್ರರೂ, ಹಿತಚಿಂತಕರೂ

ಮಾಡಿದ ಸಲಹೆಯು ಹಿಡಿಸಲಿಲ್ಲ. ಅವರ ಹಿತೋಕ್ತಿಗಳನ್ನೂ ತಿರಸ್ಕರಿಸಿ ಧೃತರಾಷ್ಟ್ರನು ಪಾಂಡವರನ್ನು ಪುನಃ ದ್ಯೂತಕ್ಕಾಗಿ ಆಹ್ವಾನಿಸಿದನು.

ಎಪ್ಪತ್ನಾಲ್ಕನೆಯ ಅಧ್ಯಾಯವು ಮುಗಿಯಿತು.

೭೫ನೆಯ ಅಧ್ಯಾಯ ಅನುದ್ಯೂತಪರ್ವ (ಮುಂದುವರಿದಿದೆ.)

## ಧೃತರಾಷ್ಟ್ರನಿಗೆ ಗಾಂಧಾರಿಯ ಹಿತವಚನಗಳು : ಧೃತರಾಷ್ಟ್ರನ ತಿರಸ್ಕಾರ

(ಸಾಮಾನ್ಯವಾಗಿ ಪುತ್ರವ್ಯಾಮೋಹವು ತಂದೆಗಿಂತಲೂ ತಾಯಿಗೆ ಹೆಚ್ಚಾಗಿರುತ್ತದೆ. ಮಗನೆಷ್ಟೇ ತಪ್ಪುಮಾಡಿದರೂ ತಾಯಿಯಾದವಳು ಸೈರಿಸುವಳು. ಆದರೆ ತಂದೆಯು ಸೈರಿಸಲಾರನು. ಮಗನು ಎಷ್ಟೇ ಅಪರಾಧ ಮಾಡಿದ್ದರೂ ಮಗನಿಗಾಗಿ ಹಂಬಲಿಸುವ, ಮಗನ ಶ್ರೇಯಸ್ಸನ್ನೇ ಅನುದಿನವೂ ಬಯಸುವ ತಾಯಂದಿರನ್ನು ನಮ್ಮ ಸಮಾಜದಲ್ಲಿ ನೋಡಿದ್ದೇವೆ. ಆದರೆ ಮಹಾಮಾತೆಯಾದ ಗಾಂಧಾರಿಯು ಮಾತ್ರ ಜ್ಯೇಷ್ಠಪುತ್ರನಾದ ದುರ್ಯೋಧನನನ್ನು–ಕುಲದ ಅಭ್ಯುದಯಕ್ಕಾಗಿ ಪರಿತ್ಯಜಿಸಬೇಕೆಂದೇ ಧೃತರಾಷ್ಟ್ರನನ್ನು ಕೇಳಿಕೊಳ್ಳುವಳು. ಈ ವಿಷಯವನ್ನೇ ವೈಶಂಪಾಯನರು ಜನಮೇಜಯನಿಗೆ ಹೇಳುತ್ತಾರೆ.)

**ಅಥಾಬ್ರವೀನ್ಮಹಾರಾಜ ಧೃತರಾಷ್ಟ್ರಂ ಜನೇಶ್ವರಮ್ ।**
**ಪುತ್ರಹಾರ್ದಾದ್ಧರ್ಮಯುಕ್ತಾ ಗಾನ್ಧಾರೀ ಶೋಕಕರ್ಷಿತಾ ॥೧॥**

"ಜನಮೇಜಯ! ಧೃತರಾಷ್ಟ್ರನು ಪಾಂಡವರನ್ನು ಪುನಃ ದ್ಯೂತಕ್ಕಾಗಿ ಕರೆಯಿಸುವನೆಂದು ತಿಳಿದೊಡನೆಯೇ ಧರ್ಮಪರಾಯಣೆಯಾದ ಗಾಂಧಾರಿಯು–ಪುತ್ರರ ಮೇಲಿನ ವ್ಯಾಮೋಹದಿಂದ ಶೋಕಾವಿಷ್ಟಳಾಗಿ ಧೃತರಾಷ್ಟ್ರನ ಬಳಿಗೆ ಬಂದಳು.

ಗಾಂಧಾರಿಗೆ ನೂರೊಂದು ಮಂದಿ ಮಕ್ಕಳಲ್ಲವೇ? ದುರ್ಯೋಧನನೊಬ್ಬನ ಅವಿವೇಕದ ಕಾರಣದಿಂದಾಗಿ ತನ್ನ ಇತರ ನೂರು ಮಕ್ಕಳೂ ನಾಶಹೊಂದುವರೆಂಬ ಆತಂಕವು ಗಾಂಧಾರಿಗಿದ್ದಿತು.

ಆ ನೂರು ಮಕ್ಕಳನ್ನಾದರೂ ಉಳಿಸಿಕೊಳ್ಳಬೇಕೆಂಬ ಆಶಯದಿಂದ ಗಾಂಧಾರಿಯು ಧೃತರಾಷ್ಟ್ರನಿಗೆ ಹೇಳಿದಳು :

"ಮಹಾರಾಜ! ದುರ್ಯೋಧನನು ಹುಟ್ಟಿದೊಡನೆಯೇ ಮಹಾ ಮೇಧಾವಿಯಾದ ವಿದುರನೇನು ಹೇಳಿದ್ದನೆಂಬುದನ್ನು ನಿನ್ನ ಸ್ಮರಣೆಗೆ ತರಲು ಇಚ್ಛಿಸುತ್ತೇನೆ.

'ಕುಲಕಳಂಕನಾದ, ಕುಲನಾಶಕನಾದ ಇವನನ್ನು ಈ ಕೂಡಲೇ ಪರ ಲೋಕಕ್ಕೆ ಕಳುಹಿಸುವುದು ಉಚಿತವಾಗಿದೆ'–ಈ ಮಾತನ್ನು ವಿದುರನು ದುರ್ಯೋಧನನು ಹುಟ್ಟಿದೊಡನೆಯೇ ಹೇಳಿದ್ದನು. ಈ ಪುರುಷಾಧಮನು ಹುಟ್ಟಿದೊಡನೆಯೇ ಗೋಮಾಯುವಿನಂತೆ (ನರಿಯಂತೆ) ಅನವರತವಾಗಿ ಅರಚಿಕೊಂಡನಲ್ಲವೇ? ಆದುದರಿಂದ ಇವನು ಕುರುಕುಲವಿನಾಶಕನೆಂಬುದ ರಲ್ಲಿ ಸಂಶಯವೇ ಇಲ್ಲ. ನಾನು ಹೇಳುವುದನ್ನು ಸಾವಧಾನದಿಂದ ಕೇಳಿ, ನಿನ್ನ ಚಿತ್ತಕ್ಕೆ ತೆಗೆದುಕೋ, ಮಹಾರಾಜ! ಸ್ವಯಂಕೃತಾಪರಾಧದಿಂದ ದುಃಖ ಸಾಗರದಲ್ಲಿ ಮುಳುಗಬೇಡ. ಅವಿವೇಕಿಗಳಾದ, ಅಶಿಷ್ಟರಾದ (ಅವಿನೀತ ರಾದ) ಬಾಲಕರ ಮಾತುಗಳಿಗೆ ಕಿವಿಗೊಡಬೇಡ.

**ಮಾ ಕುಲಸ್ಯ ಕ್ಷಯೇ ಘೋರೇ ಕಾರಣಂ ತ್ವಂ ಭವಿಷ್ಯಸಿ ।**
**ಬದ್ಧಂ ಸೇತುಂ ಕೋ ನು ಭಿನ್ದ್ಯಾದ್ಧಮೇಚ್ಛಾನ್ತಂ ಚ ಪಾವಕಮ್ ॥**

ಘೋರವಾದ ಕುಲಕ್ಷಯಕ್ಕೆ ಕಾರಣನಾಗಬೇಡ. ಪಾಂಡವರಿಗೂ–ಕೌರವರಿಗೂ ಉಂಟಾಗಿದ್ದ ವಿರಸವು ಒಂದು ರೀತಿಯಲ್ಲಿ ಶಾಂತಿಗೊಂಡಿರು ವುದು. ಪುನಃ ಅದನ್ನು ಉಲ್ಬಣಗೊಳಿಸಲು ಯತ್ನಿಸಬೇಡ. ಪ್ರಭೋ! ಕಟ್ಟಿದ ಸೇತುವೆಯನ್ನು ಯಾರು ತಾನೇ ಒಡೆಯಲು ಯತ್ನಿಸುವರು? ಆರಿಹೋದ ಕಾಡುಗಿಚ್ಚನ್ನು ( ದ್ವೇಷಾಗ್ನಿಯನ್ನು ) ಪುನಃ ಪ್ರಜ್ವಲನಮಾಡುವುದು ಉಚಿತವೇ? ಶಾಂತರಾಗಿ ಪ್ರಯಾಣಮಾಡಿರುವ ಪಾಂಡವರನ್ನು ಕೋಪಿಷ್ಠರನ್ನಾಗಿ ಮಾಡಲು ಯಾರು ತಾನೇ ಇಚ್ಛಿಸುವರು?

ನೀನು ಧರ್ಮಾತ್ಮನಾದ ಅಜಮೀಢನ ವಂಶದಲ್ಲಿ ಹುಟ್ಟಿರುವೆ.ಅಂತಹ ಮಹಾನುಭಾವನ ವಂಶದಲ್ಲಿ ಹುಟ್ಟಿರುವ ನೀನು ಎಲ್ಲವನ್ನೂ ತಿಳಿದಿರುವೆ.

ಅಧರ್ಮಪ್ರವರ್ತನೆಯು ಸಲ್ಲದೆಂಬ ವಿಷಯವನ್ನು ಪುನಃ ನಿನ್ನ ಸ್ಮರಣೆಗೆ ತರಲು ಇಚ್ಛಿಸುತ್ತೇನೆ.

**ಶಾಸ್ತ್ರಂ ನ ಶಾಸ್ತಿ ದುರ್ಬುದ್ಧಿಂ ಶ್ರೇಯಸೇ ಚೇತರಾಯ ಚ ।**
**ನ ವೈ ವೃದ್ಧೋ ಬಾಲಮತಿರ್ಭವೇದ್ರಾಜನ್ಕಥಂಚನ ॥೭॥**

ಮಹಾರಾಜ! ಶಾಸ್ತ್ರವು ಶ್ರೇಯಸ್ಸಿನ ವಿಷಯದಲ್ಲಾಗಲೀ, ಅಶ್ರೇಯಸ್ಸಿನ ವಿಷಯದಲ್ಲಾಗಲೀ–ದುಷ್ಟಬುದ್ಧಿಯಿರುವವನನ್ನು ಶಾಸನಮಾಡುವುದಿಲ್ಲ. (ದುಷ್ಟವಾದ ಬುದ್ಧಿಯವನ ಮೇಲೆ ಶಾಸ್ತ್ರ-ಸಂಪ್ರದಾಯಗಳು ಯಾವ ವಿಧವಾದ ಪರಿಣಾಮವನ್ನೂ ಉಂಟುಮಾಡುವುದಿಲ್ಲ.) ಆದುದರಿಂದ ವೃದ್ಧನಾದವನು ಬಾಲಬುದ್ಧಿಯವನಾಗಬಾರದು. (ಮೂರ್ಖನಾಗಬಾರದು. ಬುದ್ಧಿಯಿಲ್ಲದ ಬಾಲಕರ ಮಾತನ್ನು ಕೇಳಬಾರದು.)

**ತ್ವನ್ನೇತ್ರಾಃ ಸನ್ತು ತೇ ಪುತ್ರಾ ಮಾ ತ್ವಾಂ ದೀರ್ಣಾಃ ಪ್ರಹಾಸಿಷುಃ ।**
**ತಸ್ಮಾದಯಂ ಮದ್ವಚನಾತ್ತ್ಯಜ್ಯತಾಂ ಕುಲಪಾಂಸನಃ ॥೮॥**

ನಿನ್ನ ಮಕ್ಕಳು ನಿನ್ನ ನಿಯಂತ್ರಣದಲ್ಲಿಯೇ ಇರಲಿ. ದುಷ್ಟನೊಬ್ಬನ ಅವಿವೇಕದಿಂದಾಗಿ ಉಳಿದ ಮಕ್ಕಳು ನಿನ್ನನ್ನು ನಿರಂತರವಾಗಿ ಅಗಲದಿರಲಿ. ಈ ಕಾರಣಗಳಿಂದಾಗಿ ಈ ಕೂಡಲೇ ದುಷ್ಟನಾದ ದುರ್ಯೋಧನನನ್ನು ಪರಿತ್ಯಜಿಸು. ಇವನು ನಮ್ಮ ಕುಲಕ್ಕೆ ಕುಠಾರಪ್ರಾಯನಾಗಿದ್ದಾನೆ. ಇವನನ್ನು ಬಹಳ ಕಾಲದ ಹಿಂದೆಯೇ ಪರಿತ್ಯಜಿಸಬೇಕಾಗಿದ್ದಿತು. ಆದರೂ ಪುತ್ರ ವ್ಯಾಮೋಹದಿಂದಾಗಿ ನೀನು ಇವನನ್ನು ಆಗಲೇ ಪರಿತ್ಯಜಿಸಲಿಲ್ಲ. ಈಗ ಕಾಲವು ಸನ್ನಿಹಿತವಾಗಿದೆ. ಇವನ ಕಾರಣದಿಂದಾಗಿ ನಮ್ಮ ಕುಲಕ್ಷಯ ವಾಗುವುದು ನಿಶ್ಚಯವೆಂಬ ಅರಿವು ಈಗಲಾದರೂ ಆಗಿದೆಯಲ್ಲವೇ? ಈಗಲೂ ತಪ್ಪಿ ನಡೆಯಬೇಡ. ಮೋಹಪರವಶನಾಗಬೇಡ.

**ಶಮೇನ ಧರ್ಮೇಣ ನಯೇನ ಯುಕ್ತಾ**
**ಯಾ ತೇ ಬುದ್ಧಿಃ ಸಾಸ್ತು ತೇ ಮಾ ಪ್ರಮಾದೀಃ ।**
**ಪ್ರಧ್ವಂಸಿನೀ ಕ್ರೂರಸಮಾಹಿತಾ ಶ್ರೀ-**
**ರ್ಮೃದುಪ್ರೌಢಾ ಗಚ್ಛತಿ ಪುತ್ರಪೌತ್ರಾನ್ ॥೧೦॥**

ನಿನ್ನ ಬುದ್ಧಿಯು ಶಮ, ಧರ್ಮ, ನೀತಿ–ಇವುಗಳಿಂದ ಕೂಡಿರಲಿ. ನೀನು ಪುತ್ರವ್ಯಾಮೋಹದಿಂದ ತಪ್ಪುದಾರಿಯನ್ನು ಹಿಡಿಯಬೇಡ. ಕ್ರೂರ ಮಾರ್ಗದಿಂದ ಸಂಪಾದಿಸಿದ ಲಕ್ಷ್ಮಿಯು ( ಐಶ್ವರ್ಯವು ) ಬಹಳ ಶೀಘ್ರವಾಗಿ ವಿನಾಶಹೊಂದುತ್ತಾಳೆ. ಮೃದುಮಾರ್ಗದಿಂದ ( ಅಭಿವೃದ್ಧಿಹೊಂದಿದ ) ಪ್ರೌಢೆಯಾದ ಲಕ್ಷ್ಮಿಯು ( ಐಶ್ವರ್ಯವು ) ವಂಶಪಾರಂಪರ್ಯವಾಗಿ ಶಾಶ್ವತ ವಾಗಿರುತ್ತಾಳೆ."

(ಗಾಂಧಾರಿಯು ಇಷ್ಟು ಸ್ಪಷ್ಟವಾಗಿ ಧರ್ಮಾಧರ್ಮಗಳ ಸೂಕ್ಷ್ಮವನ್ನು ಹೇಳಿದರೂ ಧೃತರಾಷ್ಟ್ರನ ಮನಸ್ಸು ಪರಿವರ್ತನೆಯನ್ನು ಹೊಂದಲಿಲ್ಲ. ಪುತ್ರವ್ಯಾಮೋಹವೆಂಬ ಪಾಶದಿಂದ ಭದ್ರವಾಗಿ ಬಿಗಿಯಲ್ಪಟ್ಟಿದ್ದನು.) ಗಾಂಧಾರಿಯು ಹೇಳಿದಷ್ಟೇ ಸ್ಪಷ್ಟವಾಗಿ ಧೃತರಾಷ್ಟ್ರನೂ ಉತ್ತರಿಸಿದನು :

**ಅನ್ತಃ ಕಾಮಂ ಕುಲಸ್ಯಾಸ್ತು ನ ಶಕ್ನೋಮಿ ನಿವಾರಿತುಮ್ ॥**

"ನಮ್ಮ ಕುಲದ ವಿನಾಶಕಾಲವು ಸನ್ನಿಹಿತವಾಗಿರುವುದೆಂಬುದು ನಿಶ್ಚಯವಾದರೆ ಆ ಕಾಲವು ಅಬಾಧಿತವಾಗಿ ಬಂದುಬಿಡಲಿ. ನಾನದನ್ನು ತಡೆಯಲು ಅಸಮರ್ಥನಾಗಿದ್ದೇನೆ. ಆದುದರಿಂದ ನನ್ನ ಪುತ್ರರ ಇಚ್ಛೆ ಯಂತೆಯೇ ಸಕಲವೂ ನಡೆದುಹೋಗಲಿ. ಪಾಂಡವರು ಬಂದು ಪುನಃ ನನ್ನ ಮಕ್ಕಳೊಡನೆ ಪಗಡೆಯಾಡಲಿ. ಇದೇ ನನ್ನ ಕಡೆಯ ನಿರ್ಧಾರವಾಗಿದೆ."

೭೫ನೆಯ ಅಧ್ಯಾಯವು ಮುಗಿಯಿತು.

೭೬ನೆಯ ಅಧ್ಯಾಯ ಅನುದ್ಯೂತಪರ್ವ (ಮುಂದುವರಿದಿದೆ.)

## ದ್ಯೂತವು ಕೂಡದೆಂದು ಎಲ್ಲರೂ ಹೇಳಿದರೂ ಎಲ್ಲರ ಮಾತನ್ನೂ ನಿರಾಕರಿಸಿ ಧೃತರಾಷ್ಟ್ರನಿಂದ ಯುಧಿಷ್ಠಿರನಿಗೆ ಪುನರ್ದ್ಯೂತಕ್ಕೆ ಆಹ್ವಾನ : ಪುನರ್ದ್ಯೂತ : ಪಾಂಡವರ ಪರಾಜಯ

**ತತೋ ವ್ಯಧ್ವಗತಂ ಪಾರ್ಥಂ ಪ್ರಾತಿಕಾಮೀ ಯುಧಿಷ್ಠಿರಮ್ ।**
**ಉವಾಚ ವಚನಾದ್ರಾಜ್ಞೋ ಧೃತರಾಷ್ಟ್ರಸ್ಯ ಧೀಮತಃ ॥೧॥**

ಧೃತರಾಷ್ಟ್ರನ ಆಜ್ಞಾನುಸಾರವಾಗಿ ರಾಜಸೇವಕನೊಬ್ಬನು ಯುಧಿಷ್ಠಿರ ನನ್ನು ಕರೆತರಲು ಇಂದ್ರಪ್ರಸ್ಥದ ಹಾದಿಯನ್ನು ಹಿಡಿದು ವೇಗವಾಗಿ

ಹೊರಟನು. ಅವನು ಪಾಂಡವರನ್ನು ಸಂಧಿಸುವ ವೇಳೆಗೆ ಅವರು ಇಂದ್ರಪ್ರಸ್ಥದ ಮಾರ್ಗದಲ್ಲಿ ಬಹಳ ದೂರ ಹೋಗಿದ್ದರು. ರಾಜಸೇವಕನು ಯುಧಿಷ್ಠಿರನಿಗೆ ನಮಸ್ಕರಿಸಿ ಧೃತರಾಷ್ಟ್ರನು ಹೇಳಿಕಳುಹಿಸಿದ್ದ ವಾರ್ತೆಯನ್ನು ಅರುಹಿದನು.

"ಯುಧಿಷ್ಠಿರ! ನಾನು ಹೇಳಲಿರುವ ಮಾತುಗಳನ್ನು ನಿನ್ನ ತಂದೆಯು ನಿನಗೆ ಹೇಳಬೇಕೆಂದು ಹೇಳಿರುವನು :

**ಉಪಾಸ್ತೀರ್ಣಾ ಸಭಾ ರಾಜನ್ನಕ್ಷಾನುಪ್ತ್ವಾ ಯುಧಿಷ್ಠಿರ ।**
**ಏಹಿ ಪಾಂಡವ ದೀವ್ಯೇತಿ ಪಿತಾ ತ್ವಾಹೇತಿ ಭಾರತ ॥೨॥**

'ಯುಧಿಷ್ಠಿರ! ಪಾಂಡುಪುತ್ರ! ಪಗಡೆಯ ಆಟಕ್ಕಾಗಿ ಕಾಯಿಗಳನ್ನು ಹೂಡಿ ಸಭಾಮಂದಿರವು ಸಜ್ಜುಗೊಳಿಸಲ್ಪಟ್ಟಿರುವುದು. ನೀನು ಈಗಲೇ ಬಂದು (ನನ್ನ ಪುತ್ರರೊಡನೆ) ಪಗಡೆಯಾಡಬೇಕೆಂಬುದು ನನ್ನ ಇಚ್ಛೆಯಾಗಿದೆ.' "

ಯುಧಿಷ್ಠಿರನು ರಾಜಸೇವಕನ ಮಾತುಗಳನ್ನು ಕೇಳಿ ಒಮ್ಮೆ ದೀರ್ಘವಾಗಿ ನಿಟ್ಟುಸಿರುಬಿಟ್ಟು ಹೇಳಿದನು :

**ಧಾತುರ್ನಿಯೋಗಾದ್ಭೂತಾನಿ ಪ್ರಾಪ್ನುವನ್ತಿ ಶುಭಾಶುಭಮ್ ।**
**ನ ನಿವೃತ್ತಿಸ್ತಯೋರಸ್ತಿ ದೇವಿತವ್ಯಂ ಪುನರ್ಯದಿ ॥೩॥**

**ಅಕ್ಷದ್ಯೂತೇ ಸಮಾಹ್ವಾನಂ ನಿಯೋಗಾತ್ಸ್ಥವಿರಸ್ಯ ಚ ।**
**ಜಾನನ್ನಪಿ ಕ್ಷಯಕರಂ ನಾತಿಕ್ರಮಿತುಮುತ್ಸಹೇ ॥೪॥**

"ಪ್ರಾಣಿಗಳು ಬ್ರಹ್ಮನ ನಿಯಮದಂತೆಯೇ ಶುಭಫಲವನ್ನಾಗಲೀ–ಅಶುಭಫಲವನ್ನಾಗಲೀ ಅನುಭವಿಸುತ್ತವೆ. ಯಾವ ಕಾರಣದಿಂದಲೂ ಅವುಗಳನ್ನು ತಡೆಯುವ ಸಾಧ್ಯತೆಯಿಲ್ಲ. ಪುನಃ ಪಗಡೆಯಾಡಿದರೆ ಅನೇಕವಾದ ಅಶುಭಫಲಗಳನ್ನು ಅನುಭವಿಸಿಯೇ ತೀರಬೇಕಾಗುವುದು. ಆದರೂ ಪಗಡೆಯಾಟವು ಅನಿವಾರ್ಯ. ಮೊದಲನೆಯದಾಗಿ–ಜೂಜಾಟಕ್ಕೆ ಆಹ್ವಾನಿಸಿದಾಗ ಬರುವುದಿಲ್ಲವೆಂದು ಹೇಳಲು ಸಾಧ್ಯವಿಲ್ಲ. ಎರಡನೆಯದಾಗಿ–ಜೂಜಾಟಕ್ಕೆ ಬರಬೇಕೆಂದು ದೊಡ್ಡಪ್ಪನ ಆಜ್ಞೆಯೂ ಆಗಿರುವುದು. ಈ ಕಾರಣದಿಂದಾಗಿ ಮುಂದೆ ಆಡಲಿರುವ ಅನುದ್ಯೂತದಿಂದ ನನಗೆ ಅನೇಕವಾದ

ಅಶುಭಫಲಗಳು ಸಿದ್ಧವಾಗಿದೆಯೆಂದು ತಿಳಿದಿದ್ದರೂ ಆಹ್ವಾನವನ್ನು ಅಥವಾ ಆಜ್ಞೆಯನ್ನು ತಿರಸ್ಕರಿಸಲು ಅಸಮರ್ಥನಾಗಿದ್ದೇನೆ.''

ಆ ಸಂದರ್ಭವನ್ನು ಹೇಳುವಾಗ ವೈಶಂಪಾಯನರೂ ನಿಟ್ಟುಸಿರು ಬಿಡುತ್ತಾ ಜನಮೇಜಯರಾಜನಿಗೆ ಹೇಳುತ್ತಾರೆ :

ಅಸಮ್ಭವೇ ಹೇಮಮಯಸ್ಯ ಜನ್ತೋ-
ಸ್ತಥಾಪಿ ರಾಮೋ ಲುಲುಭೇ ಮೃಗಾಯ ।
ಪ್ರಾಯಃ ಸಮಾಸನ್ನಪರಾಭವಾಣಾಂ
ಧಿಯೋ ವಿಪರ್ಯಸ್ತತರಾ ಭವನ್ತಿ ॥೫॥

ಪಾರಿಕ್ಷಿತನೇ! ಸಜೀವವಾದ ಸ್ವರ್ಣಮೃಗವಿರುವುದು ಅಸಂಭವ ವೆಂಬುದು ಸರ್ವವಿದಿತವಾಗಿದ್ದರೂ ಸ್ವರ್ಣಮಯವಾದ ಮಾಯಾಮೃಗಕ್ಕಾಗಿ (ಜಿಂಕೆಗಾಗಿ) ಶ್ರೀರಾಮನು ಮೋಹಿಸಿ ಹೊರಟನು. ಪ್ರಾಯಶಃ ಯಾರಿಗೆ ಅಶುಭಫಲಗಳು ಕಾದಿವೆಯೋ–ಅವರ ಬುದ್ಧಿಯು ತತ್ಕಾಲದಲ್ಲಿ ಅಸ್ತವ್ಯಸ್ತ ವಾಗುತ್ತದೆ.

ಜಾನನ್ನಪಿ ಕ್ಷಯಕರಂ ನಾತಿಕ್ರಮಿತುಮುತ್ಸಹೇ ॥

"ನನಗೆ ಅಪಾಯವಿದೆಯೆಂದು ತಿಳಿದಿದ್ದರೂ, ಈ ಆಟವು ಕ್ಷತ್ರಿಯರ ವಿನಾಶಕ್ಕಾಗಿ ನಡೆಯಲಿದೆಯೆಂದು ಭಾಸವಾಗುತ್ತಿದ್ದರೂ ಸಹ ಧೃತರಾಷ್ಟ್ರನ ಆಜ್ಞೆಯನ್ನು ಉಲ್ಲಂಘಿಸಲು ನನಗೆ ಇಚ್ಛೆಯಿಲ್ಲ''–ಎಂಬುದಾಗಿ ಧರ್ಮಜನು ಹೇಳುತ್ತಾ ಶಕುನಿಯು ಆಟದಲ್ಲಿ ಮೋಸಮಾಡುವನೆಂದು ಸ್ಪಷ್ಟವಾಗಿ ತಿಳಿದಿದ್ದರೂ ತನ್ನ ತಮ್ಮಂದಿರೊಡಗೂಡಿ ದ್ಯೂತಕ್ಕಾಗಿ ಹಸ್ತಿನಾಪಟ್ಟಣಕ್ಕೆ ಹಿಂದಿರುಗಿದನು. ಮಹಾರಥರಾದ ಪಾಂಡವರು ಪುನಃ ಸಭೆಯನ್ನು ಪ್ರವೇ ಶಿಸಿದರು. ಅವರು ದ್ಯೂತಕ್ಕಾಗಿ ಸಭೆಯನ್ನು ಪ್ರವೇಶಿಸಿದುದರಿಂದ ಅನೇಕ ಸುಹೃದರಿಗೆ ಬಹಳ ವ್ಯಥೆಯೇ ಆಯಿತು. (ಏಕೆಂದರೆ : ಸಾಮಾನ್ಯವಾಗಿ ಎಲ್ಲರೂ ಅದರ ಫಲಿತಾಂಶ ಮತ್ತು ಪರಿಣಾಮಗಳನ್ನು ತಿಳಿದವರೇ ಆಗಿ ದ್ದರು.) ಪಾಂಡವರು ದೈವಯೋಗದಿಂದ ಲೋಕವಿನಾಶಕರವಾದ ದ್ಯೂತಕ್ಕೆ ಸಿದ್ಧರಾಗಿ ಕುಳಿತರು.

ಧರ್ಮಜನು ಆಟಕ್ಕೆ ಕುಳಿತನಂತರ ಪಣದ ವಿಷಯವನ್ನು ಪ್ರಸ್ತಾಪಿಸ ಬೇಕಲ್ಲವೇ? ಶಕುನಿಯು ನಸುನಗುತ್ತಾ ಧರ್ಮರಾಜನೊಡನೆ ಹೇಳಿದನು :

"ಧರ್ಮಜ! ವೃದ್ಧನಾದ ಧೃತರಾಷ್ಟ್ರರಾಜನು ನೀನು ಸೋತಿದ್ದ ಸಕಲೈಶ್ವರ್ಯಗಳನ್ನೂ ನಿನಗೆ ಕೊಟ್ಟುಬಿಟ್ಟಿರುವನು. ನಿನ್ನ ಐಶ್ವರ್ಯವನ್ನು ನಿನಗೆ ಹಿಂದಿರುಗಿಸಿಕೊಟ್ಟಿರುವುದು ಸೂಕ್ತವಾಗಿಯೇ ಇದೆ. ಈಗ ನಾವು ಐಶ್ವರ್ಯವನ್ನು ಪಣವನ್ನಾಗಿಡುವ ಇಚ್ಛೆಯುಳ್ಳವರಾಗಿಲ್ಲ. ಮಹತ್ತ್ವ ಪೂರಿತವಾದ ವಿಶೇಷಪಣವೊಂದನ್ನಿಟ್ಟು ಆಡಲು ನಿಶ್ಚಯಿಸಿರುವೆವು. ನಿಮ್ಮಿಂದ ನಾವು ಗೆಲ್ಲಲ್ಪಟ್ಟರೆ ಕೃಷ್ಣಾಜಿನವನ್ನು ಧರಿಸಿ ಹನ್ನೆರಡು ವರ್ಷಗಳ ಕಾಲ ಅರಣ್ಯವಾಸಮಾಡಿ, ಪುನಃ ಒಂದು ವರ್ಷಕಾಲ ಪಟ್ಟಣದಲ್ಲಿ ಅಜ್ಞಾತ ವಾಸವನ್ನು ಮಾಡುತ್ತೇವೆ. ಅಜ್ಞಾತವಾಸದಲ್ಲಿರುವಾಗ ನಿಮ್ಮಿಂದ ಕಂಡು ಹಿಡಿಯಲ್ಪಟ್ಟರೆ ನಾವು ಪುನಃ ಹನ್ನೆರಡು ವರ್ಷಗಳ ವನವಾಸವನ್ನೂ ಒಂದು ವರ್ಷದ ಅಜ್ಞಾತವಾಸವನ್ನೂ ಮಾಡುತ್ತೇವೆ.

ಇದರಂತೆಯೇ ನಮ್ಮಿಂದ ನೀವು ಪರಾಜಿತರಾದರೆ ದ್ರೌಪದಿಯೊಡನೆ ನೀವೈವರೂ ಹನ್ನೆರಡು ವರ್ಷಗಳ ಕಾಲ ವನವಾಸಮಾಡಿ ಬಳಿಕ ಒಂದು ವರ್ಷದ ಅಜ್ಞಾತವಾಸವನ್ನು ಪಟ್ಟಣದಲ್ಲಿ ಮಾಡಬೇಕು. ಆ ಸಮಯದಲ್ಲಿ ನೀವು ನಮ್ಮಿಂದ ಗುರುತಿಸಲ್ಪಟ್ಟರೆ ಪುನಃ ಹನ್ನೆರಡು ವರ್ಷಗಳ ಕಾಲ ವನವಾಸವನ್ನೂ ಒಂದು ವರ್ಷ ಅಜ್ಞಾತವಾಸವನ್ನೂ ಮಾಡಬೇಕಾಗುವುದು.

**ಸ್ವರಾಜ್ಯಂ ಪ್ರತಿಪತ್ತವ್ಯಮಿತರೈರಥವೇತರೈಃ ॥೧೪॥**

ಯಾರೊಬ್ಬರಿಂದಲೂ ಗುರುತಿಸಲ್ಪಡದೆ ಅಜ್ಞಾತವಾಸವನ್ನೂ ಕಳೆದು ಹಿಂದಿರುಗಿ ಬಂದನಂತರ ಅವರವರು ಅವರವರ ರಾಜ್ಯಗಳನ್ನು ವಹಿಸಿಕೊಳ್ಳ ಬಹುದು.

ಧರ್ಮಜ! ಈ ನಿಯಮಕ್ಕೆ ಅನುಸಾರವಾಗಿ ನೀನು ನಮ್ಮೊಡನೆ ಪಗಡೆಯನ್ನು ಆಡುವವನಾಗು."

(ಎರಡೇ ನಿಮಿಷಗಳಲ್ಲಿ ಆಟದ ಫಲಿತಾಂಶವು ತಿಳಿದುಹೋಗುವುದು. ಅದರ ಫಲವಾಗಿ ಇಬ್ಬರಲ್ಲಿ ಯಾರಾದರೂ ಒಬ್ಬರು ವನವಾಸವನ್ನು ಅನು ಭವಿಸಿಯೇ ತೀರಬೇಕಾಗುವುದು. ಶಕುನಿಯ ಮೋಸದಿಂದಾಗಿ ಪಾಂಡವರೇ ಪರಾಜಿತರಾಗುವರೆಂಬುದೂ ನಿಶ್ಚಯ.) ಈ ವಿಷಯವನ್ನು ಮನಸ್ಸಿನಲ್ಲಿ

ನೆನೆದು ಸಭಾಮಂದಿರದಲ್ಲಿ ಕುಳಿತಿದ್ದ ಅನೇಕ ಸಭ್ಯರು ತಮ್ಮ ಕೈಗಳನ್ನು ಮೇಲೆತ್ತಿ ಉದ್ವಿಗ್ನರಾಗಿ ಸಂಕಟದಿಂದ ಕೂಗಿ ಹೇಳಿದರು :

**ಅಹೋ ಧಿಗ್ಬಾನ್ಧವಾ ನೈನಂ ಬೋಧಯನ್ತಿ ಮಹದ್ಭಯಮ್ ।**
**ಬುದ್ಧ್ಯಾ ಬುಧ್ಯೇನ್ನ ವಾ ಬುಧ್ಯೇದಯಂ ವೈ ಭರತರ್ಷಭಃ ॥೧೭॥**

"ಹಾ ಧಿಕ್! ಮುಂದೆ ಬರಲಿರುವ ದಾರುಣವಾದ ವಿಪತ್ತನ್ನು ಈ ಬಾಂಧವರು ಇವನಿಗೆ ತಿಳಿಯಹೇಳುವುದಿಲ್ಲವೇ? ಭಾರತಶ್ರೇಷ್ಠನಾದ ಧರ್ಮರಾಜನ ಬುದ್ಧಿಗೆ ಈ ವಿಪತ್ತು ತಿಳಿದಿರುವುದೋ ಅಥವಾ ಇಲ್ಲವೋ ತಿಳಿಯದಲ್ಲಾ!"

ಸಭ್ಯರಾಡಿದ ಮಾತುಗಳನ್ನು ಯುಧಿಷ್ಠಿರನೂ ಕೇಳಿದನು. ಆದರೂ ಮಾಡುವುದೇನು? ನಾಚಿಕೆಯು ಅವನ ಮುಖವನ್ನು ಆವರಿಸಿದ್ದಿತು. ಧರ್ಮದಿಂದ ಬಂಧಿತನಾಗಿದ್ದನು. ಮಹಾಮೇಧಾವಿಯಾದ ಧರ್ಮಜನಿಗೆ ಅನುದ್ಯೂತದ ಫಲವೇನೆಂಬುದು ಸ್ಪಷ್ಟವಾಗಿ ತಿಳಿದಿದ್ದಿತು. ಆದರೂ ಕುರು ವಂಶದರಸರ ವಿನಾಶವು ಸನ್ನಿಹಿತವಾಗಿದೆಯೆಂಬುದನ್ನು ತಿಳಿದಿರುವನೋ ಎಂಬಂತೆ ಪಗಡೆಯಾಡಲು ಸಿದ್ಧನಾಗಿ ಶಕುನಿಯನ್ನು ಕುರಿತು ಹೇಳಿದನು :

"ಸೌಬಲನೇ! ಕ್ಷತ್ರಿಯನಿಗೆ ಯುಕ್ತವಾದ ಧರ್ಮವನ್ನು ವಿಪತ್ಕಾಲ ದಲ್ಲಿಯೂ ಬಿಡದೇ ಆಚರಿಸುವ ನನ್ನಂತಹ ಯಾವ ರಾಜನು ತಾನೇ ಜೂಜಾಟದ ಆಹ್ವಾನವನ್ನು ನಿರಾಕರಿಸುವನು? ಆದುದರಿಂದ ನಿನ್ನೊಡನೆ ಪಗಡೆಯಾಟಕ್ಕೆ ಸಿದ್ಧನಾಗಿರುವೆನು."

ಪಗಡೆಯಾಟವು ಪ್ರಾರಂಭವಾಯಿತು. ಶಕುನಿಯು ಪುನಃ ಪಣದ ವಿಷಯವನ್ನು ಪ್ರಸ್ತಾಪಿಸಿ ಹೇಳಿದನು :

"ನಮ್ಮಲ್ಲಿ ಅನೇಕಾನೇಕ ಗೋವುಗಳು, ಕುದುರೆಗಳು, ಎತ್ತುಗಳು, ಕುರಿಗಳು, ಆಡುಗಳು, ಆನೆಗಳು, ಸುವರ್ಣದ ಬೊಕ್ಕಸಗಳು, ದಾಸ-ದಾಸಿಯರೂ ಇರುತ್ತಾರೆ. ಅವೆಲ್ಲವನ್ನೂ ಪಣವನ್ನಾಗಿಟ್ಟು ಈ ಹಿಂದೆ ನಾವು ಆಟವಾಡಿದೆವು. ಆದರೆ ಈಗ–ಸೋತವರು ಹನ್ನೆರಡು ವರ್ಷಗಳ ಕಾಲ ವನವಾಸವನ್ನೂ, ಒಂದು ವರ್ಷಕಾಲ ಪಟ್ಟಣದಲ್ಲಿ ಅಜ್ಞಾತವಾಸವನ್ನೂ

ಮಾಡಬೇಕೆಂಬ–ಒಂದೇ ಒಂದು ಪಣವನ್ನಿಟ್ಟು ನಾವು ಆಟವಾಡೋಣ. ಇದಕ್ಕೆ ನಿನ್ನ ಸಮ್ಮತಿಯಿದೆಯಲ್ಲವೇ?"

ಶಕುನಿಯು ಆ ಪಣದ ವಿಷಯವಾಗಿ ಹಲವುಬಾರಿ ಹೇಳಿದನು. ಧರ್ಮಜನೂ ಅನಿವಾರ್ಯವಾಗಿ ಒಪ್ಪಿದನು. ಶಕುನಿಯು ದಾಳಗಳನ್ನು ಕೈಗೆ ತೆಗೆದುಕೊಂಡು ಆಡಲು ಮೊದಲಿಟ್ಟನು. ಸಭ್ಯರೆಲ್ಲರ ದೃಷ್ಟಿಪಥಗಳೂ ದಾಳಗಳ ಕಡೆಗೆ ಸರಿದುವು. ಎಲ್ಲರ ಹೃದಯಗಳೂ ತವಕಿಸುತ್ತಿದ್ದುವು. ಎಲ್ಲರ ಮುಖಗಳೂ ನಿಸ್ತೇಜವಾಗಿದ್ದುವು. ಶಕುನಿಯ ಅವಲಂಬನದಿಂದ ದುರ್ಯೋಧನ-ದುಃಶಾಸನ-ಕರ್ಣರು ಮಾತ್ರ ತಮ್ಮ ಜಯವನ್ನು ನಿರೀಕ್ಷಿಸಿ ಅರಳಿದ ಮುಖಾರವಿಂದವುಳ್ಳವರಾಗಿ ಆಟವನ್ನು ವೀಕ್ಷಿಸುತ್ತಾ ಕುಳಿತಿದ್ದರು. ಧೃತರಾಷ್ಟ್ರನಿಗೆ ಮುಂದೆ ತನ್ನ ಮಕ್ಕಳಿಗೆ ವಿಪತ್ತು ಸಂಭವಿಸಬಹುದೆಂಬುದು ತಿಳಿದಿದ್ದರೂ ತತ್ಕಾಲದಲ್ಲಿ ತನ್ನ ಮಕ್ಕಳೇ ವಿಜಯಿಗಳಾಗುವರೆಂದೂ, ಪಾಂಡವರು ವನವಾಸಕ್ಕೆ ಹೊರಡುವರೆಂದೂ ನಿಶ್ಚಯಿಸಿ, ಶಕುನಿಯ ವಿಜಯದ ಗರ್ಜನೆಯನ್ನೇ ನಿರೀಕ್ಷಿಸಿ ಕುಳಿತಿದ್ದನು.

ಗಡ-ಗಡನೆ ದಾಳಗಳು ಹತ್ತಾರು ಬಾರಿ ಎರಡು ಕಡೆಗಳಿಂದಲೂ ವಿಚಲಿತವಾದುವು. ಪಗಡೆಯ ಕಾಯಿಗಳೂ ಗರಗಳಿಗೆ ಅನುಸಾರವಾಗಿ ಒಂದಾದ ಮೇಲೊಂದು ಹಣ್ಣಾಗುತ್ತಿದ್ದುವು. ಆಟವು ಮುಗಿಯುತ್ತಾ ಬಂದಂತೆಲ್ಲಾ ಎಲ್ಲರ ಹೃದಯಗಳ ತಳಮಳವೂ ಹೆಚ್ಚಿತು. ಕಟ್ಟಕಡೆಗೆ ಶಕುನಿಯು ನಭೋಮಂಡಲವನ್ನೇ ಭೇದಿಸುವಂತೆ ಗರ್ಜನೆಮಾಡುತ್ತಾ **'ಜಿತಮ್!'** ಎಂದು ಕೂಗಿದನು.

ಯ೭೬ನೆಯ ಅಧ್ಯಾಯವು ಮುಗಿಯಿತು.

# ದುಃಶಾಸನನಿಂದ ಪಾಂಡವರ ಉಪಹಾಸ : ಭೀಮಾರ್ಜುನ-ನಕುಲ-ಸಹದೇವರಿಂದ ಶತ್ರುಗಳ ನಿರ್ಮೂಲನಕ್ಕಾಗಿ ಭೀಕರಪ್ರತಿಜ್ಞೆ

**ತತಃ ಪರಾಜಿತಾಃ ಪಾರ್ಥಾಃ ವನವಾಸಾಯ ದೀಕ್ಷಿತಾಃ ।**
**ಅಜಿನಾನ್ಯುತ್ತರೀಯಾಣಿ ಜಗೃಹುಶ್ಚ ಯಥಾಕ್ರಮಮ್ ॥೧॥**

ಜನಮೇಜಯಮಹಾರಾಜ! ಸೋತವರು ಹನ್ನೆರಡು ವರ್ಷಗಳ ಕಾಲ ವನವಾಸವನ್ನೂ ಒಂದು ವರ್ಷಕಾಲ ಅಜ್ಞಾತವಾಸವನ್ನೂ ಮಾಡಬೇಕೆಂಬುದು ಮೊದಲೇ ನಿಶ್ಚಿತವಾಗಿತ್ತಲ್ಲವೇ? ಅದರಂತೆಯೇ ಪರಾಜಿತರಾದ ಪಾಂಡವರು ಪೀತಾಂಬರಗಳನ್ನೂ, ಕನಕಾಂಗದ-ಕೇಯೂರಗಳನ್ನೂ, ಕಿರೀಟಗಳನ್ನೂ ತೆಗೆದಿಟ್ಟು ವನವಾಸಕ್ಕೆ ಉಚಿತವಾದ ಅಜಿನಗಳನ್ನು ಉತ್ತರೀಯಗಳನ್ನಾಗಿ ಧರಿಸಿ ಅರಣ್ಯಕ್ಕೆ ಹೊರಡಲು ಸಿದ್ಧರಾದರು.

ಪ್ರತಿಪಕ್ಷದವರು ಆಪತ್ತಿನಲ್ಲಿದ್ದಾಗ ಅವಹೇಳನಮಾಡುವುದು ಪರಮನೀಚರ ಸ್ವಭಾವ. ಶತ್ರುಗಳನ್ನು ನಿರ್ಮೂಲನಮಾಡುವ ಶಕ್ತಿಯಿದ್ದರೂ ರಾಜ್ಯ-ಕೋಶಾದಿಗಳನ್ನು ದ್ಯೂತದ ಮೂಲಕವಾಗಿ ಕಳೆದುಕೊಂಡು ಜಟಾ-ವಲ್ಕಲಧಾರಿಗಳಾಗಿ ಅರಣ್ಯವಾಸಕ್ಕೆ ಹೊರಟು ನಿಂತಿದ್ದ ಪಾಂಡವರನ್ನು ಕಂಡು ದುಃಶಾಸನನು ಹೃಷ್ಟನಾಗಿ, ಅವರನ್ನು ಮೂದಲಿಸುತ್ತಾ ಮಾತನಾಡತೊಡಗಿದನು :

"ಇಂದು ನಿಶ್ಚಯವಾಗಿಯೂ ಎಂತಹ ಸುದಿನ! ಮಹಾತ್ಮನಾದ ದುರ್ಯೋಧನನ ನಿರಂಕುಶಾಧಿಪತ್ಯವು ಇಂದೇ ಪ್ರಾರಂಭವಾಗುತ್ತದೆ. ಪರಾಜಿತರಾದ ಪಾಂಡುಪುತ್ರರು ಮಹಾವಿಪತ್ತಿಗೆ ಗುರಿಯಾಗಿದ್ದಾರೆ. ಸರ್ವಪ್ರಕಾರದಿಂದಲೂ ಇಂದು ನಮಗೆ ದೈವಾನುಕೂಲವು ದೊರೆತಿರುವುದು. ಇನ್ನು ಮುಂದೆ ನಾವು ನಮ್ಮ ಶತ್ರುಗಳಿಗಿಂತಲೂ ಗುಣದಲ್ಲಿ ಜ್ಯೇಷ್ಠರೆನಿಸಿಕೊಳ್ಳುತ್ತೇವೆ; ಶ್ರೇಷ್ಠರೆನಿಸಿಕೊಳ್ಳುತ್ತೇವೆ ; ತೇಜೋವಂತರೆನಿಸಿಕೊಳ್ಳುತ್ತೇವೆ."

ದುಃಶಾಸನನು ಮುಂದುವರಿದು ಹೇಳಿದನು : "ಈ ಪಾರ್ಥರು

ನಮ್ಮಿಂದ ದಾರುಣವಾದ ಮತ್ತು ಅತಿದೀರ್ಘಕಾಲದ ನರಕಕ್ಕೆ ತಳ್ಳಲ್ಪಟ್ಟಿರುತ್ತಾರೆ. ಇವರು ಸುಖದಿಂದಲೂ ಮತ್ತು ಸಾಮ್ರಾಜ್ಯದಿಂದಲೂ ಅನಂತ ಕಾಲದವರೆಗೆ ವಂಚಿತರಾಗುತ್ತಾರೆ. ನಿಶ್ಚಯವಾಗಿಯೂ ಇದೆಂತಹ ಸುದಿನ! ಮಯನಿರ್ಮಿತವಾದ ತಮ್ಮ ಸಭಾಮಂಟಪದಲ್ಲಿ ದುರ್ಯೋಧನನಿಗೆ ಸಂಘಟಿಸಿದ ದುರವಸ್ಥೆಯನ್ನು ನೋಡಿ ಅಟ್ಟಹಾಸದಿಂದ ನಕ್ಕ ಇವರಿಂದು ಪರಾಜಿತರಾಗಿ, ಧನಹೀನರಾಗಿ ಕಾಡಿಗೆ ಹೋಗಬೇಕಾಗಿದೆ. ಇವರಿಗೆ ತಕ್ಕ ಶಾಸ್ತಿಯೇ ಆಯಿತಲ್ಲವೇ? ಕನಕಾಂಗದ-ಕೇಯೂರಗಳನ್ನೂ, ಪೀತಾಂಬರಗಳನ್ನೂ, ಕವಚ-ಕುಂಡಲಗಳನ್ನೂ ಬದಿಗಿಟ್ಟು, ಶಕುನಿಯೊಡನೆ ಮಾಡಿಕೊಂಡ ನಿಬಂಧನೆಗೆ ಅನುಸಾರವಾಗಿ ವಲ್ಕಲಾಜಿನಗಳನ್ನು ಧರಿಸಿ ಅರಣ್ಯಕ್ಕೆ ಹೊರಡಲಿ.

ಯಾರು ತಮ್ಮ ಪರಾಕ್ರಮವನ್ನು ಹೆಚ್ಚುಮಾಡಿಕೊಳ್ಳುತ್ತಿದ್ದರೋ, ತಮಗೆ ಸಮಾನರಾದ ಪರಾಕ್ರಮವುಳ್ಳವರು ಈ ಭೂಮಿಯಲ್ಲಿಯೇ ಯಾರೂ ಇಲ್ಲವೆಂದು ಮದಾಂಧರಾಗಿದ್ದರೋ–ಅಂತಹವರಿಂದು ತಮ್ಮ ಅವಸ್ಥೆಯು–ಜಳ್ಳಾದ ಎಳ್ಳಿನಂತಾಗಿದೆಯೆಂಬುದನ್ನು–ಅರಿತುಕೊಳ್ಳಲಿ.

ಇವರು ಧರಿಸಿರುವ ಜಟಾ-ವಲ್ಕಲಗಳನ್ನು ನೋಡಿದರೆ ಇವರು ಸತ್ಪುರುಷರೆಂಬಂತೆಯೂ, ಪರಾಕ್ರಮಿಗಳೆಂಬಂತೆಯೂ ಮತ್ತು ಯಾವುದೋ ಒಂದು ಯಜ್ಞಮಾಡಲು ದೀಕ್ಷಾಬದ್ಧರಾಗಿರುವಂತೆಯೂ ಭಾಸವಾಗುತ್ತಿದೆ. ಆದರೆ ಇವರನ್ನು ಮೊದಲು ನೋಡಿದ್ದವರು–ಅನಂತರ ಇವರು ಧರಿಸಿರುವ ಅಜಿನಗಳ ಕಡೆಗೆ ಗಮನವಿತ್ತಲ್ಲಿ ಕಾಡಿನಲ್ಲಲೆಯುವ ಮೃಗಚರ್ಮಧಾರಿಗಳಾದ ಬೇಡರಂತೆಯೇ ಕಾಣುತ್ತಾರೆ."

ಪಾಂಡವರನ್ನು ಇಷ್ಟು ಕಟುವಾಗಿ ದುಃಶಾಸನನು ಹೀಯಾಳಿಸಿದ ನಂತರ ದ್ರೌಪದಿಯನ್ನು ಕುರಿತು ಹೇಳಿದನು :

"ನಿಶ್ಚಯವಾಗಿಯೂ ಇವಳನ್ನು ನೋಡಿ ನಾನು ಬಹಳ ವಿಷಾದಿಸಬೇಕಾಗಿದೆ. ಸೋಮಕವಂಶಪ್ರದೀಪನಾದ ದ್ರುಪದನು ತನ್ನ ಮಗಳಾದ ಪಾಂಚಾಲಿಯನ್ನು ಪಾಂಡವರಿಗೆ ವಿವಾಹಮಾಡಿಕೊಟ್ಟು ಅಕಾರ್ಯವನ್ನೇ ಮಾಡಿರುತ್ತಾನೆ. ಏಕೆಂದರೆ : ಈ ಪಾಂಡವರು ನಪುಂಸಕರು. ನಪುಂಸಕರಿಗೆ

ಕನ್ಯೆಯನ್ನು ಕೊಡಬಹುದೇ? (ದ್ರೌಪದಿಯ ಕಡೆ ತಿರುಗಿ) ಎಲೈ ದ್ರೌಪದಿ! ನಿರ್ಧನರಾದ ಚೀರ-ಕೃಷ್ಣಾಜಿನಧಾರಿಗಳಾದ, ರಾಜ್ಯ-ಕೋಶಗಳನ್ನು ಕಳೆದುಕೊಂಡಿರುವ ಈ ಪಾಂಡವರಿಂದ ಅರಣ್ಯವಾಸದಲ್ಲಿ ನೀನು ಯಾವ ವಿಧವಾದ ಸುಖ-ಸಂತೋಷಗಳನ್ನು ಪಡೆಯುವ ಸಾಧ್ಯತೆಯಿದೆ? ಆದುದರಿಂದ ಇಲ್ಲಿರುವ ಯಾರೊಬ್ಬರನ್ನಾದರೂ ಪತಿಯನ್ನಾಗಿ ವರಿಸಿ ಸುಖಿಯಾಗಿರು. ಇಲ್ಲಿರುವ ಕುರುಪ್ರಮುಖರನ್ನು ಸಾಮಾನ್ಯರೆಂದು ಭಾವಿಸಬೇಡ. ಇವರೆಲ್ಲರೂ ಸಹನೆಯುಳ್ಳವರಾಗಿಯೂ, ಜಿತೇಂದ್ರಿಯರಾಗಿಯೂ, ಸಕಲೈಶ್ವರ್ಯಸಂಪನ್ನರಾಗಿಯೂ ಇರುತ್ತಾರೆ. ಇವರಲ್ಲಿ ಯಾರನ್ನಾದರೂ ವಿವಾಹವಾದಲ್ಲಿ ನೀನು ಪಾಂಡವರ ಜೊತೆಯಲ್ಲಿದ್ದು ಅನಂತಕಾಲದವರೆಗೂ ಅನುಭವಿಸಬೇಕಾಗಿರುವ ದಾರುಣವಿಪತ್ತಿನಿಂದ ಪಾರಾಗಬಹುದಲ್ಲವೇ? ಈಗ ಪಾಂಡುವಿನ ಮಕ್ಕಳ ಸ್ಥಿತಿಯು ಹೇಗಿರುವುದೆಂದು ತಿಳಿದಿರುವುದೇ? ಪಾಂಚಾಲಿ! ಇವರೀಗ ಜಳ್ಳಾದ ಎಳ್ಳಿನಂತಿದ್ದಾರೆ. ಮನುಷ್ಯಾಕಾರವಾಗಿ ಚರ್ಮವನ್ನು ಹೊದ್ದಿಸಿ ಪ್ರದರ್ಶನದಲ್ಲಿಡುವ ಬೊಂಬೆಗಳಂತಿದ್ದಾರೆ ಅಥವಾ ಅಕ್ಕಿಯಿಂದ ಬೇರ್ಪಟ್ಟ ಬತ್ತದ ಹೊಟ್ಟಿನಂತಿದ್ದಾರೆ. ಈ ರೀತಿಯಲ್ಲಿ ಪತಿತರಾಗಿರುವ ಪಾಂಡವರ ಸೇವೆಯನ್ನು ಇನ್ನು ಮುಂದೆಯೂ ಮಾಡುವೆಯೇಕೆ? ನಿರ್ಭಾಗ್ಯರಾದ ಈ ಪಾಂಡವರ ಸೇವೆಮಾಡುವುದೂ ಮತ್ತು ಎಣ್ಣೆಯನ್ನು ತೆಗೆದ ಎಳ್ಳಿನ ಹಿಂಡಿಯನ್ನೇ ಪುನಃ ಶ್ರಮಪಟ್ಟು ಅರೆಯುವುದೂ–ಎರಡೂ ಒಂದೇ ಫಲವನ್ನು ಕೊಡುವುದಾಗಿದೆ.

(ಕತ್ತಿಯ ಅಲುಗಿಗಿಂತಲೂ ತೀಕ್ಷ್ಣವಾದ ದುಃಶಾಸನನ ಆ ಮಾತುಗಳು ನಪುಂಸಕನನ್ನಾದರೂ ಕೆರಳಿಸುವ ಕಟುಮಾತುಗಳಲ್ಲವೇ?) ಪಾಂಡವರ ಹೃದಯಗಳಲ್ಲಿ–ಅದರಲ್ಲಿಯೂ ವೀರಾಗ್ರಣಿಯಾದ ಭೀಮಸೇನನ ಹೃದಯದಲ್ಲಿ–ಆ ದುಷ್ಟನ ಕಟುಮಾತುಗಳನ್ನು ಕೇಳಿ ಉಂಟಾದ ಕೋಪವನ್ನು ವರ್ಣಿಸುವ ಸಾಧ್ಯತೆಯೇ ಇರಲಿಲ್ಲ. ಹಿಮಾಲಯದ ಸಿಂಹವು ಗುಳ್ಳೇನರಿಯ ಬಳಿಗೆ ಛಂಗನೆ ಹಾರಿಹೋಗುವಂತೆ ಭೀಮಸೇನನು ದುಃಶಾಸನನ ಸಮೀಪಕ್ಕೆ ನೆಗೆದು ಗರ್ಜಿಸಿ ಹೇಳಿದನು :

"ಪುರುಷಾಧಮನೇ! ಪಾಪಿಷ್ಠರು ಮತ್ತು ಕ್ರೂರಕರ್ಮಿಗಳು ಆಡುವ

ಮಾತುಗಳನ್ನೇ ನೀನೂ ಬೊಗಳುತ್ತಿರುವೆಯಲ್ಲವೇ? ನಿನಗಿರುವ ಪರಾಕ್ರಮವಾದರೂ ಏನು? ಶಕುನಿಯ ಕಪಟದಿಂದ ನೀವಿಂದು ಜಯಗಳಿಸಿರುವಿರಿ. ಇಷ್ಟರಿಂದಲೇ ನೀನು ಕೊಬ್ಬಿಹೋಗಿ ಈ ರಾಜರ ಮಧ್ಯದಲ್ಲಿ ಸ್ವೇಚ್ಛೆಯಿಂದ ಮನಬಂದಂತೆ ಮಾತನಾಡುತ್ತಿರುವೆ. ಕುರುಕುಲಕಳಂಕ! ನೀನು ಯಾವ ಸ್ಥಿತಿಯಲ್ಲಿ ಇಂದು ನಿನ್ನ ಅತಿತೀಕ್ಷ್ಣವಾದ ವಾಕ್ಯಗಳ ಪ್ರಯೋಗದಿಂದ ನಮ್ಮ ಹೃದಯಗಳಲ್ಲಿ ದಾರುಣವೇದನೆಯನ್ನುಂಟುಮಾಡಿರುವೆಯೋ ಈ ಮಾತುಗಳೆಲ್ಲವನ್ನೂ ಮುಂದೆ ನಡೆಯಲಿರುವ ಯುದ್ಧದಲ್ಲಿ ಒಂದೊಂದನ್ನಾಗಿ ನಿನ್ನ ಸ್ಮರಣೆಗೆ ತಂದು, ಬಾಣಪ್ರಯೋಗಮಾಡಿ ನಿನ್ನ ಶರೀರವನ್ನು ನಖ-ಶಿಖಾಂತವಾಗಿ ಬಾಣಗಳಿಂದ ಕ್ಷತಮಾಡುವಾಗ ಕೋಪದಿಂದಲೋ, ಲೋಭದಿಂದಲೋ–ನಿನ್ನನ್ನೇ ಅನುಸರಿಸಿ ಬರುವವರನ್ನೂ ಯಮಾಲಯಕ್ಕೆ ಕ್ಷಣಮಾತ್ರದಲ್ಲಿ ಕಳುಹಿಸಿಬಿಡುತ್ತೇನೆ."

(ಭೀಮನು ಎಷ್ಟೇ ಕೋಪಗೊಂಡಿದ್ದರೂ ಇಷ್ಟು ಮಾತ್ರ ಹೇಳಬಹುದಾಗಿತ್ತೇ ಹೊರತು ಕಾರ್ಯತಃ ಏನನ್ನೂ ಮಾಡುವಂತಿರಲಿಲ್ಲ. ಕಾರ್ಯತಃ ಮಾಡುವ ಅವಕಾಶವಿದ್ದಿದ್ದರೆ ಆ ಮಹಾಸಭೆಯಲ್ಲಿ ಯಾರೊಬ್ಬರೂ ಜೀವದಿಂದುಳಿಯುವ ಸಾಧ್ಯತೆಯೂ ಇರುತ್ತಿರಲಿಲ್ಲ. ದುರ್ಯೋಧನನ ಅನುಯಾಯಿಗಳೆಲ್ಲರೂ ಕ್ಷಣಮಾತ್ರದಲ್ಲಿ ಯಮಾಲಯವನ್ನು ಸೇರಿಬಿಡುತ್ತಿದ್ದರು.)

ಆದರೆ ಭೀಮನು ಧರ್ಮಪಾಶದಿಂದ ಬಂಧಿತನಾಗಿದ್ದನು. ಅಣ್ಣನ ಮಾತಿಲ್ಲದೇ ಯಾವುದೊಂದು ಕಾರ್ಯವನ್ನೂ ಮಾಡುವಂತಿರಲಿಲ್ಲ. ಅಣ್ಣನ ಆಶಯದಂತೆ ಅಥವಾ ಆಜ್ಞಾನುಸಾರವಾಗಿ ವಲ್ಕಲಾಜಿನಗಳನ್ನು ಧರಿಸಿ ಅರಣ್ಯಕ್ಕೆ ಹೊರಡಲು ಸಿದ್ಧನಾಗಿದ್ದನು. ಭೀಮನ ಅಸಹಾಯಕತೆಯನ್ನು ಪೂರ್ಣವಾಗಿ ಅರ್ಥಮಾಡಿಕೊಂಡಿದ್ದ ದುಃಶಾಸನನು ಭೀಮನಾಡಿದ ಮಾತುಗಳನ್ನು ಕೇಳಿ ಗಹ-ಗಹಿಸಿ ನಕ್ಕು 'ಪಶು, ಪಶು' ಎಂದು ಗಟ್ಟಿಯಾಗಿ ಹೇಳುತ್ತಾ ಲಜ್ಜಾಹೀನನಾಗಿ ಕುರುರಾಜರ ಮಧ್ಯದಲ್ಲಿ ಕುಣಿದಾಡಿದನು.

ಭೀಮಸೇನನ ಕಣ್ಣುಗಳು ಕೆಂಡದ ಕೆಂಪನ್ನು ಮೀರಿಸಿದ್ದುವು. ಹಲ್ಲುಗಳ ಕಟ-ಕಟಾಶಬ್ದಗಳು ಗುಡುಗಿನ ಶಬ್ದವನ್ನುಂಟುಮಾಡುತ್ತಿದ್ದುವು.

ನಖ-ಶಿಖಾಂತವಾಗಿದ್ದ ರೋಮಕೋಟಿಗಳು ನಿಮಿರಿನಿಂತಿದ್ದುವು. ಗಡುಸಾದ ಧ್ವನಿಯಲ್ಲಿ ಗರ್ಜಿಸುತ್ತಾ ಹೇಳಿದನು :

"ಪುರುಷಾಧಮನೇ! ಇಷ್ಟೊಂದು ತುಚ್ಛವಾದ ಮತ್ತು ಕಠಿನವಾದ ಮಾತುಗಳನ್ನಾಡಲು ನಿನಗೆ ಧೈರ್ಯಬಂತಲ್ಲವೇ? ನಿನ್ನಂತಹ ನೀಚಪುರುಷರಲ್ಲದೇ ಮತ್ತಾರು ತಾನೇ ರಾಜ್ಯ-ಕೋಶಗಳನ್ನು ಕುತ್ಸಿತಮಾರ್ಗದಿಂದ ಗೆದ್ದುಕೊಂಡು ಅಹಂಕಾರದ ಪ್ರದರ್ಶನವನ್ನು ಮಾಡುವರು? ನೀನಾಡಿರುವ ಈ ಮಾತುಗಳಿಗೆ ಮುಂದೆ ನಾನೇನು ಮಾಡುವೆನೆಂಬುದನ್ನು ಈಗಲೇ ತಿಳಿದಿರು.

**ಮೈವ ಸ್ಮ ಸುಕೃತಾಲ್ಲೋಕಾನ್ಗಚ್ಛೇತ್ಪಾರ್ಥೋ ವೃಕೋದರಃ ।**
**ಯದಿ ವಕ್ಷೋ ಹಿ ತೇ ಭಿತ್ತ್ವಾ ನ ಪಿಬೇಚ್ಛೋಣಿತಂ ರಣೇ ॥೨೧॥**

**ಧಾರ್ತರಾಷ್ಟ್ರಾನ್ರಣೇ ಹತ್ವಾ ಮಿಷತಾಂ ಸರ್ವಧನ್ವಿನಾಮ್ ।**
**ಶಮಂ ಗನ್ತಾಸ್ಮಿ ನಚಿರಾತ್ಸತ್ಯಮೇತದ್ಬ್ರವೀಮಿ ತೇ ॥೨೨॥**

ಕುಂತಿಯ ಮಗನಾದ ವೃಕೋದರನು ಯುದ್ಧದಲ್ಲಿ ನಿನ್ನ ವಕ್ಷಃಸ್ಥಳವನ್ನು ಬಗೆದು ರಕ್ತಪಾನಮಾಡದಿದ್ದರೆ–ಅವನಿಗೆ ಉತ್ತಮಲೋಕಗಳು ಲಭಿಸದೇ ಹೋಗಲಿ. ಸತ್ಯವಾಗಿ ಹೇಳುವೆನು ; ಕೇಳು, ದುಃಶಾಸನ! ಮುಂದೆ ನಡೆಯಲಿರುವ ಯುದ್ಧದಲ್ಲಿ ಸಮಸ್ತಕ್ಷತ್ರಿಯವೀರರೂ ನೋಡುತ್ತಿರುವಂತೆಯೇ ಧೃತರಾಷ್ಟ್ರನ ಮಕ್ಕಳೆಲ್ಲರನ್ನೂ ಸಂಹರಿಸಿ ನನಗಿಂದು ಉಂಟಾಗಿರುವ ಈ ಕೋಪವನ್ನು ಉಪಶಮನಮಾಡಿಕೊಳ್ಳುತ್ತೇನೆ."

ಧರ್ಮಜನ ಸಾಂಕೇತಿಕವಾದ ಆಜ್ಞೆಯಂತೆ ಪಾಂಡವರು ಅರಣ್ಯಕ್ಕೆ ಹೊರಡಲು ಸಿದ್ಧರಾಗಿ ನಿಂತರು.

ದೂರದೃಷ್ಟಿಯಿಲ್ಲದ ನೀಚರು ಎಂತಹ ಹೇಯಕಾರ್ಯವನ್ನು ಮಾಡಲು ಕೂಡ ಹಿಂಜರಿಯುವುದಿಲ್ಲ. ಇದುವರೆಗೂ ದುಃಶಾಸನನು ಆಡಿದ ಮಾತುಗಳಿಗೆ ಹಿಮ್ಮೇಳವನ್ನು ನೀಡಿ ಪ್ರೋತ್ಸಾಹಿಸಿ ನಗುತ್ತಿದ್ದ ದುರ್ಯೋಧನನು ಮೇಲೆದ್ದು ಭೀಮನು ನಡೆಯುವಂತೆಯೇ ಸ್ವಲ್ಪದೂರ ತಾನೂ ನಡೆದು ಅಣಕಿಸಿದನು. ಅವನ ಆ ಕಾರ್ಯವು ದುಃಶಾಸನ-ಕರ್ಣ-ಶಕುನಿಗಳಿಗೆ ಹೆಚ್ಚಿನ ಆನಂದವನ್ನುಂಟುಮಾಡಿತು. ಅವರು ಅವನ ಕಾರ್ಯವನ್ನು

ಶ್ಲಾಘಿಸುತ್ತಾ ಸಭಾಮಂದಿರವೇ ಹಾರಿಹೋಗುವ ರೀತಿಯಲ್ಲಿ ಕೇಕೆಹಾಕುತ್ತಾ ನಕ್ಕು ನಲಿದಾಡಿದರು.

ದುರ್ಯೋಧನನು ಮಾಡಿದ ಅಪಹಾಸ್ಯವನ್ನು ಕಂಡು, ಹೊರಟು ನಿಂತಿದ್ದ ಭೀಮಸೇನನು ಅರ್ಧಭಾಗ ಹಿಂದಕ್ಕೆ ತಿರುಗಿ ದುರ್ಯೋಧನನನ್ನು ಕುರಿತು ಹೇಳಿದನು :

"ಮಂದಬುದ್ಧಿಯವನೇ! ನನ್ನನ್ನು ಈ ರೀತಿಯಲ್ಲಿ ಅಣಕಿಸುವುದ ರಿಂದ ಕೃತಕೃತ್ಯನಾದೆನೆಂದು ನೀನು ಭಾವಿಸಬೇಡ. ನಿನ್ನೀ ಕೃತ್ಯಕ್ಕೆ ನಿನ್ನನ್ನೂ ನಿನ್ನ ಅನುಯಾಯಿಗಳನ್ನೂ ಅತ್ಯಲ್ಪಕಾಲದಲ್ಲಿಯೇ ಯಮಾಲಯಕ್ಕೆ ಕಳುಹಿಸು ವೆನು. ಆ ಸಮಯದಲ್ಲಿ ನಿನ್ನೀ ಕೃತ್ಯಗಳೆಲ್ಲವನ್ನೂ ನಿನ್ನ ಸ್ಮರಣೆಗೂ ತರುವೆನು."

ದುಃಶಾಸನನ ಮಾತುಗಳನ್ನೂ, ದುರ್ಯೋಧನನು ಅಣಕಿಸಿದುದನ್ನೂ ಸ್ಮರಿಸಿದಂತೆಲ್ಲಾ ಭೀಮನ ಕೋಪವು ಉಕ್ಕಿಬರುತ್ತಿದ್ದಿತು. ಆದರೂ ಕೂಡ ಸಹನೆಯನ್ನು ತಾಳಿ ಧರ್ಮಜನನ್ನೇ ಅನುಸರಿಸಿ ನಡೆದನು. ಸಭಾಮಂದಿರ ದಿಂದ ಹೊರಬೀಳುವ ವೇಳೆಯಲ್ಲಿ ಪುನಃ ಕೋಪವು ಉಕ್ಕಿ ಬಂದು ಸಭ್ಯರ ಕಡೆಗೆ ತಿರುಗಿ ಸಿಡಿಲಿನಂತೆ ಗರ್ಜನೆಮಾಡುತ್ತಾ ಹೇಳಿದನು :

"ಸಭ್ಯರೆಲ್ಲರೂ ನನ್ನ ಈ ಪ್ರತಿಜ್ಞೆಯನ್ನು ಪುನಃ ಕೇಳಿರಿ :

**ಅಹಂ ದುರ್ಯೋಧನಂ ಹನ್ತಾ ಕರ್ಣಂ ಹನ್ತಾ ಧನಂಜಯಃ ।**
**ಶಕುನಿಂ ಚಾಕ್ಷಕಿತವಂ ಸಹದೇವೋ ಹನಿಷ್ಯತಿ ॥೨೬॥**

**ಇದಂ ಚ ಭೂಯೋ ವಕ್ಷ್ಯಾಮಿ ಸಭಾಮಧ್ಯೇ ಬೃಹದ್ವಚಃ ।**
**ಸತ್ಯಂ ದೇವಾಃ ಕರಿಷ್ಯನ್ತಿ ಯನ್ನೋ ಯುದ್ಧಂ ಭವಿಷ್ಯತಿ ॥೨೭॥**

**ಸುಯೋಧನಮಿಮಂ ಪಾಪಂ ಹನ್ತಾಸ್ಮಿ ಗದಯಾ ಯುಧಿ ।**
**ಶಿರಃ ಪಾದೇನ ಚಾಸ್ಯಾಹಮಧಿಷ್ಠಾಸ್ಯಾಮಿ ಭೂತಲೇ ॥೨೮॥**

**ವಾಕ್ಯಶೂರಸ್ಯ ಚೈವಾಸ್ಯ ಪರುಷಸ್ಯ ದುರಾತ್ಮನಃ ।**
**ದುಃಶಾಸನಸ್ಯ ರುಧಿರಂ ಪಾತಾಸ್ಮಿ ಮೃಗರಾಡಿವ ॥೨೯॥**

ನಾನು ದುರ್ಯೋಧನನ ಹಂತಕನಾಗುತ್ತೇನೆ. ಅರ್ಜುನನು ಕರ್ಣ

ನನ್ನು ಸಂಹರಿಸುತ್ತಾನೆ. ಸಹದೇವನು ಜೂಜುಕೋರನಾದ ಶಕುನಿಯನ್ನು ಯಮಾಲಯಕ್ಕೆ ಕಳುಹಿಸುತ್ತಾನೆ. ಈ ಮಹಾವಾಕ್ಯವನ್ನು ಪುನಃ ಈ ಸಭಾಮಧ್ಯದಲ್ಲಿ ಹೇಳುವೆನು, ಕೇಳಿರಿ. ಕೌರವ-ಪಾಂಡವರಿಗೆ ಯುದ್ಧವೇ ಸಂಭವಿಸಿದಲ್ಲಿ ನನ್ನ ಮಾತುಗಳನ್ನು ಸತ್ಯಮಾಡಲು ದೇವತೆಗಳು ಅನುಗ್ರಹಿಸುವುದಂತೂ ನಿಶ್ಚಯ. ಪಾಪಿಯಾದ ಈ ದುರ್ಯೋಧನನನ್ನು ಗದಾಪ್ರಹಾರಮಾಡಿ ಕೊಲ್ಲುವೆನು. ಇವನನ್ನು ನೆಲಕ್ಕೆ ಕೆಡಹಿ, ಕಾಲಿನಿಂದ ಇವನ ತಲೆಯನ್ನು ಮೆಟ್ಟುವೆನು. ವಾಕ್ಕ್ರೂರನಾದ, ದುರಾತ್ಮನಾದ ಈ ದುಃಶಾಸನನನ್ನು ನೆಲಕ್ಕೆ ಕೆಡಹಿ ಎದೆಯನ್ನು ಸೀಳಿ–ಸಿಂಹವು ಮೃಗಗಳ ರಕ್ತವನ್ನು ಹೀರುವಂತೆ–ಇವನ ರಕ್ತವನ್ನು ಹೀರುವೆನು."

ಅಣ್ಣನ ಪ್ರತಿಜ್ಞೆಯನ್ನು ಪುಷ್ಟೀಕರಿಸುತ್ತಾ ಅರ್ಜುನನು ಹೇಳಿದನು :

"ಭೀಮಸೇನ! ಸತ್ಪುರುಷರ ಸಂಕಲ್ಪಗಳು ಬರೀ ಸಂಕಲ್ಪಗಳಾಗಿಯೇ ಉಳಿಯಲಾರವು. ಇಂದಿನಿಂದ ಹದಿಮೂರು ವರ್ಷಗಳು ಕಳೆದೊಡನೆಯೇ ಏನಾಗುವುದೆಂಬುದನ್ನು ಇವರೇ ಕಾಣುವರು."

"ಆಗುವುದೇನು, ಅರ್ಜುನ! ಭೂಮಾತೆಯು ದುರ್ಯೋಧನ-ದುಃಶಾಸನ-ಕರ್ಣ-ಶಕುನಿಗಳ ರಕ್ತವನ್ನು ಪಾನಮಾಡುವಳು."

ಅರ್ಜುನನು ಹೇಳುತ್ತಾನೆ :

**ಅಸೂಯಿತಾರಂ ದ್ರಷ್ಟಾರಂ ಪ್ರವಕ್ತಾರಂ ವಿಕತ್ಥನಮ್ ।**
**ಭೀಮಸೇನ ನಿಯೋಗಾತ್ತೇ ಹನ್ತಾಹಂ ಕರ್ಣಮಾಹವೇ ॥೩೨॥**

"ಭೀಮಸೇನ! ನಿನ್ನ ನಿರ್ದೇಶದಂತೆಯೇ ನಾನು ಯುದ್ಧದಲ್ಲಿ ದುಷ್ಟನಾದ, ದುರಭಿಮಾನಿಯಾದ, ಅಸೂಯಾಪರನಾದ, ಮರ್ಮವನ್ನು ಭೇದಿಸುವಂತಹ ಮಾತನಾಡುವ ಈ ಕರ್ಣನನ್ನು ಯಮಾಲಯಕ್ಕೆ ಕಳುಹಿಸುತ್ತೇನೆ.

ಭೀಮನಿಗೆ ಪ್ರಿಯವನ್ನುಂಟುಮಾಡುವ ಸಲುವಾಗಿ ಅರ್ಜುನನು ಹೀಗೆ ಪ್ರತಿಜ್ಞೆಮಾಡಿರುವನೆಂದು ಸರ್ವರೂ ತಿಳಿದಿರಲಿ! ಕರ್ಣನನ್ನೂ ಮತ್ತು ಅವನ ಅನುಯಾಯಿಗಳೆಲ್ಲರನ್ನೂ ತೀಕ್ಷ್ಣವಾದ ಬಾಣಪ್ರಯೋಗ

ಮಾಡಿ ಸಂಹರಿಸುತ್ತೇನೆ. ಬುದ್ಧಿಭ್ರಮಣೆಯಿಂದ ನನ್ನ ಮೇಲೆ ಯುದ್ಧ ಮಾಡಲು ಬರುವ ಇತರ ರಾಜರನ್ನೂ ಕ್ಷಣಮಾತ್ರದಲ್ಲಿ ಬಾಣಪ್ರಯೋಗ ಮಾಡಿ ಯಮಾಲಯಕ್ಕೆ ಕಳುಹಿಸುತ್ತೇನೆ.

ಚಲೇದ್ಧಿ ಹಿಮವಾನ್ಸ್ಥಾನಾನ್ನಿಷ್ಪ್ರಭಃ ಸ್ಯಾದ್ದಿವಾಕರಃ ।
ಶೈತ್ಯಂ ಸೋಮಾತ್ಪ್ರಣಶ್ಯೇತ ಮತ್ಸತ್ಯಂ ವಿಚಲೇದ್ಯದಿ ॥೩೫॥

ಹದಿಮೂರು ವರ್ಷಗಳು ಕಳೆದನಂತರ ಈ ದುರ್ಯೋಧನನು ನಮ್ಮನ್ನು ಯಥೋಚಿತವಾಗಿ ಸತ್ಕರಿಸಿ ನಮ್ಮ ರಾಜ್ಯವನ್ನು ನಮಗೆ ಹಿಂತಿರುಗಿಸದೇ ಇದ್ದು, ಆ ಸಮಯದಲ್ಲಿ ನಾನೀಗ ಮಾಡಿರುವ ಪ್ರತಿಜ್ಞೆಯು ಫಲಿತವಾಗದಿದ್ದರೆ–ಹಿಮವಂತನು ತಾನೀಗಿರುವ ಸ್ಥಳದಿಂದಲೇ ಚಲಿಸಿಬಿಡಬಹುದು! ದಿವಾಕರನಿಗೆ ಕಿರಣಗಳೇ ಲುಪ್ತವಾಗಿ ಬಿಡಬಹುದು! ಮತ್ತು ಚಂದ್ರನು ತನ್ನ ಶೈತ್ಯವನ್ನೇ ಪರಿತ್ಯಜಿಸಿಬಿಡಬಹುದು. (ಇವು ಹೇಗೆ ಅಸಂಭವವೋ ಹಾಗೆಯೇ ನನ್ನ ಪ್ರತಿಜ್ಞೆಯೂ ಅಸತ್ಯವಾಗಲಾರದು.)"

ಅರ್ಜುನನು ಹೀಗೆ ಹೇಳಿದನಂತರ ಮಹಾಪರಾಕ್ರಮಿಯಾದ ಸಹದೇವನು ತನ್ನ ದೀರ್ಘವಾದ ಬಾಹುವನ್ನು ಮೇಲೆತ್ತಿ ಹಾವಿನಂತೆ ದೀರ್ಘಶ್ವಾಸಗಳನ್ನು ಬಿಡುತ್ತಾ ಕೆಂಗಣ್ಣಿನಿಂದ ಕೂಡಿದವನಾಗಿ ಶಕುನಿಯನ್ನು ಕುರಿತು ಹೇಳಿದನು :

ಅಕ್ಷಾನ್ಯಾನ್ಮನ್ಯಸೇ ಮೂಢ ಗಾನ್ಧಾರಾಣಾಂ ಯಶೋಹರ ।
ನೈತೇಽಕ್ಷಾ ನಿಶಿತಾ ಬಾಣಾಸ್ತ್ವಯೈತೇ ಸಮರೇ ವೃತಾಃ ॥೩೯॥

ಯಥಾ ವೈ ಚೋಕ್ತವಾನ್ಭೀಮಸ್ತ್ವಾಮುದ್ದಿಶ್ಯ ಸಬಾನ್ಧವಮ್ ।
ಕರ್ತಾಹಂ ಕರ್ಮಣಸ್ತಸ್ಯ ಕುರು ಕಾರ್ಯಾಣಿ ಸರ್ವಶಃ ॥೪೦॥

ಹನ್ತಾಸ್ಮಿ ತರಸಾ ಯುದ್ಧೇ ತ್ವಾಮೇವೇಹ ಸಬಾನ್ಧವಮ್ ।
ಯದಿ ಸ್ಥಾಸ್ಯಸಿ ಸಂಗ್ರಾಮೇ ಕ್ಷತ್ರಧರ್ಮೇಣ ಸೌಬಲ ॥೪೧॥

"ಗಾಂಧಾರಕುಲಕಳಂಕನೇ! ಅಕ್ಷವಿದ್ಯೆಯನ್ನು ಕಲಿತು ಮದಾಂಧನಾಗಿರುವೆಯಲ್ಲವೇ? ಯಾವುದನ್ನು ದಾಳಗಳೆಂದು ತಿಳಿದಿರುವಿಯೋ–ಅವು

ಖಂಡಿತವಾಗಿಯೂ ದಾಳಗಳಲ್ಲ ; ಮುಂಬರುವ ಯುದ್ಧದಲ್ಲಿ ನಿನ್ನ ನಾಶಕ್ಕಾಗಿ ನೀನೇ ಆರಿಸಿಕೊಂಡಿರುವ ತೀಕ್ಷ್ಣವಾದ ಬಾಣಗಳೆಂದು ತಿಳಿ. ನಮ್ಮಣ್ಣನಾದ ಭೀಮನು ಹೇಳಿದಂತೆಯೇ ನಾನು ನಿನ್ನನ್ನೂ ನಿನ್ನ ಅನುಯಾಯಿಗಳನ್ನೂ ಸಂಹರಿಸುವೆನು. ಆದುದರಿಂದ ನೀನು ಮಾಡಬೇಕಾಗಿರುವ ಕಾರ್ಯವೇನಾದರೂ ಇದ್ದರೆ ಅದನ್ನು ಈ ಹದಿಮೂರು ವರ್ಷಗಳ ಅವಧಿಯಲ್ಲೇ ಮುಗಿಸಿಬಿಡು. ನೀನು ಹೇಡಿತನದಿಂದ ಯುದ್ಧವನ್ನು ಬಿಟ್ಟು ಓಡಿಹೋಗದೇ ಕ್ಷತ್ರಿಯರಿಗೆ ಉಚಿತವೆನಿಸುವ ರೀತಿಯಲ್ಲಿ ನನ್ನೆದುರಾಗಿ ನಿಂತು ಯುದ್ಧಮಾಡಿದ್ದೇ ಆದರೆ–ಸತ್ಯವಾಗಿಯೂ ನಿನ್ನನ್ನೂ ನಿನ್ನ ಅನುಬಂಧಿಗಳನ್ನೂ ಯಮಾಲಯಕ್ಕೆ ಕಳುಹಿಸುತ್ತೇನೆ.”

ಸಹದೇವನು ಪ್ರತಿಜ್ಞೆಮಾಡಿದನಂತರ ಮನುಷ್ಯರಲ್ಲಿ ಮೋಹನರೂಪಿಯಾಗಿದ್ದ ನಕುಲನು ಗಟ್ಟಿಯಾಗಿ ಹೇಳಿದನು :

**ಸುತೇಯಂ ಯಜ್ಞಸೇನಸ್ಯ ದ್ಯೂತೇಽಸ್ಮಿನ್ಧೃತರಾಷ್ಟ್ರಜೈಃ ।**
**ಯೈರ್ವಾಚಃ ಶ್ರಾವಿತಾ ರೂಕ್ಷಾಃ ಸ್ಥಿತೈರ್ದುರ್ಯೋಧನಪ್ರಿಯೇ ॥೪೩॥**

**ತಾನ್ಧಾರ್ತರಾಷ್ಟ್ರಾನ್ದುರ್ವೃತ್ತಾನ್ಮುಮೂರ್ಷೂನ್ಕಾಲಚೋದಿತಾನ್ ।**
**ಗಮಯಿಷ್ಯಾಮಿ ಭೂಯಿಷ್ಠಾನಹಂ ವೈವಸ್ವತಕ್ಷಯಮ್ ॥೪೪॥**

**ನಿದೇಶಾದ್ಧರ್ಮರಾಜಸ್ಯ ದ್ರೌಪದ್ಯಾಃ ಪದವೀಂ ಚರನ್ ।**
**ನಿರ್ಧಾರ್ತರಾಷ್ಟ್ರಾಂ ಪೃಥಿವೀಂ ಕರ್ತಾಸ್ಮಿ ನಚಿರಾದಿವ ॥೪೫॥**

“ಪಗಡೆಯಾಟದ ಕಾಲದಲ್ಲಿ ದುರ್ಯೋಧನನಿಗೆ ಪ್ರಿಯವನ್ನುಂಟುಮಾಡಲು ದ್ರುಪದಪುತ್ರಿಯನ್ನು ಅವಹೇಳನಮಾಡಿರುವ, ವಿಧಿವಿಲಾಸದಂತೆ ಮೃತ್ಯುಕಾಮಿಗಳಾಗಿರುವ ಈ ಧೃತರಾಷ್ಟ್ರನ ಬಹುಮಂದಿ ಮಕ್ಕಳನ್ನು ನಾನು ಯಮಾಲಯಕ್ಕೆ ಕಳುಹಿಸುತ್ತೇನೆ. ಯುಧಿಷ್ಠಿರನ ಆಜ್ಞಾನುಸಾರವಾಗಿ ದ್ರೌಪದಿಯ ಮಾರ್ಗವನ್ನೇ ಹಿಡಿದು ಹೋಗುತ್ತೇನೆ. (ಅರಣ್ಯದಿಂದ ಹಿಂದಿರುಗಿದನಂತರ) ನಿಶ್ಚಯವಾಗಿಯೂ ನಾನು ಈ ಭೂಮಂಡಲವನ್ನು ಧೃತರಾಷ್ಟ್ರನ ಮಕ್ಕಳಿಂದ ರಹಿತವನ್ನಾಗಿ ಮಾಡುತ್ತೇನೆ.”

ಜನಮೇಜಯ! ಈ ಪ್ರಕಾರ ನಿನ್ನ ತಾತಂದಿರು ಒಬ್ಬೊಬ್ಬರೂ ಒಂದೊಂದು ರೀತಿಯಲ್ಲಿ ಪ್ರತಿಜ್ಞೆಮಾಡಿ ಧೃತರಾಷ್ಟ್ರನ ಬಳಿಗೆ ಸಾರಿದರು.

೭೭ನೆಯ ಅಧ್ಯಾಯವು ಮುಗಿಯಿತು.

೭೮ನೆಯ ಅಧ್ಯಾಯ ಅನುದ್ಯೂತಪರ್ವ (ಮುಂದುವರಿದಿದೆ.)

## ಅರಣ್ಯಕ್ಕೆ ಹೊರಡಲು ಯುಧಿಷ್ಠಿರನು ಧೃತರಾಷ್ಟ್ರಾದಿಗಳ ಅನುಮತಿಯನ್ನು ಕೇಳಿದುದು : ವಿದುರನ ಮನೆಯಲ್ಲಿ ಇರಲು ಕುಂತಿಯ ಒಪ್ಪಿಗೆ : ಧರ್ಮಮಾರ್ಗದಲ್ಲಿಯೇ ಇರಲು ಪಾಂಡವರಿಗೆ ವಿದುರನ ಉಪದೇಶ

ಪಾರಿಕ್ಷಿತ! ಯುಧಿಷ್ಠಿರನು ತನ್ನ ಅನುಜರಿಂದೊಡಗೂಡಿ ಬದ್ಧಾಂಜಲಿಯಾಗಿ ಹೇಳಿದನು :

**ಆಮನ್ತ್ರಯಾಮಿ ಭರತಾಂಸ್ತಥಾ ವೃದ್ಧಂ ಪಿತಾಮಹಮ್ ।**
**ರಾಜಾನಂ ಸೋಮದತ್ತಂ ಚ ಮಹಾರಾಜಂ ಚ ಬಾಹ್ಲಿಕಮ್ ॥೧॥**

“ಭರತಕುಲದವರನ್ನೂ, ಭೀಷ್ಮನನ್ನೂ, ಸೋಮದತ್ತನನ್ನೂ, ಬಾಹ್ಲಿಕನನ್ನೂ, ದ್ರೋಣರನ್ನೂ, ಕೃಪರನ್ನೂ, ಇತರ ರಾಜರನ್ನೂ, ಅಶ್ವತ್ಥಾಮನನ್ನೂ, ವಿದುರನನ್ನೂ, ಧೃತರಾಷ್ಟ್ರನನ್ನೂ, ಧೃತರಾಷ್ಟ್ರನ ಎಲ್ಲ ಮಕ್ಕಳನ್ನೂ, ಯುಯುತ್ಸುವನ್ನೂ, ಸಂಜಯನನ್ನೂ ಮತ್ತು ಇತರ ಸಭ್ಯ ರನ್ನೂ–ನನಗೆ ಶುಭಾಶಯಗಳನ್ನು ಕೋರುವ ಸಲುವಾಗಿ ಆಮಂತ್ರಿಸುತ್ತೇನೆ. ತಮ್ಮೆಲ್ಲರ ಶುಭಾಶಯಗಳೊಡನೆ ವನವಾಸವನ್ನು ಮುಗಿಸಿ ಪುನಃ ಬಂದು ತಮ್ಮ ದರ್ಶನಮಾಡುತ್ತೇನೆ.”

ಲಜ್ಜಾನ್ವಿತರಾಗಿದ್ದ ಆ ಸಭ್ಯರಲ್ಲಿ ಯಾರೊಬ್ಬರೂ ಏನೊಂದನ್ನೂ ಯುಧಿಷ್ಠಿರನಿಗೆ ಹೇಳಲಿಲ್ಲ. ಆದರೆ ಪ್ರತಿಯೊಬ್ಬರೂ (ದುರ್ಯೋಧನಾದಿ ಗಳನ್ನುಳಿದು) ತಮ್ಮ ಮನಸ್ಸಿನಲ್ಲಿಯೇ ಪಾಂಡವರಿಗೆ ಒಳ್ಳೆಯದಾಗಲೆಂದು ಹರಸಿದರು.

ಪಾಂಡವರ ಹಿತಚಿಂತನೆಯಲ್ಲಿಯೇ ವಿಶೇಷವಾದ ಆಸಕ್ತಿವಹಿಸಿದ್ದ ವಿದುರನೊಬ್ಬನು ಮೇಲೆದ್ದು ಹೇಳಿದನು:

"ಧರ್ಮಜ! ಕುಂತಿಯು ಜನ್ಮತಃ ರಾಜಪುತ್ರಿಯು. ಇವಳು ಕಾಡಿಗೆ ನಿಮ್ಮೊಡನೆ ಬರುವುದು ಉಚಿತವೆನಿಸಲಾರದು. ಇವಳು ಸುಕುಮಾರಿಯು. ಮೇಲಾಗಿ ವೃದ್ಧೆಯಾಗಿರುವಳು. ಇದುವರೆಗೂ ಕಷ್ಟವೆಂದರೇನೆಂಬುದನ್ನೇ ಅರಿಯದವಳು. ಆದುದರಿಂದ ನಿಮ್ಮ ತಾಯಿಯಾದ ಕುಂತಿಯು ಮಾತ್ರ ನನ್ನಿಂದ ಪುರಸ್ಕೃತಳಾಗಿ ನನ್ನ ಮನೆಯಲ್ಲಿಯೇ ಇರಲಿ. ನಿಮಗೆ ಪ್ರಯಾಣ ಕಾಲದಲ್ಲಾಗಲೀ, ವನವಾಸದಲ್ಲಿಯೇ ಆಗಲೀ–ಯಾವ ವಿಧವಾದ ತೊಂದ ರೆಯೂ ಆಗದಿರಲಿ"

ಧರ್ಮಜನು ಹೇಳುತ್ತಾನೆ :

"ಮಹಾನುಭಾವನೇ! ನೀನು ಹೇಳಿದಂತೆಯೇ ಆಗಲಿ. ನೀನು ನಮ್ಮ ಚಿಕ್ಕಪ್ಪನಾಗಿರುವೆ. ಆದುದರಿಂದ ನಮಗೆ ತಂದೆಯ ಸಮಾನನು. ನಾವೆಲ್ಲರೂ ನಮ್ಮ ತಂದೆಗೆ ವಿಧೇಯರಾಗಿದ್ದಂತೆ ನಿನಗೂ ವಿಧೇಯರಾಗಿರುವೆವು. ನೀನು ನಮ್ಮ ಪರಮಗುರುವೂ ಆಗಿರುವೆ. ಆದುದರಿಂದ ನೀನು ಹೇಳುವುದೆಲ್ಲವನ್ನೂ ನಾವು ಅಕ್ಷರಶಃ ಪಾಲಿಸುವೆವು. ಮಹಾಬುದ್ಧಿಶಾಲಿಯೇ! ನಾವು ಮಾಡಬೇಕಾದ ಕಾರ್ಯವು ಬೇರೆ ಏನೇ ಇದ್ದರೂ ಆಜ್ಞಾಪಿಸು."

**ಯುಧಿಷ್ಠಿರ ವಿಜಾನೀಹಿ ಮಮೇದಂ ಭರತರ್ಷಭ ।**
**ನಾಧರ್ಮೇಣ ಜಿತಃ ಕಶ್ಚಿದ್ವ್ಯಥತೇ ವೈ ಪರಾಜಯೇ ॥೯॥**

"ಭರತಕುಲಾವತಂಸನೇ! ಯುಧಿಷ್ಠಿರ! ಅಧರ್ಮಮಾರ್ಗದಿಂದ ಪರಾಜಯಹೊಂದಿದವನು ತನ್ನ ಸೋಲಿಗೆ ವ್ಯಥೆಪಡುವ ಕಾರಣವಿಲ್ಲ ವೆಂಬುದು ನನ್ನ ಅಭಿಪ್ರಾಯವಾಗಿದೆ. ಧರ್ಮಜ! ನೀನು ಧರ್ಮಸೂಕ್ಷ್ಮವನ್ನು ತಿಳಿದವನಾಗಿರುವೆ. ಧನಂಜಯನು ಯುದ್ಧದಲ್ಲಿ ಪರಾಜಯವೆಂಬುದನ್ನೇ ಅರಿಯದವನು. ಭೀಮಸೇನನು ಶತ್ರುಗಳ ವಿಧ್ವಂಸಕನು. ನಕುಲನು ಬೊಕ್ಕಸವನ್ನು ತುಂಬುವ ಸಾಮರ್ಥ್ಯವುಳ್ಳವನಾಗಿದ್ದಾನೆ. ಸಹದೇವನು ರಾಜಶಾಸನವನ್ನು ಪೂರ್ಣವಾಗಿ ತಿಳಿದಿರುವನು. ನಿನ್ನ ಪುರೋಹಿತರಾದ ಧೌಮ್ಯರು ವೇದ-ವೇದಾಂಗಪಾರಂಗತರಾಗಿರುವರು. ದ್ರೌಪದಿಯು ಧರ್ಮಾರ್ಥಕುಶಲಳೂ, ಧರ್ಮಚಾರಿಣಿಯೂ ಆಗಿರುವಳು. ನೀವೆಲ್ಲರೂ

ಪರಸ್ಪರಪ್ರೀತಿಯಿಂದಿರುತ್ತೀರಿ. ಒಬ್ಬರ ಮುಖಾರವಿಂದವನ್ನು ಮತ್ತೊಬ್ಬರು ಕಂಡರೆ ಆನಂದಪಡುತ್ತೀರಿ. ಶತ್ರುಗಳು ನಿಮ್ಮನ್ನು ಬೇರ್ಪಡಿಸುವ ಸಾಧ್ಯತೆಯಿಲ್ಲ. ನೀವು ದುರಾಸೆಯವರಲ್ಲ ; ನಿತ್ಯಸಂತುಷ್ಟರಾಗಿರುವಿರಿ. ಹೀಗಿರುವ ನಿಮ್ಮನ್ನು ಕಂಡರೆ ಯಾರು ತಾನೇ ನಿಮ್ಮಂತಾಗಲು ಆಸೆಪಡರು? ನಿಮ್ಮಂತೆಯೇ ಆಗಬೇಕೆಂದು ಆಶಿಸದಿರುವರು? ನಿನ್ನ ಮನೋದಾರ್ಢ್ಯವು ಸಕಲಕಲ್ಯಾಣಗಳಿಗೂ ಸಾಧಕವಾಗುತ್ತದೆ. ಈ ನಿನ್ನ ಮನೋದಾರ್ಢ್ಯವನ್ನು ಸಹಿಸಿಕೊಳ್ಳಲು (ಎದುರಿಸಿ ಗೆಲ್ಲಲು) ಇಂದ್ರನಿಗೆ ಸಮಾನನಾದ ಶತ್ರುವಿಗೂ ಸಾಧ್ಯವಿಲ್ಲ. ನಿನಗೆ ಈ ಹಿಂದೆ ಮಹನೀಯರಿಂದಾದ ಉಪದೇಶಗಳನ್ನು ಜ್ಞಾಪಿಸುವೆನು, ಕೇಳು :

ಹಿಮವತ್ಪರ್ವತದಲ್ಲಿ ಮೇರುಸಾವರ್ಣಿಯಿಂದ ಉಪದಿಷ್ಟನಾದೆ. ವಾರಣಾವತದಲ್ಲಿದ್ದಾಗ ಕೃಷ್ಣದ್ವೈಪಾಯನರೇ ಬಂದು ಧರ್ಮೋಪದೇಶವನ್ನು ಮಾಡಿದರು. ಭೃಗುತುಂಗದಲ್ಲಿ ಭಾರ್ಗವರಾಮನು ಉಪದೇಶಿಸಿದನು. ದೃಷದ್ವತಿಯಲ್ಲಿ ಶಂಭುವಿನ ಅನುಗ್ರಹವನ್ನು ಪಡೆದಿರುವೆ. ಅಂಜನಪರ್ವತದಲ್ಲಿ ಅಸಿತಮಹರ್ಷಿಗಳಿಂದ ಉಪದೇಶವನ್ನು ಪಡೆದಿರುವೆ. ಕಲ್ಮಾಷೀತೀರವಾಸಿಗಳಾಗಿದ್ದ ಭೃಗುಮುನಿಗಳ ಶಿಷ್ಯತ್ವವನ್ನು ಸ್ವೀಕರಿಸಿ ಅನೇಕವಿಷಯಗಳನ್ನು ಗ್ರಹಿಸಿರುವೆ. ನಿನಗೆ ನಾರದರೂ ಮತ್ತು ಮಹಾನುಭಾವರಾದ ಧೌಮ್ಯರೂ ಮಾರ್ಗದರ್ಶಕರಾಗಿರುವರು. ಪರಲೋಕಸಾಧಕಗಳಾದ ಮಹರ್ಷಿಗಳ ಉಪದೇಶಗಳನ್ನು ಎಂದಿಗೂ ಮರೆಯಬೇಡ. ನೀನು ಬುದ್ಧಿಯಲ್ಲಿ ಇಲಾಪುತ್ರನಾದ ಪುರೂರವನನ್ನೂ ಮೀರಿಸಿರುವೆ. ಪರಾಕ್ರಮದಲ್ಲಿ ಎಲ್ಲ ರಾಜರನ್ನೂ ಮೀರಿಸಿರುವೆ. ಧರ್ಮದ ಸೇವೆಯಲ್ಲಿ ಋಷಿಗಳೂ ನಿನಗೆ ಸಮಾನರೆನಿಸಲಾರರು.

ಇಂದ್ರನಿಗೆ ಸಂಬಂಧಿಸಿದ ವಿಜಯವನ್ನು ಪಡೆಯುವುದರಲ್ಲಿಯೂ, ಯಮನಿಗೆ ಸಂಬಂಧಿಸಿದ ಕೋಪಸಮಯದಲ್ಲಿಯೂ, ಕುಬೇರನಿಗೆ ಸಂಬಂಧಿಸಿದ ದಾನದಲ್ಲಿಯೂ, ವರುಣನಿಗೆ ಸಂಬಂಧಿಸಿದ ಜಿತೇಂದ್ರಿಯತ್ವದಲ್ಲಿಯೂ ನಿಶ್ಚಿತವಾದ ಮನಸ್ಸುಳ್ಳವನಾಗು. ನೀರುಗಳಿಂದ ಇತರರಿಗೆ ಹಿತವಾಗುವ ರೀತಿಯಲ್ಲಿ ಆತ್ಮಪ್ರದಾನವನ್ನೂ, ಸೌಮ್ಯತ್ವವನ್ನೂ (ಶೀತಲತ್ವವನ್ನೂ, ) ಇತರರಿಗೆ ಜೀವದಾನಮಾಡುವುದನ್ನೂ ಪಡೆದುಕೋ.

(ನೀರು ತನ್ನನ್ನೇ ತಾನು ಕೊಟ್ಟುಕೊಂಡು ಇತರರ ಆಯಾಸವನ್ನು ಪರಿಹರಿಸುತ್ತದೆ. ನೀರು ಕುಡಿಯುವುದರಿಂದ ಆಯಾಸಪರಿಹಾರವಾಗುತ್ತದೆ. ಹಾಗೆಯೇ ತನ್ನನ್ನೇ ತಾನು ಇತರರಿಗೆ ಮುಡುಪಾಗಿಟ್ಟು ಲೋಕಹಿತವನ್ನು ಮಾಡಬೇಕು–ಎಂದರ್ಥ.)

ಭೂಮಿಯಿಂದ ಕ್ಷಮಾಗುಣವನ್ನೂ, ಸೂರ್ಯಮಂಡಲದಿಂದ ಸಮಗ್ರವಾದ ತೇಜಸ್ಸನ್ನೂ, ವಾಯುವಿನಿಂದ ಬಲವನ್ನೂ, ಪಂಚಭೂತಗಳಿಂದ ಆತ್ಮಸಂಪತ್ತನ್ನೂ ಪಡೆದುಕೋ.

**ಅಗದಂ ವೋಽಸ್ತು ಭದ್ರಂ ವೋ ದ್ರಷ್ಟಾಸ್ಮಿ ಪುನರಾಗತಾನ್ ।**
**ಆಪದ್ಧರ್ಮಾರ್ಥಕೃಚ್ಛ್ರೇಷು ಸರ್ವಕಾರ್ಯೇಷು ವಾ ಪುನಃ ॥೨೧॥**

**ಯಥಾವತ್ಪ್ರತಿಪದ್ಯೇಥಾಃ ಕಾಲೇ ಕಾಲೇ ಯುಧಿಷ್ಠಿರ ।**
**ಆಪೃಷ್ಟೋಽಸೀಹ ಕೌನ್ತೇಯ ಸ್ವಸ್ತಿ ಪ್ರಾಪ್ನುಹಿ ಭಾರತ ॥೨೨॥**

**ಕೃತಾರ್ಥಂ ಸ್ವಸ್ತಿಮನ್ತಂ ತ್ವಾಂ ದ್ರಕ್ಷ್ಯಾಮಃ ಪುನರಾಗತಮ್ ।**
**ನ ಹಿ ವೋ ವೃಜಿನಂ ಕಿಂಚಿದ್ವೇದ ಕಶ್ಚಿತ್ಪುರಾ ಕೃತಮ್ ॥೨೩॥**

ನೀವು ನಿಮ್ಮ ಅರಣ್ಯವಾಸದಲ್ಲಿ ನೀರೋಗದೃಢಕಾಯರಾಗಿರಿ. ನಿಮಗೆ ಮಂಗಳವಾಗಲಿ. ಅರಣ್ಯವಾಸವನ್ನು ಯಶಸ್ವಿಯಾಗಿ ಮುಗಿಸಿ ಬರುವ ನಿಮ್ಮನ್ನು ಮತ್ತೆ ನೋಡುವೆನು. ಯುಧಿಷ್ಠಿರ! ಆಪತ್ಕಾಲದಲ್ಲಿಯಾಗಲೀ, ಕಷ್ಟಕಾಲದಲ್ಲಿಯಾಗಲೀ–ಧರ್ಮದಿಂದಲೂ, ವಿವೇಚನೆಯಿಂದಲೂ ವರ್ತಿಸು. ನಿನಗೆ ಶ್ರೇಯಃ-ಪ್ರೇಯಗಳು ಲಭಿಸುವುವು. ನೀವು ಹಿಂದೆ ಕಿಂಚಿತ್ತಾದರೂ ಪಾಪಕಾರ್ಯವನ್ನು ಮಾಡಿರುವಿರೆಂದು ಯಾರೂ ಇದು ವರೆಗೂ ತಿಳಿದಿಲ್ಲ. ಆದುದರಿಂದ ನೀವು ಖಂಡಿತವಾಗಿಯೂ ಯಾವ ವಿಧವಾದ ಉಪದ್ರವಗಳೂ ಇಲ್ಲದೇ ಕ್ಷೇಮದಿಂದ ಅರಣ್ಯವಾಸವನ್ನು ಮುಗಿಸಿ ಹಿಂದಿರುಗಿಬಂದನಂತರ ಕೃತಾರ್ಥರಾದ ನಿಮ್ಮನ್ನು ನೋಡುವೆವು."

ಸತ್ಯವಿಕ್ರಮನಾದ ಧರ್ಮಜನು ಹಾಗೆಯೇ ಆಗಲೆಂದು ಹೇಳಿ ಭೀಷ್ಮ-ದ್ರೋಣರಿಗೆ ನಮಸ್ಕರಿಸಿ ಅರಣ್ಯಕ್ಕೆ ಹೊರಡಲು ಸಿದ್ಧನಾದನು.

೭೮ನೆಯ ಅಧ್ಯಾಯವು ಮುಗಿಯಿತು.

೭೯ನೆಯ ಅಧ್ಯಾಯ ಅನುದ್ಯೂತಪರ್ವ (ಮುಂದುವರಿದಿದೆ.)

## ದ್ರೌಪದಿಯು ಅರಣ್ಯಪ್ರಯಾಣಕ್ಕೆ ಕುಂತಿಯ ಅನುಮತಿಯನ್ನು ಪ್ರಾರ್ಥಿಸಿದುದು : ಕುಂತಿಯ ವಿಲಾಪ : ಪಾಂಡವರು ಕಾಡಿಗೆ ಹೋಗುತ್ತಿರುವುದನ್ನು ನೋಡಿ ನಾಗರಿಕರ ದುಃಖ

**ತಸ್ಮಿನ್ಸಮ್ಪ್ರಸ್ಥಿತೇ ಕೃಷ್ಣಾ ಪೃಥಾಂ ಪ್ರಾಪ್ಯ ಯಶಸ್ವಿನೀಮ್ ।**
**ಅಪೃಚ್ಛದ್ಭೃಶದುಃಖಾರ್ತಾ ಯಾಶ್ಚಾನ್ಯಾಸ್ತತ್ರ ಯೋಷಿತಃ ॥೧॥**

ಪಾರಿಕ್ಷಿತ! ದ್ರೌಪದಿಯೂ ಪಾಂಡವರೊಡನೆ ಅರಣ್ಯಕ್ಕೆ ಹೊರಡಲು ಸಿದ್ಧಳಾದಳು. ಹೊರಡುವ ಮೊದಲು ಅತ್ತೆಯಾದ ಕುಂತಿಯ ಅನುಮತಿಯನ್ನು ಕೇಳುವ ಸಲುವಾಗಿ ಅಂತಃಪುರಕ್ಕೆ ಪ್ರವೇಶಿಸಿದಳು. ಅವಳು ಅರಣ್ಯವಾಸಕ್ಕೆ ಹೊರಡುವಳೆಂಬುದನ್ನು ಕೇಳಿ ದುಃಖಿತರಾಗಿದ್ದ ರಾಣಿವಾಸದ ಎಲ್ಲ ಸ್ತ್ರೀಯರಿಗೂ ತಾನು ಅರಣ್ಯಕ್ಕೆ ಹೋಗಿಬರುವ ವಿಷಯವನ್ನು ತಿಳಿಸಿದಳು. ಹಿರಿಯರಿಗೆ ವಂದಿಸಿದಳು. ಸಮಾನರನ್ನು ತಬ್ಬಿಕೊಂಡಳು. ಕೆಲವು ಸ್ತ್ರೀಯರು ದ್ರೌಪದಿಯನ್ನು ಬಾಚಿತಬ್ಬಿ ಕಣ್ಣೀರಿಟ್ಟರು. ವೃದ್ಧನಾರಿಯರ ಕಾಲುಗಳನ್ನು ದ್ರೌಪದಿಯು ಕಣ್ಣೀರಿನಿಂದ ತೋಯಿಸಿದಳು. ಅದಕ್ಕೆ ಪ್ರತಿಯಾಗಿ ಅವರೆಲ್ಲರೂ ದ್ರೌಪದಿಯ ಮಸ್ತಕವನ್ನು ಧಾರಾವಾಹಿಯಾದ ಕಂಬನಿಯಿಂದ ಅಭಿಷೇಚಿಸಿದರು. ಅಂತಃಪುರದ ಪ್ರತಿಯೊಂದು ದಿಕ್ಕಿನಲ್ಲಿಯೂ ಬಿಕ್ಕಿ-ಬಿಕ್ಕಿ ಅಳುವ ಶಬ್ದವೇ ಕೇಳಿಸುತ್ತಿದ್ದಿತು. ಕುಂತಿಗಂತೂ ಬಾಯಿಂದ ಮಾತೇ ಹೊರಡದಂತಾಯಿತು. ತನ್ನೆರಡು ಕಾಲುಗಳನ್ನೂ ಕಣ್ಣೀರಿನಿಂದ ತೊಳೆಯುತ್ತಿದ್ದ ದ್ರೌಪದಿಯನ್ನು ಮೇಲೆತ್ತಿ ಸಮಾಧಾನಪಡಿಸುತ್ತಾ ಹೇಳಿದಳು:

“ಮಗಳೇ! ಈ ಮಹಾವಿಪತ್ತು ಒದಗಿರುವುದಕ್ಕಾಗಿ ಶೋಕಿಸಬೇಡ. ನೀನು ಸ್ತ್ರೀಧರ್ಮವೇನೆಂಬುದನ್ನು ಪೂರ್ಣವಾಗಿ ತಿಳಿದಿರುವೆ ಮತ್ತು ಅದರಂತೆಯೇ ಆಚರಿಸುತ್ತಲೂ ಇರುವೆ. ಸುಶೀಲೆಯೂ, ಸುಚರಿತೆಯೂ ಆಗಿರುವೆ. ಆದುದರಿಂದ ನಾನು ನಿನಗೆ ಸ್ತ್ರೀಧರ್ಮವನ್ನಾಗಲೀ ಅಥವಾ ನೀನು ನಿನ್ನ ಗಂಡಂದಿರ ವಿಷಯದಲ್ಲಿ ಹೇಗಿರಬೇಕೆಂಬ ವಿಷಯವನ್ನಾಗಲೀ–ಹೇಳು

ವುದು ಉಚಿತವೆನಿಸದು. ನೀನು ಸಾಧ್ವೀ, ಗುಣಸಂಪನ್ನೆ. ನಿನ್ನೀ ಗುಣಗಳಿಂದ ನೀನು ಹುಟ್ಟಿದ ವಂಶಕ್ಕೂ ಮತ್ತು ಸೇರಿದ ವಂಶಕ್ಕೂ ಅಪಾರವಾದ ಕೀರ್ತಿಯನ್ನು ತಂದಿರುವೆ. ಒಂದು ವಿಧವಾಗಿ ಯೋಚಿಸಿದರೆ ನಿನ್ನನ್ನು ಈ ದುರ್ಗತಿಗೆ ತಂದ ಕೌರವರು ಅದೃಷ್ಟಶಾಲಿಗಳೆಂದೇ ಹೇಳಬೇಕಾಗಿದೆ. ಏಕೆಂದರೆ: ನಿನ್ನಂತಹ ಸಾಧ್ವಿಯ ಕೋಪಾಗ್ನಿಗೆ ಅವರು ಆಹುತಿಯಾಗಲಿಲ್ಲ. ನನ್ನ ಪ್ರಾರ್ಥನಾಫಲದಿಂದಾಗಿ ನಿನ್ನ ದಾರಿಯು ಸುಗಮವಾಗಲಿ. ವಿಧಿಯ ನಿಯಮದಂತೆ ನಡೆಯುವ ಕಾರ್ಯಗಳ ವಿಷಯವಾಗಿ ಸತ್ಕುಲಪ್ರಸೂತೆಯ ರಾದ ಸ್ತ್ರೀಯರು ಎಂದಿಗೂ ಶೋಕಿಸುವುದಿಲ್ಲ. ನೀನು ಅನುಸರಿಸುವ ಶ್ರೇಷ್ಠವಾದ ಧರ್ಮಾಚರಣೆಯೇ ನಿನ್ನನ್ನು ರಕ್ಷಿಸುತ್ತದೆ. ಅದರಿಂದ ಸಂರಕ್ಷಿಸಲ್ಪಟ್ಟ ನೀನು ಬಹುಶೀಘ್ರವಾಗಿ ಶ್ರೇಯಸ್ಸನ್ನು ಪಡೆಯುವೆ. ಸ್ತ್ರೀಧರ್ಮದ ವಿಷಯವಾಗಿ ನಿನಗೆ ಹೇಳುವ ಅವಶ್ಯಕತೆಯಿಲ್ಲದಿದ್ದರೂ ಒಂದು ವಿಷಯವನ್ನು ಮಾತ್ರ ನಾನು ನನ್ನ ಚಾಪಲ್ಯದ ಕಾರಣದಿಂದ ತಿಳಿಯ ಹೇಳುವೆನು. ನನ್ನ ಮಗನಾದ ಸಹದೇವನ ವಿಷಯದಲ್ಲಿ ನಿನ್ನ ಗಮನವು ವಿಶೇಷವಾಗಿರಲಿ. ಈ ಮಹಾವಿಪತ್ತಿಗೆ ಸಿಕ್ಕಿರುವ ಅವನ ಹೃದಯವು ವ್ಯಸನದಲ್ಲಿ ಮುಳುಗಿಹೋಗದಂತೆ ನೋಡಿಕೋ ; ಪಾಂಚಾಲಿ!"

ಕುಂತಿಯ ಮಾತಿಗೆ ಹಾಗೆಯೇ ಆಗಲೆಂದು ಹೇಳಿದ ರಾಜಕುಮಾರಿ ಯಾದ ದ್ರೌಪದಿಯು ಕಂಬನಿಯಿಂದ ತೋಯ್ದವಳಾಗಿ, ಏಕವಸ್ತ್ರವನ್ನು ಧರಿಸಿ, ಕೆದರಿದ ಕೇಶರಾಶಿಯೊಡನೆ ಅಂತಃಪುರವನ್ನು ಬಿಟ್ಟು ಹೊರಟಳು. ಅಳುತ್ತಾ, 'ಅಯ್ಯೋ' ಎನ್ನುತ್ತಾ ಬಹುಸಂಕಟದಿಂದ ಹೊರಹೊರಟ ದ್ರೌಪದಿಯನ್ನು ಕುಂತಿಯೂ ಅನುಸರಿಸಿ ನಡೆದಳು. ಸ್ವಲ್ಪದೂರ ಹೋಗುವುದರೊಳಗಾಗಿ ಅಲ್ಲಿ ವನವಾಸಕ್ಕೆ ಹೊರಟುನಿಂತಿದ್ದ ತನ್ನ ಐವರು ಮಕ್ಕಳನ್ನು ಕುಂತಿಯು ಕಂಡಳು. ಅವರೆಲ್ಲರೂ ಕನಕಾಂಗದ-ಕೇಯೂರ-ಪೀತಾಂಬರಗಳಿಂದ ವಿಹೀನರಾಗಿ, ಕೃಷ್ಣಾಜಿನಗಳನ್ನು ಧರಿಸಿ, ನಾಚಿಕೆಯಿಂದ ತಲೆತಗ್ಗಿಸಿಕೊಂಡು ನಿಂತಿದ್ದರು. ಅವರ ಸುತ್ತಲೂ ಶತ್ರು ಗಳು ಕೇಕೆಹಾಕಿಕೊಂಡು ನಗುತ್ತಲೂ, ಮಿತ್ರರು ಕಂಬನಿಗರೆಯುತ್ತಲೂ ಇದ್ದುದನ್ನು ಕುಂತಿಯು ಕಂಡಳು. ಮಹಾಮಾತೆಯಾದ ಕುಂತಿಗೆ ದುಃಖವನ್ನು

ತಡೆಯಲಾಗಲಿಲ್ಲ. ಬಿಕ್ಕಿ-ಬಿಕ್ಕಿ ಅಳುತ್ತಾ ಮುಂದೆ ನಡೆದುಹೋಗಿ ಮಕ್ಕಳನ್ನು ಒಬ್ಬೊಬ್ಬರನ್ನಾಗಿ ಬಿಗಿದಪ್ಪಿಕೊಂಡು ಅವರ ತಲೆಗಳನ್ನು ತನ್ನ ಕಣ್ಣೀರಿನಿಂದ ತೋಯಿಸಿದಳು. ತನ್ನ ಅಳುವನ್ನು ಸ್ವಲ್ಪ ತಡೆದುಕೊಂಡವಳಾಗಿ ಗದ್ಗದ ಧ್ವನಿಯಿಂದ ಹೇಳತೊಡಗಿದಳು :

"ಮಕ್ಕಳಿರಾ! ನೀವೆಲ್ಲರೂ ಸದ್ಧರ್ಮದಲ್ಲಿರುತ್ತೀರಿ. ಸುಚರಿತರಾಗಿದ್ದೀರಿ. ನಿಮ್ಮ ನಿಮ್ಮ ವೃತ್ತಿಯಲ್ಲಿ ನಿರತರಾಗಿದ್ದೀರಿ. ನೀವು ಕ್ಷುದ್ರರಲ್ಲ. ವಿಶಾಲಮನಸ್ಸುಳ್ಳವರು. ದೃಢಭಕ್ತರು. ಹಿರಿಯರ ಶುಶ್ರೂಷೆಯಲ್ಲಿ ಆಸಕ್ತಿಯುಳ್ಳವರು. ದೇವಯಜ್ಞದಲ್ಲಿ ನಿರತರಾಗಿರುವವರು. ಇಂತಹ ಸಕಲಸದ್ಗುಣಪರಿಪೂರ್ಣರಾದ ನಿಮಗೆ ಇಂತಹ ವಿಪತ್ತು ಹೇಗೆ ಒದಗಿತು? ಯಾವ ಅಪರಾಧದ ಕಾರಣದಿಂದಾಗಿ (ಯಾರ ಕೆಟ್ಟ ಹಾರೈಕೆಯಿಂದಾಗಿ) ನೀವಿಂದು ಈ ದಾರುಣವಾದ ಕಷ್ಟಪರಂಪರೆಗಳನ್ನು ಅನುಭವಿಸಬೇಕಾಗಿದೆಯೋ ತಿಳಿಯದು. (ಕ್ಷಣಕಾಲ ಯೋಚಿಸಿ) ಇಲ್ಲ, ಧರ್ಮಜ! ಈಗ ನಿಮಗೊದಗಿರುವ ಕಷ್ಟವು ನಿಶ್ಚಯವಾಗಿಯೂ ನನ್ನ ದುರದೃಷ್ಟದ ಫಲವೇ ಆಗಿರುವುದು. ನೀವು ಧರ್ಮಸಂಪನ್ನರು ; ಸದ್ಗುಣಸಂಪನ್ನರು ; ಸತ್ಯಸಂಧರು; ಸುಶೀಲರು ; ಅಮಿತಪರಾಕ್ರಮವುಳ್ಳವರು ; ವೀರ್ಯ-ಸತ್ತ್ವ-ಬಲೋತ್ಸಾಹಗಳಿಂದ ಕೂಡಿರುವವರು. ಯಾವುದರಲ್ಲಿಯೂ ನ್ಯೂನತೆಯಿಲ್ಲದವರಾಗಿದ್ದೀರಿ. ನಿಮಗೆ ಇಂತಹ ವಿಪತ್ತು ಒದಗಿರುವುದು ನನ್ನ ದುರ್ವಿಧಿಯಿಂದಲ್ಲದೇ ಬೇರಾವ ಕಾರಣದಿಂದಲೂ ಅಲ್ಲ.

ಸಕಲೈಶ್ವರ್ಯಗಳನ್ನೂ, ಸುಖೋಪಭೋಗಗಳನ್ನೂ ಪರಿತ್ಯಜಿಸಿದವರಾಗಿ ನೀವು ದುರ್ಗಮವಾದ ಕಾನನದಲ್ಲಿ ನಿರ್ಗತಿಕರಾಗಿ ದಿನಗಳನ್ನು ಹೇಗೆ ಕಳೆಯುವಿರಿ? ಅಯ್ಯೋ ವಿಧಿಯೇ! ರಾಜಕುಮಾರರಾದ ನಿಮಗೆ ಅರಣ್ಯವಾಸವು ವಿಧಿನಿಯಮಿತವೆಂಬುದು ಈ ಮೊದಲೇ ನನಗೆ ತಿಳಿದಿದ್ದರೆ–ನಾನು ನಿಶ್ಚಯವಾಗಿಯೂ ಪಾಂಡುರಾಜನ ಮರಣಾನಂತರದಲ್ಲಿ ನಿಮ್ಮನ್ನು ಶತಶೃಂಗಪರ್ವತದಿಂದ ಹಸ್ತಿನಾಪುರಕ್ಕೆ ಕರೆತರುತ್ತಲೇ ಇರಲಿಲ್ಲ.

ನಿಮ್ಮ ತಂದೆಯು ನಿಶ್ಚಯವಾಗಿಯೂ ಅದೃಷ್ಟವಂತನು. ಅವನ ತಪಸ್ಸಿಗೆ ಸರಿಯಾದ ಪ್ರತಿಫಲವನ್ನೇ ಪಡೆದನು. ಮಕ್ಕಳಿಗೆ ಒದಗುವ ಇಂತಹ

ಆಪತ್ತನ್ನು ನೋಡದೆಯೇ ಸ್ವರ್ಗಾರೋಹಣಮಾಡಲು ಅಭಿಲಾಷಿಸಿ ಹೊರಟುಹೋದನು. ಪುತ್ರರಿಗೊದಗಿದ ಈ ಸಂಕಟವನ್ನು ನೋಡಿ ರಾಜನು ದುಃಖಿಸುವಂತಾಗಲಿಲ್ಲ. ಪಾಂಡುವಿನಂತೆ ಮಾದ್ರಿಯೂ ಅತೀಂದ್ರಿಯಜ್ಞಾನ ವುಳ್ಳ ಅದೃಷ್ಟವಂತಳೇ ಸರಿ. ಅವಳೂ ಸ್ವೇಚ್ಛೆಯಿಂದ ಸಹಗಮನಮಾಡಿ ಉತ್ತಮವಾದ ಸದ್ಗತಿಯನ್ನು ಪಡೆದಳು. ಅನುರಾಗದಲ್ಲಿಯೂ, ಬುದ್ಧಿ ಯಲ್ಲಿಯೂ, ನಡವಳಿಕೆಯಲ್ಲಿಯೂ ಅವಳಿಂದ ನಾನು ವಂಚಿಸಲ್ಪಟ್ಟೆನು. (ಅವಳು ನನ್ನನ್ನು ಮೀರಿಸಿದಳು.) ಆದರಿಂದಲೇ ತನ್ನೆರಡು ಮಕ್ಕಳನ್ನೂ ನನ್ನ ಮಡಿಲಿನಲ್ಲಿ ಹಾಕಿ ನಿಶ್ಚಿಂತಳಾಗಿ ಪರಂಧಾಮವನ್ನೈದು ಧನ್ಯಳಾದಳು.

ನಿಮ್ಮೆಲ್ಲರನ್ನೂ ನೋಡಿಕೊಂಡು ಜೀವಿಸಿರಬೇಕೆಂದು ಇಚ್ಛಿಸಿದ ನನಗೆ ಧಿಕ್ಕಾರವಿರಲಿ! ನಾನು ಜೀವಂತಳಾಗಿರುವುದರಿಂದ ತಾನೇ ಈ ಕಷ್ಟಗಳೆಲ್ಲ ವನ್ನೂ ನೋಡಬೇಕಾಗಿರುವುದು?

ಮಕ್ಕಳಿರಾ! ನೀವೆಲ್ಲರೂ ನನಗೆ ಪ್ರಾಣಸಮರು. ನಾನು ಬಹಳ ಕಷ್ಟಪಟ್ಟು ನಿಮ್ಮನ್ನು ಪಡೆದಿರುವೆನು. ಆದುದರಿಂದ ನಿಮ್ಮನ್ನು ಖಂಡಿತ ವಾಗಿಯೂ ಬಿಟ್ಟಿರಲಾರೆನು. ನಾನು ನಿಮ್ಮೊಡನೆಯೇ ಬಂದುಬಿಡುವೆನು.

ಮಗಳೇ, ದ್ರೌಪದಿ! ನನ್ನನ್ನು ಈ ದುಃಖಸಾಗರದಲ್ಲಿ ಮುಳುಗಿಸಿ ಹೋಗಲು ನಿನಗಾದರೂ ಮನವೊಪ್ಪುವುದೇ?

**ಅನ್ತವತ್ಯಸುಧರ್ಮೋಽಸ್ಮಿನ್ಧಾತ್ರಾ ಕಿಂ ನು ಪ್ರಮಾದತಃ ।**
**ಮಮಾನ್ತೋ ನೈವ ವಿಹಿತಸ್ತೇನಾಯುರ್ನ ಜಹಾತಿ ಮಾಮ್ ॥**

ಪ್ರಾಣಿಗಳಿಗೆ ಮರಣವೆಂಬುದು ನಿಶ್ಚಿತವಾಗಿದೆ. ನನಗೇಕೆ ಆ ಮರಣ ವಿನ್ನೂ ಸನ್ನಿಹಿತವಾಗಿಲ್ಲ? ಬ್ರಹ್ಮನೇನಾದರೂ ಪ್ರಮಾದವಶದಿಂದ ನನ್ನ ಅಂತ್ಯವನ್ನು ನಿಶ್ಚಯಪಡಿಸಲಿಲ್ಲವೋ ಏನೋ! ಆದುದರಿಂದಲೇ ನನ್ನ ಜೀವವು ಈ ಶರೀರವನ್ನು ಬಿಟ್ಟುಹೋಗಲು ಸಾಧ್ಯವಾಗಿಲ್ಲ."

ಕುಂತಿಯ ಕಣ್ಣುಗಳಿಂದ ಕಂಬನಿಯು ಧಾರಾಕಾರವಾಗಿ ಪ್ರವಹಿಸು ತ್ತಿದ್ದಿತು. ಬಾರಿ-ಬಾರಿಗೂ ಕಣ್ಣೀರೊರೆಸಿಕೊಂಡು ಅವಳು ವಿಲಾಪಮಾಡು ತ್ತಿದ್ದಳು. ಮಹಾಮಹಿಮನಾದ ಶ್ರೀಕೃಷ್ಣನನ್ನು ಸ್ಮರಿಸಿ ಹೇಳಿದಳು :

ಹಾ ಕೃಷ್ಣ ದ್ವಾರಕಾವಾಸಿನ್ಕ್ವಾಸಿ ಸಂಕರ್ಷಣಾನುಜ ।
ಕಸ್ಮಾನ್ನ ತ್ರಾಯಸೇ ದುಃಖಾನ್ಮಾಂ ಚೇಮಾಂಶ್ಚ ನರೋತ್ತಮಾನ್ ॥

ಅನಾದಿನಿಧನಂ ಯೇ ತ್ವಾಮನುಧ್ಯಾಯನ್ತಿ ವೈ ನರಾಃ ।
ತಾಂಸ್ತ್ವಂ ಪಾಸೀತ್ಯಯಂ ವಾದಃ ಸ ಗತೋ ವ್ಯರ್ಥತಾಂ ಕಥಮ್ ॥

ಇಮೇ ಸದ್ಧರ್ಮಮಾಹಾತ್ಮ್ಯಯಶೋವೀರ್ಯಾನುವರ್ತಿನಃ ।
ನಾರ್ಹನ್ತಿ ವ್ಯಸನಂ ಭೋಕ್ತುಂ ನನ್ವೇಷಾಂ ಕ್ರಿಯತಾಂ ದಯಾ ॥

"ಕೃಷ್ಣ! ದ್ವಾರಕಾನಾಥ! ಸಂಕರ್ಷಣಾನುಜ! ನೀನು ಎಲ್ಲಿರುವೆ? ಭಕ್ತಪರಾಧೀನನೇ! ನನ್ನನ್ನೂ ನಿನ್ನ ಪ್ರಾಣರೂಪರಾದ ನರಶ್ರೇಷ್ಠರಾದ ಈ ನನ್ನ ಮಕ್ಕಳನ್ನೂ ವಿಪತ್ತಿನಿಂದ ನೀನೇಕೆ ಕಾಪಾಡುತ್ತಿಲ್ಲ? ಆದ್ಯಂತಗಳಿಲ್ಲದ ನಿನ್ನನ್ನು ಯಾರು ಸ್ಮರಿಸುವರೋ–ಅವರ ಕಷ್ಟಗಳೆಲ್ಲವನ್ನೂ ಪರಿಹರಿಸುವೆಯೆಂದು ಜ್ಞಾನಿಗಳು ಹೇಳುವರು. ಆ ಮಹಾಮಹಿಮರ ಮಾತೇಕಿಂದು ವ್ಯರ್ಥವಾಯಿತು?

ಈ ನನ್ನ ಮಕ್ಕಳಾದರೋ ಧರ್ಮಸಂಪನ್ನರು ; ಯಶೋವಂತರು ; ವೀರ್ಯವಂತರು ; ಸತ್ಯನಿಷ್ಠರು. ಇಂತಹವರು ಇಂತಹ ಕಷ್ಟಗಳನ್ನು ಅನುಭವಿಸಲು ಖಂಡಿತವಾಗಿಯೂ ಅರ್ಹರಲ್ಲ. ಮಾಧವ! ಇವರ ಮೇಲೆ ಕರುಣೆಯಿಡು.

ಅಯ್ಯೋ! ನೀತಿಸಂಪನ್ನರಾದ, ಅರ್ಥಶಾಸ್ತ್ರವಿಶಾರದರಾದ, ಕುಲಕ್ಕೆ ಹಿರಿಯರಾದ ಭೀಷ್ಮ-ದ್ರೋಣ-ಕೃಪಾದಿಗಳು ಉಪಸ್ಥಿತರಾಗಿದ್ದಾಗಲೂ ಇಂತಹ ವಿಪತ್ತು ಹೇಗೆ ಒದಗಿತು?

ಪಾಂಡುರಾಜ! ಪತಿದೇವ! ನೀನೆಲ್ಲಿರುವೆ? ಶತ್ರುಗಳೊಡನೆ ಪಗಡೆ ಯಾಟದಲ್ಲಿ ಸೋತು ಕಾಡಿಗೆ ಹೋಗಲಿರುವ ಈ ಮಕ್ಕಳನ್ನು ಏಕೆ ಉಪೇಕ್ಷಿಸುತ್ತಿರುವೆ? ಮನಸ್ಸಿನಲ್ಲಿಯೇ ಕೊರಗುತ್ತಿರುವೆಯಲ್ಲವೇ?"

ಈ ರೀತಿಯಲ್ಲಿ ಕುಂತಿಯು ರೋದನಮಾಡುತ್ತಾ ನತಶಿರನಾಗಿ ನಿಂತಿದ್ದ ಸಹದೇವನನ್ನು ಬಾಚಿ ತಬ್ಬಿಕೊಂಡು ಹೇಳಿದಳು :

"ಮಗು ಸಹದೇವ! ನೀನು ಮಾತ್ರ ಖಂಡಿತವಾಗಿಯೂ ಕಾಡಿಗೆ

ಹೋಗಬೇಡ. ನಿನ್ನನ್ನಗಲಿ ನಾನು ಕ್ಷಣಮಾತ್ರವೂ ಇರಲಾರೆನು. ನೀನು ನನಗೆ ನನ್ನ ಪ್ರಾಣಗಳಿಗಿಂತಲೂ ಹೆಚ್ಚಿನವನು. ಕುಪುತ್ರನಂತೆ ನನ್ನನ್ನು ಬಿಟ್ಟು ಹೋಗಬೇಡ. ನನ್ನ ಮೇಲೆ ಕರುಣೆಯಿಡು, ಮಗು! ಧರ್ಮಕ್ಕೆ ಕಟ್ಟುಬಿದ್ದು ಕಾಡಿಗೆ ಹೋಗಲೇಬೇಕಾಗಿದೆಯೆನ್ನುವುದಾದರೆ–ಉಳಿದ ನಾಲ್ವರೇ ಕಾಡಿಗೆ ಹೋಗಲಿ. ನೀನೊಬ್ಬನು ಕಾಡಿಗೆ ಹೋಗದೇ ಇರುವುದರಿಂದ ಉಂಟಾಗ ಬಹುದಾದ ಧರ್ಮದ ನ್ಯೂನಾತಿರೇಕಗಳನ್ನು ತಾಯಿಯಾದ ನನ್ನ ಸೇವೆಯನ್ನು ಮಾಡುವುದರಿಂದ ಸರಿಪಡಿಸಬಹುದು"–ಎಂದು ಪರಿಪರಿಯಾಗಿ ಪ್ರಲಪಿಸಿದಳು.

ಪಾಂಡವರು ತಮ್ಮ ತಾಯಿಯಾದ ಕುಂತಿಯನ್ನು ಸಮಯೋಚಿತವಾದ ಮಾತುಗಳಿಂದ ಸಮಾಧಾನಪಡಿಸಿ, ಅರಣ್ಯದ ಮಾರ್ಗವನ್ನು ಹಿಡಿದು ಹೊರಟರು. ಪಾಂಡವರಿಗೊದಗಿದ ವಿಪತ್ತಿನಿಂದ ವಿದುರನೂ ಬಹಳ ದುಃಖಿತನಾದನು. ಆದರೂ ತಾಳ್ಮೆಯನ್ನು ತಂದುಕೊಂಡು ಕುಂತಿಗೆ ಯುಕ್ತಿ ಯುಕ್ತವಾದ ಹಿತವಚನಗಳನ್ನು ಹೇಳುತ್ತಾ ತನ್ನ ಮನೆಗೆ ಕರೆದುಕೊಂಡು ಹೋದನು. ದ್ರೌಪದಿಯನ್ನು ಸಭೆಗೆ ಸೆಳೆದುಕೊಂಡು ಹೋದುದನ್ನೂ, ಅನಂತರದಲ್ಲಿ ಪಾಂಡವರ ಅರಣ್ಯವಾಸದ ವಾರ್ತೆಯನ್ನೂ ಕೇಳಿದ ಧೃತರಾಷ್ಟ್ರನ ಅಂತಃಪುರದ ದಾಸಿಯರೆಲ್ಲರೂ ಕೌರವರನ್ನು ನಿಂದಿಸುತ್ತಾ ರೋದನಮಾಡತೊಡಗಿದರು. ಕೌರವರಾಜಕುಮಾರರ ಪತ್ನಿಯರೂ ದುಃಖಾನ್ವಿತೆಯರಾಗಿ ಬಹಳ ಹೊತ್ತಿನವರೆಗೂ ತಮ್ಮ ಮುಖಾರವಿಂದಗಳನ್ನು ತಮ್ಮೆರಡು ಕೈಗಳಿಂದಲೂ ಮುಚ್ಚಿಕೊಂಡು ಮೌನವಾಗಿ ಕುಳಿತಿದ್ದರು. ಪಾಂಡವರು ಅರಣ್ಯಕ್ಕೆ ತೆರಳಿದ್ದರಿಂದ ಧೃತರಾಷ್ಟ್ರನಿಗೂ ನೆಮ್ಮದಿಯುಂಟಾಗ ಲಿಲ್ಲ. ಮತ್ತಷ್ಟು ಕಳವಳಕ್ಕೆ ಕಾರಣವಾಯಿತು. 'ಆರಿಸಿದ್ದ ಬೆಂಕಿಯನ್ನು ಪುನಃ ಹೊತ್ತಿಸಿದೆನಲ್ಲಾ!'–ಎಂದು ಚಿಂತಿಸಲು ಪ್ರಾರಂಭಿಸಿದನು. ತನ್ನ ಮಕ್ಕಳಿಗೆ ಅಪಾಯವು ಅನಿವಾರ್ಯವೆಂದೂ ನಿಶ್ಚಯಿಸಿದನು. ರಾಜನಿಗೆ ಮನಶ್ಶಾಂತಿ ಯೆಂಬುದೇ ಇಲ್ಲವಾಯಿತು. ಹಿಂದೆ ನಡೆದುದೆಲ್ಲವೂ ಮನಸ್ಸೆಂಬ ರಂಗಮಂಟಪದ ಮೇಲೆ ಒಂದರ ಹಿಂದೆ ಮತ್ತೊಂದು ಕಾಣತೊಡಗಿದುವು. ಮನಸ್ಸು ಡೋಲಾಯಮಾನವಾಯಿತು.

ಅಂತಹ ಸಮಯದಲ್ಲಿ ಧೃತರಾಷ್ಟ್ರನಿಗೆ ವಿದುರನು ಬೇಕಾದವನಾಗು

ತ್ತಿದ್ದನು. ವಿದುರನು ತಾನಾಗಿಯೇ ಬಂದು ವಿವೇಕ ಹೇಳಿದಾಗ ರಾಜನಿಗದು ಬೇಡವಾಗುತ್ತಿದ್ದಿತು.

ಧೃತರಾಷ್ಟ್ರರಾಜನು ಒಡನೆಯೇ ವಿದುರನಿಗೆ ಹೇಳಿಕಳುಹಿಸಿದನು. ಸ್ವಾಮಿನಿಷ್ಠನಾದ ವಿದುರನೂ ಒಡನೆಯೇ ಧೃತರಾಷ್ಟ್ರನ ಬಳಿಗೆ ಬಂದು ಕರೆಯಿಸಿದ ಕಾರಣವನ್ನು ಕೇಳಿದನು.

ಧೃತರಾಷ್ಟ್ರನು ಉದ್ವೇಗಪೂರಿತವಾದ ವಾಣಿಯಿಂದ ವಿದುರನನ್ನು ಕೇಳಿದನು."

೭೯ನೆಯ ಅಧ್ಯಾಯವು ಮುಗಿಯಿತು.

೮೦ನೆಯ ಅಧ್ಯಾಯ ಅನುದ್ಯೂತಪರ್ವ (ಮುಂದುವರಿದಿದೆ.)

## ವನವಾಸಕ್ಕೆ ಹೋಗುತ್ತಿರುವ ಸಮಯದಲ್ಲಿ ಪಾಂಡವರ ಹಾವ-ಭಾವಗಳನ್ನೂ, ಪ್ರಜೆಗಳ ಶೋಕಾತುರಗಳನ್ನೂ ವಿದುರನು ಧೃತರಾಷ್ಟ್ರನಿಗೆ ಹೇಳಿದುದು : ಶರಣಾಗತರಾದ ಕೌರವರಿಗೆ ದ್ರೋಣರ ಆಶ್ವಾಸನೆ

ವೈಶಂಪಾಯನರು ಹೇಳುತ್ತಾರೆ :

**ತಮಾಗತಮಥೋ ರಾಜಾ ವಿದುರಂ ದೀರ್ಘದರ್ಶಿನಮ್ ।**
**ಸಾಶಙ್ಕ ಇವ ಪಪ್ರಚ್ಛ ಧೃತರಾಷ್ಟ್ರೋಽಮ್ಬಿಕಾಸುತಃ ॥೧॥**

"ಜನಮೇಜಯ! ದೀರ್ಘದರ್ಶಿಯಾದ ವಿದುರನು ತನ್ನ ಬಳಿಗೆ ಬಂದೊಡನೆಯೇ ಅಂಬಿಕಾಸುತನಾದ ಧೃತರಾಷ್ಟ್ರನು ಶಂಕಿತನಾಗಿರುವನೋ ಎಂಬಂತೆ ಬಹಳ ತವಕದಿಂದ ಕೂಡಿದವನಾಗಿ ವಿದುರನನ್ನು ಪ್ರಶ್ನಿಸಿದನು:

"ವಿದುರ! ಯುಧಿಷ್ಠಿರನು ಹಸ್ತಿನಾಪುರವನ್ನು ಬಿಟ್ಟು ಹೇಗೆ ಹೋದನು? ಭೀಮಾರ್ಜುನ-ನಕುಲ-ಸಹದೇವರು ಹೇಗೆ ಹೋದರು? ಧೌಮ್ಯರು ಹೇಗೆ ನಡೆದರು? ದ್ರೌಪದಿಯು ಹೇಗೆ ಹೋದಳು?–ಎಲ್ಲವನ್ನೂ ವಿವರವಾಗಿ ತಿಳಿಸು."

ವಿದುರನು ಹೇಳುತ್ತಾನೆ :

"ಮಹಾರಾಜ! ಯುಧಿಷ್ಠಿರನು ತನ್ನ ಉತ್ತರೀಯದಿಂದ ಮುಖವನ್ನು

ಮುಚ್ಚಿಕೊಂಡು ಹೋದನು. ಭೀಮನು ತನ್ನ ಎರಡು ಬಾಹುಗಳನ್ನೂ ಪದೇ-ಪದೇ ನೋಡಿಕೊಳ್ಳುತ್ತಾ ಹೋದನು. ಅರ್ಜುನನು ದಾರಿಯುದ್ದಕ್ಕೂ ಮರಳನ್ನು ಎರಚುತ್ತಾ ಹೋದನು. ಸಹದೇವನು ಮುಖಕ್ಕೆ ಮಣ್ಣನ್ನು ಬಳಿದುಕೊಂಡಿದ್ದನು. ಸರ್ವಾಂಗಸುಂದರನಾದ ನಕುಲನ ಅಂಗಾಂಗಗಳೆಲ್ಲವೂ ಧೂಳಿನಿಂದ ಮಸುಕಾಗಿ ಹೋಗಿದ್ದುವು. ದ್ರೌಪದಿಯು ಕೆದರಿದ ಕೇಶರಾಶಿಯಿಂದಲೇ ಮುಖವನ್ನು ಮುಚ್ಚಿಕೊಂಡು ರೋದನಮಾಡುತ್ತಾ ಧರ್ಮರಾಜನ ಹಿಂದೆ ನಡೆದುಹೋದಳು. ಧೌಮ್ಯರು ಕೈಯಲ್ಲಿ ದರ್ಭೆಯನ್ನು ಹಿಡಿದು ಸಾಮವೇದದ ರೌದ್ರ ಮತ್ತು ಯಾಮ್ಯಸಾಮಗಳನ್ನು ಹೇಳುತ್ತಾ ಹೋಗುತ್ತಿದ್ದರು."

"ವಿದುರ! ಒಬ್ಬೊಬ್ಬರು ಒಂದೊಂದು ರೀತಿಯಲ್ಲಿ ಹೋಗುತ್ತಿದ್ದುದರ ರಹಸ್ಯವೇನೆಂಬುದನ್ನು ತಿಳಿಸು. ನನ್ನ ಮನಸ್ಸು ಬಹುವಾಗಿ ತವಕಿಸುತ್ತಿದೆ."

ವಿದುರನು ಹೇಳುತ್ತಾನೆ :

**ನಿಕೃತಸ್ಯಾಪಿ ತೇ ಪುತ್ರೈರ್ಹೃತೇ ರಾಜ್ಯೇ ಧನೇಷು ಚ ।**
**ನ ಧರ್ಮಾಚ್ಚಲತೇ ಬುದ್ಧಿರ್ಧರ್ಮರಾಜಸ್ಯ ಧೀಮತಃ ॥೧೦॥**

**ಯೋऽಸೌ ರಾಜಾ ಘೃಣೀ ನಿತ್ಯಂ ಧಾರ್ತರಾಷ್ಟ್ರೇಷು ಭಾರತ ।**
**ನಿಕೃತ್ಯಾ ಭ್ರಂಶಿತಃ ಕ್ರೋಧಾನ್ನೋನ್ಮೀಲಯತಿ ಲೋಚನೇ ॥೧೧॥**

**ನಾಹಂ ಜನಂ ನಿರ್ದಹೇಯಂ ದೃಷ್ಟ್ವಾ ಘೋರೇಣ ಚಕ್ಷುಷಾ ।**
**ಸ ಪಿಧಾಯ ಮುಖಂ ರಾಜಾ ತಸ್ಮಾದ್ಗಚ್ಛತಿ ಪಾಣ್ಡವಃ ॥೧೨॥**

"ಭಾರತನೇ! ನಿನ್ನ ಮಕ್ಕಳಿಂದ ಮೋಸಗೊಳಿಸಲ್ಪಟ್ಟರೂ ಧೀಮಂತನಾದ, ಧರ್ಮರಾಜನಾದ ಯುಧಿಷ್ಠಿರನ ಮನಸ್ಸು ಧರ್ಮದಿಂದ ಚ್ಯುತವಾಗಲಿಲ್ಲ. ಅವನು ನಿನ್ನ ಮಕ್ಕಳ ವಿಷಯದಲ್ಲಿ ಹೆಚ್ಚು ಕರುಣೆಯುಳ್ಳವನಾಗಿಯೇ ಇರುವನು. ನಿನ್ನ ಮಕ್ಕಳು ಮಾಡಿದ ಮೋಸದ ಕಾರಣದಿಂದಾಗಿ ಯುಧಿಷ್ಠಿರನು ರಾಜ್ಯ-ಕೋಶಾದಿಗಳನ್ನು ಕಳೆದುಕೊಂಡು ಕುಪಿತನಾಗಿದ್ದರೂ ಕೋಪದಿಂದ ಕೆರಳಿರುವ ತನ್ನ ಕಣ್ಣುಗಳಿಂದ ಕೌರವರನ್ನು ನೋಡಿಬಿಟ್ಟರೆ– ನಿಮಿಷಮಾತ್ರದಲ್ಲಿ ಅವರು ಭಸ್ಮವಾಗಿಬಿಡಬಹುದು. ಹಾಗಾಗಲು ಅವಕಾಶ

ವನ್ನೀಯಬಾರದು. ತಾನು ಇವರನ್ನು ಸುಡಬಾರದು–ಎಂದು ಮನಸ್ಸಿನಲ್ಲಿ ಚಿಂತಿಸಿ ತನ್ನ ಮುಖವನ್ನು ಮುಚ್ಚಿಕೊಂಡು ಅರಣ್ಯಕ್ಕೆ ಪ್ರಯಾಣಮಾಡಿದನು.

**ಯಥಾ ಚ ಭೀಮೋ ವ್ರಜತಿ ತನ್ಮೇ ನಿಗದತಃ ಶೃಣು ।**
**ಬಾಹ್ವೋರ್ಬಲೇ ನಾಸ್ತಿ ಸಮೋ ಮಮೇತಿ ಭರತರ್ಷಭ ॥೧೩॥**

**ಬಾಹೂ ವಿಶಾಲೌ ಕೃತ್ವಾಸೌ ತೇನ ಭೀಮೋಽಪಿ ಗಚ್ಛತಿ ।**
**ಬಾಹೂ ವಿದರ್ಶಯನ್ರಾಜನ್ಬಾಹುದ್ರವಿಣದರ್ಪಿತಃ ।**

**ಚಿಕೀರ್ಷನ್ಕರ್ಮ ಶತ್ರುಭ್ಯೋ ಬಾಹುದ್ರವ್ಯಾನುರೂಪತಃ ॥೧೪॥**

ಭೀಮನು ವಿಶಾಲವಾದ ತೋಳುಗಳನ್ನು ಪದೇ-ಪದೇ ನೋಡಿ ಕೊಂಡು ಹೋಗುತ್ತಿದ್ದುದಕ್ಕೆ ಕಾರಣವನ್ನು ಹೇಳುವೆನು ; ಕೇಳು : 'ಭುಜ ಬಲಪರಾಕ್ರಮಗಳಲ್ಲಿ ನನಗೆ ಸಮಾನರಾದವರು ಯಾರೂ ಇರುವುದಿಲ್ಲ'– ಎಂದು ಮನಸ್ಸಿನಲ್ಲಿಯೇ ನೆನೆದು, ಭುಜಬಲವೆಂಬ ಧನದಿಂದ ಗರ್ವಿತನಾದ ಭೀಮನು ತನ್ನೆರಡು ತೋಳುಗಳನ್ನೂ ಬಾರಿ-ಬಾರಿಗೂ ಮುಂದಕ್ಕೆ ಚಾಚುತ್ತಾ ನೋಡಿಕೊಳ್ಳುವನು. ಶತ್ರುಗಳಿಗೆ ತನ್ನ ಬಾಹುಗಳು ಮುಂದೇನು ಮಾಡಬಲ್ಲವೆಂಬುದನ್ನು ಸೂಚಿಸುವುದೇ ಅವನ ಇಚ್ಛೆಯಾಗಿದ್ದಿತು.

**ಪ್ರದಿಶಞ್ಶರಸಮ್ಪಾತಾನ್ಕುನ್ತೀಪುತ್ರೋಽರ್ಜುನಸ್ತದಾ ।**
**ಸಿಕತಾ ವಪನ್ಸವ್ಯಸಾಚೀ ರಾಜಾನಮನುಗಚ್ಛತಿ ॥೧೫॥**

**ಅಸಕ್ತಾಃ ಸಿಕತಾಸ್ತಸ್ಯ ಯಥಾ ಸಮ್ಪ್ರತಿ ಭಾರತ ।**
**ಅಸಕ್ತಂ ಶರವರ್ಷಾಣಿ ತಥಾ ಮೋಕ್ಷ್ಯತಿ ಶತ್ರುಷು ॥೧೬॥**

ಅರ್ಜುನನು ಮರಳಿನ ಕಣಗಳನ್ನು ಸುತ್ತಲೂ ಎರಚಿಕೊಂಡು ಯುಧಿಷ್ಠಿರನ ಹಿಂದೆ ನಡೆದುಹೋದನೆಂದು ಹೇಳಿದೆನಲ್ಲವೇ? ಮುಂದೆ ಯುದ್ಧವು ಸಂಭವಿಸಿದಾಗ ಮರಳನ್ನು ಎರಚುವಷ್ಟೇ ಸುಲಭವಾಗಿ– ಮರಳಿನ ಕಣಗಳಷ್ಟೇ ಬಾಣಗಳನ್ನು ಪ್ರಯೋಗಿಸುವನೆಂಬುದೇ ಇದರ ಅಂತರಾರ್ಥ.

**ನ ಮೇ ಕಶ್ಚಿದ್ವಿಜಾನೀಯಾನ್ಮುಖಮದ್ಯೇತಿ ಭಾರತ ।**
**ಮುಖಮಾಲಿಪ್ಯ ತೇನಾಸೌ ಸಹದೇವೋಽಪಿ ಗಚ್ಛತಿ ॥೧೭॥**

ಸಹದೇವನು ತನ್ನನ್ನು ಯಾರೂ ಈ ಆಪತ್ಕಾಲದಲ್ಲಿ ಗುರುತಿಸಕೂಡ ದೆಂದೆಣಿಸಿ ಮುಖಕ್ಕೆ ಧೂಳುಬಳಿದುಕೊಂಡು ಯುಧಿಷ್ಠಿರನನ್ನು ಅನುಸರಿಸಿ ಅರಣ್ಯಕ್ಕೆ ಪ್ರಯಾಣಮಾಡಿದನು.

**ನಾಹಂ ಮನಾಂಸ್ಯಾದದೇಯಂ ಮಾರ್ಗೇ ಸ್ತ್ರೀಣಾಮಿತಿ ಪ್ರಭೋ ।**
**ಪಾಂಸೂಪಲಿಪ್ತಸರ್ವಾಙ್ಗೋ ನಕುಲಸ್ತೇನ ಗಚ್ಛತಿ ॥೧೮॥**

ಸರ್ವಾಂಗಸುಂದರನಾದ ನಕುಲನು ತನ್ನನ್ನು ನೋಡಿದ ಸ್ತ್ರೀಯರು ಆಕರ್ಷಿಸಲ್ಪಡುವರೆಂಬ ಭಯದಿಂದ ಆಪಾದಮಸ್ತಕವಾಗಿ ಧೂಳಿನಿಂದ ತನ್ನ ಸುಂದರಶರೀರವನ್ನು ಮಸುಕಾಗಿ ಮಾಡಿಕೊಂಡು ಧರ್ಮಜನ ಹಿಂದೆ ತೆರಳಿದನು.

**ಏಕವಸ್ತ್ರಾ ಪ್ರರುದತೀ ಮುಕ್ತಕೇಶೀ ರಜಸ್ವಲಾ ।**
**ಶೋಣಿತೇನಾಕ್ತವಸನಾ ದ್ರೌಪದೀ ವಾಕ್ಯಮಬ್ರವೀತ್ ॥೧೯॥**

**ಯತ್ಕೃತೇಽಹಮಿದಂ ಪ್ರಾಪ್ತಾ ತೇಷಾಂ ವರ್ಷೇ ಚತುರ್ದಶೇ ।**
**ಹತಪತ್ನ್ಯೋ ಹತಸುತಾ ಹತಬನ್ಧುಜನಪ್ರಿಯಾಃ ॥೨೦॥**

**ಬಹುಶೋಣಿತದಿಗ್ಧಾಙ್ಗ್ಯೋ ಮುಕ್ತಕೇಶ್ಯೋ ರಜಸ್ವಲಾಃ ।**
**ಏವಂ ಕೃತೋದಕಾ ಭಾರ್ಯಾಃ ಪ್ರವೇಕ್ಷ್ಯನ್ತಿ ಗಜಾಹ್ವಯಮ್ ॥೨೧॥**

ರಜಸ್ವಲೆಯಾಗಿದ್ದ, ರಕ್ತಸಿಕ್ತೈಕವಸ್ತ್ರಧಾರಿಣಿಯಾಗಿದ್ದ, ಕೆದರಿದ ಕೇಶರಾಶಿಯಿಂದ ಮುಖವನ್ನು ಮುಚ್ಚಿಕೊಂಡು ರೋದಿಸುತ್ತಾ ಹೋಗು ತ್ತಿದ್ದ ದ್ರೌಪದಿಯು ಹೀಗೆ ಹೇಳಿದಳು : “ನನ್ನನ್ನಿಂದು ಈ ಸ್ಥಿತಿಗೆ ತಂದ ರಾಜಕುಮಾರರ ಪತ್ನಿಯರು ಹದಿಮೂರು ವರ್ಷಗಳು ಕಳೆದನಂತರ ಹದಿನಾಲ್ಕನೆಯ ವರ್ಷದಲ್ಲಿ ಪತಿ-ಸುತವಿಹೀನೆಯರಾಗಿ, ಆಪ್ತೇಷ್ಟರನ್ನೂ ಕಳೆದುಕೊಂಡವರಾಗಿ, ಸಮರಾಂಗಣದಲ್ಲಿ ಸತ್ತ ಪತಿ-ಸುತರನ್ನು ಅಪ್ಪಿ, ತಮ್ಮ ಶರೀರಗಳನ್ನು ರಕ್ತದಿಂದ ತೋಯಿಸಿಕೊಂಡವರಾಗಿ, ಕೆದರಿದ ಕೇಶರಾಶಿಯುಳ್ಳವರಾಗಿ, ರಜಸ್ವಲೆಯರಾಗಿ, ಸತ್ತುಹೋದವರಿಗೆ ತಿಲೋ

ದಕವನ್ನಿತ್ತು ಹಸ್ತಿನಾಪಟ್ಟಣಕ್ಕೆ ಹಿಂದಿರುಗುವರು." ಹೀಗೆಂದು ಅಳುತ್ತಳುತ್ತಲೇ ಹೇಳುತ್ತಾ ಧರ್ಮಜನ ಹಿಂದೆ ನಡೆದಳು.

**ಕೃತ್ವಾ ತು ನೈರ್ಋತಾನ್ದರ್ಭಾನ್ಧೀರೋ ಧೌಮ್ಯಃ ಪುರೋಹಿತಃ ।**
**ಸಾಮಾನಿ ಗಾಯನ್ಯಾಮ್ಯಾನಿ ಪುರತೋ ಯಾತಿ ಭಾರತ ॥೨೨॥**

**ಹತೇಷು ಭಾರತೇಷ್ವಾಜೌ ಕುರೂಣಾಂ ಗುರವಸ್ತದಾ ।**
**ಏವಂ ಸಾಮಾನಿ ಗಾಸ್ಯನ್ತೀತ್ಯುಕ್ತ್ವಾ ಧೌಮ್ಯೋಽಪಿ ಗಚ್ಛತಿ ॥೨೩॥**

ಜಿತೇಂದ್ರಿಯರಾದ ಧೌಮ್ಯರು ಕೈಯಲ್ಲಿ ದರ್ಭೆಗಳನ್ನು ಹಿಡಿದು ಅವುಗಳ ಅಗ್ರಭಾಗಗಳನ್ನು ನೈಋತ್ಯದಿಕ್ಕಿಗೆ ತಿರುಗಿಸಿ, ರೌದ್ರ ಮತ್ತು ಯಾಮ್ಯಸಾಮಗಳನ್ನು ಹೇಳುತ್ತಾ ಮುಂದೆ ನಡೆದುಹೋಗುತ್ತಿದ್ದರು. 'ಮುಂಬರುವ ಮಹಾಯುದ್ಧದಲ್ಲಿ ಕೌರವರು ಕೊಲ್ಲಲ್ಪಟ್ಟ ಬಳಿಕ ಕುರುಕುಲದ ಪುರೋಹಿತರೂ ಇದೇ ಮಂತ್ರಗಳನ್ನು ಉಚ್ಚಾರಣೆಮಾಡುವರು'– ಎಂದು ಪದೇ-ಪದೇ ಹೇಳುತ್ತಿದ್ದರು.

ಪಾಂಡವರು ಅರಣ್ಯಕ್ಕೆ ಹೊರಟಾಗ ಪೌರರ ಪ್ರತಿಕ್ರಿಯೆಯೇನೆಂಬುದನ್ನು ಹೇಳುವೆನು ; ಕೇಳು, ಮಹಾರಾಜ!

**ಹಾ ಹಾ ಗಚ್ಛನ್ತಿ ನೋ ನಾಥಾಃ ಸಮವೇಕ್ಷಧ್ವಮೀದೃಶಮ್ ।**
**ಅಹೋ ಧಿಕ್ಕುರುವೃದ್ಧಾನಾಂ ಬಾಲಾನಾಮಿವ ಚೇಷ್ಟಿತಮ್ ॥೨೪॥**

**ರಾಷ್ಟ್ರೇಭ್ಯಃ ಪಾಣ್ಡುದಾಯಾದಾಲ್ಲೋಭಾನ್ನಿರ್ವಾಸಯನ್ತಿ ಯೇ ।**
**ಅನಾಥಾಃ ಸ್ಮ ವಯಂ ಸರ್ವೇ ವಿಯುಕ್ತಾಃ ಪಾಣ್ಡುನನ್ದನೈಃ ॥೨೫॥**

**ದುರ್ವಿನೀತೇಷು ಲುಬ್ಧೇಷು ಕಾ ಪ್ರೀತಿಃ ಕೌರವೇಷು ನಃ ।**
**ಇತಿ ಪೌರಾಃ ಸುದುಃಖಾರ್ತಾ ಕ್ರೋಶನ್ತಿ ಸ್ಮ ಪುನಃ ಪುನಃ ॥೨೬॥**

"ಅಯ್ಯೋ! ನಮ್ಮ ನಾಥರು ಹೋಗುತ್ತಿರುವರಲ್ಲಾ! ಪಾಂಡುವಿನ ಉತ್ತರಾಧಿಕಾರಿಗಳಾದ ಯುಧಿಷ್ಠಿರಾದಿಗಳನ್ನು, ಈ ಕುರುವಂಶದ ಹಿರಿಯರು ಕೇವಲ ಹುಚ್ಚುತನದಿಂದ ಬಾಲಕರಂತೆ ನಡೆದುಕೊಂಡು ಅರಣ್ಯಕ್ಕೆ ಕಳುಹಿ

ಸುತ್ತಿದ್ದಾರೆ. ಇವರ ನಡತೆಗೆ ಧಿಕ್ಕಾರ! ಇದನ್ನು ಅವರು ಕೇವಲ ಲೋಭದಿಂದ ಮಾಡಿರುತ್ತಾರೆ. ಪಾಂಡುವಿನ ಮಕ್ಕಳಿಂದ ಬೇರ್ಪಟ್ಟ ನಾವು ನಿಶ್ಚಯವಾಗಿಯೂ ಅನಾಥರಾಗುತ್ತೇವೆ. ನಮ್ಮ ಸ್ವಾಮಿಗಳಾಗುವ ಧೂರ್ತರೂ ಮತ್ತು ಅತ್ಯಾಸೆಯುಳ್ಳವರೂ ಆಗಿರುವ ಕೌರವರನ್ನು ನಾವು ಪ್ರೀತಿಸಲು ಹೇಗೆತಾನೇ ಸಾಧ್ಯವಾದೀತು?"–ಹೀಗೆಂದು ಹೇಳಿಕೊಂಡು ಪಟ್ಟಣಿಗರೆಲ್ಲರೂ ರೋದನಮಾಡುತ್ತಿದ್ದರು.

ಮಹಾರಾಜ! ಈ ರೀತಿಯಲ್ಲಿ ತಮ್ಮ ಮುಖಭಾವ ಮತ್ತು ಲಕ್ಷಣಗಳಿಂದ ತಮ್ಮ ಮನೋಗತವಾದ ಕಾರ್ಯವನ್ನು ತಿಳಿಸುತ್ತಾ ಕುಂತಿಯ ಮಕ್ಕಳು ಅರಣ್ಯಕ್ಕೆ ಹೊರಟರು. ಅವರು ಹೊರಟುಹೋದನಂತರ ಹಸ್ತಿನಾಪುರದಲ್ಲಿ ಉಂಟಾದ ಅಪಶಕುನಗಳನ್ನು ವಿವರಿಸುವೆನು ; ಕೇಳು :

**ಏವಂ ತೇಷು ನರಾಗ್ರ್ಯೇಷು ನಿರ್ಯತ್ಸು ಗಜಸಾಹ್ವಯಾತ್ ।**
**ಅನಭ್ರೇ ವಿದ್ಯುತಶ್ಚಾಸನ್ಭೂಮಿಶ್ಚ ಸಮಕಮ್ಪತ ॥೨೮॥**

**ರಾಹುರಗ್ರಸದಾದಿತ್ಯಮಪರ್ವಣಿ ವಿಶಾಮ್ಪತೇ ।**
**ಉಲ್ಕಾ ಚಾಪ್ಯಪಸವ್ಯೇನ ಪುರಂ ಕೃತ್ವಾ ವ್ಯಶೀರ್ಯತ ॥೨೯॥**

**ಪ್ರತ್ಯಾಹರನ್ತಿ ಕ್ರವ್ಯಾದಾ ಗೃಧ್ರಗೋಮಾಯುವಾಯಸಾಃ ।**
**ದೇವಾಯತನಚೈತ್ಯೇಷು ಪ್ರಾಕಾರಾಟ್ಟಾಲಕೇಷು ಚ ॥೩೦॥**

**ಏವಮೇತೇ ಮಹೋತ್ಪಾತಾಃ ಪ್ರಾದುರಾಸನ್ದುರಾಸದಾಃ ।**
**ಭರತಾನಾಮಭಾವಾಯ ರಾಜನ್ದುರ್ಮನ್ತ್ರಿತೇ ತವ ॥೩೧॥**

ಮೋಡಗಳು ಇಲ್ಲದೆಯೇ ದಿಕ್ಕು-ದಿಕ್ಕುಗಳಲ್ಲಿಯೂ ಮಿಂಚುತ್ತಿದ್ದಿತು. ಭೂಮಿಯು ನಡುಗಿತು. ಅಪರ್ವದಿನದಲ್ಲಿ (ಅಮಾವಾಸ್ಯಾಭಿನ್ನಕಾಲದಲ್ಲಿ) ರಾಹುವು ಸೂರ್ಯನನ್ನು ನುಂಗಲು ಹೋಗುತ್ತಿದ್ದನು. ಉಲ್ಕೆಯು ಹಸ್ತಿನಾಪುರವನ್ನು ಅಪ್ರದಕ್ಷಿಣವಾಗಿ ಸುತ್ತಿ ಕಡೆಯಲ್ಲಿ ಚೂರು-ಚೂರಾಗಿ ಕೆಳಕ್ಕೆ ಬಿದ್ದಿತು. ಗುಳ್ಳೆನರಿಗಳೂ, ಗೂಬೆಗಳೂ, ಕಾಗೆಗಳೂ ಮತ್ತು ಇತರ ಹಿಂಸ್ರಪಶು-ಪಕ್ಷಿಗಳೂ ದೇವಾಗಾರಗಳಲ್ಲಿಯೂ, ಪವಿತ್ರವಾದ ವೃಕ್ಷಗಳ ಮೇಲೆಯೂ, ಉಪ್ಪರಿಗೆಗಳ ಮೇಲ್ಭಾಗಗಳಲ್ಲಿಯೂ ಕುಳಿತು ಗಟ್ಟಿಯಾಗಿ

ಅರಚುತ್ತಿದ್ದುವು. ಇಂತಹ ಮಹೋತ್ಪಾತಗಳೆಲ್ಲವೂ ಭರತಕುಲದರಸರ ವಿನಾಶಸೂಚಕಗಳು. ಮಹಾರಾಜ! ಇವೆಲ್ಲಕ್ಕೂ ಮುಖ್ಯಕಾರಣವೆಂದರೆ : ನಿನ್ನ ದುರ್ಮಂತ್ರಾಲೋಚನೆ. ಇನ್ನೇನು ಹೇಳಲಿ?"

ಜನಮೇಜಯ! ಧೃತರಾಷ್ಟ್ರ-ವಿದುರರು ಹೀಗೆ ಮಾತನಾಡುತ್ತಿರುವಾಗ ದೇವರ್ಷಿಗಳಾದ ನಾರದರು ಅನೇಕ ಋಷಿ-ಮಹರ್ಷಿಗಳಿಂದೊಡಗೂಡಿ ಮಹಾಸಭಾಮಂಟಪಕ್ಕೆ ಆಗಮಿಸಿದರು. ಅವರೆಲ್ಲರ ಸಮ್ಮುಖದಲ್ಲಿ–

**ಇತಶ್ಚತುರ್ದಶೇ ವರ್ಷೇ ವಿನಕ್ಷ್ಯನ್ತೀಹ ಕೌರವಾಃ ।**
**ದುರ್ಯೋಧನಾಪರಾಧೇನ ಭೀಮಾರ್ಜುನಬಲೇನ ಚ ॥೩೪॥**

"ಇಲ್ಲಿಂದ ಹದಿನಾಲ್ಕನೆಯ ವರ್ಷದಲ್ಲಿ ದುರ್ಯೋಧನನ ಅಪರಾಧದ ಕಾರಣದಿಂದಲೂ ಭೀಮಾರ್ಜುನರ ಬಲದಿಂದಲೂ ಕೌರವರೆಲ್ಲರೂ ವಿನಾಶಹೊಂದುತ್ತಾರೆ"–ಎಂದು ಘೋರವಾಕ್ಯವನ್ನು ಹೇಳಿ, ಅಮಿತವಾದ ಬ್ರಹ್ಮತೇಜಸ್ಸಿನಿಂದ ಪ್ರಕಾಶಿಸುತ್ತಿದ್ದ ನಾರದರು ಋಷಿಸ್ತೋಮದೊಡನೆ ಅಂತರಿಕ್ಷಕ್ಕೆ ಹೋಗಿ ಅದೃಶ್ಯರಾದರು.

ನಾರದಮಹರ್ಷಿಗಳ ಮಾತುಗಳನ್ನು ಕೇಳಿ ದುರ್ಯೋಧನಾದಿಗಳಿಗೂ ಹೃದಯವು ಕಂಪಿಸತೊಡಗಿತು. ಒಡನೆಯೇ ದುರ್ಯೋಧನ-ಕರ್ಣ-ಶಕುನಿ-ದುಃಶಾಸನರು ಆಚಾರ್ಯರಾದ ದ್ರೋಣರ ಬಳಿಗೆ ಹೋಗಿ ಸಾಷ್ಟಾಂಗಪ್ರಣಾಮಮಾಡಿದರು. ಅನಂತರ ದುರ್ಯೋಧನನು ಸಕಲೈಶ್ವರ್ಯಪೂರ್ಣವಾದ ವಸುಧೆಯನ್ನು ದ್ರೋಣರ ಪಾದಾರವಿಂದಗಳಲ್ಲಿ ಅರ್ಪಿಸಿ–'ನೀವೇ ನಮಗೆ ರಕ್ಷಕರಾಗಿರಬೇಕು'–ಎಂದು ಕೈಜೋಡಿಸಿ ಕೇಳಿಕೊಂಡನು. ಮಹಾನುಭಾವರಾದ ದ್ರೋಣರು ದುರ್ಯೋಧನನ ಆಶಯವನ್ನು ತಿಳಿದವರಾಗಿ ಕಾಮಕ್ರೋಧಾದಿ ಅರಿಷಡ್ವರ್ಗದಿಂದ ಪರಿಪೂರ್ಣನಾಗಿದ್ದ ದುರ್ಯೋಧನನನ್ನೂ, ಅವನನ್ನೇ ಅನುಸರಿಸಿಬಂದಿದ್ದ ಕರ್ಣ-ದುಃಶಾಸನ-ಸೌಬಲರನ್ನೂ ಕುರಿತು ಹೇಳಿದರು :

"ಪಾಂಡವರು ದೇವಾಂಶಸಂಭೂತರಾದುದರಿಂದ ಅವಧ್ಯರೆಂಬುದನ್ನು ಬ್ರಾಹ್ಮಣರಿಂದ ಕೇಳಿರುವೆನು. ಆದರೂ ಶರಣಾಗತರಾಗಿ ಬಂದಿರುವ ನಿಮ್ಮನ್ನು ನನ್ನ ಶಕ್ತಿಮೀರಿ ರಕ್ಷಿಸುವೆನು. ರಾಜರ ಸಮೇತರಾಗಿ ಬಂದಿರುವ,

ಭಕ್ತಿಭಾವದಿಂದ ಕೇಳಿಕೊಳ್ಳುತ್ತಿರುವ ಧೃತರಾಷ್ಟ್ರನ ಮಕ್ಕಳನ್ನು ಪರಿತ್ಯಜಿಸಲು ಇಚ್ಛಿಸುವುದಿಲ್ಲ. ಆದರೆ ವಿಧಿಯು ಬಲವತ್ತರವಾದುದು. ಪಾಂಡುವಿನ ಮಕ್ಕಳು ಪಗಡೆಯಾಟದಲ್ಲಿ ಸೋತು ನಿಯಮಾನುಸಾರವಾಗಿ ಅರಣ್ಯವಾಸಕ್ಕೆ ಹೊರಟಿರುತ್ತಾರೆ. ಹನ್ನೆರಡು ವರ್ಷಗಳು ಬ್ರಹ್ಮಚರ್ಯವ್ರತದಿಂದಿದ್ದು, ವನವಾಸವನ್ನು ಕಳೆದು ಕೋಪಾವಿಷ್ಟರಾಗಿ ಬಂದು ತಮ್ಮ ಶತ್ರುಗಳ ಮೇಲೆ ಸೇಡುತೀರಿಸಿಕೊಳ್ಳುವುದಂತೂ ನಿಶ್ಚಯ. ಈ ಸಂದರ್ಭದಲ್ಲಿ ಸ್ವವಿಷಯವನ್ನು ತಿಳಿಸುವೆನು : ಕೇಳಿರಿ. ದ್ರುಪದನಿಗೂ ನನಗೂ ಗಾಢವಾದ ಮೈತ್ರಿಯಿದ್ದಿತು. ಆ ಮೈತ್ರಿಯು ಕಾರಣಾಂತರಗಳಿಂದ ವಿರಸಕ್ಕೆ ಕಾರಣವಾಯಿತು. ನಾನು ದ್ರುಪದನನ್ನು ರಾಜ್ಯಭ್ರಷ್ಟನನ್ನಾಗಿ ಮಾಡಿದೆನು. ರಾಜ್ಯಭ್ರಷ್ಟನಾದ ದ್ರುಪದನು ಯಾಜ ಮತ್ತು ಉಪಯಾಜರೆಂಬ ಮಹರ್ಷಿಗಳ ನಿರ್ದೇಶದಿಂದ ಮಹಾಯಾಗವೊಂದನ್ನು ಮಾಡಿ ನನ್ನನ್ನು ಕೊಲ್ಲುವ ಒಬ್ಬ ಮಗನನ್ನೂ ಮತ್ತು ಒಬ್ಬಳು ಮಗಳನ್ನೂ ಪಡೆದಿರುವನು. ಅವರಿಬ್ಬರೂ ಯಜ್ಞಕುಂಡದಿಂದಲೇ ಪ್ರಾದುರ್ಭೂತರಾಗಿರುವರು. ಕಿರೀಟಿಯು ಮತ್ಸ್ಯಯಂತ್ರವನ್ನು ಭೇದಿಸಿದುದರಿಂದ ಪಾಂಡವರು ದ್ರೌಪದಿಯನ್ನು ವಿವಾಹವಾದರು. ಆದುದರಿಂದ ಧೃಷ್ಟದ್ಯುಮ್ನನು ಪಾಂಡವರಿಗೆ ಭಾವಮೈದುನನಾದನು. ಅವನೊಬ್ಬನಿಗೆ ಮಾತ್ರ ನಾನು ಭಯಪಡುತ್ತೇನೆ. ದೇವಾಂಶಸಂಭೂತನಾದ ಅವನು ಅಗ್ನಿಯಂತೆಯೇ ತೇಜಸ್ಸಿನಿಂದ ಪ್ರಕಾಶಿಸುತ್ತಾ ಹುಟ್ಟುವಾಗಲೇ ಕವಚ-ಕುಂಡಲಗಳನ್ನೂ, ಬಾಣ-ಬತ್ತಳಿಕೆಗಳನ್ನೂ ಧರಿಸಿದ್ದನು. ನಾನಾದರೋ ಮರ್ತ್ಯನೇ ಆಗಿರುವುದರಿಂದಲೂ ಮತ್ತು ಅವನು ನನ್ನ ವಿನಾಶಕ್ಕೇ ಹುಟ್ಟಿರುವನೆಂಬುದನ್ನು ತಿಳಿದಿರುವುದರಿಂದಲೂ ಧೃಷ್ಟದ್ಯುಮ್ನನ ವಿಷಯದಲ್ಲಿ ಭಯಪಡುತ್ತೇನೆ.

ವಿಧಿಯ ನಿಯಮಾನುಸಾರವಾಗಿ ಪಾಂಡವ-ಕೌರವರಿಗೆ ವೈಮನಸ್ಯವು ಪ್ರಾರಂಭವಾಗಿದೆ. ಧೃಷ್ಟದ್ಯುಮ್ನನು ಬಂಧುತ್ವದ ಕಾರಣದಿಂದ ಪಾಂಡವರ ಕಡೆಗೆ ಸೇರುವನೆಂಬುದರಲ್ಲಿ ಯಾವ ಸಂಶಯವೂ ಇಲ್ಲ. ಅವನಿಗೆದುರಾಗಿ ಯುದ್ಧಮಾಡಬೇಕಾಗಿ ಬಂದಾಗ–ನಾನು ಅಸುವನ್ನು ತೊರೆಯಲೇ ಬೇಕಾಗುವುದು. ಕೌರವರಾಜಕುಮಾರರೇ! ಇದಕ್ಕಿಂತಲೂ ಹೆಚ್ಚಿನ ದುಃಖವು

ನನಗೆ ಬೇರಾವುದಿದೆ? 'ಧೃಷ್ಟದ್ಯುಮ್ನೋ ದ್ರೋಣಮೃತ್ಯುಃ' ಎಂಬುದು ಈಗಾಗಲೇ ಜನಜನಿತವಾಗಿರುವುದು. ಅವನು ನನ್ನನ್ನು ಕೊಲ್ಲುವುದಕ್ಕಾಗಿಯೇ ಹುಟ್ಟಿರುವನೆಂಬುದನ್ನು ನಾನೂ ಕೇಳಿದ್ದೇನೆ. ದುರ್ಯೋಧನ! ನೀನು ಪಾಂಡವರನ್ನು ಅರಣ್ಯಕ್ಕೆ ಕಳುಹಿಸಿರುವುದರಿಂದಲೇ ಸಕಲವೂ ಸಾಧನೆಯಾಯಿತೆಂದು ಭಾವಿಸಬೇಡ.

**ಮುಹೂರ್ತಂ ಸುಖಮೇವೈತತ್ತಾಲಚ್ಛಾಯೇವ ಹೈಮನೀ ।**
**ಯಜಧ್ವಂ ಚ ಮಹಾಯಜ್ಞೈರ್ಭೋಗಾನಶ್ನೀತ ದತ್ತ ಚ ।**
**ಇತಶ್ಚತುರ್ದಶೇ ವರ್ಷೇ ಮಹತ್ಪ್ರಾಪ್ಸ್ಯಥ ವೈಶಸಮ್ ॥೫೦॥**

ಹೇಮಂತರ್ತುವಿನಲ್ಲಿ ತಾಳೇಮರದ ನೆರಳು ಮಧ್ಯಾಹ್ನ ಸಮಯದಲ್ಲಿ ಒಂದು ಕ್ಷಣಕಾಲ ಮಾತ್ರ ಮರದ ಬುಡದಲ್ಲಿ ಇರುವಂತೆ–ಈ ನಿನ್ನ ಸುಖವೂ ಕ್ಷಣಿಕವಾದುದು. ಆದುದರಿಂದ ಮಹಾಯಜ್ಞಗಳನ್ನು ಮಾಡಿರಿ. ಯಥೇಚ್ಛವಾಗಿ ದಾನಮಾಡಿರಿ. ಸಕಲಸುಖೋಪಭೋಗಗಳನ್ನೂ ಅನುಭವಿಸಿರಿ. ಇಂದಿಗೆ ಹದಿನಾಲ್ಕನೆಯ ವರ್ಷದಲ್ಲಿ ನಿಮಗೆ ಮಹಾವಿಪತ್ತು ಒದಗುವುದಂತೂ ನಿಶ್ಚಯ."

ದ್ರೋಣರ ಆ ಮಾತುಗಳನ್ನು ಕೇಳಿ ಧೃತರಾಷ್ಟ್ರನು ಮತ್ತಷ್ಟು ಭಯಪಟ್ಟು ವಿದುರನನ್ನು ಕುರಿತು ಹೇಳಿದನು : "ವಿದುರ! ನಮ್ಮ ಆಚಾರ್ಯರು ಹೇಳಿರುವುದು ನಿಶ್ಚಯ. ಸರ್ವನಾಶಕ್ಕೆಂದೂ ಅವಕಾಶವನ್ನೀಯಬಾರದು. ಈಗಲೇ ಹೋಗಿ ಪಾಂಡುನಂದನರನ್ನು ಕರೆದುಕೊಂಡು ಬಾ. ಒಂದು ವೇಳೆ ಅವರು ಬಾರದಿದ್ದರೆ ನಮ್ಮಿಂದ ಸತ್ಕೃತರಾಗಿ, ದ್ವೇಷವನ್ನು ತೊರೆದು ಸಂತೋಷದಿಂದಲೂ, ವಿಶ್ವಾಸದಿಂದಲೂ ನಿರ್ಗಮಿಸಲಿ. ಶಸ್ತ್ರ-ರಥ-ಪದಾತಿಗಳಿಂದ ಕೂಡಿ ಆ ನನ್ನ ಮಕ್ಕಳು (ಪಾಂಡವರು) ಸಕಲಭೋಗಗಳನ್ನೂ ನಿಶ್ಚಿಂತರಾಗಿದ್ದು ಅನುಭವಿಸಲಿ."

ಅ೦ನೆಯ ಅಧ್ಯಾಯವು ಮುಗಿಯಿತು.

## ಧೃತರಾಷ್ಟ್ರನ ಚಿಂತೆ : ಸಂಜಯನೊಡನೆ ಸಂಭಾಷಣೆ

(ಪಾಂಡವರು ಹಿಂದಿರುಗಿ ಬರುವರೇ? ಸೇಡುತೀರಿಸಿಕೊಳ್ಳದೇ ಅವರಿಗೆ ಸಂತೋಷವೆಂಬುದಿರುವುದೇ? ಹಗ್ಗವು ಹರಿದುಹೋಯಿತು. ಕಟ್ಟೆಯೊಡೆದುಹೋಯಿತು. ವಿಧಿವಿಲಾಸವೇ ಮನುಷ್ಯಪ್ರಯತ್ನಕ್ಕಿಂತ ಮಿಗಿಲಾಯಿತು.)

ವೈಶಂಪಾಯನರು ಹೇಳುತ್ತಾರೆ :

**ವನಂ ಗತೇಷು ಪಾರ್ಥೇಷು ನಿರ್ಜಿತೇಷು ದುರೋದರೇ ।**
**ಧೃತರಾಷ್ಟ್ರಂ ಮಹಾರಾಜ ತದಾ ಚಿನ್ತಾ ಸಮಾವಿಶತ್ ॥೧॥**

"ಜನಮೇಜಯಮಹಾರಾಜ! ಪಾಂಡವರು ಅರಣ್ಯಕ್ಕೆ ಹೊರಟು ಹೋದರು. ಕೆಲವು ದಿನಗಳು ಉರುಳಿದುವು. ಧೃತರಾಷ್ಟ್ರನಿಗೆ ಚಿಂತೆಯೆಂಬ ಭೂತವು ಹಿಡಿಯಿತು. ಮನಸ್ಸಿಗೆ ಸಮಾಧಾನವೆಂಬುದೇ ಇರಲಿಲ್ಲ. ಕ್ಷಣ-ಕ್ಷಣಕ್ಕೂ ನಿಟ್ಟುಸಿರುಬಿಡುವನು. ಅಂತಹ ಸ್ಥಿತಿಯಲ್ಲಿದ್ದಾಗ ಸಂಜಯನು ರಾಜನ ಸಮೀಪಕ್ಕೆ ಬಂದು ಅವನ ಕುಂದಿದ ಮುಖಾರವಿಂದವನ್ನು ಕಂಡು ಹೇಳಿದನು:

"ಮಹಾರಾಜ! ಪಾಂಡುವಿನ ಮಕ್ಕಳನ್ನು ಕಾಡಿಗೆ ಕಳುಹಿಸಿದನಂತರ ನೀನು ಅಖಂಡಸಾಮ್ರಾಜ್ಯಕ್ಕೂ ಸಾರ್ವಭೌಮನಾಗಿರುವೆ. ಹೀಗಿದ್ದೂ ದುಃಖಿಸುತ್ತಿರುವೆಯೇಕೆ?"

ಧೃತರಾಷ್ಟ್ರನು ಹೇಳುತ್ತಾನೆ :

**ಅಶೋಚ್ಯತ್ವಂ ಕುತಸ್ತೇಷಾಂ ಯೇಷಾಂ ವೈರಂ ಭವಿಷ್ಯತಿ ।**
**ಪಾಣ್ಡವೈರ್ಯುದ್ಧಶೌಣ್ಡೈರ್ಹಿ ಬಲವದ್ಭಿರ್ಮಹಾರಥೈಃ ॥೨॥**

"ಹೀಗೇಕೆ ಕೇಳುವೆ? ಸಂಜಯ! ಮಹಾರಥರಾದ, ಮಹಾಬಲಶಾಲಿಗಳಾದ, ಯುದ್ಧವಿಶಾರದರಾದ ಪಾಂಡುವಿನ ಮಕ್ಕಳೊಡನೆ ವೈರವನ್ನು ಕಟ್ಟಿಕೊಂಡಿರುವ ಯಾವನಿಗೆ ತಾನೇ ಚಿಂತೆಯಿಲ್ಲದೇ ಇರಲು ಸಾಧ್ಯವಾಗುವುದು?"

ಸಂಜಯನು ಹೇಳುತ್ತಾನೆ :

“ಮಹಾರಾಜ! ಅದು ನೀನು ಮಾಡಿದ ಕರ್ಮಫಲ. ಈ ನಿಮ್ಮಿಬ್ಬರಲ್ಲುಂಟಾಗಿರುವ ವೈರದ ಕಾರಣದಿಂದಾಗಿ ಲೋಕದ ವಿನಾಶವೇ ಉಪಸ್ಥಿತವಾದಂತಾಗಿದೆ. ಭೀಷ್ಮ-ದ್ರೋಣ-ವಿದುರರಿಂದ ನಿರೋಧಿಸಲ್ಪಟ್ಟರೂ ನಿನ್ನ ಮಗನಾದ ದುರುಳದುರ್ಯೋಧನನು–ಧರ್ಮಿಷ್ಠರಾದ ಪಾಂಡವರ ಧರ್ಮಪತ್ನಿಯಾದ ಪಾಂಚಾಲಿಯನ್ನು ರಾಜಸಭೆಗೆ ಎಳೆದುತರುವಂತೆ ಪ್ರಾತಿಕಾಮಿಗೆ ಆಜ್ಞಾಪಿಸಿದನು.

**ಯಸ್ಮೈ ದೇವಾಃ ಪ್ರಯಚ್ಛನ್ತಿ ಪುರುಷಾಯ ಪರಾಭವಮ್ ।**
**ಬುದ್ಧಿಂ ತಸ್ಯಾಪಕರ್ಷನ್ತಿ ಸೋಽರ್ವಾಚೀನಾನಿ ಪಶ್ಯತಿ ॥೮॥**

**ಬುದ್ಧೌ ಕಲುಷಭೂತಾಯಾಂ ವಿನಾಶೇ ಸಮುಪಸ್ಥಿತೇ ।**
**ಅನಯೋ ನಯಸಂಕಾಶೋ ಹೃದಯಾನ್ನಾಪಸರ್ಪತಿ ॥೯॥**

**ಅನರ್ಥಾಶ್ಚಾರ್ಥರೂಪೇಣ ಅರ್ಥಾಶ್ಚಾನರ್ಥರೂಪಿಣಃ ।**
**ಉತ್ತಿಷ್ಠನ್ತಿ ವಿನಾಶಾಯ ನೂನಂ ತಚ್ಚಾಸ್ಯ ರೋಚತೇ ॥೧೦॥**

ಧೃತರಾಷ್ಟ್ರ! ದೇವತೆಗಳು ಒಬ್ಬ ಮನುಷ್ಯನಿಗೆ ಪರಾಭವವನ್ನುಂಟುಮಾಡಬೇಕೆಂದು ಇಚ್ಛೆಪಟ್ಟರೆ–ಮೊದಲು ಅವನ ಬುದ್ಧಿಯನ್ನು ಕೆಡಿಸುತ್ತಾರೆ. ಆಗವನು ಪ್ರತಿಯೊಂದನ್ನೂ ತಿರುಗುಮುರುಗಾಗಿ ಯೋಚಿಸುತ್ತಾನೆ. ವಿನಾಶಕಾಲವು ಸನ್ನಿಹಿತವಾದಾಗ ಮನುಷ್ಯನಿಗೆ–ಪಾಪಬುದ್ಧಿಯ ಕಾರಣದಿಂದ ಕೆಟ್ಟದ್ದೆಲ್ಲವೂ ಒಳ್ಳೆಯದಾಗಿ ಕಂಡು, ಕೆಟ್ಟಮಾರ್ಗವನ್ನೇ ನಿಷ್ಠೆಯಿಂದ ಅನುಸರಿಸುತ್ತಾನೆ. ಯಾವುದು ಒಳ್ಳೆಯದೋ ಅದು ಕೆಟ್ಟುದಾಗಿ ಕಾಣುತ್ತದೆ. ಯಾವುದು ಕೆಟ್ಟದ್ದೋ ಅದು ಒಳ್ಳೆಯದಾಗಿ ಕಾಣುತ್ತದೆ. ವಿನಾಶವು ಸನ್ನಿಹಿತವಾಗಿರುವವರಿಗೆ ಕುತ್ಸಿತಕಾರ್ಯಗಳೂ, ಕುತ್ಸಿತಮಾರ್ಗಗಳೂ ಪ್ರಿಯವಾಗುತ್ತವೆ.

**ನ ಕಾಲೋ ದಣ್ಡಮುದ್ಯಮ್ಯ ಶಿರಃ ಕೃನ್ತತಿ ಕಸ್ಯಚಿತ್ ।**
**ಕಾಲಸ್ಯ ಬಲಮೇತಾವದ್ವಿಪರೀತಾರ್ಥದರ್ಶನಮ್ ॥೧೧॥**

ಮಹಾರಾಜ! ‘ವಿಪತ್ಕಾಲ’, ‘ವಿನಾಶಕಾಲ’ ಎಂದರೆ ಕಾಲವು

ದಂಡವನ್ನು ಅಥವಾ ಕತ್ತಿಯನ್ನು ಮೇಲೆತ್ತಿ ಒಬ್ಬನ ತಲೆಯನ್ನು ಕಡಿಯುವುದಿಲ್ಲ. ಆದರೆ ವಿಪತ್ಕಾಲವೊದಗಿದಾಗ ಮನುಷ್ಯನ ಬುದ್ಧಿಯು ಪಲ್ಲಟವಾಗಿ ಒಳ್ಳೆಯದನ್ನು ಕೆಟ್ಟುದನ್ನಾಗಿಯೂ, ಕೆಟ್ಟುದನ್ನು ಒಳ್ಳೆಯದನ್ನಾಗಿಯೂ ಕಾಣುತ್ತಾನೆ. ಇದೇ ಕಾಲದ ಒಂದು ವಿಶೇಷವಾದ ಮತ್ತು ಆಶ್ಚರ್ಯಕರವಾದ ಬಲ.

ಈ ದುಷ್ಟರು ಅಬಲೆಯಾದ ಪಾಂಚಾಲಿಯನ್ನು ಮಹಾಸಭೆಗೆ ಸೆಳೆದು ತಂದು ಅವಮಾನಮಾಡಿ ವಿಪತ್ತನ್ನು ತಾವಾಗಿಯೇ ತಂದುಕೊಂಡರು. ಅಯೋನಿಜೆಯಾದ, ಅಗ್ನಿಸಂಭೂತೆಯಾದ, ಸರ್ವಧರ್ಮಜ್ಞಳಾದ, ಯಶಸ್ವಿನಿಯಾದ, ಸುಂದರಿಯಾದ ಪಾಂಚಾಲಿಯನ್ನು ದುಷ್ಟನಾದ, ಮೋಸದ ಜೂಜುಕೋರನಾದ ದುರ್ಯೋಧನನಲ್ಲದೇ ಮತ್ತಾರು ತಾನೇ ಸಭಾಮಧ್ಯಕ್ಕೆ ಸೆಳೆದುತರಲು ಹೇಳುತ್ತಿದ್ದರು? ನಿಶ್ಚಯವಾಗಿ ಅಂದಿನ ದೃಶ್ಯವನ್ನು ಪುನಃ ಜ್ಞಾಪಿಸಿಕೊಳ್ಳಲೂ ಸಂಕಟವಾಗುತ್ತದೆ. ಚೆಲುವೆಯಾದ ದ್ರೌಪದಿಯಂದು ರಜಸ್ವಲೆಯಾಗಿದ್ದಳು. ಏಕವಸ್ತ್ರಧಾರಿಣಿಯಾಗಿದ್ದಳು. ಸಭೆಗೆ ಬಂದೊಡನೆಯೇ ತನ್ನ ಐವರು ಪತಿಗಳನ್ನೂ ನೋಡಿದಳು. ಆದರೆ ಅವರೆಲ್ಲರೂ ಸಕಲೈಶ್ವರ್ಯಗಳನ್ನೂ, ರಾಜ್ಯ-ಕೋಶಾದಿಗಳನ್ನೂ ಮೋಸದ ದ್ಯೂತದಲ್ಲಿ ಕಳೆದುಕೊಂಡಿದ್ದರು. ಅವರ ಮುಖಕಮಲಗಳು ಬಾಡಿದ್ದುವು. ದಾಸ್ಯದ ಶೃಂಖಲೆಗಳನ್ನು ತೊಟ್ಟವರಂತೆ ಮೌನದಿಂದ ಕುಳಿತಿದ್ದರು. ಧರ್ಮವೆಂಬ ರಜ್ಜುವಿನಿಂದ ಬಿಗಿಯಲ್ಪಟ್ಟಿದ್ದ ಅವರು ತಮ್ಮ ಪರಾಕ್ರಮವನ್ನು ಪ್ರದರ್ಶಿಸಲು ಅಶಕ್ತರಂತಾಗಿದ್ದರು. ಅಂತಹ ಸಮಯದಲ್ಲಿ ದೈವಯೋಗದಿಂದ ದುರ್ಯೋಧನ-ಕರ್ಣರು ಅದೇ ಸುಸಮಯವೆಂದು ಭಾವಿಸಿ–ಮೊದಲೇ ಸಂಕಟಪಡುತ್ತಿದ್ದ ದ್ರೌಪದಿಯನ್ನು ಕುರಿತು ಅಶ್ಲೀಲವಾದ, ಅನುಚಿತವಾದ, ಕರ್ಣಕಠೋರವಾದ ಮಾತುಗಳನ್ನಾಡಿದರು. ಅಂತಹ ಕ್ರೂರಶಿಕ್ಷೆಗೆ ದ್ರೌಪದಿಯು ನಿಶ್ಚಯವಾಗಿಯೂ ಲಕ್ಷ್ಯಳಾಗಬಾರದಾಗಿದ್ದಿತು. ಇವೆಲ್ಲವೂ ಮುಂದೊದಗುವ ಭಯಂಕರವಾದ ವಿಪತ್ತಿಗೆ ಸೂಚಕವೆಂದು ನಾನು ಭಾವಿಸುತ್ತೇನೆ."

ಧೃತರಾಷ್ಟ್ರನು ಹೇಳುತ್ತಾನೆ :

"ಸಂಜಯ! ನೀನು ಹೇಳಿದುದೆಲ್ಲವೂ ನಿಜ. ಅಂದು ಸಭಾಮಂಟಪ

ದಲ್ಲಿ ನನ್ನ ಮಕ್ಕಳ ಕುತ್ಸಿತಕಾರ್ಯದ ಕಾರಣದಿಂದಾಗಿ ಶೋಕಿಸುತ್ತಿದ್ದ ದ್ರೌಪದಿಯ ಕೋಪಪೂರಿತವಾದ ಕಟಾಕ್ಷವೀಕ್ಷಣವು ನಿಶ್ಚಯವಾಗಿಯೂ ಅಖಂಡಭೂಮಂಡಲವನ್ನೇ ದಹಿಸಿಬಿಡುವುದಾಗಿದ್ದಿತು. ಹೀಗಿರುವಾಗ ಅವಳು ಒಮ್ಮೆ ಕ್ರೌರ್ಯದಿಂದ ದಿಟ್ಟಿಸಿ ನೋಡಿದ್ದರೆ–ನನ್ನ ನೂರು ಮಕ್ಕಳಲ್ಲಿ ಯಾವನೊಬ್ಬನೂ ಉಳಿಯಲು ಸಾಧ್ಯವಾಗುತ್ತಿದ್ದಿತೇ? ಪಾಂಡವರ ಧರ್ಮಪತ್ನಿಯಾದ ದ್ರೌಪದಿಯನ್ನು ಸಭೆಗೆ ಸೆಳೆದುತಂದೊಡನೆಯೇ ಗಾಂಧಾರಿಯೂ ಮತ್ತು ನನ್ನ ಸೊಸೆಯರೂ ಗಟ್ಟಿಯಾಗಿ ರೋದಿಸ ತೊಡಗಿದರು.

ಇಂದೂ ಸಹ ಅವರು ನನ್ನ ಪ್ರಜೆಗಳಂತೆಯೇ ಶೋಕಸಾಗರದಲ್ಲಿ ಮುಳುಗಿರುತ್ತಾರೆ. ದ್ರೌಪದಿಯನ್ನು ಸಭೆಗೆ ಸೆಳೆದುತಂದ ದಿನ ಬ್ರಾಹ್ಮಣರೂ ಕೋಪಗೊಂಡು, ಅಂದಿನ ಸಾಯಂಕಾಲದ ಅಗ್ನಿಹೋತ್ರವನ್ನು ಮಾಡಲಿಲ್ಲ. ಪ್ರಪಂಚದ ಪ್ರಳಯಕಾಲದಲ್ಲಿ ಚಂಡಮಾರುತವು ಬೀಸುವಂತೆ ಅಂದು ಗಾಳಿಯು ಅತಿವೇಗದಿಂದ ಬೀಸತೊಡಗಿತು. ಗುಡುಗು-ಸಿಡಿಲುಗಳು ಆರ್ಭಟಗೈದುವು. ನಕ್ಷತ್ರಗಳು ಉರುಳಿದುವು. ಅಂದು ಅಮಾವಾಸ್ಯೆಯಲ್ಲ ದಿದ್ದರೂ ರಾಹುವು ಸೂರ್ಯನನ್ನು ನುಂಗಿಬಿಟ್ಟಿದ್ದನ್ನು ನೋಡಿ ಪ್ರಜೆ ಗಳೆಲ್ಲರೂ ಬಹುಭೀತರಾದರು. ನಮ್ಮ ರಥಶಾಲೆ, ಗಜಶಾಲೆ, ಅಶ್ವಶಾಲೆ, ಗೋಶಾಲೆಗಳಿಗೂ ಬೆಂಕಿಯು ಬಿದ್ದಿತು. ರಥಗಳ ಧ್ವಜಗಳು ಕೆಳಗುರುಳಿ ದುವು. ದುರ್ಯೋಧನನ ಅಗ್ನಿಹೋತ್ರಾಗಾರದಲ್ಲಿ ಗುಳ್ಳೇನರಿಗಳು ಭೈರವ ನಿನಾದಗಳನ್ನು ಮಾಡಿದುವು. ಅದಕ್ಕೆ ಪ್ರತಿಯಾಗಿ ಕತ್ತೆಗಳು ನಾಲ್ಕು ದಿಕ್ಕುಗಳಲ್ಲಿಯೂ ಕಿರುಚತೊಡಗಿದುವು. ಅದನ್ನು ಕಂಡು ಭೀಷ್ಮ, ದ್ರೋಣ, ಕೃಪ, ಸೋಮದತ್ತ, ಬಾಹ್ಲಿಕ–ಇವರೆಲ್ಲರೂ ಸಭಾಭವನವನ್ನು ಬಿಟ್ಟು ಹೊರಟರು. ಆಗ ನಾನು ವಿದುರನ ಸಲಹೆಯಂತೆ ದ್ರೌಪದಿಗೆ ಅವಳು ಕೇಳಿದ ವರಗಳನ್ನು ಕೊಡುವುದಾಗಿ ಹೇಳಿದೆನು. ಸಾಧ್ವಿಯಾದ ರಾಜಕುಮಾರಿಯು ತನ್ನ ಗಂಡಂದಿರ ದಾಸ್ಯವಿಮೋಚನೆಯನ್ನು ಮಾಡಬೇಕೆಂದು ಕೇಳಿ ಕೊಂಡಳು. ಆಗ ನಾನು ಅವಳ ಇಚ್ಛೆಯಂತೆಯೇ ಪಾಂಡವರೆಲ್ಲರೂ ತಮ್ಮ-ತಮ್ಮ ಧನುರ್ಬಾಣ-ರಥಗಳೊಡನೆ ಇಂದ್ರಪ್ರಸ್ಥಕ್ಕೆ ಹೋಗಬಹು ದೆಂದು ಅನುಜ್ಞೆಯಿತ್ತೆನು. ಅನಂತರದಲ್ಲಿ ದುರ್ಯೋಧನನ ಮಾತಿನಂತೆ

ನಾನು ಪುನಃ ಅನುದ್ಯೂತಕ್ಕಾಗಿ ಪಾಂಡವರನ್ನು ಕರೆತರಲು ಹೇಳಿದಾಗಲೂ ವಿದುರನು ನನ್ನ ಬಳಿಗೆ ಬಂದು ಹೇಳಿದನು :

"ಮಹಾರಾಜ! ಪುನಃ ಘರ್ಷಣೆಗೆ ಅವಕಾಶವನ್ನೀಯಬೇಡ. ದ್ರೌಪದಿಯನ್ನು ಸಭಾಮಂದಿರಕ್ಕೆ ಸೆಳೆದುತಂದ ಅಪರಾಧವೇ ಭರತವಂಶದವರ ವಿನಾಶಕ್ಕೆ ಸಾಕಷ್ಟು ಕಾರಣವಾಗಿರುವುದು. ಈ ರಾಜಕುಮಾರಿಯು ಸಾಮಾನ್ಯಳೆಂದು ತಿಳಿಯಬೇಡ. ಇವಳು ಸಾಕ್ಷಾತ್ ಶ್ರೀದೇವಿಯೇ ಆಗಿರುವಳು. ಮೇಲಾಗಿ ದೈವಸೃಷ್ಟಳು (ಅಗ್ನಿಯಲ್ಲಿ ಹುಟ್ಟಿದವಳು.) ಪಾಂಡವರ ಧರ್ಮಪತ್ನಿಯು. ಇವಳಿಗೆ ಮಾಡಿರುವ ಅಪರಾಧವನ್ನು ಪಾಂಡುಕುಮಾರರೆಂದಿಗೂ ಕ್ಷಮಿಸಲಾರರು. ವೃಷ್ಣಿಕುಲದರಸರೂ, ಪಾಂಚಾಲರೂ ಈಗ ನೀವು ಮಾಡಿರುವ ಅಪರಾಧವನ್ನು ನೋಡಿಕೊಂಡು ಮೌನದಿಂದ ಕುಳಿತಿರಲಾರರು. ಅರ್ಜುನನು ಶ್ರೀಕೃಷ್ಣನ ಸಹಾಯವನ್ನು ಪಡೆದು ಪಾಂಚಾಲಸೈನ್ಯಸಮೇತನಾಗಿ ಬಂದು ಖಂಡಿತವಾಗಿಯೂ ನಮ್ಮೆಲ್ಲರನ್ನೂ ಧ್ವಂಸಮಾಡಿಬಿಡಬಹುದು. ಭೀಮಸೇನನೂ ಸಾಕ್ಷಾತ್ ಯಮರಾಜನೋಪಾದಿಯಲ್ಲಿ ತನ್ನ ಗದೆಯನ್ನು ಗರ-ಗರನೆ ತಿರುಗಿಸುತ್ತಾ ನಮ್ಮ ಮೇಲೆ ಬಿದ್ದು ತನ್ನ ಪತ್ನಿಗುಂಟಾದ ಅಪಮಾನದ ಸೇಡನ್ನು ತೀರಿಸಿಕೊಳ್ಳುವನು. ಅವನಿಗೆದುರಾಗಿ ಯಾವ ರಾಜರೂ ನಿಂತು ಯುದ್ಧಮಾಡಲಾರರು. ಆದುದರಿಂದ ಪಾಂಡವರೊಡನೆ ವೈಮನಸ್ಯಕ್ಕಿಂತಲೂ ಶಾಂತಿಸಂಧಾನವೇ ಸೂಕ್ತವೆಂದು ನನಗನಿಸುತ್ತದೆ. ಪಾಂಡುಕುಮಾರರು ನಿಶ್ಚಯವಾಗಿಯೂ ಕುರುರಾಜಕುಮಾರರಿಗಿಂತಲೂ ಬಲದಲ್ಲಿ ಶ್ರೇಷ್ಠರು. ಇದರಲ್ಲಾವ ಸಂಶಯವೂ ಇಲ್ಲ. ಪಾಂಡವರ ಪರಾಕ್ರಮವು ಹೆಚ್ಚೆಂಬುದಕ್ಕೆ ಅನೇಕ ದೃಷ್ಟಾಂತಗಳಿವೆ. ನಿರಾಯುಧನಾದ ಭೀಮಸೇನನೊಬ್ಬನೇ, ಲೋಕೈಕವೀರನೆಂದು ಪ್ರಖ್ಯಾತನಾಗಿದ್ದ ಜರಾಸಂಧನನ್ನು ದ್ವಂದ್ವಯುದ್ಧದಲ್ಲಿ ಸಂಹರಿಸಿದನು. ಆದುದರಿಂದ ಪಾಂಡವರೊಡನೆ ಶಾಂತಿಯಿಂದಿರುವುದು ಖಂಡಿತವಾಗಿಯೂ ಸೂಕ್ತವೆನಿಸುವುದು. ಯಾವ ವಿಧವಾದ ಆಲೋಚನೆಯನ್ನೂ ಮಾಡದೇ ಎರಡು ಪಕ್ಷಗಳಿಗೂ ಮೈತ್ರಿಯುಂಟಾಗುವಂತೆ ಏರ್ಪಡಿಸು. ಹೀಗೆ ಮಾಡುವುದರಿಂದ ಮಾತ್ರವೇ ನಿನಗೆ ಶ್ರೇಯಃ-ಪ್ರೇಯಗಳುಂಟಾಗುವುವು."

ಮಹಾಮೇಧಾವಿಯಾದ ವಿದುರನು ಧರ್ಮಾರ್ಥಸಹಿತವಾದ ಈ

ಮಾತನ್ನು ನನಗೆ ತಿಳಿಯಹೇಳಿದನು. ಸಂಜಯ! ಆದರೆ ಪುತ್ರವ್ಯಾಮೋಹದ ಕಾರಣದಿಂದ ನಾನು ಅವನ ಹಿತೋಕ್ತಿಗಳಂತೆ ನಡೆಯಲಿಲ್ಲ. ”

ಅ೮೧ನೆಯ ಅಧ್ಯಾಯವು ಮುಗಿಯಿತು.

ಸಭಾಪರ್ವವು ಮುಗಿಯಿತು.

**ಯದಕ್ಷರಪದಭ್ರಷ್ಟಂ ಮಾತ್ರಾಹೀನಂ ತು ಯದ್ಭವೇತ್ ।**
**ತತ್ಸರ್ವಂ ಕ್ಷಮ್ಯತಾಂ ದೇವ ನಾರಾಯಣ ನಮೋಽಸ್ತು ತೇ ॥**

**ಸ್ವಸ್ತಿ ಪ್ರಜಾಭ್ಯಃ ಪರಿಪಾಲಯನ್ತಾಂ**
**ನ್ಯಾಯ್ಯೇನ ಮಾರ್ಗೇಣ ಮಹೀಂ ಮಹೀಶಾಃ ।**
**ಗೋಬ್ರಾಹ್ಮಣೇಭ್ಯಃ ಶುಭಮಸ್ತು ನಿತ್ಯಂ**
**ಲೋಕಾಃ ಸಮಸ್ತಾಃ ಸುಖಿನೋ ಭವನ್ತು ॥**

**ಕಾಲೇ ವರ್ಷತು ಪರ್ಜನ್ಯಃ ಪೃಥಿವೀ ಸಸ್ಯಶಾಲಿನೀ ।**
**ದೇಶೋಽಯಂ ಕ್ಷೋಭರಹಿತೋ ಬ್ರಾಹ್ಮಣಾಃ ಸನ್ತು ನಿರ್ಭಯಾಃ ॥**

**ಅಪುತ್ರಾಃ ಪುತ್ರಿಣಃ ಸನ್ತು ಪುತ್ರಿಣಃ ಸನ್ತು ಪೌತ್ರಿಣಃ ।**
**ಅಧನಾಃ ಸಧನಾಃ ಸನ್ತು ಜೀವನ್ತು ಶರದಾಂ ಶತಮ್ ॥**

ಹರಿಃ ಓಂ

ಶ್ರೀಕೃಷ್ಣಾರ್ಪಣಮಸ್ತು ಶ್ರೀಸದ್ಗುರುಚರಣಾರವಿನ್ದಾರ್ಪಣಮಸ್ತು

ಓಂ ತತ್ಸತ್



ವನಪರ್ವ

**ಏವಂ ದ್ಯೂತಜಿತಾಃ ಪಾರ್ಥಾಃ ಕೋಪಿತಾಶ್ಚ ದುರಾತ್ಮಭಿಃ ।**
**ಧಾರ್ತರಾಷ್ಟ್ರೈಃ ಸಹಾಮಾತ್ಯೈರ್ನಿಕೃತ್ಯಾ ದ್ವಿಜಸತ್ತಮ ॥೧॥**

✳✳✳✳✳✳✳✳✳✳✳✳✳✳✳✳✳✳✳✳✳✳✳✳✳✳✳✳✳✳✳

# ಮಹಾಭಾರತದ ಪ್ರಶಂಸೆ

---

ಭಾರತಾಧ್ಯಯನಂ ಪುಣ್ಯಮಪಿ ಪಾದಮಧೀಯತಃ ।
ಶ್ರದ್ದಧಾನಸ್ಯ ಪೂಯನ್ತೇ ಸರ್ವಪಾಪಾನ್ಯಶೇಷತಃ ॥

ದೇವಾ ದೇವರ್ಷಯೋ ಹ್ಯತ್ರ ತಥಾ ಬ್ರಹ್ಮರ್ಷಯೋಽಮಲಾಃ ।
ಕೀರ್ತ್ಯನ್ತೇ ಶುಭಕರ್ಮಾಣಸ್ತಥಾ ಯಕ್ಷಾ ಮಹೋರಗಾಃ ॥

ಭಗವಾನ್ವಾಸುದೇವಶ್ಚ ಕೀರ್ತ್ಯತೇಽತ್ರ ಸನಾತನಃ ।
ಸ ಹಿ ಸತ್ಯಮೃತಂ ಚೈವ ಪವಿತ್ರಂ ಪುಣ್ಯಮೇವ ಚ ॥

ಶಾಶ್ವತಂ ಬ್ರಹ್ಮ ಪರಮಂ ಧ್ರುವಂ ಜ್ಯೋತಿಃ ಸನಾತನಮ್ ।
ಯಸ್ಯ ದಿವ್ಯಾನಿ ಕರ್ಮಾಣಿ ಕಥಯನ್ತಿ ಮನೀಷಿಣಃ ॥

ಏಕತಶ್ಚತುರೋ ವೇದಾನ್ಭಾರತಂ ಚೈತದೇಕತಃ ।
ಪುರಾ ಕಿಲ ಸುರೈಃ ಸರ್ವೈಃ ಸಮೇತ್ಯ ತುಲಯಾ ಧೃತಮ್ ॥

ಚತುರ್ಭ್ಯಃ ಸರಹಸ್ಯೇಭ್ಯೋ ವೇದೇಭ್ಯೋ ಹ್ಯಧಿಕಂ ಯದಾ ।
ತದಾ ಪ್ರಭೃತಿ ಲೋಕೇಽಸ್ಮಿನ್ಮಹಾಭಾರತಮುಚ್ಯತೇ ॥

ಮಹತ್ತ್ವಾದ್ಭಾರವತ್ತ್ವಾಚ್ಚ ಮಹಾಭಾರತಮುಚ್ಯತೇ ।
ನಿರುಕ್ತಮಸ್ಯ ಯೋ ವೇದ ಸರ್ವಪಾಪೈಃ ಪ್ರಮುಚ್ಯತೇ ॥

–ಆದಿಪರ್ವ ; ಮೊದಲನೆಯ ಅಧ್ಯಾಯ

✳✳✳✳✳✳✳✳✳✳✳✳✳✳✳✳✳✳✳✳✳✳✳✳✳✳✳✳✳✳✳✳

ಶ್ರೀಮಹಾಗಣಪತಯೇ ನಮಃ   ಶ್ರೀಮಹಾಸರಸ್ವತ್ಯೈ ನಮಃ   ಶ್ರೀಸದ್ಗುರವೇ ನಮಃ



ನಾರಾಯಣಂ ನಮಸ್ಕೃತ್ಯ ನರಂ ಚೈವ ನರೋತ್ತಮಮ್ ।
ದೇವೀಂ ಸರಸ್ವತೀಂ ಚೈವ ತತೋ ಜಯಮುದೀರಯೇತ್ ॥

# ವನಪರ್ವ

೧ನೆಯ ಅಧ್ಯಾಯ                                    ಅರಣ್ಯಪರ್ವ

## ಪಾಂಡವರ ವನವಾಸ : ಪಟ್ಟಣಿಗರು ಪಾಂಡವರನ್ನು ಅನುಸರಿಸಿ ಹೊರಟುದು : ಯುಧಿಷ್ಠಿರನ ಅನುರೋಧ : ಪಟ್ಟಣಿಗರು ಹಿಂದಿರುಗಿದುದು : ಪ್ರಮಾಣಕೋಟಿಯಲ್ಲಿ ಪಾಂಡವರು ಮೊದಲನೆಯ ರಾತ್ರಿಯನ್ನು ಕಳೆದುದು

ಅಂದಿನ ಯಜ್ಞಕ್ರಿಯೆಗಳೆಲ್ಲವೂ ಮುಗಿದನಂತರ ಮಹಾಭಾರತದ ಇತಿಹಾಸವನ್ನು ಹೇಳಲು ಕುಳಿತಿದ್ದ ಮಹರ್ಷಿಗಳಾದ ವೈಶಂಪಾಯನರನ್ನು ಜನಮೇಜಯರಾಜನು ಕೇಳಿದನು :

**ಏವಂ ದ್ಯೂತಜಿತಾಃ ಪಾರ್ಥಾಃ ಕೋಪಿತಾಶ್ಚ ದುರಾತ್ಮಭಿಃ ।**
**ಧಾರ್ತರಾಷ್ಟ್ರೈಃ ಸಹಾಮಾತ್ಯೈರ್ನಿಕೃತ್ಯಾ ದ್ವಿಜಸತ್ತಮ ॥೧॥**

“ದ್ವಿಜಸತ್ತಮರೇ! ಧೃತರಾಷ್ಟ್ರನ ಮಕ್ಕಳಿಂದಲೂ ಮತ್ತು ಅವರ ದುರ್ಮಂತ್ರಿಗಳಿಂದಲೂ ಮೋಸದ ಪಗಡೆಯಾಟದಲ್ಲಿ ಸೋಲಿಸಲ್ಪಟ್ಟ, ಪರಮದ್ವೇಷವನ್ನು ಉತ್ಪತ್ತಿಮಾಡುವ ಆಶಯವುಳ್ಳವರಿಂದ ಅತಿಕ್ರೂರವಾದ ಮಾತುಗಳನ್ನು ಕೇಳಿ ಕೋಪಗೊಂಡ, ನನ್ನ ಪೂರ್ವಜರಾದ ಪಾರ್ಥರು ಮುಂದೇನು ಮಾಡಿದರು? ಇಂದ್ರನಿಗೆ ಸಮಾನವಾದ ಪರಾಕ್ರಮವುಳ್ಳ ಅವರು ಸಕಲೈಶ್ವರ್ಯವನ್ನೂ ತೊರೆದು ಒಡನೆಯೇ ದುಃಖವನ್ನು ಹೊಂದಿ ಹನ್ನೆರಡು ವರ್ಷಗಳ ಪರ್ಯಂತವಾಗಿ ಅರಣ್ಯದಲ್ಲಿ ಹೇಗೆ ಕಾಲಕಳೆದರು? ಅತಿದುಃಖಿತ ರಾದ ಅವರನ್ನು ಯಾರು ಯಾರು ಅನುಸರಿಸಿ ಹೊರಟರು? ಅರಣ್ಯವಾಸದ ಕಾಲದಲ್ಲಿ ಅವರ ಆಚಾರ-ವಿಚಾರಗಳು, ಆಹಾರ-ವಿಹಾರಾದಿಗಳು ಹೇಗಿ

ದ್ದುವು? ಶತ್ರುನಾಶಕರಾದ, ಶೂರರಾದ ಪಾಂಡವರು ಕಾಡಿನಲ್ಲಿ ಹನ್ನೆರಡು ವರ್ಷಗಳನ್ನು ಹೇಗೆ ಕಳೆದರು? ಸ್ತ್ರೀಯರಲ್ಲಿ ತಿಲಕಪ್ರಾಯಳಾದ, ಮಹಾ ಪತಿವ್ರತೆಯಾದ, ಸತ್ಯವ್ರತೆಯಾದ, ವನವಾಸಕ್ಕೆ ಅನರ್ಹಳಾದ, ಪಿತಾಮಹಿ ಯಾದ ದ್ರೌಪದಿಯು ಆ ವನವಾಸದ ದಾರುಣದುಃಖವನ್ನು ಹೇಗೆ ಅನುಭವಿ



ಸಿದಳು? ಮಹಾಪರಾಕ್ರಮಿಗಳಾದ ಮತ್ತು ದೇಹದ ಕಾಂತಿಯಿಂದಲೂ, ತೇಜಸ್ಸಿನಿಂದಲೂ ಪ್ರಕಾಶಿಸುತ್ತಿದ್ದ ನನ್ನ ತಾತಂದಿರ ಸುಚರಿತಗಳನ್ನು ಕೇಳಲು ಉತ್ಸುಕನಾಗಿದ್ದೇನೆ. ಬ್ರಾಹ್ಮಣೋತ್ತಮರೇ! ನೀವು ಕಥೆಯನ್ನು ಹೇಳು ತ್ತಿದ್ದಂತೆಲ್ಲಾ ನನಗೆ ಮತ್ತೂ ಕೇಳಬೇಕೆನ್ನುವ ಕೌತೂಹಲವು ಹೆಚ್ಚುತ್ತಿದೆ. ಆದುದರಿಂದ ದಯಮಾಡಿ ಎಲ್ಲವನ್ನೂ ವಿವರವಾಗಿ ಹೇಳಿರಿ."

"ಜನಮೇಜಯ! ಪಗಡೆಯಾಟದಲ್ಲಿ ಸೋತು, ಧೃತರಾಷ್ಟ್ರನ ಮಕ್ಕಳ ಮತ್ತು ದುರ್ಮಂತ್ರಿಗಳ ಕರ್ಣಕಠೋರವಾದ ಮಾತುಗಳನ್ನು ಕೇಳಿ ಕುಪಿತರಾದ ಪಾಂಡವರು ಹಸ್ತಿನಾಪಟ್ಟಣವನ್ನು ಬಿಟ್ಟು ಹೊರಟರು. ವರ್ಧಮಾನವೆಂಬ ಹೆಬ್ಬಾಗಿಲಿನಿಂದ ಹೊರಕ್ಕೆ ಬಂದು ಆಯುಧಪಾಣಿಗಳಾಗಿ ದ್ರೌಪದಿಯೊಡನೆ ಉತ್ತರದಿಕ್ಕಿನ ಕಡೆಗೆ ತಿರುಗಿದರು. ಇಂದ್ರಸೇನನೇ ಮೊದಲಾದ ಹದಿನಾಲ್ಕು ಮಂದಿ ನಿಷ್ಠಾವಂತರಾದ ಸೇವಕರು ತಮ್ಮ ತಮ್ಮ ಪತ್ನಿಯರೊಡನೆ ರಥಗಳಲ್ಲಿ ಕುಳಿತು ಪಾಂಡವರನ್ನು ಅನುಸರಿಸಿ ಹೊರಟರು. ಪಾಂಡವರ ಪ್ರಸ್ಥಾನವನ್ನು ತಿಳಿದ ಪಟ್ಟಣಿಗರು ಅತಿದುಃಖಿತರಾಗಿ ಭೀಷ್ಮ-ದ್ರೋಣ-ವಿದುರ-ಕೃಪರನ್ನು ಬಹುವಾಗಿ ತೆಗಳಿದರು. ಅಷ್ಟುಮಾತ್ರದಿಂದಲೇ ಅವರ ದುಃಖವು 'ಡಿಮೆಯಾಗಲಿಲ್ಲ. ಪಾಂಡವರ ವನವಾಸಕ್ಕೆ ಕಾರಣ ಮತ್ತು ಆ ಸಮಯದಲ್ಲಿ ತಮ್ಮ ಕರ್ತವ್ಯ–ಇವೆಲ್ಲವನ್ನೂ ಭಯವಿಲ್ಲದೆ ಕೂಲಂಕಷವಾಗಿ ತರ್ಕಿಸತೊಡಗಿದರು :

"ಅಯ್ಯೋ! ದುರ್ಮಂತ್ರಿಗಳಾದ ಕರ್ಣ-ಶಕುನಿ-ದುಃಶಾಸನರೊಡನೆ ದುರ್ಯೋಧನನು ರಾಜ್ಯವನ್ನಾಳಲು ಪ್ರಾರಂಭಿಸಿದನೆಂದರೆ, ನಮ್ಮ ಸಂಸಾರ, ನಮ್ಮ ಮನೆ-ಮಠಗಳು, ನಮ್ಮ ಆಚಾರ-ವಿಚಾರಗಳು, ಧರ್ಮಾರ್ಥಗಳು–ಎಲ್ಲವೂ ಹಾಳಾದಂತೆಯೇ ಸರಿ. ಸುಖವೆಂಬುದು ಸ್ವಪ್ನದಲ್ಲಿಯೂ ಲಭಿಸುವುದಿಲ್ಲ. ದುರ್ಯೋಧನನ ದುರ್ಗುಣಗಳು ಒಂದೆರಡಲ್ಲ.

**ದುರ್ಯೋಧನೋ ಗುರುದ್ವೇಷೀ ತ್ಯಕ್ತಾಚಾರಸುಹೃಜ್ಜನಃ ।**
**ಅರ್ಥಲುಬ್ಧೋಽಭಿಮಾನೀ ಚ ನೀಚಃ ಪ್ರಕೃತಿನಿರ್ಘೃಣಃ ॥೧೬॥**

ದುರ್ಯೋಧನನು ಗುರುಜನರನ್ನೇ ದ್ವೇಷಿಸುವವನು. ಅವನ ಗೆಳೆಯರೂ ಸದಾಚಾರವಿಹೀನರು. ದುರ್ಯೋಧನನು ಯಾವಾಗಲೂ ಅರ್ಥಾಪೇಕ್ಷಿಯು. ದುರಭಿಮಾನಿಯು. ನೀಚಕಾರ್ಯದಲ್ಲಿಯೇ ಹೆಚ್ಚಿನ ಆಸಕ್ತಿಯುಳ್ಳವನು. ಸ್ವಭಾವತಃ ನಿರ್ದಯನು. ಇಂತಹವನು ರಾಜ್ಯಪಾಲನಾದನೆಂದರೆ ನಿಶ್ಚಯವಾಗಿಯೂ ಈ ಪ್ರಪಂಚವೇ ಹಾಳಾಗುತ್ತದೆ. ಆದುದರಿಂದ ನಾವೀರಾಜ್ಯದಲ್ಲಿ ಒಂದು ಕ್ಷಣವಾದರೂ ನಿಲ್ಲುವುದು ಉಚಿತವೆನಿಸುವುದಿಲ್ಲ. ಪಾಂಡವರಾದರೋ ಸಕಲಸದ್ಗುಣಸಂಪನ್ನರಾಗಿದ್ದಾರೆ.

**ಸಾನುಕ್ರೋಶಾ ಮಹಾತ್ಮಾನೋ ವಿಜಿತೇನ್ದ್ರಿಯಶತ್ರವಃ ।**
**ಹ್ರೀಮನ್ತಃ ಕೀರ್ತಿಮನ್ತಶ್ಚ ಧರ್ಮಾಚಾರಪರಾಯಣಾಃ ॥೧೮॥**

ಪಾಂಡವರು ಅನುಕಂಪವುಳ್ಳವರು ; ಮಹಾತ್ಮರು ; ಜಿತೇಂದ್ರಿಯರು; ಜಿತಶತ್ರುಗಳು ( ಶತ್ರುಗಳಾದ ಇಂದ್ರಿಯಗಳನ್ನು ಜಯಿಸಿರತಕ್ಕವರು ) ;



ಪಾಪಕರ್ಮಮಾಡಲು ನಾಚಿಕೆಪಡುವವರು ; ಕೀರ್ತಿಮಂತರು ಮತ್ತು ಧರ್ಮಾಚಾರಪರಾಯಣರು. ಇಂತಹ ಪಾಂಡವರ ಜೊತೆಯಲ್ಲೇ ಹೊರಟು ಹೋಗೋಣ."

ನೆರೆದಿದ್ದ ಜನಸ್ತೋಮವು ಏಕಕಂಠದಿಂದ 'ತಥಾಸ್ತು' ಎಂದು ಘೋಷಿಸಿತು.

ಸಾಲು-ಸಾಲಾಗಿ ಪ್ರಜೆಗಳೆಲ್ಲರೂ ಪಾಂಡವರನ್ನೇ ಅನುಸರಿಸಿ ಹೊರಟು ಸ್ವಲ್ಪ ಹೊತ್ತಿನಲ್ಲಿಯೇ ಅವರನ್ನು ಸಂಧಿಸಿ ಕೈಜೋಡಿಸಿ ನಮಿಸುತ್ತಾ ಹೇಳತೊಡಗಿದರು :

"ರಾಜಕುಮಾರರೇ! ನಿಮಗೆ ಮಂಗಳವಾಗಲಿ. ನಮ್ಮೆಲ್ಲರನ್ನೂ ಪರಿತ್ಯಜಿಸಿ ನೀವೆಲ್ಲಿಗೆ ಹೋಗುತ್ತಿದ್ದೀರಿ? ನೀವೆಲ್ಲಿಗೆ ಹೋದರೂ ನಾವು ನಿಮ್ಮನ್ನೇ ಹಿಂಬಾಲಿಸಿ ಬರುವೆವು. ಮೋಸದ ಪಗಡೆಯಾಟದಲ್ಲಿ ನೀವು ನಿಮ್ಮ ಶತ್ರುಗಳಿಂದ ಪರಾಜಿತರಾದಿರೆಂದು ತಿಳಿದು ನಾವೆಲ್ಲರೂ ಬಹಳ ದುಃಖಿತರಾದೆವು. ನಿಮ್ಮ ಅಗಲುವಿಕೆಯಿಂದ ನಾವು ಬಹಳ ಉದ್ವಿಗ್ನರಾಗಿದ್ದೇವೆ. ನಮ್ಮನ್ನು ಬಿಟ್ಟು ನೀವು ಮಾತ್ರ ಅರಣ್ಯಕ್ಕೆ ಹೋಗುವುದು ಖಂಡಿತವಾಗಿಯೂ ಯುಕ್ತವಲ್ಲ. ನಾವು ನಿಮ್ಮ ಭಕ್ತರಾಗಿದ್ದೇವೆ. ಮಿತ್ರರಾಗಿದ್ದೇವೆ. ಸದಾ ನಿಮ್ಮ ಹಿತಚಿಂತನೆಯಲ್ಲಿಯೇ ಆಸಕ್ತರಾಗಿದ್ದೇವೆ. ಇಂತಹವರನ್ನು ಬಿಟ್ಟು ಹೊರಡುವುದು ನಿಮ್ಮಂತಹ ಧರ್ಮಾತ್ಮರಿಗೆ ಉಚಿತವೇ? ಯುಧಿಷ್ಠಿರ! ದುರ್ಯೋಧನನಿಂದ ಪರಿಪಾಲಿಸಲ್ಪಡುವ ರಾಜ್ಯದಲ್ಲಿ ನಾವು ಒಂದು ಕ್ಷಣಮಾತ್ರವೂ ಇದ್ದು ನಾಶಹೊಂದಲಾರೆವು. 'ದುಷ್ಟರಿಂದ ಪರಿಪಾಲಿಸಲ್ಪಡುವ ರಾಜ್ಯದಲ್ಲಿ ಏಕೆ ಇರಬಾರದು? ಅಂತಹ ದೇಶದಲ್ಲಿ ವಾಸಮಾಡುವುದರಿಂದುಂಟಾಗುವ ದುಷ್ಫಲಗಳೇನು?'– ಎಂಬುದನ್ನು ವಿವರಿಸಿ ಹೇಳುವೆವು ಕೇಳು, ಧರ್ಮಜ!

**ವಸ್ತ್ರಮಾಪಸ್ತಿಲಾನ್ಭೂಮಿಂ ಗನ್ಧೋ ವಾಸಯತೇ ಯಥಾ ।**
**ಪುಷ್ಪಾಣಾಮಧಿವಾಸೇನ ತಥಾ ಸಂಸರ್ಗಜಾ ಗುಣಾಃ ॥೨೪॥**

ಬಟ್ಟೆ, ನೀರು, ಎಳ್ಳು (ಎಣ್ಣೆ), ಭೂಮಿ–ಇವುಗಳು ಪುಷ್ಪಗಳ ಸಂಪರ್ಕದಿಂದ ಆಯಾ ಪುಷ್ಪಗಳ ವಾಸನೆಯನ್ನು ಪಡೆಯುವಂತೆ–ಒಬ್ಬ ಮನುಷ್ಯನು ತಾನು ಮಾಡುವ ಸಂಸರ್ಗದಿಂದ ಸಂಸರ್ಗೀಯ ಗುಣ-ದೋಷಗಳನ್ನೇ ಹೊಂದುತ್ತಾನೆ. ಗುಣಗಳು ಯಾವಾಗಲೂ ಸಂಸರ್ಗದಿಂದ ಉತ್ಪನ್ನವಾಗುತ್ತವೆ.

**ಮೋಹಜಾಲಸ್ಯ ಯೋನಿರ್ಹಿ ಮೂಢೈರೇವ ಸಮಾಗಮಃ ।**
**ಅಹನ್ಯಹನಿ ಧರ್ಮಸ್ಯ ಯೋನಿಃ ಸಾಧುಸಮಾಗಮಃ ॥೨೫॥**

ಮೂಢರ ಸಮಾಗಮವು ಮದ-ಮೋಹಗಳಿಗೆ ಉತ್ಪತ್ತಿಸ್ಥಾನವಾಗಿರುತ್ತದೆ. ಸಾಧು-ಸತ್ಪುರುಷರ ಸಮಾಗಮವು ಸದ್ಧರ್ಮವರ್ತನೆಗೆ ಉಗಮಸ್ಥಾನವಾಗಿರುತ್ತದೆ.

**ತಸ್ಮಾತ್ಪ್ರಾಜ್ಞೈಶ್ಚ ವೃದ್ಧೈಶ್ಚ ಸುಸ್ವಭಾವೈಸ್ತಪಸ್ವಿಭಿಃ ।**
**ಸದ್ಭಿಶ್ಚ ಸಹ ಸಂಸರ್ಗಃ ಕಾರ್ಯಃ ಶಮಪರಾಯಣೈಃ ॥೨೬॥**

**ಯೇಷಾಂ ತ್ರೀಣ್ಯವದಾತಾನಿ ವಿದ್ಯಾ ಯೋನಿಶ್ಚ ಕರ್ಮ ಚ ।**
**ತೇ ಸೇವ್ಯಾಸ್ತೈಃ ಸಮಾಸ್ಯಾ ಹಿ ಶಾಸ್ತ್ರೇಭ್ಯೋಽಪಿ ಗರೀಯಸೀ ॥೨೭॥**

ಆದುದರಿಂದ ಪ್ರಾಜ್ಞರಾಗಿಯೂ, ವಯೋವೃದ್ಧರಾಗಿಯೂ, ಸುಸ್ವಭಾವವುಳ್ಳವರಾಗಿಯೂ, ತಪಸ್ವಿಗಳಾಗಿಯೂ, ಸಭ್ಯರಾಗಿಯೂ, ಶ್ರಮಪರಾಯಣರಾಗಿಯೂ ಇರುವವರೊಡನೆ ಸಹವಾಸಮಾಡುವುದು ಶ್ರೇಯಸ್ಕರವಾಗಿದೆ. ವೇದ-ವೇದಾಂಗಪಾರಂಗತರಾದವರ, ಸತ್ಕುಲಪ್ರಸೂತರ ಮತ್ತು ಸದಾಚಾರವುಳ್ಳವರ ಸೇವೆಯನ್ನು ಮಾಡಬೇಕು. ಈ ಮೂರು ಗುಣಗಳಿಂದ ವಿರಾಜಿಸುವ ಮಹಾತ್ಮರ ಸಹವಾಸವು ಶಾಸ್ತ್ರಾಧ್ಯಯನಕ್ಕಿಂತಲೂ ಉತ್ತಮವಾದ ಜ್ಞಾನವನ್ನು ಕೊಡುತ್ತದೆ.

**ನಿರಾರಮ್ಭಾ ಹ್ಯಪಿ ವಯಂ ಪುಣ್ಯಶೀಲೇಷು ಸಾಧುಷು ।**
**ಪುಣ್ಯಮೇವಾಪ್ನುಯಾಮೇಹ ಪಾಪಂ ಪಾಪೋಪಸೇವನಾತ್ ॥೨೮॥**

ನಾವು ಅಗ್ನಿಹೋತ್ರಾದಿಗಳನ್ನು ಮಾಡದಿದ್ದರೂ ಮೇಲೆ ಹೇಳಿದಂತೆ ಪುಣ್ಯಶೀಲರಾದ ಸತ್ಪುರುಷರ ಸಹವಾಸದಿಂದ ಉತ್ತಮಗತಿಯನ್ನೇ ಪಡೆಯುತ್ತೇವೆ. ಪುಣ್ಯವಂತರಾಗುತ್ತೇವೆ. ಹಾಗಲ್ಲದೇ ಪಾಪಾತ್ಮರ ಸೇವೆಯಲ್ಲಿಯೇ ಇದ್ದರೆ ನಾವೆಲ್ಲರೂ ಪಾಪಿಷ್ಠರೇ ಆಗುತ್ತೇವೆ.

**ಅಸತಾಂ ದರ್ಶನಾತ್ಸ್ಪರ್ಶಾತ್ಸಂಜಲ್ಪಾಚ್ಚ ಸಹಾಸನಾತ್ ।**
**ಧರ್ಮಾಚಾರಾಃ ಪ್ರಹೀಯನ್ತೇ ಸಿದ್ಧ್ಯನ್ತಿ ಚ ನ ಮಾನವಾಃ ॥೨೯॥**

**ಬುದ್ಧಿಶ್ಚ ಹೀಯತೇ ಪುಂಸಾಂ ನೀಚೈಃ ಸಹ ಸಮಾಗಮಾತ್ ।**
**ಮಧ್ಯಮೈರ್ಮಧ್ಯತಾಂ ಯಾತಿ ಶ್ರೇಷ್ಠತಾಂ ಯಾತಿ ಚೋತ್ತಮೈಃ ॥೩೦॥**

ಯುಧಿಷ್ಠಿರ! ಅಸತ್ಪುರುಷರ ದರ್ಶನ, ಸ್ಪರ್ಶ, ಅವರೊಡನೆ ಸಂಭಾಷಣೆ ಮತ್ತು ಅವರೊಡನೆ ಕುಳಿತುಕೊಳ್ಳುವಿಕೆ–ಇವುಗಳಿಂದ ಧರ್ಮದ

ಲೋಪವುಂಟಾಗುತ್ತದೆ. ಮನಶ್ಶುದ್ಧಿಯಿಲ್ಲದೇ ಯಾವ ವಿಧವಾದ ಸಾಧನೆಯೂ ಸಿದ್ಧಿಸುವುದಿಲ್ಲ. ನೀಚರ ಸಮಾಗಮದಿಂದ ಬುದ್ಧಿವಿಕಾರವುಂಟಾಗುತ್ತದೆ. ನೀಚರೂ ಅಲ್ಲದ, ಸತ್ಪುರುಷರೂ ಅಲ್ಲದ ಮಧ್ಯವರ್ತಿಗಳಾದ ಜನರೊಡನೆ ಮಾಡುವ ಸಮಾಗಮದಿಂದ ಯಾವ ವಿಧವಾದ ನಿಶ್ಚಯಜ್ಞಾನವೂ ಲಭಿಸದೇ ಮನಸ್ಸು ಡೋಲಾಯಮಾನವಾಗುತ್ತದೆ. ಸತ್ಪುರುಷರಾದ, ಕಾಮಿಗಳಲ್ಲದವರ ಮತ್ತು ಧರ್ಮಿಷ್ಠರಾದ ಉತ್ತಮರ ಸಹವಾಸದಿಂದ ಬುದ್ಧಿಯು ಶ್ರೇಷ್ಠತ್ವವನ್ನು ಎಂದರೆ ವಿಕಾಸವನ್ನು ಪಡೆಯುತ್ತದೆ. ಧರ್ಮ-ಕಾಮಾರ್ಥಸಾಧನೆಗಳಿಗೆ ಯಾವ ಯಾವ ಸದ್ಗುಣಗಳಿರಬೇಕೆಂದು ಹೇಳಲ್ಪಟ್ಟಿವೆಯೋ ಅಂತಹ ದೇಶಾಚಾರ ಮತ್ತು ವೇದೋಕ್ತ ವಿಷಯಗಳಿಗೆ ಅನುಗುಣವಾದ ಸಕಲಸದ್ಗುಣಗಳೂ ನಿಮ್ಮಲ್ಲಿ ಸಮಷ್ಟಿರೂಪದಲ್ಲಿಯೂ, ಪ್ರತ್ಯೇಕವಾಗಿಯೂ ಮೂರ್ತಿಮತ್ತಾಗಿ ನೆಲೆಸಿವೆ. ಈ ಕಾರಣಗಳಿಂದ ನಮ್ಮ ಉದ್ಧಾರಕ್ಕೋಸ್ಕರ ಸಕಲಸದ್ಗುಣಸಂಪನ್ನರಾದ ನಿಮ್ಮ ಸಹವಾಸದಲ್ಲಿರಲು ಇಚ್ಛಿಸಿ ನಾವು ಬಂದಿರುತ್ತೇವೆ.”

ಯುಧಿಷ್ಠಿರನು ಹೇಳುತ್ತಾನೆ :

“ಪ್ರಜೆಗಳೇ! ನಾವು ನಿಶ್ಚಯವಾಗಿಯೂ ಧನ್ಯರು. ಸ್ನೇಹ-ಕಾರುಣ್ಯಯುಕ್ತರಾದ ನೀವು ಬ್ರಾಹ್ಮಣಪ್ರಮುಖರಾಗಿ ಬಂದು ನಮ್ಮಲ್ಲಿ ಹೆಚ್ಚಿನ ಗುಣಗಳಿಲ್ಲದಿದ್ದರೂ ಬಹುಗುಣವಂತರೆಂದು ಶ್ಲಾಘಿಸುತ್ತಿರುವಿರಿ. ನಿಮ್ಮ ಕಾರುಣ್ಯಯುಕ್ತವಾದ ಸ್ನೇಹಕ್ಕೆ ನಾನು ಕೃತಜ್ಞನಾಗಿರುವೆನು. ನನ್ನ ಅನುಜರಿಂದೊಡಗೂಡಿ ವಿಶ್ವಾಸಿಗಳಾದ ನಿಮಗೆ ಒಂದು ವಿಷಯವನ್ನು ಹೇಳಲಿಚ್ಛಿಸುವೆನು. ನೀವು ಅದರಂತೆ ನಡೆಯಲೇಬೇಕು. ನಮ್ಮ ಮೇಲಿನ ಕರುಣೆಯಿಂದಾದರೂ ನನ್ನ ಮಾತನ್ನು ನಡೆಸಿಕೊಡಬೇಕು. ಇತರರ ಮೇಲಿನ ಕೋಪದಿಂದ ನೀವು ನಾನು ಹೇಳಲಿರುವುದನ್ನು ಮೀರಿ ನಡೆಯಬಾರದು. ನಮ್ಮ ಅಜ್ಜನಾದ ಭೀಷ್ಮ, ಧೃತರಾಷ್ಟ್ರ, ವಿದುರ, ನಮ್ಮ ತಾಯಿಯಾದ ಕುಂತಿ ಮತ್ತು ಹಿತೈಷಿಗಳಾದ ಇನ್ನೂ ಅನೇಕಜನರು ಹಸ್ತಿನಾಪುರದಲ್ಲಿ ಉಳಿದಿರುತ್ತಾರೆ. ನಮಗೆ ಹಿತವನ್ನುಂಟುಮಾಡಬೇಕೆನ್ನುವ ಅಭಿಲಾಷೆಯಿದ್ದಲ್ಲಿ ಈಗಲೇ ನೀವು ಹಿಂದಿರುಗಿ ಹೋಗಿ, ನಮ್ಮ ಅಗಲುವಿಕೆಯಿಂದ ಪರಿತಪಿಸುತ್ತಿರುವ ಅವರೆಲ್ಲರನ್ನೂ ಸಂತೈಸಿರಿ. ನೀವೆಲ್ಲರೂ ಸೇರಿ ಅವರಿಗೆ

ಯಾವ ವಿಧವಾದ ಅಪಾಯವೂ ಉಂಟಾಗದ ರೀತಿಯಲ್ಲಿ ಅವರನ್ನು ರಕ್ಷಿಸಿರಿ. ನಮ್ಮ ಅರಣ್ಯವಾಸದ ವಾರ್ತೆಯನ್ನು ಕೇಳಿ ದುಃಖಿತರಾಗಿರುವ ನೀವು ಬಹುದೂರದವರೆಗೆ ಬಂದುಬಿಟ್ಟಿರುವಿರಿ. ದಯೆಯಿಟ್ಟು ನೀವೆಲ್ಲರೂ ಹಿಂದಿರುಗಿರಿ. ಮುಂದೆ ನಿಮ್ಮನ್ನು ಬಂದು ಸೇರುವೆವೆಂದು ಶಪಥಮಾಡಿ ಹೇಳುತ್ತೇವೆ. ನೀವು ನಮ್ಮ ಮೇಲಿಟ್ಟಿರುವ ಸ್ನೇಹವು–ನಾನು ರಕ್ಷಿಸಬೇಕೆಂದು ನಿಮಗೊಪ್ಪಿಸಿರುವ ನಮ್ಮ ಬಂಧುಗಳ ಕಡೆಗಿರಲಿ. ನಮ್ಮ ಬಂಧುಗಳು ಸುರಕ್ಷಿತರಾಗಿರಬೇಕೆಂದು ನನ್ನ ಹೃದಯವು ತವಕಿಸುತ್ತಿದೆ. ಇದೇ ನನಗೆ ಶ್ರೇಷ್ಠವಾದ ಕಾರ್ಯ. ಅವರ ರಕ್ಷಣೆಯ ಭಾರವನ್ನು ನೀವು ವಹಿಸಿಕೊಂಡಲ್ಲಿ ನಾನು ಸಂತುಷ್ಟನಾಗುತ್ತೇನೆ. ಹಾಗೂ ಈ ಕಾರ್ಯವನ್ನು ಮಾಡಿದರೆ ನಮ್ಮನ್ನು ನೀವು ಸತ್ಕರಿಸಿದಂತೆಯೂ ಆಗುತ್ತದೆ.”

ಪ್ರಜೆಗಳು ಯುಧಿಷ್ಠಿರನ ಮಾತಿಗೆ ಏನೆಂದು ತಾನೇ ಉತ್ತರ ಕೊಟ್ಟಾರು? ಹಸ್ತಿನೆಗೆ ಹಿಂದಿರುಗಬೇಕಾಯಿತು. ಯುಧಿಷ್ಠಿರನನ್ನು ಬಿಟ್ಟು ಹೋಗಲಾರದೇ ಎಲ್ಲರೂ 'ಅಯ್ಯೋ' ಎಂದು ಆರ್ತನಾದಗಳನ್ನು ಮಾಡಿದರು. ಧರ್ಮರಾಜನ ಗುಣಗಳನ್ನು ಸ್ಮರಿಸಿ ಕಣ್ಣೀರುಸುರಿಸುತ್ತಾ ಇಷ್ಟವಿಲ್ಲದೆಯೇ ಕಟ್ಟಕಡೆಗೆ ಯುಧಿಷ್ಠಿರನ ಅನುಮತಿಯನ್ನು ಪಡೆದು ಪೌರರೆಲ್ಲರೂ ಹಸ್ತಿನೆಗೆ ಹಿಂದಿರುಗಿದರು.

ಪಟ್ಟಣಿಗರು ಹೊರಟುಹೋದನಂತರ ಪಾಂಡವರೆಲ್ಲರೂ ತಮ್ಮ ತಮ್ಮ ರಥಗಳಲ್ಲಿ ಕುಳಿತು ಮುಂದೆ ಹೊರಟರು. ಸಾಯಂಕಾಲದ ವೇಳೆಗೆ ಗಂಗಾತೀರದಲ್ಲಿದ್ದ ಪ್ರಮಾಣಕೋಟಿಯೆಂಬ ದೊಡ್ಡ ಆಲದಮರದ ಸಮೀಪವನ್ನು ತಲುಪಿದರು. ಪವಿತ್ರತಮಳಾದ ಭಾಗೀರಥಿಯಲ್ಲಿ ಸಾಯಂಸಂಧ್ಯಾದಿಗಳನ್ನು ಮುಗಿಸಿದರು. ದುಃಖಿತರಾಗಿದ್ದ ಅವರಿಗೆ ಆಹಾರವೇನೂ ಬೇಡವಾಯಿತು. ಕೇವಲ ಒಂದೆರಡು ಗುಟುಕು ನೀರು ಕುಡಿದು ಆ ರಾತ್ರಿಯನ್ನು ಕಳೆದರು.

ಪಾಂಡವರನ್ನು ಹಿಂಬಾಲಿಸಿ ಬಂದಿದ್ದ ಪಟ್ಟಣಿಗರೆಲ್ಲರೂ ಹಸ್ತಿನೆಗೆ ಹಿಂದಿರುಗಿದರೂ ಕೆಲವು ಮಂದಿ ಅಗ್ನಿಹೋತ್ರಿಗಳೂ ಮತ್ತು ಅಗ್ನಿಹೋತ್ರಿಗಳಲ್ಲದ ವಿಪ್ರರೂ ತಮ್ಮ ಶಿಷ್ಯರೊಡನೆ ಧರ್ಮಜನನ್ನು ಅನುಸರಿಸಿ ಗಂಗಾ

ತೀರಕ್ಕೂ ಬಂದರು. ಆ ರಾತ್ರಿಯನ್ನು ಪಾಂಡವರೊಡನೆಯೇ ಕಳೆದರು. ಮಹಾತೇಜಸ್ವಿಗಳಾದ ಬ್ರಾಹ್ಮಣರ ಮಧ್ಯದಲ್ಲಿ ಯುಧಿಷ್ಠಿರನು ಅಮಿತವಾದ ಕಾಂತಿಯಿಂದ ಪ್ರಕಾಶಿಸಿದನು. ಸಾಯಂಕಾಲವಾದೊಡನೆಯೇ ರಮಣೀಯವೂ ಮತ್ತು ಭಯಂಕರವೂ ಆಗಿದ್ದ ಆ ಸಮಯದಲ್ಲಿ ಅಗ್ನಿಹೋತ್ರಿಗಳಾದ ಬ್ರಾಹ್ಮಣರು ತಮ್ಮೊಡನೆಯೇ ತಂದಿದ್ದ ಯಜ್ಞೇಶ್ವರನನ್ನು ಪ್ರಜ್ವಲಿಸಿ, ಸುಷ್ಠುವಾದ ಮತ್ತು ಸುಸ್ವರವಾದ ವೇದಮಂತ್ರಗಳನ್ನು ಕಿವಿಗಿಂಪಾಗುವ ರೀತಿಯಲ್ಲಿ ಹೇಳುತ್ತಾ ಯಜ್ಞೇಶ್ವರನಲ್ಲಿ ಹೋಮಮಾಡಿದರು. ಅನಂತರದಲ್ಲಿ ಹಂಸನಾದಕ್ಕೆ ಸಮಾನವಾದ ಕಂಠಧ್ವನಿಯುಳ್ಳ ಆ ಬ್ರಾಹ್ಮಣರು ಅನೇಕ ಶಾಸ್ತ್ರಾರ್ಥಗಳನ್ನು ಧರ್ಮರಾಜನಿಗೆ ಹೇಳುತ್ತಾ ಸಮಾಧಾನಪಡಿಸುತ್ತಾ–ಅವನು ತನ್ನ ದುಃಖವನ್ನು ತಾತ್ಕಾಲಿಕವಾಗಿ ಮರೆಯುವಂತೆ ಮಾಡಿ–ರಾತ್ರಿಯನ್ನು ಕಳೆದರು."

ೞನೆಯ ಅಧ್ಯಾಯವು ಮುಗಿಯಿತು.

೨ನೆಯ ಅಧ್ಯಾಯ ಅರಣ್ಯಪರ್ವ (ಮುಂದುವರಿದಿದೆ.)

## ಧನದ ದೋಷ : ಅತಿಥಿಸತ್ಕಾರದ ಮಹತ್ತ್ವ : ಮಂಗಳಪ್ರಾಪ್ತಿಯ ಉಪಾಯವನ್ನು ಕುರಿತು ಬ್ರಾಹ್ಮಣರು ಮತ್ತು ಶೌನಕರೊಡನೆ ಯುಧಿಷ್ಠಿರನ ಸಮಾಲೋಚನೆ

**ವೈಶಂಪಾಯನರು ಹೇಳುತ್ತಾರೆ :**

**ಪ್ರಭಾತಾಯಾಂ ತು ಶರ್ವರ್ಯಾಂ ತೇಷಾಮಕ್ಲಿಷ್ಟಕರ್ಮಣಾಮ್ ।**
**ವನಂ ಯಿಯಾಸತಾಂ ವಿಪ್ರಾಸ್ತಸ್ಥುರ್ಭಿಕ್ಷಾಭುಜೋಽಗ್ರತಃ ॥೧॥**

"ಜನಮೇಜಯ! ರಾತ್ರಿಯು ಕಳೆದು ಸುಪ್ರಭಾತವಾಯಿತು. ಪಾಂಡವರು ಘೋರಾರಣ್ಯಕ್ಕೆ ಹೋಗಲು ಸಿದ್ಧರಾಗಿ ನಿಂತರು. ಭಿಕ್ಷಾಟನೆಯೇ ವೃತ್ತಿಯಾಗಿ ಉಳ್ಳ ಬ್ರಾಹ್ಮಣರೂ ಪಾಂಡವರ ಮುಂದುಗಡೆ ಪ್ರಯಾಣ ಸನ್ನದ್ಧರಾಗಿ ನಿಂತರು. ಅವರೂ ತಮ್ಮ ಜೊತೆಯಲ್ಲಿ ಹೊರಟಿರುವುದನ್ನು ಕಂಡು ಯುಧಿಷ್ಠಿರನು ಬ್ರಾಹ್ಮಣರನ್ನು ಕುರಿತು ಹೇಳಿದನು :

**ವಯಂ ಹಿ ಹೃತಸರ್ವಸ್ವಾ ಹೃತರಾಜ್ಯಾ ಹೃತಶ್ರಿಯಃ ।**
**ಫಲಮೂಲಾಶನಾಹಾರಾ ವನಂ ಗಚ್ಛಾಮ ದುಃಖಿತಾಃ ॥೨॥**

**ವನಂ ಚ ದೋಷಬಹುಲಂ ಬಹುವ್ಯಾಲಸರೀಸೃಪಮ್ ।**
**ಪರಿಕ್ಲೇಶಶ್ಚ ವೋ ಮನ್ಯೇ ಧ್ರುವಂ ತತ್ರ ಭವಿಷ್ಯತಿ ॥೩॥**

**ಬ್ರಾಹ್ಮಣಾನಾಂ ಪರಿಕ್ಲೇಶೋ ದೈವತಾನ್ಯಪಿ ಸಾದಯೇತ್ ।**
**ಕಿಂ ಪುನರ್ಮಾಮಿತೋ ವಿಪ್ರಾ ನಿವರ್ತಧ್ವಂ ಯಥೇಷ್ಟತಃ ॥೪॥**

"ಬ್ರಾಹ್ಮಣೋತ್ತಮರೇ! ನಾವು ನಮ್ಮ ಸರ್ವಸ್ವವನ್ನೂ ಕಳೆದುಕೊಂಡು, ರಾಜ್ಯ-ಕೋಶಾದಿಗಳನ್ನೂ ಕಳೆದುಕೊಂಡು ಬಹುದುಃಖಿತರಾಗಿ, ಕಾಡಿನಲ್ಲಿ ಸಿಕ್ಕುವ ಕಂದ-ಮೂಲ-ಫಲಗಳನ್ನೇ ನಂಬಿ ಅರಣ್ಯಕ್ಕೆ ಹೊರಟಿದ್ದೇವೆ. ಮೇಲಾಗಿ ಅರಣ್ಯವು ದುಷ್ಟಮೃಗಗಳಿಂದಲೂ, ಘಟಸರ್ಪಗಳಿಂದಲೂ ನಿಬಿಡವಾಗಿದ್ದು ವಾಸಿಸಲು ಅಪಾಯಕರವಾಗಿದೆ. ಅಲ್ಲಿ ನಿಮಗೆ ನಿಶ್ಚಯವಾಗಿಯೂ ಹೆಚ್ಚು ಕ್ಲೇಶವುಂಟಾಗುವುದೆಂದು ನನಗನಿಸುತ್ತದೆ. ಬ್ರಾಹ್ಮಣರ ಕ್ಲೇಶವು ದೇವತೆಗಳನ್ನೂ ವಿನಾಶಗೊಳಿಸುತ್ತದೆ. ಹೀಗಿರುವಾಗ ನನ್ನಂತಹವರ ಅವಸ್ಥೆಯು ಏನಾಗಬಹುದು? ಆದುದರಿಂದ ತಾವು ದಯೆಯಿಟ್ಟು ತಮ್ಮ ಇಚ್ಛೆಬಂದಲ್ಲಿಗೆ ಹೋಗಿಬನ್ನಿರಿ."

ವಿಪ್ರರು ಹೇಳುತ್ತಾರೆ :

"ಮಹಾರಾಜ! ನೀನು ಎಲ್ಲಿಗೆ ಹೋಗಲಿರುವೆಯೋ ನಾವೂ ಅಲ್ಲಿಗೇ ಬರುವೆವು. ಸದ್ಧರ್ಮದರ್ಶಿಗಳಾದ ನಿಮ್ಮಲ್ಲಿಯೇ ಅನುರಕ್ತರಾಗಿರುವ ನಮ್ಮನ್ನು ಪರಿತ್ಯಜಿಸಿ ಹೋಗುವುದು ಧರ್ಮಿಷ್ಠನಾದ ನಿನಗೆ ಖಂಡಿತವಾಗಿಯೂ ಉಚಿತವೆನಿಸುವುದಿಲ್ಲ.

**ಅನುಕಮ್ಪಾಂ ಹಿ ಭಕ್ತೇಷು ದೇವತಾ ಹ್ಯಪಿ ಕುರ್ವತೇ ।**
**ವಿಶೇಷತೋ ಬ್ರಾಹ್ಮಣೇಷು ಸದಾಚಾರಾವಲಮ್ಬಿಷು ॥೬॥**

ದೇವತೆಗಳೂ ತಮ್ಮ ಭಕ್ತರ ಮೇಲೆ ಕರುಣೆಯನ್ನಿಟ್ಟಿರುತ್ತಾರೆ. ಮೇಲಾಗಿ ಸದಾಚಾರ-ಸದ್ವೃತ್ತಿಗಳುಳ್ಳ ಬ್ರಾಹ್ಮಣರ ವಿಷಯದಲ್ಲಿ ಅವರಿಗೆ ಇನ್ನೂ ಹೆಚ್ಚಿನ ಅನುಕಂಪವಿರುತ್ತದೆ."

ಧರ್ಮಜನು ಹೇಳುತ್ತಾನೆ :

"ವಿಪ್ರರೇ! ಬ್ರಾಹ್ಮಣರ ವಿಷಯದಲ್ಲಿ ನನಗೆ ಅಪಾರವಾದ ಭಕ್ತಿಯಿದೆ.

ಆದರೆ ನನಗಿಂದು ಪ್ರಾಪ್ತವಾಗಿರುವ ಸಹಾಯಶೂನ್ಯತೆಯು ನನ್ನ ಮನಸ್ಸಿನಲ್ಲಿ ಕಳವಳವನ್ನುಂಟುಮಾಡಿರುವುದು. ಈ ನನ್ನ ಅನುಜರು ಕಂದ-ಮೂಲ-ಫಲಗಳನ್ನು ತರಲು ಸಮರ್ಥರಾಗಿದ್ದರೂ-ದ್ರೌಪದಿಗೊದಗಿರುವ ಸಂಕಟವನ್ನೂ ಮತ್ತು ರಾಜ್ಯದ ಅಪಹರಣವನ್ನೂ ನೆನೆದು ಬಹಳ ವ್ಯಾಕುಲರಾಗಿದ್ದಾರೆ. ಇವರಿಷ್ಟು ವ್ಯಾಕುಲತೆಯಿಂದಿರುವಾಗ ಇವರಿಗೆ ಇನ್ನೂ ಹೆಚ್ಚಿನ ತೊಂದರೆಯನ್ನು ಕೊಡಲು ನನಗಿಷ್ಟವಿಲ್ಲ."

ಬ್ರಾಹ್ಮಣರು ಹೇಳುತ್ತಾರೆ :

"ಧರ್ಮಜ! ನಮ್ಮ ರಕ್ಷಣೆಯ ಅಥವಾ ಪೋಷಣೆಯ ವಿಷಯವಾಗಿ ನೀನು ಮನಸ್ಸಿನಲ್ಲಿ ಸ್ವಲ್ಪವೂ ಚಿಂತಿಸಬೇಕಾಗಿಲ್ಲ. ನಾವು ನಿನ್ನ ಅನುಬಂಧಿಗಳೆಂದು ತಿಳಿದರೆ ಸಾಕು. ನಾವೇ ನಮ್ಮ ಆಹಾರದ ವ್ಯವಸ್ಥೆಯನ್ನು ಮಾಡಿಕೊಳ್ಳುತ್ತೇವೆ. ನಾವು ನಿನ್ನನ್ನನುಸರಿಸಿ ಬಂದು ನಿನ್ನ ಆಶ್ರಯದಲ್ಲಿದ್ದು ಧ್ಯಾನದಿಂದಲೂ, ಸ್ತೋತ್ರಗಳಿಂದಲೂ ನಿನಗೆ ಮಂಗಳವಾಗುವಂತೆ ಅನುದಿನವೂ ದೇವತೆಗಳನ್ನು ಪ್ರಾರ್ಥಿಸುತ್ತೇವೆ. ಒಳ್ಳೊಳ್ಳೆಯ ಪ್ರವಚನಗಳಿಂದಲೂ–ರಮ್ಯವಾದ ಕಥೆಗಳಿಂದಲೂ ನಿನ್ನ ಮನಸ್ಸಿಗೆ ಆಹ್ಲಾದವನ್ನುಂಟುಮಾಡಿ ನಾವೂ ನಿನ್ನ ಆನಂದದಲ್ಲಿ ಪಾಲುಗೊಳ್ಳುತ್ತೇವೆ."

ಯುಧಿಷ್ಠಿರನು ಹೇಳುತ್ತಾನೆ :

"ನೀವು ಹೇಳುವುದು ಯುಕ್ತವಾಗಿಯೇ ಇದೆ. ಇದರಲ್ಲಾವ ಸಂಶಯವೂ ಇಲ್ಲ. ಸತ್ಪುರುಷರ ಸಹವಾಸವು ನನಗೆ ನಿಶ್ಚಯವಾಗಿಯೂ ಆನಂದವನ್ನುಂಟುಮಾಡುತ್ತದೆ. ಆದರೆ ನನ್ನ ಈ ದುರವಸ್ಥೆಯು ನನ್ನ ಆತ್ಮಕ್ಕೆ ಧಿಕ್ಕಾರವೆಂದು ಹೇಳಿಕೊಳ್ಳುವ ರೀತಿಯಲ್ಲಿದೆ. ನೀವುಗಳೆಂದಿಗೂ ಕ್ಲೇಶವನ್ನು ಅನುಭವಿಸಬಾರದು. ಕಾಡು-ಮೇಡುಗಳನ್ನಲೆದು, ನೀವೇ ನಿಮ್ಮ ಆಹಾರವನ್ನು ಕಷ್ಟಪಟ್ಟು ತಂದುಕೊಳ್ಳುವುದನ್ನು ನಾನು ಹೇಗೆ ಸಹಿಸಲಿ? ಅಯ್ಯೋ! ಇಷ್ಟಕ್ಕೂ ಮುಖ್ಯಕಾರಣರಾದ, ಪಾಪಾತ್ಮರಾದ ಧೃತರಾಷ್ಟ್ರನ ಮಕ್ಕಳಿಗೆ ಧಿಕ್ಕಾರವಿರಲಿ!"

ಹೀಗೆ ಹೇಳಿ ಬಹುಚಿಂತಾಕ್ರಾಂತನಾದ ಯುಧಿಷ್ಠಿರನು ದುಃಖಿಸುತ್ತಾ

ನೆಲದ ಮೇಲೆ ಕುಳಿತನು. ಅವನ ಚಿಂತೆಯನ್ನು ಹೋಗಲಾಡಿಸುವ ಇಚ್ಛೆಯಿಂದ ಅಧ್ಯಾತ್ಮವಿಷಯದಲ್ಲಿ ಆಸಕ್ತರಾದ, ಸಾಂಖ್ಯ-ಯೋಗಗಳೆರಡರಲ್ಲಿಯೂ ನಿಷ್ಣಾತರಾದ ಶೌನಕರೆಂಬ ಬ್ರಾಹ್ಮಣರು ಯುಧಿಷ್ಠಿರನಿಗೆ ಹೇಳತೊಡಗಿದರು :

"ಸಾವಿರಾರು ಶೋಕದ ಸನ್ನಿವೇಶಗಳೂ ಮತ್ತು ನೂರಾರು ಭಯದ ಸನ್ನಿವೇಶಗಳೂ ಮೂಢನಾದವನ ಜೀವನದಲ್ಲೊದಗಿ ಅವನನ್ನು ಭ್ರಾಂತನನ್ನಾಗಿ ಮಾಡುವುದು ಸಹಜ. ಆದರೆ ಅಂತಹ ಸನ್ನಿವೇಶಗಳು ವಿವೇಕಿಯನ್ನು ಏನೂ ಮಾಡಲಾರವು. ಅದರಲ್ಲಿಯೂ ನಿನ್ನಂತಹವರು ಜ್ಞಾನ ವಿರುದ್ಧವಾದ, ಬಹುದೋಷಯುಕ್ತವಾದ, ಶ್ರೇಯಸ್ಸಿಗೆ ಘಾತವನ್ನುಂಟುಮಾಡುವ ಕರ್ಮಗಳಲ್ಲಿ ಖಂಡಿತವಾಗಿಯೂ ಆಸಕ್ತರಾಗುವುದಿಲ್ಲ. ಮಹಾರಾಜ! ನಿನಗೆ ಅಶ್ರೇಯಸ್ಸನ್ನು ನಿರ್ಮೂಲಮಾಡುವ, ಅಷ್ಟಾಂಗಯೋಗಸಿದ್ಧವಾದ, ಶ್ರುತಿ-ಸ್ಮೃತಿಗಳ ಅಧ್ಯಯನದಿಂದ ಲಭ್ಯವಾಗುವ ಪರಿಪಕ್ವವಾದ ಬುದ್ಧಿಯಿದೆ. ಆದುದರಿಂದ ಐಶ್ವರ್ಯದ ಹಾನಿಯಲ್ಲಾಗಲೀ, ಬಂಧುಜನರಿಗೊದಗಿರುವ ವಿಪತ್ತಿನಲ್ಲಾಗಲೀ, ಕಷ್ಟದಲ್ಲಾಗಲೀ ಒದಗುವ ಕಾಯಿಕ-ಮಾನಸಿಕ ದುಃಖಗಳಿಂದ ನಿನ್ನಂತಹವರು ಕುಗ್ಗಿಹೋಗುವುದಿಲ್ಲ. ಆತ್ಮವ್ಯವಸ್ಥಾನವು ಹೇಗೆಂಬ ವಿಷಯವಾಗಿ ಜ್ಞಾನಿಯಾದ ಜನಕಮಹಾರಾಜನು ಹೇಳಿರುವುದನ್ನು ನಿನಗೂ ಹೇಳುವೆನು, ಕೇಳು ; ಮಾನಸಿಕ ಮತ್ತು ಶಾರೀರಕ ದುಃಖಗಳಿಂದ ಈ ಜಗತ್ತೇ ಪೀಡಿತವಾಗಿದೆ. ಈ ಎರಡೂ ದುಃಖಗಳ ನಿವಾರಣೆಯನ್ನು ಸಂಕ್ಷೇಪವಾಗಿಯೂ ಮತ್ತು ವಿಸ್ತಾರವಾಗಿಯೂ ಹೇಳುತ್ತೇನೆ.

**ವ್ಯಾಧೇರನಿಷ್ಟಸಂಸ್ಪರ್ಶಾಚ್ಛ್ರಮಾದಿಷ್ಟವಿವರ್ಜನಾತ್ ।**
**ದುಃಖಂ ಚತುರ್ಭಿಃ ಶಾರೀರಂ ಕಾರಣೈಃ ಸಮ್ಪ್ರವರ್ತತೇ ॥೨೨॥**

ರೋಗ, ಅನಿಷ್ಟಪ್ರಾಪ್ತಿ, ಅಧಿಕಪರಿಶ್ರಮ ಮತ್ತು ಇಷ್ಟವಿಯೋಗ–ಈ ನಾಲ್ಕರಿಂದ ಶರೀರಸಂಬಂಧವಾದ ದುಃಖವುಂಟಾಗುತ್ತದೆ.

**ತದಾ ತತ್ಪ್ರತಿಕಾರಾಚ್ಚ ಸತತಂ ಚಾವಿಚಿನ್ತನಾತ್ ।**
**ಆಧಿವ್ಯಾಧಿಪ್ರಶಮನಂ ಕ್ರಿಯಾಯೋಗದ್ವಯೇನ ತು ॥೨೩॥**

**ಮತಿಮನ್ತೋ ಹ್ಯತೋ ವೈದ್ಯಾಃ ಶಮಂ ಪ್ರಾಗೇವ ಕುರ್ವತೇ ।**
**ಮಾನಸಸ್ಯ ಪ್ರಿಯಾಖ್ಯಾನೈಃ ಸಮ್ಭೋಗೋಪನಯೈರ್ನೃಣಾಮ್ ॥೨೪॥**

ಈ ದುಃಖನಿವಾರಣೆಗೆ ಇರುವ ಉಪಾಯಗಳು ಎರಡು : ಔಷಧಾದಿಗಳ ಸೇವನೆ ; ಯಾವಾಗಲೂ ಅದನ್ನೇ ಚಿಂತಿಸುತ್ತಿರದೇ ಮರೆಯುವುದು. ಈ ಎರಡು ಕ್ರಿಯಾಯೋಗಗಳಿಂದ ಆಧಿ-ವ್ಯಾಧಿಗಳೆರಡೂ ನಿವಾರಣೆಯಾಗುತ್ತವೆ. ಆದುದರಿಂದ ಬುದ್ಧಿವಂತರಾದ ವಿದ್ವಾಂಸರು ಪ್ರಿಯವಾದ ಕಥೆಗಳನ್ನು ಹೇಳುವುದರಿಂದಲೂ, ಭೋಗವಸ್ತುಗಳನ್ನು ಒದಗಿಸಿಕೊಡುವುದರಿಂದಲೂ ಮಾನವರ ಮಾನಸಿಕದುಃಖಕ್ಕೆ ಮೊದಲೇ ಉಪಶಮನವನ್ನು ಮಾಡುತ್ತಾರೆ.

**ಮಾನಸೇನ ಹಿ ದುಃಖೇನ ಶರೀರಮುಪತಪ್ಯತೇ ।**
**ಅಯಃಪಿಣ್ಡೇನ ತಪ್ತೇನ ಕುಮ್ಭಸಂಸ್ಥಮಿವೋದಕಮ್ ॥೨೫॥**

ಕಾದ ಕಬ್ಬಿಣದ ಗುಂಡನ್ನು ನೀರಿನಲ್ಲಿ ಅದ್ದಿದರೆ ನೀರೂ ಹೇಗೆ ಬಿಸಿಯಾಗುವುದೋ–ಅದೇ ರೀತಿಯಲ್ಲಿ ಮಾನಸಿಕವಾದ ಚಿಂತೆಯಿಂದ ಶರೀರವು ಪರಿತಪಿಸುತ್ತದೆ.

**ಮಾನಸಂ ಶಮಯೇತ್ತಸ್ಮಾಜ್ಜ್ಞಾನೇನಾಗ್ನಿಮಿವಾಮ್ಬುನಾ ।**
**ಪ್ರಶಾನ್ತೇ ಮಾನಸೇ ಹ್ಯಸ್ಯ ಶಾರೀರಮುಪಶಾಮ್ಯತಿ ॥೨೬॥**

ಉರಿಯುತ್ತಿರುವ ಬೆಂಕಿಯನ್ನು ನೀರುಹಾಕಿ ಆರಿಸುವಂತೆ–ಮಾನಸಿಕವಾದ ದುಃಖಗಳನ್ನು ಜ್ಞಾನಯೋಗದಿಂದಲೇ ಕಳೆದುಕೊಳ್ಳಬೇಕು. ಮನಸ್ಸು ಪ್ರಶಾಂತವಾದೊಡನೆಯೇ ಮನಸ್ಸಿನ ಅಶಾಂತಿಯಿಂದುಂಟಾದ ಶಾರೀರಕ ರೋಗವೂ ನಿವಾರಣೆಯಾಗುತ್ತದೆ.

**ಮನಸೋ ದುಃಖಮೂಲಂ ತು ಸ್ನೇಹ ಇತ್ಯುಪಲಭ್ಯತೇ ।**
**ಸ್ನೇಹಾತ್ತು ಸಜ್ಜತೇ ಜನ್ತುರ್ದುಃಖಯೋಗಮುಪೈತಿ ಚ ॥೨೭॥**

ಪ್ರೀತಿ ಅಥವಾ ಸ್ನೇಹವೆಂಬುದೇ ಮಾನಸಿಕಚಿಂತೆಗೆ ಮುಖ್ಯಕಾರಣವಾಗಿರುತ್ತದೆ. ಆ ಸ್ನೇಹದಿಂದಲೇ ಜೀವನು ವಿಷಯಗಳಲ್ಲಿ ಆಸಕ್ತನಾಗುತ್ತಾನೆ ; ದುಃಖದಲ್ಲಿಯೂ ಮುಳುಗುತ್ತಾನೆ.

ಸ್ನೇಹಮೂಲಾನಿ ದುಃಖಾನಿ ಸ್ನೇಹಜಾನಿ ಭಯಾನಿ ಚ ।
ಶೋಕಹರ್ಷೌ ತಥಾಯಾಸಃ ಸರ್ವಂ ಸ್ನೇಹಾತ್ಪ್ರವರ್ತತೇ ॥೨೮॥

ಸ್ನೇಹಾದ್ಭಾವೋಽನುರಾಗಶ್ಚ ಪ್ರಜಜ್ಞೇ ವಿಷಯೇ ತಥಾ ।
ಅಶ್ರೇಯಸ್ಕಾವುಭಾವೇತೌ ಪೂರ್ವಸ್ತತ್ರ ಗುರುಃ ಸ್ಮೃತಃ ॥೨೯॥

ದುಃಖ-ಭಯಗಳು ಸ್ನೇಹಮೂಲವಾಗಿರುತ್ತವೆ. ಒಂದು ವಸ್ತುವಿನಲ್ಲಿ ವಿಶೇಷವಾಗಿ ಅಂಟಿಕೊಂಡಿರುವುದೇ ಸ್ನೇಹ. ದುಃಖ-ಭಯಗಳೆರಡಕ್ಕೂ ಇದೇ ಕಾರಣ. ಶೋಕ, ಹರ್ಷ, ಆಯಾಸ–ಈ ಎಲ್ಲವೂ ಸ್ನೇಹದಿಂದಲೇ ಉದ್ಭೂತವಾಗುತ್ತವೆ. ವಿಷಯಾಸಕ್ತಿಯಿಂದಾಗಿ ಭಾವ ಮತ್ತು ಅನುರಾಗಗಳು ಹುಟ್ಟುತ್ತವೆ. ಭಾವ ಮತ್ತು ಅನುರಾಗಗಳೆರಡೂ ಅಶ್ರೇಯಸ್ಸಿಗೆ ಕಾರಣವಾಗುವುವು. ಅವುಗಳಲ್ಲಿ ಮೊದಲನೆಯದಾದ ಭಾವವು ಅನುರಾಗಕ್ಕಿಂತಲೂ ಕೆಟ್ಟದ್ದು. (ಭಾವ ಎಂದರೆ ವಿಷಯಗಳಲ್ಲಿ ತನ್ಮಯತೆ ; ಅನುರಾಗವೆಂದರೆ ಪ್ರೀತಿ. ವಿಷಯವಾಸನೆಗಳಲ್ಲಿ ತನ್ಮಯನಾಗಿಬಿಡುವುದು ಹೆಚ್ಚು ಅಪಾಯಕಾರಿ ಎಂಬ ಅಭಿಪ್ರಾಯ. ತನ್ಮಯನಾಗಿಬಿಟ್ಟರೆ ಅದರಿಂದ ಬಿಡಿಸಿಕೊಳ್ಳುವ ಸಾಧ್ಯತೆಯೇ ಇಲ್ಲ. ಕೇವಲ ಅನುರಾಗ ಅಥವಾ ಪ್ರೀತಿಯಿಂದ ಹೊರಬರಲು ಸಾಧ್ಯವಾಗಬಹುದು.)

ಸ್ನೇಹವೇ ದುಃಖಗಳಿಗೂ, ಭಯಕ್ಕೂ, ಸಂತೋಷ-ಸಂಕಟಗಳಿಗೂ ಮೂಲಕಾರಣ. ಭಾವ, ಅನುರಾಗಗಳೆರಡೂ ಸ್ನೇಹದಿಂದಲೇ ಉದ್ಭೂತವಾಗಿವೆ.

ಕೋಟರಾಗ್ನಿರ್ಯಥಾಶೇಷಂ ಸಮೂಲಂ ಪಾದಪಂ ದಹೇತ್ ।
ಧರ್ಮಾರ್ಥೌ ತು ತಥಾಲ್ಪೋಽಪಿ ರಾಗದೋಷೋ ವಿನಾಶಯೇತ್ ॥

ವೃಕ್ಷದ ಪೊಟರೆಯಲ್ಲಿರುವ ಒಂದು ಸಣ್ಣ ಬೆಂಕಿಯ ಕಿಡಿಯು ವೃಕ್ಷವನ್ನೇ ಸಮೂಲವಾಗಿ ನಿಃಶೇಷವಾಗಿ ದಹಿಸಿಬಿಡುವಂತೆ–ರಾಗದೋಷವು (ವಿಷಯಾಸಕ್ತಿಯು) ಎಷ್ಟೇ ಸಣ್ಣದಾಗಿದ್ದರೂ ಕಾಲಕ್ರಮದಲ್ಲಿ ಮನುಷ್ಯನ ಧರ್ಮಾರ್ಥಗಳ ವಿನಾಶಕ್ಕೆ ಕಾರಣವಾಗುತ್ತದೆ.

ವಿಪ್ರಯೋಗೇ ನ ತು ತ್ಯಾಗೀ ದೋಷದರ್ಶೀ ಸಮಾಗಮೇ ।
ವಿರಾಗಂ ಭಜತೇ ಜನ್ತುರ್ನಿರ್ವೈರೋ ನಿರವಗ್ರಹಃ ॥೩೧॥

ಪ್ರಾಪಂಚಿಕ ವಿಷಯಗಳನ್ನು ಅನುಭವಿಸದಿರುವವನನ್ನು (ಭೋಗ ವಸ್ತುಗಳಿಂದ ದೂರವಿರುವವನನ್ನು ) 'ತ್ಯಾಗೀ' ಎಂದು ಹೇಳಲು ಸಾಧ್ಯವಿಲ್ಲ. ಪ್ರಾಪಂಚಿಕವಿಷಯದಲ್ಲಿ ಮುಳುಗುವುದರಿಂದ ಒದಗುವ ದೋಷಗಳನ್ನು ಸಂಪೂರ್ಣವಾಗಿ ಅರಿತು ಅದರಿಂದ ನಿವೃತ್ತಿಯನ್ನು ಹೊಂದುವವನು 'ತ್ಯಾಗೀ' ಎನಿಸುತ್ತಾನೆ. ಅವನಿಗೆ ಯಾರೊಬ್ಬರ ಮೇಲಾಗಲೀ ದ್ವೇಷ ಭಾವವಿರುವುದಿಲ್ಲ. ಯಾವ ವಿಧವಾದ ಆತಂಕವೂ ಇರುವುದಿಲ್ಲ. ಕಾಮ-ಕ್ರೋಧ-ಲೋಭ-ಮೋಹ-ಮದ-ಮಾತ್ಸರ್ಯಗಳನ್ನು ತ್ಯಜಿಸಿ ಸ್ವತಂತ್ರನಾಗಿರುವವನೇ ನಿಜವಾದ ತ್ಯಾಗೀ.

**ತಸ್ಮಾತ್ಸ್ನೇಹಂ ನ ಲಿಪ್ಸೇತ ಮಿತ್ರೇಭ್ಯೋ ಧನಸಂಚಯಾತ್ ।**
**ಸ್ವಶರೀರಸಮುತ್ಥಂ ಚ ಜ್ಞಾನೇನ ವಿನಿವರ್ತಯೇತ್ ॥೩೨॥**

ಆದುದರಿಂದ ತಾನು ಸಂಪಾದಿಸಿದ ಐಶ್ವರ್ಯದ ಮೇಲಾಗಲೀ, ಮಿತ್ರ-ಪುತ್ರರ ಮೇಲಾಗಲೀ ಹೆಚ್ಚು ಅನುರಾಗವನ್ನಿಡಬಾರದು. ಸ್ವಶರೀರದ ಮೇಲಿನ ಅಭಿಮಾನವನ್ನೂ ಅಧ್ಯಾತ್ಮವಿದ್ಯೆಯ ಅಧ್ಯಯನದಿಂದ ತೊರೆಯಬೇಕು.

**ಜ್ಞಾನಾನ್ವಿತೇಷು ಯುಕ್ತೇಷು ಶಾಸ್ತ್ರಜ್ಞೇಷು ಕೃತಾತ್ಮಸು ।**
**ನ ತೇಷು ಸಜ್ಜತೇ ಸ್ನೇಹಃ ಪದ್ಮಪತ್ರೇಷ್ವಿವೋದಕಮ್ ॥೩೩॥**

ಜ್ಞಾನಿಗಳಾದ ಶಾಸ್ತ್ರಜ್ಞರಾದ ಆತ್ಮದರ್ಶಿಗಳಿಗೆ ಇಂತಹ ಸ್ನೇಹ ವಿರುವುದಿಲ್ಲ. ಅವರು ಎಲ್ಲಿಯೇ ಇದ್ದರೂ ಹೇಗೇ ಇದ್ದರೂ ಕಮಲಪತ್ರದ ಮೇಲಿರುವ ಜಲಬಿಂದುವಿನಂತೆ–ಪ್ರಾಪಂಚಿಕವಾದ ಯಾವ ವಸ್ತುವಿನಲ್ಲಿಯೂ ಸ್ನೇಹವನ್ನಿಡದೆ ಶುದ್ಧಾತ್ಮರಾಗಿರುತ್ತಾರೆ. (ಜ್ಞಾನಿಗಳಲ್ಲಿ ಸ್ನೇಹವು-ತಾವರೇ ಎಲೆಗಳಲ್ಲಿ ನೀರಿರುವ ಹಾಗೆ ಸಂಬಂಧಿಸಿಯೂ ಸಂಬಂಧವಿಲ್ಲದಂತೆ–ಇರುತ್ತದೆ.)

**ರಾಗಾಭಿಭೂತಃ ಪುರುಷಃ ಕಾಮೇನ ಪರಿಕೃಷ್ಯತೇ ।**
**ಇಚ್ಛಾ ಸಂಜಾಯತೇ ತಸ್ಯ ತತಸ್ತೃಷ್ಣಾ ವಿವರ್ಧತೇ ॥೩೪॥**

**ತೃಷ್ಣಾ ಹಿ ಸರ್ವಪಾಪಿಷ್ಠಾ ನಿತ್ಯೋದ್ವೇಗಕರೀ ಸ್ಮೃತಾ ।**
**ಅಧರ್ಮಬಹುಲಾ ಚೈವ ಘೋರಾ ಪಾಪಾನುಬನ್ಧಿನೀ ॥೩೫॥**

ರಾಗಾಧೀನನಾದ ಪುರುಷನು ಆಶೆಯಿಂದ ಎಳೆಯಲ್ಪಡುತ್ತಾನೆ. ಆಶೆಯು ಪ್ರಾಪಂಚಿಕವಸ್ತುಗಳ ಪ್ರಾಪ್ತಿಗೆ ಉತ್ತೇಜಿಸುತ್ತದೆ. ಪ್ರಾಪಂಚಿಕ ವಸ್ತುಗಳ ಮೇಲಿನ ಆಶೆಯು ಪಾಪಭೂಯಿಷ್ಠವಾದುದು ಮತ್ತು ಸಕಲ ವಿಧವಾದ ಭ್ರಾಂತಿಗಳಿಗೂ ಮೂಲವಾದುದು. ವಿಷಯಗಳ ಅಭಿಲಾಷೆಯೇ ಅಧರ್ಮಕಾರ್ಯಕ್ಕೆ ಮನುಷ್ಯನನ್ನು ಪ್ರಚೋದಿಸುತ್ತದೆ.

(ಪ್ರಾಪಂಚಿಕಸೌಖ್ಯದಲ್ಲಿ ಆಸಕ್ತನಾದವನನ್ನು ಮೊದಲು 'ಆಶಾ' ಎಂಬ ಭೂತವು ಹಿಡಿಯುತ್ತದೆ. ಆಶೆಯು ಯಾವ ವಸ್ತುವಿನ ಮೇಲಾದರೂ ಆಗಬಹುದು. ಹಣದ ಮೇಲಾಗಬಹುದು ; ವಸ್ತುವಿನ ಮೇಲಾಗ ಬಹುದು; ಸ್ತ್ರೀಯ ಮೇಲಾಗಬಹುದು. ಹಿರಿಯರು ಭೋಗವಸ್ತುಗಳನ್ನು ಮೂರಾಗಿ ವಿಂಗಡಿಸಿದ್ದಾರೆ. ಹೆಣ್ಣು-ಹೊನ್ನು-ಮಣ್ಣು ಎಂದು. ಈ ಮೂರೂ ಪುರುಷನ ಇರುವಿಕೆಗೆ ಅತ್ಯಾವಶ್ಯಕವಾದುವುಗಳು. ಆದರೆ ಎಷ್ಟು ಬೇಕೋ ಅಷ್ಟೇ ಇರಬೇಕೇ ಹೊರತು ಅವುಗಳ ಮೇಲೆ ಅತಿವ್ಯಾಮೋಹ, ಅತ್ಯನುರಾಗ ಅಥವಾ ತನ್ಮಯತೆಯಿರಕೂಡದು. ಅವುಗಳನ್ನು ಹೆಚ್ಚು ಹೆಚ್ಚು ಪಡೆದುಕೊಳ್ಳುವ ಆಶೆಯು ಮಾನವಮಾತ್ರನಿಗೆ ಉಂಟಾಗುವುದು ಸಹಜ. ಆದರೆ ಆ ಆಸೆಯೇ ಅನುಕ್ರಮವಾಗಿ ತೃಷ್ಣೆಯಾಗುತ್ತದೆ. ಅವುಗಳನ್ನು ತನ್ನ ಅವಶ್ಯಕತೆಗಿಂತಲೂ ಹೆಚ್ಚು-ಹೆಚ್ಚಾಗಿ ಸಂಗ್ರಹಿಸಬೇಕೆಂಬ ಧಾವಂತ ವುಂಟಾಗುವುದೇ ತೃಷ್ಣೆ. ನಿಶ್ಚಯವಾಗಿಯೂ 'ತೃಷ್ಣಾ' ಎಂಬುದೊಂದು ರೋಗ. ಯಾವಾಗಲೂ ಬಾಯಾರಿರುವ ಮತ್ತು ಯಾವಾಗಲೂ ನೀರನ್ನು ಅಪೇಕ್ಷಿಸುವ ಒಂದು ವಿಧವಾದ ರೋಗ. **ಸತತಂ ಚ ಪಿಬೇತ್ತೋಯಂ ನ ತೃಪ್ತಿಮಧಿಗಚ್ಛತಿ । ಮುಹುಃ ಕಾಂಕ್ಷತಿ ತೋಯಂ ತು ತಂ ತೃಷ್ಣಾರ್ದಿತಮಾದಿಶೇತ್ ॥** ಯಾವಾಗಲೂ ಎಷ್ಟೇ ನೀರು ಕುಡಿದರೂ ತೃಪ್ತಿಯಾಗದೇ ಮತ್ತೆ-ಮತ್ತೆ ನೀರನ್ನು ಅಪೇಕ್ಷಿಸುತ್ತಿರುವುದು ಈ ರೋಗದ ಲಕ್ಷಣ. ಇಂತಹ ತೃಷ್ಣಾರೋಗವು ಇತರ ವಸ್ತುಗಳಲ್ಲಿಯೂ ಉಂಟಾಗ ಬಹುದು. ಆಗಲೇ ಇದು ಬಹಳ ಪಾಪಿಷ್ಠವಾಗುತ್ತದೆ. ಧನಾದಿ ಸಂಗ್ರಹಣೆಯಲ್ಲಿಯೇ ಆಸಕ್ತವಾಗಿರುವ ಮನುಷ್ಯನ ಮನಸ್ಸು ಸದಾ ಉದ್ವೇಗಪೂರಿತವಾಗಿರುತ್ತದೆ. ಧನಾದಿಸಂಗ್ರಹಣೆಯಲ್ಲಿ ಧರ್ಮಾಧರ್ಮ ಗಳ ವಿವೇಚನೆಯೇ ಇರುವುದಿಲ್ಲ. ಅಧರ್ಮಮಾರ್ಗದಿಂದಲೇ ಹೆಚ್ಚು ಹಣ

ವನ್ನು ಸಂಗ್ರಹಿಸುವ ಸಾಧ್ಯತೆಯಿರುವುದರಿಂದ ಧನಾಗಮತೃಷ್ಣೆಯೆಂಬುದು ಮಹಾಘೋರವಾದುದು ಮತ್ತು ಪಾಪಸಂಘಟಕವಾದುದೆಂಬುದರಲ್ಲಿ ಯಾವ ಸಂಶಯವೂ ಇಲ್ಲ.)

**ಯಾ ದುಸ್ತ್ಯಜಾ ದುರ್ಮತಿಭಿರ್ಯಾ ನ ಜೀರ್ಯತಿ ಜೀರ್ಯತಃ ।**
**ಯೋಽಸೌ ಪ್ರಾಣಾನ್ತಿಕೋ ರೋಗಸ್ತಾಂ ತೃಷ್ಣಾಂ ತ್ಯಜತಃ ಸುಖಮ್ ॥**

ಯಾರು ಆನಂದಮಯವಾದ ಜೀವನವನ್ನು ಅಭಿಲಾಷಿಸುವರೋ– ಅವರು ಪ್ರಾಪಂಚಿಕವಸ್ತುಗಳ ಮೇಲಿನ ಇಚ್ಛೆಯನ್ನು ತೊರೆಯಲೇಬೇಕು. ದುರ್ಮತಿಗಳಿಂದ ಖಂಡಿತವಾಗಿಯೂ ಈ ಆಶೆಯನ್ನು ತ್ಯಜಿಸಲು ಸಾಧ್ಯವಿಲ್ಲ. ದೇಹವೇ ಜೀರ್ಣವಾದರೂ ಪ್ರಾಪಂಚಿಕವ್ಯಾಮೋಹವು ಜೀರ್ಣವಾಗುವುದಿಲ್ಲ. ಈ ವ್ಯಾಮೋಹವೆಂಬುದೇ ಮಾನವನಿಗಿರುವ ಅಪರಿಹಾರ್ಯವಾದ ಮೃತ್ಯುರೂಪವಾದ ರೋಗ. ಇದನ್ನು ತ್ಯಜಿಸಿದವನಿಗೇ ಸುಖ.

**ಅನಾದ್ಯನ್ತಾ ತು ಸಾ ತೃಷ್ಣಾ ಅನ್ತರ್ದೇಹಗತಾ ನೃಣಾಮ್ ।**
**ವಿನಾಶಯತಿ ಭೂತಾನಿ ಅಯೋನಿಜ ಇವಾನಲಃ ॥೩೭॥**

ಆಶೆಗೆ ಆದಿ-ಅಂತ್ಯಗಳೆರಡೂ ಇರುವುದಿಲ್ಲ. *ಕಾದ ಕಬ್ಬಿಣದ ಉಂಡೆಯ ರೂಪದಲ್ಲಿರುವ ಅಗ್ನಿಯಂತೆ–ತೃಷ್ಣೆಯು ಮನುಷ್ಯನ ಹೃದಯಾಂತರಾಳವನ್ನು ಪ್ರವೇಶಿಸಿ ಕಾಲಕ್ರಮದಲ್ಲಿ ಅವನನ್ನೇ ದಹಿಸಿಬಿಡುತ್ತದೆ.

**ಯಥೈಧಃ ಸ್ವಸಮುತ್ಥೇನ ವಹ್ನಿನಾ ನಾಶಮೃಚ್ಛತಿ ।**
**ತಥಾಕೃತಾತ್ಮಾ ಲೋಭೇನ ಸಹಜೇನ ವಿನಶ್ಯತಿ ॥೩೮॥**

ಹೇಗೆ ಕಟ್ಟಿಗೆಯು ತನ್ನಿಂದ ಹುಟ್ಟಿದ ಬೆಂಕಿಯಿಂದಲೇ ನಾಶಹೊಂದುವುದೋ ಹಾಗೆಯೇ ಜಿತೇಂದ್ರಿಯನಲ್ಲದ ಮಾನವನು ತನ್ನಲ್ಲಿರುವ ಲೋಭದಿಂದಲೇ ನಾಶಹೊಂದುತ್ತಾನೆ.

---

* ಅಯೋನಿಜಃ ಎಂಬುದಕ್ಕೆ ವ್ಯಾಖ್ಯಾನಕಾರರು– ಅಯಃ ತಪ್ತಾಯಃ ಪಿಣ್ಡಂ, ನಿಜಃ= ಸ್ವರೂಪಸ್ಥಃ ಅನಲಃ ವಹ್ನಿಃ = ಕಾದ ಕಬ್ಬಿಣದ ಉಂಡೆಯ ರೂಪದಲ್ಲಿರುವ ಅಗ್ನಿ–ಎಂದು ಅರ್ಥಮಾಡಿರುತ್ತಾರೆ.

**ರಾಜತಃ ಸಲಿಲಾದಗ್ನೇಶ್ಚೋರತಃ ಸ್ವಜನಾದಪಿ ।**
**ಭಯಮರ್ಥವತಾಂ ನಿತ್ಯಂ ಮೃತ್ಯೋಃ ಪ್ರಾಣಭೃತಾಮಿವ ॥೬೯॥**

ಮರ್ತ್ಯರು ಹೇಗೆ ಮೃತ್ಯುವಿನ ವಿಷಯದಲ್ಲಿ (ಸಾವಿಗಾಗಿ) ಪ್ರತಿಕ್ಷಣದಲ್ಲಿಯೂ ಭಯಪಡುವರೋ–ಹಾಗೆಯೇ ಐಶ್ವರ್ಯವಂತರು ತಮ್ಮ ಐಶ್ವರ್ಯದ ಮೇಲಿನ ವ್ಯಾಮೋಹದ ಕಾರಣದಿಂದ ರಾಜ, ಕಳ್ಳ, ಅಗ್ನಿ, ನೀರು ಮತ್ತು ತಮ್ಮ ಬಂಧು-ಬಾಂಧವರು ಇವರ ವಿಷಯಗಳಲ್ಲಿಯೂ ಭಯಪಡುತ್ತಿರುತ್ತಾರೆ. (ರಾಜ, ಕಳ್ಳ, ಅಗ್ನಿ, ನೀರು, ಬಂಧು-ಬಾಂಧವರು–ಇವರೆಲ್ಲರೂ ಧನಾಪಹಾರಿಗಳೆಂದು ಕರೆಯಲ್ಪಡುತ್ತಾರೆ.)

**ಯಥಾ ಹ್ಯಾಮಿಷಮಾಕಾಶೇ ಪಕ್ಷಿಭಿಃ ಶ್ವಾಪದೈರ್ಭುವಿ ।**
**ಭಕ್ಷ್ಯತೇ ಸಲಿಲೇ ಮತ್ಸ್ಯೈಸ್ತಥಾ ಸರ್ವತ್ರ ವಿತ್ತವಾನ್ ॥೭೦॥**

ಮಾಂಸದ ತುಂಡನ್ನು ಭೂಮಿಯಲ್ಲಿಟ್ಟರೂ ಅದು ಉಳಿಯದು. ನಾಯಿ, ನರಿ ಮುಂತಾದುವುಗಳು ಭಕ್ಷಿಸಿಬಿಡುತ್ತವೆ. ಆಕಾಶದಲ್ಲಿಟ್ಟರೂ ರಣಹದ್ದು, ಕಾಗೆ ಮುಂತಾದ ಪಕ್ಷಿಗಳು ಭಕ್ಷಿಸಿಬಿಡುತ್ತವೆ. ಪೃಥ್ವ್ಯಾಕಾಶಗಳನ್ನು ಬಿಟ್ಟು ಅದೇ ಮಾಂಸದ ತುಂಡನ್ನು ನೀರಿನಲ್ಲಿಟ್ಟರೂ ಮತ್ಸ್ಯಾದಿ ಜಲಚರಪ್ರಾಣಿಗಳು ನುಂಗಿಬಿಡುತ್ತವೆ. ಅದೇ ರೀತಿಯಲ್ಲಿ ಆಶೆಯಿಂದ ಗಳಿಸಿಟ್ಟಿರುವ ಐಶ್ವರ್ಯದ ಒಡೆಯನಿಗೂ ಎಲ್ಲ ಕಡೆಗಳಿಂದಲೂ ನಾನಾವಿಧವಾದ ಅಪಾಯಗಳಿರುತ್ತವೆ.

**ಅರ್ಥ ಏವ ಹಿ ಕೇಷಾಂಚಿದನರ್ಥಂ ಭಜತೇ ನೃಣಾಮ್ ।**
**ಅರ್ಥಶ್ರೇಯಸಿ ಚಾಸಕ್ತೋ ನ ಶ್ರೇಯೋ ವಿನ್ದತೇ ನರಃ ॥೭೧॥**

ಅರ್ಥಪರಾಯಣರಾದ ಅನೇಕರಿಗೆ ಆ ಅರ್ಥವೇ (ದ್ರವ್ಯ) ಅನರ್ಥಕಾರಿಯಾಗುತ್ತದೆ. ಯಾವನು ಹಣವೇ ಸರ್ವಸ್ವವೆಂದು ಭಾವಿಸಿ ಹಣಗಳಿಸುವುದರಲ್ಲಿಯೇ ನಿರತನಾಗಿರುವನೋ ಮತ್ತು ಐಶ್ವರ್ಯದಿಂದ ಲಭಿಸಬಹುದಾದ ಸಾಂಸಾರಿಕಭೋಗಗಳಲ್ಲಿಯೇ ಆಸಕ್ತನಾಗಿರುವನೋ–ಅಂತಹವನಿಗೆ ನಿಜವಾದ ಶ್ರೇಯಸ್ಸು ಲಭಿಸುವುದಿಲ್ಲ. (ಕೇವಲ ಅರ್ಥಸಂಚಯನದಿಂದಲೇ ಮಾನವನು ಶ್ರೇಯಸ್ಸನ್ನು ಪಡೆಯುವುದಿಲ್ಲ.)

**ತಸ್ಮಾದರ್ಥಾಗಮಾಃ ಸರ್ವೇ ಮನೋಮೋಹವಿವರ್ಧನಾಃ ।**
**ಕಾರ್ಪಣ್ಯಂ ದರ್ಪಮಾನೌ ಚ ಭಯಮುದ್ವೇಗ ಏವ ಚ ॥೪೨॥**

**ಅರ್ಥಜಾನಿ ವಿದುಃ ಪ್ರಾಜ್ಞಾ ದುಃಖಾನ್ಯೇತಾನಿ ದೇಹಿನಾಮ್ ।**
**ಅರ್ಥಸ್ಯೋತ್ಪಾದನೇ ಚೈವ ಪಾಲನೇ ಚ ತಥಾ ಕ್ಷಯೇ ॥೪೩॥**

**ಸಹನ್ತಿ ಚ ಮಹದ್ದುಃಖಂ ಘ್ನನ್ತಿ ಚೈವಾರ್ಥಕಾರಣಾತ್ ।**
**ಅರ್ಥಾ ದುಃಖಂ ಪರಿತ್ಯಕ್ತುಂ ಪಾಲಿತಾಶ್ಚೈವ ಶತ್ರವಃ ॥೪೪॥**

ಮನಸ್ಸಿನಲ್ಲಿ ಮೋಹವನ್ನು ವೃದ್ಧಿಗೊಳಿಸುವ ಕಾರ್ಪಣ್ಯ, ದರ್ಪ, ದುರಭಿಮಾನ, ಭಯ, ಉದ್ವೇಗ ಈ ಎಲ್ಲವೂ ಅರ್ಥವನ್ನೇ ಅನುಸರಿಸಿ ಬರುತ್ತವೆ. ಆದುದರಿಂದಲೇ ಅರ್ಥಸಂಚಯನದಲ್ಲಿರುವ ಅನೇಕಕಷ್ಟ ಗಳನ್ನೂ, ದೋಷಗಳನ್ನೂ ಮತ್ತು ಪರಿಣಾಮವನ್ನೂ ಜ್ಞಾನಿಗಳಾದವರು ತಿಳಿದಿರುತ್ತಾರೆ. ಮೊದಲು ಧನಸಂಚಯನಕ್ಕಾಗಿ ಮಾನವರು ಬಹಳ ಕಷ್ಟಪಡುತ್ತಾರೆ. ಎರಡನೆಯದಾಗಿ ಸಂಪಾದಿಸಿದುದನ್ನು ರಕ್ಷಿಸುವುದೂ ಕಷ್ಟಸಾಧ್ಯವಾಗುತ್ತದೆ. ಸಂಪಾದಿಸಿದ ಹಣದ ವ್ಯಯವೂ ಮಾನವನನ್ನು ಅತಿಯಾದ ದುಃಖದಲ್ಲಿ ಮುಳುಗಿಸುತ್ತದೆ. ಕೆಲವು ಸಮಯದಲ್ಲಿ ಐಶ್ವರ್ಯದ ಕಾರಣಕ್ಕಾಗಿ ಪ್ರಾಣಹಾನಿಯಾಗುವುದೂ ಉಂಟು. ಐಶ್ವರ್ಯವಂತನಿಗೆ–ತನ್ನಿಂದ ಪಾಲಿತನಾದವನೂ–ಐಶ್ವರ್ಯದ ಕಾರಣದಿಂದಾಗಿ ಶತ್ರುವಾಗಿಬಿಡು ತ್ತಾನೆ. ಹಣವನ್ನು ಗಳಿಸಲೂ ಕಷ್ಟಪಡಬೇಕು. ಐಶ್ವರ್ಯವು ಇಷ್ಟೊಂದು ಉಪದ್ರವವನ್ನು ತರುವುದೆಂದು ತಿಳಿದನಂತರ ವಿದ್ಯಾವಂತನಾದವನು ಐಶ್ವರ್ಯದ ವಿನಾಶವನ್ನು ಕುರಿತು ಶೋಕಿಸಬಾರದು. ಪಂಡಿತರು ಯಾವಾ ಗಲೂ ತೃಪ್ತರಾಗಿರುತ್ತಾರೆ. ಮೂಢರು ಯಾವಾಗಲೂ ಅತೃಪ್ತರಾಗಿರುತ್ತಾರೆ.

**ಅನ್ತೋ ನಾಸ್ತಿ ಪಿಪಾಸಾಯಾಃ ಸಂತೋಷಃ ಪರಮಂ ಸುಖಮ್ ।**
**ತಸ್ಮಾತ್ಸಂತೋಷಮೇವೇಹ ಪರಂ ಪಶ್ಯನ್ತಿ ಪಣ್ಡಿತಾಃ ॥೪೬॥**

ಧನದ ಮೇಲಿನ ಆಶೆಗೆ ಕೊನೆಯೇ ಇಲ್ಲ. ಧನಾಗಮತೃಷ್ಣೆಯನ್ನು ಪರಿಹರಿಸಲು ಸಾಧ್ಯವೇ ಇಲ್ಲ. ಆದುದರಿಂದ 'ತೃಪ್ತಿ' ಎಂಬುದೇ ಮಾನವ ನಿಗೆ ನಿಜವಾದ ಸುಖವನ್ನು ಕೊಡಬಲ್ಲುದು. ಆದುದರಿಂದಲೇ ನಿಜಕರ್ಮೋ

ಪಾತ್ರವಾದ ವಿತ್ತದಿಂದಲೇ ಸಂತೋಷಹೊಂದುವುದು ಶ್ರೇಷ್ಠವಾದುದೆಂದು ಪಂಡಿತರಾದವರು ಕಂಡುಕೊಂಡಿದ್ದಾರೆ.

**ಅನಿತ್ಯಂ ಯೌವನಂ ರೂಪಂ ಜೀವಿತಂ ರತ್ನಸಂಚಯಃ ।**
**ಐಶ್ವರ್ಯಂ ಪ್ರಿಯಸಂವಾಸೋ ಗೃಧ್ಯೇತ್ತತ್ರ ನ ಪಣ್ಡಿತಃ ॥೪೭॥**

**ತ್ಯಜೇಚ್ಚ ಸಂಚಯಾಂಸ್ತಸ್ಮಾತ್ತಜ್ಜಾನ್ಕ್ಲೇಶಾನ್ಸಹೇತ ಚ ।**
**ನ ಹಿ ಸಂಚಯವಾನ್ಕಶ್ಚಿದ್ದೃಶ್ಯತೇ ನಿರುಪದ್ರವಃ ।**
**ಅತಶ್ಚ ಧಾರ್ಮಿಕೈಃ ಪುಂಭಿರನೀಹಾರ್ಥಃ ಪ್ರಶಸ್ಯತೇ ॥೪೮॥**

ಯೌವನ, ರೂಪ, ಜೀವನ, ರತ್ನಸಂಚಯ, ಐಶ್ವರ್ಯ, ಪ್ರಿಯಜನ ಸಹವಾಸ–ಇವೆಲ್ಲವೂ ಅಶಾಶ್ವತಗಳೆಂದು ತಿಳಿದು ಪಂಡಿತರಾದವರು ಅವುಗಳಲ್ಲಿ ಆಶೆಪಡುವುದಿಲ್ಲ.

ಆದುದರಿಂದಲೇ ಅರ್ಥಸಂಚಯದಲ್ಲಿರುವ ಅನರ್ಥಗಳನ್ನು ಮನಸ್ಸಿಗೆ ತಂದುಕೊಂಡು ಬುದ್ಧಿವಂತನಾದವನು ಐಶ್ವರ್ಯಪ್ರಾಪ್ತಿಗೆ ಆಶಿಸಬಾರದು. ಐಶ್ವರ್ಯವಂತನಾಗಿರುವ ಯಾವನೂ ದುಃಖದಿಂದ ವಿಮುಕ್ತನಾಗಿರುವುದಿಲ್ಲ. ಆದುದರಿಂದ ಮಹಾತ್ಮರು–ಅಪೇಕ್ಷೆಯಿಲ್ಲದೇ ದೈವಿಕವಾಗಿ ನ್ಯಾಯವಾದ ಮಾರ್ಗದಲ್ಲಿ ಪ್ರಾಪ್ತವಾಗುವ ಐಶ್ವರ್ಯವನ್ನು ಪ್ರಶಂಸಿಸುತ್ತಾರೆ. (ಆಶೆಯಿಲ್ಲದಿರುವುದೇ ಪರಮೈಶ್ವರ್ಯವೆಂದು ಭಾವಿಸುತ್ತಾರೆ.)

**ಧರ್ಮಾರ್ಥಂ ಯಸ್ಯ ವಿತ್ತೇಹಾ ವರಂ ತಸ್ಯ ನಿರೀಹತಾ ।**
**ಪ್ರಕ್ಷಾಲನಾದ್ಧಿ ಪಂಕಸ್ಯ ಶ್ರೇಯೋ ನ ಸ್ಪರ್ಶನಂ ನೃಣಾಮ್ ॥೪೯॥**

'ಅರ್ಥಸಂಚಯವು ಧರ್ಮಕಾರ್ಯಗಳನ್ನು ಮಾಡುವ ಸಲುವಾಗಿ' ಎಂದು ಕೆಲವರು ಹೇಳುವುದುಂಟು. ಕಾಯಕ್ಲೇಶ-ಮನಃಕ್ಲೇಶಗಳ ಮೂಲಕವಾಗಿ ಅರ್ಥಸಂಚಯನಮಾಡಿ ಧರ್ಮಕಾರ್ಯಗಳನ್ನು ಮಾಡುವುದಕ್ಕಿಂತಲೂ ಅಂತಹ ಅರ್ಥಕ್ಕೆ ಆಶೆಪಡದಿರುವುದೇ ಲೇಸೆಂಬುದು ನನ್ನ ಅಭಿಪ್ರಾಯ. ಕೆಸರನ್ನು ಮುಟ್ಟಿ ಕೈತೊಳೆಯುವ ಬದಲು ಕೆಸರನ್ನು ಮುಟ್ಟದಿರುವುದೇ ಲೇಸಲ್ಲವೇ? ಮಹಾರಾಜ! ಆದುದರಿಂದ ಯಾವುದನ್ನೂ

ಆಶಿಸಬೇಡ. ನೀನು ಧರ್ಮಿಷ್ಠನಾಗಿರಲು ಇಚ್ಛಿಸುವೆಯಾದರೆ–ಪ್ರಾಪಂಚಿಕ ವಾದ ವಸ್ತುಗಳಲ್ಲಿ ಆಶೆಯನ್ನು ತೊರೆದು ಬಾಳು."

ಧರ್ಮಜನು ಶೌನಕರು ಹೇಳಿದುದೆಲ್ಲವನ್ನೂ ಸಾವಧಾನವಾಗಿ ಕೇಳಿ ದನು. ಅಂತೆಯೇ ಸೂಕ್ತವಾದ ಉತ್ತರವನ್ನೂ ಕೊಟ್ಟನು.

"ಬ್ರಾಹ್ಮಣೋತ್ತಮರೇ! ಐಶ್ವರ್ಯಸಂಗ್ರಹವನ್ನು ಮಾಡಬೇಕೆಂಬ ನನ್ನ ಆಶಯವು ಸಂಗ್ರಹಿಸುವ ಐಶ್ವರ್ಯವನ್ನು ಉಪಭೋಗಿಸುವುದಕ್ಕಲ್ಲ. ನನ್ನನ್ನೇ ಹಿಂಬಾಲಿಸಿ ಬಂದಿರುವ ಬ್ರಾಹ್ಮಣರಿಗೆ ಆಶ್ರಯಕೊಡುವ ಸಲುವಾಗಿ ನಾನು ಐಶ್ವರ್ಯವನ್ನು ಆಶಿಸಿದೆನೇ ಹೊರತು ಬೇರಾವ ದುರಾಶೆಯಿಂದಲೂ ನಾನು ಐಶ್ವರ್ಯವನ್ನು ಸಂಗ್ರಹಿಸಲು ಬಯಸುವುದಿಲ್ಲ. ಅನುಸರಿಸಿ ಬಂದವರ ಆತಿಥ್ಯವನ್ನು ಮಾಡಲು ಯೋಗ್ಯತೆಯಿಲ್ಲದಿದ್ದರೆ ನನ್ನಂತಹವರು ಗೃಹಸ್ಥಾಶ್ರಮದಲ್ಲಿದ್ದೂ ಪ್ರಯೋಜನವೇನು?

**ಸಂವಿಭಾಗೋ ಹಿ ಭೂತಾನಾಂ ಸರ್ವೇಷಾಮೇವ ದೃಶ್ಯತೇ ।**
**ತಥೈವಾಪಚಮಾನೇಭ್ಯಃ ಪ್ರದೇಯಂ ಗೃಹಮೇಧಿನಾ ॥೫೩॥**

ಪ್ರಪಂಚದ ಎಲ್ಲ ಪ್ರಾಣಿಗಳೂ ತಮಗೆ ಬೇಕಾಗುವ ಆಹಾರವನ್ನು ಸಂಪಾದಿಸುವುದೂ ಮತ್ತು ತಮಗೆ ಸಂಬಂಧಿಸಿದವರಿಗೆ ಅದನ್ನು ಹಂಚಿಕೊಡುವುದೂ ಎಲ್ಲೆಡೆಗಳಲ್ಲಿಯೂ ಕಾಣುತ್ತಿದೆ. ಆದರೆ ಪ್ರಪಂಚದಲ್ಲಿ ತಮಗಾಗಿ ಆಹಾರವನ್ನು ಸಂಪಾದಿಸಿಕೊಳ್ಳದವರೂ, ಸ್ವಯಂಪಾಕಮಾಡಿ ಕೊಳ್ಳದವರೂ ಇದ್ದಾರೆ. ಸ್ವಯಂಪಾಕಮಾಡಿಕೊಳ್ಳಲು ಅನಧಿಕಾರಿಗಳಾದ ಅಂತಹ ಯತಿಗಳಿಗೂ, ಬ್ರಹ್ಮಚಾರಿಗಳಿಗೂ ಗೃಹಸ್ಥನಾದವನು ಅನ್ನವನ್ನು ನೀಡಬೇಕು.

**ತೃಣಾನಿ ಭೂಮಿರುದಕಂ ವಾಕ್ಚತುರ್ಥೀ ಚ ಸೂನೃತಾ ।**
**ಸತಾಮೇತಾನಿ ಗೇಹೇಷು ನೋಚ್ಛಿದ್ಯನ್ತೇ ಕದಾಚನ ॥೫೪॥**

ಬಂದವರಿಗೆ ಕುಳಿತುಕೊಳ್ಳಲು ದರ್ಭಾಸನ, ವಿಶ್ರಮಿಸಿಕೊಳ್ಳಲು ತಾನಿರುವ ಮನೆಯಲ್ಲಿ ಜಾಗ, ಬಾಯಾರಿಕೆಯನ್ನು ನಿವಾರಿಸಿಕೊಳ್ಳಲು ಶುದ್ಧವಾದ ಪಾನೀಯ, ನಾಲ್ಕನೆಯದಾಗಿ ಒಳ್ಳೆಯ ಮಾತುಗಳು-ಆಗಂತುಕ

ನಾದವನಿಗೆ ಈ ವಿಧವಾದ ಉಪಚಾರಗಳು ಸತ್ಪುರುಷರ ಮನೆಯಲ್ಲಿ ಎಂದಿಗೂ ನಿಲ್ಲುವುದಿಲ್ಲ.

**ದೇಯಮಾರ್ತಸ್ಯ ಶಯನಂ ಸ್ಥಿತಶ್ರಾನ್ತಸ್ಯ ಚಾಸನಮ್ ।**
**ತೃಷಿತಸ್ಯ ಚ ಪಾನೀಯಂ ಕ್ಷುಧಿತಸ್ಯ ಚ ಭೋಜನಮ್ ॥೫೫॥**

ಬಳಲಿ ಬಂದಿರುವವನಿಗೆ ಮಲಗಿಕೊಳ್ಳಲು ಹಾಸಿಗೆ, ನಿಂತು ಬಳಲಿದವನಿಗೆ ಕುಳಿತುಕೊಳ್ಳಲು ಆಸನ, ಬಾಯಾರಿದವನಿಗೆ ನೀರು, ಹಸಿದವನಿಗೆ ಆಹಾರ–ಇವುಗಳನ್ನು ಗೃಹಸ್ಥಾಶ್ರಮದಲ್ಲಿರುವವನು ಕೊಡಲೇಬೇಕು.

**ಚಕ್ಷುರ್ದದ್ಯಾನ್ಮನೋ ದದ್ಯಾದ್ವಾಚಂ ದದ್ಯಾತ್ಸುಭಾಷಿತಾಮ್ ।**
**ಉತ್ಥಾಯ ಚಾಸನಂ ದದ್ಯಾದೇಷ ಧರ್ಮಃ ಸನಾತನಃ ।**
**ಪ್ರತ್ಯುತ್ಥಾಯಾಭಿಗಮನಂ ಕುರ್ಯಾನ್ನ್ಯಾಯೇನ ಚಾರ್ಚನಮ್ ॥೫೬॥**

ಅತಿಥಿಯಾದವನಿಗೆ ಬೇಕಾದುದೇನೆಂದರೆ : ಗೃಹಸ್ಥನ ಹರ್ಷಸೂಚಕವಾದ ವೀಕ್ಷಣೆ, ಒಳ್ಳೆಯ ಮನಸ್ಸು ಮತ್ತು ಒಳ್ಳೆಯ ಮಾತು. ಗೃಹಸ್ಥನಾದವನು ಅತಿಥಿಯು ಬಂದೊಡನೆಯೇ ಮೇಲೆದ್ದು ಎದುರ್ಗೊಂಡು ಅವನನ್ನು ಹರ್ಷದಿಂದ ಸ್ವಾಗತಿಸಿ, ಆಸನದಲ್ಲಿ ಕುಳ್ಳಿರಿಸಿ ನ್ಯಾಯಾನುಸಾರವಾಗಿ ಸತ್ಕರಿಸಬೇಕು. ಇದೇ ಸನಾತನಧರ್ಮ.

**ಅಗ್ನಿಹೋತ್ರಮನಡ್ವಾಂಶ್ಚ ಜ್ಞಾತಯೋಽತಿಥಿಬಾನ್ಧವಾಃ ।**
**ಪುತ್ರಾ ದಾರಾಶ್ಚ ಭೃತ್ಯಾಶ್ಚ ನಿರ್ದಹೇಯುರಪೂಜಿತಾಃ ॥೫೭॥**

ಅಗ್ನಿಹೋತ್ರಾಗ್ನಿ, ಎತ್ತು, ಜ್ಞಾತಿಗಳು, ಅತಿಥಿಗಳು, ಬಂಧುಗಳು, ಮಕ್ಕಳು, ಪತ್ನೀ, ಸೇವಕರು–ಇವರನ್ನು ಗೃಹಸ್ಥನು ಯಥೋಚಿತವಾಗಿ ನೋಡಿಕೊಳ್ಳದಿದ್ದರೆ ಆ ಗೃಹಸ್ಥನನ್ನು ಇವರು ದಹಿಸಿಬಿಡುವರು.

**ಆತ್ಮಾರ್ಥಂ ಪಾಚಯೇನ್ನಾನ್ನಂ ನ ವೃಥಾ ಘಾತಯೇತ್ಪಶೂನ್ ।**
**ನ ಚ ತತ್ಸ್ವಯಮಶ್ನೀಯಾದ್ವಿಧಿವದ್ಯನ್ನ ನಿರ್ವಪೇತ್ ॥೫೮॥**

ತನ್ನೊಬ್ಬನಿಗಾಗಿಯೇ ಗೃಹಸ್ಥನಾದವನು ಅಡಿಗೆ ಮಾಡಿಸಬಾರದು. ಯೋಗ್ಯವಾದ ಕಾರಣವಿಲ್ಲದೇ ಪಶುಹನನವನ್ನು ಮಾಡಬಾರದು. ಗೃಹಸ್ಥನಾದವನು ದೇವತೆಗಳಿಗೂ, ಪಿತೃಗಳಿಗೂ ನಿವೇದನವಾಗದ ಅನ್ನವನ್ನು ಖಂಡಿತವಾಗಿಯೂ ತಿನ್ನಬಾರದು.

**ಶ್ವಭ್ಯಶ್ಚ ಶ್ವಪಚೇಭ್ಯಶ್ಚ ವಯೋಭ್ಯಶ್ಚಾವಪೇದ್ಭುವಿ ।**
**ವೈಶ್ವದೇವಂ ಹಿ ನಾಮೈತತ್ಸಾಯಂ ಪ್ರಾತಶ್ಚ ದೀಯತೇ ॥೫೯॥**

ಪ್ರಾತಃಕಾಲ ಮತ್ತು ಸಾಯಂಕಾಲಗಳಲ್ಲಿ ವೈಶ್ವದೇವವನ್ನು ಮಾಡಿ ನಾಯಿಗಳಿಗೂ, ಚಂಡಾಲರಿಗೂ ಮತ್ತು ಪಕ್ಷಿಗಳಿಗೂ (ಕಾಗೆಗಳಿಗೂ) ಅನ್ನವನ್ನು ಹಂಚಬೇಕು.

**ವಿಘಸಾಶೀ ಭವೇತ್ತಸ್ಮಾನ್ನಿತ್ಯಂ ಚಾಮೃತಭೋಜನಃ ।**
**ವಿಘಸೋ ಭುಕ್ತಶೇಷಂ ತು ಯಜ್ಞಶೇಷಂ ತಥಾಮೃತಮ್ ॥೬೦॥**

ಗೃಹಸ್ಥನು ನಿತ್ಯವೂ ವಿಘಸವನ್ನೂ ಅಮೃತವನ್ನೂ ಊಟಮಾಡಬೇಕು. ಅತಿಥಿಯನ್ನು ಸತ್ಕರಿಸಿ ಅವನು ಭೋಜನಮಾಡಿದನಂತರ ಉಳಿಯುವ ಅನ್ನಶೇಷಕ್ಕೆ ವಿಘಸವೆಂದು ಹೆಸರು. ದೇವತೆಗಳಿಗೂ, ಪಿತೃಗಳಿಗೂ ಯಜ್ಞದಲ್ಲಿ ಹವಿಸ್ಸನ್ನು ಸಮರ್ಪಿಸಿದನಂತರ ಉಳಿಯುವ ಯಜ್ಞಶೇಷಕ್ಕೆ ಅಮೃತವೆನ್ನುತ್ತಾರೆ.

**ಚಕ್ಷುರ್ದದ್ಯಾನ್ಮನೋ ದದ್ಯಾದ್ವಾಚಂ ದದ್ಯಾಚ್ಚ ಸೂನೃತಾಮ್ ।**
**ಅನುವ್ರಜೇದುಪಾಸೀತ ಸ ಯಜ್ಞಃ ಪಞ್ಚದಕ್ಷಿಣಃ ॥೬೧॥**

ಅತಿಥಿಯು ಮನೆಯ ಬಾಗಿಲಿಗೆ ಬಂದಾಗ ಯಜಮಾನನ ವಿಶ್ವಾಸ ಪೂರ್ವಕವಾದ ವೀಕ್ಷಣೆ ; ಅವನ ಸತ್ಕಾರದಲ್ಲಿ ಮನಃಪೂರ್ವಕವಾದ ಶ್ರದ್ಧೆ ; ಅವನೊಡನಾಡುವ ವಿನಯಪೂರ್ವಕವಾದ ಒಳ್ಳೆಯ ಮಾತುಗಳು ; ಇಷ್ಟವಾದ ವಸ್ತುಗಳಿಂದ ಅವನನ್ನು ತೃಪ್ತಿಪಡಿಸುವುದು ಮತ್ತು ಅತಿಥಿಯು ಹೊರಟಾಗ ಸ್ವಲ್ಪದೂರ ಜೊತೆಯಲ್ಲಿ ಹೋಗಿ ಕಳುಹಿಸುವುದು–ಈ ಐದು ಅತಿಥಿಸತ್ಕಾರವೆಂಬ ಮಹಾಯಜ್ಞದ ಪಂಚದಕ್ಷಿಣೆಗಳಾಗಿರುತ್ತವೆ.

**ಯೋ ದದ್ಯಾದಪರಿಕ್ಲಿಷ್ಟಮನ್ನಮಧ್ವನಿ ವರ್ತತೇ ।**
**ಶ್ರಾನ್ತಾಯಾದೃಷ್ಟಪೂರ್ವಾಯ ತಸ್ಯ ಪುಣ್ಯಫಲಂ ಮಹತ್ ॥೬೨॥**

ಹಿಂದೆಂದೂ ಕಂಡು-ಕೇಳದ, ದಾರಿನಡೆದು ಶ್ರಮಿಸಿ ಬಂದ ಅತಿಥಿಗೆ ಮಾಡುವ ಉತ್ತಮವಾದ ಅನ್ನದಾನದಿಂದ ಮಹಾಪುಣ್ಯವು ಲಭ್ಯವಾಗುತ್ತದೆ. ಈ ರೀತಿಯಲ್ಲಿ ತಾನು ಸಂಗ್ರಹಿಸಿದ ಧನದಿಂದ ಯತಿ-ಬ್ರಹ್ಮಚಾರಿ

ಗಳನ್ನು ಕಾಪಾಡುವುದೂ ಮತ್ತು ಅತಿಥಿ-ಅಭ್ಯಾಗತರನ್ನು ಸತ್ಕರಿಸುವುದೂ ಗೃಹಸ್ಥಾಶ್ರಮಿಯ ಶ್ರೇಷ್ಠಧರ್ಮವೆಂದು ಪಂಡಿತರು ಹೇಳುತ್ತಾರೆ. ಇದರಲ್ಲಿ ತಮ್ಮ ಅಭಿಪ್ರಾಯವೇನು ಶೌನಕರೇ?"

ಶೌನಕರೊಮ್ಮೆ ನಿಟ್ಟುಸಿರುಬಿಟ್ಟರು. ಪುನಃ ಯುಧಿಷ್ಠಿರನೊಡನೆ ಹೇಳತೊಡಗಿದರು :



**ಅಹೋ ಬತ ಮಹತ್ಕಷ್ಟಂ ವಿಪರೀತಮಿದಂ ಜಗತ್ ।**
**ಯೇನಾಪತ್ರಪತೇ ಸಾಧುರಸಾಧುಸ್ತೇನ ತುಷ್ಯತಿ ॥೬೪॥**

"ಅಯ್ಯೋ! ನಿಶ್ಚಯವಾಗಿಯೂ ಈ ವಿಶ್ವದಲ್ಲಿ ಶ್ರುತಿ-ಸ್ಮೃತಿಗಳ ವಿಷಯವಾಗಿ ಅನೇಕವಿಧವಾದ ಭಿನ್ನಾಭಿಪ್ರಾಯಗಳಿವೆ. ಯಾವುದೊಂದು

ಸ್ಮೃತಿವಾಕ್ಯದ ವಿಷಯದಲ್ಲಿ ಸತ್ಪುರುಷರು ನಾಚುತ್ತಾರೆಯೋ ಅದೇ ಸ್ಮೃತಿವಾಕ್ಯವನ್ನು ಅಸತ್ಪುರುಷರು ಅನುಸರಿಸಲು ಯೋಗ್ಯವೆನ್ನುತ್ತಾರೆ.

(ಸತ್ಪುರುಷನಾದವನು ಯಾವ ಒಂದು ಕಾರ್ಯವನ್ನು ಮಾಡಲು ನಾಚುತ್ತಾನೆಯೋ–ಅಸತ್ಪುರುಷನು ಅದೇ ಕಾರ್ಯವನ್ನು ಮಾಡುವುದರಿಂದ ತೃಪ್ತಿಹೊಂದುತ್ತಾನೆ.)

**ಶಿಶ್ನೋದರಕೃತೇಽಪ್ರಾಜ್ಞಃ ಕರೋತಿ ವಿಘಸಂ ಬಹು ।**
**ಮೋಹರಾಗವಶಾಕ್ರಾನ್ತ ಇನ್ದ್ರಿಯಾರ್ಥವಶಾನುಗಃ ॥೬೫॥**

ಶಿಶ್ನೋದರಗಳ ತೃಪ್ತಿಗಾಗಿಯೇ ಮೋಹ-ರಾಗಗಳಿಂದ ಆವರಿಸಲ್ಪಟ್ಟ ಮತ್ತು ಇಂದ್ರಿಯಸುಖಗಳಲ್ಲಿಯೇ ಆಸಕ್ತನಾದ ಮೂಢನು ಅತಿಥಿಸತ್ಕಾರವೇ ಮೊದಲಾದ ಕಾರ್ಯಗಳಿಂದ ಅನೇಕಾನೇಕ ವಿಘಸಗಳನ್ನು ಭುಂಜಿಸ ಬಹುದು. ಮನೋಭಿಲಾಷೆಯನ್ನು ಸಾಧಿಸಿಕೊಳ್ಳಲು ಅನೇಕ ಯಜ್ಞ-ಯಾಗಾದಿಗಳನ್ನೂ ಮಾಡಬಹುದು.

**ಹ್ರಿಯತೇ ಬುಧ್ಯಮಾನೋಽಪಿ ನರೋ ಹಾರಿಭಿರಿನ್ದ್ರಿಯೈಃ ।**
**ವಿಮೂಢಸಂಜ್ಞೋ ದುಷ್ಟಾಶ್ವೈರುದ್ಭ್ರಾನ್ತೈರಿವ ಸಾರಥಿಃ ॥೬೬॥**

ಗಾಬರಿಗೊಂಡ ತುಂಟಕುದುರೆಗಳು ಸಾರಥಿಯ ಹತೋಟಿಯನ್ನು ಮೀರಿ ಸಾರಥಿಯನ್ನೂ, ರಥವನ್ನೂ ವಿನಾಶದೆಡೆಗೆ ಒಯ್ಯುವಂತೆ ವಿಷಯ ಗಳ ಕಡೆಗೆ ಧಾವಿಸುವ ಇಂದ್ರಿಯಗಳು ತಿಳಿದವನನ್ನೂ ಮೋಸಗೊಳ್ಳುವಂತೆ ಮಾಡಿ ನಾಶದೆಡೆಗೆ ಒಯ್ಯುತ್ತವೆ.

**ಷಡಿನ್ದ್ರಿಯಾಣಿ ವಿಷಯಂ ಸಮಾಗಚ್ಛನ್ತಿ ವೈ ಯದಾ ।**
**ತದಾ ಪ್ರಾದುರ್ಭವತ್ಯೇಷಾಂ ಪೂರ್ವಸಂಕಲ್ಪಜಂ ಮನಃ ॥೬೭॥**

**ಮನೋ ಯಸ್ಯೇನ್ದ್ರಿಯಸ್ಯೇಹ ವಿಷಯಾನ್ಯಾತಿ ಸೇವಿತುಮ್ ।**
**ತಸ್ಯೌತ್ಸುಕ್ಯಂ ಸಮ್ಭವತಿ ಪ್ರವೃತ್ತಿಶ್ಚೋಪಜಾಯತೇ ॥೬೮॥**

ವಾಙ್ಮನಶ್ಚಕ್ಷುಃಶ್ರೋತ್ರಜಿಹ್ವಾಘ್ರಾಣರೂಪವಾದ (ಮಾತು, ಮನಸ್ಸು, ಕಣ್ಣು, ಕಿವಿ, ನಾಲಿಗೆ, ಮೂಗು) ಆರು ಇಂದ್ರಿಯಗಳು ತಮಗೆ ಬೇಕಾದ ವಸ್ತುಗಳನ್ನು ನೋಡಿದೊಡನೆಯೇ ಅವನ್ನು ಪಡೆಯುವ ಅಭಿಲಾಷೆಯನ್ನು

ಹೊಂದುತ್ತವೆ. ಒಡನೆಯೇ ಮನಸ್ಸು ಆಶೆಯಿಂದ ಉದ್ಬೋದಗೊಂಡು ಆ ವಸ್ತುವನ್ನು ಪಡೆದೇತೀರಬೇಕೆಂಬ ಸಂಕಲ್ಪವನ್ನು ಮಾಡುತ್ತದೆ. ಮನಸ್ಸು ಯಾವ ಇಂದ್ರಿಯದ ವಿಷಯವನ್ನು ಸೇವಿಸಲು ಮುಂದಾಗುವುದೋ ಆ ಇಂದ್ರಿಯವು ಔತ್ಸುಕ್ಯದಿಂದ ವಿಷಯಸೇವನೆಯಲ್ಲಿ ಪ್ರವೃತ್ತವಾಗುತ್ತದೆ.

**ತತಃ ಸಂಕಲ್ಪಬೀಜೇನ ಕಾಮೇನ ವಿಷಯೇಷುಭಿಃ ।**
**ವಿದ್ಧಃ ಪತತಿ ಲೋಭಾಗ್ನೌ ಜ್ಯೋತಿರ್ಲೋಭಾತ್ಪತಙ್ಗವತ್ ॥೧೯॥**

ಅನಂತರ–ಪತಂಗದ ಹುಳುವು ಬೆಳಕೆಂಬ ಭ್ರಾಂತಿಯಿಂದ ಬೆಂಕಿಯಲ್ಲಿ ಬಿದ್ದು ಭಸ್ಮವಾಗಿಹೋಗುವಂತೆ–ಮಾನವನು ಸಂಕಲ್ಪಮಾತ್ರದಿಂದಲೇ ಹುಟ್ಟುವ ಕಾಮದೇವನ ವಿಷಯಗಳೆಂಬ ಬಾಣಗಳಿಗೆ ತುತ್ತಾಗಿ ಲೋಭವೆಂಬ ಮಹಾಗ್ನಿಯಲ್ಲಿ ಬೀಳುತ್ತಾನೆ.

**ತತೋ ವಿಹಾರೈರಾಹಾರೈರ್ಮೋಹಿತಶ್ಚ ಯಥೇಪ್ಸಯಾ ।**
**ಮಹಾಮೋಹೇ ಸುಖೇ ಮಗ್ನೋ ನಾತ್ಮಾನಮವಬುಧ್ಯತೇ ॥೨೦॥**

ಇಂದ್ರಿಯಸುಖವನ್ನೇ ಆಶಿಸಿ ಹೋಗುವಾಗ ಆಹಾರ-ವಿಹಾರಗಳಲ್ಲಿ ಸ್ವೇಚ್ಛೆಯಿಂದ ವರ್ತಿಸುವ ಮಾನವನು ಅದರಿಂದಲೇ ಮೋಹಿತನಾಗಿಬಿಡು ತ್ತಾನೆ. ತಾತ್ಕಾಲಿಕವಾಗಿ ಸಿಕ್ಕುವ ಮಹಾಮೋಹಕವಾದ ಸುಖದಲ್ಲಿಯೇ ತಲ್ಲೀನನಾಗುತ್ತಾನೆ. ಅವನಿಗೆ–'ತಾನು ಯಾರು?'–ಎಂಬ ಅರಿವೇ ಇರುವು ದಿಲ್ಲ.

**ಏವಂ ಪತತಿ ಸಂಸಾರೇ ತಾಸು ತಾಸ್ವಿಹ ಯೋನಿಷು ।**
**ಅವಿದ್ಯಾಕರ್ಮತೃಷ್ಣಾಭಿರ್ಭ್ರಾಮ್ಯಮಾಣೋಽಥ ಚಕ್ರವತ್ ॥೨೧॥**

ಜೀವನು–ಚಕ್ರವು ಸುತ್ತುವಂತೆ–ಅವಿದ್ಯೆ, ಕರ್ಮ ಮತ್ತು ಆಶೆಯ ಕಾರಣದಿಂದಲೇ ಭಿನ್ನ-ಭಿನ್ನವಾದ ಅನೇಕಯೋನಿಗಳಲ್ಲಿ ಜನ್ಮಗಳನ್ನು ಪಡೆಯುತ್ತಾ ಸಂಸಾರದಲ್ಲಿ ಬೀಳುತ್ತಾನೆ.

**ಬ್ರಹ್ಮಾದಿಷು ತೃಣಾನ್ತೇಷು ಭೂತೇಷು ಪರಿವರ್ತತೇ ।**
**ಜಲೇ ಭುವಿ ತಥಾಕಾಶೇ ಜಾಯಮಾನಃ ಪುನಃ ಪುನಃ ॥೨೨॥**

ಬ್ರಹ್ಮನಿಂದ ಹಿಡಿದು ತೃಣದವರೆಗೂ ನಾನಾವಿಧವಾದ ಜನ್ಮಗಳ

ನ್ನೆತ್ತುತ್ತಾನೆ. ಕೆಲವು ಜನ್ಮಗಳನ್ನು ನೀರಿನಲ್ಲಿಯೂ, ಕೆಲವು ಜನ್ಮಗಳನ್ನು ಭೂಮಿಯಲ್ಲಿಯೂ, ಕೆಲವು ಜನ್ಮಗಳನ್ನು ಅಂತರಿಕ್ಷದಲ್ಲಿಯೂ ಕಳೆಯುತ್ತಾನೆ. ಅಜ್ಞಾನಿಗಳಾದವರ ಅವಸ್ಥೆಯೇ ಹೀಗಾಗುತ್ತದೆ. ಇನ್ನು ವಿವೇಕಿಗಳು ಹೇಗಿರುವರೆಂಬುದನ್ನು ಹೇಳುವೆನು, ಕೇಳು : ಅವರು ಯಾವಾಗಲೂ ಧರ್ಮದಲ್ಲಿಯೂ, ಕಲ್ಯಾಣಮಾರ್ಗದಲ್ಲಿಯೂ ಆಸಕ್ತರಾಗಿರುತ್ತಾ ಸದಾ ಮೋಕ್ಷೈಕ ವಿಷಯದಲ್ಲಿಯೇ ನಿರತರಾಗಿರುತ್ತಾರೆ.

**ತದಿದಂ ವೇದವಚನಂ ಕುರು ಕರ್ಮ ತ್ಯಜೇತಿ ಚ ।**
**ತಸ್ಮಾದ್ಧರ್ಮಾನಿಮಾನ್ಸರ್ವಾನ್ನಾಭಿಮಾನಾತ್ಸಮಾಚರೇತ್ ॥೭೪॥**

ವೇದಗಳು ಕರ್ಮಮಾಡಲು ಹೇಳುತ್ತವೆ. ಆದರೆ ಫಲಾಪೇಕ್ಷೆಯಿಲ್ಲದೇ ಕರ್ಮಮಾಡಬೇಕೆಂದು ಸಾರಿ-ಸಾರಿ ಹೇಳುತ್ತವೆ. ಕರ್ಮಗಳೆಲ್ಲವನ್ನೂ ಯಾವ ವಿಧವಾದ ಆತ್ಮಾಭಿಮಾನವೂ ಇಲ್ಲದೇ ದೇವಪ್ರೀತ್ಯರ್ಥವಾಗಿಯೇ ಮಾಡಬೇಕು.

**ಇಜ್ಯಾಧ್ಯಯನದಾನಾನಿ ತಪಃ ಸತ್ಯಂ ಕ್ಷಮಾ ದಮಃ ।**
**ಅಲೋಭ ಇತಿ ಮಾರ್ಗೋಽಯಂ ಧರ್ಮಸ್ಯಾಷ್ಟವಿಧಃ ಸ್ಮೃತಃ ॥೭೫॥**

ಯಜ್ಞ, ಅಧ್ಯಯನ, ದಾನ, ತಪಸ್ಸು, ಸತ್ಯ, ಕ್ಷಮೆ, ದಮ (ಇಂದ್ರಿಯನಿಗ್ರಹ), ಅಲೋಭ–ಈ ಎಂಟು ಮಾನವನು ಅನುಸರಿಸಬೇಕಾದ ಅಷ್ಟಧರ್ಮಗಳು. ಇವುಗಳಲ್ಲಿ :

**ಅತ್ರ ಪೂರ್ವಶ್ಚತುರ್ವರ್ಗಃ ಪಿತೃಯಾಣಪಥೇ ಸ್ಥಿತಃ ।**
**ಕರ್ತವ್ಯಮಿತಿ ಯತ್ಕಾರ್ಯಂ ನಾಭಿಮಾನಾತ್ಸಮಾಚರೇತ್ ॥೭೬॥**

ಮೊದಲನೆಯ-ಯಜ್ಞ, ಅಧ್ಯಯನ, ದಾನ, ತಪಸ್ಸು–ಈ ನಾಲ್ಕು ಧರ್ಮಗಳು ಪಿತೃಲೋಕಗಳನ್ನು ಪಡೆಯಲು ಸಾಧಕಗಳಾಗುತ್ತವೆ. ಈ ನಾಲ್ಕು ಧರ್ಮಗಳನ್ನೂ ನಿರಭಿಮಾನದಿಂದಲೂ, ಕರ್ತವ್ಯದೃಷ್ಟಿಯಿಂದಲೂ, ಫಲೇಚ್ಛೆಯಿಲ್ಲದೆಯೂ ಆಚರಿಸಬೇಕು.

**ಉತ್ತರೋ ದೇವಯಾನಸ್ತು ಸದ್ಭಿರಾಚರಿತಃ ಸದಾ ।**
**ಅಷ್ಟಾಙ್ಗೇನೈವ ಮಾರ್ಗೇಣ ವಿಶುದ್ಧಾತ್ಮಾ ಸಮಾಚರೇತ್ ॥೭೭॥**

ಉಳಿದ–ಸತ್ಯ, ಕ್ಷಮೆ, ದಮ, ಅಲೋಭ–ಇವುಗಳ ಆಚರಣೆಯಿಂದ

ದೇವಲೋಕದ ಪ್ರಾಪ್ತಿಯಾಗುತ್ತದೆ. ವಿಶುದ್ಧಾತ್ಮನಾದವನು ಈ ಅಷ್ಟಾಂಗ ಧರ್ಮದಿಂದಲೇ ಮುಕ್ತಿಯನ್ನು ಪಡೆಯುತ್ತಾನೆ.

**ಸಮ್ಯಕ್ಸಂಕಲ್ಪಸಂಬನ್ಧಾತ್ಸಮ್ಯಕ್ಚೇನ್ದ್ರಿಯನಿಗ್ರಹಾತ್ ।**
**ಸಮ್ಯಗ್ವ್ರತವಿಶೇಷಾಚ್ಚ ಸಮ್ಯಕ್ಚ ಗುರುಸೇವನಾತ್ ॥೭೮॥**

**ಸಮ್ಯಗಾಹಾರಯೋಗಾಚ್ಚ ಸಮ್ಯಕ್ಚಾಧ್ಯಯನಾಗಮಾತ್ ।**
**ಸಮ್ಯಕ್ಕರ್ಮೋಪಸಂನ್ಯಾಸಾತ್ಸಮ್ಯಕ್ಚಿತ್ತನಿರೋಧನಾತ್ ॥೭೯॥**

ಒಂದು ಒಳ್ಳೆಯ ಧ್ಯೇಯವನ್ನಿಟ್ಟುಕೊಂಡು ಸತ್ಸಂಕಲ್ಪಮಾಡುವುದರಿಂದಲೂ, ಇಂದ್ರಿಯಗಳನ್ನು ಚೆನ್ನಾಗಿ ನಿಗ್ರಹಿಸುವುದರಿಂದಲೂ, ಅಹಿಂಸಾದಿವ್ರತಗಳನ್ನು ಚೆನ್ನಾಗಿ ಪರಿಪಾಲಿಸುವುದರಿಂದಲೂ, ಗುರುಜನರನ್ನು ಚೆನ್ನಾಗಿ ಶ್ರದ್ಧೆಯಿಂದ ಸೇವಿಸುವುದರಿಂದಲೂ, ಯೋಗಸಾಧನೆಗೆ ಅನುಕೂಲವಾದ ಆಹಾರವನ್ನು ಸೇವಿಸುವುದರಿಂದಲೂ, ಚೆನ್ನಾಗಿ ವೇದಗಳನ್ನು ಅಧ್ಯಯನಮಾಡುವುದರಿಂದಲೂ, ಫಲಾಪೇಕ್ಷೆಯಿಲ್ಲದೇ ಕರ್ಮಮಾಡುವುದರಿಂದಲೂ ಮನಸ್ಸನ್ನು ವಿಷಯಗಳ ಕಡೆಗೆ ಹೋಗದಂತೆ ತಡೆಯುವುದರಿಂದಲೂ ಮನುಷ್ಯನು ಪರಮಕಲ್ಯಾಣವನ್ನು ಹೊಂದುತ್ತಾನೆ.

**ಏವಂ ಕರ್ಮಾಣಿ ಕುರ್ವನ್ತಿ ಸಂಸಾರವಿಜಿಗೀಷವಃ ।**

ಸಂಸಾರವನ್ನು ಜಯಿಸಲಿಚ್ಛಿಸುವವರು, ರಾಗ-ದ್ವೇಷಾದಿಗಳಿಂದ ದೂರವಾಗಲಿಚ್ಛಿಸುವವರು–ಈ ವಿಧವಾದ ಕರ್ಮಗಳನ್ನು ಮಾಡುತ್ತಾರೆ.

**ರಾಗದ್ವೇಷವಿನಿರ್ಮುಕ್ತಾ ಐಶ್ವರ್ಯಂ ದೇವತಾ ಗತಾಃ ॥೮೦॥**

ರಾಗ-ದ್ವೇಷಗಳಿಂದ ವಿಮುಕ್ತರಾದುದರಿಂದಲೇ ದೇವತೆಗಳು ದೇವತ್ವವೆಂಬ ಐಶ್ವರ್ಯವನ್ನು ಪಡೆದರು.

ಯೋಗೈಶ್ವರ್ಯವನ್ನು ಸಾಧಿಸಿದ ರುದ್ರರೂ, ಸಾಧ್ಯರೂ, ಆದಿತ್ಯರೂ, ವಸುಗಳೂ ಮತ್ತು ಅಶ್ವಿನೀದೇವತೆಗಳೂ ಪ್ರಜಾಕೋಟಿಯನ್ನೇ ಆಳುತ್ತಿದ್ದಾರೆ. ಅವರಂತೆಯೇ ನೀನೂ ಸಹ ಸಂಕಲ್ಪಪೂರ್ವಕವಾದ ಕರ್ಮಗಳನ್ನು ಪೂರ್ಣವಾಗಿ ತ್ಯಜಿಸಿ, ಯೋಗಾಭ್ಯಾಸದಿಂದಲೂ–ತಪಸ್ಸಿನಿಂದಲೂ ಯೋಗೈಶ್ವರ್ಯವನ್ನು ಪಡೆಯುವವನಾಗು.

**'ದ್ಯೌಃ ಪಿತಾ ಪೃಥಿವೀ ಮಾತಾ'**–ಎಂಬ ಶ್ರುತ್ಯನುಸಾರವಾಗಿ ಪಿತೃ-

ಮಾತೃರೂಪವಾದ ಭೂಮಿಯನ್ನೂ ಮತ್ತು ಸ್ವರ್ಗವನ್ನೂ ಯುದ್ಧದಿಂದಲೂ, ಯಜ್ಞ-ಯಾಗಾದಿಗಳಿಂದಲೂ ನೀನು ಸಾಧಿಸಿರುವೆ. ನಿನ್ನನ್ನನುಸರಿಸಿ ಬಂದಿರುವ ಬ್ರಾಹ್ಮಣರ ಭರಣಾರ್ಥವಾಗಿ ತಪಸ್ಸಿನ ಸಿದ್ಧಿಯನ್ನು ಪಡೆಯುವುದು ಯುಕ್ತವಾಗಿದೆ. ಸಿದ್ಧರು ತಪಸ್ಸಿನಿಂದ ತಮಗೆ ಇಚ್ಛೆಯಿರುವುದೆಲ್ಲವನ್ನೂ ಪಡೆಯುತ್ತಾರೆ. ಅದರಂತೆಯೇ ನೀನೂ ತಪಶ್ಚರಣೆಯಿಂದ ನಿನ್ನ ಮನೋರಥವನ್ನು ಈಡೇರಿಸಿಕೊಳ್ಳಬಹುದು. ಮಹಾರಾಜ!"–ಎಂದು ಹೇಳಿ ಶೌನಕರು ವಿರಮಿಸಿದರು.

೨ನೆಯ ಅಧ್ಯಾಯವು ಮುಗಿಯಿತು.

೩ನೆಯ ಅಧ್ಯಾಯ ಅರಣ್ಯಪರ್ವ (ಮುಂದುವರಿದಿದೆ.)

## ಅನ್ನಕ್ಕಾಗಿ ಯುಧಿಷ್ಠಿರನಿಂದ ಸೂರ್ಯಪ್ರಾರ್ಥನೆ : ಅಕ್ಷಯಪಾತ್ರೆಯ ಪ್ರಾಪ್ತಿ

ಜನಮೇಜಯ! ಶೌನಕರು ಹೀಗೆಂದು ಹೇಳಿದನಂತರ ಕುಂತೀಪುತ್ರನಾದ, ಅನುಜರಿಂದ ಪರಿವೃತನಾಗಿದ್ದ ಯುಧಿಷ್ಠಿರನು ಪುರೋಹಿತರಾದ ಧೌಮ್ಯರ ಸಮೀಪಕ್ಕೆ ಹೋಗಿ ಅವರನ್ನು ಕುರಿತು ಹೀಗೆಂದು ಹೇಳಿದನು :

"ಬ್ರಾಹ್ಮಣೋತ್ತಮರೇ! ವೇದ-ವೇದಾಂಗಪಾರಂಗತರಾದ ಬ್ರಾಹ್ಮಣರು, ವನವಾಸಕ್ಕೆ ಹೊರಟಿರುವ ನಮ್ಮನ್ನೇ ಅನುಸರಿಸಿ ಬರುತ್ತಿದ್ದಾರೆ. ಅನೇಕವಿಧವಾದ ಕಷ್ಟಗಳಿಗೆ ಸಿಕ್ಕಿ, ಮಹಾದುಃಖದಲ್ಲಿರುವ ನಾನು ಅವರನ್ನು ಪೋಷಿಸಲು ಅಸಮರ್ಥನಾಗಿದ್ದೇನೆ. ನನ್ನ ಪರಿಸ್ಥಿತಿಯು ಹೀಗಿದ್ದರೂ ಅವರನ್ನು ತ್ಯಜಿಸಲು ಇಚ್ಛೆಯಿಲ್ಲ. ಅವರಿಗಿಷ್ಟವಾದುದನ್ನು ದಾನಮಾಡುವ ಸಾಮರ್ಥ್ಯವೂ ಇಲ್ಲ. ಇಂತಹ ಸಂದಿಗ್ಧಸಂದರ್ಭದಲ್ಲಿ ಏನನ್ನು ಮಾಡಿದರೆ ಇಷ್ಟಪ್ರಾಪ್ತಿಯಾಗುವುದೆಂಬುದನ್ನು ದಯೆಯಿಟ್ಟು ತಿಳಿಸಿರಿ."

ಧರ್ಮಿಷ್ಠರಲ್ಲಿ ಶ್ರೇಷ್ಠರಾದ ಧೌಮ್ಯರು ಕ್ಷಣಕಾಲ ಯೋಗಮುದ್ರೆಯನ್ನು ಧರಿಸಿ ಪ್ರಕೃತಪರಿಸ್ಥಿತಿಯಲ್ಲಿ ಧರ್ಮಜನು ಏನು ಮಾಡಬೇಕೆಂಬುದನ್ನು ಧರ್ಮದಿಂದ ನಿರ್ಧರಿಸಿದವರಾಗಿ ಕಣ್ತೆರೆದು ಹೇಳಿದರು :

"ಹಿಂದೊಂದು ಕಾಲದಲ್ಲಿ ಬ್ರಹ್ಮನಿಂದ ಸೃಷ್ಟವಾದ ಪ್ರಾಣಿಗಳೆಲ್ಲವೂ ಆಹಾರವಿಲ್ಲದೇ ಹಸಿವು-ಬಾಯಾರಿಕೆಗಳಿಂದ ಬಳಲಿದ್ದುವು. ತಂದೆಯಾದವನು

ಮಕ್ಕಳ ಮೇಲೆ ಕನಿಕರವನ್ನು ತೋರುವಂತೆ–ಸೂರ್ಯದೇವನು ಹಸಿವು-ಬಾಯಾರಿಕೆಗಳಿಂದ ಬಳಲಿದ್ದ ಪ್ರಾಣಿಗಳ ವಿಷಯದಲ್ಲಿ ಕನಿಕರಗೊಂಡವನಾಗಿ ಉತ್ತರಾಯಣಮಾರ್ಗವನ್ನು ಆಶ್ರಯಿಸಿ, ತನ್ನ ಕಿರಣಗಳಿಂದ ರಸಗಳನ್ನು ಹೀರಿಕೊಂಡು, ದಕ್ಷಿಣದ ಕಡೆಗೆ ತಿರುಗಿ, ಭೂಮಿಯ ಮೇಲ್ಭಾಗದಲ್ಲಿ ತೇಜಸ್ಸನ್ನು ಕೇಂದ್ರೀಕರಿಸಿಕೊಂಡು ನಿಂತನು. ಸೂರ್ಯನು ಆ ಸ್ಥಿತಿಯಲ್ಲಿದ್ದುದನ್ನು ಕಂಡು ಓಷಧಿಗಳ ನಾಯಕನಾದ ಚಂದ್ರನು ಶೀತಲವಾದ ತನ್ನ ಕಿರಣಗಳಿಂದ ಸೂರ್ಯನ ಕಿರಣಗಳಲ್ಲಿದ್ದ ರಸಗಳನ್ನು ಮೋಡಗಳನ್ನಾಗಿ ಪರಿವರ್ತಿಸಿ ಅನಂತರದಲ್ಲಿ ಆ ಮೋಡಗಳ ಮೂಲಕವಾಗಿ ಭೂಮಿಯ ಮೇಲೆ ಮಳೆಗರೆಯುವಂತೆ ಮಾಡಿದನು. ಭೂಮಿಯ ಮೇಲೆ ಮಳೆಯು ಬಿದ್ದೊಡನೆಯೇ ಸಸ್ಯಗಳು ಬೆಳೆಯತೊಡಗಿದುವು. ಈ ಕಾರಣದಿಂದಾಗಿ ಭೂಮಿಯಲ್ಲಿ ಷಡ್ರಸಗಳ ಉತ್ಪಾದನೆಗೆ ಸೂರ್ಯನೇ ಮುಖ್ಯಕಾರಣನಾದನು. ಸೂರ್ಯರಶ್ಮಿಗಳಿಂದ ಉತ್ಪನ್ನವಾದ ಆ ಷಡ್ರಸಭರಿತವಾದ ಓಷಧಿಗಳು ಮುಂದೆ ಪ್ರಾಣಿಗಳ ಆಹಾರವಾಗಿ ಪರಿಣಮಿಸಿದುವು. ಈ ಕಾರಣದಿಂದಾಗಿ ಸೂರ್ಯದೇವನು ಪ್ರಪಂಚದ ಸಕಲಪ್ರಾಣಿಗಳಿಗೂ ತಂದೆಯೆಂದೇ ಕರೆಯಲ್ಪಡುತ್ತಾನೆ. ನೀನೂ ಕೂಡ ಈ ಸಮಯದಲ್ಲಿ ಸೂರ್ಯದೇವನಿಗೆ ಶರಣಾಗತನಾಗುವುದೇ ಯುಕ್ತವಾಗಿದೆ. ಮಹಾತ್ಮರಾದ, ಶುದ್ಧಾಂತಃಕರಣರಾದ ರಾಜರು ತಪಶ್ಚರಣೆಯ ಮೂಲಕ ತಮ್ಮ ಪ್ರಜೆಗಳಿಗೆ ಬೇಕಾದ ಇಷ್ಟಾರ್ಥಗಳನ್ನು ಸಾಧಿಸಿಕೊಳ್ಳುತ್ತಿದ್ದರು. ಕ್ಷತ್ರಿಯಶ್ರೇಷ್ಠರಾದ ಭೀಮ, ಕಾರ್ತವೀರ್ಯ, ವೈನ್ಯ, ನಹುಷ–ಮುಂತಾದವರು ದೇಶದಲ್ಲಿ ಉಪದ್ರವಗಳು ತಲೆದೋರಿದಾಗ ವ್ರತ-ನಿಯಮಗಳಿಂದ ತಪಶ್ಚರಣೆಮಾಡಿ ತಮ್ಮ ಪ್ರಜೆಗಳನ್ನು ಕಷ್ಟದಿಂದ ಪಾರುಮಾಡಿದರು. ಆದುದರಿಂದ ನೀನು ಶುದ್ಧಾಂತಃಕರಣನಾಗಿ ವ್ರತ-ನಿಯಮಾದಿಗಳಿಂದ ತಪಶ್ಚರಣೆಮಾಡಿ ನಿನ್ನನ್ನನುಸರಿಸಿ ಬಂದಿರುವ ಬ್ರಾಹ್ಮಣೋತ್ತಮರನ್ನು ಪಾಲಿಸುವ ಶಕ್ತಿಯನ್ನು ಪಡೆದುಕೊಳ್ಳುವುದು ಯೋಗ್ಯವಾಗಿದೆ."

ಧೌಮ್ಯರು ಯುಧಿಷ್ಠಿರನಿಗೆ ಹೇಳಿದ ಸೂರ್ಯೋಪಾಸನೆಯ ಮಹತ್ವವನ್ನು ವೈಶಂಪಾಯನರಿಂದ ತಿಳಿದ ಜನಮೇಜಯನು ಪುನಃ ಪ್ರಶ್ನಿಸಿದನು :

"ಬ್ರಾಹ್ಮಣೋತ್ತಮರೇ! ಬ್ರಾಹ್ಮಣರನ್ನು ಪೋಷಿಸುವ ಸಲುವಾಗಿ

ಕುರುಶ್ರೇಷ್ಠನಾದ ನಮ್ಮ ಮುತ್ತಾತನಾದ ಯುಧಿಷ್ಠಿರನು ಸೂರ್ಯದೇವನನ್ನು ಹೇಗೆ ಒಲಿಸಿಕೊಂಡನೆಂಬುದನ್ನು ಸವಿಸ್ತರವಾಗಿ ಹೇಳಿರಿ.

"ಮಹಾರಾಜ! ಅನನ್ಯಮನಸ್ಕನಾಗಿ ಶುಚೀಭೂತನಾಗಿ ಕೇಳು. ಉತ್ಸಾಹವುಳ್ಳವನಾಗು. ಪುಣ್ಯಪ್ರದವಾದ ಆ ಚರಿತ್ರೆಯನ್ನು ವಿಸ್ತರಿಸಿ ಹೇಳುತ್ತೇನೆ. ಪುರೋಹಿತರಾದ ಧೌಮ್ಯರು ಅತಿಥಿಸತ್ಕಾರಮಾಡಲು ಸೂರ್ಯದೇವನಿಂದ ವರವನ್ನು ಪಡೆದುಕೊಳ್ಳುವಂತೆ ಯುಧಿಷ್ಠಿರನಿಗೆ ಹೇಳಿ ರಹಸ್ಯವಾದ, ಬ್ರಹ್ಮನಿಂದ ಉಪದಿಷ್ಟವಾದ ಸೂರ್ಯಾಷ್ಟೋತ್ತರಶತನಾಮಗಳನ್ನು ಉಪದೇಶಿಸಿದರು. ಆ ಅಷ್ಟೋತ್ತರಶತನಾಮಗಳನ್ನೇ ನಾನು ನಿನಗೂ ಹೇಳುವೆನು. ಭಕ್ತಿಯಿಂದಲೂ–ಶ್ರದ್ಧೆಯಿಂದಲೂ ಕೇಳುವವನಾಗು."

ಧೌಮ್ಯರು ಪ್ರಣವಪೂರ್ವಕವಾಗಿ ತದೇಕಚಿತ್ತನಾಗಿದ್ದ ಯುಧಿಷ್ಠಿರನನ್ನು ಕುರಿತು ಹೇಳತೊಡಗಿದರು :

**ಸೂರ್ಯೋಽರ್ಯಮಾ ಭಗಸ್ತ್ವಷ್ಟಾ ಪೂಷಾರ್ಕಃ ಸವಿತಾ ರವಿಃ ।**
**ಗಭಸ್ತಿಮಾನಜಃ ಕಾಲೋ ಮೃತ್ಯುರ್ಧಾತಾ ಪ್ರಭಾಕರಃ ॥೧೬॥**

**ಪೃಥಿವ್ಯಾಪಶ್ಚ ತೇಜಶ್ಚ ಖಂ ವಾಯುಶ್ಚ ಪರಾಯಣಮ್ ।**
**ಸೋಮೋ ಬೃಹಸ್ಪತಿಃ ಶುಕ್ರೋ ಬುಧೋಽಙ್ಗಾರಕ ಏವ ಚ ॥೧೭॥**

**ಇನ್ದ್ರೋ ವಿವಸ್ವಾನ್ದೀಪ್ತಾಂಶುಃ ಶುಚಿಃ ಶೌರಿಃ ಶನೈಶ್ಚರಃ ।**
**ಬ್ರಹ್ಮಾ ವಿಷ್ಣುಶ್ಚ ರುದ್ರಶ್ಚ ಸ್ಕನ್ದೋ ವೈ ವರುಣೋ ಯಮಃ ॥೧೮॥**

**ವೈದ್ಯುತೋ ಜಾಠರಶ್ಚಾಗ್ನಿರೈನ್ಧನಸ್ತೇಜಸಾಂ ಪತಿಃ ।**
**ಧರ್ಮಧ್ವಜೋ ವೇದಕರ್ತಾ ವೇದಾಙ್ಗೋ ವೇದವಾಹನಃ ॥೧೯॥**

**ಕೃತಂ ತ್ರೇತಾ ದ್ವಾಪರಶ್ಚ ಕಲಿಃ ಸರ್ವಮಲಾಶ್ರಯಃ ।**
**ಕಲಾ ಕಾಷ್ಠಾ ಮುಹೂರ್ತಾಶ್ಚ ಕ್ಷಪಾ ಯಾಮಸ್ತಥಾ ಕ್ಷಣಃ ॥೨೦॥**

**ಸಂವತ್ಸರಕರೋಽಶ್ವತ್ಥಃ ಕಾಲಚಕ್ರೋ ವಿಭಾವಸುಃ ।**
**ಪುರುಷಃ ಶಾಶ್ವತೋ ಯೋಗೀ ವ್ಯಕ್ತಾವ್ಯಕ್ತಃ ಸನಾತನಃ ॥೨೧॥**

**ಕಾಲಾಧ್ಯಕ್ಷಃ ಪ್ರಜಾಧ್ಯಕ್ಷೋ ವಿಶ್ವಕರ್ಮಾ ತಮೋನುದಃ ।**
**ವರುಣಃ ಸಾಗರೋಂಽಶುಶ್ಚ ಜೀಮೂತೋ ಜೀವನೋಽರಿಹಾ ॥೨೨॥**

ಭೂತಾಶ್ರಯೋ ಭೂತಪತಿಃ ಸರ್ವಲೋಕನಮಸ್ಕೃತಃ ।
ಸ್ರಷ್ಟಾ ಸಂವರ್ತಕೋ ವಹ್ನಿಃ ಸರ್ವಸ್ಯಾದಿರಲೋಲುಪಃ ॥೨೩॥

ಅನನ್ತಃ ಕಪಿಲೋ ಭಾನುಃ ಕಾಮದಃ ಸರ್ವತೋಮುಖಃ ।
ಜಯೋ ವಿಶಾಲೋ ವರದಃ ಸರ್ವಧಾತುನಿಷೇವಿತಾ ॥೨೪॥

ಮನಃಸುಪರ್ಣೋ ಭೂತಾದಿಃ ಶೀಘ್ರಗಃ ಪ್ರಾಣಧಾರಕಃ ।
ಧನ್ವನ್ತರಿರ್ಧೂಮಕೇತುರಾದಿದೇವೋಽದಿತೇಃ ಸುತಃ ॥೨೫॥

ದ್ವಾದಶಾತ್ಮಾರವಿನ್ದಾಕ್ಷಃ ಪಿತಾ ಮಾತಾ ಪಿತಾಮಹಃ ।
ಸ್ವರ್ಗದ್ವಾರಂ ಪ್ರಜಾದ್ವಾರಂ ಮೋಕ್ಷದ್ವಾರಂ ತ್ರಿವಿಷ್ಟಪಮ್ ॥೨೬॥

ದೇಹಕರ್ತಾ ಪ್ರಶಾನ್ತಾತ್ಮಾ ವಿಶ್ವಾತ್ಮಾ ವಿಶ್ವತೋಮುಖಃ ।
ಚರಾಚರಾತ್ಮಾ ಸೂಕ್ಷ್ಮಾತ್ಮಾ ಮೈತ್ರೇಯಃ ಕರುಣಾನ್ವಿತಃ ॥೨೭॥

ಏತದ್ವೈ ಕೀರ್ತನೀಯಸ್ಯ ಸೂರ್ಯಸ್ಯಾಮಿತತೇಜಸಃ ।
ನಾಮಾಷ್ಟಶತಕಂ ಚೇದಂ ಪ್ರೋಕ್ತಮೇತತ್ಸ್ವಯಂಭುವಾ ॥೨೮॥

1) ಸೂರ್ಯಃ 2) ಅರ್ಯಮಾ 3) ಭಗಃ 4) ತ್ವಷ್ಟಾ 5) ಪೂಷಾ 6) ಅರ್ಕಃ 7) ಸವಿತಾ 8) ರವಿಃ 9) ಗಭಸ್ತಿಮಾನ್ 10) ಅಜಃ 11) ಕಾಲಃ 12) ಮೃತ್ಯುಃ 13) ಧಾತಾ 14) ಪ್ರಭಾಕರಃ 15) ಪೃಥಿವೀ 16) ಆಪಃ 17)ತೇಜಃ 18) ಖಂ 19) ವಾಯುಃ 20) ಪರಾಯಣಃ 21) ಸೋಮಃ 22) ಬೃಹಸ್ಪತಿಃ 23) ಶುಕ್ರಃ 24) ಬುಧಃ 25) ಅಂಗಾರಕಃ 26) ಇಂದ್ರಃ 27) ವಿವಸ್ವಾನ್ 28) ದೀಪ್ತಾಂಶುಃ 29) ಶುಚಿಃ 30) ಶೌರಿಃ 31) ಶನೈಶ್ಚರಃ 32) ಬ್ರಹ್ಮಾ 33) ವಿಷ್ಣುಃ 34) ರುದ್ರಃ 35) ಸ್ಕಂದಃ 36) ವರುಣಃ 37) ಯಮಃ 38) ವೈದ್ಯುತಾಗ್ನಿಃ 39) ಜಾಠರಾಗ್ನಿಃ 40) ಐನ್ಧನಾಗ್ನಿಃ 41) ತೇಜಸಾಂ ಪತಿಃ 42) ಧರ್ಮಧ್ವಜಃ 43) ವೇದಕರ್ತಾ 44) ವೇದಾಂಗಃ 45) ವೇದವಾಹನಃ ಕೃತಂ 47) ತ್ರೇತಾ 48) ದ್ವಾಪರಃ 49) ಸರ್ವಮಲಾಶ್ರಯಃ ಕಲಿಃ 50) ಕಲಾಕಾಷ್ಠಾ-ಮುಹೂರ್ತಾಃ 51) ಕ್ಷಪಾ 52) ಯಾಮಃ 53) ಕ್ಷಣಃ 54) ಸಂವತ್ಸರಕರಃ 55) ಅಶ್ವತ್ಥಃ 56) ಕಾಲಚಕ್ರಪ್ರವರ್ತಕವಿಭಾವಸುಃ 57) ಶಾಶ್ವತಃಪುರುಷಃ 58) ಯೋಗೀ 59) ವ್ಯಕ್ತಾವ್ಯಕ್ತಃ 60) ಸನಾತನಃ

61) ಕಾಲಾಧ್ಯಕ್ಷಃ 62) ಪ್ರಜಾಧ್ಯಕ್ಷಃ 63) ವಿಶ್ವಕರ್ಮಾ 64) ತಮೋನುದಃ 65) ವರುಣಃ 66) ಸಾಗರಃ 67) ಅಂಶುಃ 68) ಜೀಮೂತಃ 69) ಜೀವನಃ 70) ಅರಿಹಾ 71) ಭೂತಾಶ್ರಯಃ 72) ಭೂತಪತಿಃ 73) ಸರ್ವಲೋಕ ನಮಸ್ಕೃತಃ 74) ಸ್ರಷ್ಟಾ 75) ಸಂವರ್ತಕಃ 76) ವಹ್ನಿಃ 77) ಸರ್ವಸ್ಯಾದಿಃ 78) ಅಲೋಲುಪಃ 79) ಅನಂತಃ 80) ಕಪಿಲಃ 81) ಭಾನುಃ 82) ಕಾಮದಃ 83) ಸರ್ವತೋಮುಖಃ 84) ಜಯಃ 85) ವಿಶಾಲಃ 86) ವರದಃ 87) ಸರ್ವಧಾತುನಿಷೇವಿತಾ 88) ಮನಃಸುಪರ್ಣಃ 89) ಭೂತಾದಿಃ 90) ಶೀಘ್ರಗಃ 91) ಆದಿದೇವಃ 92) ಧನ್ವನ್ತರಿಃ 93) ಧೂಮಕೇತುಃ 94) ಆದಿದೇವಃ 95) ಅದಿತೇಃ ಸುತಃ 96) ದ್ವಾದಶಾತ್ಮಾ 97) ಅರವಿನ್ದಾಕ್ಷಃ 98) ಪಿತಾ-ಮಾತಾ-ಪಿತಾಮಹಃ 99) ಸ್ವರ್ಗದ್ವಾರಂ-ಪ್ರಜಾದ್ವಾರಂ 100) ಮೋಕ್ಷದ್ವಾರಂ-ತ್ರಿವಿಷ್ಟಪಂ 101) ದೇಹಕರ್ತಾ 102) ಪ್ರಶಾಂತಾತ್ಮಾ 103) ವಿಶ್ವಾತ್ಮಾ 104) ವಿಶ್ವತೋಮುಖಃ 105) ಚರಾಚರಾತ್ಮಾ 106) ಸೂಕ್ಷ್ಮಾತ್ಮಾ 107) ಮೈತ್ರೇಯಃ 108) ಕರುಣಾನ್ವಿತಃ.

ಯುಧಿಷ್ಠಿರ! ಅಮಿತತೇಜಸ್ವಿಯಾದ, ಕೀರ್ತನೆಗೆ ಯೋಗ್ಯನಾದ, ಮಹಾತ್ಮನಾದ ಸೂರ್ಯದೇವನ ಈ ಅಷ್ಟೋತ್ತರಶತನಾಮಗಳು ಬ್ರಹ್ಮ ನಿಂದಲೇ ಹೇಳಲ್ಪಟ್ಟುವುಗಳು.”

ಹೀಗೆ ಹೇಳಿ ಸೂರ್ಯಾಷ್ಟೋತ್ತರಶತನಾಮಗಳನ್ನು ಯುಧಿಷ್ಠಿರನಿಗೆ ಉಪದೇಶಿಸಿದ ಧೌಮ್ಯರು ಮುಂದೆ ಪ್ರಾರ್ಥನಾಶ್ಲೋಕಗಳನ್ನೂ ಹೇಳಿದರು:

**ಸುರಗಣಪಿತೃಯಕ್ಷಸೇವಿತಂ ಹ್ಯಸುರನಿಶಾಚರಸಿದ್ಧವನ್ದಿತಮ್ ।**
**ವರಕನಕಹುತಾಶನಪ್ರಭಂ ಪ್ರಣಿಪತಿತೋಽಸ್ಮಿ ಹಿತಾಯ**
**ಭಾಸ್ಕರಮ್ ॥೨೯॥**

ದೇವತೆಗಳ ಸಮೂಹದಿಂದಲೂ, ಪಿತೃದೇವತೆಗಳಿಂದಲೂ, ಯಕ್ಷ ರಿಂದಲೂ, ಅಸುರ-ಪಿಶಾಚರಿಂದಲೂ, ಸಿದ್ಧರಿಂದಲೂ ನಮಿಸಲ್ಪಡುವ– ಪುಟಕ್ಕೆ ಹಾಕಿದ ಸ್ವರ್ಣದಂತೆ ಮತ್ತು ಯಜ್ಞೇಶ್ವರನಂತೆ ಪ್ರಕಾಶಮಾನನಾದ ಸೂರ್ಯದೇವನಿಗೆ ಆತ್ಮಹಿತವನ್ನು ಹೊಂದಲು ಶರಣಾಗತನಾಗಿದ್ದೇನೆ.

ಫಲಶ್ರುತಿ :–

ಸೂರ್ಯೋದಯೇ ಯಃ ಸುಸಮಾಹಿತಃ ಪಠೇ-
ತ್ಸ ಪುತ್ರದಾರಾನ್ಧನರತ್ನಸಂಚಯಾನ್ ।
ಲಭೇತ ಜಾತಿಸ್ಮರತಾಂ ನರಃ ಸದಾ
ಧೃತಿಂ ಚ ಮೇಧಾಂ ಚ ಸ ವಿನ್ದತೇ ಪುಮಾನ್ ॥೩೦॥

ಇಮಂ ಸ್ತವಂ ದೇವವರಸ್ಯ ಯೋ ನರಃ
ಪ್ರಕೀರ್ತಯೇಚ್ಛುಚಿಸುಮನಾಃ ಸಮಾಹಿತಃ ।
ವಿಮುಚ್ಯತೇ ಶೋಕದವಾಗ್ನಿಸಾಗರಾ-
ಲ್ಲಭೇತ ಕಾಮಾನ್ಮನಸಾ ಯಥೇಪ್ಸಿತಾನ್ ॥೩೧॥

ಯಾವ ಮನುಷ್ಯನು ಸೂರ್ಯೋದಯಕಾಲದಲ್ಲಿ ಈ ಅಷ್ಟೋತ್ತರ ಶತನಾಮಸ್ತೋತ್ರವನ್ನು ಅನನ್ಯಮನಸ್ಕನಾಗಿ, ಅನನ್ಯಶರಣನಾಗಿ, ಅನನ್ಯ ಭಕ್ತಿಯಿಂದ ಪಠಿಸುವನೋ–ಅವನು ಪತ್ನೀ-ಪುತ್ರ-ಧನ-ರತ್ನಾದಿಗಳನ್ನು ಪಡೆಯುತ್ತಾನೆ. ಪೂರ್ವಜನ್ಮದ ಸ್ಮರಣೆಯು ಅವನಿಗುಂಟಾಗುತ್ತದೆ. ಮೇಧಾವಂತನೂ, ಹೆಚ್ಚಿನ ಜ್ಞಾಪಕಶಕ್ತಿಯುಳ್ಳವನೂ ಆಗುತ್ತಾನೆ. ದೇವ ಶ್ರೇಷ್ಠನಾದ ಸೂರ್ಯದೇವನನ್ನು ಸುಮನಸ್ಕನಾಗಿ ಸ್ತೋತ್ರಮಾಡುವವನು ಶೋಕವೆಂಬ ಕಾಡುಗಿಚ್ಚಿನಿಂದಲೂ ಸಂಸಾರಸಾಗರದಿಂದಲೂ ವಿಮುಕ್ತಿಯನ್ನು ಹೊಂದುತ್ತಾನೆ ಮತ್ತು ಮನೋಭೀಷ್ಟಗಳೆಲ್ಲವನ್ನೂ ಪಡೆಯುತ್ತಾನೆ."

(ಮೊದಲು ಧ್ಯಾನಶ್ಲೋಕವನ್ನು ಹೇಳಿ ಅನಂತರ ಅಷ್ಟೋತ್ತರಶತ ನಾಮಗಳನ್ನು ಪಾರಾಯಣಮಾಡಿ ಕಡೆಯಲ್ಲಿ ಫಲಶ್ರುತಿಯನ್ನು ಹೇಳುವುದು ಸಂಪ್ರದಾಯ.)

ಯುಧಿಷ್ಠಿರನು ಧೌಮ್ಯರಿಂದ ಸೂರ್ಯಾಷ್ಟೋತ್ತರಶತನಾಮಗಳನ್ನೂ ಮತ್ತು ಪುನಶ್ಚರಣೆಯ ವಿಧಿಯನ್ನೂ ಉಪದೇಶಪಡೆದನಂತರ ಬ್ರಾಹ್ಮಣರನ್ನು ರಕ್ಷಿಸುವ ಮುಖ್ಯೋದ್ದೇಶದಿಂದ, ಶುಚೀಭೂತನಾಗಿ, ಅನನ್ಯಮನಸ್ಕನಾಗಿ ತಪಸ್ಸನ್ನು ಮಾಡಲು ಉಪಕ್ರಮಿಸಿದನು. ನದಿಯ ದಡದಲ್ಲಿ ಸೂರ್ಯ ದೇವನನ್ನು ನಾನಾವಿಧವಾದ ಪುಷ್ಪಗಳಿಂದ ಅರ್ಚಿಸಿ, ಷೋಡಶೋಪಚಾರ

ಪೂಜೆಯನ್ನು ಮಾಡಿ, ಗಂಗಾನದಿಯಲ್ಲಿ ಸೂರ್ಯಾಭಿಮುಖವಾಗಿ ನಿಂತು, ಪ್ರಾಣಾಯಾಮ-ಪ್ರತ್ಯಾಹಾರಾದಿ ಯೋಗಮಾರ್ಗಗಳಿಂದ ಸೂರ್ಯನನ್ನು ಧ್ಯಾನಿಸತೊಡಗಿದನು. ಯುಧಿಷ್ಠಿರನು ತಪಸ್ಸುಮಾಡುತ್ತಿದ್ದ ಕಾಲದಲ್ಲಿ ಅವನಿಗೆ ಗಾಳಿಯೇ ಆಹಾರವಾಗಿದ್ದಿತು. ಸಮಾಧಿಸ್ಥನಾಗಿದ್ದಾಗ ಬಹಿರಂಗದಲ್ಲಿದ್ದ ಸೂರ್ಯನನ್ನು ಅಂತರಂಗದಲ್ಲಿಯೂ ನೋಡುತ್ತಾ ಆನಂದಪರವಶನಾಗಿ ಸೂರ್ಯನನ್ನು ಸ್ತೋತ್ರಮಾಡತೊಡಗಿದನು :

(ಯುಧಿಷ್ಠಿರನು ಮಾಡಿದ ಸ್ತೋತ್ರದಿಂದ ಸೂರ್ಯದೇವನು ಸುಪ್ರೀತನಾಗಿ, ಪ್ರತ್ಯಕ್ಷನಾಗಿ ಬಂದು ಯುಧಿಷ್ಠಿರನ ಅಭೀಷ್ಟವನ್ನು ನೆರವೇರಿಸಿದನೆಂದರೆ ಈ ಸ್ತೋತ್ರದ ಮಹತ್ತ್ವವೆಷ್ಟೆಂಬುದನ್ನು ಮನಗಾಣ ಬಹುದಾಗಿದೆ. ಆದುದರಿಂದ ವಾಚಕರ ಇಷ್ಟಾರ್ಥಸಿದ್ಧಿಗಾಗಿ ಈ ಸ್ತೋತ್ರಮಾಲಿಕೆಯನ್ನು ಯಥಾಶ್ರುತವಾಗಿಯೇ ಕೊಡಲಾಗಿದೆ.)

ತ್ವಂ ಭಾನೋ ಜಗತಶ್ಚಕ್ಷುಸ್ತ್ವಮಾತ್ಮಾ ಸರ್ವದೇಹಿನಾಮ್ ।
ತ್ವಂ ಯೋನಿಃ ಸರ್ವಭೂತಾನಾಂ ತ್ವಮಾಚಾರಃ ಕ್ರಿಯಾವತಾಮ್ ॥೩೬॥

ತ್ವಂ ಗತಿಃ ಸರ್ವಸಾಂಖ್ಯಾನಾಂ ಯೋಗಿನಾಂ ತ್ವಂ ಪರಾಯಣಮ್ ।
ಅನಾವೃತಾರ್ಗಲದ್ವಾರಂ ತ್ವಂ ಗತಿಸ್ತ್ವಂ ಮುಮುಕ್ಷತಾಮ್ ॥೩೭॥

ತ್ವಯಾ ಸಂಧಾರ್ಯತೇ ಲೋಕಸ್ತ್ವಯಾ ಲೋಕಃ ಪ್ರಕಾಶ್ಯತೇ ।
ತ್ವಯಾ ಪವಿತ್ರೀಕ್ರಿಯತೇ ನಿರ್ವ್ಯಾಜಂ ಪಾಲ್ಯತೇ ತ್ವಯಾ ॥೩೮॥

ತ್ವಾಮುಪಸ್ಥಾಯ ಕಾಲೇ ತು ಬ್ರಾಹ್ಮಣಾ ವೇದಪಾರಗಾಃ ।
ಸ್ವಶಾಖಾವಿಹಿತೈರ್ಮನ್ತ್ರೈರರ್ಚನ್ತ್ಯೃಷಿಗಣಾರ್ಚಿತಮ್ ॥೩೯॥

ತವ ದಿವ್ಯಂ ರಥಂ ಯಾನ್ತಮನುಯಾನ್ತಿ ವರಾರ್ಥಿನಃ ।
ಸಿದ್ಧಚಾರಣಗನ್ಧರ್ವಾ ಯಕ್ಷಗುಹ್ಯಕಪನ್ನಗಾಃ ॥೪೦॥

ತ್ರಯಸ್ತ್ರಿಂಶಚ್ಚ ವೈ ದೇವಾಸ್ತಥಾ ವೈಮಾನಿಕಾ ಗಣಾಃ ।
ಸೋಪೇನ್ದ್ರಾಃ ಸಮಹೇನ್ದ್ರಾಶ್ಚ ತ್ವಾಮಿಷ್ಟ್ವಾ ಸಿದ್ಧಿಮಾಗತಾಃ ॥೪೧॥

ಉಪಯಾನ್ತ್ಯರ್ಚಯಿತ್ವಾ ತು ತ್ವಾಂ ವೈ ಪ್ರಾಪ್ತಮನೋರಥಾಃ ।
ದಿವ್ಯಮನ್ದಾರಮಾಲಾಭಿಸ್ತೂರ್ಣಂ ವಿದ್ಯಾಧರೋತ್ತಮಾಃ ॥೪೨॥

ಗುಹ್ಯಾಃ ಪಿತೃಗಣಾಃ ಸಪ್ತ ಯೇ ದಿವ್ಯಾ ಯೇ ಚ ಮಾನುಷಾಃ ।
ತೇ ಪೂಜಯಿತ್ವಾ ತ್ವಾಮೇವ ಗಚ್ಛನ್ತ್ಯಾಶು ಪ್ರಧಾನತಾಮ್ ॥೪೩॥

ವಸವೋ ಮರುತೋ ರುದ್ರಾ ಯೇ ಚ ಸಾಧ್ಯಾ ಮರೀಚಿಪಾಃ ।
ವಾಲಖಿಲ್ಯಾದಯಃ ಸಿದ್ಧಾಃ ಶ್ರೇಷ್ಠತ್ವಂ ಪ್ರಾಣಿನಾಂ ಗತಾಃ ॥೪೪॥

ಸಬ್ರಹ್ಮಕೇಷು ಲೋಕೇಷು ಸಪ್ತಸ್ವಪ್ಯಖಿಲೇಷು ಚ ।
ನ ತದ್ಭೂತಮಹಂ ಮನ್ಯೇ ಯದರ್ಕಾದತಿರಿಚ್ಯತೇ ॥೪೫॥

ಸನ್ತಿ ಚಾನ್ಯಾನಿ ಸತ್ತ್ವಾನಿ ವೀರ್ಯವನ್ತಿ ಮಹಾನ್ತಿ ಚ ।
ನ ತು ತೇಷಾಂ ತಥಾ ದೀಪ್ತಿಃ ಪ್ರಭಾವೋ ವಾ ಯಥಾ ತವ ॥೪೬॥

ಜ್ಯೋತೀಂಷಿ ತ್ವಯಿ ಸರ್ವಾಣಿ ತ್ವಂ ಸರ್ವಜ್ಯೋತಿಷಾಂ ಪತಿಃ ।
ತ್ವಯಿ ಸತ್ಯಂ ಚ ಸತ್ತ್ವಂ ಚ ಸರ್ವೇ ಭಾವಾಶ್ಚ ಸಾತ್ತ್ವಿಕಾಃ ॥೪೭॥

ತ್ವತ್ತೇಜಸಾ ಕೃತಂ ಚಕ್ರಂ ಸುನಾಭಂ ವಿಶ್ವಕರ್ಮಣಾ ।
ದೇವಾರೀಣಾಂ ಮದೋ ಯೇನ ನಾಶಿತಃ ಶಾರ್ಙ್ಗಧನ್ವನಾ ॥೪೮॥

ತ್ವಮಾದಾಯಾಂಶುಭಿಸ್ತೇಜೋ ನಿದಾಘೇ ಸರ್ವದೇಹಿನಾಮ್ ।
ಸರ್ವೌಷಧಿರಸಾನಾಂ ಚ ಪುನರ್ವರ್ಷಾಸು ಮುಞ್ಚಸಿ ॥೪೯॥

ತಪನ್ತ್ಯನ್ಯೇ ದಹನ್ತ್ಯನ್ಯೇ ಗರ್ಜನ್ತ್ಯನ್ಯೇ ತಥಾ ಘನಾಃ ।
ವಿದ್ಯೋತನ್ತೇ ಪ್ರವರ್ಷನ್ತಿ ತವ ಪ್ರಾವೃಷಿ ರಶ್ಮಯಃ ॥೫೦॥

ನ ತಥಾ ಸುಖಯತ್ಯಗ್ನಿರ್ನ ಪ್ರಾವಾರಾ ನ ಕಮ್ಬಲಾಃ ।
ಶೀತವಾತಾರ್ದಿತಂ ಲೋಕಂ ಯಥಾ ತವ ಮರೀಚಯಃ ॥೫೧॥

ತ್ರಯೋದಶದ್ವೀಪವತೀಂ ಗೋಭಿರ್ಭಾಸಯಸೇ ಮಹೀಮ್ ।
ತ್ರಯಾಣಾಮಪಿ ಲೋಕಾನಾಂ ಹಿತಾಯೈಕಃ ಪ್ರವರ್ತಸೇ ॥೫೨॥

ತವ ಯದ್ಯುದಯೋ ನ ಸ್ಯಾದನ್ಧಂ ಜಗದಿದಂ ಭವೇತ್ ।
ನ ಚ ಧರ್ಮಾರ್ಥಕಾಮೇಷು ಪ್ರವರ್ತೇರನ್ಮನೀಷಿಣಃ ॥೫೩॥

ಆಧಾನಪಶುಬನ್ಧೇಷ್ಟಿಮನ್ತ್ರಯಜ್ಞತಪಃಕ್ರಿಯಾಃ ।
ತ್ವತ್ಪ್ರಸಾದಾದವಾಪ್ಯನ್ತೇ ಬ್ರಹ್ಮಕ್ಷತ್ರವಿಶಾಂ ಗಣೈಃ ॥೫೪॥

ಯದಹರ್ಬ್ರಹ್ಮಣಃ ಪ್ರೋಕ್ತಂ ಸಹಸ್ರಯುಗಸಮ್ಮಿತಮ್ ।
ತಸ್ಯ ತ್ವಮಾದಿರನ್ತಶ್ಚ ಕಾಲಜ್ಞೈಃ ಪರಿಕೀರ್ತಿತಃ ॥೫೫॥

ಮನೂನಾಂ ಮನುಪುತ್ರಾಣಾಂ ಜಗತೋಽಮಾನವಸ್ಯ ಚ ।
ಮನ್ವನ್ತರಾಣಾಂ ಸರ್ವೇಷಾಮೀಶ್ವರಾಣಾಂ ತ್ವಮೀಶ್ವರಃ ॥೫೬॥

ಸಂಹಾರಕಾಲೇ ಸಮ್ಪ್ರಾಪ್ತೇ ತವ ಕ್ರೋಧವಿನಿಃಸೃತಃ ।
ಸಂವರ್ತಕಾಗ್ನಿಸ್ತ್ರೈಲೋಕ್ಯಂ ಭಸ್ಮೀಕೃತ್ಯಾವತಿಷ್ಠತೇ ॥೫೭॥

ತ್ವದ್ದೀಧಿತಿಸಮುತ್ಪನ್ನಾ ನಾನಾವರ್ಣಾ ಮಹಾಘನಾಃ ।
ಸೈರಾವತಾಃ ಸಾಶನಯಃ ಕುರ್ವನ್ತ್ಯಾಭೂತಸಮ್ಪ್ಲವಮ್ ॥೫೮॥

ಕೃತ್ವಾ ದ್ವಾದಶಧಾತ್ಮಾನಂ ದ್ವಾದಶಾದಿತ್ಯತಾಂ ಗತಃ ।
ಸಂಹೃತ್ಯೈಕಾರ್ಣವಂ ಸರ್ವಂ ತ್ವಂ ಶೋಷಯಸಿ ರಶ್ಮಿಭಿಃ ॥೫೯॥

ತ್ವಾಮಿನ್ದ್ರಮಾಹುಸ್ತ್ವಂ ರುದ್ರಸ್ತ್ವಂ ವಿಷ್ಣುಸ್ತ್ವಂ ಪ್ರಜಾಪತಿಃ ।
ತ್ವಮಗ್ನಿಸ್ತ್ವಂ ಮನಃ ಸೂಕ್ಷ್ಮಂ ಪ್ರಭುಸ್ತ್ವಂ ಬ್ರಹ್ಮ ಶಾಶ್ವತಮ್ ॥೬೦॥

ತ್ವಂ ಹಂಸಃ ಸವಿತಾ ಭಾನುರಂಶುಮಾಲೀ ವೃಷಾಕಪಿಃ ।
ವಿವಸ್ವಾನ್ಮಿಹಿರಃ ಪೂಷಾ ಮಿತ್ರೋ ಧರ್ಮಸ್ತಥೈವ ಚ ॥೬೧॥

ಸಹಸ್ರರಶ್ಮಿರಾದಿತ್ಯಸ್ತಪನಸ್ತ್ವಂ ಗವಾಮ್ಪತಿಃ ।
ಮಾರ್ತಣ್ಡೋಽರ್ಕೋ ರವಿಃ ಸೂರ್ಯಃ ಶರಣ್ಯೋ ದಿನಕೃತ್ತಥಾ ॥೬೨॥

ದಿವಾಕರಃ ಸಪ್ತಸಪ್ತಿರ್ಧಾಮಕೇಶೀ ವಿರೋಚನಃ ।
ಆಶುಗಾಮೀ ತಮೋಘ್ನಶ್ಚ ಹರಿತಾಶ್ವಶ್ಚ ಕೀರ್ತ್ಯಸೇ ॥೬೩॥

ಸಪ್ತಮ್ಯಾಮಥವಾ ಷಷ್ಠ್ಯಾಂ ಭಕ್ತ್ಯಾ ಪೂಜಾಂ ಕರೋತಿ ಯಃ ।
ಅನಿರ್ವಿಣ್ಣೋಽನಹಂಕಾರೀ ತಂ ಲಕ್ಷ್ಮೀರ್ಭಜತೇ ನರಮ್ ॥೬೪॥

**ನ ತೇಷಾಮಾಪದಃ ಸನ್ತಿ ನಾಧಯೋ ವ್ಯಾಧಯಸ್ತಥಾ ।**
**ಯೇ ತವಾನನ್ಯಮನಸಃ ಕುರ್ವನ್ತ್ಯರ್ಚನವನ್ದನಮ್ ॥೬೫॥**

**ಸರ್ವರೋಗೈರ್ವಿರಹಿತಾಃ ಸರ್ವಪಾಪವಿವರ್ಜಿತಾಃ ।**
**ತ್ವದ್ಭಾವಭಕ್ತಾಃ ಸುಖಿನೋ ಭವನ್ತಿ ಚಿರಜೀವಿನಃ ॥೬೬॥**

**ತ್ವಂ ಮಮಾಪನ್ನಕಾಮಸ್ಯ ಸರ್ವಾತಿಥ್ಯಂ ಚಿಕೀರ್ಷತಃ ।**
**ಅನ್ನಮನ್ನಪತೇ ದಾತುಮಭಿತಃ ಶ್ರದ್ಧಯಾರ್ಹಸಿ ॥೬೭॥**

**ಯೇ ಚ ತೇಽನುಚರಾಃ ಸರ್ವೇ ಪಾದೋಪಾನ್ತಂ ಸಮಾಶ್ರಿತಾಃ ।**
**ಮಾಠರಾರುಣದಣ್ಡಾದ್ಯಾಸ್ತಾಂಸ್ತಾನ್ವನ್ದೇಽಶನಿಕ್ಷುಭಾನ್ ॥೬೮॥**

**ಕ್ಷುಭಯಾ ಸಹಿತಾ ಮೈತ್ರೀ ಯಾಶ್ಚಾನ್ಯಾ ಭೂತಮಾತರಃ ।**
**ತಾಶ್ಚ ಸರ್ವಾ ನಮಸ್ಯಾಮಿ ಪಾನ್ತು ಮಾಂ ಶರಣಾಗತಮ್ ॥೬೯॥**

"ಸೂರ್ಯದೇವ! ನೀನು ಪ್ರಪಂಚಕ್ಕೇ ನೇತ್ರರೂಪನಾಗಿರುವೆ. ಸಕಲ ಪ್ರಾಣಿಗಳಲ್ಲಿಯೂ ಇರುವ ಆತ್ಮನೇ ನೀನು. ನೀನು ಸಕಲಚರಾಚರಗಳ ಉತ್ಪತ್ತಿಗೆ ಕಾರಣನು. ಕ್ರಿಯಾವಂತರಿಗೆ ನೀನು ಆಚಾರಸ್ವರೂಪನಾಗಿರುವೆ. ಜ್ಞಾನನಿಷ್ಠರಾದ ಯೋಗಿಗಳಿಗೆ–ಅಗಣೆಯಿಲ್ಲದೇ (ಲಾಳಮುಂಡಿಗೆಯಿಲ್ಲದೆ) ತೆರೆದ ಬಾಗಿಲಿನಂತಿರುವ–ನೀನೇ ಆಶ್ರಯನು. ಎಂದರೆ : ಯೋಗಿಗಳಿಗೆ ಯಾವ ವಿಧವಾದ ತಡೆಯೂ ಇಲ್ಲದೇ ಗೋಚರನಾಗುವೆ. ಮುಮುಕ್ಷುಗಳಿಗೆ ಆಶ್ರಯನು ನೀನು. ನಿನ್ನಿಂದ ಈ ಲೋಕವು ಧರಿಸಲ್ಪಟ್ಟಿದೆ. ನಿನ್ನಿಂದಲೇ ಈ ಲೋಕವು ಪ್ರಕಾಶಮಾನವಾಗಿದೆ. ನಿನ್ನ ಕಿರಣಗಳು ಈ ಲೋಕವನ್ನು ಪವಿತ್ರ ಗೊಳಿಸುತ್ತವೆ. ಯಾವ ಕಾರಣವೂ ಇಲ್ಲದೇ, ಕೇವಲ ದಯಾಪರನಾಗಿ ನೀನು ಈ ಲೋಕವನ್ನು ರಕ್ಷಿಸುತ್ತಿರುವೆ. ಋಷಿಗಣಾರ್ಚಿತನೇ! ವೇದಪಾರಂಗತರಾದ ಬ್ರಾಹ್ಮಣರು ನಿನ್ನನ್ನು ಅನುದಿನವೂ ತ್ರಿಕಾಲಗಳಲ್ಲಿಯೂ ಉಪಸ್ಥಾನ ಮಾಡುವಾಗ ಸ್ವಶಾಖಾವಿಹಿತಮಂತ್ರಗಳಿಂದ ಅರ್ಚಿಸುತ್ತಾರೆ. ( ತ್ರಿಕಾಲಗಳ ಲ್ಲಿಯೂ ಗಾಯತ್ರೀಜಪವು ಮುಗಿದನಂತರ ಮಾಡುವ ಕ್ರಿಯೆಗೆ ಸೂರ್ಯೋ ಪಸ್ಥಾನವೆಂದು ಹೆಸರು. ) ಸಿದ್ಧ-ಚಾರಣ-ಗಂಧರ್ವರೂ, ಯಕ್ಷ-ಗುಹ್ಯಕ-

ಪನ್ನಗರೂ, ಅಷ್ಟವಸುಗಳೂ, ಏಕಾದಶರುದ್ರರೂ, ದ್ವಾದಶಾದಿತ್ಯರೂ, ಪ್ರಜಾಪತಿ-ವಷಟ್ಕಾರರೂ ಮತ್ತು ಇತರ ದೇವತೆಗಳೆಲ್ಲರೂ ಇಂದ್ರೋ ಪೇಂದ್ರರ (ಇಂದ್ರ ಮತ್ತು ವಿಷ್ಣುವಿನ) ಸಮೇತರಾಗಿ, ವರವನ್ನು ಪಡೆಯುವ ಆಶಯದಿಂದ ಸ್ತೋತ್ರಮಾಡುತ್ತಾ, ನಿನ್ನ ದಿವ್ಯರಥವನ್ನನುಸರಿಸಿ ಬಂದು ನಿನ್ನ ಅನುಗ್ರಹಕ್ಕೆ ಪಾತ್ರರಾಗಿ ಸಿದ್ಧಿಯನ್ನು ಪಡೆದಿರುತ್ತಾರೆ. ವಿದ್ಯಾಧರರು ದಿವ್ಯ ವಾದ ಮಂದಾರಪುಷ್ಪಮಾಲೆಗಳನ್ನು ಭಕ್ತಿಯಿಂದ ನಿನಗರ್ಪಿಸಿ ತಮ್ಮ ಮನೋಭೀಷ್ಟಗಳನ್ನು ಪಡೆದಿರುತ್ತಾರೆ. ಗುಹ್ಯಕರೂ, ವೈರಾಜ-ಅಗ್ನಿಷ್ವಾತ್ತಾದಿ ಸಪ್ತಪಿತೃದೇವತೆಗಳೂ ನಿನ್ನನ್ನು ಆರಾಧಿಸಿ ಲೋಕಸೃಷ್ಟಿಗೆ ಕಾರಣಭೂತರಾಗಿ ದ್ದಾರೆ. ವಸುಗಳು, ಮರುತ್ತುಗಳು, ರುದ್ರರು, ಸಾಧ್ಯರು, ಮರೀಚಿಪರು, ವಾಲಖಿಲ್ಯಾದಿಗಳು, ಸಿದ್ಧರು–ನಿನ್ನನ್ನು ಪೂಜಿಸಿ ನಿನ್ನ ಅನುಗ್ರಹದಿಂದ ಶ್ರೇಷ್ಠತ್ವವನ್ನು ಪಡೆದಿರುತ್ತಾರೆ. ಬ್ರಹ್ಮಲೋಕವೇ ಮೊದಲಾದ ಏಳು ಲೋಕಗಳಲ್ಲಿಯೂ ಅರ್ಕನಿಗೆ ಮಿಗಿಲಾದ ಬೇರೊಬ್ಬ ದೇವತೆಯನ್ನು ನಾನು ಕಂಡಿಲ್ಲ. ಮಹಾಸತ್ತ್ವವನ್ನು ಪಡೆದಿರುವ ವೀರ್ಯವತ್ತಾದ ಇತರಶಕ್ತಿಗಳೂ ಈ ಲೋಕಗಳಲ್ಲಿವೆ. ಆದರೆ ನಿನ್ನ ದೀಪ್ತಿ ಮತ್ತು ಪ್ರಭಾವಗಳಿಗೆ ಮಿಗಿಲಾದ ಅಥವಾ ಸಮಾನವಾದ ದೀಪ್ತಿ-ಪ್ರಭಾವಗಳು ಬೇರೆಯವರಿಗಿಲ್ಲ. 'ಜ್ಯೋತಿ' ಎಂಬುದೇ ನಿನ್ನಲ್ಲಡಗಿದೆ. ಸಕಲಜ್ಯೋತಿಗಳಿಗೂ ನೀನೇ ಪ್ರಭುವಾಗಿರುವೆ. ಸತ್ಯಸ್ವರೂಪವಾದ ಬುದ್ಧಿಸತ್ತ್ವವೂ, ಸಾತ್ತ್ವಿಕಭಾವಗಳಾದ ಧರ್ಮ, ಜ್ಞಾನ, ವಿರಾಗ–ಇತ್ಯಾದಿಗಳೂ ನಿನ್ನಲ್ಲಿ ಮೂರ್ತಿಮತ್ತಾಗಿ ನೆಲೆಸಿವೆ. ದೇವತೆಗಳ ಶತ್ರುಗಳಾದ ರಾಕ್ಷಸರ ದರ್ಪವನ್ನು ದಮನಮಾಡಿದ, ಶಾರ್ಙ್ಗಧನುರ್ಧರ ನಾದ ವಿಷ್ಣುವಿನ ಸುದರ್ಶನವೆಂಬ ಮಹಾಚಕ್ರವನ್ನು ದೇವಶಿಲ್ಪಿಯಾದ ವಿಶ್ವ ಕರ್ಮನು ನಿನ್ನ ಮಹಾತೇಜಸ್ಸಿನಿಂದಲೇ ನಿರ್ಮಿಸಿದನು. ನೀನು ಬೇಸಿಗೆಯ ಕಾಲದಲ್ಲಿ ನಿನ್ನ ಕಿರಣಗಳಿಂದ ಓಷಧಿರಸಗಳೆಲ್ಲವನ್ನೂ ಹೀರಿಕೊಂಡು ವರ್ಷಾಕಾಲದಲ್ಲಿ ಮಳೆಯರೂಪವಾಗಿ ಸುರಿಸುವೆ. ನಿನ್ನ ಅಸಂಖ್ಯಾತವಾದ ರಶ್ಮಿಗಳು ಶಾಖವನ್ನುಂಟುಮಾಡುತ್ತವೆ ; ಸುಡುತ್ತವೆ ಮತ್ತು ಸಿಡಿಲಿನ ರೂಪ ದಲ್ಲಿ ಗರ್ಜಿಸುತ್ತವೆ. ಮಿಂಚಿನ ರೂಪವನ್ನು ತಾಳಿ ಲೋಕಗಳನ್ನು ಕ್ಷಣಕಾಲ ಬೆಳಗುತ್ತವೆ. ಚಳಿಯಿಂದ ನಡುಗುತ್ತಿರುವವನಿಗೆ ನಿನ್ನ ರಶ್ಮಿಗಳು ಉಂಟು

ಮಾಡುವ ಶಾಖವನ್ನು ಅಥವಾ ಸುಖವನ್ನು ಅಗ್ನಿಯಾಗಲೀ, ವಸ್ತ್ರಗಳಾಗಲೀ, ಕಂಬಳಿಗಳಾಗಲೀ–ಉಂಟುಮಾಡಲಾರವು. ಹದಿಮೂರು ದ್ವೀಪಗಳಿಂದ ಕೂಡಿರುವ ಈ ಪೃಥ್ವಿಯನ್ನು ನೀನು ನಿನ್ನ ರಶ್ಮಿಗಳಿಂದ ಬೆಳಗುತ್ತಿರುವೆ. ಮೂರುಲೋಕಗಳಿಗೂ ನೀನೊಬ್ಬನೇ ಹಿತವನ್ನುಂಟುಮಾಡುವವನಾಗಿರುವೆ. ನಿನ್ನ ಉದಯವಾಗದಿದ್ದರೆ ಲೋಕಗಳೆಲ್ಲವೂ ಕತ್ತಲೆಯಲ್ಲಿ ಮುಳುಗಿ ಕುರುಡಾಗುತ್ತವೆ ಮತ್ತು ಜಿತೇಂದ್ರಿಯರಾದ ಕರ್ಮನಿಷ್ಠರು ಧರ್ಮಾರ್ಥ-ಕಾಮ-ಮೋಕ್ಷಗಳಿಗೆ ಸಾಧಕಗಳಾದ ಕರ್ಮಗಳಲ್ಲಿ ಪ್ರವರ್ತಿಸುವಂತಿಲ್ಲ. ಬ್ರಹ್ಮ-ಕ್ಷತ್ರಿಯ-ವೈಶ್ಯರಿಂದ ಮಾಡಲ್ಪಡುವ ಆಧಾನ, ಪಶುಬಂಧ, ಇಷ್ಟಿ–ಮುಂತಾದ ನಿತ್ಯ-ನೈಮಿತ್ತಿಕಕರ್ಮಗಳ ಫಲಗಳೂ ನಿನ್ನ ಅನುಗ್ರಹದಿಂದಲೇ ಲಭ್ಯವಾಗುತ್ತವೆ. ಸಹಸ್ರಯುಗವು ಬ್ರಹ್ಮನಿಗೆ ಒಂದು ಹಗಲು. ಅಂತಹ ಹಗಲಿಗೆ ಆದಿಯೂ ನೀನೇ, ಅಂತ್ಯವೂ ನೀನೇ–ಎಂದು ಕಾಲಜ್ಞರು ಹೇಳುತ್ತಾರೆ. ಮನುಗಳಿಗೂ, ದಿಕ್ಪಾಲಕರಿಗೂ ನೀನೇ ಸ್ವಾಮಿಯು. ಪ್ರಪಂಚದ ಸಂಹಾರಕಾರ್ಯವು ಪ್ರಾಪ್ತವಾದಾಗ ನಿನ್ನ ಕೋಪದಿಂದ ಸಂವರ್ತಕವೆಂಬ ಅಗ್ನಿಯು ಪ್ರಾದುರ್ಭೂತವಾಗಿ ಪ್ರಪಂಚವೆಲ್ಲವನ್ನೂ ದಹಿಸಿಬಿಡುತ್ತದೆ. ಅನಂತರದಲ್ಲಿ ನಿನ್ನ ಕಿರಣಗಳಿಂದ ಸಮುತ್ಪನ್ನವಾದ ನಾನಾವರ್ಣಗಳ ಮೇಘಗಳು ಐರಾವತವೆಂಬ ಮಹಾಮೇಘದೊಡನೆಯೂ ಮತ್ತು ಗುಡುಗು-ಮಿಂಚು-ಸಿಡಿಲುಗಳೊಡನೆಯೂ ಸೇರಿ ಮಳೆಗರೆದು ಪ್ರಪಂಚವನ್ನೆಲ್ಲಾ ಜಲಮಯವನ್ನಾಗಿ ಮಾಡಿಬಿಡುತ್ತವೆ. ನೀನೇ ಪುನಃ ಹನ್ನೆರಡು ಸೂರ್ಯರ ರೂಪವನ್ನು ಧರಿಸಿ ನಿನ್ನ ತೀಕ್ಷ್ಣರಶ್ಮಿಗಳಿಂದ ಒಂದೇ ಸಮುದ್ರದಂತಿರುವ ಜಲವನ್ನು ಶೋಷಿಸುವೆ. (ಮುಂದೆ ನಿನ್ನ ದಯೆಯಿಂದಲೇ ಸೃಷ್ಟಿಯೂ ಪುನಃ ಪ್ರಾರಂಭವಾಗುವುದು.) ನಿನ್ನನ್ನು ಇಂದ್ರನೆಂದೂ, ವಿಷ್ಣುವೆಂದೂ, ಬ್ರಹ್ಮನೆಂದೂ, ಪ್ರಜಾಪತಿಯೆಂದೂ ಕರೆಯುತ್ತಾರೆ. ಅಗ್ನಿಸ್ವರೂಪನೂ ನೀನೇ. ಸೂಕ್ಷ್ಮವಾದ ಮನಸ್ಸೂ ನೀನೇ ಆಗಿರುವೆ. ನೀನು ಈಶ್ವರರಿಗೆಲ್ಲಾ ಈಶ್ವರನು. ಶಾಶ್ವತವಾದ ಪರಬ್ರಹ್ಮವಸ್ತುವೂ ನೀನೇ ಆಗಿರುವೆ. ಹಂಸ, ಸವಿತಾ, ಭಾನು, ಅಂಶುಮಾಲೀ, ವೃಷಾಕಪಿ, ವಿವಸ್ವಂತ, ಮಿಹಿರ, ಪೂಷಾ, ಮಿತ್ರ, ಧರ್ಮ, ಸಹಸ್ರರಶ್ಮಿ ಆದಿತ್ಯ, ತಪನ, ಗವಾಂಪತಿ, ಮಾರ್ತಂಡ, ಅರ್ಕ, ರವಿ,

ಸೂರ್ಯ, ಶರಣ್ಯ, ದಿನಕೃತ್, ದಿವಾಕರ, ಸಪ್ತಸಪ್ತಿ, ಧಾಮಕೇಶೀ, ವಿರೋಚನ, ಆಶುಗಾಮೀ, ತಮೋಘ್ನ, ಹರಿತಾಶ್ವ–ಈ ಪವಿತ್ರನಾಮಗಳಿಂದಲೂ ನಿನ್ನನ್ನು ಕೀರ್ತನೆಮಾಡುತ್ತಾರೆ. ಸಪ್ತಮಿಯ ದಿನ ಅಥವಾ ಷಷ್ಠಿಯ ದಿನ ಖೇದರಹಿತನಾಗಿ, ಯಾರು ನಿನ್ನನ್ನು ನಿರಹಂಕಾರದಿಂದ ಭಕ್ತಿಯಿಂದ ಪೂಜಿಸುವರೋ ಅಂತಹವನನ್ನು ಲಕ್ಷ್ಮಿಯು ಸೇವಿಸುತ್ತಾಳೆ. (ಅವನು ಐಶ್ವರ್ಯಸಂಪನ್ನನಾಗುತ್ತಾನೆ.) ಯಾರು ಅನನ್ಯಮನಸ್ಕರಾಗಿ, ಅನನ್ಯಭಕ್ತಿಯಿಂದ ನಿನ್ನನ್ನು ಅರ್ಚಿಸುತ್ತಾರೆಯೋ–ಅವರು ಸಕಲರೋಗಗಳಿಂದಲೂ ಮತ್ತು ಪಾಪಗಳಿಂದಲೂ ವಿಮುಕ್ತಿಹೊಂದುತ್ತಾರೆ. ಅವರಿಗೆ ಆಪತ್ತುಗಳೂ ಆಧಿ-ವ್ಯಾಧಿಗಳೂ ಉಂಟಾಗುವುದಿಲ್ಲ. ನಿನ್ನನ್ನು ಆರಾಧಿಸುವ ಭಕ್ತರು ಸುಖಿಗಳೂ, ಚಿರಂಜೀವಿಗಳೂ ಆಗುತ್ತಾರೆ. ಸೂರ್ಯದೇವನೇ! ಭಗವನ್! ಭಕ್ತಪರಾಧೀನನೇ! ಮಹಾಮಹಿಮನಾದ ಅನ್ನಪತಿಯಾದ ನೀನು–ಅತಿಥಿಗಳನ್ನು ಸತ್ಕರಿಸಬೇಕೆಂಬ ಆಶಯವುಳ್ಳ ನನಗೆ ಅನ್ನವನ್ನು ನೀಡಿ ಕಾಪಾಡು. ನಿನ್ನ ಪಾದಪಂಕಜದ ಧೂಳಿಯನ್ನನುಸರಿಸಿ ಅನುದಿನವೂ ಬರುವ ಸಿಡಿಲನ್ನುಂಟುಮಾಡುವ ಮಾಠರ, ಅರುಣ, ದಂಡವೇ ಮೊದಲಾದ ಪರಿವಾರದವರನ್ನು ವಂದಿಸುತ್ತೇನೆ. ಭೂಮಾತೆಯಾದ, ಕ್ಷುಭಾಸಹಿತಳಾದ ಮೈತ್ರಿಗೂ ಮತ್ತು ಇತರ ಮಾತೃದೇವತೆಗಳಿಗೂ ನಾನು ಶರಣಾಗತನಾಗಿದ್ದೇನೆ. ಇವರೆಲ್ಲರೂ ನನ್ನನ್ನು ಅನುಗ್ರಹಿಸಲಿ.”

ಈ ರೀತಿಯಲ್ಲಿ ತದೇಕಚಿತ್ತನಾಗಿ ಸ್ತೋತ್ರಮಾಡುತ್ತಿದ್ದ ಯುಧಿಷ್ಠಿರನ ಭಕ್ತಿಗೆ ಸೂರ್ಯದೇವನು ಸುಪ್ರೀತನಾಗಿ, ಧಗ-ಧಗನೆ ಉರಿಯುತ್ತಿರುವ ಅಗ್ನಿಯೋಪಾದಿಯಲ್ಲಿ ತನ್ನ ಶರೀರಜ್ಯೋತಿಯಿಂದ ಬೆಳಗುತ್ತಾ ಧರ್ಮಜನಿಗೆ ದರ್ಶನವನ್ನಿತ್ತನು.

ಸೂರ್ಯದೇವನು ಪ್ರತ್ಯಕ್ಷನಾದೊಡನೆಯೇ ಧರ್ಮಜನು ಆನಂದ ಬಾಷ್ಪಗಳನ್ನು ಸುರಿಸುತ್ತಾ–ಏನು ಹೇಳಬೇಕು? ಏನು ಮಾಡಬೇಕು?–ಎಂಬುದಾವುದೂ ತಿಳಿಯದೇ–‘ಮಹಾನುಭಾವ! ಭಕ್ತಪರಾಧೀನ! ಸೂರ್ಯದೇವ!’–ಎಂದು ಮಾತ್ರ ಬಾರಿ-ಬಾರಿಗೂ ಹೇಳುತ್ತಿದ್ದನು. ಭಕ್ತಪರಾಧೀನನಾದ ಸೂರ್ಯದೇವನು ಅಭಯಮುದ್ರೆಯನ್ನು ತೋರಿಸುತ್ತಾ ಮುಗುಳ್ನಗೆಯಿಂದ ಯುಧಿಷ್ಠಿರನನ್ನು ಕುರಿತು ಹೇಳಿದನು :

**ಯತ್ತೇಽಭಿಲಷಿತಂ ಕಿಂಚಿತ್ತತ್ತ್ವಂ ಸರ್ವಮವಾಪ್ಸ್ಯಸಿ ।**
**ಅಹಮನ್ನಂ ಪ್ರದಾಸ್ಯಾಮಿ ಸಪ್ತ ಪಞ್ಚ ಚ ತೇ ಸಮಾಃ ॥೭೧॥**

**ಗೃಹ್ಣೀಷ್ವ ಪಿಠರಂ ತಾಮ್ರಂ ಮಯಾ ದತ್ತಂ ನರಾಧಿಪ ।**
**ಯಾವದ್ವರ್ತ್ಸ್ಯತಿ ಪಾಞ್ಚಾಲೀ ಪಾತ್ರೇಣಾನೇನ ಸುವ್ರತ ॥೭೨॥**



**ಫಲಮೂಲಾಮಿಷಂ ಶಾಕಂ ಸಂಸ್ಕೃತಂ ಯನ್ಮಹಾನಸೇ ।**
**ಚತುರ್ವಿಧಂ ತದನ್ನಾದ್ಯಮಕ್ಷಯಂ ತೇ ಭವಿಷ್ಯತಿ ॥೭೩॥**

**ಇತಶ್ಚತುರ್ದಶೇ ವರ್ಷೇ ಭೂಯೋ ರಾಜ್ಯಮವಾಪ್ಸ್ಯಸಿ ।**
**ಏವಮುಕ್ತ್ವಾ ತು ಭಗವಾಂಸ್ತತ್ರೈವಾನ್ತರಧೀಯತ ॥೭೪॥**

“ಯುಧಿಷ್ಠಿರ! ನೀನು ನಿನ್ನ ಮನೋವಾಂಛಿತಗಳನ್ನು ಪಡೆಯುವೆ. ಹನ್ನೆರಡು ವರ್ಷಗಳ ಕಾಲ ನಿನಗೆ ನಾನು ಅನ್ನವನ್ನು ಕೊಡುತ್ತೇನೆ. ಈ ತಾಮ್ರದ ಪಾತ್ರೆಯನ್ನು ತೆಗೆದುಕೋ. ಎಲ್ಲಿಯವರೆಗೆ ಈ ಪಾತ್ರೆಯಲ್ಲಿಯ ಆಹಾರವನ್ನು ದ್ರೌಪದಿಯು ಭುಂಜಿಸುವುದಿಲ್ಲವೋ ಅಲ್ಲಿಯವರೆಗೂ ಈ ಪಾತ್ರೆಯಲ್ಲಿ ಕಂದ-ಮೂಲ-ಫಲಗಳೂ, ಪಾಕಶಾಲೆಯಲ್ಲಿ ಸಿದ್ಧವಾಗುವ ಪಕ್ವವಾದ ಮಾಂಸ ಮತ್ತು ಷಡ್ರಸೋಪೇತವಾದ ನಾಲ್ಕು ವಿಧವಾದ ಭಕ್ಷ್ಯ-ಭೋಜ್ಯ-ಲೇಹ್ಯ-ಚೋಷ್ಯಗಳೂ ಅಕ್ಷಯವಾಗುತ್ತಿರುತ್ತವೆ. ಹದಿಮೂರು ವರ್ಷಗಳು ಕಳೆದನಂತರ ಹದಿನಾಲ್ಕನೆಯ ವರ್ಷ ನೀನು ಕಳೆದುಕೊಂಡಿರುವ ರಾಜ್ಯವನ್ನೂ ಪುನಃ ಪಡೆಯುವೆ.”

ಹೀಗೆ ಹೇಳಿ ಸೂರ್ಯದೇವನು ಅಂತರ್ಹಿತನಾದನು.

ಧರ್ಮರಾಜನು ಹೇಳಿದ ಸೂರ್ಯಸ್ತೋತ್ರಕ್ಕೆ ಫಲಶ್ರುತಿಯನ್ನು ವೈಶಂಪಾಯನರು ಹೇಳುತ್ತಾರೆ :

ಇಮಂ ಸ್ತವಂ ಪ್ರಯತಮನಾಃ ಸಮಾಧಿನಾ
ಪಠೇದಿಹಾನ್ಯೋಽಪಿ ವರಂ ಸಮರ್ಥಯನ್ ।
ತತ್ತಸ್ಯ ದದ್ಯಾಚ್ಚ ರವಿರ್ಮನೀಷಿತಂ
ತದಾಪ್ನುಯಾದ್ಯದ್ಯಪಿ ತತ್ಸುದುರ್ಲಭಮ್ ॥೭೫॥

ಯಶ್ಚೇದಂ ಧಾರಯೇನ್ನಿತ್ಯಂ ಶೃಣುಯಾದ್ವಾಪ್ಯಭೀಕ್ಷ್ಣಶಃ ।
ಪುತ್ರಾರ್ಥೀ ಲಭತೇ ಪುತ್ರಂ ಧನಾರ್ಥೀ ಲಭತೇ ಧನಮ್ ।
ವಿದ್ಯಾರ್ಥೀ ಲಭತೇ ವಿದ್ಯಾಂ ಪುರುಷೋಽಪ್ಯಥವಾ ಸ್ತ್ರಿಯಃ ॥೭೬॥

ಉಭೇ ಸಂಧ್ಯೇ ಪಠೇನ್ನಿತ್ಯಂ ನಾರೀ ವಾ ಪುರುಷೋ ಯದಿ ।
ಆಪದಂ ಪ್ರಾಪ್ಯ ಮುಚ್ಯೇತ ಬದ್ಧೋ ಮುಚ್ಯೇತ ಬನ್ಧನಾತ್ ॥೭೭॥

ಏತದ್ಬ್ರಹ್ಮಾ ದದೌ ಪೂರ್ವಂ ಶಕ್ರಾಯ ಸುಮಹಾತ್ಮನೇ ।
ಶಕ್ರಾಚ್ಚ ನಾರದಃ ಪ್ರಾಪ್ತೋ ಧೌಮ್ಯಸ್ತು ತದನನ್ತರಮ್ ।
ಧೌಮ್ಯಾದ್ಯುಧಿಷ್ಠಿರಃ ಪ್ರಾಪ್ಯ ಸರ್ವಾನ್ಕಾಮಾನವಾಪ್ತವಾನ್ ॥೭೮॥

**ಸಂಗ್ರಾಮೇ ಚ ಜಯೇನ್ನಿತ್ಯಂ ವಿಪುಲಂ ಚಾಪ್ನುಯಾದ್ವಸು ।**
**ಮುಚ್ಯತೇ ಸರ್ವಪಾಪೇಭ್ಯಃ ಸೂರ್ಯಲೋಕಂ ಸ ಗಚ್ಛತಿ ॥೭೯॥**

"ಯಾವನು ಅಭೀಷ್ಟಪ್ರಾಪ್ತಿಗಾಗಿ ಈ ದಿವ್ಯಸ್ತೋತ್ರವನ್ನು ಅನನ್ಯ ಚಿತ್ತನಾಗಿ ಅನನ್ಯಶರಣನಾಗಿ ಪಠಿಸುವನೋ–ಅಂತಹವನ ದುಷ್ಪ್ರಾಪ್ಯವಾದ ಅಭಿಲಾಷೆಗಳೆಲ್ಲವನ್ನೂ ಸೂರ್ಯದೇವನು ಪೂರ್ಣಮಾಡುತ್ತಾನೆ. ಈ ಸ್ತೋತ್ರವನ್ನು ಅನುದಿನವೂ ಪಠಿಸಿದವನೂ ಅಥವಾ ಭಕ್ತಿಯಿಂದ ಕೇಳಿ ದವನೂ–ಮನಸೋದ್ದಿಷ್ಟವಾದ ಫಲಗಳೆಲ್ಲವನ್ನೂ ಹೊಂದುತ್ತಾನೆ. ಪತ್ನೀ ಕಾಮನಾದ ಪುರುಷನು ಒಳ್ಳೆಯ ಪತ್ನಿಯನ್ನೂ, ಪುತ್ರಕಾಮಿಯು ಪುತ್ರನನ್ನೂ, ಧನಕಾಮಿಯು ಧನವನ್ನೂ, ವಿದ್ಯಾಕಾಮಿಯು ವಿದ್ಯೆಯನ್ನೂ ನಿಸ್ಸಂಶಯವಾಗಿ ಪಡೆಯುತ್ತಾರೆ. ಪ್ರಾತಃ-ಸಾಯಂಸಂಧ್ಯೆಗಳೆರಡರಲ್ಲಿಯೂ ಪುರುಷರಾಗಲೀ, ಸ್ತ್ರೀಯರಾಗಲೀ–ಈ ಸ್ತೋತ್ರವನ್ನು ಭಕ್ತಿಯಿಂದ ಪಠಿಸುತ್ತಿದ್ದರೆ ಮಹಾವಿಪತ್ತುಗಳಿಂದ ಪಾರಾಗುವರು. ಬಂದಿಯು ಬಂಧನದಿಂದ ಬಿಡುಗಡೆ ಹೊಂದುವನು. ಈ ಸ್ತೋತ್ರರತ್ನವನ್ನು ಮೊದಲು ಬ್ರಹ್ಮದೇವನು ಇಂದ್ರನಿಗೆ ಉಪದೇಶಿಸಿದನು. ಇಂದ್ರನಿಂದ ನಾರದರಿಗೂ, ನಾರದರಿಂದ ಧೌಮ್ಯರಿಗೂ, ಧೌಮ್ಯರಿಂದ ಯುಧಿಷ್ಠಿರನಿಗೂ ಉಪದಿಷ್ಟವಾಯಿತು. ಯುಧಿಷ್ಠಿರನು ಇದನ್ನು ಪುನಶ್ಚರಣೆಮಾಡಿ ನಾನು ಮೇಲೆ ಹೇಳಿದಂತೆ ಅಕ್ಷಯಪಾತ್ರೆಯನ್ನು ಪಡೆದನು. ಹೆಚ್ಚೇನು ಹೇಳಲಿ, ಜನಮೇಜಯ! ಈ ಸ್ತೋತ್ರವನ್ನು ಪಾರಾಯಣಮಾಡುವವನು ಯುದ್ಧದಲ್ಲಿ ಜಯಶಾಲಿಯಾಗುವನು. ವಿಪುಲವಾದ ಐಶ್ವರ್ಯವನ್ನೂ ಪಡೆಯುವನು. ಸರ್ವಪಾಪಗಳಿಂದಲೂ ವಿಮುಕ್ತನಾಗಿ ಕಟ್ಟಕಡೆಗೆ ಸೂರ್ಯಲೋಕವನ್ನೇ ಸೇರುತ್ತಾನೆ.

ಯುಧಿಷ್ಠಿರನು ಅಕ್ಷಯಪಾತ್ರೆಯನ್ನು ಸೂರ್ಯನಿಂದ ಪಡೆದು ನೀರಿನಿಂದ ಹೊರಬಂದು, ಪುರೋಹಿತರಾದ ಧೌಮ್ಯರ ಪಾದಕ್ಕೆರಗಿದನು. ಅವರಿಂದ ಆಶೀರ್ವಾದಪಡೆದವನಾಗಿ ತನ್ನ ಅನುಜರನ್ನು ಒಬ್ಬೊಬ್ಬರನ್ನಾಗಿ ಆಲಿಂಗಿಸಿದನು. ದ್ರೌಪದಿಯ ಬಳಿಗೆ ಹೋಗಿ ಅವಳಿಂದ ವಂದಿಸಲ್ಪಟ್ಟವ ನಾಗಿ ಅಂದಿನ ಭೋಜನವನ್ನು ತಾನೇ ಸಿದ್ಧಪಡಿಸಿದನು. ನಾಲ್ಕು ವಿಧವಾದ

ಅನ್ನವನ್ನೂ ಪಕ್ವಮಾಡಿ ಅಕ್ಷಯಪಾತ್ರೆಯನ್ನು ದ್ರೌಪದಿಯ ಕೈಗಿತ್ತು ಆ ಪಾತ್ರೆಯೊಳಗೆ ತಾನು ಸಿದ್ಧಪಡಿಸಿದ್ದ ಅನ್ನವನ್ನು ಇಟ್ಟನು. ಅಕ್ಷಯಪಾತ್ರೆಯಿಂದ ದ್ರೌಪದಿಯು ಅನ್ನವನ್ನು ತೆಗೆದುಕೊಂಡಂತೆಲ್ಲಾ ಅದರಲ್ಲಿ ಪುನಃ ಪುನಃ ಅದೇ ವಿಧವಾದ ಚತುರ್ವಿಧಾನ್ನಗಳೂ ಅಕ್ಷಯವಾಗುತ್ತಿದ್ದುವು.* ಆ ಅನ್ನದಿಂದಲೇ ಯುಧಿಷ್ಠಿರನು ತನ್ನ ಸಂಗಡ ಬಂದ ಬ್ರಾಹ್ಮಣರನ್ನು ತೃಪ್ತಿಪಡಿಸುತ್ತಿದ್ದನು. ಬ್ರಾಹ್ಮಣರ ಊಟವಾದ ಮೇಲೆ ಯುಧಿಷ್ಠಿರನ ಅನುಜರು ಊಟಮಾಡುತ್ತಿದ್ದರು. ಅತಿಥಿಗಳನ್ನು ಸತ್ಕರಿಸಿದನಂತರ ಉಳಿಯುವ ವಿಘಸವೆಂಬ ಅಭಿಧಾನದ ಅನ್ನಶೇಷವನ್ನು ಯುಧಿಷ್ಠಿರನು ಭುಂಜಿಸುವನು. ಯುಧಿಷ್ಠಿರನ ಭೋಜನವೂ ಆದನಂತರ ದ್ರೌಪದಿಯು ಉಳಿದುದನ್ನು ಊಟಮಾಡುವಳು. ದ್ರೌಪದಿಯ ಊಟವಾಯಿತೆಂದರೆ ಅಕ್ಷಯಪಾತ್ರೆಯಲ್ಲಿ ಅನ್ನಶೇಷವು ಉಳಿಯುತ್ತಿರಲಿಲ್ಲ.

ಯುಧಿಷ್ಠಿರನು ಸೂರ್ಯದೇವನಿಂದ ಪರಮಾದ್ಭುತವಾದ ವರವನ್ನು ಪಡೆದವನಾಗಿ ಸೂರ್ಯನಂತೆಯೇ ವಿರಾಜಿಸುತ್ತಾ, ತನ್ನ ಜೊತೆಯಲ್ಲಿ ಬಂದ ಬ್ರಾಹ್ಮಣರನ್ನು ಸತ್ಕರಿಸುತ್ತಾ, ಧೌಮ್ಯರ ಆದೇಶದಂತೆ ಪುಣ್ಯಕಾಲಗಳಲ್ಲಿ ಶ್ರುತಿ-ಸ್ಮೃತ್ಯುಕ್ತವಾದ ಯಜ್ಞಗಳನ್ನು ಮಾಡುತ್ತಾ ಕಾಲಕಳೆಯುತ್ತಿದ್ದನು. ಅದೇ ರೀತಿಯಲ್ಲಿ ಕೆಲವು ದಿನಗಳು ಕಳೆದನಂತರ ಧರ್ಮಜನು ಧೌಮ್ಯರ ಸಲಹೆಯಂತೆ ಅವರ ಆಶೀರ್ವಾದವನ್ನು ಪಡೆದು ಬ್ರಾಹ್ಮಣರೊಡನೆಯೂ, ಅನುಜರೊಡನೆಯೂ, ದ್ರೌಪದಿಯೊಡನೆಯೂ ಕೂಡಿಕೊಂಡು ಧೌಮ್ಯ ಪುರಸ್ಸರನಾಗಿ ಕಾಮ್ಯಕವನಕ್ಕೆ ಹೊರಟನು."

ಇನೆಯ ಅಧ್ಯಾಯವು ಮುಗಿಯಿತು.

---

* ಅಕ್ಷಯಪಾತ್ರೆಯ ವಿಷಯದಲ್ಲಿ ಅನೇಕ ವಿಧವಾದ ಜಿಜ್ಞಾಸೆಗಳಿವೆ. ಕೇಳಿದುದೆಲ್ಲವನ್ನೂ ಅಕ್ಷಯಪಾತ್ರೆಯು ಕೊಡುತ್ತಿತ್ತೆಂದೂ ಕೆಲವರು ಹೇಳುತ್ತಾರೆ. "ಸಂಸ್ಕೃತಂ ಪ್ರಸವಂ ಯಾತಿ ಸ್ವಲ್ಪಮನ್ನಂ ಚತುರ್ವಿಧಮ್ । ಅಕ್ಷಯಂ ವರ್ಧತೇ ಚಾನ್ನಂ" = ಸಂಸ್ಕೃತಂ ಚತುರ್ವಿಧಂ ಅನ್ನಂ ಸ್ವಲ್ಪಮಪಿ ಪ್ರಸವಂ ಯಾತಿ, ಅಕ್ಷಯಂ ವರ್ಧತೇ ಚ" – ಎಂದು ಮಹಾಭಾರತದಲ್ಲಿ ಸ್ಪಷ್ಟವಾಗಿರುವುದರಿಂದಲೂ, ಈ ಪಾತ್ರೆಗೆ ಅಕ್ಷಯ ಎಂದರೆ ವೃದ್ಧಿಹೊಂದುವುದು–ಎಂಬ ಅಭಿಧಾನವೇ ಇರುವುದ

## ಧೃತರಾಷ್ಟ್ರನಿಗೆ ವಿದುರನ ಸಲಹೆ : ಧೃತರಾಷ್ಟ್ರನು ಕುಪಿತನಾಗಿ ಎದ್ದುಹೋದುದು

ವೈಶಂಪಾಯನರು ಹೇಳುತ್ತಾರೆ :

**ವನಂ ಪ್ರವಿಷ್ಟೇಷ್ವಥ ಪಾಣ್ಡವೇಷು**
**ಪ್ರಜ್ಞಾಚಕ್ಷುಸ್ತಪ್ಯಮಾನೋಽಮ್ಬಿಕೇಯಃ ।**
**ಧರ್ಮಾತ್ಮಾನಂ ವಿದುರಮಗಾಧಬುದ್ಧಿಂ**
**ಸುಖಾಸೀನೋ ವಾಕ್ಯಮುವಾಚ ರಾಜಾ ॥೧॥**

"ಪಾರಿಕ್ಷಿತ! ಪಾಂಡವರು ವನವಾಸಕ್ಕೆ ಹೊರಟುಹೋದನಂತರವೂ ಪ್ರಜ್ಞಾಚಕ್ಷುವಾದ, ಅಂಬಿಕೆಯ ಮಗನಾದ ಧೃತರಾಷ್ಟ್ರನಿಗೆ ನೆಮ್ಮದಿಯಿರಲಿಲ್ಲ. ತನ್ನ ಪುತ್ರರ ಹಿತವನ್ನು ಹೇಗೆ ಸಾಧಿಸುವುದೆಂಬುದೇ ಅವನಿಗೆ ನಿರಂತರವಾದ ಯೋಚನೆಯಾಗಿತ್ತು. ಅದರಿಂದಾಗಿಯೇ ಅವನ ಮನಸ್ಸು ಪರಿತಪಿಸುತ್ತಿದ್ದಿತು. ಮನಸ್ಸು ಕಳವಳಗೊಂಡರೆ ಇತರರ ಸಲಹೆಗಳನ್ನು ಕೇಳುವುದು ಸ್ವಾಭಾವಿಕ. ಅಂತೆಯೇ ಧೃತರಾಷ್ಟ್ರನೂ ತನ್ನ ಪಕ್ಕದಲ್ಲಿಯೇ ಕುಳಿತಿದ್ದ, ಧರ್ಮಾತ್ಮನಾದ, ಅಗಾಧವಾದ ಬುದ್ಧಿಯುಳ್ಳ ವಿದುರನನ್ನು ಕೇಳಿದನು : "ವಿದುರ! ನಿನ್ನದು ಪರಿಪಕ್ವವಾದ ಬುದ್ಧಿ. ಶುಕ್ರನಿಗೆ ಸಮವಾದ ಪಾಂಡಿತ್ಯವು ನಿನಗಿದೆ ಮತ್ತು ನೀನು ಕೌರವ-ಪಾಂಡವರಿಬ್ಬರನ್ನೂ ನಿಷ್ಪಕ್ಷಪಾತವಾದ ದೃಷ್ಟಿಯಿಂದ ಕಾಣುತ್ತಿರುವೆ. ಆದುದರಿಂದ ನನಗೂ ಮತ್ತು ಪಾಂಡವರಿಗೂ ಪಥ್ಯವಾದ ಮಾರ್ಗವಾವುದೆಂಬುದನ್ನು ದಯೆಯಿಟ್ಟು ತಿಳಿಸುವವನಾಗು. ವಿಧಿಯ ಇಚ್ಛೆಯಂತೆ ಪಾಂಡವರು ಕಾಡಿಗೆ ಹೊರಟುಹೋದರು. ಆದರೆ ದುರಾಸೆಯಿಂದ ಕೌರವರು ಪಾಂಡವರನ್ನು ಕಾಡಿಗಟ್ಟಿಬಿಟ್ಟರೆಂದು ಜನರೆಲ್ಲರೂ ಆಡಿಕೊಳ್ಳುತ್ತಿದ್ದಾರೆ. ಅವರು ನಮ್ಮ ಮೇಲೆ ವಿಶ್ವಾಸವಿಡುವಂತೆ ಮಾಡುವುದು ಹೇಗೆ? ಪಾಂಡವರು ನಮ್ಮ

---

ರಿಂದಲೂ ಇದರಲ್ಲಿಟ್ಟ ಪದಾರ್ಥವು ಅಥವಾ ಅನ್ನವು ವೃದ್ಧಿಹೊಂದುತ್ತಿತ್ತೇ ಹೊರತು ಕಾಮಧೇನು ಮತ್ತು ಕಲ್ಪವೃಕ್ಷಗಳಂತೆ ಈ ಪಾತ್ರೆಯು ಕೇಳಿದುದೆಲ್ಲವನ್ನೂ ಕೊಡುತ್ತಿರಲಿಲ್ಲ–ಎಂಬುದು ಮೇಲಿನ ಶ್ಲೋಕದಿಂದಲೇ ಸ್ಪಷ್ಟವಾಗುತ್ತದೆ.

ವಂಶವನ್ನೇ ನಿರ್ಮೂಲಮಾಡಿಬಿಡಬಹುದು! ಅದನ್ನು ತಪ್ಪಿಸಿಕೊಳ್ಳುವುದು ಹೇಗೆ? ಸರ್ವನೀತಿವಿಶಾರದನಾದ ನೀನು ಇವೆಲ್ಲವನ್ನೂ ಕೂಲಂಕಷವಾಗಿ ಪರಿಶೀಲಿಸಿ ನಮಗೆ ಸಲಹೆಯನ್ನು ನೀಡು."

"ಮಹಾರಾಜ! ಪ್ರತ್ಯಕ್ಷವಾಗಿಯೇ ಇರುವ ಕಾರಣವನ್ನು ವಿವರಿಸಿ ಹೇಳಬೇಕಾದ್ದೇನಿದೆ?



ತ್ರಿವರ್ಗೋಽಯಂ ಧರ್ಮಮೂಲೋ ನರೇನ್ದ್ರ
ರಾಜ್ಯಂ ಚೇದಂ ಧರ್ಮಮೂಲಂ ವದನ್ತಿ ।
ಧರ್ಮೇ ರಾಜನ್ವರ್ತಮಾನಃ ಸ್ವಶಕ್ತ್ಯಾ
ಪುತ್ರಾನ್ಸರ್ವಾನ್ಪಾಹಿ ಪಾಣ್ಡೋಃ ಸುತಾಂಶ್ಚ ॥೪॥

ಅರ್ಥ-ಕಾಮ-ಮೋಕ್ಷಗಳು ಧರ್ಮಮೂಲವಾಗಿಯೇ ಇರುವು ದೆಂಬುದನ್ನು ಪ್ರಜ್ಞಾಚಕ್ಷುವಾದ ನಿನಗೆ ಹೇಳಬೇಕಾಗಿಯೇ ಇಲ್ಲ. ಅದರಂತೆಯೇ ರಾಜ್ಯವಾದರೂ ಧರ್ಮಮೂಲವಾಗಿಯೇ ಇರಬೇಕೆಂದು ನೀತಿಶಾಸ್ತ್ರಜ್ಞರು ಹೇಳುತ್ತಾರೆ. ಆದುದರಿಂದ ನೀನು ಯಥಾಶಕ್ತಿ ಧರ್ಮ ದಲ್ಲಿಯೇ ಇದ್ದುಕೊಂಡು ನಿನ್ನ ಪುತ್ರರನ್ನೂ ಮತ್ತು ಪಾಂಡುಪುತ್ರರನ್ನೂ ಪಕ್ಷಪಾತವಿಲ್ಲದಂತೆ ಪರಿಪಾಲನೆಮಾಡುವವನಾಗು.

ಯಾವಾಗ ನಿನ್ನ ಮಗನು ಶಕುನಿಯ ಸಲಹೆಯಂತೆ ಧರ್ಮಿಷ್ಠನಾದ, ಸತ್ಯಸಂಧನಾದ ಯುಧಿಷ್ಠಿರನನ್ನು ಪಗಡೆಯಾಟಕ್ಕೆ ಆಹ್ವಾನಿಸಿ, ಅವನನ್ನು ಅನ್ಯಾಯದ ಪಗಡೆಯಾಟದಲ್ಲಿ ಸೋಲಿಸಿದನೋ–ಆಗಲೇ ಧರ್ಮಕ್ಕೆ ನ್ಯೂನತೆಯುಂಟಾಯಿತು. ನಿನ್ನ ಮಗನು ಪಾಂಡವರ ವಿಷಯದಲ್ಲಿ ಮಾಡಿ ರುವ ಮಹಾಪಾಪದಿಂದ ವಿಮೋಚನೆಹೊಂದಲು ಮತ್ತು ಚೆನ್ನಾಗಿ ಪ್ರತಿಷ್ಠಿತ ನಾಗಲು ಈಗಲೂ ಒಂದು ಉಪಾಯವಿದೆ. ನೀನು ಹಿಂದೆ ಪಾಂಡವರಿಗೆ ಹಂಚಿಕೊಟ್ಟಿದ್ದ ರಾಜ್ಯವನ್ನು ಪಾಂಡವರು ಈಗಲೇ ಪಡೆಯುವಂತೆ ಮಾಡು. ತನ್ನಲ್ಲಿರುವ ರಾಜ್ಯ-ಕೋಶಗಳಿಂದಲೇ ತೃಪ್ತಿಪಡುವುದೂ ಮತ್ತು ಇತರರ ರಾಜ್ಯ-ಕೋಶಗಳ ಮೇಲೆ ದುರಾಸೆಪಡದಿರುವುದೂ ಶ್ರೇಷ್ಠವಾದ ರಾಜಧರ್ಮಗಳೆಂದು ಜ್ಞಾನಿಗಳು ಹೇಳುತ್ತಾರೆ. ಹೀಗೆ ಮಾಡುವುದರಿಂದ ನಿನ್ನ ಕೀರ್ತಿಗೆ ಕಳಂಕವೂ ಉಂಟಾಗುವುದಿಲ್ಲ ಮತ್ತು ನಿನ್ನನ್ನು ಅಧರ್ಮಿಷ್ಠನೆಂದು ಯಾರೂ ಹೇಳುವುದಿಲ್ಲ. ಆದುದರಿಂದ ಈ ಕೂಡಲೇ ನೀನು ಪಾಂಡವರನ್ನು ಬಹುಮಾನಿಸುವುದೂ ಮತ್ತು ಇವೆಲ್ಲಕ್ಕೂ ಮುಖ್ಯಕಾರಣನಾದ ಶಕುನಿಯನ್ನು ತಿರಸ್ಕರಿಸುವುದೂ ನಿನ್ನ ಮುಖ್ಯಕರ್ತವ್ಯವಾಗಿರುತ್ತದೆ.

ಈಗಲೂ ನಿನ್ನ ಮಕ್ಕಳಿಗೆ ಹಿತವನ್ನುಂಟುಮಾಡುವ ಇಚ್ಛೆಯಿದ್ದಲ್ಲಿ ಈ ಕೂಡಲೇ ನಾನು ಹೇಳಿದ ಕಾರ್ಯವನ್ನು ಮಾಡು. ನಾನು ಹೇಳಿದಂತೆ ಈಗಲೂ ಮಾಡದಿದ್ದರೆ ಕೌರವರೆಲ್ಲರೂ ನಿಶ್ಚಯವಾಗಿಯೂ ವಿನಾಶ ಹೊಂದುತ್ತಾರೆ. ಇದರಲ್ಲಾವ ಸಂಶಯವೂ ಇಲ್ಲ. ಭೀಮಾರ್ಜುನರು ಕುಪಿತರಾಗಿ ಬಂದರೆಂದರೆ ಶತ್ರುಸಮೂಹದಲ್ಲಿ ಯಾವೊಬ್ಬನನ್ನೂ ಸಂಹಾರ ಮಾಡದೇ ಬಿಡರು. ಗಾಂಡೀವಧನುರ್ಧರನಾದ ಸವ್ಯಸಾಚಿಯೂ, ಮಹಾ ಬಲಶಾಲಿಯಾದ ಭೀಮನೂ ಇರುವ ಪಕ್ಷವು ಯಾವುದನ್ನು ತಾನೇ ಸಾಧಿಸ

ಲಾರದು? ಭೀಮಾರ್ಜುನರಿಗೆದುರಾಗಿ ನಿಂತು ಯುದ್ಧಮಾಡುವವರೇ ಇಲ್ಲ, ಮಹಾರಾಜ!

ದುರ್ಯೋಧನನು ಹುಟ್ಟಿದೊಡನೆಯೇ ಪ್ರಕೃತಿಯಲ್ಲುಂಟಾದ ವೈಪರೀತ್ಯವನ್ನು ಕಂಡು ನಾನು ಹೇಳಿದುದು ನಿನ್ನ ಸ್ಮರಣೆಯಲ್ಲಿದೆಯೇ? 'ಈ ಅಮಂಗಳಶಿಶುವನ್ನು ವಿಸರ್ಜಿಸು. ಹೀಗೆ ಮಾಡುವುದರಿಂದ ನಿನ್ನ ವಂಶಕ್ಕೆ ಶುಭೋದಯವುಂಟಾಗುತ್ತದೆ'–ಎಂದು ಸ್ಪಷ್ಟವಾಗಿ ಅಂದೇ ನಾನು ಹೇಳಿದ್ದೆನು. ಆದರೆ ಪುತ್ರವ್ಯಾಮೋಹವಶನಾಗಿ ನೀನು ಅಂದು ನಾನು ಹೇಳಿದಂತೆ ಮಾಡಲಿಲ್ಲ.

ಇಂದಾದರೂ ನಾನು ಹೇಳಿದಂತೆ ನೀನು ಕೇಳದಿದ್ದರೆ–ಮುಂದೆ ಬಹಳ ಪಶ್ಚಾತ್ತಾಪಪಡಬೇಕಾಗುತ್ತದೆ. ನಿನ್ನ ಮಗನು ಪಾಂಡವರೊಡನೆ ಸೇರಿ ರಾಜ್ಯಭಾರಮಾಡಲು ಒಪ್ಪುವುದಾದರೆ ನೀನು ನಿಶ್ಚಯವಾಗಿಯೂ ಸ್ವಲ್ಪವೂ ವ್ಯಥೆಪಡಬೇಕಾಗುವುದಿಲ್ಲ. ದುರ್ಯೋಧನನು ಅದಕ್ಕೆ ಒಪ್ಪದಿದ್ದರೆ ಅವನನ್ನು ಪರಿತ್ಯಜಿಸುವುದೊಂದೇ ಉತ್ತಮವಾದ ಮಾರ್ಗ. ನಿನ್ನ ಸುಖಕ್ಕಾಗಿಯೇ ಅವನನ್ನು ಪರಿತ್ಯಜಿಸಬೇಕು. ದುರ್ಯೋಧನನನ್ನು ಬದಿಗೊತ್ತಿ ಯುಧಿಷ್ಠಿರನಿಗೆ ರಾಜ್ಯದ ಪಟ್ಟಾಭಿಷೇಕವನ್ನು ಮಾಡು. ಜಿತೇಂದ್ರಿಯನಾದ, ಅಜಾತಶತ್ರುವಾದ ಧರ್ಮಜನು ಧರ್ಮದಿಂದ ರಾಜ್ಯಪರಿಪಾಲನೆ ಮಾಡಲಿ. ಧರ್ಮಜನು ರಾಜನಾದನೆಂದರೆ ಪ್ರಪಂಚದ ರಾಜರೆಲ್ಲರೂ, ವೈಶ್ಯರೋಪಾದಿಯಲ್ಲಿ ಕಾಲ-ಕಾಲಕ್ಕೆ ಕಪ್ಪ-ಕಾಣಿಕೆಗಳನ್ನು ತಂದೊಪ್ಪಿಸುತ್ತಾರೆ. ದುರ್ಯೋಧನ-ಕರ್ಣ-ಶಕುನಿಗಳು ಪ್ರೀತಿಯಿಂದ ಪಾಂಡುಪುತ್ರರ ಸೇವೆಯನ್ನು ಮಾಡಲಿ. ದುಃಶಾಸನನು ತಾನು ಮಾಡಿದ ಮಹಾಪರಾಧಕ್ಕೆ ತುಂಬಿದ ಸಭೆಯಲ್ಲಿ ಭೀಮಸೇನ-ದ್ರೌಪದಿಯರ ಕ್ಷಮೆಯನ್ನು ಯಾಚಿಸಲಿ. ಯುಧಿಷ್ಠಿರನನ್ನು ನೀನೇ ಸಂತೈಸಿ, ಗೌರವಿಸಿ, ಸಿಂಹಾಸನದಲ್ಲಿ ಕುಳ್ಳಿರಿಸು.

ನಿನ್ನ ಪ್ರಶ್ನೆಗೆ ಇದಕ್ಕಿಂತಲೂ ಹೆಚ್ಚಿನ ಸಲಹೆಯನ್ನೇನು ಕೊಡಲಿ ಮಹಾರಾಜ! ನಾನು ಹೇಳಿದ ರೀತಿಯಲ್ಲಿ ನೀನು ನಡೆದರೆ ವಿವೇಕವಾದ ಕಾರ್ಯವನ್ನೇ ಎಸಗಿದಂತಾಗುವುದು."

(ಧೃತರಾಷ್ಟ್ರನು ವಿದುರನ ಸಲಹೆಯನ್ನು ಕೇಳಿದುದು–'ಜನತೆಯನ್ನು ತಮ್ಮ ಕಡೆಗೆ ಸೆಳೆದುಕೊಳ್ಳುವುದು ಹೇಗೆ ಮತ್ತು ಪ್ರಜೆಗಳಿಗೆ ಕೌರವರ ಮೇಲೆ ಪ್ರೀತಿ-ವಿಶ್ವಾಸಗಳು ಬೆಳೆಯಬೇಕಾದರೆ ಅನುಸರಿಸಬೇಕಾದ ಕಾರ್ಯಕ್ರಮ ಗಳೇನು?'–ಎಂಬುದನ್ನು ತಿಳಿಯುವುದಕ್ಕಾಗಿ. ಪಾಂಡವರನ್ನು ಪುನಃ ಕರೆತಂದು ಅವರಿಗೆ ರಾಜ್ಯವನ್ನೊಪ್ಪಿಸುವ ಆಶಯವು ಧೃತರಾಷ್ಟ್ರನಿಗಿರಲಿಲ್ಲ. ವಿಧಿನಿಯಮದಂತೆ ಪಾಂಡವರು ಕಾಡಿಗೆ ಹೋದರೆಂದು ಧೃತರಾಷ್ಟ್ರನು ನಿರಾತಂಕನಾಗಿದ್ದನು.) ಅದರಿಂದಾಗಿ ವಿದುರನಾಡಿದ ಮಾತುಗಳು ಸತ್ಯವಾಗಿದ್ದರೂ ತನಗೆ ಕೇಳಲು ನಿಷ್ಠುರವಾಗಿದ್ದುದರಿಂದ ಧೃತರಾಷ್ಟ್ರನಿಗೆ ಕೋಪವೇ ಬಂದಿತು. ವಿದುರನನ್ನು ಕುರಿತು ಗಡುಸಾದ ಧ್ವನಿಯಲ್ಲಿಯೇ ಹೇಳಿದನು :

"ವಿದುರ! ನೀನು ಇದೇ ಮಾತುಗಳನ್ನೇ ಅಂದಿನ ದಿನ ಸಭಾಮಂದಿರ ದಲ್ಲಿಯೂ ಹೇಳಿದುದು ನಿಜ. ಆದರೆ ನಿನ್ನ ಮಾತುಗಳು ಪಾಂಡವರಿಗೆ ಹಿತಕರವಾಗಿಯೂ, ನಮಗೆ ಅಹಿತಕರವಾಗಿಯೂ ಇದ್ದುವು. ಈ ಕಾರಣ ದಿಂದಲೇ ನನ್ನ ಮನಸ್ಸು ನಿನ್ನ ಸಲಹೆಗೆ ಒಪ್ಪಿಗೆಯನ್ನೀಯಲಿಲ್ಲ. ಈಗಲೂ ಅದೇ ಮಾತುಗಳನ್ನು ದೃಢೀಕರಿಸಿ ಹೇಳುತ್ತಿರುವೆಯೇಕೆ? ನೀನು ಪಾಂಡವರ ವಿಷಯವಾಗಿ ಪದೇ-ಪದೇ ಹೇಳಿದುದನ್ನೇ ಹೇಳುತ್ತಿರುವುದನ್ನು ನೋಡಿ ದರೆ ನೀನು ಪಾಂಡವರ ಪಕ್ಷಪಾತಿಯೆಂದೂ ನಮಗೆ ಹಿತಬಯಸುವವನಲ್ಲ ವೆಂದೂ ನಿಶ್ಚಯಿಸಬೇಕಾಗಿದೆ. ದುರ್ಯೋಧನನನ್ನು ಪರಿತ್ಯಜಿಸಬೇಕೆಂದು ಬಾರಿ-ಬಾರಿಗೂ ಹೇಳುತ್ತಿರುವೆ. ಪಾಂಡುವಿನ ಮಕ್ಕಳ ಸಲುವಾಗಿ ನಾನು ನನ್ನ ಮಗನನ್ನೇ ಪರಿತ್ಯಜಿಸುವ ಸಾಧ್ಯತೆಯಿದೆಯೇ? ಹೇಗೆತಾನೇ ಪರಿತ್ಯಜಿ ಸಲಿ? ಪಾಂಡುವಿನ ಮಕ್ಕಳೂ ನನ್ನ ಮಕ್ಕಳೆಂಬುದರಲ್ಲಿ ಸಂಶಯವಿಲ್ಲ. ಆದರೆ ದುರ್ಯೋಧನನು ನನ್ನ ತನೂಜ. ನನ್ನ ಆತ್ಮದ ಪ್ರತಿಕೃತಿಯು. ಹೀಗಿರುವಾಗ ಪಕ್ಷಪಾತವಿಲ್ಲದೇ ಮಾತನಾಡುವ ಯಾವನು ತಾನೇ ಇನ್ನೊಬ್ಬರಿಗಾಗಿ ನನ್ನ ಆತ್ಮದಿಂದಲೇ ನನ್ನನ್ನು ಬೇರ್ಪಡಿಸುವ ಸಲಹೆಮಾಡು ವನು? ಬೇರ್ಪಡಿಸುವ ಅಂತಹ ಸಲಹೆಯನ್ನು ಯಾರೂ ಒಪ್ಪಲಾರರು ; ಯಾರೂ ಮಾಡಲಾರರು. ವಿದುರ! ನಾನು ನಿನ್ನ ವಿಷಯದಲ್ಲಿ ಬಹಳ

ಗೌರವಬುದ್ಧಿಯಿಂದ ಇದ್ದೇನೆ. ಆದರೂ ನೀನು ನನಗೆ ಅಹಿತವಾದುದನ್ನೇ ಪದೇ-ಪದೇ ಹೇಳುತ್ತಿರುವೆ. ಇನ್ನು ಮೇಲೆ ನಿನ್ನ ಸಲಹೆಯಾಗಲೀ ನಿನ್ನ ಸಹವಾಸವಾಗಲೀ ನನಗೆ ಸಹ್ಯವಾಗದು. ಆದುದರಿಂದ ನೀನು ನಿನ್ನ ಇಚ್ಛೆಬಂದಲ್ಲಿಗೆ ಹೋಗಬಹುದು ಅಥವಾ ಇಲ್ಲಿಯೇ ಇರಬಹುದು. ಆದರೆ ನೀನು ನನಗಾಗಿ ಹಸ್ತಿನೆಯಲ್ಲಿರಬೇಕಾಗಿಲ್ಲ. **'ಸುಸಾನ್ತ್ವ್ಯಮಾನಾಪ್ಯಸತೀ ಸ್ತ್ರೀ ಜಹಾತಿ!'** 'ದುರ್ಮಾರ್ಗವನ್ನು ಹಿಡಿದಿರುವ ಕುಲಟೆಯು ಎಷ್ಟೇ ಗೌರವಿಸಲ್ಪಟ್ಟರೂ ಗಂಡನನ್ನು ಬಿಟ್ಟು ಹೊರಟುಹೋಗುತ್ತಾಳೆ'–ಹೀಗೆಂದು ಹೇಳುತ್ತಾ ಧೃತರಾಷ್ಟ್ರನು ಸಿಂಹಾಸನದಿಂದ ಮೇಲೆದ್ದು ಅಂತಃಪುರದೊಳಕ್ಕೆ ಹೊರಟುಹೋದನು. ವಿದುರನು ಅದಕ್ಕುತ್ತರವಾಗಿಯೋ ಎಂಬಂತೆ– **'ನೇದಮಸ್ತಿ'** 'ಈ ವಂಶವು ಇನ್ನು ಖಂಡಿತವಾಗಿಯೂ ಉಳಿಯಲಾರದು'–ಎಂದು ಹೇಳುತ್ತಾ ಪಾಂಡುಪುತ್ರರು ಹೋದ ಮಾರ್ಗವನ್ನೇ ಅನುಸರಿಸಿ ತಾನೂ ಹೊರಟನು."

ಳನೆಯ ಅಧ್ಯಾಯವು ಮುಗಿಯಿತು.

೫ನೆಯ ಅಧ್ಯಾಯ ಅರಣ್ಯಪರ್ವ (ಮುಂದುವರಿದಿದೆ.)

## ಪಾಂಡವರಿಂದ ಕಾಮ್ಯಕವನಪ್ರವೇಶ : ವಿದುರನ ಆಗಮನ ಮತ್ತು ಪಾಂಡವರೊಡನೆ ಸಂಭಾಷಣೆ

**ವೈಶಂಪಾಯನರು ಹೇಳುತ್ತಾರೆ :**

**ಪಾಣ್ಡವಾಸ್ತು ವನೇ ವಾಸಮುದ್ದಿಶ್ಯ ಭರತರ್ಷಭ ।**
**ಪ್ರಯಯುರ್ಜಾಹ್ನವೀಕೂಲಾತ್ಕುರುಕ್ಷೇತ್ರಂ ಸಹಾನುಗಾಃ ॥೧॥**

"ಜನಮೇಜಯ! ವನವಾಸಮಾಡಲು ಹೊರಟ ಪಾಂಡವರು ತಮ್ಮ ಅನುಯಾಯಿಗಳೊಡನೆ ಗಂಗಾನದಿಯ ದಡದಿಂದ ಹೊರಟು ಕುರುಕ್ಷೇತ್ರವನ್ನು ಸೇರಿದರು. ಕುರುಕ್ಷೇತ್ರದಲ್ಲಿದ್ದ ಸರಸ್ವತೀ-ದೃಷದ್ವತೀ-ಯಮುನಾ ನದಿಗಳಲ್ಲಿ ಮಿಂದು, ನಿತ್ಯ-ನೈಮಿತ್ತಿಕಕರ್ಮಗಳನ್ನು ಮುಗಿಸಿ, ಅಲ್ಲಿಂದ ಮುಂದೆ ಪಶ್ಚಿಮಾಭಿಮುಖವಾಗಿ ಹೊರಟು ಅನೇಕ ಕಾಡುಗಳನ್ನು ದಾಟಿದ ನಂತರ ಸರ್ವರ್ಷಿಸೇವ್ಯವಾದ ಕಾಮ್ಯಕವನಕ್ಕೆ ಬಂದರು. ಕಾಮ್ಯಕವನವು

ಸರಸ್ವತೀನದಿಯ ತೀರದಲ್ಲಿರುವ ಬಹುಸುಂದರವಾದ ವನ. ನಾನಾವಿಧವಾದ ಪಕ್ಷಿಗಳಿಂದಲೂ ಜಿಂಕೆ-ಸಾರಂಗ–ಮೊದಲಾದ ಸಾಧುಪ್ರಾಣಿಗಳಿಂದಲೂ ನಿಬಿಡವಾಗಿದ್ದ ಆ ಸುಂದರವನದಲ್ಲಿ ಪಾಂಡವರು–ಅಲ್ಲಿ ವಾಸವಾಗಿದ್ದ ಋಷಿ ಶ್ರೇಷ್ಠರಿಂದ ಪುರಸ್ಕೃತರಾಗಿ ಸಮಯಗಳಲ್ಲಿ ಅವರುಗಳಿಂದ ಸಮಾಧಾನಪಡಿ ಸಲ್ಪಟ್ಟವರಾಗಿ–ಕಾಲಕಳೆಯುತ್ತಿದ್ದರು.

ಪಾಂಡವರನ್ನು ಕಾಣಬೇಕೆಂಬ ಹಂಬಲದಿಂದ ಕೂಡಿದ್ದ ವಿದುರನು, 'ನಿನ್ನ ಇಚ್ಛೆಯಿದ್ದೆಡೆಗೆ ಹೋಗು' ಎಂದು ಧೃತರಾಷ್ಟ್ರನು ಹೇಳಿದೊಡನೆಯೇ, ಶೀಘ್ರಗಾಮಿಗಳಾದ ಕುದುರೆಗಳನ್ನು ಕಟ್ಟಿರುವ ರಥವನ್ನು ಹತ್ತಿ ಕಾಮ್ಯಕವನದ ಕಡೆಗೆ ವೇಗವಾಗಿ ಬಂದನು. ಧರ್ಮಜನು ದ್ರೌಪದೀ-ಭೀಮಾರ್ಜುನ-ನಕುಲ-ಸಹದೇವಾದಿಗಳೊಡನೆಯೂ ಮತ್ತು ಬ್ರಾಹ್ಮಣ ರೊಡನೆಯೂ ಕುಳಿತಿರುವುದನ್ನು ರಥದ ಮೇಲೆ ಕುಳಿತಿದ್ದ ವಿದುರನು ದೂರದಿಂದಲೇ ನೋಡಿದನು. ಸತ್ಯಸಂಧನಾದ ಯುಧಿಷ್ಠಿರನು ವಿದುರನ ರಥದ ಪತಾಕೆಯನ್ನು ದೂರದಿಂದಲೇ ನೋಡಿ ರಥದಲ್ಲಿ ಬರುತ್ತಿರುವವನು ವಿದುರನೆಂದೇ ನಿಶ್ಚಯಿಸಿ ಕಾತರನಾಗಿ ಭೀಮನಿಗೆ ಹೇಳಿದನು :

"ಭೀಮಸೇನ! ವಿದುರನು ಮತ್ತಾವ ವಾರ್ತೆಯನ್ನು ತಂದಿರು ವನೋ? ತಿಳಿಯದಲ್ಲಾ! ಶಕುನಿಯಿಂದ ಕಳುಹಿಸಲ್ಪಟ್ಟವನಾಗಿ ಪುನಃ ನಮ್ಮನ್ನು ಜೂಜಾಟಕ್ಕೆ ಆಹ್ವಾನಿಸಲು ಬಂದಿರಬಹುದೇ? ನಮ್ಮಲ್ಲಿ ಈಗುಳಿದಿರುವ ಆಯುಧಗಳನ್ನೂ ಜೂಜಾಟದ ಮೂಲಕ ಅಪಹರಿಸಲು ಕ್ಷುದ್ರಬುದ್ಧಿಯ ಶಕುನಿಯು ನಿಶ್ಚಯಿಸಿರಬಹುದೇ? ಭೀಮಸೇನ! ಯಾರಿಂದಲಾದರೂ 'ಜೂಜಾಟಕ್ಕೆ ಬಾ' ಎಂದು ಆಹ್ವಾನಿತನಾದರೆ ನಿರಾಕರಿಸಲು ಖಂಡಿತವಾಗಿಯೂ ನಾನು ಅಸಮರ್ಥನು. ಒಂದು ವೇಳೆ ಪುನಃ ಜೂಜಾಟಕ್ಕೆ ಹೋಗಬೇಕಾಗಿ ಬಂದು ಗಾಂಡೀವವನ್ನು ಪಣವನ್ನಾಗಿಟ್ಟು ಸೋತಪಕ್ಷದಲ್ಲಿ ನಮಗೆ ಪುನಃ ರಾಜ್ಯಪ್ರಾಪ್ತಿಯಾಗುವುದು ಅಸಂಭವವೇ ಸರಿ. ಗಾಂಡೀವ ವಿಲ್ಲದೇ ರಾಜ್ಯಪ್ರಾಪ್ತಿಯು ಖಂಡಿತವಾಗಿಯೂ ಸಾಧ್ಯವಿಲ್ಲ."

(ಶಾಂತಿಪ್ರಿಯನಾದ ಯುಧಿಷ್ಠಿರನೂ ಶಾಂತಿಯಿಂದ ರಾಜ್ಯವು ಸಿಕ್ಕದಿದ್ದರೆ ಯುದ್ಧದ ಮೂಲಕವೇ ರಾಜ್ಯಪ್ರಾಪ್ತಿಯೆಂಬುದನ್ನು ನಿಶ್ಚಯಿಸಿದ್ದ

ನೆಂದು–ಈ ಪ್ರಕರಣದಿಂದ ತಿಳಿಯಬಹುದಾಗಿದೆ. ಸರ್ವಸ್ವವನ್ನೂ ಕಳೆದು ಕೊಂಡರೂ ರಾಜ್ಯದ ಪುನಃಪ್ರಾಪ್ತಿಗೆ ಕಟ್ಟಕಡೆಯದಾಗಿ ತಮ್ಮ ಅಮೋಘವಾದ ಆಯುಧಗಳಾದರೂ ಇವೆಯೆಂಬ ದೃಢನಿಶ್ಚಯವು ಯುಧಿಷ್ಠಿರನಿಗಿದ್ದಿತು. )



ಯುಧಿಷ್ಠಿರನು ಭೀಮನೊಡನೆ ಈ ರೀತಿ ಸಂಭಾಷಣೆ ಮಾಡುತ್ತಿರುವಾಗಲೇ ವಿದುರನ ರಥವು ಬಹಳ ಸಮೀಪಕ್ಕೆ ಬಂದುಬಿಟ್ಟಿತು. ಒಡನೆಯೇ ಪಾಂಡವರೆಲ್ಲರೂ ಮೇಲೆದ್ದು ರಥದ ಸಮೀಪಕ್ಕೆ ಹೋಗಿ, ವಿದುರನನ್ನು

ವಿನಯಪೂರ್ವಕವಾಗಿ ಮುಗುಳ್ನಗೆಯೊಡನೆ ಸ್ವಾಗತಿಸಿದರು. ಪಾಂಡವರಿಂದ ಸ್ವಾಗತಿಸಲ್ಪಟ್ಟ ವಿದುರನು ಅವರೆಲ್ಲರನ್ನೂ ತನ್ನ ಪಕ್ಕದಲ್ಲಿ ಕುಳ್ಳಿರಿಸಿಕೊಂಡು ಒಬ್ಬೊಬ್ಬರ ಯೋಗ-ಕ್ಷೇಮಗಳನ್ನೂ ಪ್ರತ್ಯೇಕ-ಪ್ರತ್ಯೇಕವಾಗಿ ವಿಚಾರಿಸಿದನು. ಪರಸ್ಪರ ಕುಶಲಪ್ರಶ್ನೆಗಳಾದನಂತರ ವಿದುರನು ಸ್ವಲ್ಪಹೊತ್ತು ವಿಶ್ರಮಿಸಿಕೊಂಡನು.

ವಿದುರನೊಡನೆ ಪುನಃ ಮಾತುಕತೆಗಳು ಆರಂಭವಾದಾಗ ಯುಧಿಷ್ಠಿರನು ವಿದುರಾಗಮನದ ಕಾರಣವನ್ನು ಕೇಳಿದನು. ವಿದುರನು ಧೃತರಾಷ್ಟ್ರನಿಗೂ ತನಗೂ ಆದ ಸಂಭಾಷಣೆಗಳೆಲ್ಲವನ್ನೂ ಪಾಂಡುಪುತ್ರರಿಗೆ ವಿವರಿಸಿ ಹೇಳತೊಡಗಿದನು :

"ಧರ್ಮಜ! ನೀವೆಲ್ಲರೂ ಅರಣ್ಯಾಭಿಮುಖವಾಗಿ ಪ್ರಯಾಣ ಮಾಡಿದನಂತರ ಧೃತರಾಷ್ಟ್ರನು ನನ್ನನ್ನು ಕರೆಯಿಸಿ ಹೇಳಿದನು : 'ವಿದುರ! ನಿನಗೆ ತಿಳಿದಿರುವಂತೆ ಕಾರ್ಯಗಳೆಲ್ಲವೂ ಅಸ್ತವ್ಯಸ್ತವಾಗಿ ನಡೆದುಹೋದುವು. ಹೀಗೆ ನಡೆದುದರಿಂದ ನನ್ನ ಮನಸ್ಸಿಗೆ ಸಮಾಧಾನವುಂಟಾಗಲಿಲ್ಲ. ಮನಸ್ಸು ಮತ್ತಷ್ಟು ಕಳವಳಗೊಂಡಿದೆ. ಈಗ ಪಾಂಡವರಿಗೂ ಕೌರವರಿಗೂ ಹಿತವಾಗುವ ಉಪಾಯವೊಂದನ್ನು ಹೇಳು.'

ಧೃತರಾಷ್ಟ್ರನ ಆ ಕೇಳಿಕೆಗೆ ನಾನು ನಿಶ್ಚಯವಾಗಿಯೂ ಪಾಂಡವ-ಕೌರವರಿಗೆ ಹಿತವಾದ ಮತ್ತು ಪಥ್ಯವಾದ ಸಲಹೆಯನ್ನೇ ಕೊಟ್ಟೆನು. ಆದರೆ ಅಂಬಿಕಾಸುತನಿಗೆ ನನ್ನ ಮಾತುಗಳು ರುಚಿಸಲಿಲ್ಲ. ಬೇರೆ ಯಾವುದು ಹಿತವೆಂದು ನನಗೂ ತಿಳಿಯಲಿಲ್ಲ. ನಾನು ಶ್ರೇಯಸ್ಸಿನಲ್ಲಿ ಉತ್ತಮವಾದುದನ್ನೇ ಹೇಳಿದೆನು. ಆದರೆ ಧೃತರಾಷ್ಟ್ರನು ನನ್ನ ಮಾತನ್ನು ಕೇಳಲಿಲ್ಲ. ರೋಗಿಗೆ ಔಷಧ-ಪಥ್ಯಗಳು ರುಚಿಸಲಾರವು. ಅಂತೆಯೇ ನನ್ನ ಹಿತೋಪದೇಶಗಳೂ ಧೃತರಾಷ್ಟ್ರನಿಗೆ ರುಚಿಸಲಿಲ್ಲ.

ನ ಶ್ರೇಯಸೇ ನೀಯತೇऽಜಾತಶತ್ರೋ
ಸ್ತ್ರೀ ಶ್ರೋತ್ರಿಯಸ್ಯೇವ ಗೃಹೇ ಪ್ರದುಷ್ಟಾ ।
ಧ್ರುವಂ ನ ರೋಚೇದ್ಭರತರ್ಷಭಸ್ಯ
ಪತಿಃ ಕುಮಾರ್ಯಾ ಇವ ಷಷ್ಟಿವರ್ಷಃ ॥೧೫॥

ಕೆಟ್ಟ ಹೆಂಗಸು ಶ್ರೋತ್ರಿಯನ ಮನೆಯಲ್ಲಿದ್ದರೂ ಅವಳನ್ನು ಶ್ರೇಯಸ್ಸಿನ ಕಡೆಗೆ ಒಯ್ಯಲು ಸಾಧ್ಯವಿಲ್ಲ. ಹಾಗೆಯೇ ಉತ್ತಮವಂಶದಲ್ಲಿ ಹುಟ್ಟಿದ ವಿದ್ವಾಂಸನಾದ ಧೃತರಾಷ್ಟ್ರನ ಬುದ್ಧಿಯು ಕೆಟ್ಟಿರುವುದರಿಂದ ಅದನ್ನು ಶ್ರೇಯಸ್ಸಿನ ಕಡೆಗೆ ಎಳೆಯಲು ಸಾಧ್ಯವಿಲ್ಲ. ಷೋಡಶವರ್ಷದ ಕನ್ಯೆಗೆ ಷಷ್ಟ್ಯಬ್ದಪೂರ್ತಿಯಾದ ವೃದ್ಧಪತಿಯು ಸಹ್ಯವಾಗದಂತೆ–ನನ್ನ ಮಾತುಗಳೂ ಕುರುಪತಿಗೆ ಸಹ್ಯವಾಗಲಿಲ್ಲ.

**ಧ್ರುವಂ ವಿನಾಶೋ ನೃಪ ಕೌರವಾಣಾಂ**
**ನ ವೈ ಶ್ರೇಯೋ ಧೃತರಾಷ್ಟ್ರಃ ಪರೈತಿ ।**
**ಯಥಾ ಚ ಪರ್ಣೇ ಪುಷ್ಕರಸ್ಯಾವಸಿಕ್ತಂ**
**ಜಲಂ ನ ತಿಷ್ಠೇತ್ಪಥ್ಯಮುಕ್ತಂ ತಥಾಸ್ಮಿನ್ ॥೧೬॥**

ಧರ್ಮಜ! ನಿಶ್ಚಯವಾಗಿ ಹೇಳುವುದಾದರೆ ಕುರುರಾಜರ ಅವಸಾನ ಕಾಲವು ಸನ್ನಿಹಿತವಾಗಿದೆ. ಧೃತರಾಷ್ಟ್ರನೂ ಶ್ರೇಯೋವಂತನಾಗುವುದಿಲ್ಲ. ಅಕೀರ್ತಿಮಂತನಾಗುತ್ತಾನೆ. ಕಾಸಾರದಲ್ಲಿರುವ ಕಮಲಪತ್ರದ ಮೇಲೆ ಜಲ ಬಿಂದುವು ಬಿದ್ದರೆ ಯಾವ ರೀತಿಯಲ್ಲಿ ಕ್ಷಣಕಾಲವೂ ನಿಲ್ಲದೇ ಕೆಳಗೆ ಉರುಳಿ ಹೋಗುತ್ತದೆಯೋ ಮತ್ತು ಆ ಕಮಲಪತ್ರಕ್ಕೆ ಜಲಸ್ಪರ್ಶದ ಚಿಹ್ನೆಯೇ ಇರುವುದಿಲ್ಲವೋ–ಅದೇ ರೀತಿಯಲ್ಲಿ ಧೃತರಾಷ್ಟ್ರನಿಗೆ ನಾನು ಮಾಡಿದ ಹಿತೋಪದೇಶಗಳೆಲ್ಲವೂ ವ್ಯರ್ಥವೇ ಆಯಿತು. ಅವನಲ್ಲಿ ಸ್ವಲ್ಪವೂ ಪರಿಣಾಮಕಾರಿಯಾಗಲಿಲ್ಲ. ನನ್ನ ಹಿತೋಕ್ತಿಯನ್ನು ಕೇಳಿ ಅದರಂತೆ ನಡೆಯುವುದಕ್ಕೆ ಬದಲಾಗಿ ನನ್ನ ಮೇಲೆಯೇ ಕೋಪಗೊಂಡು–'ಇಚ್ಛೆಯಿದ್ದ ಲ್ಲಿಗೆ ಹೊರಟುಹೋಗು'–ಎಂದು ಹೇಳಿಬಿಟ್ಟನು. ರಾಜ್ಯದ ಆಳ್ವಿಕೆಗಾಗಲೀ, ಹಸ್ತಿನಾಪುರದ ರಕ್ಷಣೆಗಾಗಲೀ ನನ್ನ ಸಲಹೆಯು ಅನಾವಶ್ಯಕವೆಂದೂ ಧೃತರಾಷ್ಟ್ರನು ನನಗೆ ಸ್ಪಷ್ಟವಾಗಿ ಹೇಳಿದನು. ಧರ್ಮಜ! ಧೃತರಾಷ್ಟ್ರನಿಂದ ತಿರಸ್ಕೃತನಾದ ನಾನು ನಿನಗಾದರೂ ಹಿತೋಪದೇಶವನ್ನು ಮಾಡಬೇಕೆಂಬ ಆಶಯದಿಂದ ನಿನ್ನಲ್ಲಿಗೆ ಬಂದಿರುವೆನು. ನಾನಂದು ಮಹಾಸಭೆಯಲ್ಲಿ ಏನು ಹೇಳಿದ್ದೆನೋ ಅದನ್ನೇ ಪುನಃ ಹೇಳುವೆನು, ಕೇಳು :

ಕ್ಲೇಶೈಸ್ತೀವ್ರೈರ್ಯುಜ್ಯಮಾನಃ ಸಪತ್ನೈಃ
ಕ್ಷಮಾಂ ಕುರ್ವನ್ಕಾಲಮುಪಾಸತೇ ಯಃ ।
ಸಂವರ್ಧಯನ್ಸ್ತೋಕಮಿವಾಗ್ನಿಮಾತ್ಮವಾ-
ನ್ಸ ವೈ ಭುಙ್ಕ್ತೇ ಪೃಥಿವೀಮೇಕ ಏವ ॥೧೯॥

ಯಾವಾತನು ತನ್ನ ಶತ್ರುಗಳು ಉಂಟುಮಾಡಿದ ಅನೇಕಕಷ್ಟಗಳನ್ನೂ ಸಹಿಸಿಕೊಂಡು ತಾಳ್ಮೆಯಿಂದ ಕಾಲನಿರೀಕ್ಷಣೆಯನ್ನು ಮಾಡುತ್ತಾ ತನ್ನ ಬಲ ವನ್ನು ದಿನೇ-ದಿನೇ ವೃದ್ಧಿಪಡಿಸಿಕೊಳ್ಳುವನೋ–ಅವನು ಸಣ್ಣ ಕಿಡಿಯೊಂದು ಗಾಳಿಯ ಸಹಾಯದಿಂದ ಕ್ಷಣ-ಕ್ಷಣಕ್ಕೂ ಅಭಿವೃದ್ಧಿಹೊಂದುತ್ತಾ ಕಟ್ಟಕಡೆಗೆ ಆರಿಸಲು ದುಸ್ಸಾಧ್ಯವಾದ ಕಾಡುಗಿಚ್ಚಾಗಿ ಪರಿಣಮಿಸುವಂತೆ–ಅಮಿತವಾದ ಶಕ್ತಿಯನ್ನು ಪಡೆದು ಈ ವಿಶ್ವವೆಲ್ಲವನ್ನೂ ಒಬ್ಬನೇ ಆಳಲು ಸಮರ್ಥ ನಾಗುವನು.

ಯಸ್ಯಾವಿಭಕ್ತಂ ವಸು ರಾಜನ್ಸಹಾಯೈ-
ಸ್ತಸ್ಯ ದುಃಖೇಽಪ್ಯಂಶಭಾಜಃ ಸಹಾಯಾಃ ।
ಸಹಾಯಾನಾಮೇಷ ಸಂಗ್ರಹಣೋಽಧ್ಯುಪಾಯಃ
ಸಹಾಯಾಪ್ತೌ ಪೃಥಿವೀಪ್ರಾಪ್ತಿಮಾಹುಃ ॥೨೦॥

ಯಾವಾತನು ಸುಖವಾಗಿರುವ ಕಾಲದಲ್ಲಿ ತನ್ನ ಸುಖದಲ್ಲಿ, ತನ್ನ ಐಶ್ವರ್ಯದಲ್ಲಿ ತನ್ನ ಸಹಾಯಕರೂ ಪಾಲ್ಗೊಳ್ಳುವಂತೆ ಮಾಡುವನೋ– ಅಂತಹವನಿಗೆ ಕಾಲಾಂತರದಲ್ಲಿ ವಿಧಿನಿಯಮದಂತೆ ಸಂಭವಿಸುವ ಕಷ್ಟಗಳಲ್ಲಿ ಅವನ ಸಹಾಯಕರೂ ಭಾಗಿಗಳಾಗುವರು. ಇದೇ ಸಹಾಯಕರನ್ನು ಸಂಗ್ರಹಿ ಸುವ ಉಪಾಯ. ಯಾವಾತನು ಸುಖ-ದುಃಖಗಳೆರಡರಲ್ಲಿಯೂ ಸಹಭಾಗಿ ಗಳಾಗುವ ಸಹಾಯಕರನ್ನು ಪಡೆಯುವನೋ–ಅಂತಹವನು ಖಂಡಿತ ವಾಗಿಯೂ ಈ ಪೃಥ್ವಿಯನ್ನು ಪಡೆಯಲು ಸಮರ್ಥನಾಗುವನು. ಆದುದ ರಿಂದ, ಧರ್ಮಜ!

ಸತ್ಯಂ ಶ್ರೇಷ್ಠಂ ಪಾಣ್ಡವ ವಿಪ್ರಲಾಪಂ
ತುಲ್ಯಂ ಚಾನ್ನಂ ಸಹ ಭೋಜ್ಯಂ ಸಹಾಯೈಃ ।
ಆತ್ಮಾ ಚೈಷಾಮಗ್ರತೋ ನ ಸ್ಮ ಪೂಜ್ಯ
ಏವಂ ವೃತ್ತಿರ್ವರ್ಧತೇ ಭೂಮಿಪಾಲಃ ॥೨೧॥

ನಿನ್ನ ಅನುಯಾಯಿಗಳಿಗೆ ಅಥವಾ ಸಹಾಯಕರಿಗೆ ನಿನ್ನಲ್ಲಿರುವುದನ್ನು ಹಂಚಿಕೊಟ್ಟು ಅವರ ಸುಖ-ದುಃಖಗಳೇ ನಿನ್ನ ಸುಖ-ದುಃಖಗಳೆಂದೂ ಭಾವಿಸು. ಅವರೊಡನೆ ಸತ್ಯವಾಗಿ ನಡೆದುಕೊ. ಅವರಿಗೆ ಪ್ರಿಯವಾಗುವಂತೆ ಮಾತನಾಡು. ನೀನು ಊಟಮಾಡುವ ಮೃಷ್ಟಾನ್ನವನ್ನೇ ಅವರೂ ಭುಂಜಿಸಲಿ. ಅವರ ಮುಂದೆ ಯಾವ ಸಮಯದಲ್ಲಿಯೂ ಆತ್ಮಪ್ರಶಂಸೆಯನ್ನು ಮಾಡಿಕೊಳ್ಳಬೇಡ. ಅನುಯಾಯಿಗಳ ಅಥವಾ ಸಹಾಯಕರ ವಿಷಯಗಳಲ್ಲಿ ಈ ವಿಧವಾದ ವರ್ತನೆಯು ರಾಜರ ಅಭ್ಯುದಯಕ್ಕೆ ಕಾರಣವಾಗುತ್ತದೆ."

ಧರ್ಮಜನು ಹೇಳುತ್ತಾನೆ :

"ವಿದುರ! ಅಪ್ರಮತ್ತನಾಗಿದ್ದು ನೀನು ಹೇಳಿದುದೆಲ್ಲವನ್ನೂ ಪರಿಪಾಲಿಸುತ್ತಿರುವೆನು. ಈಗ ಹೇಳಿದ ಪರಮಶ್ರೇಷ್ಠವಾದ ಬುದ್ಧಿವಾದವನ್ನೂ ಗ್ರಹಿಸಿ, ಮುಂದೆಯೂ ದೇಶ-ಕಾಲಗಳನ್ನನುಸರಿಸಿ ನೀನು ಹೇಳಲಿರುವ ಹಿತೋಕ್ತಿಗಳಂತೆಯೇ ನಡೆಯುವೆನು."

೫ನೆಯ ಅಧ್ಯಾಯವು ಮುಗಿಯಿತು.

೬ನೆಯ ಅಧ್ಯಾಯ ಅರಣ್ಯಪರ್ವ (ಮುಂದುವರಿದಿದೆ.)

## ಧೃತರಾಷ್ಟ್ರನು ಸಂಜಯನ ಮೂಲಕ ವಿದುರನನ್ನು ಅರಣ್ಯದಿಂದ ಕರೆಸಿಕೊಂಡು ಅವನ ಕ್ಷಮೆಯನ್ನು ಯಾಚಿಸಿದುದು

ವೈಶಂಪಾಯನರು ಹೇಳುತ್ತಾರೆ :

**ಗತೇ ತು ವಿದುರೇ ರಾಜನ್ನಾಶ್ರಮಂ ಪಾಣ್ಡವಾನ್ಪ್ರತಿ ।**
**ಧೃತರಾಷ್ಟ್ರೋ ಮಹಾಪ್ರಾಜ್ಞಃ ಪರ್ಯತಪ್ಯತ ಭಾರತ ॥೧॥**

"ಪಾರಿಕ್ಷಿತ! ವಿದುರನು ಕಾಮ್ಯಕವನಕ್ಕೆ ಹೋಗಿ ಪಾಂಡವರನ್ನು ಸೇರಿದನೆಂಬ ವಾರ್ತೆಯು ತಿಳಿದೊಡನೆಯೇ ಧೃತರಾಷ್ಟ್ರನಿಗೆ ಬಹಳ ಸಂಕಟ ವಾಯಿತು. ವಿದುರನಿಗಿರುವ ನೀತಿಶಾಸ್ತ್ರದ ಪ್ರಾವೀಣ್ಯ, ಸಂಧಿ-ವಿಗ್ರಹಾದಿ ಗಳಲ್ಲಿ ಅವನಿಗಿರುವ ಪ್ರಭಾವ–ಇವೆಲ್ಲವನ್ನೂ ಧೃತರಾಷ್ಟ್ರನು ಸ್ಮರಿಸಿದನು. ಅಂತಹ ಮಹಾಪ್ರಾಜ್ಞನೊಬ್ಬನು ಪಾಂಡವರ ಪಕ್ಷವನ್ನು ಸೇರಿಬಿಟ್ಟರೆ ಆ ಪಕ್ಷವು ಹೆಚ್ಚು ಪ್ರಬಲವಾಗಿಬಿಡುವುದೆಂಬ ಭಯದ ಭೂತವು ರಾಜನನ್ನು

ಆವರಿಸಿತು. ಸಭಾಮಂದಿರದ ಮಹಾದ್ವಾರಕ್ಕೆ ಬಂದ ಧೃತರಾಷ್ಟ್ರನು ವಿದುರನ ಸ್ಮರಣೆಯಿಂದ ಉದ್ವೇಗಗೊಂಡವನಾಗಿ ಅಲ್ಲಿದ್ದ ರಾಜರ ಸಮ್ಮುಖದಲ್ಲಿಯೇ ಮೂರ್ಛಿತನಾಗಿ ಬಿದ್ದನು. ಕೆಲವು ಕ್ಷಣಗಳು ಕಳೆದನಂತರ ಎಚ್ಚೆತ್ತು ಮೇಲೆದ್ದು ತನ್ನ ಪಕ್ಕದಲ್ಲಿ ಆಸರೆಯಾಗಿ ನಿಲ್ಲಲು ಬಂದಿದ್ದ ಸಂಜಯನನ್ನು ಕುರಿತು ಹೇಳತೊಡಗಿದನು :

"ಅಯ್ಯೋ! ವಿದುರನು ನನ್ನ ಅನುಜನು ಮಾತ್ರವಲ್ಲ, ಸಂಜಯ! ನನ್ನ ಪ್ರಾಣಪ್ರಿಯನೂ ಆಗಿರುತ್ತಾನೆ. ಅವನು ಧರ್ಮದಲ್ಲಿ ಮತ್ತೊಬ್ಬ ಸಾಕ್ಷಾತ್ ಯಮಧರ್ಮನಂತೆಯೇ ಇದ್ದಾನೆ. ಅವನನ್ನು ನೆನೆದಂತೆಲ್ಲಾ ಅವನನ್ನಗಲಿರುವ ನನ್ನ ಹೃದಯವು ಸೀಳಿಹೋಗುತ್ತದೆ. ಕೂಡಲೇ ಹೋಗು, ಸಂಜಯ! ನನ್ನ ತಮ್ಮನೂ, ಧರ್ಮಜ್ಞನೂ, ನೀತಿಶಾಸ್ತ್ರವಿಶಾರದನೂ ಆದ ವಿದುರನನ್ನು ಕರೆದುಕೊಂಡು ಬಾ. ಅವನಿಲ್ಲದೇ ನಾನೊಂದು ಕ್ಷಣವೂ ಜೀವಿಸಿರಲಾರೆನು."

ಇವೇ ಮುಂತಾಗಿ ಹೇಳುತ್ತಾ ಎಲ್ಲ ರಾಜರ ಸಮಕ್ಷದಲ್ಲಿಯೇ ಧೃತ ರಾಷ್ಟ್ರನು ಗಟ್ಟಿಯಾಗಿ ಅಳತೊಡಗಿದನು. ತಾನು ವಿದುರನನ್ನು ಹೊರದೂಡಿ ದುದಕ್ಕಾಗಿ ಪಶ್ಚಾತ್ತಾಪವನ್ನು ಸೂಚಿಸುತ್ತಾ ಭ್ರಾತೃಸ್ನೇಹದಿಂದ ಬಹು ದುಃಖಿತನಾಗಿ ಸಂಜಯನನ್ನು ಕುರಿತು ಧೃತರಾಷ್ಟ್ರನು ಪುನಃ ಹೇಳಿದನು :

"ಸಂಜಯ! ಕೂಡಲೇ ಹೋಗು. ವಿವೇಕಶೂನ್ಯನಾದ, ಪಾಪಾತ್ಮನಾದ ನನ್ನಿಂದ ಅವಮಾನಿತನಾದ, ಮಹಾನುಭಾವನಾದ ವಿದುರನು ಇನ್ನೂ ಜೀವಿಸಿರುವನೇ ಎಂಬುದನ್ನು ತಿಳಿದು ಬಾ. ಪ್ರಾಜ್ಞನಾದ ಮತ್ತು ಮಹಾ ಬುದ್ಧಿಶಾಲಿಯಾದ ವಿದುರನು ಇದುವರೆಗೆ ಸ್ವಲ್ಪವಾದರೂ ಯಾವುದೇ ಅಪರಾಧವನ್ನೂ, ಅಪ್ರಿಯವನ್ನೂ ಮಾಡಿರುವುದಿಲ್ಲ. ಆದರೆ ನಾನೇ ಅವನಿಗೆ ಅಪ್ರಿಯವನ್ನೂ, ಅಪರಾಧವನ್ನೂ ಮಾಡಿರುವೆನು. ಆದುದರಿಂದ ನೀನು ಈಗಲೇ ಹೋಗಿ ವಿದುರನನ್ನು ಹುಡುಕಿ ಕರೆದುಕೊಂಡು ಬಾ. ಹಾಗಿಲ್ಲದಿದ್ದರೆ ನಾನು ಖಂಡಿತವಾಗಿಯೂ ಪ್ರಾಣಗಳನ್ನು ತೊರೆಯುವೆನು."

ರಾಜನ ಪಶ್ಚಾತ್ತಾಪಪೂರಿತವಾದ ಮಾತುಗಳನ್ನು ಕೇಳಿ ಸಂಜಯನು ವಿದುರನನ್ನು ಪುನಃ ಕರೆತರಲು ಒಪ್ಪಿ ಕಾಮ್ಯಕವನಕ್ಕೆ ವೇಗವಾಗಿ ಪ್ರಯಾಣ

ಮಾಡಿದನು. ಕಾಮ್ಯಕವನದಲ್ಲಿ ಯುಧಿಷ್ಠಿರನು ಕೃಷ್ಣಾಜಿನವನ್ನು ಧರಿಸಿ ಸಾವಿರಾರು ಬ್ರಾಹ್ಮಣರಿಂದಲೂ, ವಿದುರನಿಂದಲೂ ಮತ್ತು ತನ್ನ ಅನುಜ ರಿಂದಲೂ ಪರಿವೃತನಾಗಿ ಸಾಕ್ಷಾತ್ ಇಂದ್ರಸಮಾನನಾಗಿ ವಿರಾಜಿಸುತ್ತಿರುವು ದನ್ನು ಸಂಜಯನು ಕಂಡನು. ಧರ್ಮಜನ ಬಳಿಗೆ ಬಂದು ಅವನನ್ನು ಅಭಿವಂದಿಸಿ, ಭೀಮಾರ್ಜುನ-ಯಮಳರಿಂದ ತಾನೂ ಪುರಸ್ಕೃತನಾಗಿ ಯುಧಿಷ್ಠಿರನ ಅನುಜ್ಞೆಯನ್ನು ಪಡೆದು, ಸಂಜಯನು ಆಸನದಲ್ಲಿ ಉಪವಿಷ್ಟ ನಾದನು. ಕುಶಲಪ್ರಶ್ನೆಗಳಾದನಂತರ ಯುಧಿಷ್ಠಿರನು ಸಂಜಯನ ಆಗಮನದ ಕಾರಣವನ್ನು ಕೇಳಲಾಗಿ, ಸಂಜಯನು ಹೇಳಿದನು :

"ಯುಧಿಷ್ಠಿರ! ಧೃತರಾಷ್ಟ್ರನ ಆಜ್ಞೆಯಂತೆ ವಿದುರನನ್ನು ಕರೆದುಕೊಂಡು ಹೋಗಲು ನಾನು ಬಂದಿರುವೆನು"–ಎಂದು ಹೇಳಿ ವಿದುರನ ಕಡೆಗೆ ತಿರುಗಿ ಹೇಳಿದನು : "ವಿದುರ! ಧೃತರಾಷ್ಟ್ರರಾಜನು ಕ್ಷಣ-ಕ್ಷಣಕ್ಕೂ ನಿನ್ನನ್ನು ಸ್ಮರಿಸಿಕೊಂಡು ಶೋಕಪಡುತ್ತಿರುವನು. ನೀನು ಬರದಿದ್ದರೆ ಅವನು ಪ್ರಾಣತ್ಯಾಗಮಾಡಲೂ ನಿಶ್ಚಯಿಸಿಬಿಟ್ಟಿರುವನು. ಆದುದರಿಂದ ನೀನೀಗಲೇ ಪಾಂಡುಪುತ್ರರ ಅನುಮತಿಯನ್ನು ಪಡೆದು ಧೃತರಾಷ್ಟ್ರನ ಬಳಿಗೆ ಬಂದು ಸೇರುವುದು ಯುಕ್ತವಾಗಿದೆ."

ಸಂಜಯನು ಹೀಗೆಂದು ಹೇಳಿದೊಡನೆಯೇ ಬಂಧುಗಳ ವಿಷಯದಲ್ಲಿ ಪರಮಕಾರುಣಿಕನಾದ ವಿದುರನು ಮೇಲೆದ್ದು ಯುಧಿಷ್ಠಿರನ ಅನುಮತಿಯನ್ನು ಪಡೆದು ಸಂಜಯನೊಡನೆ ಹಸ್ತಿನಾಪುರಕ್ಕೆ ಹಿಂದಿರುಗಿದನು.

ವಿದುರನು ಅರಮನೆಗೆ ಬಂದೊಡನೆಯೇ ಅವನನ್ನು ಕಂಡು ಧೃತ ರಾಷ್ಟ್ರನು ಹೇಳಿದನು : "ವಿದುರ! ನಿಶ್ಚಯವಾಗಿಯೂ ನಾನು ಅದೃಷ್ಟ ಶಾಲಿಯು. ನೀನು ನನ್ನನ್ನು ಪರಿತ್ಯಜಿಸದೇ ನಾನು ಮಾಡಿದ ತಪ್ಪನ್ನೂ ಮರೆತು ನನ್ನ ಬಳಿಗೆ ಬಂದೆಯಲ್ಲವೇ? ನಿಶ್ಚಯವಾಗಿಯೂ ನಿನ್ನಂತಹ ಮಹಾಮೇಧಾವಿಯನ್ನು ಪುನಃ ಪಡೆದ ನಾನೇ ಧನ್ಯನು. ವಿದುರ! ನೀನು ಹೊರಟುಹೋದ ನಿಮಿಷದಿಂದ ನನಗೆ ನಿದ್ರೆಯೆಂಬುದೇ ಇಲ್ಲವಾಗಿದೆ. ಹಗಲಿರುಳೂ ನಿನ್ನ ಯೋಚನೆಯಲ್ಲಿಯೇ ಇರುವುದರಿಂದ ನಿದ್ರೆಯೇ ಇಲ್ಲ. ನನ್ನ ಶರೀರಸ್ಥಿತಿಯೇ ವಿಚಿತ್ರವಾಗಿದೆ. ನನ್ನನ್ನು ಕ್ಷಮಿಸುವೆಯಾ? ವಿದುರ!

ಅಂದು ನಾನು ಕಠಿನವಾದ ಮಾತುಗಳಿಂದ ನಿನ್ನ ಮನಸ್ಸನ್ನು ಬಹುವಾಗಿ ನೋಯಿಸಿಬಿಟ್ಟೆನು. ದಯೆಯಿಟ್ಟು ಕ್ಷಮಿಸು."

ಹೀಗೆಂಬುದಾಗಿ ಹೇಳಿ ಧೃತರಾಷ್ಟ್ರನು ವಿದುರನನ್ನು ತನ್ನ ತೊಡೆಯ ಮೇಲೆ ಕುಳ್ಳಿರಿಸಿಕೊಂಡು ಅವನ ನೆತ್ತಿಯನ್ನು ಬಾರಿ-ಬಾರಿಗೂ ಅಕ್ಕರೆಯಿಂದ ಆಘ್ರಾಣಿಸುತ್ತಾ–"ಪಾಪರಹಿತನೇ! ನಾನು ಹೇಳಿದುದನ್ನು ಕ್ಷಮಿಸಿಬಿಡು!



ಸಿಟ್ಟಾಗಬೇಡ! ಕ್ಷಮಿಸಿರುವೆಯಾ? ವಿದುರ!"–ಇವೇ ಮುಂತಾದ ಬಹು ನಯವಾದ ಮಾತುಗಳಿಂದ ವಿದುರನನ್ನು ಸಂತೈಸಿದನು.

ಪರಮಧಾರ್ಮಿಕನಾದ ವಿದುರನು ಧೃತರಾಷ್ಟ್ರನನ್ನು ಅಭಿವಂದಿಸಿ ಅವನೊಡನೆ ಹೇಳಿದನು : "ನಾನೀಗಾಗಲೇ ಕ್ಷಮಿಸಿಬಿಟ್ಟಿದ್ದೇನೆ, ಧೃತರಾಷ್ಟ್ರ!

ನೀನು ನನಗಿಂತಲೂ ಹಿರಿಯನು ಮತ್ತು ಪೂಜ್ಯನು. ನೀನು ಹೇಳಿದುದೆಲ್ಲ ವನ್ನೂ ಮರೆತು ನಿನ್ನನ್ನು ನೋಡುವ ಕಾತರದಿಂದ ಇಲ್ಲಿಗೆ ಬಂದಿರುವೆನು. ಕೇಳು, ಮಹಾರಾಜ!

**ಭವನ್ತಿ ಹಿ ನರವ್ಯಾಘ್ರ ಪುರುಷಾ ಧರ್ಮಚೇತಸಃ ।**
**ದೀನಾಭಿಪಾತಿನೋ ರಾಜನ್ನಾತ್ರ ಕಾರ್ಯಾ ವಿಚಾರಣಾ ॥೨೩॥**

ನರಶ್ರೇಷ್ಠನೇ! ಯಾವಾಗಲೂ ಧರ್ಮಾತ್ಮರು–ದೀನರಾದವರ, ಕಷ್ಟಕ್ಕೆ ಸಿಕ್ಕಿರುವವರ ಪಕ್ಷಪಾತಿಗಳಾಗಿರುತ್ತಾರೆ. ಇದು ಸ್ವಾಭಾವಿಕವಾದ ವಿಷಯ. ಪಾಂಡುವಿನ ಮಕ್ಕಳ ಮೇಲೆ ನನಗೆಷ್ಟು ಪ್ರೀತಿಯಿದೆಯೋ–ಅಷ್ಟೇ ಪ್ರೀತಿಯು ನಿನ್ನ ಮಕ್ಕಳ ಮೇಲೆಯೂ ಇದೆ. ಆದರೆ ಅವರಿಂದು ಕಷ್ಟಕ್ಕೆ ಸಿಕ್ಕಿರುವುದರಿಂದ ದೀನರಾದ ಅವರ ವಿಷಯದಲ್ಲಿ ನನ್ನ ಹೃದಯವು ಹೆಚ್ಚು ಅನುಕಂಪದಿಂದ ಕೂಡಿದೆ.”

ಹೀಗೆ ಧೃತರಾಷ್ಟ್ರ-ವಿದುರರು ಪರಸ್ಪರವಾಗಿ ಅನುನಯದ (ಒಲಿಸಿ ಕೊಳ್ಳುವ) ಬಹಳ ಮಾತುಗಳನ್ನಾಡಿ ಅತ್ಯಂತಸಂತೋಷವನ್ನು ಹೊಂದಿ ದರು.”

ಆರನೆಯ ಅಧ್ಯಾಯವು ಮುಗಿಯಿತು.

೭ನೆಯ ಅಧ್ಯಾಯ ಅರಣ್ಯಪರ್ವ (ಮುಂದುವರಿದಿದೆ.)

## ದುರ್ಯೋಧನ–ದುಃಶಾಸನ–ಶಕುನಿ–ಕರ್ಣರ ಮಂತ್ರಾಲೋಚನೆ : ಅರಣ್ಯದಲ್ಲಿರುವ ಪಾಂಡವರನ್ನು ಸಂಹರಿಸಲು ನಿರ್ಧಾರ : ವ್ಯಾಸರಿಂದ ತಡೆ

ವೈಶಂಪಾಯನರು ಹೇಳುತ್ತಾರೆ :

**ಶ್ರುತ್ವಾ ಚ ವಿದುರಂ ಪ್ರಾಪ್ತಂ ರಾಜ್ಞಾ ಚ ಪರಿಸಾನ್ತ್ವಿತಮ್ ।**
**ಧೃತರಾಷ್ಟ್ರಾತ್ಮಜೋ ರಾಜಾ ಪರ್ಯತಪ್ಯತ ದುರ್ಮತಿಃ ॥೧॥**

“ಪಾರಿಕ್ಷಿತ! ವಿದುರನು ಪುನಃ ಹಸ್ತಿನೆಗೆ ಬಂದ ವಿಷಯವನ್ನೂ ತಂದೆಯಾದ ಧೃತರಾಷ್ಟ್ರನು ವಿದುರನನ್ನು ಸಂತೈಸಿದುದನ್ನೂ ಕೇಳಿ ದುರ್ಮತಿಯಾದ ದುರ್ಯೋಧನನು ಬಹಳ ಸಂತಪ್ತನಾದನು.

ತಂದೆಯ ಆಂತರ್ಯವು ಆ ಮೂಢನಿಗೆ ತಿಳಿಯದಿದ್ದುದೇ ಅವನ

ಸಂತಾಪಕ್ಕೆ ಕಾರಣವಾಗಿದ್ದಿತು. ಪುನಃ ತಮ್ಮ ತಂದೆಗೆ ಸಲಹೆನೀಡಿ ಪಾಂಡವರನ್ನು ಕರೆಯಿಸಲು ವಿದುರನೆಲ್ಲಿ ಸಂಧಾನಮಾಡುವನೋ–ಎಂಬುದೇ ದುರ್ಯೋಧನನ ದುಃಖಕ್ಕೆ ಕಾರಣವಾಗಿದ್ದಿತು. ವಿದುರನು ಪಾಂಡವಪಕ್ಷಪಾತಿಯಾದುದರಿಂದ ಧೃತರಾಷ್ಟ್ರನ ಬಳಿಯಲ್ಲಿರುವುದು ದುರ್ಯೋಧನನಿಗೆ ಬೇಡವಾಗಿದ್ದಿತು. ವಿದುರನು ಅರಮನೆಗೆ ಬಂದೊಡನೆಯೇ ಅವನನ್ನು ಧೃತರಾಷ್ಟ್ರನು ಬಾಚಿತಬ್ಬಿಕೊಂಡು ಸ್ವಾಗತಿಸಿ ಸಂತೈಸಿದನೆಂಬ ಸಮಾಚಾರವೂ ದುರ್ಯೋಧನನಿಗೆ ತಿಳಿಯಿತು. ದುರ್ಯೋಧನನು ಒಡನೆಯೇ ಕರ್ಣ-ದುಃಶಾಸನ-ಸೌಬಲರನ್ನು ಕರೆಸಿಕೊಂಡು ಏಕಾಂತದಲ್ಲಿ ಹೇಳಿದನು :

"ನಿಮಗೆಲ್ಲರಿಗೂ ಸಮಾಚಾರವು ತಿಳಿಯಿತೇ? ಪಾಂಡುಪುತ್ರರ ಹಿತದಲ್ಲಿಯೇ ನಿರತನಾದ, ಧೃತರಾಷ್ಟ್ರನ ಮಂತ್ರಿಯಾದ ವಿದುರನು ಪುನಃ ಹಸ್ತಿನೆಗೆ ಬಂದಿರುವನು. ಈ ವಿದುರನು ರಾಜನನ್ನು ಪುನಃ ಪುನಃ ಒತ್ತಾಯಿಸಿ ಪಾಂಡುಪುತ್ರರನ್ನು ಹಸ್ತಿನೆಗೆ ಕರೆತರುವುದಕ್ಕೆ ಒಪ್ಪುವಂತೆ ಮಾಡುವುದರೊಳಗಾಗಿ ನನಗೆ ಹಿತವಾದ ಮಾರ್ಗವೇನೆಂಬುದನ್ನು ನಿಶ್ಚಯಿಸಿ ಹೇಳಿರಿ. ನಾನೇನಾದರೂ ಪುನಃ ಪಾಂಡುಪುತ್ರರನ್ನು ಹಸ್ತಿನೆಯಲ್ಲಿ ನೋಡಿದ್ದೇ ಆದರೆ ನಿಶ್ಚಯವಾಗಿಯೂ ಅನ್ನ-ನೀರುಗಳನ್ನು ತೊರೆದು, ನನ್ನ ದೇಹವನ್ನು ಕೃಶಮಾಡಿಬಿಡುವೆನು ; ವಿಷವನ್ನಾದರೂ ಕುಡಿಯುವೆನು ; ಅಗ್ನಿಯನ್ನಾದರೂ ಪ್ರವೇಶಿಸುವೆನು ; ನೇಣುಹಾಕಿಕೊಳ್ಳುವೆನು ; ಅಥವಾ ನನ್ನ ಕತ್ತಿಯಿಂದಲೇ ನನ್ನ ಕತ್ತನ್ನಾದರೂ ಕತ್ತರಿಸಿ ಅಸುವನ್ನು ನೀಗುವೆನೇ ಹೊರತು ನಾನು ಪಾಂಡುಪುತ್ರರ ಔನ್ನತ್ಯವನ್ನು ಕ್ಷಣಮಾತ್ರವಾದರೂ ನೋಡಿ ಸಹಿಸಲಾರೆನು. ಇದು ನಿಶ್ಚಯ."

ದುರ್ಯೋಧನನ ಕುಂದಿದ ಮುಖಾರವಿಂದವನ್ನರಳಿಸುವ ಆಶಯದಿಂದ ಶಕುನಿ-ದುಃಶಾಸನ-ಕರ್ಣರು ಅನುಕ್ರಮವಾಗಿ ಅವನನ್ನು ಸಂತೈಸಲು ಯತ್ನಿಸಿದರು.

ಮೊದಲು ಶಕುನಿಯು ಮಾತನಾಡಲುಪಕ್ರಮಿಸಿದನು : "ದುರ್ಯೋಧನ! ಮಗುವಿನಂತೆ (ಅಜ್ಞನಂತೆ) ಮಾತನಾಡುತ್ತಿರುವೆ. ಮಹಾರಾಜ! ನೀನೇಕಿಷ್ಟು ಭ್ರಾಂತನಾಗಿರುವೆಯೋ ತಿಳಿಯದು. ಪಾಂಡವರು ಪ್ರತಿಜ್ಞಾಬದ್ಧರಾಗಿ ಅರಣ್ಯಕ್ಕೆ ಹೋಗಿರುವರೆಂಬುದನ್ನು ನೀನು ಮರೆತಂತಿದೆ. ನಿನ್ನ

ಭ್ರಾಂತಿಗೆ ಸ್ವಲ್ಪವೂ ಕಾರಣವಿಲ್ಲ. ಪ್ರತಿಜ್ಞೆಯು ಪೂರ್ಣವಾಗದೇ ಪಾಂಡವರೆಂದಿಗೂ ಹಸ್ತಿನೆಗೆ ಬರುವುದಿಲ್ಲ. ಅವರು ಸತ್ಯನಿಷ್ಠರು. ನಿಮ್ಮ ತಂದೆಯು ಪುನಃ ಹೇಳಿಕಳುಹಿಸಿದರೂ ಅವರು ಬರುವುದಿಲ್ಲ. ಒಂದು ವೇಳೆ ರಾಜನಾದ ಧೃತರಾಷ್ಟ್ರನ ಆಜ್ಞೆಯನ್ನು ಪರಿಪಾಲಿಸುವ ಸಲುವಾಗಿ ತಮ್ಮ ಪ್ರತಿಜ್ಞೆಯನ್ನೂ ಮುರಿದು ಪಾಂಡವರು ಹಸ್ತಿನೆಗೆ ಬರುವುದಾದರೆ ನಾವು ತಟಸ್ಥಭಾವವನ್ನು ವಹಿಸಿರುವಂತೆ ತೋರ್ಪಡಿಸುತ್ತಾ ಧೃತರಾಷ್ಟ್ರನಿಗೂ ವಿಧೇಯರಾಗಿರುವಂತೆ ವರ್ತಿಸುತ್ತಾ, ಪಾಂಡವರ ನಡೆ-ನುಡಿಗಳನ್ನು ಸೂಕ್ಷ್ಮವಾಗಿ ಪರಿಶೀಲಿಸೋಣ. ಸಮಯವನ್ನು ಕಾಯ್ದು ಪುನಃ ಜೂಜಾಡಲೂಬಹುದು. ನಮ್ಮ ಕರ್ತವ್ಯ ಸಾಧನೆಗೆ ನಾವು ನಾಲ್ವರೂ ಆಗಿಂದಾಗ್ಗೆ ಸಂಧಿಸಿ ಸಮಾಲೋಚನೆಯನ್ನು ಮಾಡುತ್ತಿರೋಣ."

"ಇದು ಹೀಗೆಯೇ ಸರಿ, ಮಾವ! ನೀನು ಹೇಳಿದುದು ಸಮಂಜಸವಾಗಿದೆ. ನಿನ್ನ ಬುದ್ಧಿಚಾತುರ್ಯದಿಂದ ಹೊರಬೀಳುವ ಪ್ರತಿಯೊಂದು ಮಾತೂ ನನಗೆ ಬಹು ಆಪ್ಯಾಯಮಾನವಾಗಿರುತ್ತದೆ."

ಎಂದು ಹೇಳಿ ದುಃಶಾಸನನು ಶಕುನಿಯ ಮಾತನ್ನು ಪುಷ್ಟೀಕರಿಸಿದನು. ಅನಂತರ ಕರ್ಣನು ದುರ್ಯೋಧನನನ್ನು ಕುರಿತು ಹೇಳಿದನು :

"ದುರ್ಯೋಧನ! ನಾವೆಲ್ಲರೂ ನಿನ್ನ ಇಚ್ಛೆಯನ್ನು ನೆರವೇರಿಸಲು ಸದಾ ಸಿದ್ಧರಾಗಿದ್ದೇವೆ. ನಮ್ಮ ನಾಲ್ವರಲ್ಲಿಯೂ ಐಕಮತ್ಯವಿದೆ. ಜಿತೇಂದ್ರಿಯರಾದ, ಧೀರರಾದ ಪಾಂಡವರು ತಾವು ಪ್ರತಿಜ್ಞೆಮಾಡಿದಂತೆ ಹದಿಮೂರು ವರ್ಷಗಳನ್ನು ಕಳೆಯದೇ ಖಂಡಿತವಾಗಿಯೂ ಹಸ್ತಿನೆಗೆ ಹಿಂದಿರುಗುವುದಿಲ್ಲ. ಒಂದು ವೇಳೆ ಮೋಹಪರವಶರಾಗಿ ಹಸ್ತಿನೆಗೆ ಬಂದಲ್ಲಿ ಪುನಃ ಪಗಡೆಯಾಡಿ ಅವರನ್ನು ಸೋಲಿಸಿಬಿಡೋಣ."

ಆ ಮೂವರ ಮಾತುಗಳಿಂದಲೂ ದುರ್ಯೋಧನನಿಗೆ ಹರ್ಷವುಂಟಾಗಲಿಲ್ಲ. ಅವನ ಮನಸ್ಸು ಬೇರೊಂದು ಮಾರ್ಗವನ್ನು ಕುರಿತು ಯೋಚಿಸುತ್ತಿದ್ದಿತು. ಅವರ ಮಾತಿನಿಂದ ಮನಸ್ಸಿಗೆ ತೃಪ್ತಿಯುಂಟಾಗದೇ ದುರ್ಯೋಧನನು ವಿಷಣ್ಣವದನನಾಗಿ ತಲೆಯನ್ನು ತಗ್ಗಿಸಿಕೊಂಡು ಮೌನವಾಗಿ ಕುಳಿತುಬಿಟ್ಟನು.

ತನ್ನ ಮಾತಿಗೆ ಪ್ರತಿಕ್ರಿಯೆಯನ್ನು ಈ ರೀತಿಯಲ್ಲಿ ವ್ಯಕ್ತಪಡಿಸಿದ

ದುರ್ಯೋಧನನ ಆಂತರ್ಯವೇನೆಂಬುದನ್ನು ತಿಳಿಯಲು ಕರ್ಣನಿಗೆ ಕಷ್ಟವಾಗಲಿಲ್ಲ. ಕಣ್ಣುಗಳನ್ನರಳಿಸಿಕೊಂಡು ಕೋಪವನ್ನು ಹೊರಸೂಸುತ್ತಾ ವೀರಾವೇಶದಿಂದ ಮೇಲೆದ್ದು ದುಃಶಾಸನ-ಸೌಬಲರನ್ನು ಕುರಿತು ಕರ್ಣನು ಹೇಳಿದನು :

"ಸನ್ಮಿತ್ರರೇ! ಈ ವಿಷಯದಲ್ಲಿ ನನ್ನ ವೈಯಕ್ತಿಕವಾದ ಅಭಿಪ್ರಾಯ ವೇನೆಂಬುದನ್ನು ಕೇಳಿರಿ. ನಾವೆಲ್ಲರೂ ದುರ್ಯೋಧನನ ಆಜ್ಞಾಬದ್ಧಸೇವಕ ರಾಗಿದ್ದೇವೆ. ಆದುದರಿಂದ ಇವನಿಗೆ ಹಿತವಾಗುವ ರೀತಿಯಲ್ಲಿ ನಾವು ಕರ್ತವ್ಯ ಪರಿಪಾಲನೆಯನ್ನು ಮಾಡಿಯೇ ತೀರಬೇಕು. ಆದರೆ ಕೆಲವು ಕಾರಣಗಳಿಂದ ಇವನಿಗೆ ಪ್ರಿಯವಾಗುವಂತೆ ಮಾಡಲು ಸಾಧ್ಯವಾಗುತ್ತಿಲ್ಲ. (ನಾವು ಧೃತ ರಾಷ್ಟ್ರನ ಆಜ್ಞಾನುವರ್ತಿಗಳೂ ಆಗಿರಬೇಕಾಗಿದೆ.) ಈಗ ನಾವು ಯಾವ ಕಾರಣದಿಂದಲೂ ಆಲಸ್ಯವನ್ನು ಹೊಂದುವ ಹಾಗಿಲ್ಲ. ನಮ್ಮ ಶಸ್ತ್ರಾಸ್ತ್ರ ಗಳನ್ನೂ–ಧನುರ್ಬಾಣಗಳನ್ನೂ ತೆಗೆದುಕೊಂಡು ಈ ಕೂಡಲೇ ಕಾಡಿನಲ್ಲಿ ರುವ ಪಾಂಡವರನ್ನು ಸಂಹರಿಸಲು ರಥಾರೂಢರಾಗಿ ಹೊರಟುಬಿಡೋಣ. ಪಾಂಡವರೆಲ್ಲರೂ ಶಾಂತರಾದನಂತರ, ಅಜ್ಞಾತಗತಿಯನ್ನು ಹೊಂದಿದ ನಂತರ (ಮೃತರಾದನಂತರ) ನಾವೂ ಮತ್ತು ಧೃತರಾಷ್ಟ್ರನ ಮಕ್ಕಳೂ ಚಿರಶಾಂತಿಯಿಂದಿರಲು ಸಾಧ್ಯವಾಗುವುದು. ಪಾಂಡವರು ಎಲ್ಲಿಯವರೆಗೆ ಖಿನ್ನರಾಗಿ ಕುಳಿತಿರುವರೋ, ಎಲ್ಲಿಯವರೆಗೆ ಶೋಕಾವಿಷ್ಟರಾಗಿರುವರೋ, ಎಲ್ಲಿಯವರೆಗೆ ಅಸಹಾಯಕರಾಗಿರುವರೋ–ಅಲ್ಲಿಯವರೆಗೆ ಮಾತ್ರ ನಾವು ಅವರನ್ನು ಎದುರಿಸಿ ಯುದ್ಧಮಾಡಿ ಗೆಲ್ಲಲು ಸಾಧ್ಯವಾಗುವುದು."

ಸೂತಪುತ್ರನ ಮಾತನ್ನು ಕೇಳಿದೊಡನೆಯೇ ಉಳಿದ ಮೂವರೂ 'ಭಲೇ ಕರ್ಣ! ಭಲೇ ಕರ್ಣ!' ಎನ್ನುತ್ತಾ ಕರ್ಣನ ಬೆನ್ನುತಟ್ಟಿದರು. ಕರ್ಣನು ಹೇಳುವ ರೀತಿಯಲ್ಲಿ ಪಾಂಡವರನ್ನು ಸಂಹರಿಸಿಬಿಡಬಹುದೆಂದು ಉಳಿದ ಮೂವರೂ ಭಾವಿಸಿದರು. ಒಡನೆಯೇ ಶಸ್ತ್ರಾಸ್ತ್ರಗಳಿಂದ ಸನ್ನದ್ಧರಾದ ನಾಲ್ವರೂ ರಥಾರೂಢರಾಗಿ–ತಮ್ಮ ವಿಜಯವು ನಿಶ್ಚಯವೆಂಬ ದೃಢತೆ ಯಿಂದ–ಕಾಮ್ಯಕವನದ ಕಡೆಗೆ ಹೊರಟರು.

ಅವರು ದುರುದ್ದೇಶಪೂರಿತರಾಗಿ ಕಾಮ್ಯಕವನಕ್ಕೆ ಹೋಗುವ ವಿಷಯ ವನ್ನು ಕೃಷ್ಣದ್ವೈಪಾಯನರು ದಿವ್ಯದೃಷ್ಟಿಯಿಂದ ತಿಳಿದರು. ಒಡನೆಯೇ

ಅವರ ಬಳಿಗೆ ಬಂದು ರಥಗಳನ್ನು ನಿಲ್ಲಿಸಿ ಕೆಳಗಿಳಿದುಬರುವಂತೆ ಸಂಜ್ಞೆ ಮಾಡಿದರು. ನಾಲ್ವರೂ ಅಪರಾಧಿಗಳಂತೆ ವ್ಯಾಸಮಹರ್ಷಿಗಳ ಮುಂದೆ ಬಂದು ಬದ್ಧಾಂಜಲಿಗಳಾಗಿ ನಿಂತರು. ಅವರನ್ನು ಕುರಿತು ವ್ಯಾಸರು ಹೇಳಿದರು:

"ನೀವು ಪಾಂಡವರ ಸಂಹಾರಕ್ಕೆ ಹೊರಟಿರುವಿರಿ. ಇದು ಸಾಧುವಲ್ಲ. ಒಡನೆಯೇ ಹಿಂದಿರುಗಿರಿ."

ದುರ್ಯೋಧನಾದಿಗಳು ತಪ್ಪೊಪ್ಪಿಕೊಂಡವರಂತೆ ಪುನಃ ಮಾತನಾಡದೇ ರಥಗಳನ್ನು ಹಸ್ತಿನೆಯ ಕಡೆಗೆ ತಿರುಗಿಸಿದರು.

ಜಗತ್ಪೂಜ್ಯರಾದ ವ್ಯಾಸರು ಧೃತರಾಷ್ಟ್ರನಿಗೂ ತಿಳಿವಳಿಕೆಯನ್ನು ಕೊಡಬೇಕೆಂಬ ಆಶಯವುಳ್ಳವರಾಗಿ ಪ್ರಜ್ಞಾಚಕ್ಷುವಾದ ಧೃತರಾಷ್ಟ್ರನ ಬಳಿಗೆ ಬಂದು ಶ್ರೇಯಸ್ಕರವಾದ ಮಾತುಗಳನ್ನು ಹೇಳತೊಡಗಿದರು."

೭ನೆಯ ಅಧ್ಯಾಯವು ಮುಗಿಯಿತು.

೮ನೆಯ ಅಧ್ಯಾಯ ಅರಣ್ಯಪರ್ವ (ಮುಂದುವರಿದಿದೆ.)

## ವ್ಯಾಸರಿಂದ ಧೃತರಾಷ್ಟ್ರನಿಗೆ ಉಪದೇಶ

**ಧೃತರಾಷ್ಟ್ರ ಮಹಾಪ್ರಾಜ್ಞ ನಿಬೋಧ ವಚನಂ ಮಮ ।**
**ವಕ್ಷ್ಯಾಮಿ ತ್ವಾಂ ಕೌರವಾಣಾಂ ಸರ್ವೇಷಾಂ ಹಿತಮುತ್ತಮಮ್ ॥೧॥**

ಜನಮೇಜಯ! ವ್ಯಾಸರು ಹೇಳುತ್ತಾರೆ :

"ಮಹಾಪ್ರಾಜ್ಞನಾದ ಧೃತರಾಷ್ಟ್ರನೇ! ನಿನಗೂ ಮತ್ತು ಸಕಲ ಕೌರವರಿಗೂ ಹಿತವನ್ನುಂಟುಮಾಡುವ ಆಶಯದಿಂದ ಕೆಲವು ಮಾತುಗಳನ್ನು ಹೇಳುವೆನು, ಕೇಳು. ದುರ್ಯೋಧನಾದಿಗಳಿಂದ ಮೋಸದ ಪಗಡೆಯಾಟದಲ್ಲಿ ಪಾಂಡವರು ಸೋಲಿಸಲ್ಪಟ್ಟವರಾಗಿ ಅದೇ ಕಾರಣದಿಂದ ಅವರು ವನವಾಸಕ್ಕೆ ತೆರಳಿದುದು ನನಗೆ ಖಂಡಿತವಾಗಿಯೂ ಸರಿಕಾಣಲಿಲ್ಲ. ಹದಿಮೂರು ವರ್ಷಗಳು ಕಳೆದೊಡನೆಯೇ ಪಾಂಡವರು ಕೌರವರಿಂದುಂಟಾದ ಕ್ಲೇಶಗಳೆಲ್ಲವನ್ನೂ ನೆನೆದು ಕುಪಿತರಾಗಿ ದುರ್ಯೋಧನಾದಿಗಳ ಮೇಲೆ ವಿಷರೂಪವಾದ ಬಾಣಗಳ ಮಳೆಗರೆಯುತ್ತಾರೆ. ಕೋಪವೆಂಬ ವಿಷವನ್ನು ಸುರಿಸುತ್ತಾರೆ. ರಾಜ್ಯದಾಹದಿಂದ ಪಾಂಡವರ ವಿಷಯದಲ್ಲಿ ಕೋಪಗೊಂಡು

ಅವರನ್ನು ಸಂಹರಿಸಲು ಇಚ್ಛಿಸಿರುವ ಈ ನಿನ್ನ ಮಂದಬುದ್ಧಿಯ ಮಗನು ನಿಶ್ಚಯವಾಗಿಯೂ ಪಾಪಾತ್ಮನಲ್ಲವೇ? ಈ ದುರಾಲೋಚನೆಯಿಂದ ನಿನ್ನ ಮಗನನ್ನು ವಿಮುಖನಾಗುವಂತೆ ಮಾಡು. ಪಾಂಡವರ ವಿಷಯದಲ್ಲಿ ದ್ವೇಷಾಸೂಯೆಗಳನ್ನು ತೊರೆದು ಅವರೊಡನೆ ಶಾಂತಿಯಿಂದಿರಲಿ. ಅರಣ್ಯದಲ್ಲಿರುವ ಪಾಂಡವರನ್ನು ಕೊಲೆಮಾಡುವ ಇಚ್ಛೆಯಿಂದ ಹೋಗುವ ಇವನೇ ಪ್ರಾಣಾರ್ಪಣೆಮಾಡುವುದು ನಿಶ್ಚಯ. ವಿದುರ-ಕೃಪ-ದ್ರೋಣ-ಭೀಷ್ಮರಂತೆ ಮತ್ತು ನನ್ನಂತೆ ನೀನೂ ಕೂಡ ಸಾಧುಮಾರ್ಗಪ್ರವೃತ್ತನಾಗಿರುವೆ. ಸ್ವಜನರೊಡನೆ ಯುದ್ಧವು ನಿಂದ್ಯವಾದುದು, ಧೃತರಾಷ್ಟ್ರ! ಇದು ಅಧರ್ಮ. ಅಪಯಶಸ್ಸನ್ನುಂಟುಮಾಡುತ್ತದೆ. ಆದುದರಿಂದ ಸ್ವಜನದ್ವೇಷಮಾಡಿ ಅಪಯಶಸ್ಸಿಗೆ ಗುರಿಯಾಗಬೇಡ. ಪಾಂಡವರ ವಿಷಯದಲ್ಲಿ ದುರ್ಯೋಧನನಿಗೆ ಯಾವ ವಿಧವಾದ ಅಭಿಪ್ರಾಯವಿದೆಯೆಂಬುದನ್ನು ನೀನು ವಿಚಾರಮಾಡಿ ತಿಳಿದುಕೊ. ಅದನ್ನು ಉಪೇಕ್ಷೆಮಾಡಿದರೆ ದೊಡ್ಡ ಅನರ್ಥವುಂಟಾದೀತು. ಆದುದರಿಂದ ಅವರ ಗೋಜಿಗೆ ಹೋಗದಂತೆ ಅವನಿಗೆ ಬುದ್ಧಿವಾದವನ್ನು ಹೇಳು. ಧೃತರಾಷ್ಟ್ರ! ಅಥವಾ ಹೀಗಾದರೂ ಮಾಡು. ಈ ನಿನ್ನ ಮಗನು ಏಕಾಕಿಯಾಗಿ ಅರಣ್ಯಕ್ಕೆ ಹೋಗಿ ಪಾಂಡವರ ಜೊತೆಯಲ್ಲಿಯೇ ಇರಲಿ. ಪರಸ್ಪರ ಸಂಪರ್ಕದಿಂದ ಮತ್ತು ಪಾಂಡವರ ಸಹವಾಸದಿಂದ ನಿನ್ನ ಮಗನ ಮೇಲೆ ಪಾಂಡವರಿಗೆ ವಿಶ್ವಾಸವೂ ಮತ್ತು ನಿನ್ನ ಮಗನಿಗೆ ಸದ್ಬುದ್ಧಿಯೂ ಉಂಟಾಗಬಹುದು. ಹಾಗೇನಾದರೂ ಆದರೆ ನೀನು ಕೃತಾರ್ಥನಾದಂತೆಯೇ ಸರಿ. ಧೃತರಾಷ್ಟ್ರ! ಆಗ ನೀನು ಧನ್ಯನಾಗುವೆ."

ಆದರೆ ವ್ಯಾಸರು ನಿಟ್ಟುಸಿರುಬಿಟ್ಟು ಮುಂದುವರಿದು ಹೇಳಿದರು :

**ಅಥವಾ ಜಾಯಮಾನಸ್ಯ ಯಚ್ಛೀಲಮನುಜಾಯತೇ ।**
**ಶ್ರೂಯತೇ ತನ್ಮಹಾರಾಜ ನಾಮೃತಸ್ಯಾಪಸರ್ಪತಿ ॥೧೧॥**

"ಆದರೆ ಹುಟ್ಟಿದಾಗ ಮನುಷ್ಯನಿಗೆ ಯಾವ ಗುಣ-ಶೀಲ-ದೋಷಗಳಿರುತ್ತವೆಯೋ–ಆ ಗುಣ-ಶೀಲ-ದೋಷಗಳು ಸಾಯುವವರೆಗೂ ಅವನನ್ನು ಬಿಟ್ಟುಹೋಗಲಾರವು. 'ಹುಟ್ಟುಗುಣ ಸುಟ್ಟರೂ ಬಿಡದು' ಎಂದು ಹಿರಿಯರು ಹೇಳುತ್ತಾರೆ. ಹೀಗಿರುವಾಗ ಈ ನಿನ್ನ ಮಗನು ಪಾಂಡವರ ಸಂಪರ್ಕದಲ್ಲಿರುವುದು ಅಸಂಭಾವ್ಯವೇ ಸರಿ. ಒಂದು ವೇಳೆ ಇದ್ದರೂ ಜನ್ಮಸಿದ್ಧವಾಗಿ

ಬಂದಿರುವ ಇವನ ದುಷ್ಟಬುದ್ಧಿಯು ಹೋಗಿಬಿಡುವುದೆಂದು ಭಾವಿಸುವುದೂ ಭ್ರಾಂತಿಯೇ ಸರಿ. ಆದುದರಿಂದ ನೀನೀಗಲೇ ಮಹಾಮೇಧಾವಿಗಳಾದ ವಿದುರ-ಭೀಷ್ಮ-ದ್ರೋಣರನ್ನು ಕರೆಯಿಸಿ, ಅವರು ಏನು ಹೇಳುವರೆಂಬುದನ್ನೂ ಗ್ರಹಿಸಿ, ವಿಷಯವನ್ನು ಕೂಲಂಕಷವಾಗಿ ವಿಮರ್ಶಿಸಿ, ಒಂದು ನಿಶ್ಚಯಕ್ಕೆ ಬರುವುದು ಉಚಿತವಾಗಿದೆ. ಸ್ವಲ್ಪ ಕಾಲಾವಕಾಶವಿರುವಾಗಲೇ ನೀನು ನಿಶ್ಚಯಿಸಿದುದನ್ನು ಕಾರ್ಯರೂಪಕ್ಕೆ ತರುವುದು ನಿನಗೆ ಹಿತವನ್ನುಂಟುಮಾಡುವುದು. ಹಾಗಾಗದಿದ್ದರೆ ವಿನಾಶವು ಖಂಡಿತ, ಧೃತರಾಷ್ಟ್ರ!"

ಂನೆಯ ಅಧ್ಯಾಯವು ಮುಗಿಯಿತು.

೯ನೆಯ ಅಧ್ಯಾಯ ಅರಣ್ಯಪರ್ವ (ಮುಂದುವರಿದಿದೆ.)

## ವ್ಯಾಸರಿಂದ ಸುರಭಿಯ ಮತ್ತು ಇಂದ್ರನ ಉಪಾಖ್ಯಾನಕಥನ

ವ್ಯಾಸರು ಹೀಗೆಂದು ಹೇಳಿದನಂತರ ಧೃತರಾಷ್ಟ್ರನು ವ್ಯಾಸರನ್ನು ಕುರಿತು ವಿನೀತನಾಗಿ ಹೇಳಿದನು :

**ಭಗವನ್ನಾಹಮಪ್ಯೇತದ್ರೋಚಯೇ ದ್ಯೂತಸಮ್ಭವಮ್ ।**
**ಮನ್ಯೇ ತದ್ವಿಧಿನಾಕೃಷ್ಯ ಕಾರಿತೋಽಸ್ಮೀತಿ ವೈ ಮುನೇ ॥೧॥**

"ಭಗವನ್! ನಿಶ್ಚಯವಾಗಿ ಹೇಳುವುದಾದರೆ ನಾನು ಈ ಜೂಜಾಟಕ್ಕೆ ಒಡಂಬಡಲಿಲ್ಲ. ವಿಧಿಯ ನಿಯಮಾನುಸಾರ ನಾನು ಈ ಕ್ರಿಯೆಗೆ ಒಪ್ಪುವಂತಾಯಿತೆಂಬುದು ನನ್ನ ದೃಢನಿಶ್ಚಯವಾಗಿದೆ. ಭೀಷ್ಮನಾಗಲೀ, ದ್ರೋಣರಾಗಲೀ, ವಿದುರನಾಗಲೀ, ಗಾಂಧಾರಿಯಾಗಲೀ–ಪಗಡೆಯಾಟಕ್ಕೆ ಒಪ್ಪಿಗೆ ಕೊಡಲಿಲ್ಲ. ಅವರೆಲ್ಲರೂ ಅದನ್ನು ವಿರೋಧಿಸಿದರು. ಕೇವಲ ಮಗನ ಮೇಲಿನ ವ್ಯಾಮೋಹದಿಂದಾಗಿ ಪಗಡೆಯಾಟಕ್ಕೆ ನಾನು ಒಪ್ಪಬೇಕಾಯಿತು. ಆ ಆಟದಲ್ಲಿ ಅನೇಕದೋಷಗಳಿವೆಯೆಂದು ತಿಳಿದಿದ್ದರೂ ಕೇವಲ ಪುತ್ರವಾತ್ಸಲ್ಯದಿಂದಲೇ ನಾನು ಈ ದುರ್ಬುದ್ಧಿಯ ದುರ್ಯೋಧನನನ್ನು ಪರಿತ್ಯಜಿಸಲೂ ಅಸಮರ್ಥನಾಗಿದ್ದೇನೆ."

ವ್ಯಾಸರು ಹೇಳುತ್ತಾರೆ :

"ಧೃತರಾಷ್ಟ್ರ! ಪುತ್ರವಾತ್ಸಲ್ಯದ ವಿಷಯವಾಗಿ ನೀನು ಹೇಳುವುದೂ ನಿಜ.

**ದೃಢಂ ವಿದ್ಮಃ ಪರಂ ಪುತ್ರಂ ಪರಂ ಪುತ್ರಾನ್ನ ವಿದ್ಯತೇ ॥೯॥**

ಪುತ್ರನೇ ಪರಮಶ್ರೇಷ್ಠನು. ಪುತ್ರನಿಗಿಂತಲೂ ಶ್ರೇಷ್ಠವಾದುದು ಮತ್ತೊಂದಿಲ್ಲವೆಂಬುದನ್ನು ನಾವೂ ದೃಢವಾಗಿ ತಿಳಿದಿರುತ್ತೇವೆ. ಆದರೆ ಅನೇಕಮಂದಿ ಪುತ್ರರಿರುವಾಗ ಯಾವ ಮಗನ ಮೇಲೆ ಸ್ವಾಭಾವಿಕವಾಗಿ ಹೆಚ್ಚಿನ ಪ್ರೀತಿಯಿರಬೇಕೆಂಬ ವಿಷಯವನ್ನು ನಿನಗೆ ತಿಳಿಸಲು ಇಚ್ಛಿಸುತ್ತೇನೆ. ಈ ವಿಷಯದಲ್ಲಿ ಹಿಂದೆ ನಡೆದ ಒಂದು ಇತಿಹಾಸವನ್ನೂ ಹೇಳುತ್ತೇನೆ, ಕೇಳು.

ಒಮ್ಮೆ ಕಾಮಧೇನುವು ಕಣ್ಣೀರನ್ನು ಸುರಿಸುತ್ತಾ ಇಂದ್ರನ ಬಳಿಗೆ ಹೋಗಿ ತನ್ನ ಕಂದನ ವಿಷಯವಾಗಿ ಗೋಳಿಟ್ಟಾಗಲೇ ಇಂದ್ರನಿಗೆ–'ಮಗನು' ಎಲ್ಲ ಅನರ್ಘವಸ್ತುಗಳಿಗಿಂತಲೂ ಹೆಚ್ಚಿನವನೆಂಬ ಅರಿವುಂಟಾಯಿತು. ಕಾಮಧೇನುವು ಗೋವುಗಳಿಗೆಲ್ಲ ತಾಯಿಯೆಂಬುದನ್ನು ಕೇಳಿರುವೆಯಲ್ಲವೇ? ಒಮ್ಮೆ ಕಾಮಧೇನುವು ಸ್ವರ್ಗದಲ್ಲಿ ಗೋಳಾಡುತ್ತಿತ್ತು. ಇಂದ್ರನು ಕಾಮಧೇನುವು ರೋದಿಸುತ್ತಿರುವುದನ್ನು ತಿಳಿದವನಾಗಿ ಅದನ್ನು ಸಭೆಗೆ ಕರೆಯಿಸಿಕೊಂಡು ಅನುಕಂಪದಿಂದ ಕೇಳಿದನು :

"ಭದ್ರೆ! ಏಕಳುವೆ? ದೇವತೆಗಳೆಲ್ಲರೂ ಸೌಖ್ಯದಿಂದ ಇರುತ್ತಾರಲ್ಲವೇ? ಮಾನವರಿಗಾಗಲೀ, ಗೋವುಗಳಿಗಾಗಲೀ–ಯಾವುದಾದರೂ ಆಪತ್ತು ಸಂಭವಿಸಿರುವುದೇ? ಎಲ್ಲವನ್ನೂ ವಿಸ್ತರಿಸಿ ಹೇಳು. ಅಳಬೇಡ."

"ಇಂದ್ರದೇವ! ಯಾರಿಗೂ ಯಾವ ವಿಧವಾದ ಅಪಾಯವೂ ಸಂಭವಿಸಿರುವುದಿಲ್ಲ. ಆದರೆ ನಾನು ನನ್ನ ಮಗನ ದಾರುಣವಾದ ಕಷ್ಟವನ್ನು ಕಂಡು ದುಃಖಿಸುತ್ತಿರುವೆನು. ಅಲ್ಲಿ ನೋಡು, ಇಂದ್ರದೇವ! (ಭೂಮಿಯ ಕಡೆಗೆ ನಿರ್ದೇಶಿಸುತ್ತಾ ಕಾಮಧೇನುವು ಹೇಳಿತು.)

**ಪಶ್ಯೈನಂ ಕರ್ಷಕಂ ಕ್ಷುದ್ರಂ ದುರ್ಬಲಂ ಮಮ ಪುತ್ರಕಮ್ ।**
**ಪ್ರತೋದೇನಾಭಿನಿಘ್ನಂತಂ ಲಾಙ್ಗಲೇನ ಚ ಪೀಡಿತಮ್ ॥೧೦॥**

**ನಿಷೀದಮಾನಂ ಸೋತ್ಕಣ್ಠಂ ವಧ್ಯಮಾನಂ ಸುರಾಧಿಪ ।**
**ಕೃಪಾವಿಷ್ಟಾಸ್ಮಿ ದೇವೇನ್ದ್ರ ಮನಶ್ಚೋದ್ವಿಜತೇ ಮಮ ॥೧೧॥**

**ಏಕಸ್ತತ್ರ ಬಲೋಪೇತೋ ಧುರಮುದ್ವಹತೇಽಧಿಕಾಮ್ ।**
**ಅಪರೋಽಲ್ಪಬಲಪ್ರಾಣಃ ಕೃಶೋ ಧಮನಿಸಂತತಃ ॥೧೨॥**

**ಕೃಚ್ಛ್ರಾದುದ್ವಹತೇ ಭಾರಂ ತಂ ವೈ ಶೋಚಾಮಿ ವಾಸವ ।**
**ವಧ್ಯಮಾನಃ ಪ್ರತೋದೇನ ತುದ್ಯಮಾನಃ ಪುನಃ ಪುನಃ ।**
**ನೈವ ಶಕ್ನೋತಿ ತಂ ಭಾರಮುದ್ವೋಢುಂ ಪಶ್ಯ ವಾಸವ ॥೧೩॥**

ವಾಸವ! ಆ ಕ್ರೂರಿಯಾದ ರೈತನು ದುರ್ಬಲನಾದ ನನ್ನ ಮಗನನ್ನು ಚಾವಟಿಯಿಂದ ಹೊಡೆಯುತ್ತಿದ್ದಾನೆ. ನನ್ನ ಮಗನ ಹೆಗಲಿನ ಮೇಲೆ ಭಾರವಾದ ನೇಗಿಲನ್ನಿಟ್ಟಿದ್ದಾನೆ. ದುರ್ಬಲನಾದ ನನ್ನ ಮಗನು ನೇಗಿಲನ್ನು ಎಳೆಯಲಾರದೆ ಭೂಮಿಯ ಮೇಲೆ ಬಿದ್ದು ಸಾಯುವ ಸ್ಥಿತಿಯಲ್ಲಿದ್ದಾನೆ. ಕೆಳಗೆ ಬಿದ್ದರೂ ದುಷ್ಟನಾದ ಆ ರೈತನು ನನ್ನ ಮಗನನ್ನು ಬಿಡುತ್ತಿಲ್ಲ. ಬಾಲವನ್ನು ತಿರುಚಿ ಪೆಟ್ಟುಕೊಟ್ಟು ಮೇಲೇಳಿಸಲು ಯತ್ನಿಸುತ್ತಿದ್ದಾನೆ. ಈ ನನ್ನ ಮಗನ ದುರವಸ್ಥೆಯನ್ನು ನೋಡಿದೊಡನೆಯೇ ನನ್ನ ಹೃದಯವು ಕರಗಿ ನೀರಾಗುತ್ತದೆ. ನನ್ನ ಮನಸ್ಸು ಉದ್ರಿಕ್ತವಾಗುತ್ತದೆ. ನೇಗಿಲಿಗೆ ಕಟ್ಟಿರುವ ಮತ್ತೊಬ್ಬ ಮಗನು (ಎತ್ತು ) ದೃಢಕಾಯನಾಗಿದ್ದಾನೆ. ನೇಗಿಲನ್ನು ಎಳೆಯಲು ಸಮರ್ಥನಾಗಿಯೂ ಇದ್ದಾನೆ. ಅವನ ವಿಷಯದಲ್ಲಿ ನಾನಷ್ಟು ಪರಿತಪಿಸುತ್ತಿಲ್ಲ. ಆದರೆ ಮತ್ತೊಬ್ಬನ ಶರೀರವನ್ನಾದರೂ ನೋಡು, ಇಂದ್ರದೇವ! ಮೂಳೆ-ಚರ್ಮ-ನರಗಳೇ ಹೊರತು ಮಾಂಸವೆಂಬುದೇ ಇವನ ಶರೀರದಲ್ಲಿ ಇಲ್ಲವಾಗಿದೆ. ಇಂತಹವನು ಆ ನೇಗಿಲನ್ನು ಹೇಗೆ ತಾನೇ ಎಳೆದಾನು? ಇವನಿಗಾಗಿ ನಾನು ಬಹಳ ಪರಿತಾಪಪಡುವೆನು. ದುರ್ಬಲನಾಗಿರುವ ಇವನಿಗೆ ಚಾವಟಿಯ ಪೆಟ್ಟುಗಳು ಬೇರೆ ಬೀಳುತ್ತಿವೆ. ಇದನ್ನು ನೋಡಿ ನಾನು ಹೇಗೆ ಸಹಿಸಲಿ? ಇದರಿಂದ ನಾನು ದುಃಖಿತಳಾಗಿ ಕಣ್ಣೀರು ಸುರಿಸುತ್ತಿರುವೆನು."

"ಕಾಮಧೇನುವೇ! ನಿನ್ನ ಸಾವಿರಾರು ಮಕ್ಕಳನ್ನು ಪ್ರತಿದಿನ ನೇಗಿಲಿಗೆ ಕಟ್ಟಿ ಹೊಡೆಯುತ್ತಿರುತ್ತಾರೆ. ಆದರೆ ಈ ಒಬ್ಬ ಮಗನ ವಿಷಯದಲ್ಲಿ ನೀನು ಇಷ್ಟೊಂದು ಪರಿತಾಪಪಡುತ್ತಿರುವೆಯೇಕೆ?

**ಯದಿ ಪುತ್ರಸಹಸ್ರಾಣಿ ಸರ್ವತ್ರ ಸಮತೈವ ಮೇ ।**
**ದೀನಸ್ಯ ತು ಸತಃ ಶಕ್ರ ಪುತ್ರಸ್ಯಾಭ್ಯಧಿಕಾ ಕೃಪಾ ॥೧೬॥**

"ನೀನು ಹೇಳುವುದು ನಿಜ, ಶಕ್ರ! ನನಗೆ ಸಾವಿರಾರು ಮಕ್ಕಳಿದ್ದಾರೆ. ನನ್ನ ವಾತ್ಸಲ್ಯವೂ ಎಲ್ಲ ಮಕ್ಕಳ ಮೇಲೆಯೂ ಪಕ್ಷಪಾತರಹಿತವಾಗಿದೆ. ಆದರೆ ನನ್ನ ಹೆಚ್ಚಿನ ಅನುಕಂಪವು ದುರ್ಬಲನಾದ ಮಗನ ಕಡೆಗಿರುತ್ತದೆ."

ಇಂದ್ರನಿಗೆ ಕಾಮಧೇನುವು ಹೇಳಿದುದು 'ಸರಿ' ಎನಿಸಿತು. ಪುತ್ರನೆಂಬುವನು ತನ್ನ ಜೀವಕ್ಕಿಂತಲೂ ಹೆಚ್ಚಿನವನೆಂಬುದನ್ನು ಇಂದ್ರನು ಮನಗಂಡನು. ಒಡನೆಯೇ ಮೇಘಾಧಿಪತಿಯಾದ ಇಂದ್ರನು ದುಷ್ಟನಾದ ರೈತನು ಉಳುತ್ತಿದ್ದ ಪ್ರದೇಶದ ಮೇಲೆ ಧಾರಾಕಾರವಾಗಿ ಮಳೆಗರೆದನು. ಮಳೆಯ ಕಾರಣದಿಂದ ಉಳಲು ತೊಂದರೆಯಾಗಿ ಕಾಮಧೇನುವಿನ ದುರ್ಬಲನಾದ ಪುತ್ರನಿಗೂ ವಿಶ್ರಾಂತಿಯು ಸಿಕ್ಕಿತು.

ಮಹಾರಾಜ! ಕಾಮಧೇನುವು ಹೇಳಿದಂತೆ ನಿನ್ನ ಮಕ್ಕಳ ಮೇಲೆ ನಿನಗೆ ಪಕ್ಷಪಾತರಹಿತವಾದ ವಾತ್ಸಲ್ಯವಿರುವುದು ಸಹಜವಾಗಿಯೇ ಇದೆ. ಆದರೂ ದುರ್ಬಲರಾದ ಮಕ್ಕಳ ವಿಷಯದಲ್ಲಿ ಅನುಕಂಪವುಳ್ಳವನಾಗು. ಧೃತರಾಷ್ಟ್ರ! ನನಗೆ ನನ್ನ ಮಗನಾದ ಪಾಂಡುವು ಹೇಗೋ ಹಾಗೆಯೇ ನೀನೂ ಪ್ರೀತಿಪಾತ್ರನಾಗಿರುವೆ. ವಿದುರನ ಮೇಲೆಯೂ ನನಗೆ ಅದೇ ವಿಧವಾದ ಸ್ನೇಹವಿದೆ. ನಿನ್ನ ಮೇಲೆ ಪ್ರೀತಿಯಿರುವ ಕಾರಣದಿಂದಲೇ ನಾನು ಇವೆಲ್ಲವನ್ನೂ ನಿನಗೆ ಹೇಳುತ್ತಿದ್ದೇನೆ. ನಿನ್ನ ಮತ್ತು ಪಾಂಡುವಿನ ವಿಷಯವನ್ನು ತೆಗೆದುಕೊಂಡರೆ ನಿನಗೆ ನೂರೊಂದು ಮಂದಿ ಮಕ್ಕಳಿದ್ದಾರೆ. ಪಾಂಡುವಿಗಾದರೋ ಕೇವಲ ಐವರು ಮಾತ್ರ. ಅವರಾದರೋ ಇಂದು ಬಹಳ ಕಷ್ಟದಲ್ಲಿದ್ದುಕೊಂಡು ಬಹಳ ದುಃಖಿತರಾಗಿದ್ದಾರೆ. 'ಅವರು ಹೇಗೆ ಜೀವಿಸುತ್ತಾರೆ ಮತ್ತು ಹೇಗೆ ಅಭಿವೃದ್ಧಿಹೊಂದುತ್ತಾರೆ?'–ಎಂಬುದೇ ನನ್ನ ಚಿಂತೆಯಾಗಿದೆ. ಅವರ ಇಂದಿನ ದುಃಖವನ್ನೂ ಕಷ್ಟವನ್ನೂ ನೆನೆದಂತೆಲ್ಲಾ ನನ್ನ ಹೃದಯವು ಉದ್ವಿಗ್ನವಾಗುತ್ತದೆ. ಆದುದರಿಂದ ನೀನು ನಿಶ್ಚಯವಾಗಿಯೂ ನಿನ್ನ ಮಕ್ಕಳೆಲ್ಲರೂ ಜೀವಿಸಿರಬೇಕೆಂದು ಆಶಿಸುವೆಯಾದರೆ– ನಿನ್ನ ಹಿರಿಯ ಮಗನಾದ ದುರ್ಯೋಧನನು ಈ ಕೂಡಲೇ ಪಾಂಡವರೊಡನೆ ಶಾಂತಿಮಾಡಿಕೊಳ್ಳಲಿ."

೯ನೆಯ ಅಧ್ಯಾಯವು ಮುಗಿಯಿತು.

## ವ್ಯಾಸರ ನಿರ್ಗಮನ : ಮೈತ್ರೇಯರ ಆಗಮನ : ಹಿತೋಪದೇಶ : ದುರ್ಯೋಧನನ ದುರಭಿಮಾನ ಪ್ರದರ್ಶನ : ಶಾಪಪ್ರದಾನ

ಪಾರಿಕ್ಷಿತ! ಧೃತರಾಷ್ಟ್ರನು ಹೇಳುತ್ತಾನೆ :

"ಮಹಾಮುನಿಗಳೇ! ನೀವು ಹೇಳಿದುದೆಲ್ಲವೂ ನಿಜ. ನಾನದನ್ನು ಪೂರ್ಣವಾಗಿ ತಿಳಿದಿರುತ್ತೇನೆ. ನನ್ನಂತೆಯೇ ಈ ರಾಜರೆಲ್ಲರೂ ಅದೇ ಅಭಿಪ್ರಾಯವುಳ್ಳವರಾಗಿದ್ದಾರೆ. ನೀವು ಕುರುರಾಜರಿಗೆ ಯಾವ ಮಾರ್ಗವು ಹಿತಕರವೆಂದು ಹೇಳಿದಿರೋ–ಅದೇ ಮಾರ್ಗವು ವಿದುರ-ಭೀಷ್ಮ-ದ್ರೋಣ ರಿಂದಲೂ ಪ್ರತಿಪಾದಿತವಾಯಿತು. ಆದರೆ ಯಾವುದನ್ನೂ ಕಾರ್ಯರೂಪಕ್ಕೆ ತರಲು ನಾನು ಅಸಮರ್ಥನಾಗಿದ್ದೇನೆ. ನಾನು ನಿಮ್ಮ ಅನುಗ್ರಹಕ್ಕೆ ಪಾತ್ರ ನಾಗಿರುವೆನಾದರೆ–ನಿಮಗೆ ಕುರುವಂಶದವರ ವಿಷಯದಲ್ಲಿ ಕರುಣೆಯಿರುವು ದಾದರೆ–ದಯೆಯಿಟ್ಟು ಈ ದುರಾತ್ಮನಾದ ನನ್ನ ಮಗನಿಗೆ ಆಜ್ಞೆಮಾಡಿ ಸನ್ಮಾರ್ಗಪ್ರವೃತ್ತನಾಗುವಂತೆ ಮಾಡಿರಿ."

ವ್ಯಾಸರು ಧೃತರಾಷ್ಟ್ರನ ಪ್ರಾರ್ಥನೆಗುತ್ತರವಾಗಿ ಹೇಳಿದರು :

"ಮಹಾರಾಜ! ಪಾಂಡವರನ್ನು ನೋಡಿಕೊಂಡು ಅನಂತರ ನಿಮ್ಮನ್ನು ನೋಡುವ ಆಶಯದಿಂದ ಮೈತ್ರೇಯರೆಂಬ ಮಹರ್ಷಿಗಳು ಇಲ್ಲಿಗೆ ಬರು ತ್ತಾರೆ. ಅವರು ಈ ಕುಲದ ಹಿತರಕ್ಷಣೆಯ ದೃಷ್ಟಿಯಿಂದ ಹೀಗೆಯೇ ಮಾಡಬೇಕೆಂದು ದುರ್ಯೋಧನನಿಗೆ ಅನುಶಾಸನಮಾಡುತ್ತಾರೆ. ಅವರು ಹೇಗೆ ಶಾಸನಮಾಡುತ್ತಾರೆಯೋ ಹಾಗೆಯೇ ನಡೆಯಬೇಕು. ಹಾಗಲ್ಲದೆ ಅವರು ಹೇಳಿದುದನ್ನು ಕೇಳದೆ ತಿರಸ್ಕರಿಸಿದರೆ ಅವರು ಕುಪಿತರಾಗಿ ನಿನ್ನ ಮಗನನ್ನು ಶಪಿಸಿಬಿಡುತ್ತಾರೆ. ಇದು ನಿನ್ನ ಗಮನದಲ್ಲಿರಲಿ. ನಾನಿನ್ನು ಹೋಗಿ ಬರುತ್ತೇನೆ"–ಎಂದು ಹೇಳಿ ವ್ಯಾಸರು ನಿರ್ಗಮಿಸಿದರು.

ವ್ಯಾಸರು ತೆರಳಿದ ಸ್ವಲ್ಪಹೊತ್ತಿನಲ್ಲಿಯೇ ಮೈತ್ರೇಯಮಹರ್ಷಿಗಳು ಆಗಮಿಸಿದರು. ದಾರಿನಡೆದು ಆಯಾಸಗೊಂಡಿದ್ದ ಮಹರ್ಷಿಗಳನ್ನು ಧೃತ ರಾಷ್ಟ್ರ-ದುರ್ಯೋಧನರು ಆದರದಿಂದ ಸ್ವಾಗತಿಸಿ, ಅರ್ಘ್ಯ-ಪಾದ್ಯಾದಿಗಳನ್ನು

ಕೊಟ್ಟು ಸತ್ಕರಿಸಿದರು. ಮಹರ್ಷಿಗಳು ಸ್ವಲ್ಪಕಾಲ ವಿಶ್ರಮಿಸಿಕೊಂಡನಂತರ ಧೃತರಾಷ್ಟ್ರನು ಬದ್ಧಾಂಜಲಿಯಾಗಿ ಕೇಳಿದನು :

"ಮಹರ್ಷಿಗಳೇ! ಕುರುಜಾಂಗಲದಿಂದ ಇಲ್ಲಿಯವರೆಗಿನ ತಮ್ಮ ಪ್ರಯಾಣವು ನಿರ್ಬಾಧಕವಾಗಿ ಸುಖಕರವಾಗಿದ್ದಿತೇ? ನಮ್ಮ ಐವರು ಪಾಂಡವರು ಸುಖದಿಂದ ಕಾಲಕಳೆಯುತ್ತಿರುವರೇ? ಪ್ರತಿಜ್ಞಾತವಾದ ಕಾಲವು ಮುಗಿಯುವವರೆಗೂ ಅವರು ಅಲ್ಲಿಯೇ ಇರಲು ಇಚ್ಛಿಸಿರುವರೇ? ಕುರುರಾಜರೊಡನೆ ಅವರ ಸೌಭ್ರಾತೃತ್ವವು ನಷ್ಟವಾಗದೇ ಉಳಿದಿರುವುದೇ?"

ಮೈತ್ರೇಯರು ಹೇಳುತ್ತಾರೆ :

"ಧೃತರಾಷ್ಟ್ರ! ತೀರ್ಥಯಾತ್ರೆಗೆಂದು ಹೊರಟ ನಾನು ಅನೇಕ ಪವಿತ್ರ ಸ್ಥಳಗಳನ್ನು ಸಂದರ್ಶನಮಾಡಿಕೊಂಡು ಕುರುಜಾಂಗಲಕ್ಕೂ ಹೋದೆನು. ಅಲ್ಲಿ ಆಕಸ್ಮಿಕವಾಗಿ ಧರ್ಮಾತ್ಮನಾದ ಯುಧಿಷ್ಠಿರನನ್ನು ಕಾಮ್ಯಕವನದಲ್ಲಿ ಕಂಡೆನು. ಜಟಾ-ಕೃಷ್ಣಾಜಿನಧಾರಿಯಾದ, ಮಹಾತ್ಮನಾದ ಯುಧಿಷ್ಠಿರನನ್ನು ಸಂದರ್ಶಿಸಲು ಅನೇಕಮಹರ್ಷಿಗಳು ಅವನ ಆಶ್ರಮಕ್ಕೆ ಬಂದು ಹೋಗುತ್ತಿದ್ದರು. ಅಲ್ಲಿಯೇ ನಾನು ನಿನ್ನ ಮಕ್ಕಳು ಮಾಡಿದ ಅಪರಾಧವನ್ನೂ, ದ್ಯೂತರೂಪದಿಂದ ಅವರು ಮಾಡಿದ ದುಷ್ಟಕಾರ್ಯವನ್ನೂ, ಅದರ ಪರಿಣಾಮವಾಗಿ ಪಾಂಡವರಿಗೆ ಪ್ರಾಪ್ತವಾದ ಮಹಾದುಃಖವನ್ನೂ ಮತ್ತು ಕುರುವಂಶಕ್ಕೆ ಮುಂದೆ ಉಂಟಾಗಬಹುದಾದ ವಿಪತ್ತನ್ನೂ ಅರಿತುಕೊಂಡೆನು. ಮಹಾರಾಜ! ನಿನ್ನ ವಿಷಯದಲ್ಲಿ ನನಗೆ ಅಪಾರವಾದ ಸ್ನೇಹವಿದೆ ಮತ್ತು ಪ್ರೀತಿಯಿದೆ. ಆದುದರಿಂದಲೇ ಕೌರವರಿಗೆ ಒಳ್ಳೆಯದನ್ನು ಮಾಡುವ ಅಭಿಲಾಷೆಯಿಂದ ಇಲ್ಲಿಗೆ ಬಂದಿರುವೆನು. ನೀನೂ ಮತ್ತು ಭೀಷ್ಮನೂ ಜೀವಿಸಿರುವಾಗ ನಿನ್ನ ಮಕ್ಕಳಲ್ಲಿ ಖಂಡಿತವಾಗಿಯೂ ಈ ವಿಧವಾದ ವೈಮನಸ್ಯವು ಉಂಟಾಗಬಾರದಾಗಿತ್ತು. ನೀನು ಧಾನ್ಯವನ್ನು ಬೇರ್ಪಡಿಸಲು ಕಣದಲ್ಲಿ ನಡುವೆ ನೆಟ್ಟಿರುವ ಮೇಟೀಕಂಬದಂತಿರುವೆ. ಮೇಟಿಯ ಸುತ್ತಲೂ ಎತ್ತುಗಳು ತಿರುಗುವಂತೆ ನಿನ್ನನ್ನನುಸರಿಸಿ ಅಥವಾ ನಿನ್ನ ಆಜ್ಞಾಧಾರಕರಾಗಿ ನಿನ್ನ ಮಕ್ಕಳು ನಡೆದುಕೊಳ್ಳಬೇಕು. ನಿನ್ನ ಆಜ್ಞೆಗೆ ವಿರುದ್ಧವಾಗಿ ವರ್ತಿಸಿದವರಿಗೆ ಶಿಕ್ಷೆವಿಧಿಸಿ ಅವರನ್ನು ಸರಿಯಾದ ದಾರಿಗೆ

ಕರೆತರುವುದು ನಿನ್ನ ಕರ್ತವ್ಯವಾಗಿದೆ. ಹೀಗಿರುವಾಗ ನಿನ್ನ ಮಕ್ಕಳ ಅವಿವೇಕದ ಕಾರಣದಿಂದ ಮಹಾವಿಪತ್ತು ಉಪಸ್ಥಿತವಾಗಿದೆಯೆಂಬುದನ್ನು ತಿಳಿದಿದ್ದರೂ ಕೂಡ ನೀನೇಕೆ ಸುಮ್ಮನಿರುವೆ? ಮಹಾಸಭೆಯಲ್ಲಿ ಅಂದು ನಡೆದ ವರ್ತನೆಯು ತೀರಾ ಹೀನವಾದುದು. ಪರಮನೀಚರು ಅನುಸರಿಸುವ ಕುತ್ಸಿತಮಾರ್ಗವನ್ನು ಅಂದು ನಿನ್ನ ಮಕ್ಕಳು ಅನುಸರಿಸಿದರು. ಈ ಕಾರಣದಿಂದಲೇ ತಪಸ್ವಿಗಳ ಮಧ್ಯದಲ್ಲಿ ನಿನಗೆ ಗೌರವವು ಸಿಕ್ಕಲಾರದು."

ಧೃತರಾಷ್ಟ್ರನು, ಮೈತ್ರೇಯರು ಹೇಳಿದುದೆಲ್ಲವನ್ನೂ ಕೇಳುತ್ತಾ ಸುಮ್ಮನೇ ಕುಳಿತಿದ್ದನು. ಅನಂತರದಲ್ಲಿ ಮೈತ್ರೇಯರು ಧೃತರಾಷ್ಟ್ರನ ಪಕ್ಕದಲ್ಲಿ ಕುಳಿತಿದ್ದ ದುರ್ಯೋಧನನ ಕಡೆಗೆ ತಿರುಗಿ ಮೃದುವಾದ ಮಾತಿನಿಂದ ಅವನನ್ನು ಕುರಿತು ಹೇಳತೊಡಗಿದರು.

"ದುರ್ಯೋಧನ! ನಾನು ಏನು ಹೇಳುವೆನೆಂಬುದನ್ನು ಸಾವಧಾನ ದಿಂದ ಕೇಳು. ನಾನು ನಿನ್ನ ಒಳ್ಳೆಯದಕ್ಕೆ ಹೇಳುವೆನೇ ಹೊರತು ಇದರಲ್ಲಿ ನನಗೆ ಬೇರಾವ ಸ್ವಾರ್ಥವೂ ಇರುವುದಿಲ್ಲ. ಪಾಂಡವರೊಡನೆ ದ್ವೇಷ ಕಟ್ಟಿಕೊಳ್ಳಬೇಡ. ಅವರೊಡನೆ ದ್ವೇಷವನ್ನು ಕಟ್ಟಿಕೊಳ್ಳದೆ ಸ್ನೇಹವನ್ನು ಬೆಳೆಸುವುದರಿಂದ ನಿನ್ನ ಆತ್ಮಕ್ಕೂ ಹಿತವುಂಟಾಗುತ್ತದೆ. ಪಾಂಡವರಿಗೂ ಕೌರವರಿಗೂ, ಎಲ್ಲಕ್ಕಿಂತಲೂ ಮಿಗಿಲಾಗಿ ಲೋಕಕ್ಕೂ ಹಿತವುಂಟಾಗುತ್ತದೆ. ಪಾಂಡವರು ಸಾಮಾನ್ಯರೆಂದು ಭಾವಿಸಬೇಡ. ಅವರೆಲ್ಲರೂ ಪುರುಷ ವ್ಯಾಘ್ರರು. ವಿಖ್ಯಾತರಾದ ಯೋಧರು. ಅವರಿಗೆ ಹತ್ತು ಸಾವಿರ ಆನೆಗಳ ಬಲವಿದೆ. ಅವರ ಶರೀರಗಳು ಇಂದ್ರನ ವಜ್ರಾಯುಧದಂತೆ ದೃಢವಾಗಿವೆ. ಮೇಲಾಗಿ ಅವರು ಸತ್ಯವ್ರತರು. ಅಭಿಮಾನಿಗಳು. ಅವರ ಬಲವೆಷ್ಟಿದೆ ಯೆಂಬುದನ್ನು ಅವರು ಮಾಡಿದ ಕಾರ್ಯಗಳಿಂದಲೇ ಊಹಿಸಬಹುದಾಗಿದೆ. ದೇವತೆಗಳ ಶತ್ರುಗಳಾದ ಅನೇಕರಾಕ್ಷಸರನ್ನು ಅವರು ಸಂಹರಿಸಿದ್ದಾರೆ. ಬಕ, ಹಿಡಿಂಬ, ಕಿರ್ಮೀರ–ಮೊದಲಾದ ರಾಕ್ಷಸನಾಯಕರನ್ನೇ ಪಾಂಡವರು ಸಂಹ ರಿಸಿದರೆಂದರೆ–ಅವರ ಬಲವೆಷ್ಟೆಂಬುದನ್ನು ಊಹಿಸಬಹುದಾಗಿದೆ. ಪಾಂಡ ವರು ಹಸ್ತಿನೆಯನ್ನು ಬಿಟ್ಟು ವನವಾಸಕ್ಕೆ ಹೊರಟಾಗ ರಾತ್ರಿಯಲ್ಲಿ ಕಿರ್ಮೀರ ನೆಂಬ ರಾಕ್ಷಸನು ಪರ್ವತದೋಪಾದಿಯಲ್ಲಿ ಪಾಂಡವರಿಗೆ ಎದುರಾಗಿ

ಬಂದು ನಿಂತನು. ಮಹಾವ್ಯಾಘ್ರವು ಜಿಂಕೆಯನ್ನು ಸಂಹರಿಸುವಂತೆ– ಮಹಾಬಲಶಾಲಿಯಾದ ಭೀಮನು ಕಿರ್ಮೀರನನ್ನು ಪ್ರಾಣಿಯನ್ನು ಕೊಲ್ಲುವ ರೀತಿಯಲ್ಲಿ ಕ್ಷಣಮಾತ್ರದಲ್ಲಿ ಸಂಹರಿಸಿದನು. ರಾಜಸೂಯಯಾಗದ ಕಾಲ ದಲ್ಲಿ ಜೈತ್ರಯಾತ್ರೆಗೆಂದು ಹೋಗಿದ್ದ ಸಮಯದಲ್ಲಿ ಭೀಮನು ಮಹಾ ಪರಾಕ್ರಮಿಯಾದ ಜರಾಸಂಧನನ್ನು ಹೇಗೆ ಸಂಹರಿಸಿದನೆಂಬ ವಿಷಯವನ್ನು ಯೋಚಿಸಿ ನೋಡಿದರೆ ನಿನಗೆ ಭೀಮನ ಪರಾಕ್ರಮವು ಎಷ್ಟೆಂಬುದರ ಅರಿವಾಗುತ್ತದೆ. ವಾಸುದೇವನ ಅನುಬಂಧಿಗಳಾದ, ಧೃಷ್ಟದ್ಯುಮ್ನನ ಭಾವಂದಿರಾದ ಪಾಂಡವರನ್ನು ಜರಾ-ಮರಣಗಳ ಅವಸ್ಥೆಯಿರುವ ಯಾವನು ತಾನೇ ಯುದ್ಧದಲ್ಲಿ ಎದುರಿಸಿಯಾನು? (ಭೂಮಿಯಲ್ಲಿರುವ ಯಾವ ಮನುಷ್ಯನಿಂದಲೂ ಅವರನ್ನು ಎದುರಿಸಲು ಸಾಧ್ಯವೇ ಇಲ್ಲ.) ಆದುದರಿಂದ, ದುರ್ಯೋಧನ! ಪಾಂಡವರೊಡನೆ ಶಾಂತಿಯಿಂದಿರು. ನನ್ನ ಮಾತುಗಳನ್ನು ಕೇಳು. ಕೋಪಕ್ಕೆ ವಶನಾಗಬೇಡ."

ಮೈತ್ರೇಯರ ಮಾತುಗಳಿಗೆ ದುರ್ಯೋಧನನು ಮರುಮಾತನ್ನೇನೂ ಹೇಳಲಿಲ್ಲ. ಆದರೆ ತನ್ನ ಮನಸ್ಸಿನಲ್ಲುಂಟಾದ ತಾತ್ಸಾರಭಾವನೆಯನ್ನು ಚೇಷ್ಟೆಗಳಿಂದಲೇ ಪ್ರಕಟಪಡಿಸಿದನು. ತನ್ನ ಪರಾಕ್ರಮದ ಮುಂದೆ ಪಾಂಡವರ ಪರಾಕ್ರಮವು ವ್ಯರ್ಥವೆಂಬುದನ್ನು ಸೂಚಿಸಲು ಆನೆಯ ಸೊಂಡಿಲಿಗೆ ಸಮನಾದ ತನ್ನ ತೊಡೆಯನ್ನು ನಾಲ್ಕಾರು ಬಾರಿ ತಟ್ಟಿಕೊಂಡು ನಸುನಗುತ್ತಾ ಭೂಮಿಯನ್ನು ತನ್ನ ಕಾಲುಗಳಿಂದ ಉಲ್ಲೇಖನ ಮಾಡುತ್ತಿದ್ದನು. ಬಹಳ ಹೊತ್ತಿನವರೆಗೂ ತಲೆಯನ್ನು ಸ್ವಲ್ಪಮಟ್ಟಿಗೆ ತಗ್ಗಿಸಿ ಕುಳಿತಿದ್ದನೇ ಹೊರತು ಮೈತ್ರೇಯರ ಮಾತುಗಳಿಗೆ ಪ್ರತ್ಯುತ್ತರ ಕೊಡುವ ಯತ್ನವನ್ನೂ ಅವನು ಮಾಡಲಿಲ್ಲ. ಅವನ ಆ ಚೇಷ್ಟೆಗಳನ್ನು ನೋಡಿ ಮೈತ್ರೇಯರಿಗೆ ಬಹಳ ಕೋಪವುಂಟಾಯಿತು. ವಿಧಿಯಿಂದ ಪ್ರೇರಿತರಾಗಿ ಬಂದಿರುವರೋ ಎಂಬಂತೆ ಮೈತ್ರೇಯರು ದುರ್ಯೋಧನನನ್ನು ಶಪಿಸಲು ನಿಶ್ಚಯಿಸಿದರು. ಕೋಪದಿಂದ ಮೈತ್ರೇಯರ ಕಣ್ಣುಗಳು ಕೆಂಪಾದುವು. ಕಮಂಡಲುವಿನಲ್ಲಿದ್ದ ನೀರಿನಿಂದ ಆಚಮನಮಾಡಿ ದುರ್ಯೋಧನನಿಗೆ ಹೇಳಿದರು :

**ಯಸ್ಮಾತ್ತ್ವಂ ಮಾಮನಾದೃತ್ಯ ನೇಮಾಂ ವಾಚಂ ಚಿಕೀರ್ಷಸಿ ।**
**ತಸ್ಮಾದಸ್ಯಾಭಿಮಾನಸ್ಯ ಸದ್ಯಃ ಫಲಮವಾಪ್ನುಹಿ ॥೩೩॥**

**ತ್ವದಭಿದ್ರೋಹಸಂಯುಕ್ತಂ ಯುದ್ಧಮುತ್ಪತ್ಸ್ಯತೇ ಮಹತ್ ।**
**ಯತ್ರ ಭೀಮೋ ಗದಾಘಾತೈಸ್ತವೋರುಂ ಭೇತ್ಸ್ಯತೇ ಬಲೀ ॥೩೪॥**



"ದುರ್ಯೋಧನ! ನೀನು ನನ್ನನ್ನು ಬಹುವಾಗಿ ಅನಾದರಣೆ ಮಾಡಿರುವೆ ಮತ್ತು ನಿನ್ನ ಹಿತಕ್ಕಾಗಿ ಹೇಳಿದ ಮಾತುಗಳನ್ನು ನಿರಾಕರಿಸಿರುವೆ. ಈ ದುರಭಿಮಾನದ ಫಲವನ್ನು ನೀನು ಕ್ಷಿಪ್ರದಲ್ಲಿಯೇ ಅನುಭವಿಸು. ನಿನ್ನ ದುರಹಂಕಾರಕ್ಕೆ ತಕ್ಕ ಶಾಸ್ತಿಯಾಗಲೇಬೇಕು. ನಿನ್ನ ದ್ರೋಹದ ಕಾರಣದಿಂದಾಗಿ ಘೋರಯುದ್ಧವು ಖಂಡಿತವಾಗಿಯೂ ನಡೆಯುವುದು. ಆ

ಯುದ್ಧದಲ್ಲಿ ನೀನೀಗ ನನ್ನ ಮುಂದೆ ನಿನ್ನ ಪರಾಕ್ರಮವನ್ನು ಪ್ರದರ್ಶಿಸಲು ತೋರಿಸಿದ ಈ ನಿನ್ನ ತೊಡೆಯನ್ನು ಭೀಮನು ತನ್ನ ಗದೆಯಿಂದ ಪ್ರಹರಿಸಿ ಮುರಿಯುವನು."

ಹೀಗೆ ಶಪಿಸಿ ಹೊರಡಲು ಸಿದ್ಧರಾದ ಮೈತ್ರೇಯರನ್ನು ಧೃತರಾಷ್ಟ್ರನು ತಡೆದು ತನ್ನ ಮಗನ ಅಪರಾಧವನ್ನು ಕ್ಷಮಿಸಬೇಕೆಂದೂ, ಶಾಪನಿರಸನ ಮಾಡಬೇಕೆಂದೂ ಬಹುವಾಗಿ ಕೇಳಿಕೊಂಡನು. ಅದಕ್ಕುತ್ತರವಾಗಿ ಮೈತ್ರೇಯರು ಧೃತರಾಷ್ಟ್ರನಿಗೆ ಹೇಳಿದರು :

**ಶಮಂ ಯಾಸ್ಯತಿ ಚೇತ್ಪುತ್ರಸ್ತವ ರಾಜನ್ಯದಾ ತದಾ ।**
**ಶಾಪೋ ನ ಭವಿತಾ ತಾತ ವಿಪರೀತೇ ಭವಿಷ್ಯತಿ ॥೩೬॥**

"ಮಹಾರಾಜ! ನಿನ್ನ ಮಗನು ಪಾಂಡವರೊಡನೆ ಶಾಂತಿಸಂಧಾನ ಮಾಡಿಕೊಂಡಿದ್ದೇ ಆದರೆ ನನ್ನ ಶಾಪವು ಫಲಿಸುವುದಿಲ್ಲ. ಹಾಗಲ್ಲದೆ ಯುದ್ಧವೇ ನಡೆದಲ್ಲಿ ನನ್ನ ಶಾಪದಂತೆಯೇ ಭೀಮನು ದುರ್ಯೋಧನನ ಊರುಭಂಗಮಾಡುವುದು ನಿಶ್ಚಯ."

ಧೃತರಾಷ್ಟ್ರನಿಗೆ ಮುಂದೇನೂ ಹೇಳಲಾಗಲಿಲ್ಲ. ಮೈತ್ರೇಯರನ್ನು ಸಮಾಧಾನಪಡಿಸಿ ಕುಳ್ಳಿರಿಸಿದನು. ಧೃತರಾಷ್ಟ್ರನು ಅದುವರೆಗೆ ಬಕ-ಹಿಡಿಂಬ-ಜರಾಸಂಧರ ಸಂಹಾರವೃತ್ತಾಂತಗಳನ್ನು ಕೇಳಿದ್ದನೇ ಹೊರತು ಕಿರ್ಮೀರನ ವಧೆಯ ವಿಷಯವು ಅವನಿಗೆ ತಿಳಿದಿರಲಿಲ್ಲ. ಮೈತ್ರೇಯರಿಂದಲೇ ಆ ವಿಷಯವು ಧೃತರಾಷ್ಟ್ರನಿಗೂ, ದುರ್ಯೋಧನನಿಗೂ ತಿಳಿಯಿತು. ಕಿರ್ಮೀರನ ವಧೆಯ ವಿಷಯವನ್ನು ಸವಿಸ್ತರವಾಗಿ ಕೇಳಬೇಕೆಂಬ ಆಶಯವು ವಿಸ್ಮಿತನಾದ ಧೃತರಾಷ್ಟ್ರನಿಗುಂಟಾಯಿತು. ಮೈತ್ರೇಯರನ್ನು ಪ್ರಶ್ನಿಸಿದನು :

"ಮಹರ್ಷಿಗಳೇ! ಕಿರ್ಮೀರನನ್ನು ಭೀಮನು ಹೇಗೆ ಸಂಹರಿಸಿದನು? ಈ ವಿಷಯವನ್ನು ನನಗೆ ವಿವರಿಸಿ ಹೇಳಬೇಕೆಂದು ಕೇಳಿಕೊಳ್ಳುತ್ತೇನೆ."

"ಧೃತರಾಷ್ಟ್ರ! ನಾನು ಪುನಃ ಮಾತನಾಡುವುದಿಲ್ಲ. ಏಕೆಂದರೆ : ನನ್ನ ಮಾತು ದುರ್ಯೋಧನನಿಗೆ ಸಹ್ಯವಾಗಲಾರದು. ನಾನು ಹೊರಟು ಹೋದನಂತರ ವಿದುರನು ನಿನಗೆ ಎಲ್ಲವನ್ನೂ ವಿವರಿಸಿ ಹೇಳುವನು."

ಹೀಗೆ ಹೇಳಿ ಮೈತ್ರೇಯರು ಹೊರಟುಹೋದರು. ಕಿರ್ಮೀರನ ವಧೆಯ ವಿಷಯವನ್ನು ಕೇಳಿ ದುರ್ಯೋಧನನ ಮನಸ್ಸೂ ಕಳವಳಗೊಂಡಿತು. ಅದನ್ನೇ ಯೋಚಿಸುತ್ತಾ ದುರ್ಯೋಧನನೂ ಸಭಾಮಂದಿರದಿಂದ ಹೊರಟನು."

೧೦ನೆಯ ಅಧ್ಯಾಯವು ಮುಗಿಯಿತು.

೧೧ನೆಯ ಅಧ್ಯಾಯ ಕಿರ್ಮೀರವಧಪರ್ವ

## ಭೀಮಸೇನನಿಂದಾದ ಕಿರ್ಮೀರವಧೆಯ ವೃತ್ತಾಂತವನ್ನು ವಿದುರನು ಧೃತರಾಷ್ಟ್ರನಿಗೆ ಹೇಳಿದುದು

(ಭೀಮನು ಕಿರ್ಮೀರನನ್ನು ಸಂಹರಿಸಿದನೆಂಬ ವಿಷಯದಲ್ಲಿ ಧೃತರಾಷ್ಟ್ರನಿಗೆ ಸಂತೋಷವೇನೂ ಇರಲಿಲ್ಲ. ಆದರೆ ಭೀಮನ ಪರಾಕ್ರಮ ವೆಷ್ಟೆಂಬುದನ್ನು ತಿಳಿಯುವ ಕುತೂಹಲವು ಧೃತರಾಷ್ಟ್ರನಿಗುಂಟಾಯಿತು.)

ವೈಶಂಪಾಯನರು ಹೇಳುತ್ತಾರೆ :

"ಪಾರಿಕ್ಷಿತ! ಮೈತ್ರೇಯರು ಹೇಳಿಹೋದಂತೆ ಧೃತರಾಷ್ಟ್ರನು, ವಿದುರನನ್ನು ಕುಳ್ಳಿರಿಸಿಕೊಂಡು ಕೇಳಿದನು : "ವಿದುರ! ನಾನು ಕಿರ್ಮೀರನ ವಿನಾಶದ ಚರಿತವನ್ನು ಕೇಳುವ ಆಶಯದಿಂದಿರುವೆನು. ಭೀಮನಿಗೂ, ಕಿರ್ಮೀರನಿಗೂ ದ್ವಂದ್ವಯುದ್ಧವು ಹೇಗೆ ನಡೆಯಿತು? ಎಲ್ಲಿ ನಡೆಯಿತು?– ಎಂಬುದೆಲ್ಲವನ್ನೂ ಸವಿಸ್ತರವಾಗಿ ಹೇಳು."

ವಿದುರನು ಹೇಳುತ್ತಾನೆ :

"ಮಹಾರಾಜ! ಅತಿಮಾನುಷಕಾರ್ಯಸಾಧನೆಯಲ್ಲಿ ನಿಪುಣನಾದ ಭೀಮಸೇನನ ಪರಾಕ್ರಮದ ಚರಿತವನ್ನು ವಿಶದವಾಗಿಯೇ ಹೇಳುವೆನು, ಕೇಳು. ನಾನು ಕಾಮ್ಯಕವನದಲ್ಲಿ ಪಾಂಡವರೊಡನಿದ್ದಾಗ ಅವರಿಂದಲೇ ಈ ಕಥೆಯನ್ನು ಕೇಳಿದೆನು.

ಪಗಡೆಯಾಟದಲ್ಲಿ ಸೋತು ಪಣದ ನಿಯಮದಂತೆ ಕಾಡಿಗೆ ಹೊರಟ ಪಾಂಡವರು ಮೂರು ದಿನಗಳ ಪರ್ಯಂತವಾಗಿ ರಾತ್ರಿ-ಹಗಲುಗಳೆಂಬ ವಿವೇಚನೆಯಿಲ್ಲದೇ ನಡೆದು ಕಟ್ಟಕಡೆಗೆ ಕಾಮ್ಯಕವೆಂಬ ಸುಂದರವಾದ

ಅರಣ್ಯದ ಸಮೀಪಕ್ಕೆ ಹೋದರು. ಅಲ್ಲಿಗೆ ಹೋಗುವ ವೇಳೆಗೆ ಅರ್ಧ ರಾತ್ರಿಯು ಮೀರಿದ್ದಿತು. ಎಲ್ಲ ಪ್ರಾಣಿಗಳೂ ಗಾಢವಾದ ನಿದ್ರೆಯಲ್ಲಿರುವ ಕಾಲವದು. ನರಮಾಂಸಭಕ್ಷಕರಾದ ರಾಕ್ಷಸರಿಗೆ ಸಂಚರಿಸಲು ಯೋಗ್ಯವಾದ ಮುಹೂರ್ತವಾಗಿದ್ದಿತು. ಕಾಮ್ಯಕವನದಲ್ಲಿ ಅಂತಹ ರಾಕ್ಷಸರು ಜೀವಿ ಸುತ್ತಿದ್ದುದರಿಂದ ತಪಸ್ವಿಗಳೂ, ಗೋಪಾಲಕರೂ ಮತ್ತು ಇತರ ವನಮಾರ್ಗ ಚಾರಿಗಳೂ ರಾಕ್ಷಸರ ಭಯದಿಂದ ಆ ವನವನ್ನು ಪ್ರವೇಶಿಸುತ್ತಿರಲಿಲ್ಲ. ಪಾಂಡವರು ಕಾಮ್ಯಕವನದೊಳಕ್ಕೆ ಅರ್ಧರಾತ್ರಿಯನ್ನು ಮೀರಿದ ವೇಳೆಯಲ್ಲಿ ಪ್ರವೇಶಮಾಡಿದ ಸಮಯಕ್ಕೆ ಸರಿಯಾಗಿ ಭಯಂಕರನಾದ, ಉರಿಗಣ್ಣನಾದ ರಾಕ್ಷಸನೊಬ್ಬನು ಕೈಯಲ್ಲಿ ಕೊಳ್ಳಿಯನ್ನು ಹಿಡಿದುಕೊಂಡು ಪಾಂಡವರಿಗೆ ಎದುರಾಗಿ ಬಂದು ತೋಳುಗಳನ್ನು ನೀಡಿ ಬಾಯನ್ನು ತೆರೆದು ಅಡ್ಡಗಟ್ಟಿ ನಿಂತುಕೊಂಡನು. ಅವನ ಎಂಟು ಕೋರೆದಾಡೆಗಳೂ ಬಾಯಿಂದ ಹೊರಕ್ಕೆ ಚಾಚಿದ್ದುವು. ಅವನ ಕಣ್ಣುಗಳು ಕೆಂಪಾಗಿದ್ದುವು. ಅವನ ತಲೆಗೂದಲುಗಳು ಪ್ರಕಾಶಮಾನವಾಗಿ ನೆಟ್ಟಗೆ ನಿಂತಿದ್ದುವು. ಆ ಸಮಯದಲ್ಲವನು–ಸೂರ್ಯನ ರಶ್ಮಿಗಳಿಂದಲೂ, ಮಿಂಚಿನಿಂದಲೂ ಮತ್ತು ಬೆಳ್ಳಕ್ಕಿಗಳಿಂದಲೂ ಕೂಡಿದ ಮೇಘದೋಪಾದಿಯಲ್ಲಿ ಕಾಣುತ್ತಿದ್ದನು. ಮಳೆಯನ್ನು ಸುರಿಸುವ ಮೋಡ ಗಳು ಗುಡುಗು-ಸಿಡಿಲುಗಳಿಂದ ಆರ್ಭಟಿಸುತ್ತಾ ಪ್ರಾಣಿಗಳ ಹೃದಯದಲ್ಲಿ ಭಯೋತ್ಪಾದನೆಮಾಡುವಂತೆ–ಆ ರಾಕ್ಷಸನೂ ಭಯಂಕರವಾಗಿ ಶಬ್ದ ಮಾಡುತ್ತಾ ರಾಕ್ಷಸರಿಗೆ ಯೋಗ್ಯವಾದ ನಾನಾವಿಧವಾದ ಮಾಯೆಗಳನ್ನು ಪ್ರಯೋಗಿಸತೊಡಗಿದನು. ಅವನ ಘೋರಧ್ವನಿಯನ್ನು ಕೇಳಿಯೇ ಸ್ಥಲವಾಸಿ ಗಳಾದ ಪಕ್ಷಿಗಳು ಜಲವಾಸಿಗಳಾದ ಪಕ್ಷಿಗಳೊಡನೆ ಭಯದಿಂದ ಎಲ್ಲ ದಿಕ್ಕು ಗಳಿಗೂ ಹಾರಿಹೋದುವು. ಭೂಮಿಯ ಮೇಲಿದ್ದ ಜಿಂಕೆ, ಹುಲಿ, ಕಾಡು ಕೋಣ, ಕರಡಿ–ಮುಂತಾದ ಪ್ರಾಣಿಗಳು ಭಯದಿಂದ ಓಡಲಾರಂಭಿಸಿದುವು. ಅವು ಸಾಮೂಹಿಕವಾಗಿ ಓಡುತ್ತಿರುವುದನ್ನು ನೋಡಿದರೆ–ಅರಣ್ಯವೇ ಚಲಿಸುತ್ತಿದೆಯೋ–ಎಂಬ ಭ್ರಾಂತಿಯುಂಟಾಗುತ್ತಿದ್ದಿತು. ಆ ರಾಕ್ಷಸನ ತೊಡೆ ಗಳ ಸ್ಫುರಣದಿಂದ ಹೊರಟ ಗಾಳಿಯು ಕೆಂಪಾದ ಚಿಗುರುಗಳಿಂದ ಕೂಡಿದ್ದ, ವೃಕ್ಷಗಳಿಂದ ಬಹುದೂರ ಸರಿದುಹೋಗಿದ್ದ ಬಳ್ಳಿಗಳನ್ನು ಪುನಃ ವೃಕ್ಷಗಳ ಸಮೀಪಕ್ಕೆ ಹೋಗುವಂತೆ ಮಾಡಿದ್ದನ್ನು ನೋಡಿದರೆ, ರಾಕ್ಷಸನ ಘೋರ

ವಾದ ಶಬ್ದವನ್ನು ಕೇಳಿ ಭಯಪಟ್ಟ ಬಳ್ಳಿಗಳು ವೃಕ್ಷಗಳನ್ನು ಭದ್ರವಾಗಿ ಆಲಿಂಗಿಸಿಕೊಳ್ಳುತ್ತಿರುವಂತೆ ಕಾಣುತ್ತಿದ್ದಿತು. ಆ ಸಮಯದಲ್ಲಿ ಚಂಡ ಮಾರುತವೂ ಉದ್ಭೂತವಾಯಿತು. ಅದರಿಂದಾಗಿ ಭೂಮಿಯ ಧೂಳು ಮೇಲೆದ್ದು ಆ ಅರ್ಧರಾತ್ರಿಯಲ್ಲಿ ನಕ್ಷತ್ರಗಳ ಬೆಳಕೂ ಕಾಣದ ರೀತಿಯಲ್ಲಿ ಆಕಾಶವನ್ನು ಮುಚ್ಚಿಬಿಟ್ಟಿತು. ಮಾನವನಿಗೊದಗುವ ದುಃಖವು ಪಂಚೇಂದ್ರಿಯಗಳಿಗೆ ಶತ್ರುಪ್ರಾಯವಾಗಿ ಪಂಚೇಂದ್ರಿಯಗಳ ಗತಿಯನ್ನು ಹೇಗೆ ನಿರೋಧಿಸಿ ನಿಲ್ಲುವುದೋ–ಹಾಗೆಯೇ ಪಂಚಪಾಂಡವರ ಮುಂದೆ ಸಂಕಟಪ್ರಾಯನಾದ ಅಪರಿಚಿತನಾದ ಶತ್ರುವೊಬ್ಬನು ಅವರ ಮಾರ್ಗವನ್ನು ನಿರೋಧಿಸಿ ನಿಂತನು. (ಮನುಷ್ಯನಿಗೆ ಸಂಕಟವೊದಗಿದ ಕಾಲದಲ್ಲಿ ಯಾವುದೂ ಬೇಕಾಗುವುದಿಲ್ಲ. ತಿನ್ನಲು ಇಚ್ಛೆಯಿರುವುದಿಲ್ಲ. ಒಳ್ಳೆಯ ನೋಟಗಳೂ–ಸುಶ್ರಾವ್ಯವಾದ ಸಂಗೀತಶ್ರವಣವೂ ಬೇಡವಾಗುತ್ತದೆ. ಸ್ಪರ್ಶ ಸುಖದಲ್ಲಿಯೂ ಇಚ್ಛೆಯಿರುವುದಿಲ್ಲ. ಆದುದರಿಂದ ಮನುಷ್ಯನ ಸಂಕಟವು ಪಂಚೇಂದ್ರಿಯಗಳ ಗತಿಯನ್ನು ನಿರೋಧಿಸಿದಂತಾಗುವುದು.) ಕೃಷ್ಣಾಜಿನ ಧಾರಿಗಳಾಗಿದ್ದ ಪಾಂಡವರು ಕಾಮ್ಯಕವನಕ್ಕೆ ಬರುತ್ತಿರುವುದನ್ನು ರಾಕ್ಷಸನು ಬಹುದೂರದಿಂದಲೇ ನೋಡಿ, ಮೈನಾಕಪರ್ವತದಂತೆ ಅವರಿಗಡ್ಡಲಾಗಿ, ಅವರ ಗತಿಯನ್ನು ನಿರೋಧಿಸಿ ನಿಂತುಬಿಟ್ಟನು. ಹಿಂದೆಂದೂ ನೋಡದ ಆ ಬೃಹದಾಕಾರವನ್ನು ಕಂಡು ಕೃಷ್ಣೆಯು ಭೀತಳಾಗಿ ಕಣ್ಣುಗಳನ್ನು ಮುಚ್ಚಿ ಕೊಂಡಳು. ದುಃಶಾಸನನಿಂದ ಕೆದರಿದ ಕೇಶಪಾಶವುಳ್ಳವಳಾಗಿ ಮಾಡಲ್ಪಟ್ಟಿದ್ದ ದ್ರೌಪದಿಯು, ಆ ಪಂಚಪಾಂಡವರ ಮಧ್ಯದಲ್ಲಿ–ಐದು ಪರ್ವತಗಳ ಮಧ್ಯ ದಲ್ಲಿರುವ ನದಿಯಂತೆ–ರಾಕ್ಷಸನನ್ನು ನೋಡಿದ ಮಾತ್ರದಿಂದಲೇ ವ್ಯಾಕುಲಿತ ಳಾದಳು. ದ್ರೌಪದಿಯು ವ್ಯಾಕುಲಳಾದುದನ್ನು ನೋಡಿ ಪಾಂಡವರೈವರೂ ಅವಳನ್ನು ಸಂತೈಸಿ, ಅವಳಿಗೆ ಧೈರ್ಯವನ್ನು ಹೇಳಿದರು. ಆಶೆಯಿಂದ ವ್ಯಾಕುಲಗೊಂಡಿರುವ ಮನಸ್ಸಿಗೆ ಪಂಚೇಂದ್ರಿಯಗಳು ಆಶಾಪೂರಣ ಮಾಡುವ ಆಶ್ವಾಸನೆಯ ಮೂಲಕ ಹರ್ಷವನ್ನುಂಟುಮಾಡುವಂತೆ–ಪಾಂಡವರು ದ್ರೌಪದಿಗೆ ಆಶ್ವಾಸನೆಯನ್ನಿತ್ತರು.

(ಮನಸ್ಸಿನ ಆಶೆಯು ಪೂರ್ಣವಾಗಬೇಕಾದರೆ ಇಂದ್ರಿಯಗಳು ವಿಷಯ ದಲ್ಲಿ ಆಸಕ್ತವಾಗಲೇಬೇಕು. ಯಾವುದಾದರೂ ಹಣ್ಣನ್ನು ತಿನ್ನಬೇಕೆಂದು

ಮನಸ್ಸು ನೆನೆದರೆ–ಕಣ್ಣುಗಳು ಆ ಹಣ್ಣನ್ನು ನೋಡಬೇಕು ; ಮೂಗು ವಾಸನೆಯನ್ನು ಆಘ್ರಾಣಿಸಬೇಕು ; ಕಾಲುಗಳು ಮರದ ಬಳಿಗೆ ಹೋಗಬೇಕು; ಕೈಗಳು ಕೀಳಬೇಕು ; ನಾಲಿಗೆಯು ಸವಿಯಬೇಕು. ಆಗ ಮನಸ್ಸಿನ ಆಶೆಯು ಪೂರ್ಣವಾದಂತಾಗುತ್ತದೆ.)

ಪಾಂಡವರೊಡನಿದ್ದ ಧೌಮ್ಯರು ರಾಕ್ಷೋಘ್ನಮಂತ್ರಗಳನ್ನು ಜಪಿಸಿ ರಾಕ್ಷಸನ ಮಾಯೆಗಳನ್ನು ದೂರಮಾಡಿದರು. ಮುಂದೆ ರಾಕ್ಷಸನಿಗೆ ಮಾಯಾವಿದ್ಯೆಯನ್ನು ಪ್ರದರ್ಶಿಸಲು ಸಾಧ್ಯವಾಗಲಿಲ್ಲ. ತನ್ನ ಮಾಯಾ ಜಾಲವು ಮಂತ್ರಪುನಶ್ಚರಣಮಾತ್ರದಿಂದಲೇ ವಿನಾಶಹೊಂದಿದುದನ್ನು ಕಂಡು ಕಾಮರೂಪಿಯಾದ, ಕ್ರೂರಿಯಾದ ಆ ರಾಕ್ಷಸನು ಕಣ್ಣುಗಳನ್ನು ಅರಳಿಸಿಕೊಂಡು ಸಾಕ್ಷಾತ್ ಯಮನಂತೆ ಅವರ ಮುಂದೆ ನಿಂತನು. ಅವನನ್ನು ಕುರಿತು ದೀರ್ಘಪ್ರಜ್ಞನಾದ ಯುಧಿಷ್ಠಿರನು ಕೇಳಿದನು :

"ನೀನು ಯಾರು? ಯಾರ ಮಗನು? ನಮ್ಮ ಮುಂದೇಕೆ ನಿಂತಿರುವೆ? ನಮ್ಮಿಂದ ನಿನಗೇನಾಗಬೇಕು?"

ರಾಕ್ಷಸನು ಹೇಳುತ್ತಾನೆ :

"ನಾನು ಬಕಾಸುರನ ಸಹೋದರ. ಕಿರ್ಮೀರನೆಂದು ನನ್ನನ್ನು ಕರೆ ಯುತ್ತಾರೆ. ನಾನು ನಿರ್ಜನವಾದ ಈ ಅರಣ್ಯದಲ್ಲಿ ನಿತ್ಯವೂ ಅಲೆದಾಡುತ್ತಾ ಕೈಗೆ ಸಿಕ್ಕಿದ ಮಾನವರನ್ನು ಕೊಂದು ಭಕ್ಷಣಮಾಡುತ್ತಾ ಅಬಾಧಿತನಾಗಿ ಜೀವಿಸುತ್ತಿದ್ದೇನೆ. ಈ ದಿನ ನನಗೆ ಆಹಾರರೂಪವಾಗಿ ಬಂದಿರುವ ನೀವು ಯಾರು? ಒಂದು ವೇಳೆ ನೀವೆಲ್ಲರೂ ನನ್ನೊಡನೆ ಸೆಣೆಸಾಡಲು ಬರುವುದಾದರೂ ನಿಮ್ಮೆಲ್ಲರನ್ನೂ ಕ್ಷಣಮಾತ್ರದಲ್ಲಿ ಸೋಲಿಸಿ ಸಂಹರಿಸಿ ಭಕ್ಷಿಸುವೆನು."

ಧರ್ಮಜನು ಹೇಳುತ್ತಾನೆ :

"ಕಿರ್ಮೀರನೇ! ನಾವಾರೆಂಬುದನ್ನು ಹೇಳುವೆನು ; ಕೇಳು. ಪಾಂಡು ವಿನ ಹಿರಿಯ ಮಗನಾದ ಯುಧಿಷ್ಠಿರನು ನಾನು. ನನ್ನ ಹೆಸರನ್ನಾದರೂ ನೀನು ಕೇಳಿರಬಹುದಲ್ಲವೇ? ರಾಜ್ಯ-ಕೋಶಗಳನ್ನು ಕಳೆದುಕೊಂಡವ ನಾಗಿ ಭೀಮಾರ್ಜುನ-ನಕುಲ-ಸಹದೇವರೊಡನೆಯೂ ಮತ್ತು ದ್ರೌಪದಿ

ಯೊಡನೆಯೂ ಅರಣ್ಯಾಭಿಮುಖವಾಗಿ ಕಳೆದ ಮೂರು ದಿನಗಳಿಂದ ನಡೆದು ಬಂದು, ಈಗ ನಿನ್ನ ಅಧೀನದಲ್ಲಿರುವ ಈ ಪ್ರದೇಶಕ್ಕೆ ಪ್ರವೇಶಿಸಲಿರುವೆನು. ಇಲ್ಲಿಯೇ ನಾನು ನನ್ನ ವನವಾಸದ ಸ್ವಲ್ಪ ಕಾಲವನ್ನು ಕಳೆಯಬೇಕೆಂಬ ಆಶಯದಿಂದಿರುವೆನು."

ಯುಧಿಷ್ಠಿರನ ಆ ಮಾತುಗಳನ್ನು ಕೇಳಿದೊಡನೆಯೇ ಕಿರ್ಮೀರನು ಮಹಾನಂದದಿಂದ ಗಟ್ಟಿಯಾಗಿ ಗಹ-ಗಹಿಸಿ ನಕ್ಕು ಹೇಳಿದನು :

"ಯುಧಿಷ್ಠಿರ! ನಿಶ್ಚಯವಾಗಿಯೂ ಇಂದೇ ನನಗೆ ಸುದಿನ. ಬಹಳ ದಿನಗಳಿಂದಲೂ ಇದ್ದ ನನ್ನ ಮನೋಗತವಾದ ಆಶಯವು ಇಂದು ಪೂರ್ಣ ವಾದಂತಾಯಿತು. ನಿಶ್ಚಯವಾಗಿಯೂ ಇದು ದೈವಸಂಕಲ್ಪವೇ ಸರಿ. ವಿಧಿನಿಯಮದಂತೆ ನೀವೇ ಇಂದು ನನ್ನ ಬಳಿಗೆ ಬಂದಿರುತ್ತೀರಿ. ದುರುಳ ನಾದ ಭೀಮಸೇನನನ್ನು ವಧೆಮಾಡುವ ಉತ್ಕಟೇಚ್ಛೆಯಿಂದ ಆಯುಧವನ್ನು ಮೇಲೆತ್ತಿ ಈ ಪೃಥ್ವಿಯಲ್ಲೆಲ್ಲಾ ಅಲೆಯುತ್ತಿರುವೆನು. ಆದರೆ ನನಗೆ ಭೀಮ ನೆಲ್ಲಿಯೂ ಸಿಕ್ಕಲೇ ಇಲ್ಲ. ನನ್ನ ಸೋದರಹಂತಕನಾದ ಭೀಮನು ಅದೃಷ್ಟ ವಶದಿಂದ ನನ್ನೆದುರಿನಲ್ಲಿಯೇ ಬಂದು ನಿಂತಿದ್ದಾನೆ. ಈ ಮಾಯಾವಿಯು ಬ್ರಾಹ್ಮಣವೇಷವನ್ನು ಧರಿಸಿ ಏಕಚಕ್ರನಗರಿಯಲ್ಲಿ ನಮ್ಮಣ್ಣನಾದ ಬಕನನ್ನು ಉಪಾಯದಿಂದ ಸಂಹರಿಸಿದನು. ಇವನಲ್ಲಿ ಬಾಹುಬಲ-ಪರಾಕ್ರಮಗಳೇನೂ ಇರುವುದಿಲ್ಲ. ಇದಕ್ಕೆ ಮೊದಲು ಈ ಪಾಪಾತ್ಮನು ನನ್ನ ಗೆಳೆಯನಾದ ಹಿಡಿಂಬನನ್ನು ವಧೆಮಾಡಿ ಅವನ ತಂಗಿಯನ್ನೇ ಅಪಹರಿಸಿಕೊಂಡು ಹೋದನು. ಈ ಮೂಢನು ಈಗ ನನ್ನ ಸಂಚಾರಕಾಲದಲ್ಲಿ ಅರ್ಧರಾತ್ರಿ ಯನ್ನು ಮೀರಿರುವ ಈ ಸಮಯದಲ್ಲಿ ನನ್ನ ಅಧೀನಕ್ಕೊಳಪಟ್ಟಿರುವ ಈ ಅರಣ್ಯಕ್ಕೆ ಬಂದಿರುತ್ತಾನೆ. ಬಹಳ ದಿನಗಳಿಂದಲೂ ಇರುವ ಇವನ ಮೇಲಿನ ಸೇಡನ್ನು ನಾನಿಂದು ತೀರಿಸಿಕೊಳ್ಳುವೆನು. ನಮ್ಮಣ್ಣನಾದ ಬಕನಿಗೆ ಇವನ ಶರೀರದಲ್ಲಿರುವ ಸಮೃದ್ಧವಾದ ರಕ್ತದಿಂದಲೇ ತರ್ಪಣಮಾಡಿ, ಅವನನ್ನು ತಣಿಸುವೆನು. ರಾಕ್ಷಸರಿಗೆ ಕಂಟಕಪ್ರಾಯನಾದ ಇವನನ್ನು ಕೂಡಲೇ ಸಂಹರಿಸಿ, ನಮ್ಮಣ್ಣನ ಮತ್ತು ಹಿಡಿಂಬನ ಋಣಗಳಿಂದ ವಿಮುಕ್ತನಾಗಿ ಚಿರಶಾಂತಿಯನ್ನು ಪಡೆಯುವೆನು. ಬ್ರಾಹ್ಮಣವೇಷವನ್ನು ಧರಿಸಿ ಬಕನಿಗೆ ಆಹಾರರೂಪವಾಗಿಯೇ ಹೋದ ಈ ಭೀಮನನ್ನು ನಮ್ಮಣ್ಣನು ಭಕ್ಷಿಸದೇ

ಬಿಟ್ಟನಲ್ಲವೇ! ಆದರೆ ಇಂದು, ಯುಧಿಷ್ಠಿರ! ನಿನ್ನೆದುರಿನಲ್ಲಿಯೇ ಇವನನ್ನು ಸಂಹರಿಸಿ ಭಕ್ಷಿಸಿಬಿಡುವೆನು. ಕೇವಲ ಭಕ್ಷಿಸುವುದು ಮಾತ್ರವಲ್ಲ! ಅಗಸ್ತ್ಯರು ವಾತಾಪಿಯನ್ನು ಭಕ್ಷಿಸಿ ಜೀರ್ಣಮಾಡಿಕೊಂಡಂತೆ–ಇವನನ್ನು ಭಕ್ಷಿಸಿ ಜೀರ್ಣಿಸಿಕೊಳ್ಳುವೆನು."

ರಾಕ್ಷಸನ ಮಾತುಗಳನ್ನು ಕೇಳಿ ಯುಧಿಷ್ಠಿರನು ಕುಪಿತನಾಗಿ ಹೇಳಿದನು:

"ಕಿರ್ಮೀರ! ಹೀಗೆಂದಿಗೂ ಆಗಲು ಸಾಧ್ಯವಿಲ್ಲ."

ರಾಕ್ಷಸನ ಮಾತುಗಳನ್ನು ಕೇಳಿ ಭೀಮನಿಗೂ ತಡೆಯಲಸಾಧ್ಯವಾದ ಕೋಪವುಂಟಾಯಿತು. ಒಡನೆಯೇ ತನ್ನ ಸಮೀಪದಲ್ಲಿದ್ದ ಹತ್ತು ಮಾರು ಪರಿಮಿತಿಯಿದ್ದ ವೃಕ್ಷವೊಂದನ್ನು ಕೆಡವಿ, ಅದನ್ನು ನೆಲದ ಮೇಲೆ ನಾಲ್ಕಾರು ಬಾರಿ ಅಪ್ಪಳಿಸಿ, ಪರ್ಣರಹಿತವನ್ನಾಗಿ ಮಾಡಿದನು. ಕ್ಷಣಮಾತ್ರದಲ್ಲಿಯೇ ಅರ್ಜುನನೂ ತನ್ನ ಗಾಂಡೀವಧನುಸ್ಸಿಗೆ ಹೆದೆಯೇರಿಸಿದನು. ಭೀಮನು ಅರ್ಜುನನನ್ನು ತಡೆದು, ಮೇಘದಂತೆ ಗರ್ಜನೆಮಾಡುತ್ತಿದ್ದ ರಾಕ್ಷಸನನ್ನು 'ತಿಷ್ಠ–ತಿಷ್ಠ ನಿಲ್ಲು-ನಿಲ್ಲೆಂದು' ಹೇಳುತ್ತಾ ಅಂಗವಸ್ತ್ರವನ್ನು ಸೊಂಟಕ್ಕೆ ಬಿಗಿದು, ಅವುಡುಗಚ್ಚುತ್ತಾ ವೃಕ್ಷಾಯುಧನಾಗಿ ರಭಸದಿಂದ ರಾಕ್ಷಸನ ಕಡೆಗೆ ಧಾವಿಸಿದನು. ಯಮದಂಡರೂಪವಾಗಿದ್ದ ವೃಕ್ಷಾಯುಧದಿಂದ–ಇಂದ್ರನು ವಜ್ರಾಯುಧದಿಂದ ತನ್ನ ಶತ್ರುವಿನ ತಲೆಯನ್ನು ಪ್ರಹರಿಸಿದಂತೆ– ಭೀಮಸೇನನು ಕಿರ್ಮೀರನ ತಲೆಯನ್ನು ಅಪ್ಪಳಿಸಿದನು. ಅಂತಹ ಪೆಟ್ಟುಬಿದ್ದರೂ ರಾಕ್ಷಸನು ಸ್ವಲ್ಪವೂ ವಿಚಲಿತನಾಗಲಿಲ್ಲ. ನಿಶ್ಚಲನಾಗಿ ಕದನಕ್ಕೆ ಸಿದ್ಧವಾಗಿಯೇ ನಿಂತಿದ್ದನು. ವೃಕ್ಷದ ಕೊಂಬೆಯು ತನ್ನ ತಲೆಯ ಮೇಲೆ ಬಿದ್ದೊಡನೆಯೇ ರಾಕ್ಷಸನು ತನ್ನ ಕೈಯಲ್ಲಿದ್ದ ಪಂಜನ್ನು ಭೀಮನ ಕಡೆಗೆ ರಭಸದಿಂದ ಬೀಸಿ ಎಸೆದನು. ಭೀಮನು ವೇಗವಾಗಿ ತನ್ನ ಸಮೀಪಕ್ಕೆ ಬಂದ ಪಂಜನ್ನು ಕೆಳಕ್ಕೆ ಬೀಳಿಸದೇ ತನ್ನ ಎಡಗಾಲಿನಿಂದ ವೇಗವಾಗಿ ಒದೆದು ಅದು ಪುನಃ ರಭಸದಿಂದ ರಾಕ್ಷಸನ ಸಮೀಪಕ್ಕೆ ಹೋಗುವಂತೆ ಮಾಡಿದನು. ಒಡನೆಯೇ ಕಿರ್ಮೀರನು ತನ್ನ ಪಕ್ಕದಲ್ಲಿದ್ದ ಮರವನ್ನು ಕಿತ್ತು–ದಂಡವನ್ನು ಹಿಡಿದು ನಿಂತಿರುವ ಯಮನೋಪಾದಿಯಲ್ಲಿ–ಭೀಮನೊಡನೆ ಕಾಳಗಕ್ಕೆ

ನಿಂತನು. ವೃಕ್ಷಗಳ ನಿರ್ಮೂಲನಕ್ಕೆ ಕಾರಣವಾದ ಅವರ ಕಾಳಗವು ಪೂರ್ವದಲ್ಲಿ ಒಬ್ಬ ಹೆಂಗಸಿನ ಕಾರಣದಿಂದಾಗಿ ನಡೆದ ವಾಲಿ-ಸುಗ್ರೀವರ ಕಾಳಗದಂತೆ ಕಾಣುತ್ತಿದ್ದಿತು. ವೃಕ್ಷಾಯುಧಗಳನ್ನು ಧರಿಸಿದ್ದ ಇಬ್ಬರೂ ಕದನವನ್ನಾರಂಭಿಸಿದರು. ಪಟ-ಪಟನೆ ಆ ಅರಣ್ಯದಲ್ಲಿದ್ದ ವೃಕ್ಷಗಳನ್ನು ಮುರಿಯುವುದು, ಅವನ್ನು ನಾಲ್ಕಾರು ಬಾರಿ ಅಪ್ಪಳಿಸಿ ಪರ್ಣರಹಿತವನ್ನಾಗಿ ಮಾಡಿ ಎದುರಾಳಿಯ ಮೇಲೆ ಪ್ರಯೋಗಿಸುವುದು. ಪುನಃ ಮತ್ತೊಂದು ವೃಕ್ಷವನ್ನು ಮುರಿಯುವುದು–ಹೀಗೆ ಇಬ್ಬರೂ ಕದನಮಾಡುತ್ತಾ ಕ್ಷಣಮಾತ್ರದಲ್ಲಿ ಅರಣ್ಯವನ್ನೇ ವೃಕ್ಷರಹಿತವನ್ನಾಗಿ ಮಾಡಿಬಿಟ್ಟರು. ಮಸ್ತಕಗಳ ಮೇಲೆ ಪರಸ್ಪರವಾಗಿ ಅಪ್ಪಳಿಸಲ್ಪಟ್ಟ ಆ ಮಹಾವೃಕ್ಷಗಳು–ಮದ್ದಾನೆಯ ಗಂಡಸ್ಥಳದ ಮೇಲೆ ಅಪ್ಪಳಿಸಿದ ಕನ್ನೈದಿಲೆಯ ಪತ್ರಗಳಂತೆ–ಹತ್ತಾರು ಸೀಳುಗಳಾಗಿ ಕೆಳಗೆ ಬೀಳುತ್ತಿದ್ದುವು. ಮರಗಳು ಜಜ್ಜಿಹೋಗಿ ನೊಜೆಯಂತಾಗಿ ತಪಸ್ವಿಗಳು ಎಸೆದಿರುವ ಜೀರ್ಣವಾದ ನಾರುಮಡಿಯಂತೆ ಕಾಣುತ್ತಿದ್ದುವು. ಈ ರೀತಿಯಲ್ಲಿ ವೃಕ್ಷಾಯುಧಗಳಿಂದ ಅವರಿಬ್ಬರ ಕಾಳಗವು ಸ್ವಲ್ಪಹೊತ್ತು ನಡೆಯಿತು. ಸಮರಾಂಗಣಕ್ಕೆ ಸಮೀಪದಲ್ಲಿದ್ದ ಮರಗಳೆಲ್ಲವೂ ಮುಗಿದನಂತರ ರಾಕ್ಷಸನು ದೊಡ್ಡದೊಂದು ಬಂಡೆಯನ್ನು ಎತ್ತಿ ಭೀಮನ ಕಡೆಗೆ ರಭಸದಿಂದ ಎಸೆದನು. ಮಹಾಪರಾಕ್ರಮಿಯಾದ ಭೀಮನು ಬಂಡೆಯೇ ಎದುರಾಗಿ ಬಂದರೂ ಒಂದು ಹೆಜ್ಜೆಯನ್ನೂ ಹಿಂದಿಡಲಿಲ್ಲ. ಬಂಡೆಯ ಏಟುಬಿದ್ದರೂ ಚಲಿಸದೇ ನಿಂತಿದ್ದ ಭೀಮನನ್ನು ಕಂಡು ರಾಕ್ಷಸನು ಮತ್ತಷ್ಟು ಕುಪಿತನಾಗಿ ಭಯಂಕರವಾಗಿ ಗರ್ಜಿಸುತ್ತಾ–ರಾಹುವು ಸೂರ್ಯದೇವನನ್ನು ನುಂಗಲು ಹೋಗುವಂತೆ–ಎರಡು ಕೈಗಳನ್ನೂ ಮೇಲೆತ್ತಿಕೊಂಡು ಭೀಮಸೇನನ ಸಮೀಪಕ್ಕೆ ಧಾವಿಸಿದನು. ಒಬ್ಬರು ಮತ್ತೊಬ್ಬರನ್ನು ಬಿಗಿಯಾಗಿ ತಬ್ಬಿಕೊಂಡು ದ್ವಂದ್ವಯುದ್ಧವನ್ನು ಆರಂಭಿಸಿದರು. ಅದನ್ನು ನೋಡಿದರೆ–ಮದಿಸಿದ ಎರಡು ಗೂಳಿಗಳು ಪರಸ್ಪರವಾಗಿ ಕಾಳಗವಾಡುತ್ತಿರುವಂತೆ ಅಥವಾ ಕೇವಲ ನಖ-ದಂತಗಳೇ ಆಯುಧವಾಗಿ ಉಳ್ಳ ಎರಡು ಮದಿಸಿದ ವ್ಯಾಘ್ರಗಳು ಕಾಳಗವಾಡುತ್ತಿರುವಂತೆ ಕಾಣುತ್ತಿದ್ದಿತು.

ಆ ಸಮಯದಲ್ಲಿ ಭೀಮನ ಪರಾಕ್ರಮವು ಇದ್ದಕ್ಕಿದ್ದಂತೆಯೇ ವೃದ್ಧಿಯಾಯಿತು. ಅದಕ್ಕೆ ಕಾರಣವೇನೆಂದರೆ : ಮೊದಲನೆಯದಾಗಿ–ದುರ್ಯೋ

ಧನನು ತಮಗೆ ಮಾಡಿದ ಅಪರಾಧದ ನೆನಪಾಯಿತು. ಅವನು ಎಷ್ಟೇ ಮಹಾಪರಾಧಮಾಡಿದ್ದರೂ ಅವನ ಮೇಲೆ ಆಗಲೇ ಸೇಡು ತೀರಿಸಿಕೊಳ್ಳಲು ಸಾಧ್ಯವಿರಲಿಲ್ಲ. ಭೀಮನಿಗೆ ಇದೊಂದು ಸದವಕಾಶವು ಸಿಕ್ಕಿದಂತಾಯಿತು. ಎರಡನೆಯದಾಗಿ–ದ್ರೌಪದಿಯು ಅವರಿಬ್ಬರ ದ್ವಂದ್ವಯುದ್ಧವನ್ನು ವೀಕ್ಷಿಸುತ್ತಾ ನಿಂತಿದ್ದಳು. ಅದರಿಂದಲೂ ಭೀಮನ ಪರಾಕ್ರಮವು ಇಮ್ಮಡಿಯಾಯಿತು. (ಸಾಮಾನ್ಯವಾಗಿ ಹೆಂಗಸರ ಎದುರಿನಲ್ಲಿ ಗಂಡಸರು ಅಪಮಾನವನ್ನು ಸಹಿಸಲಾರರು.)

ಎರಡು ಮದಗಜಗಳು ತಮ್ಮ ಗಂಡಸ್ಥಳಗಳನ್ನು ಮುಂದೆಮಾಡಿಕೊಂಡು ಹೋರಾಡುವಾಗ ಒಂದು ಆನೆಯು ಮತ್ತೊಂದು ಆನೆಯನ್ನು ಹಿಡಿಯುವಂತೆ–ಮೇಲೆ ಹೇಳಿದ ರೀತಿಯಲ್ಲಿ ವೃದ್ಧಿಹೊಂದಿದ ಬಲದಿಂದ ಭೀಮಸೇನನು ರಾಕ್ಷಸನನ್ನು ಬಲವಾಗಿ ಹಿಡಿದುಕೊಂಡನು. ಅದಕ್ಕೆ ಪ್ರತಿಯಾಗಿ ರಾಕ್ಷಸನೂ ಸಹ ತನ್ನ ಬಲವನ್ನೆಲ್ಲಾ ಪ್ರಯೋಗಿಸಿ ಭೀಮನನ್ನು ಮತ್ತೊಂದು ವರಸೆಯಿಂದ ಬಿಗಿಯಾಗಿ ಹಿಡಿದುಕೊಂಡನು. ಮಹಾಪರಾಕ್ರಮಿಯಾದ ಭೀಮನು ಅವನ ಹಿಡಿತದಿಂದ ಒಡನೆಯೇ ಬಿಡಿಸಿಕೊಂಡವನಾಗಿ ರಾಕ್ಷಸನನ್ನು ರಭಸದಿಂದ ನೆಲಕ್ಕೆ ಅಪ್ಪಳಿಸಿದನು. ಅವರಿಬ್ಬರ ತೋಳು ತಟ್ಟುವುದರಿಂದಾದ ಮಹಾಧ್ವನಿಯು ಉರಿಯುತ್ತಿರುವ ಬಿದಿರು ಒಡೆಯುವಾಗ ಉಂಟಾಗುವ ಶಬ್ದವನ್ನು ಅನುಕರಿಸುತ್ತಿದ್ದಿತು. ಬಳಿಕ ಭೀಮನು ರಾಕ್ಷಸನನ್ನು ಕೆಳಕ್ಕೆ ಕೆಡವಿ ಅವನ ಸೊಂಟವನ್ನು ಹಿಡಿದು ಮೇಲೆತ್ತಿ–ಬಿರುಗಾಳಿಯು ವೃಕ್ಷವನ್ನು ಅಳ್ಳಾಡಿಸುವಂತೆ–ರಾಕ್ಷಸನನ್ನು ಗರ-ಗರನೆ ತಿರುಗಿಸಿದನು. ಆ ಹೊತ್ತಿಗಾಗಲೇ ರಾಕ್ಷಸನು ಪೂರ್ಣವಾಗಿ ಬಳಲಿದ್ದರೂ ತನ್ನ ಶಕ್ತಿಯೆಲ್ಲವನ್ನೂ ಪ್ರಯೋಗಿಸಿ ಪುನಃ ಭೀಮನನ್ನು ಬಲವಾಗಿ ಬಾಹುಪಾಶದಿಂದ ಬಿಗಿದನು. ರಾಕ್ಷಸನು ಬಳಲಿರುವನೆಂದು ಭೀಮನಿಗೆ ತಿಳಿಯಿತು. ಒಡನೆಯೇ ಭೀಮನು ಸುದೀರ್ಘವಾದ ತನ್ನ ಬಾಹುಗಳಿಂದ–ದುಷ್ಟಮೃಗವೊಂದನ್ನು ಹಗ್ಗದಿಂದ ಬಿಗಿಯುವಂತೆ–ಕಿರ್ಮೀರನನ್ನು ಬಿಗಿದನು. ಅದರಿಂದಾಗಿ ರಾಕ್ಷಸನಿಗೆ ಉಸಿರಾಡಲೂ ಕಷ್ಟವಾಯಿತು. ಒಡೆದುಹೋದ ಮದ್ದಳೆಯಂತೆ ಅಪಸ್ವರದ ಧ್ವನಿಯಲ್ಲಿ ಗಟ್ಟಿಯಾಗಿ ಅರಚಿಕೊಂಡನು. ಅವನು ನಿಶ್ಚೇತನನಾಗುವವರೆಗೂ ಭೀಮನು ಅವನ ಸೊಂಟವನ್ನು ಹಿಡಿದು ಗರ-

ಗರನೆ ತಿರುಗಿಸುತ್ತಲೇ ಇದ್ದನು. ರಾಕ್ಷಸನ ಶಕ್ತಿಯು ಪೂರ್ಣವಾಗಿ ಕುಂದಿತೆಂದು ತಿಳಿದೊಡನೆಯೇ ಅವನನ್ನು ನೆಲಕ್ಕಪ್ಪಳಿಸಿ–ಪ್ರಾಣಿಯನ್ನು ವಧೆ ಮಾಡುವಂತೆ–ಭೀಮನು ಕಿರ್ಮೀರನ ವಧೆಮಾಡಿದನು. ಭೀಮನು ತನ್ನ ಮಂಡಿಯನ್ನು ಕಿರ್ಮೀರನ ಸೊಂಟದ ಮೇಲೆ ಊರಿ, ಅವನ ಕುತ್ತಿಗೆಯನ್ನು



ತನ್ನ ಕೈಗಳಿಂದ ಬಲವಾಗಿ ಹಿಸುಕಿದನು. ಮುಡಿಯನ್ನು ಹಿಡಿದು ನೆಲದ ಮೇಲೆ ಸೆಳೆದಾಡಿದನು. ಅದರಿಂದ ಕಿರ್ಮೀರನ ಸರ್ವಾಂಗಗಳೂ ಜರ್ಝರಿತವಾದುವು. ಕಣ್ಣುಗುಡ್ಡೆಗಳು ಹೊರಬಂದುವು. ಪ್ರಾಣಪಕ್ಷಿಯು ಹಾರಿಹೋಯಿತು. ಕಿರ್ಮೀರನನ್ನು ಎಳೆದಾಡುತ್ತಾ ಭೀಮನು ಹೇಳಿದನು :

"ಕಡುಪಾಪಿಯೇ! ನೀನು ಯಮಲೋಕಕ್ಕೆ ಹೋದರೂ ಆ ಬಕ-ಹಿಡಿಂಬರ ಕಣ್ಣೀರನ್ನು ಒರೆಸಲು ನಿನ್ನಿಂದ ಸಾಧ್ಯವಾಗಲಿಲ್ಲ. ಏಕೆಂದರೆ ನೀನು ಶತ್ರುವನ್ನು ನಾಶಮಾಡದೆಯೇ ಪರಲೋಕಕ್ಕೆ ಹೋದೆಯಲ್ಲವೇ!"

ಧರ್ಮರಾಜನು ಭೀಮನನ್ನು ಬಹುವಾಗಿ ಶ್ಲಾಘಿಸಿದನು. ಕಿರ್ಮೀರನ ವಧೆಯಾದನಂತರ ಪಾಂಡವರೆಲ್ಲರೂ ದ್ರೌಪದಿಯಿಂದೊಡಗೂಡಿ ಕಾಮ್ಯಕ ವನವನ್ನು ಪ್ರವೇಶಿಸಿದರು.

ಧೃತರಾಷ್ಟ್ರ! ನಾನು ಮೇಲೆ ವಿವರಿಸಿದ ರೀತಿಯಲ್ಲಿ ಧರ್ಮಜನ ಅನುಜ್ಞೆಯಿಂದ ಭೀಮನು ಕಿರ್ಮೀರನ ವಧೆಮಾಡಿದನು. ಆ ವನವು ನಿಷ್ಕಂಟಕವಾದನಂತರ, ಅಜೇಯನಾದ ಯುಧಿಷ್ಠಿರನು ಆ ವನದಲ್ಲಿಯೇ ಬಹುಕಾಲ ವಾಸವಾಗಿದ್ದನು. ಪಾಂಡವರೆಲ್ಲರೂ ದ್ರೌಪದಿಯನ್ನು ಸಂತೈಸುತ್ತಾ, ಭೀಮನ ಪರಾಕ್ರಮವನ್ನು ಬಾರಿ-ಬಾರಿಗೂ ಶ್ಲಾಘಿಸುತ್ತಾ ಕಾಲ ಕಳೆಯುತ್ತಿದ್ದರು. ಅದೇ ಮಾರ್ಗವಾಗಿ ಹೋಗುತ್ತಿದ್ದಾಗ ರಾಕ್ಷಸನ ಶವದ ಅವಶೇಷಗಳನ್ನು ನಾನೂ ಕಂಡೆನು. ಕಾಮ್ಯಕವನದಲ್ಲಿ ಕಿರ್ಮೀರವಧೆಯ ವಿವರಣೆಯನ್ನು ನಾನು ಧರ್ಮಜನ ಸುತ್ತಲೂ ಕುಳಿತಿದ್ದ ಬ್ರಾಹ್ಮಣರಿಂದ ತಿಳಿದೆನು. ನಾನಿನ್ನು ಹೋಗಿಬರುವೆನು, ಮಹಾರಾಜ!"–ಎಂದು ಹೇಳಿ ವಿದುರನು ತನ್ನ ಮನೆಗೆ ಹೊರಟುಹೋದನು.

ಧೃತರಾಷ್ಟ್ರನು–ಕಿರ್ಮೀರವಧೆಯ ವಿವರವನ್ನು ಕೇಳಿ ಭೀಮನ ಪರಾಕ್ರಮವನ್ನು ನೆನೆದು, ದೀರ್ಘವಾದ ನಿಟ್ಟುಸಿರುಬಿಡುತ್ತಾ ಚಿಂತೆಯಲ್ಲಿ ಮಗ್ನನಾದನು."

೧೧ನೆಯ ಅಧ್ಯಾಯವು ಮುಗಿಯಿತು.

೧೨ನೆಯ ಅಧ್ಯಾಯ ಅರ್ಜುನಾಭಿಗಮನಪರ್ವ

## ಅರ್ಜುನ–ದ್ರೌಪದಿಯರು ಶ್ರೀಕೃಷ್ಣನನ್ನು ಸ್ತುತಿಸಿದುದು : ದ್ರೌಪದಿಯು ಶ್ರೀಕೃಷ್ಣನಲ್ಲಿ ತನ್ನ ಅಪಮಾನ–ದುಃಖಗಳನ್ನು ತೋಡಿಕೊಂಡುದು : ಕೃಷ್ಣಾರ್ಜುನ–ಧೃಷ್ಟದ್ಯುಮ್ನರು ದ್ರೌಪದಿಯನ್ನು ಸಮಾಧಾನಪಡಿಸಿದುದು

ವೈಶಂಪಾಯನರು ಹೇಳುತ್ತಾರೆ :

"ಜನಮೇಜಯ! ಪಾಂಡವರು ದ್ಯೂತದ ಕಾರಣದಿಂದ ವನವಾಸ

ಮಾಡುತ್ತಿರುವರೆಂಬ ವಾರ್ತೆಯು ದೇಶ-ವಿದೇಶಗಳಲ್ಲಿ ಪ್ರತಿಧ್ವನಿತ ವಾಯಿತು. ಆ ವಾರ್ತೆಯನ್ನು ಕೇಳಿದೊಡನೆಯೇ ಭೋಜರೂ, ವೃಷ್ಣಿಗಳೂ, ಅಂಧಕರೂ, ದುಃಖಸಂತಪ್ತರಾಗಿದ್ದ ಪಾಂಡವರನ್ನು ಕಾಣಲು ಕಾಮ್ಯಕವನಕ್ಕೆ ಬಂದರು. ದ್ರುಪದನ ಜ್ಞಾತಿ-ಬಾಂಧವರು, ಧೃಷ್ಟದ್ಯುಮ್ನ, ಚೇದಿರಾಜನಾದ ಧೃಷ್ಟಕೇತು, ಪ್ರಸಿದ್ಧರಾದ ಕೇಕಯಸಹೋದರರು–ಇವರೆಲ್ಲರೂ



ಧರ್ಮಾತ್ಮನಾದ ಯುಧಿಷ್ಠಿರನನ್ನು ನೋಡುವ ಸಲುವಾಗಿ ಅಲ್ಲಿಗೆ ಬಂದರು. ಬಂದವರೆಲ್ಲರೂ ಕೋಪಗೊಂಡವರಾಗಿ ದುರ್ಯೋಧನನನ್ನು ತೆಗಳುತ್ತಿದ್ದರು. ಪಾಂಡವರ ಇಚ್ಛೆಯನ್ನು ನೆರವೇರಿಸಲು ಕೂಡ ಸಿದ್ಧರಾಗಿದ್ದರು. '**ಕಿಂ ಕುರ್ಮಃ**'–'ಏನು ಮಾಡೋಣ? ಏನು ಮಾಡಬೇಕು?'–ಎಂದು ಪದೇ-ಪದೇ ಯುಧಿಷ್ಠಿರನನ್ನು ಕೇಳುತ್ತಿದ್ದರು. ಶ್ರೀಕೃಷ್ಣನನ್ನು ಮುಂದಿಟ್ಟುಕೊಂಡು ಆ

ಕ್ಷತ್ರಿಯಶ್ರೇಷ್ಠರು ಧರ್ಮರಾಜನ ಸುತ್ತಲೂ ಕುಳಿತರು. ಶ್ರೀಕೃಷ್ಣನು ಪಾಂಡವರ ಆಗಿನ ಅವಸ್ಥೆಯನ್ನು ನೋಡಿ, ಬಹುದುಃಖಿತನಾಗಿ ಯುಧಿಷ್ಠಿರನಿಗೆ ನಮಸ್ಕರಿಸಿ ಹೇಳಿದನು :

"ನಿಶ್ಚಯವಾಗಿಯೂ ಈ ಭೂಮಿಯು ದುರ್ಯೋಧನ-ಕರ್ಣ-ದುಃಶಾಸನ-ಶಕುನಿಗಳ ರಕ್ತವನ್ನು ಹೀರಿಯೇ ತೀರುವುದು. ಅವರನ್ನು ಯುದ್ಧದಲ್ಲಿ ಕೊಂದು, ಅವರೆಲ್ಲರ ಅನುಯಾಯಿಗಳನ್ನೂ ಯುದ್ಧದಲ್ಲಿ ಸೋಲಿಸಿ, ನಾವು ಧರ್ಮಾತ್ಮನಾದ ಯುಧಿಷ್ಠಿರನಿಗೆ ಪಟ್ಟಾಭಿಷೇಕವನ್ನು ಮಾಡೋಣ.

ನಿಕೃತ್ಯೋಪಚರನ್ವಧ್ಯ ಏಷ ಧರ್ಮಃ ಸನಾತನಃ ॥೭॥

ಯಾರು ಛಲದಿಂದ (ಕಪಟದಿಂದ) ಕಾರ್ಯಮಾಡುವರೋ ಅವರು ವಧೆಗೆ ಅರ್ಹರು. ಇದೇ ಸನಾತನಧರ್ಮ."

ಕುಂತೀಪುತ್ರರಿಗೊದಗಿದ ಅಪಮಾನಕ್ಕಾಗಿ ಶ್ರೀಕೃಷ್ಣನು ಕುಪಿತನಾಗಿ, ಪ್ರಜಾಕೋಟಿಯನ್ನೇ ನಿರ್ಮೂಲಮಾಡುವ ಭಾವವನ್ನು ಹೊಂದಿದುದನ್ನು ಕಂಡು ಕಿರೀಟಿಯು ಅವನನ್ನು ಸಮಾಧಾನಪಡಿಸುತ್ತಾ, ಪರಮಪುರುಷನಾದ, ಅಪ್ರಮೇಯನಾದ, ಸತ್ಯಸ್ವರೂಪನಾದ, ಅಮಿತವಾದ ತೇಜಸ್ಸಿನಿಂದ ಬೆಳಗುತ್ತಿದ್ದ, ಬ್ರಹ್ಮನಿಗೆ ಒಡೆಯನಾದ, ಲೋಕನಾಥನಾದ, ಮಹಾವಿಷ್ಣುವಿನ (ಶ್ರೀಕೃಷ್ಣನ) ಅವತಾರಗಳ ಪರಮಾದ್ಭುತಕಾರ್ಯಗಳನ್ನು ಹೇಳಿಕೊಂಡು ಸ್ತೋತ್ರಮಾಡಿದನು.

## ಅರ್ಜುನಕೃತಶ್ರೀಕೃಷ್ಣಸ್ತೋತ್ರಮ್

ದಶ ವರ್ಷಸಹಸ್ರಾಣಿ ಯತ್ರ ಸಾಯಂಗೃಹೋ ಮುನಿಃ ।
ವ್ಯಚರಸ್ತ್ವಂ ಪುರಾ ಕೃಷ್ಣ ಪರ್ವತೇ ಗನ್ಧಮಾದನೇ ॥೧೧॥

ದಶ ವರ್ಷಸಹಸ್ರಾಣಿ ದಶ ವರ್ಷಶತಾನಿ ಚ ।
ಪುಷ್ಕರೇಷ್ವವಸಃ ಕೃಷ್ಣ ತ್ವಮಪೋ ಭಕ್ಷಯನ್ಪುರಾ ॥೧೨॥

ಊರ್ಧ್ವಬಾಹುರ್ವಿಶಾಲಾಯಾಂ ಬದರ್ಯಾಂ ಮಧುಸೂದನ ।
ಅತಿಷ್ಠ ಏಕಪಾದೇನ ವಾಯುಭಕ್ಷಃ ಶತಂ ಸಮಾಃ ॥೧೩॥

ಅವಕೃಷ್ಟೋತ್ತರಾಸಙ್ಗಃ ಕೃಶೋ ಧಮನಿಸಂತತಃ ।
ಆಸೀಃ ಕೃಷ್ಣ ಸರಸ್ವತ್ಯಾಂ ಸತ್ರೇ ದ್ವಾದಶವಾರ್ಷಿಕೇ ॥೧೪॥

ಪ್ರಭಾಸಮಪ್ಯಥಾಸಾದ್ಯ ತೀರ್ಥಂ ಪುಣ್ಯಜನೋಚಿತಮ್ ।
ತಥಾ ಕೃಷ್ಣ ಮಹಾತೇಜಾ ದಿವ್ಯಂ ವರ್ಷಸಹಸ್ರಕಮ್ ॥೧೫॥

ಅತಿಷ್ಠಸ್ತ್ವಮಥೈಕೇನ ಪಾದೇನ ನಿಯಮಸ್ಥಿತಃ ।
ಲೋಕಪ್ರವೃತ್ತಿಹೇತುಸ್ತ್ವಮಿತಿ ವ್ಯಾಸೋ ಮಮಾಬ್ರವೀತ್ ॥೧೬॥

ಕ್ಷೇತ್ರಜ್ಞಃ ಸರ್ವಭೂತಾನಾಮಾದಿರನ್ತಶ್ಚ ಕೇಶವ ।
ನಿಧಾನಂ ತಪಸಾಂ ಕೃಷ್ಣ ಯಜ್ಞಸ್ತ್ವಂ ಚ ಸನಾತನಃ ॥೧೭॥

ನಿಹತ್ಯ ನರಕಂ ಭೌಮಮಾಹೃತ್ಯ ಮಣಿಕುಣ್ಡಲೇ ।
ಪ್ರಥಮೋತ್ಪತಿತಂ ಕೃಷ್ಣ ಮೇಧ್ಯಮಶ್ವಮವಾಸೃಜಃ ॥೧೮॥

ಕೃತ್ವಾ ತತ್ಕರ್ಮ ಲೋಕಾನಾಮೃಷಭಃ ಸರ್ವಲೋಕಜಿತ್ ।
ಅವಧೀಸ್ತ್ವಂ ರಣೇ ಸರ್ವಾನ್ಸಮೇತಾನ್ದೈತ್ಯದಾನವಾನ್ ॥೧೯॥

ತತಃ ಸರ್ವೇಶ್ವರತ್ವಂ ಚ ಸಮ್ಪ್ರದಾಯ ಶಚೀಪತೇಃ ।
ಮಾನುಷೇಷು ಮಹಾಬಾಹೋ ಪ್ರಾದುರ್ಭೂತೋಽಸಿ ಕೇಶವ ॥೨೦॥

ಸ ತ್ವಂ ನಾರಾಯಣೋ ಭೂತ್ವಾ ಹರಿರಾಸೀಃ ಪರಂತಪ ।
ಬ್ರಹ್ಮಾ ಸೋಮಶ್ಚ ಸೂರ್ಯಶ್ಚ ಧರ್ಮೋ ಧಾತಾ ಯಮೋಽನಲಃ ॥

ವಾಯುರ್ವೈಶ್ರವಣೋ ರುದ್ರಃ ಕಾಲಃ ಖಂ ಪೃಥಿವೀ ದಿಶಃ ।
ಅಜಶ್ಚರಾಚರಗುರುಃ ಸ್ರಷ್ಟಾ ತ್ವಂ ಪುರುಷೋತ್ತಮ ॥೨೨॥

ಪರಾಯಣಂ ದೇವಮೂರ್ಧಾ ಕ್ರತುಭಿರ್ಮಧುಸೂದನ ।
ಅಯಜೋ ಭೂರಿತೇಜಾ ವೈ ಕೃಷ್ಣ ಚೈತ್ರರಥೇ ವನೇ ॥೨೩॥

ಶತಂ ಶತಸಹಸ್ರಾಣಿ ಸುವರ್ಣಸ್ಯ ಜನಾರ್ದನ ।
ಏಕೈಕಸ್ಮಿಂಸ್ತದಾ ಯಜ್ಞೇ ಪರಿಪೂರ್ಣಾನಿ ಭಾಗಶಃ ॥೨೪॥

ಅದಿತೇರಪಿ ಪುತ್ರತ್ವಮೇತ್ಯ ಯಾದವನನ್ದನ ।
ತ್ವಂ ವಿಷ್ಣುರಿತಿ ವಿಖ್ಯಾತ ಇನ್ದ್ರಾದವರಜೋ ವಿಭುಃ ॥೨೫॥

ಶಿಶುರ್ಭೂತ್ವಾ ದಿವಂ ಖಂ ಚ ಪೃಥಿವೀಂ ಚ ಪರಂತಪ ।
ತ್ರಿಭಿರ್ವಿಕ್ರಮಣೈಃ ಕೃಷ್ಣ ಕ್ರಾನ್ತವಾನಸಿ ತೇಜಸಾ ॥೨೬॥

ಸಮ್ಪ್ರಾಪ್ಯ ದಿವಮಾಕಾಶಮಾದಿತ್ಯಸ್ಯನ್ದನೇ ಸ್ಥಿತಃ ।
ಅತ್ಯರೋಚಶ್ಚ ಭೂತಾತ್ಮನ್ಭಾಸ್ಕರಂ ಸ್ವೇನ ತೇಜಸಾ ॥೨೭॥

ಪ್ರಾದುರ್ಭಾವಸಹಸ್ರೇಷು ತೇಷು ತೇಷು ತ್ವಯಾ ವಿಭೋ ।
ಅಧರ್ಮರುಚಯಃ ಕೃಷ್ಣ ನಿಹತಾಃ ಶತಶೋಽಸುರಾಃ ॥೨೮॥

ಸಾದಿತಾ ಮೌರವಾಃ ಪಾಶಾ ನಿಸುನ್ದನರಕೌ ಹತೌ ।
ಕೃತಃ ಕ್ಷೇಮಃ ಪುನಃ ಪನ್ಥಾಃ ಪುರಂ ಪ್ರಾಗ್ಜ್ಯೋತಿಷಂ ಪ್ರತಿ ॥೨೯॥

ಜಾರೂಥ್ಯಾಮಾಹುತಿಃ ಕ್ರಾಥಃ ಶಿಶುಪಾಲೋ ಜನೈಃ ಸಹ ।
ಜರಾಸಂಧಶ್ಚ ಶೈಬ್ಯಶ್ಚ ಶತಧನ್ವಾ ಚ ನಿರ್ಜಿತಃ ॥೩೦॥

ತಥಾ ಪರ್ಜನ್ಯಘೋಷೇಣ ರಥೇನಾದಿತ್ಯವರ್ಚಸಾ ।
ಅವಾಪ್ಸೀರ್ಮಹಿಷೀಂ ಭೋಜ್ಯಾಂ ರಣೇ ನಿರ್ಜಿತ್ಯ ರುಕ್ಮಿಣಮ್ ॥೩೧॥

ಇನ್ದ್ರದ್ಯುಮ್ನೋ ಹತಃ ಕೋಪಾದ್ಯವನಶ್ಚ ಕಸೇರುಮಾನ್ ।
ಹತಃ ಸೌಭಪತಿಃ ಶಾಲ್ವಸ್ತ್ವಯಾ ಸೌಭಂ ಚ ಪಾತಿತಮ್ ॥೩೨॥

ಏವಮೇತೇ ಯುಧಿ ಹತಾ ಭೂಯಶ್ಚಾನ್ಯಾಞ್ಛೃಣುಷ್ವ ಹ ।
ಇರಾವತ್ಯಾಂ ಹತೋ ಭೋಜಃ ಕಾರ್ತವೀರ್ಯಸಮೋ ಯುಧಿ ॥೩೩॥

ಗೋಪತಿಸ್ತಾಲಕೇತುಶ್ಚ ತ್ವಯಾ ವಿನಿಹತಾವುಭೌ ।
ತಾಂ ಚ ಭೋಗವತೀಂ ಪುಣ್ಯಾಮೃಷಿಕಾನ್ತಾಂ ಜನಾರ್ದನ ॥೩೪॥

ದ್ವಾರಕಾಮಾತ್ಮಸಾತ್ಕೃತ್ವಾ ಸಮುದ್ರಂ ಗಮಯಿಷ್ಯಸಿ ।
ನ ಕ್ರೋಧೋ ನ ಚ ಮಾತ್ಸರ್ಯಂ ನಾನೃತಂ ಮಧುಸೂದನ ।
ತ್ವಯಿ ತಿಷ್ಠತಿ ದಾಶಾರ್ಹ ನ ನೃಶಂಸ್ಯಂ ಕುತೋಽನೃಜು ॥೩೫॥

ಆಸೀನಂ ಚೈತ್ಯಮಧ್ಯೇ ತ್ವಾಂ ದೀಪ್ಯಮಾನಂ ಸ್ವತೇಜಸಾ ।
ಆಗಮ್ಯ ಋಷಯಃ ಸರ್ವೇಽಯಾಚನ್ತಾಭಯಮಚ್ಯುತ ॥೩೬॥

ಯುಗಾನ್ತೇ ಸರ್ವಭೂತಾನಿ ಸಂಕ್ಷಿಪ್ಯ ಮಧುಸೂದನ ।
ಆತ್ಮನ್ಯೇವಾತ್ಮಸಾತ್ಕೃತ್ವಾ ಜಗದಾಸೀಃ ಪರಂತಪ ॥೩೭॥

ಯುಗಾದೌ ತವ ವಾರ್ಷ್ಣೇಯ ನಾಭಿಪದ್ಮಾದಜಾಯತ ।
ಬ್ರಹ್ಮಾ ಚರಾಚರಗುರುರ್ಯಸ್ಯೇದಂ ಸಕಲಂ ಜಗತ್ ॥೩೮॥

**ತಂ ಹನ್ತುಮುದ್ಯತೌ ಘೋರೌ ದಾನವೌ ಮಧುಕೈಟಭೌ ।**
**ತಯೋರ್ವ್ಯತಿಕ್ರಮಂ ದೃಷ್ಟ್ವಾ ಕ್ರುದ್ಧಸ್ಯ ಭವತೋ ಹರೇ ॥೩೯॥**

**ಲಲಾಟಾಜ್ಜಾತವಾಞ್ಛಮ್ಭುಃ ಶೂಲಪಾಣಿಸ್ತ್ರಿಲೋಚನಃ ।**
**ಇತ್ಥಂ ತಾವಪಿ ದೇವೇಶೌ ತ್ವಚ್ಛರೀರಸಮುದ್ಭವೌ ॥೪೦॥**

**ತ್ವನ್ನಿಯೋಗಕರಾವೇತಾವಿತಿ ಮೇ ನಾರದೋಽಬ್ರವೀತ್ ।**
**ತಥಾ ನಾರಾಯಣ ಪುರಾ ಕ್ರತುಭಿರ್ಭೂರಿದಕ್ಷಿಣೈಃ ।**
**ಇಷ್ಟವಾಂಸ್ತ್ವಂ ಮಹಾಸತ್ರಂ ಕೃಷ್ಣ ಚೈತ್ರರಥೇ ವನೇ ॥೪೧॥**

**ನೈವಂ ಪರೇ ನಾಪರೇ ವಾ ಕರಿಷ್ಯನ್ತಿ ಕೃತಾನಿ ವಾ ।**
**ಯಾನಿ ಕರ್ಮಾಣಿ ದೇವ ತ್ವಂ ಬಾಲ ಏವ ಮಹಾಬಲಃ ॥೪೨॥**

**ಕೃತವಾನ್ಪುಣ್ಡರೀಕಾಕ್ಷ ಬಲದೇವಸಹಾಯವಾನ್ ।**
**ಕೈಲಾಸಭವನೇ ಚಾಪಿ ಬ್ರಾಹ್ಮಣೈರ್ನ್ಯವಸಃ ಸಹ ॥೪೩॥**

"ಓ ಕೃಷ್ಣ! ಮಹಾನುಭಾವ! ನಿನ್ನ ಮಹಿಮೆಯು ಅಪಾರವಾದುದು. ಹಿಂದೆ ನೀನು ಗಂಧಮಾದನಪರ್ವತದಲ್ಲಿ ಹತ್ತು ಸಾವಿರ ವರ್ಷಗಳ ಕಾಲ ಸಾಯಂಗೃಹಮುನಿಯಾಗಿ ಸಂಚರಿಸುತ್ತಿದ್ದೆ. ಆ ಸಮಯದಲ್ಲಿ ನಿನಗೆ ಸಾಯಂಕಾಲವಾದೆಡೆಯಲ್ಲಿ ಬಿಡಾರವಾಗುತ್ತಿದ್ದಿತು. (ಸಂನ್ಯಾಸಿಗಳು, ಋಷಿಗಳು ಅಥವಾ ಮುನಿಗಳಿಗೆ ಇದೊಂದು ವಿಧವಾದ ತಪಸ್ಸು. ಇವರು ನಿಂತೆಡೆಯಲ್ಲಿ ನಿಲ್ಲುವುದಿಲ್ಲ. ಯಾವಾಗಲೂ ಸಂಚಾರಮಾಡುತ್ತಲೇ ಇರುತ್ತಾರೆ. ಸಾಯಂಕಾಲವಾಗುತ್ತಲೇ ಸಂಚಾರವನ್ನು ನಿಲ್ಲಿಸುತ್ತಾರೆ. ಸಂಚಾರಮಾಡುವಾಗ ಸಾಯಂಕಾಲದ ವೇಳೆಗೆ ಊರಾದರೂ ಸಿಕ್ಕಬಹುದು ; ಕಾಡಾದರೂ ಸಿಕ್ಕಬಹುದು–ಅದೇ ಅವರ ನಿವಾಸಸ್ಥಾನವಾಗಿರುತ್ತದೆ. ಇಂತಹವರನ್ನು 'ಯತ್ರಸಾಯಂಗೃಹರು' ಎಂದು ಕರೆಯುತ್ತಾರೆ.) ಕೃಷ್ಣ! ನೀನು ನೀರನ್ನು ಮಾತ್ರವೇ ಕುಡಿದುಕೊಂಡು ಪುಷ್ಕರಸರೋವರದ ಸಮೀಪದಲ್ಲಿ ಹನ್ನೊಂದು ಸಾವಿರ ವರ್ಷಗಳ ಕಾಲ ತಪಸ್ಸನ್ನು ಮಾಡುತ್ತಲಿದ್ದೆ. ಅನಂತರದಲ್ಲಿ ಕೇವಲ ವಾಯುಭಕ್ಷನಾಗಿ ಬದರಿಕಾಶ್ರಮದಲ್ಲಿ ಎರಡು ಕೈಗಳನ್ನೂ ಮೇಲೆತ್ತಿ ಏಕಪಾದದಲ್ಲಿ ನಿಂತು ನೂರು ವರ್ಷ ತಪಸ್ಸನ್ನು ಮಾಡಿದೆ. ಕೃಷ್ಣ! ನೀನು ನಿನ್ನ ಉತ್ತರೀಯವನ್ನೂ ತೆಗೆದುಹಾಕಿ, ಬಹಳ

ಕೃಶವಾಗಿ ಹೋಗಿದ್ದೆ. ನಿನ್ನ ಆ ಶರೀರದಲ್ಲಿಯೇ ಹನ್ನೆರಡು ವರ್ಷಗಳ ಕಾಲ ಸರಸ್ವತೀನದಿಯ ದಂಡೆಯಲ್ಲಿ ಕುಳಿತು ಮಹಾಯಾಗವನ್ನು ಮಾಡಿದೆ.

ಓ ಕೃಷ್ಣ! ಅಲ್ಲಿಂದ ಮುಂದೆ ನೀನು ಪುಣ್ಯಪುರುಷರ ನಿವಾಸಸ್ಥಾನವಾದ ಪ್ರಭಾಸಕ್ಷೇತ್ರಕ್ಕೆ ಹೋಗಿ ಅಲ್ಲಿ ವ್ರತನಿಷ್ಠನಾಗಿ ಒಂದು ಸಾವಿರ ವರ್ಷಗಳ ಕಾಲ ಏಕಪಾದದಲ್ಲಿ ನಿಂತು ತಪಸ್ಸನ್ನು ಮಾಡಿದೆ. ಲೋಕಪ್ರವೃತ್ತಿಗೆ ನೀನೇ ಕಾರಣನೆಂದು ವ್ಯಾಸರು ಹೇಳಿದರು. ಕೃಷ್ಣ! ಲೋಕಗಳ ಆದಿಯೂ ನೀನೇ-ಅಂತ್ಯನೂ ನೀನೇ ಆಗಿರುತ್ತೀಯೆ. ತಪಸ್ಸುಗಳಿಗೆ ನೀನು ನಿಧಿಪ್ರಾಯನಾಗಿರುವೆ. ಯಜ್ಞಸ್ವರೂಪನೂ ನೀನೇ. ನೀನು ಸನಾತನ ಮತ್ತು ಅನಾದಿ. ಭೂದೇವಿಯ ಮಗನಾದ ನರಕಾಸುರನನ್ನು ಕೊಂದು, ಅದಿತಿಯ ಕರ್ಣಕುಂಡಲವನ್ನು ಪಡೆದು, ನಿನ್ನ ಸೃಷ್ಟಿಗೆ ಆದಿಭೂತವಾದ, ಅಶ್ವಮೇಧಯೋಗ್ಯವಾದ ಕುದುರೆಯನ್ನು ಸೃಷ್ಟಿಸಿದೆ. ಕುದುರೆಯನ್ನು ಲೋಕಸಂಚಾರಕ್ಕೆ ಬಿಟ್ಟು ಅದನ್ನು ಕಟ್ಟಿಹಾಕಿದ ದೈತ್ಯ-ದಾನವರನ್ನು ಯುದ್ಧದಲ್ಲಿ ಸಂಹರಿಸಿದೆ. ಸರ್ವಲೋಕಗಳನ್ನೂ ಜಯಿಸಿ ಅಶ್ವಮೇಧಯಾಗವನ್ನು ಮಾಡಿದುದರಿಂದ ನಿನಗೆ ಪ್ರಾಪ್ತವಾದ ಸರ್ವೇಶ್ವರತ್ವವನ್ನು ಇಂದ್ರನಿಗೆ ವಹಿಸಿ, ನೀನು ಭೂಮಿಯಲ್ಲಿ ಜನ್ಮತಾಳಿರುವೆ. ಅಂತಹ ಕ್ಷೇತ್ರಜ್ಞನಾದ ನೀನು ವೃಕ್ಷಾಂಕುರಬೀಜಸ್ಥಾನೀಯನಾಗಿಯೂ ವಿರಾಟ್ಸೂತ್ರಾಂತರ್ಯಾಮಿರೂಪನಾಗಿಯೂ ಅಥವಾ ಜಲಶಾಯಿಯಾಗಿ ( ನಾರಾಯಣನಾಗಿ ) ಪರಿಣತ ಬೀಜಸಹಸ್ರಗರ್ಭಸ್ಥಾನೀಯನಾದೆ ಅಥವಾ ಸರ್ವವ್ಯಾಪಕನಾದೆ. ( ಹರಿಯಾದೆ.) ಬ್ರಹ್ಮ, ಸೋಮ, ಸೂರ್ಯ, ಧರ್ಮ, ಧಾತಾ, ಯಮ, ಅನಲ, ವಾಯು, ವೈಶ್ರವಣ, ರುದ್ರ, ಕಾಲ, ಆಕಾಶ, ಪೃಥಿವೀ, ದಿಕ್ಕುಗಳು–ಇವೆಲ್ಲವೂ ನೀನೇ ಆಗಿರುವೆ. ನೀನು ಜನ್ಮರಹಿತನು. ಚರಾಚರಗಳಿಗೆ ಗುರುವು (ಶ್ರೇಷ್ಠನು.) ನೀನೇ ಸೃಷ್ಟಿಕರ್ತನು. ಪುರುಷೋತ್ತಮನು. ಸರ್ವೋತ್ಕೃಷ್ಟ ಪ್ರಾಪ್ತಿಗೆ ನೀನೇ ಕಾರಣನು. ದೇವಶ್ರೇಷ್ಠನು ನೀನು. ಮಹಾತೇಜಸ್ವಿಯಾದ ನೀನು ಚೈತ್ರರಥವೆಂಬ ವನದಲ್ಲಿ ಅನೇಕಯಾಗಗಳನ್ನು ಮಾಡಿ, ಒಂದೊಂದು ಯಜ್ಞದಲ್ಲಿಯೂ ಪ್ರತ್ಯೇಕವಾಗಿ ಒಂದೊಂದು ಕೋಟಿ ಸುವರ್ಣನಾಣ್ಯಗಳನ್ನು ದಕ್ಷಿಣಾರೂಪವಾಗಿ ಕೊಟ್ಟಿರುವೆ. ಭೋ ಯದು

ನಂದನ! ನೀನು ಅದಿತಿಯ ಪುತ್ರನಾಗಿ ಹುಟ್ಟಿ ವಿಷ್ಣುವೆಂಬ ಅಭಿಧಾನವನ್ನು ಪಡೆದೆ. ಇಂದ್ರನ ಅನಂತರದಲ್ಲಿ ನೀನು ಹುಟ್ಟಿದೆಯಾದ್ದರಿಂದ ನಿನ್ನನ್ನು ಇಂದ್ರಾವರಜನೆಂದೂ ಕರೆಯುವರು. ಶತ್ರುನಿಷೂದನನೇ! ಶಿಶುವಾಗಿ (ವಾಮನನಾಗಿ) ಮೂರು ಹೆಜ್ಜೆಗಳಿಂದ ಸ್ವರ್ಗಾಕಾಶಪೃಥ್ವಿಗಳನ್ನೂ ಆಕ್ರಮಿಸಿದೆ. ನೀನು ಸೂರ್ಯನ ರಥದಲ್ಲಿ ಕುಳಿತು ದ್ಯುಲೋಕ ಮತ್ತು ಆಕಾಶಲೋಕಗಳನ್ನು ಆವರಿಸಿಕೊಂಡವನಾಗಿ, ಸೂರ್ಯನ ತೇಜಸ್ಸನ್ನೂ ನಿನ್ನ ತೇಜೋವಿಶೇಷದಿಂದ ಮೀರಿಸಿದೆ. ಮಹಾಮಹಿಮನಾದ ನೀನು ನೂರಾರು ಅವತಾರಗಳನ್ನು ಮಾಡಿ, ಅಧರ್ಮಮಾರ್ಗಿಗಳಾದ ಸಾವಿರಾರು ದೈತ್ಯ-ದಾನವರನ್ನು ಸಂಹರಿಸಿರುವೆ. ಮುರನ ಪಾಶಗಳನ್ನು ನಾಶಮಾಡಿ, ನಿಸುಂದ-ನರಕರನ್ನೂ ಸಂಹರಿಸಿ ಪ್ರಾಗ್ಜ್ಯೋತಿಷಪಟ್ಟಣದ ಮಾರ್ಗವನ್ನು ನಿಷ್ಕಂಟಕವನ್ನಾಗಿ ಮಾಡಿದೆ. ಜಾರೂಥೀ ಎಂಬ ನಗರದಲ್ಲಿ ಆಹುತಿ ಎಂಬುವನು ನಿನ್ನಿಂದ ಕೊಲ್ಲಲ್ಪಟ್ಟನು. ಕ್ರಾಥ, ಸಬಾಂಧವನಾದ ಶಿಶುಪಾಲ, ಜರಾಸಂಧ, ಶೈಬ್ಯ, ಶತಧನ್ವಾ–ಇವರೆಲ್ಲರೂ ನಿನ್ನಿಂದ ಪರಾಜಿತರಾದರು.

ಗುಡುಗಿನಂತೆ ಶಬ್ದಮಾಡುವ ಮತ್ತು ಸೂರ್ಯನ ತೇಜಸ್ಸಿಗೆ ಸಮಾನವಾಗಿರುವ ತೇಜಸ್ಸುಳ್ಳ ಮಹಾರಥದಲ್ಲಿ ಕುಳಿತು ಯುದ್ಧದಲ್ಲಿ ರುಕ್ಮಿಯನ್ನು ಸೋಲಿಸಿ, ಭೋಜವಂಶಜಳಾದ ರುಕ್ಮಿಣಿಯನ್ನು ಪಡೆದೆ. ಕೃಷ್ಣ! ಮತ್ತೊಂದು ಸಮಯದಲ್ಲಿ ಕೋಪಗೊಂಡವನಾಗಿ ಇಂದ್ರದ್ಯುಮ್ನನೆಂಬುವನನ್ನೂ, ಯವನರಾಜನಾದ ಕಸೇರುಮಾನ್ ಎಂಬುವನನ್ನೂ ಯುದ್ಧದಲ್ಲಿ ಸಂಹರಿಸಿದೆ. ಸೌಭಪುರಾಧಿಪತಿಯಾದ ಶಾಲ್ವನೆಂಬುವನನ್ನು ಸಂಹರಿಸಿ ದುಷ್ಟರಿಂದ ನಿಬಿಡವಾಗಿದ್ದ ಅವನ ಪಟ್ಟಣವನ್ನೇ ನಿರ್ನಾಮಮಾಡಿದೆ. ಇವರೇ ಅಲ್ಲದೇ ಇನ್ನೂ ಅನೇಕದುಷ್ಟರಾಜರು ನಿನ್ನಿಂದ ಸಂಹರಿಸಲ್ಪಟ್ಟಿದ್ದಾರೆ.

ಇರಾವತಿ ಎಂಬ ಪಟ್ಟಣದಲ್ಲಿ, ಪರಾಕ್ರಮದಲ್ಲಿ ಕಾರ್ತವೀರ್ಯನಿಗೆ ಸಮಾನನಾದ ಭೋಜನೆಂಬ ರಾಜನನ್ನು ಸಂಹರಿಸಿದೆ. ಅದೇ ಯುದ್ಧದಲ್ಲಿ ಗೋಪತಿ-ತಾಲಕೇತುಗಳೆಂಬುವರೂ ನಿನ್ನಿಂದ ಹತರಾದರು. ಋಷಿಗಳಿಗೂ ವಾಸಕ್ಕೆ ಯೋಗ್ಯವಾದ ( ಇಷ್ಟವಾದ, ) ಸಕಲೈಶ್ವರ್ಯಭರಿತವಾಗಿರುವ

ದ್ವಾರಕೆಯನ್ನು ನಿನ್ನ ರಾಜಧಾನಿಯನ್ನಾಗಿ ಮಾಡಿಕೊಂಡಿರುವೆ. ಕಡೆಯಲ್ಲಿ ಆ ಪಟ್ಟಣವನ್ನೂ ಸಮುದ್ರದಲ್ಲಿ ಮುಳುಗಿಸಲು ನಿಶ್ಚಯಿಸಿರುವೆ. ಮಧು ಹಂತಕನೇ! ಮಾಧವನೇ! ಕ್ರೋಧ, ಮಾತ್ಸರ್ಯ, ಲೋಭ, ಅಸತ್ಯ, ಕ್ರೌರ್ಯ-ಇವು ನಿನ್ನ ಸಮೀಪದಲ್ಲಿಯೂ ಸುಳಿಯದಿರುವಾಗ ನಿನಗೆ ನಿರ್ದಯತ್ವವೂ ಕಾಪಟ್ಯವೂ ಹೇಗೆತಾನೇ ಉಂಟಾದೀತು? ಚೈತ್ಯವನದಲ್ಲಿದ್ದ ಯಾಗಶಾಲೆಯ ಮಧ್ಯದಲ್ಲಿ ಸ್ವಪ್ರಕಾಶದಿಂದ ದೇದೀಪ್ಯಮಾನನಾಗಿ ಬೆಳಗುತ್ತಾ ಕುಳಿತಿದ್ದ ನಿನ್ನ ಬಳಿಗೆ, ಅನೇಕ ಋಷಿ-ಮಹರ್ಷಿಗಳು ಬಂದು ಅಭಯವನ್ನು ಕೇಳಿದರಲ್ಲವೇ? ಯುಗಾಂತದಲ್ಲಿ ಸರ್ವಭೂತಗಳನ್ನೂ ಸಂಹರಿಸಿ ವಿಶ್ವವನ್ನೇ ನಿನ್ನಲ್ಲಿ ಅಡಗಿಸಿಕೊಳ್ಳುವೆ. ಪುನಃ ಯುಗದ ಆದಿಯಲ್ಲಿ ನಿನ್ನ ನಾಭಿಕಮಲದಿಂದ ಹುಟ್ಟಿದ ಬ್ರಹ್ಮನನ್ನು ಮಧು-ಕೈಟಭರೆಂಬುವರು ಕೊಲ್ಲಲು ಬಂದರು. ಆಗ ನಿನಗೆ ಮಹಾಕೋಪವುಂಟಾಯಿತು. ತ್ರಿಶೂಲಧಾರಿಯಾದ, ತ್ರಿಲೋಚನನಾದ ಶಂಭುವು ನಿನ್ನ ಕೋಪಸ್ವರೂಪನಾಗಿ ನಿನ್ನ ಹಣೆಯಿಂದ ಉದಯಿಸಿದನು. ಈ ರೀತಿಯಾಗಿ ಬ್ರಹ್ಮಾ ಮತ್ತು ಮಹೇಶ್ವರರು ನಿನ್ನ ಶರೀರದಿಂದಲೇ ಉದಯಿಸಿ ಸೃಷ್ಟಿ ಮತ್ತು ಲಯಗಳನ್ನು ಮಾಡುತ್ತಿರುತ್ತಾರೆ. ಈ ವಿಷಯವನ್ನು ನನಗೆ ಮಹಾಮಹಿಮರಾದ ನಾರದರು ಹೇಳಿದರು. ನಾರಾಯಣ! ನೀನು ಚೈತ್ರರಥವನದಲ್ಲಿ ಮಹಾಸತ್ರಗಳನ್ನು ಮಾಡಿದೆ. ಕಮಲದಳನೇತ್ರನೇ! ನೀನು ಬಾಲ್ಯದಲ್ಲಿಯೇ ಬಲರಾಮನ ಸಹಾಯವನ್ನು ಪಡೆದು ತೋರಿದ ಮಹಾಪರಾಕ್ರಮಗಳನ್ನೂ, ಅದ್ಭುತಕರ್ಮಗಳನ್ನೂ ಮತ್ತು ಅಸುರರ ವಧೆಯನ್ನೂ ಹಿಂದಾರೂ ಮಾಡಿರುವುದಿಲ್ಲ. ಮುಂದಾರೂ ಮಾಡುವುದಿಲ್ಲ. ಇದು ಯಾರಿಂದಲೂ ಸಾಧ್ಯವೂ ಇಲ್ಲ. ಮಹಾನುಭಾವ! ನೀನು ಕೈಲಾಸದಲ್ಲಿಯೂ ಬ್ರಾಹ್ಮಣರೊಡನೆ ವಾಸಮಾಡಿದೆಯೆಂದು ಕೇಳಿದ್ದೇನೆ. ನಿನ್ನ ಪರಾಕ್ರಮವು ಅಪರಿಮಿತವಾದುದು. ನಿನ್ನ ಪರಾಕ್ರಮದ ಮುಂದೆ ಪ್ರಪಂಚದಲ್ಲಿಯೇ ಯಾರೂ ನಿಲ್ಲಲಾರರು. ಶಾಂತನಾಗು ಕೃಷ್ಣ!"

(ಶ್ರೀಕೃಷ್ಣನು ಅಪಾರಮಹಿಮನು. ಅವನ ಅವತಾರಗಳ ವಿಷಯವಾಗಿ ಹೇಳುವುದಾದರೆ ಅದಕ್ಕೆ ಮಿತಿಯೇ ಇಲ್ಲ. ಅರ್ಜುನನು ಸ್ತೋತ್ರ ಮಾಡುವಾಗ ಭಕ್ತಿಯ ಆವೇಶದಲ್ಲಿ ಪರಮಾತ್ಮನು ತನ್ನ ಅವತಾರಗಳಲ್ಲಿ

ಮಾಡಿದ ಅನೇಕಕಾರ್ಯಗಳಲ್ಲಿ ಒಂದೊಂದು ಸನ್ನಿವೇಶಗಳನ್ನೂ ಹೇಳುತ್ತಾ ಹೋಗುತ್ತಾನೆ.)

ಶ್ರೀಕೃಷ್ಣನ ಆತ್ಮಸ್ವರೂಪನಾದ ಪಾರ್ಥನು ಈ ರೀತಿಯಾಗಿ ಸ್ತೋತ್ರ ಮಾಡಿದನಂತರ ಮಹಾನುಭಾವನಾದ ಶ್ರೀಕೃಷ್ಣನು ಅರ್ಜುನನೊಡನೆ ಹೇಳಿದನು :

**ಮಮೈವ ತ್ವಂ ತವೈವಾಹಂ ಯೇ ಮದೀಯಾಸ್ತವೈವ ತೇ ।**
**ಯಸ್ತ್ವಾಂ ದ್ವೇಷ್ಟಿ ಸ ಮಾಂ ದ್ವೇಷ್ಟಿ ಯಸ್ತ್ವಾಮನು ಸ ಮಾಮನು ॥೪೫॥**

**ನರಸ್ತ್ವಮಸಿ ದುರ್ಧರ್ಷ ಹರಿರ್ನಾರಾಯಣೋ ಹ್ಯಹಮ್ ।**
**ಕಾಲೇ ಲೋಕಮಿಮಂ ಪ್ರಾಪ್ತೌ ನರನಾರಾಯಣಾವೃಷೀ ॥೪೬॥**

**ಅನನ್ಯಃ ಪಾರ್ಥ ಮತ್ತಸ್ತ್ವಂ ತ್ವತ್ತಶ್ಚಾಹಂ ತಥೈವ ಚ ।**
**ನಾವಯೋರನ್ತರಂ ಶಕ್ಯಂ ವೇದಿತುಂ ಭರತರ್ಷಭ ॥೪೭॥**

"ಅರ್ಜುನ! ನೀನು ನನ್ನವನು ಅಥವಾ ನಾನು ನಿನ್ನವನು. ನನ್ನವರು ಅಥವಾ ನನ್ನ ಬಾಂಧವರೇ ನಿನ್ನ ಬಾಂಧವರೂ ಆಗಿರುತ್ತಾರೆ. ನಿನ್ನನ್ನು ಯಾರು ದ್ವೇಷಿಸುವರೋ ಅವರು ನನ್ನನ್ನೂ ದ್ವೇಷಿಸುತ್ತಾರೆ. ನಿನ್ನನ್ನು ಯಾರು ಅನುಸರಿಸಿ ಆಶ್ರಯಿಸಿರುವರೋ ಅವರು ನನ್ನನ್ನೂ ಆಶ್ರಯಿಸುವರು. ಪಾರ್ಥ! ನೀನು ನರ; ನಾನು ಹರಿನಾರಾಯಣನು. ಅಂದಿನ ನರ-ನಾರಾಯಣರ್ಷಿಗಳೇ ಇಂದು ಪಾರ್ಥ-ಕೃಷ್ಣರಾಗಿ ಒಂದು ಮಹಾಕಾರ್ಯದ ಸಾಧನೆಗಾಗಿ ಜನ್ಮತಾಳಿರುವೆವು. ಹೆಚ್ಚೇನು ಹೇಳಲಿ, ಅರ್ಜುನ! ನೀನು ನನ್ನಿಂದ ಅಥವಾ ನಾನು ನಿನ್ನಿಂದ ಬೇರೆಯವನಲ್ಲ. ನನಗೂ ಮತ್ತು ನಿನಗೂ ಯಾವ ಭೇದವೂ ಇರುವುದಿಲ್ಲ."

(ಶ್ರೀಕೃಷ್ಣನು ಹೇಳುವ ಈ ಶ್ಲೋಕಗಳಿಗೆ ವ್ಯಾಖ್ಯಾನಕಾರರು ನರ-ನಾರಾಯಣರನ್ನು ಜೀವ-ಬ್ರಹ್ಮರೆಂದು ಹೇಳಿ ತದ್ರೂಪವಾಗಿ ವ್ಯಾಖ್ಯೆ ಮಾಡಿರುತ್ತಾರೆ.)

ಮಹಾತ್ಮನಾದ ಶ್ರೀಕೃಷ್ಣನು ಅರ್ಜುನನೊಡನೆ ಹೀಗೆ ಹೇಳುತ್ತಿರಲಾಗಿ,

ಅಲ್ಲಿ ನೆರೆದಿದ್ದ ರಾಜರು ಕೌರವರ ಕಾರ್ಯವನ್ನು ನೆನೆದು ಕೋಪಾವಿಷ್ಟರಾಗುತ್ತಿರಲಾಗಿ, ಧೃಷ್ಟದ್ಯುಮ್ನನೇ ಮೊದಲಾದ ಸೋದರರಿಂದ ಪರಿವೃತಳಾಗಿದ್ದ, ಶರಣೈಷಿಣಿಯಾದ ಮತ್ತು ಕ್ರುದ್ಧೆಯಾದ ದ್ರೌಪದಿಯು ಪಾಂಡವರ ಮಧ್ಯದಲ್ಲಿ ಕುಳಿತಿದ್ದ ಶರಣ್ಯನಾದ ಶ್ರೀಕೃಷ್ಣನ ಬಳಿಗೆ ಬಂದು ಸ್ತುತಿಸತೊಡಗಿದಳು :

## ದ್ರೌಪದೀಕೃತಕೃಷ್ಣಸ್ತವಃ

ಪೂರ್ವೇ ಪ್ರಜಾಭಿಸರ್ಗೇ ತ್ವಾಮಾಹುರೇಕಂ ಪ್ರಜಾಪತಿಮ್ ।
ಸ್ರಷ್ಟಾರಂ ಸರ್ವಲೋಕಾನಾಮಸಿತೋ ದೇವಲೋಽಬ್ರವೀತ್ ॥೫೦॥

ವಿಷ್ಣುಸ್ತ್ವಮಸಿ ದುರ್ಧರ್ಷ ತ್ವಂ ಯಜ್ಞೋ ಮಧುಸೂದನ ।
ಯಷ್ಟಾ ತ್ವಮಸಿ ಯಷ್ಟವ್ಯೋ ಜಾಮದಗ್ನ್ಯೋ ಯಥಾಬ್ರವೀತ್ ॥೫೧॥

ಋಷಯಸ್ತ್ವಾಂ ಕ್ಷಮಾಮಾಹುಃ ಸತ್ಯಂ ಚ ಪುರುಷೋತ್ತಮ ।
ಸತ್ಯಾದ್ಯಜ್ಞೋಽಸಿ ಸಮ್ಭೂತಃ ಕಶ್ಯಪಸ್ತ್ವಾಂ ಯಥಾಬ್ರವೀತ್ ॥೫೨॥

ಸಾಧ್ಯಾನಾಮಪಿ ದೇವಾನಾಂ ಶಿವಾನಾಮೀಶ್ವರೇಶ್ವರ ।
ಭೂತಭಾವನ ಭೂತೇಶ ಯಥಾ ತ್ವಾಂ ನಾರದೋಽಬ್ರವೀತ್ ॥೫೩॥

ಬ್ರಹ್ಮಶಂಕರಶಕ್ರಾದ್ಯೈರ್ದೇವಬೃನ್ದೈಃ ಪುನಃ ಪುನಃ ।
ಕ್ರೀಡಸೇ ತ್ವಂ ನರವ್ಯಾಘ್ರ ಬಾಲಃ ಕ್ರೀಡನಕೈರಿವ ॥೫೪॥

ದ್ಯೌಶ್ಚ ತೇ ಶಿರಸಾ ವ್ಯಾಪ್ತಾ ಪದ್ಭ್ಯಾಂ ಚ ಪೃಥಿವೀ ಪ್ರಭೋ ।
ಜಠರಂ ತ ಇಮೇ ಲೋಕಾಃ ಪುರುಷೋಽಸಿ ಸನಾತನಃ ॥೫೫॥

ವಿದ್ಯಾತಪೋಽಭಿತಪ್ತಾನಾಂ ತಪಸಾ ಭಾವಿತಾತ್ಮನಾಮ್ ।
ಆತ್ಮದರ್ಶನತೃಪ್ತಾನಾಮೃಷೀಣಾಮಸಿ ಸತ್ತಮಃ ॥೫೬॥

ರಾಜರ್ಷೀಣಾಂ ಪುಣ್ಯಕೃತಾಮಾಹವೇಷ್ವನಿವರ್ತಿನಾಮ್ ।
ಸರ್ವಧರ್ಮೋಪಪನ್ನಾನಾಂ ತ್ವಂ ಗತಿಃ ಪುರುಷರ್ಷಭ ।
ತ್ವಂ ಪ್ರಭುಸ್ತ್ವಂ ವಿಭುಶ್ಚ ತ್ವಂ ಭೂತಾತ್ಮಾ ತ್ವಂ ವಿಚೇಷ್ಟಸೇ ॥೫೭॥

**ಲೋಕಪಾಲಾಶ್ಚ ಲೋಕಾಶ್ಚ ನಕ್ಷತ್ರಾಣಿ ದಿಶೋ ದಶ ।**
**ನಭಶ್ಚನ್ದ್ರಶ್ಚ ಸೂರ್ಯಶ್ಚ ತ್ವಯಿ ಸರ್ವಂ ಪ್ರತಿಷ್ಠಿತಮ್ ॥೫೮॥**

**ಮರ್ತ್ಯತಾ ಚೈವ ಭೂತಾನಾಮಮರತ್ವಂ ದಿವೌಕಸಾಮ್ ।**
**ತ್ವಯಿ ಸರ್ವಂ ಮಹಾಬಾಹೋ ಲೋಕಕಾರ್ಯಂ ಪ್ರತಿಷ್ಠಿತಮ್ ॥೫೯॥**

**ಸಾ ತೇಽಹಂ ದುಃಖಮಾಖ್ಯಾಸ್ಯೇ ಪ್ರಣಯಾನ್ಮಧುಸೂದನ ।**
**ಈಶಸ್ತ್ವಂ ಸರ್ವಭೂತಾನಾಂ ಯೇ ದಿವ್ಯಾ ಯೇ ಚ ಮಾನುಷಾಃ ॥೬೦॥**

"ಮಹಾನುಭಾವನೇ! ಸೃಷ್ಟಿಗೆ ಮೊದಲು ನೀನೊಬ್ಬನೇ ಇದ್ದೆಯೆಂದೂ, ಸರ್ವಲೋಕಗಳನ್ನೂ ಸೃಷ್ಟಿಸಿದ ಪ್ರಜಾಪತಿಯೂ ನೀನೇ ಎಂದೂ ಅಸಿತ-ದೇವಲರು ಹೇಳುತ್ತಾರೆ. ನೀನೇ ವಿಷ್ಣುವೆಂದೂ, 'ಅಂತಃ ಪ್ರವಿಷ್ಟಃ ಶಾಸ್ತಾ ಜನಾನಾಂ'–ಎಂಬ ಶ್ರುತ್ಯುಕ್ತಿಯಂತೆ ನೀನು ಮನುಷ್ಯರ ಹೃದಯಾಂತರ್ಯಾಮಿಯಾಗಿದ್ದು ಶಾಸನಮಾಡುವೆಯೆಂದೂ, ಈ ಕಾರಣ ದಿಂದಲೇ ಯಜ್ಞದಲ್ಲಿ ಯಜ್ಞವೂ, ಯಜ್ಞಮಾಡುವವನೂ ಮತ್ತು ಮಾಡಿಸಿ ಕೊಳ್ಳುವವನೂ ನೀನೇ ಎಂದೂ–ಜಮದಗ್ನಿಯ ಮಗನಾದ ಪರಶುರಾಮನು ಹೇಳುತ್ತಾನೆ. ಕ್ಷಮಾಸ್ವರೂಪನೂ, ಸತ್ಯಸ್ವರೂಪನೂ ನೀನೇ ಎಂದು ಮುನಿ ಗಳು ಹೇಳುತ್ತಾರೆ. ಸತ್ಯದಿಂದ ಪ್ರಕಟವಾಗುವ ಯಜ್ಞಸ್ವರೂಪನೂ ನೀನೇ ಎಂದು–ಕಶ್ಯಪರು ಹೇಳುತ್ತಾರೆ.

ಸಾಧ್ಯರಿಗೂ, ದೇವತೆಗಳಿಗೂ, ಏಕಾದಶರುದ್ರರಿಗೂ ಸ್ವಾಮಿಯಾದ ಸರ್ವೇಶ್ವರನೇ! ನೀನು ಆಕಾಶಾದಿ ಪಂಚಭೂತಗಳ ಸೃಷ್ಟಿಗೆ ಕಾರಣನೆಂದೂ ಮತ್ತು ಅವುಗಳ ನಿಯಾಮಕನೂ ನೀನೇ ಎಂದೂ–ನಾರದರು ಹೇಳುತ್ತಾರೆ. ಬಾಲಕರು ಆಟಿಕೆಗಳೊಡನೆ ಆಟವಾಡುವಂತೆ ನೀನು ಬ್ರಹ್ಮ-ಶಂಕರೇಂದ್ರಾದಿ ದೇವತೆಗಳೊಡನೆ ಆಟವಾಡುವೆ. ಕೃಷ್ಣ! ಸ್ವರ್ಗಲೋಕವು ನಿನ್ನ ತಲೆ ಯಿಂದಲೂ, ಭೂಲೋಕವು ನಿನ್ನ ಕಾಲುಗಳಿಂದಲೂ ವ್ಯಾಪ್ತವಾಗಿದೆ. ಉಳಿದ ಎಲ್ಲ ಲೋಕಗಳೂ ನಿನ್ನ ಉದರಸ್ವರೂಪವಾಗಿವೆ. ಅಂತಹ ಸನಾತನಪುರು ಷನು ನೀನಾಗಿರುವೆ. ವೇದ-ವೇದಾಂಗಗಳನ್ನು ಅಧ್ಯಯನಮಾಡಿದವರಿಗೆ, ತಪಸ್ವಿಗಳಿಗೆ, ಕೃಚ್ಛ್ರ-ಚಾಂದ್ರಾಯಣಾದಿಗಳಿಂದ ಪರಿಶುದ್ಧಾತ್ಮರಾದವರಿಗೆ,

ಜೀವನದಲ್ಲಿ ಆತ್ಮದರ್ಶನದಿಂದ ತೃಪ್ತಿಪಡೆಯುವ ಆಶಯವುಳ್ಳವರಿಗೆ–ನೀನೇ ಸತ್ಯತಮನೂ, ಬ್ರಹ್ಮನೂ ಅಥವಾ ಶರಣ್ಯನೂ ಆಗಿರುವೆ.

ಧರ್ಮಾತ್ಮರಾದ ರಾಜರ್ಷಿಗಳಿಗೂ, ಯುದ್ಧದಲ್ಲಿ ಹಿಂದಿರುಗದೇ ಇರುವವರಿಗೂ, ಧರ್ಮಸಂಪನ್ನರಾದ ಭಕ್ತರಿಗೂ ನೀನೇ ಶರಣ್ಯನು. ನೀನು ಸಕಲಭುವನಗಳಲ್ಲಿಯೂ ವ್ಯಾಪ್ತನಾಗಿರುವೆ. ಬೀಜಸ್ವರೂಪನು ನೀನು. ಕರ್ಮಗಳನ್ನು ಮಾಡುವವನೂ ನೀನೇ ; ಮಾಡಿಸುವವನೂ ನೀನೇ. ಲೋಕಪಾಲರು, ಚತುರ್ದಶಭುವನಗಳು, ನಕ್ಷತ್ರಗಳು, ದಶದಿಕ್ಕುಗಳು, ಆಕಾಶ, ಚಂದ್ರ-ಸೂರ್ಯರು ಇವರೆಲ್ಲರೂ ನಿನ್ನಲ್ಲಿಯೇ ಪ್ರತಿಷ್ಠಿತರಾಗಿರುವರು. ಮನುಷ್ಯರ ಹುಟ್ಟು-ಸಾವುಗಳಿಗೂ, ದೇವತೆಗಳ ಅಮರತ್ವಕ್ಕೂ ನೀನೇ ಕಾರಣನು. ಲೋಕದ ಎಲ್ಲ ಕಾರ್ಯಗಳೂ ನಿನ್ನ ನಿಯಂತ್ರಣದಿಂದಲೇ ನಡೆಯುತ್ತವೆ. ಸಕಲಚರಾಚರಗಳಿಗೂ, ಸ್ವರ್ಗ-ಮರ್ತ್ಯ-ಪಾತಾಳಲೋಕಗಳಿಗೂ ಏಕೈಕ ಸ್ವಾಮಿಯಾದ ನಿನ್ನಲ್ಲಿ ಕೇವಲ ಸ್ನೇಹದ ಕಾರಣದಿಂದ ನನ್ನ ದುಃಖವನ್ನು ಹೇಳಿಕೊಳ್ಳಲು ಇಚ್ಛಿಸುತ್ತೇನೆ.

ಕೃಷ್ಣ! ಆ ಭವ್ಯಸಭಾಮಂದಿರದಲ್ಲಿ ಅಂದು ನನಗಾದ ಅಪಮಾನವನ್ನು ಕೇಳಿಯಾದರೂ ತಿಳಿದಿರುವೆಯಲ್ಲವೇ? (ಅದನ್ನು ನೆನೆಯುತ್ತಲೇ ದ್ರೌಪದಿಯ ಎರಡು ಕಣ್ಣುಗಳಿಂದಲೂ ಅಶ್ರುಬಿಂದುಗಳು ಉದುರಿದುವು. ಸೀರೆಯ ಸೆರಗಿನಿಂದ ಕಂಬನಿಯನ್ನು ಒರೆಸಿಕೊಂಡು ಹೇಳಿದಳು.) ಪಂಚಪಾಂಡವರ ಭಾರ್ಯೆಯಾಗಿರುವ, ನಿನ್ನ ಸಖಿಯಾಗಿರುವ ಮತ್ತು ಧೃಷ್ಟದ್ಯುಮ್ನನ ಭಗಿನಿಯಾಗಿರುವ ನನ್ನನ್ನು–ಅಂದು ಆ ಸಭೆಯಲ್ಲಿ ಅಮಾನುಷರೀತಿಯಲ್ಲಿ ಅವರು ಎಳೆದಾಡಿದರು. ಮಧುಸೂದನ! ಅಂದು ನಾನು ರಜಸ್ವಲೆಯಾಗಿದ್ದೆನು. ಆದುದರಿಂದಲೇ ಏಕವಸ್ತ್ರವನ್ನು ಧರಿಸಿದ್ದೆನು. ಅದೂ ರಕ್ತಮಯವಾಗಿದ್ದಿತು. ಅಂತಹ ದಾರುಣಾವಸ್ಥೆಯಲ್ಲಿ ಭಯದಿಂದ ತತ್ತರಿಸುತ್ತಾ ರೋದನಮಾಡುತ್ತಿದ್ದ ನನ್ನನ್ನು ಕುರುಭೂಪರ ಮಹಾಸಭೆಗೆ ಎಳೆದು ತಂದರು. ರಕ್ತವಸನೆಯಾದ ನನ್ನನ್ನು ರಾಜ-ಮಹಾರಾಜರಿಂದ ತುಂಬಿದ್ದ ಆ ಸಭಾಭವನಕ್ಕೆ ಸೆಳೆದುತಂದುದನ್ನು ಕಂಡು ಪಾಪಚೇತಸರಾದ ದುರ್ಯೋಧನಾದಿಗಳು ಹಾಸ್ಯಮಾಡಿ ನಕ್ಕರು. ಕೃಷ್ಣ! ಮಾಧವ! ಪಾಂಡುವಿನ ಐವರು ಮಕ್ಕಳೂ,

ವೃಷ್ಣಿವಂಶದವರೂ ಮತ್ತು ಪಾಂಚಾಲದರಸರೂ ಜೀವಿಸಿರುವಾಗಲೇ ನನ್ನನ್ನು ಬಲಾತ್ಕಾರದಿಂದ ಪಾಪಾತ್ಮರಾದ ದುರ್ಯೋಧನಾದಿಗಳು ದಾಸಿ ಯನ್ನಾಗಿ ಮಾಡಿಕೊಳ್ಳಲು ಯತ್ನಿಸಿದರು. ಕೃಷ್ಣ! ನಾನು ಭೀಷ್ಮನ ಮತ್ತು ಧೃತರಾಷ್ಟ್ರನ ಸೊಸೆಯಲ್ಲವೇ? ಅವರು ಅಲ್ಲಿಯೇ ಇದ್ದೂ ಅಂತಹ ಅಕಾರ್ಯವು ನಡೆಯಬಹುದೇ? ಯಾರನ್ನು ತಾನೇ ಏಕೆ ನಿಂದಿಸಲಿ? ಕೃಷ್ಣ! ನಿಶ್ಚಯವಾಗಿ ಹೇಳುವುದಾದರೆ–ಈ ನನ್ನ ಪಂಚಪತಿಗಳೇ ನಿಂದಾರ್ಹರು. ಮಹಾಪರಾಕ್ರಮಿಗಳಾದ, ಯುದ್ಧವಿಶಾರದರಾದ ಇವರನ್ನೇ ನಾನು ನಿಂದಿಸುವೆನು. ಏಕೆಂದರೆ : ಧರ್ಮಪತ್ನಿಯಾದ, ಯಶಸ್ವಿನಿಯಾದ ನನ್ನನ್ನು ಆ ಪಾಪಿಯು ಸೆಳೆದಾಡುತ್ತಿದ್ದುದನ್ನು ಇವರು ನೋಡುತ್ತಾ ಕುಳಿತಿದ್ದರು, ಕೃಷ್ಣ!

**ಧಿಗ್ಬಲಂ ಭೀಮಸೇನಸ್ಯ ಧಿಕ್ಪಾರ್ಥಸ್ಯ ಚ ಗಾಣ್ಡಿವಮ್ ।**
**ಯೌ ಮಾಂ ವಿಪ್ರಕೃತಾಂ ಕ್ಷುದ್ರೈರ್ಮರ್ಷಯೇತಾಂ ಜನಾರ್ದನ ॥**

ಭೀಮಸೇನನ ಬಲಕ್ಕೆ ಧಿಕ್ಕಾರವಿರಲಿ! ಪಾರ್ಥನ ಗಾಂಡೀವಕ್ಕೂ ಧಿಕ್ಕಾರವಿರಲಿ! ಏಕೆಂದರೆ : ಆ ಕ್ಷುದ್ರರಿಂದ ಅಪಮಾನಿತಳಾಗಿ ದುಃಖಸಾಗರ ದಲ್ಲಿ ಮುಳುಗಿದ್ದ ನನ್ನನ್ನು ನೋಡುತ್ತಿದ್ದೂ ಈ ಇಬ್ಬರೂ ಸಹಿಸಿಕೊಂಡು ತಾಳ್ಮೆಯಿಂದ ಕುಳಿತಿದ್ದರು.

**ಶಾಶ್ವತೋಽಯಂ ಧರ್ಮಪಥಃ ಸದ್ಭಿರಾಚರಿತಃ ಸದಾ ।**
**ಯದ್ಭಾರ್ಯಾಂ ಪರಿರಕ್ಷನ್ತಿ ಭರ್ತಾರೋಽಲ್ಪಬಲಾ ಅಪಿ ॥೬೮॥**

**ಭಾರ್ಯಾಯಾಂ ರಕ್ಷ್ಯಮಾಣಾಯಾಂ ಪ್ರಜಾ ಭವತಿ ರಕ್ಷಿತಾ ।**
**ಪ್ರಜಾಯಾಂ ರಕ್ಷ್ಯಮಾಣಾಯಮಾತ್ಮಾ ಭವತಿ ರಕ್ಷಿತಃ ॥೬೯॥**

ಸತ್ಪುರುಷರಿಂದ ಆಚರಿಸಲ್ಪಡುತ್ತಿರುವ ಶಾಶ್ವತವಾದ ಧರ್ಮವಿದು. ಕೃಷ್ಣ! ಗಂಡಂದಿರು ಅಲ್ಪಬಲರಾದರೂ ತಮ್ಮ ಭಾರ್ಯೆಯರನ್ನು ರಕ್ಷಿಸ ಬೇಕಾದುದು ಧರ್ಮ. ಭಾರ್ಯೆಯನ್ನು ರಕ್ಷಣೆಮಾಡುವುದರಿಂದ ತಮ್ಮ ಮುಂದಿನ ಪೀಳಿಗೆಯನ್ನು ರಕ್ಷಣೆಮಾಡಿದಂತಾಗುತ್ತದೆ. ಸಂತತಿಯನ್ನು ರಕ್ಷಣೆಮಾಡುವುದರಿಂದ ಆತ್ಮವನ್ನೇ ರಕ್ಷಿಸಿದಂತಾಗುತ್ತದೆ.

**ಆತ್ಮಾ ಹಿ ಜಾಯತೇ ತಸ್ಯಾಂ ತಸ್ಮಾಜ್ಜಾಯಾ ಭವತ್ಯುತ ।**
**ಭರ್ತಾ ಚ ಭಾರ್ಯಯಾ ರಕ್ಷ್ಯಃ ಕಥಂ ಜಾಯಾನ್ಮಮೋದರೇ ॥೭೦॥**

ಭಾರ್ಯೆಯು ತನ್ನ ಆತ್ಮಕ್ಕೆ ಪುನರುತ್ಪತ್ತಿಸ್ಥಾನಳಾದುದರಿಂದ ಅವಳಿಗೆ 'ಜಾಯಾ' ಎಂದು ಹೆಸರು. ಹೇಗೋ ಇವನು ನನ್ನ ಹೊಟ್ಟೆಯಲ್ಲಿ ಹುಟ್ಟುತ್ತಾನೆಂಬ ಭಾವನೆಯಿಂದ ಪತ್ನಿಯಾದವಳು ಪತಿಯನ್ನು ರಕ್ಷಿಸಬೇಕು.

ಮಾಧವ! ಈ ಪಾಂಡವರು ತಮ್ಮನ್ನು ಆಶ್ರಯಿಸಿದವರನ್ನೆಂದೂ ಕೈಬಿಡುವವರಲ್ಲ. ಆದರೆ ನನ್ನನ್ನು ಮಾತ್ರ ರಕ್ಷಿಸಲು ಬರಲಿಲ್ಲ. ಈ ಐವರು ಪಾಂಡವರಿಂದ ನಾನು ಐವರು ಮಕ್ಕಳನ್ನು ಪಡೆದಿರುವೆನು. ಧರ್ಮಜನಿಂದ ಪ್ರತಿವಿಂಧ್ಯನೂ, ಭೀಮನಿಂದ ಸುತಸೋಮನೂ, ಅರ್ಜುನನಿಂದ ಶ್ರುತ ಕೀರ್ತಿಯೂ, ನಕುಲನಿಂದ ಶತಾನೀಕನೂ, ಸಹದೇವನಿಂದ ಶ್ರುತಕರ್ಮನೂ ಜನಿಸಿರುವರು. ಅವರೆಲ್ಲರೂ ಮಹಾಪರಾಕ್ರಮಿಗಳು. ಈ ಮಕ್ಕಳ ಕಾರಣ ದಿಂದಲಾದರೂ ನನ್ನನ್ನು ರಕ್ಷಿಸುವ ಅವಶ್ಯಕತೆಯಿದ್ದಿತು. ಅಲ್ಲವೇ? ಕೃಷ್ಣ! ನಿನ್ನ ಮಗನಾದ ಪ್ರದ್ಯುಮ್ನನಂತೆಯೇ ಈ ನನ್ನ ಪುತ್ರರೂ ಮಹಾಪರಾಕ್ರಮಿ ಗಳು. ಪಾಂಡವರು ಧನುರ್ವಿದ್ಯೆಯಲ್ಲಿ ಪರಿಣತರು. ಯುದ್ಧದಲ್ಲಿ ಎಂತಹ ಶತ್ರುಗಳನ್ನಾದರೂ ಎದುರಿಸುವ ಸಾಮರ್ಥ್ಯವುಳ್ಳವರು. ದುರ್ಬಲರಾದ ಧೃತರಾಷ್ಟ್ರನ ಮಕ್ಕಳು ನನ್ನ ವಿಷಯದಲ್ಲಿ ಮಾಡಿದ ಮಹಾಪರಾಧವನ್ನು ಪಾಂಡವರು ಹೇಗೆ ಸಹಿಸಿಕೊಂಡರು? ಕೃಷ್ಣ! ಮೋಸದ ಪಗಡೆಯಾಟ ದಲ್ಲಿ ತಮ್ಮ ರಾಜ್ಯ-ಕೋಶಗಳೆಲ್ಲವನ್ನೂ ಕಳೆದುಕೊಂಡು ಇವರು ದಾಸರಾದರು. ಇವರ ಧರ್ಮಪತ್ನಿಯಾದ ನಾನು ರಜಸ್ವಲೆಯಾಗಿದ್ದು ಏಕವಸ್ತ್ರಧಾರಿಣಿಯಾಗಿದ್ದರೂ ಸಭಾಮಂಟಪಕ್ಕೆ ಸೆಳೆದುತರಲ್ಪಟ್ಟೆನು. (ದ್ರೌಪದಿಯು ಬಿಕ್ಕಿ-ಬಿಕ್ಕಿ ಅತ್ತಳು. ಕೋಪದಿಂದಲೂ, ದುಃಖದಿಂದಲೂ ತುಟಿಗಳು ಅದುರುತ್ತಿದ್ದುವು. ಗಡುಸಾದ ದನಿಯಲ್ಲಿ ಹೇಳಿದಳು.) ಅರ್ಜುನ, ಭೀಮ ಮತ್ತು ನೀನು ಈ ಮೂವರು ಮಾತ್ರವೇ ಹೆದೆಯೇರಿಸಲು ಸಾಧ್ಯವಾಗುವ ಈ ಗಾಂಡೀವವೂ ಅಂದು ನನ್ನ ಸಹಾಯಕ್ಕೆ ಬರಲಿಲ್ಲ. ಭೀಮನ ಬಲಕ್ಕೂ, ಅರ್ಜುನನ ಪರಾಕ್ರಮಕ್ಕೂ ಧಿಕ್ಕಾರವಿರಲಿ! ಏಕೆಂದರೆ: ಪಾಪಿಷ್ಠನಾದ ದುರ್ಯೋಧನನು ನನ್ನ

ವಿಷಯದಲ್ಲಿ ಇಷ್ಟೊಂದು ಘೋರವಾದ ಅಪರಾಧಮಾಡಿಯೂ ಇವರ ಮುಂದೆ ಇದುವರೆಗೆ ಜೀವಿಸಿರುವೆನಲ್ಲವೇ? ಪಾಪಚೇತನನಾದ ಆ ದುರ್ಯೋಧನನು ಪಾಂಡವರ ವಿಷಯದಲ್ಲಿ ಮಾಡಿರುವ ಅಪರಾಧಗಳು ಒಂದೆರಡಲ್ಲ. ಇವರಿನ್ನೂ ಬಾಲಕರಾಗಿದ್ದಾಗಲೇ ವಿದ್ಯಾಭ್ಯಾಸದಲ್ಲಿ, ಆಟ-ಪಾಟಗಳಲ್ಲಿ ನಿರತರಾಗಿರುತ್ತಿದ್ದ ಇವರನ್ನು ಇವರ ತಾಯಿಯ ಸಮೇತವಾಗಿ ಹಸ್ತಿನಾಪುರದಿಂದಲೇ ಓಡಿಸಿಬಿಟ್ಟನು. ಅವನು ಮಾಡಿದ ಒಂದೊಂದು ಕ್ರಿಯೆಯನ್ನೂ ನೆನೆಸಿಕೊಂಡರೆ ಬಹಳ ಸಂಕಟವಾಗುವುದು, ಕೃಷ್ಣ! ಆ ಪಾಪಿಯು ಭೀಮನ ಆಹಾರದಲ್ಲಿ ಬಹಳ ತೀಕ್ಷ್ಣವಾದ ವಿಷವನ್ನು ಬೆರೆಸಿದ್ದನು. ಆದರೆ ಭೀಮನು ಅಂತಹ ತೀಕ್ಷ್ಣವಾದ ವಿಷವನ್ನೂ ಅರಗಿಸಿಕೊಂಡನು. ಇವನಿಗೆ ಆ ವಿಷವು ಸ್ವಲ್ಪವಾದರೂ ದುಷ್ಪರಿಣಾಮಕಾರಿಯಾಗಲಿಲ್ಲ. ಸ್ವಲ್ಪವೂ ಬಾಧೆಪಡಿಸಲಿಲ್ಲ. ಪ್ರಾಯಶಃ ಇವನ ಆಯುಷ್ಯವಿನ್ನೂ ಮುಗಿದಿರಲಿಲ್ಲವೆಂದು ತೋರುತ್ತದೆ. ಮತ್ತೊಂದು ಸಮಯದಲ್ಲಿ ದುರ್ಯೋಧನನು ಆಲದಮರದ ಬಳಿಯ ಮನೆಯೊಂದರಲ್ಲಿ ಭೀಮಸೇನನು ನಿಶ್ಚಿಂತನಾಗಿ ಮಲಗಿದ್ದಾಗ, ಗಾಢನಿದ್ರೆಯಲ್ಲಿದ್ದ ಇವನನ್ನು ಹಗ್ಗದಿಂದ ಬಿಗಿದು ಪಕ್ಕದಲ್ಲಿದ್ದ ಗಂಗಾನದಿಗೆ ಹಾಕಿಸಿ ಹೊರಟುಹೋದನು. ಆಗಲೂ ಕೂಡ ಭೀಮಸೇನನ ಪ್ರಾಣತೆಗೆಯಲು ದುರ್ಯೋಧನನಿಗೆ ಸಾಧ್ಯವಾಗಲಿಲ್ಲ. ಮಹಾಪರಾಕ್ರಮಿಯಾದ ಭೀಮನು ನಿದ್ದೆಯಿಂದ ಎಚ್ಚೆತ್ತನಂತರ ತನ್ನನ್ನು ಬಿಗಿದಿದ್ದ ಹಗ್ಗವನ್ನು ಛಿದ್ರ-ಛಿದ್ರಮಾಡಿ ನದಿಯ ದಂಡೆಗೆ ಬಂದನು. ಬೇರೊಂದು ಸಮಯದಲ್ಲಿ ದುರ್ಯೋಧನನು ಮಲಗಿದ್ದ ಭೀಮನ ಮೇಲೆ ಅನೇಕಸರ್ಪಗಳನ್ನು ಬಿಟ್ಟು ಕಚ್ಚಿಸಿದನು. ಆದರೂ ಭೀಮನು ಸಾಯಲಿಲ್ಲ. ಭೀಮನು ಒಡನೆಯೇ ಎಚ್ಚೆತ್ತವನಾಗಿ ಅಲ್ಲಿದ್ದ ಸರ್ಪಗಳನ್ನು ಕ್ಷಣಮಾತ್ರದಲ್ಲಿ ಧ್ವಂಸಮಾಡಿದನಲ್ಲದೇ–ಆ ಕಾರ್ಯಕ್ಕಾಗಿ ದುರ್ಯೋಧನನಿಂದ ಕಳುಹಲ್ಪಟ್ಟಿದ್ದ ಸಾರಥಿಯನ್ನೂ ಯಮಾಲಯಕ್ಕೆ ಕಳುಹಿಸಿದನು. ಕಥೆಯು ಅಲ್ಲಿಗೇ ಮುಗಿಯಲಿಲ್ಲ, ಕೃಷ್ಣ! ಇನ್ನೂ ಹೇಳುವೆನು ಕೇಳು. ವಾರಣಾವತದಲ್ಲಿ ಈ ನನ್ನ ಪತಿಗಳು ತಮ್ಮ ತಾಯಿಯೊಡನೆ ಮಲಗಿದ್ದರು. ಆ ಸಮಯದಲ್ಲಿ ದುರ್ಯೋಧನನು ಇವರೆಲ್ಲರನ್ನೂ ಒಂದೇ ಸಲ ಭಸ್ಮಮಾಡಿಬಿಡಬೇಕೆಂಬ ದುರುದ್ದೇಶದಿಂದ ಇವರು ಮಲಗಿದ್ದ

ಮನೆಗೇ ಬೆಂಕಿಯಿಡಿಸಿದನು. ನಿಶ್ಚಯವಾಗಿಯೂ ಅಂತಹ ಹೀನಕೃತ್ಯವನ್ನು ಯಾರು ತಾನೇ ಮಾಡುವರು? ಕೃಷ್ಣ! ಆದರೆ ದುರ್ಯೋಧನನಿಗೆ ಇವರನ್ನು ಹೇಗಾದರೂ ಮಾಡಿ ಸಂಹರಿಸಿಬಿಡಬೇಕೆಂಬ ದುರುದ್ದೇಶವಿದ್ದುದರಿಂದ ಅವನಿಗೆ ಕಾರ್ಯಾಕಾರ್ಯಗಳ ವಿವೇಚನೆಯೇ ಇರಲಿಲ್ಲ. ಬೆಂಕಿಯ ಜ್ವಾಲೆಗಳು ಸುತ್ತಲೂ ಆವರಿಸಿದ್ದುವು. ಆಗ ಕುಂತಿಯು ಭೀತ-ಭೀತಳಾಗಿ ಅಳುತ್ತಾ ಮಕ್ಕಳಿಗೆ ಹೇಳಿದಳು : "ಅಯ್ಯೋ! ಇಂದಿಗೆ ನಮ್ಮ ಅವಸ್ಥೆಯು ಮುಗಿಯಿತು. ನಾವು ಹೇಗೆತಾನೇ ಪ್ರಸರಿಸುತ್ತಿರುವ ಈ ಅಗ್ನಿಯ ಜ್ವಾಲೆಗಳಿಂದ ತಪ್ಪಿಸಿಕೊಂಡು ಹೋಗಲು ಸಾಧ್ಯವಾಗುವುದು? ನಾನು ನಿಶ್ಚಯವಾಗಿಯೂ ಇಂದು ನನ್ನ ಮಕ್ಕಳೊಡನೆ ಪ್ರಾಣತೊರೆಯಲೇ ಬೇಕಾಗುವುದು" – ಹೀಗೆಂದು ಹೇಳಿಕೊಂಡು ರೋದಿಸುತ್ತಿದ್ದ ಕುಂತಿಯನ್ನು ಮಹಾಪರಾಕ್ರಮಿಯಾದ ಭೀಮಸೇನನು ಸಂತೈಸುತ್ತಾ ಹೇಳಿದನು : "ಭಯಪಡಬೇಡಮ್ಮಾ! ವಿನತೆಯ ಮಗನಾದ, ಪಕ್ಷಿರಾಜನಾದ ಗರುಡನು ಹಾರುವಂತೆ–ನಿಮ್ಮೆಲ್ಲರನ್ನೂ ಎತ್ತಿಕೊಂಡು ಇಲ್ಲಿಂದ ನಾನು ಹಾರಿಬಿಡುವೆನು. ನಾವು ಈ ಯಜ್ಞೇಶ್ವರನಿಗಾಗಿ ಸ್ವಲ್ಪವೂ ಭಯಪಡಬೇಕಾಗಿಲ್ಲ."– ಹೀಗೆಂದು ಹೇಳುತ್ತಾ ಭೀಮಸೇನನು ಸ್ವಲ್ಪವೂ ತಡಮಾಡದೇ ಎರಡು ತೊಡೆಗಳ ಮೇಲೆ ಕುಂತೀ-ಧರ್ಮಜರನ್ನೂ, ಎರಡು ಹೆಗಲುಗಳಲ್ಲಿ ನಕುಲ-ಸಹದೇವರನ್ನೂ, ಬೆನ್ನಿನ ಮೇಲೆ ಅರ್ಜುನನನ್ನೂ ಕುಳ್ಳಿರಿಸಿಕೊಂಡು ಛಂಗನೆ ಹಾರಿದನು. ಭೀಮನ ಒಂದೇ ನೆಗೆತಕ್ಕೆ ಪಾಂಡವರಿಗಿದ್ದ ಅಗ್ನಿಭಯವು ತಪ್ಪಿತು. ಆ ರಾತ್ರಿಯಲ್ಲಿ ಯಶೋವಂತರಾದ ಪಾಂಡವರು ತಮ್ಮ ತಾಯಿಯಾದ ಕುಂತಿಯೊಡನೆ ಅಲ್ಲಿಂದ ಹೊರಟು ಮಹಾರಣ್ಯದಲ್ಲಿದ್ದ ಹಿಡಿಂಬವನದ ಸಮೀಪಕ್ಕೆ ಹೋದರು. ಅತ್ಯಂತದುಃಖಿತರಾಗಿದ್ದ, ಬಹಳವಾಗಿ ಬಳಲಿದ್ದ ಈ ಪಾಂಡವರು ತಮ್ಮ ತಾಯಿಯೊಡನೆ ಮಲಗಿದ್ದರು. ಅವರೆಲ್ಲರೂ ಮಲಗಿದ್ದಾಗ ಹಿಡಿಂಬೆಯೆಂಬ ರಾಕ್ಷಸಸ್ತ್ರೀಯು ಭೀಮನ ಬಳಿಗೆ ಬಂದು, ಇವನನ್ನು ನೋಡಿ ಇವನ ರೂಪಿಗೆ ಮನಸೋತು, ಇವನನ್ನು ಪತಿಯನ್ನಾಗಿ ವರಿಸಲು ಇಚ್ಛಿಸಿದಳು. ಭೀಮನ ಕಾಲುಗಳೆರಡನ್ನೂ ತನ್ನ ತೊಡೆಯ ಮೇಲಿಟ್ಟುಕೊಂಡು ತನ್ನ ಮೃದುವಾದ ಕೈಗಳಿಂದ ಒತ್ತುತ್ತಿದ್ದಳು. ಭೀಮನು ಎಚ್ಚೆತ್ತು, ವಿನಯಾನ್ವಿತಳಾಗಿ ಕಾಲುಗಳನ್ನು

ಒತ್ತುತ್ತಾ ಕುಳಿತಿದ್ದ ಹಿಡಿಂಬೆಯನ್ನು ಕುರಿತು ಹೇಳಿದನು : "ಅಕಳಂಕಳೇ! ನೀನೇಕೆ ಬಂದಿರುವೆ? ನಿನಗಿಲ್ಲಿ ಏನಾಗಬೇಕಾಗಿದೆ?"

"ನೀವೆಲ್ಲರೂ ಈಗಲೇ ಹೊರಟುಹೋಗಿರಿ ; ಮಹಾಬಲಶಾಲಿಯಾದ ನಮ್ಮಣ್ಣನು ನಿಮ್ಮೆಲ್ಲರನ್ನೂ ಸಂಹರಿಸಲು ಈಗಲೇ ಬಂದುಬಿಡುವನು."

ಭೀಮನು ಗಹ-ಗಹಿಸಿ ನಕ್ಕು ಹೇಳಿದನು : "ನಾನು ನಿಮ್ಮಣ್ಣನಿಗೆ ಭಯಪಡತಕ್ಕವನಲ್ಲ. ಅವನಿಲ್ಲಿ ಬಂದರೆ ನಾನೇ ಅವನನ್ನು ಕೊಲ್ಲುವೆನು."

ಇವರ ಈ ವಿಧವಾದ ಮಾತು-ಕತೆಗಳು ನಡೆಯುತ್ತಿದ್ದಾಗಲೇ ಹಿಡಿಂಬನೆಂಬ ರಾಕ್ಷಸನು ಅವರಿದ್ದ ಸ್ಥಳಕ್ಕೆ ಬಂದುಬಿಟ್ಟನು. ಅವನು ನೋಡಲು ಬಹುಭಯಂಕರನಾಗಿದ್ದನು. ಕರ್ಕಶಧ್ವನಿಯಿಂದ ಕೂಗುತ್ತಾ ಬಂದ ಹಿಡಿಂಬನು ತನ್ನ ತಂಗಿಯಾದ ಹಿಡಿಂಬೆಯನ್ನು ಕುರಿತು ಹೇಳಿದನು : "ಹಿಡಿಂಬೆಯೇ! ನೀನು ಯಾರೊಡನೆ ಮಾತನಾಡುತ್ತಿರುವೆ? ಇವನನ್ನು ನನ್ನ ಸಮೀಪಕ್ಕೆ ಸೆಳೆದುಕೊಂಡು ಬಾ. ಇವನನ್ನು ನಾನು ಕ್ಷಣಮಾತ್ರದಲ್ಲಿ ನುಂಗಿಬಿಡುವೆನು. ಸಾವಕಾಶಮಾಡುವುದು ನಿನಗೆ ತರವಲ್ಲ."

ತನ್ನಣ್ಣನು ಮಹಾಕೋಪಿಷ್ಠನೆಂಬುದು ಹಿಡಿಂಬೆಗೆ ತಿಳಿದಿತ್ತು. ಅವನ ಮಾತನ್ನು ಕೇಳದಿದ್ದರೆ ಮುಂದೇನಾಗಬಹುದೆಂಬುದನ್ನೂ ಹಿಡಿಂಬೆಯು ಯೋಚಿಸಿದ್ದಳು. ಆದರೆ ಭೀಮನ ಮೇಲಿನ ವಿಶೇಷವಾದ ಅನುರಾಗದಿಂದ ಅಣ್ಣನು ಹೇಳಿದ ಮಾತಿಗೆ ಲಕ್ಷ್ಯಕೊಡದಿರುವುದನ್ನು ಕಂಡು ಹಿಡಿಂಬನಿಗೆ ಮಹಾಕೋಪವುಂಟಾಯಿತು. ಒಡನೆಯೇ ಭೀಮನ ಕಡೆಗೆ ರಭಸದಿಂದ ನುಗ್ಗಿದನು.

ಹಿಡಿಂಬೆಗೆ ಭೀಮನಲ್ಲಿ ಪ್ರೇಮವಂಕುರಿಸಿದ್ದಿತು. ಅನಿಂದ್ಯಳಾದ ಹಿಡಿಂಬೆಯು ಅಣ್ಣನು ಹೇಳಿದ ಮಾತಿಗೆ ಪ್ರತ್ಯುತ್ತರವನ್ನೂ ಕೊಡಲಿಲ್ಲ ; ಹೇಳಿದಂತೆ ಮಾಡಲೂ ಇಲ್ಲ. ಮೌನವಾಗಿ ನಿಂತಿದ್ದಳು. ತನ್ನ ತಂಗಿಯು ತನ್ನ ಮಾತನ್ನೂ ಉಪೇಕ್ಷಿಸಿ ನಿಂತಿರುವುದನ್ನು ಕಂಡು ಹಿಡಿಂಬನಿಗೆ ತಡೆಯಲಾರದ ಕೋಪವೇ ಬಂದಿತು. ಗಟ್ಟಿಯಾಗಿ ಆರ್ಭಟಿಸುತ್ತಾ ಭೀಮನ ಕಡೆಗೆ ಧಾವಿಸಿ ಬಂದು, ಭೀಮನನ್ನು ಎಡಗೈಯಿಂದ ಬಿಗಿಯಾಗಿ ಹಿಡಿದು, ಸಿಡಿಲಿನಂತಹ ಪ್ರಹಾರವೊಂದನ್ನು ಭೀಮನಿಗೆ ಬಿಗಿದನು. ಭೀಮನಿಗೂ ಅತಿಯಾದ

ಕೋಪವುಂಟಾಯಿತು. ಹಿಡಿಂಬನೊಡನೆ ದ್ವಂದ್ವಯುದ್ಧಕ್ಕೆ ಸಿದ್ಧನಾಗಿ ನಿಂತನು. ಇಬ್ಬರು ಮಹಾವೀರರ ಕಾಳಗವು ಇಂದ್ರ-ವೃತ್ರಾಸುರರ ಕಾಳಗದಂತೆ ಕೆಲಕಾಲ ನಡೆಯಿತು. ಹಿಡಿಂಬನ ಶಕ್ತಿಯು ಕ್ಷಣ-ಕ್ಷಣಕ್ಕೂ ಕುಂದಿತು. ಅದೇ ಸಮಯವನ್ನು ನೋಡಿ ಭೀಮನು ರಾಕ್ಷಸನನ್ನು ಕೆಳಗುರುಳಿಸಿ ಸಂಹರಿಸಿದನು. ಅನಂತರದಲ್ಲಿ ಭೀಮ-ಹಿಡಿಂಬೆಯರ ವಿವಾಹವಾಗಿ ಘಟೋತ್ಕಚನೆಂಬ ಪುತ್ರನು ಜನಿಸಿದನು. ಹಿಡಿಂಬೆ ಮತ್ತು ಘಟೋತ್ಕಚರು ಹೊರಟುಹೋದನಂತರ ಪಾಂಡವರು ಕುಂತಿಯೊಡನೆ ಏಕಚಕ್ರನಗರದ ಕಡೆಗೆ ಹೊರಟರು. ಆ ಸಮಯದಲ್ಲಿಯೇ ವ್ಯಾಸರು ಬಂದು ಇವರಿಗೆ ಅನೇಕ ಸಲಹೆಗಳನ್ನು ಕೊಟ್ಟರು. ಮಹಾಪರಾಕ್ರಮಿಯಾದ ಭೀಮನು ಏಕಚಕ್ರ ನಗರಿಯಲ್ಲಿಯೂ ಹಿಡಿಂಬನಂತೆಯೇ ಪರಾಕ್ರಮಿಯಾಗಿದ್ದ ಬಕಾಸುರನೆಂಬು ವನನ್ನು ಸಂಹರಿಸಿದನು. ಬಕಾಸುರನ ಸಂಹಾರವಾದನಂತರ ಇವರು ನಮ್ಮ ತಂದೆಯ ರಾಜಧಾನಿಗೆ ಬಂದರು. ಕೃಷ್ಣ! ನೀನು ಭೀಷ್ಮಕನ ಪುತ್ರಿಯಾದ ರುಕ್ಮಿಣಿಯನ್ನು ಪಡೆದಂತೆಯೇ ಈ ಅರ್ಜುನನೂ ನನ್ನನ್ನು ಪಡೆದನು. ಅನೇಕ ರಾಜಾಧಿರಾಜರುಗಳಿಂದಲೂ ಭೇದಿಸಲು ಸಾಧ್ಯವಾಗದಿದ್ದ ಮತ್ಸ್ಯ ಯಂತ್ರವನ್ನು ಭೇದಿಸಿ ಕಿರೀಟಿಯು ನನ್ನನ್ನು ಜಯಿಸಿದನು. ಆ ಸಮಯದಲ್ಲಿ ನಮ್ಮ ತಂದೆಯ ಮೇಲೆಯೂ, ಇವರ ಮೇಲೆಯೂ ದಾಳಿಮಾಡಲು ಬಂದ ರಾಜರೆಲ್ಲರನ್ನೂ ಸವ್ಯಸಾಚಿಯು ಸದೆಬಡಿದನು.

(ಇಲ್ಲಿ ದ್ರೌಪದಿಯು ಹೇಳಿರುವ ಅನೇಕವಿಷಯಗಳು ಹಿಂದೆ ಅನುಕ್ರಮವಾಗಿ ಬಂದಿರುವ ಕಥೆಗೆ ವ್ಯತ್ಯಾಸವಾಗಿದೆ. ಆಗಿನ್ನೂ ದ್ರೌಪದಿಯ ವಿವಾಹವಾಗಿರಲಿಲ್ಲ. ನಡೆದ ವೃತ್ತಾಂತಗಳು ಕರ್ಣಾಕರ್ಣಿತವಾಗಿ ಪ್ರಚಾರವಾಗುವಾಗ ವಿಷಯವು ಸ್ವಲ್ಪ ವ್ಯತ್ಯಾಸವಾಗುವುದು ಸಹಜವಾಗಿಯೇ ಇದೆ. ದ್ರೌಪದಿಯು ಹೇಳಿರುವುದನ್ನೂ ನಾವು ಇದೇ ರೀತಿಯಲ್ಲಿ ಗ್ರಹಿಸಬೇಕಾಗಿದೆ.)

ವಾಸುದೇವ! ನಾನು ಇದುವರೆಗೆ ಹೇಳಿದುದೆಲ್ಲವೂ ಪಾಂಡವರ ಪರಾಕ್ರಮದ ಕಥನಗಳು. ಇಂತಹ ಲೋಕಾಧಿವೀರರ ಪತ್ನಿಯು ನಾನು. (ದ್ರೌಪದಿಯ ಕಣ್ಣುಗಳಲ್ಲಿ ಧಾರಾವಾಹಿಯಾಗಿ ಕಂಬನಿಯು ಹರಿಯು

ತ್ತಿದ್ದಿತು. ದುಃಖದ ಆವೇಗದಲ್ಲಿ ಮಾತುಗಳು ತಡೆದು ತಡೆದು ದ್ರೌಪದಿಯ ಮುಖಾರವಿಂದದಿಂದ ಹೊರಡುತ್ತಿದ್ದುವು.) ಆದರೆ, ವಾಸುದೇವ! ನಾನಿಂದು ನನ್ನ ಅತ್ತೆಯಾದ ಕುಂತಿಯನ್ನೂ ಬಿಟ್ಟಿರಬೇಕಾಗಿದೆ. ಕುಂತಿಯ ಸ್ಥಾನದಲ್ಲಿ ನನಗಿಂದು ಧೌಮ್ಯರಿದ್ದಾರೆ. ಅದು ಹೇಗಾದರೂ ಇರಲಿ! ಇದಕ್ಕುತ್ತರಿಸು ಕೃಷ್ಣ! ಇಂತಹ ವೀರಾಗ್ರಣಿಗಳು ತಮ್ಮ ಸಮ್ಮುಖದಲ್ಲಿಯೇ ತಮ್ಮ ಶತ್ರುಗಳಿಂದ ನನಗಾದ ಅವಮಾನವನ್ನು ಹೇಗೆತಾನೇ ಸಹಿಸಿಕೊಂಡು ಕುಳಿತಿದ್ದರು? ದುರ್ಬಲರೂ, ಕಡುಪಾಪಿಗಳೂ ಆದ ಕೌರವರು ಈ ನರವ್ಯಾಘ್ರರ ಸಮ್ಮುಖದಲ್ಲಿಯೇ ನನಗೆ ಕೊಟ್ಟ ಹಿಂಸೆಯನ್ನು ಬಾರಿ-ಬಾರಿಗೂ ನೆನೆ-ನೆನೆದು ಪರಿತಪಿಸುತ್ತಿರುವೆನು. ಕೃಷ್ಣ! ಈ ಸಂಕಟವನ್ನು ಎಷ್ಟು ಕಾಲದವರೆಗೆ ನಾನು ಅನುಭವಿಸಬೇಕೋ ತಿಳಿಯದಾಗಿದೆ.

ಕೃಷ್ಣ! ನಾನು ಶ್ರೇಷ್ಠವಾದ ವಂಶದಲ್ಲಿ ಜನಿಸಿದೆನು. ಮೇಲಾಗಿ ನಾನು ಅಯೋನಿಜೆ. ಈ ನರವ್ಯಾಘ್ರರಿಗೆ ಪ್ರೀತಿಪಾತ್ರಳಾದ ಪತ್ನಿಯಾಗಿರುವೆನು. ಮಹಾಪರಾಕ್ರಮಿಯಾದ, ಧರ್ಮಿಷ್ಠನಾದ ಪಾಂಡುವಿನ ಸೊಸೆಯು ನಾನು. ಅಂತಹ ನನ್ನನ್ನು ಧೂರ್ತರು ಮುಂದಲೆಯನ್ನು ಹಿಡಿದು ತುಂಬಿದ ಮಹಾಸಭೆಗೆ ಸೆಳೆದು ತಂದರು. ಅಲ್ಲದೆ ಇಂದ್ರೋಪಮರಾದ ಈ ಪಂಚಪಾಂಡವರ ಸಮ್ಮುಖದಲ್ಲಿಯೇ ಸೆಳೆದಾಡಿದರು. ವಾಸುದೇವ! ಅಯ್ಯೋ, ನನ್ನ ವಿಧಿಯೇ!"–ಎಂದು ಹೇಳುತ್ತಾ ದ್ರೌಪದಿಯು ತನ್ನ ಕಮಲದ ದಳಗಳಂತಿದ್ದ ಮೃದುವಾದ ಎರಡು ಕೈಗಳಿಂದಲೂ ಮುಖವನ್ನು ಮುಚ್ಚಿಕೊಂಡು ಬಿಕ್ಕಿ-ಬಿಕ್ಕಿ ಅತ್ತಳು. ಧಾರಾವಾಹಿಯಾದ ಕಂಬನಿಗಳಿಂದ ಅವಳ ಎದೆಯೆಲ್ಲವೂ ತೋಯ್ದುಹೋಯಿತು. ಕಣ್ಣುಗಳನ್ನು ಬಾರಿ- ಬಾರಿಗೂ ಒರೆಸಿಕೊಳ್ಳುತ್ತಿದ್ದಳು. ದ್ರೌಪದಿಗೆ ತನ್ನ ದುಃಖವನ್ನು ಹೇಳಿಕೊಳ್ಳಲು ಕೂಡ ಇದುವರೆಗೂ ಅವಕಾಶವೇ ಇರಲಿಲ್ಲ. ಬಹಳ ದಿನಗಳವರೆಗೆ ಹುದುಗಿಸಿಕೊಂಡು ಇಟ್ಟುಕೊಂಡಿದ್ದ ದುಃಖವು ಕೃಷ್ಣನ ಸಮ್ಮುಖದಲ್ಲಿ ಇಮ್ಮಡಿಯಾಗಿ ಹೊರಹೊಮ್ಮಿತು. (ಹೆಚ್ಚು ದುಃಖವಾದಾಗ, ಹೆಚ್ಚು ಸಂಕಟಕ್ಕೆ ಸಿಕ್ಕಿದಾಗ ಅದನ್ನು ಇತರರೊಡನೆ ಹೇಳದೇ ಇರಲು ಸಾಧ್ಯವಾಗುವುದಿಲ್ಲ. ಹಾಗೆ ತೋಡಿಕೊಂಡರೆ ದುಃಖದ ಆವೇಗವು ಸ್ವಲ್ಪವಾದರೂ ಶಮನವಾದಂತಾಗುತ್ತದೆ.)

ದ್ರೌಪದಿಯ ಸಂಕಟವು ಕಡೆಯ ಹಂತವನ್ನು ಮುಟ್ಟಿತು. ಕರ್ಕಶ ಧ್ವನಿಯಲ್ಲಿ ಹೇಳಿದಳು–“ಕೃಷ್ಣ! ನಾನು ಭ್ರಾಂತಳಾಗಿರುವೆನು.

**ನೈವ ಮೇ ಪತಯಃ ಸನ್ತಿ ನ ಪುತ್ರಾ ನ ಚ ಬಾನ್ಧವಾಃ ।**
**ನ ಭ್ರಾತರೋ ನ ಚ ಪಿತಾ ನೈವ ತ್ವಂ ಮಧುಸೂದನ ॥೧೨೫॥**

**ಯೇ ಮಾಂ ವಿಪ್ರಕೃತಾಂ ಕ್ಷುದ್ರೈರುಪೇಕ್ಷಧ್ವಂ ವಿಶೋಕವತ್ ।**
**ನ ಚ ಮೇ ಶಾಮ್ಯತೇ ದುಃಖಂ ಕರ್ಣೋ ಯತ್ಪ್ರಹಸತ್ತದಾ ॥೧೨೬॥**

ನಿಶ್ಚಯವಾಗಿ ಹೇಳುವುದಾದರೆ ನನಗೆ ಗಂಡಂದಿರೂ ಇಲ್ಲ. ಮಕ್ಕಳೂ ಇಲ್ಲ. ಸಹೋದರರರೂ ಇಲ್ಲ. ತಂದೆಯೂ ಇಲ್ಲ. ಮಧುಸೂದನ! ನೀನೂ ನನ್ನ ಭಾಗಕ್ಕೆ ಇಲ್ಲವೆಂದೇ ತಿಳಿಯಬೇಕಾಗಿದೆ. ನಾನು ನಿರ್ಗತಿಕಳು, ನಿರಾಶ್ರಯಳು, ನಿರ್ಬಲಳು. ಏಕೆಂದರೆ : ಕ್ಷುದ್ರರಿಂದ ಹಿಂಸಿಸಲ್ಪಟ್ಟ ನನ್ನನ್ನು ನೀವೆಲ್ಲರೂ ನೋಡುತ್ತಿದ್ದರೂ ಶೋಕವಿಲ್ಲದವರಂತೆ ನನ್ನ ದುಃಖಪರಿಹಾರದ ವಿಷಯದಲ್ಲಿ ಉಪೇಕ್ಷೆಯಿಂದಿರುವಿರಲ್ಲವೇ? ಕರ್ಣನು ಆಡಿದ ಅಲುಗಿನ ಧಾರೆಯಂತಹ ಕರ್ಣಕಠೋರವಾದ ಅಪಹಾಸ್ಯದ ಮಾತುಗಳು ನನ್ನ ಹೃದಯದಲ್ಲಿ ಕ್ಷಣ-ಕ್ಷಣಕ್ಕೂ ವೇದನೆಯುಂಟುಮಾಡುತ್ತಿವೆ. ಈ ವೇದನೆಯನ್ನು ನಾನು ಖಂಡಿತವಾಗಿಯೂ ಸಹಿಸಲಾರೆನು, ಮಾಧವ!

**ಚತುರ್ಭಿಃ ಕಾರಣೈಃ ಕೃಷ್ಣ ತ್ವಯಾ ರಕ್ಷ್ಯಾಸ್ಮಿ ನಿತ್ಯಶಃ ।**
**ಸಮ್ಬನ್ಧಾದ್ಗೌರವಾತ್ಸಖ್ಯಾತ್ಪ್ರಭುತ್ವೇನೈವ ಕೇಶವ ॥೧೨೭॥**

ಆದರೆ ಕೃಷ್ಣ! ನೀನು ಮಾತ್ರ ನಾಲ್ಕು ಕಾರಣಗಳಿಂದ ನನ್ನನ್ನು ರಕ್ಷಿಸಿಯೇ ತೀರಬೇಕು. ಮೊದಲನೆಯದಾಗಿ : ನಾನು ನಿನ್ನ ಬಂಧು. ನಿನ್ನ ಸೋದರತ್ತೆಯ ಸೊಸೆಯಾಗಿದ್ದೇನೆ. ಎರಡನೆಯದಾಗಿ : ನಾನು ಅಗ್ನಿಸಂಭೂತೆಯೆಂಬ ಗೌರವದಿಂದಲೂ ನನ್ನನ್ನು ನೀನು ರಕ್ಷಿಸಬೇಕು. ಮೂರನೆಯದಾಗಿ : ನಾನು ನಿನ್ನ ಸಖಿಯು, ನೀನು ನನ್ನ ಸಖನು, ಕೃಷ್ಣ! ಈ ಕಾರಣದಿಂದಲೂ ನನ್ನನ್ನು ನೀನು ರಕ್ಷಿಸಬೇಕು. ನಾಲ್ಕನೆಯದಾಗಿ : ನೀನು ನನ್ನ ಪ್ರಭು, ಸ್ವಾಮೀ, ಶರಣ್ಯ, ಗುರು. ನಾನು ನಿನ್ನ ಅನನ್ಯಭಕ್ತಳು, ಮಹಾನುಭಾವ! ನಾನು ನಿನ್ನ ದಾಸೀ! ಈ ಕಾರಣದಿಂದಲೂ ನೀನು ನನ್ನನ್ನು ರಕ್ಷಿಸಬೇಕು, ಕೇಶವ!”

ದ್ರೌಪದಿಯ ದುಃಖವನ್ನು ನೋಡಿ ಕೃಷ್ಣನು ಬಹಳ ಪರಿತಾಪದಿಂದಲೂ ಕೋಪದಿಂದಲೂ ದ್ರೌಪದಿಯನ್ನು ಕುರಿತು ಹೇಳಿದನು :

"ಶುಭಾಂಗಿ! ನೀನಿನ್ನು ದುಃಖಿಸಬೇಡ. ನಿನಗೆ ಯಾರು ಮಹಾಪರಾಧವನ್ನೆಸಗಿರುವರೋ ಮತ್ತು ಯಾರ ವಿಷಯದಲ್ಲಿ ನೀನು ಕುಪಿತಳಾಗಿರುವೆಯೋ–ಅವರ ಪತ್ನಿಯರೂ, ಅರ್ಜುನನ ಬಾಣಗಳಿಂದ ಮುಚ್ಚಲ್ಪಡುವ, ರಣಾಂಗಣದಲ್ಲಿ ಸತ್ತು ಬೀಳುವ ಮತ್ತು ರಕ್ತದಿಂದ ತೋಯ್ದಿರುವ ತಮ್ಮ ಪತಿಗಳನ್ನು ನೋಡಿ–ನೀನೀಗ ಅಳುತ್ತಿರುವಂತೆ ಆಗ ಅಳುತ್ತಾರೆ. ಅಳುವುದನ್ನು ನಿಲ್ಲಿಸು, ದ್ರೌಪದಿ! ನಿನ್ನ ಮನಸ್ಸಿನ ಯಾತನೆಯು ಎಷ್ಟಿದೆಯೆಂಬುದನ್ನು ನಾನು ಚೆನ್ನಾಗಿ ಬಲ್ಲೆನು. ಪಾಂಡವರ ಹಿತಚಿಂತನೆಗಾಗಿ ನಾನು ನನ್ನ ಸಂಪೂರ್ಣಶಕ್ತಿಯನ್ನೂ ವಿನಿಯೋಗಿಸುವೆನು.

**ಸತ್ಯಂ ತೇ ಪ್ರತಿಜಾನಾಮಿ ರಾಜ್ಞಾಂ ರಾಜ್ಞೀ ಭವಿಷ್ಯಸಿ ।**
**ಪತೇದ್ದ್ಯೌರ್ಹಿಮವಾಞ್ಛೀರ್ಯೇತ್ಪೃಥಿವೀ ಶಕಲೀಭವೇತ್ ।**
**ಶುಷ್ಯೇತ್ತೋಯನಿಧಿಃ ಕೃಷ್ಣೇ ನ ಮೇ ಮೋಘಂ ವಚೋ ಭವೇತ್ ॥**

ಪಾಂಚಾಲಿ! ನೀನು ಪುನಃ ಚಕ್ರವರ್ತಿನಿಯಾಗುವೆಯೆಂದು ಸತ್ಯವಾಗಿ ಹೇಳುವೆನು. ಮೇಲಿರುವ ಸ್ವರ್ಗವೂ ಕಳಚಿ ಬೀಳಬಹುದು! ಅಚಲವಾದ ಹಿಮವತ್ಪರ್ವತವೂ ಸೀಳಿಹೋಗಬಹುದು! ಈ ಭೂಮಂಡಲವೇ ಚೂರು-ಚೂರಾಗಿ ವಿನಾಶವಾಗಲೂಬಹುದು! ಸಮುದ್ರದ ನೀರೆಲ್ಲವೂ ಒಣಗಲೂಬಹುದು! ಆದರೆ ನಾನಾಡಿದ ಮಾತು ಮಾತ್ರ ಖಂಡಿತವಾಗಿಯೂ ಸುಳ್ಳಾಗದು."

ಕೃಷ್ಣನ ಆ ಮಾತುಗಳನ್ನು ಕೇಳಿದನಂತರ ದ್ರೌಪದಿಯು ತನ್ನ ಕಟಾಕ್ಷವನ್ನು ಅರ್ಜುನನ ಕಡೆಗೆ ಹರಿಸಿದಳು. ದ್ರೌಪದಿಯ ಮನಸ್ಸಿನ ಇಂಗಿತವನ್ನು ತಿಳಿದವನಾಗಿ ಅರ್ಜುನನೂ ಪಾಂಚಾಲಿಯನ್ನು ಸಂತೈಸುತ್ತಾ ಹೇಳಿದನು : "ಶುಭತಾಮ್ರಾಕ್ಷಿ! ಅಳಬೇಡ. ಮಾಧವನು ಹೇಳಿದಂತೆಯೇ ಎಲ್ಲವೂ ನಡೆಯುವುದು. ಇದರಲ್ಲಾವ ಸಂಶಯವೂ ಇಲ್ಲ."

ಅನಂತರ ಧೃಷ್ಟದ್ಯುಮ್ನನೂ ತನ್ನ ತಂಗಿಯನ್ನು ಸಮಾಧಾನಪಡಿಸುತ್ತಾ ಹೇಳಿದನು : "ತಂಗಿ! ನಾನು ದ್ರೋಣನ ಸಂಹಾರಕ್ಕಾಗಿಯೇ

ಹುಟ್ಟಿರುವೆನು. ಶಿಖಂಡಿಯು ಭೀಷ್ಮನನ್ನು ಸಂಹರಿಸುವನು. ಭೀಮಸೇನನು ದುರ್ಯೋಧನನನ್ನೂ, ಧನಂಜಯನು ಕರ್ಣನನ್ನೂ ಸಂಹರಿಸುವರು. ಪಾಂಚಾಲಿ! ನಿಜವಾಗಿ ಹೇಳುವುದಾದರೆ ಬಲರಾಮ-ಕೃಷ್ಣರ ಬೆಂಬಲ ವಿರುವಾಗ ತ್ರಿಲೋಕನಾಥನಾದ ಇಂದ್ರನೂ ನಮ್ಮೊಡನೆ ಯುದ್ಧ ಮಾಡಲಾರನು. ಹೀಗಿರುವಾಗ ಧೃತರಾಷ್ಟ್ರನ ಮಕ್ಕಳು ಗಣನೀಯರೇ? ಆದರೆ ಅದಕ್ಕಾಗಿ ಸ್ವಲ್ಪಕಾಲ ನಿರೀಕ್ಷಣೆಯನ್ನು ಮಾಡಬೇಕಾಗಿದೆ, ದ್ರೌಪದಿ!"

ಧೃಷ್ಟದ್ಯುಮ್ನನು ದ್ರೌಪದಿಗೆ ಹೀಗೆ ಹೇಳಿದನಂತರ ಎಲ್ಲರ ದೃಷ್ಟಿ ಪಥಗಳೂ ಕೃಷ್ಣನ ಕಡೆಗೆ ತಿರುಗಿದುವು. ಕೃಷ್ಣನು ಯುಧಿಷ್ಠಿರನೊಡನೆ ಹೇಳುತ್ತಿರುವುದನ್ನು ಎಲ್ಲರೂ ಮೌನವಾಗಿ ಕುಳಿತು ಕೇಳುತ್ತಿದ್ದರು.

೧೨ನೆಯ ಅಧ್ಯಾಯವು ಮುಗಿಯಿತು.

೧೩ನೆಯ ಅಧ್ಯಾಯ ಅರ್ಜುನಾಭಿಗಮನಪರ್ವ (ಮುಂದುವರಿದಿದೆ.)

## ದ್ಯೂತದ ಸಮಯದಲ್ಲಿ ತಾನು ಪಟ್ಟಣದಲ್ಲಿರಲಿಲ್ಲವೆಂಬ ವಿಷಯವನ್ನು ಶ್ರೀಕೃಷ್ಣನು ವಿವರಿಸಿ ಹೇಳಿದುದು

ಪಾರಿಕ್ಷಿತ! ಶ್ರೀಕೃಷ್ಣನು ಧರ್ಮಾದಿಗಳನ್ನು ಕುರಿತು ಹೇಳಿದನು :

"ಯುಧಿಷ್ಠಿರ! ನಾನು ದ್ವಾರವತಿಯಲ್ಲಿಯೇ ಇದ್ದಿದ್ದರೆ ಖಂಡಿತ ವಾಗಿಯೂ ನಿಮಗೆ ಈ ವಿಧವಾದ ಕಷ್ಟವು ಒದಗುತ್ತಿರಲಿಲ್ಲ. ಧೃತರಾಷ್ಟ್ರ ನಿಂದಾಗಲೀ, ಅವನ ಮಗನಾದ ದುರ್ಯೋಧನನಿಂದಾಗಲೀ ಪಗಡೆಯಾಟಕ್ಕೆ ಆಹ್ವಾನಿಸಲ್ಪಡದಿದ್ದರೂ ನಾನಾಗಿಯೇ ಬಂದು ಭೀಷ್ಮ-ದ್ರೋಣ-ಕೃಪ-ಬಾಹ್ಲಿಕರ ಒತ್ತಾಸೆಯನ್ನು ಪಡೆದು, ದ್ಯೂತದಿಂದ ಪ್ರಾಪ್ತವಾಗುವ ಅನಿಷ್ಟಗಳೆಲ್ಲವನ್ನೂ ಸಭ್ಯರಿಗೆ ವಿವರಿಸಿ ಹೇಳಿ, ದ್ಯೂತವೇ ನಡೆಯದಂತೆ ಮಾಡಲು ಯತ್ನಿಸುತ್ತಿದ್ದೆನು. ಯುಧಿಷ್ಠಿರ! ನಿನ್ನ ಸಲುವಾಗಿ ನಾನು ಧೃತರಾಷ್ಟ್ರನಿಗೆ ಪಗಡೆಯಾಟದ ಗೋಜಿಗೆ ಅವನ ಮಕ್ಕಳು ಹೋಗಕೂಡ ದೆಂದು ನಿರ್ದೇಶನಮಾಡಿ ಹೇಳುತ್ತಿದ್ದೆನು. ಪೂರ್ವದಲ್ಲಿ ಪಗಡೆಯಾಟದ ಕಾರಣಗಳಿಂದ ರಾಜ್ಯ-ಕೋಶಗಳನ್ನು ಕಳೆದುಕೊಂಡ ನಳನೇ ಮೊದಲಾದ

ರಾಜರ ಇತಿಹಾಸಗಳನ್ನು ಧೃತರಾಷ್ಟ್ರನಿಗೆ ವಿವರಿಸುತ್ತಿದ್ದೆನು. ಬುದ್ಧಿಗೆ ನಿಲುಕದ, ಯೋಚಿಸಲೂ ಸಾಧ್ಯವಾಗದ, ಅನೇಕವಿಧವಾದ ಕಷ್ಟಗಳು ದ್ಯೂತದಿಂದ ಒದಗುತ್ತವೆ. ದ್ಯೂತವು ಪ್ರಾರಂಭವಾಯಿತೆಂದರೆ ಮುಂದೆ ದ್ಯೂತವನ್ನು ಎಲ್ಲಿಗೆ ನಿಲ್ಲಿಸಬೇಕೆಂಬ ಪರಿವೆಯೇ ಇರುವುದಿಲ್ಲ. ಗೆದ್ದವನು ದ್ಯೂತವನ್ನು ಮುಂದುವರಿಸುವುದು ಸಹಜವಾಗಿಯೇ ಇದೆ. ಸೋತವನು ಗೆಲುವಿನ ಆಶಯದಿಂದ ಆಟವನ್ನು ಮುಂದುವರಿಸುತ್ತಾನೆ. ನೀನಿಂದು ಕಳೆದುಕೊಂಡಿರುವಂತೆ ರಾಜ್ಯ-ಕೋಶಾದಿಗಳೆಲ್ಲವನ್ನೂ ಕಳೆದುಕೊಳ್ಳು ವವರೆಗೂ ಜೂಜುಕೋರನು ದ್ಯೂತದಿಂದ ವಿಮುಕ್ತಿಹೊಂದಲಾರನು. ಇವೆಲ್ಲವನ್ನೂ ಧೃತರಾಷ್ಟ್ರನಿಗೆ ವಿವರಿಸಿ ಹೇಳುತ್ತಿದ್ದೆನು, ಯುಧಿಷ್ಠಿರ!

**ಸ್ತ್ರಿಯೋಽಕ್ಷಾ ಮೃಗಯಾ ಪಾನಮೇತತ್ಕಾಮಸಮುತ್ಥಿತಮ್ ।**
**ದುಃಖಂ ಚತುಷ್ಟಯಂ ಪ್ರೋಕ್ತಂ ಯೈರ್ನರೋ ಭ್ರಶ್ಯತೇ ಶ್ರಿಯಃ ॥**

ಹೆಂಗಸರು, ದ್ಯೂತ, ಬೇಟೆ ಮತ್ತು ಮದ್ಯಪಾನ–ಈ ನಾಲ್ಕನ್ನು ಕಾಮಜನಿತವಾದ ದುಃಖಚತುಷ್ಟಯಗಳೆಂದು ಹೇಳುತ್ತಾರೆ. ಈ ನಾಲ್ಕರಲ್ಲಿ ಮಿತಿಮೀರಿದ ಆಸಕ್ತಿಯನ್ನು ಹೊಂದುವ ಮನುಷ್ಯನು ಐಶ್ವರ್ಯವನ್ನೂ, ಕೀರ್ತಿಯನ್ನೂ ಕಳೆದುಕೊಳ್ಳುತ್ತಾನೆ. ಈ ನಾಲ್ಕರ ಮೇಲೆಯೂ ಮಿತಿಮೀರಿದ ಆಸಕ್ತಿಯಿಂದಿರುವ ಮನುಷ್ಯನು ಹಾಳಾಗುತ್ತಾನೆಂಬುದರಲ್ಲಿ ಸಂಶಯವೇ ಇಲ್ಲ. ಈ ನಾಲ್ಕರಲ್ಲಿ ಒಂದೊಂದರಲ್ಲಿ ಮಿತಿಮೀರಿ ಆಸಕ್ತಿ ಯಿದ್ದರೂ ಸಾಕು. ಮನುಷ್ಯನು ನಾನಾವಿಧವಾದ ತೊಂದರೆಗಳಿಗೀಡಾಗುವ ನೆಂದು ಶಾಸ್ತ್ರಜ್ಞರು ಹೇಳುತ್ತಾರೆ. ಅಕ್ಷದ್ಯೂತವಂತೂ ಹೆಚ್ಚು ಹಾನಿಕರ. ಜೂಜಾಡುವವರಿಗೂ ಇದರಿಂದುಂಟಾಗುವ ಅನಿಷ್ಟವು ತಿಳಿದಿರುತ್ತದೆ. ಅನಿಷ್ಟವೆಂದು ತಿಳಿದಿದ್ದರೂ ಅವರು ಬಿಡಲಾರರು. ಜೂಜಾಡುವವರು ಒಂದೇ ದಿನದಲ್ಲಿ ತಮ್ಮ ಅತುಲೈಶ್ವರ್ಯವನ್ನೂ ಕಳೆದುಕೊಳ್ಳುತ್ತಾರೆ ; ಕಷ್ಟಕ್ಕೆ ಗುರಿಯಾಗುತ್ತಾರೆ. ಜೂಜಿನ ಅಮಲಿನಲ್ಲಿ ನಿಷ್ಠುರವಾದ ಮಾತು ಗಳನ್ನಾಡುತ್ತಾರೆ. ಈ ವಿಷಯಗಳೆಲ್ಲವನ್ನೂ ನಾನು ಅಂಬಿಕಾಸುತನಿಗೆ ವಿವರಿಸಿ ಹೇಳುತ್ತಿದ್ದೆನು. ಆಗ ನಾನು ಅಲ್ಲಿದ್ದು ಅವನು ನನ್ನ ಮಾತನ್ನು ಕೇಳಿ ದ್ಯೂತವಾಡಲು ಅವಕಾಶವನ್ನೀಯದೇ ಇದ್ದಿದ್ದರೆ ಕುರುಗಳಿಗೆ

ಕ್ಷೇಮವುಂಟಾಗುತ್ತಿದ್ದಿತು ಮತ್ತು ಧರ್ಮರಕ್ಷಣೆಯೂ ಆಗುತ್ತಿದ್ದಿತು. ಒಂದು ವೇಳೆ ಔಷಧಪ್ರಾಯವಾದ ನನ್ನ ಉತ್ತಮ ಸಲಹೆಗಳನ್ನು ಧೃತರಾಷ್ಟ್ರನು ಕೇಳದೆ ಇದ್ದಿದ್ದರೆ–ನಾನು ಹೇಳಿದಂತೆ ನಡೆದೇ ತೀರಬೇಕೆಂದು ಬಲಾತ್ಕರಿಸಿ ಹೇಳುತ್ತಿದ್ದೆನು. ಅವನ ಸಮೀಪದಲ್ಲಿ ಅವನಿಗೆ ಮಿತ್ರರಂತೆ ವರ್ತಿಸುತ್ತಿರುವವರು ಮತ್ತು ದುಷ್ಟಸಲಹೆಗಳನ್ನು ಕೊಡುತ್ತಿರುವವರು ನಿಶ್ಚಯವಾಗಿಯೂ ಅವನ ಶತ್ರುಗಳೇ. ಅವರ ಬೆಂಬಲದಿಂದ ಧೃತರಾಷ್ಟ್ರನೇನಾದರೂ ನನ್ನ ನಿರ್ದೇಶನವನ್ನು ತಿರಸ್ಕರಿಸಿದ್ದರೆ ಜೂಜುಕೋರರ ಸಹಿತವಾಗಿ ಅವರೆಲ್ಲರನ್ನೂ ಸಂಹರಿಸಿಬಿಡುತ್ತಿದ್ದೆನು. ನಿಶ್ಚಯವಾಗಿಯೂ ನಾನು ಅಂದು ಆನರ್ತದೇಶದಲ್ಲಿ ಇಲ್ಲದೇ ಇದ್ದುದು ಇಷ್ಟೊಂದು ಅನರ್ಥಕ್ಕೆ ಕಾರಣವಾಯಿತು. ನೀನಿಷ್ಟು ಕಷ್ಟಗಳಿಗೆ ಗುರಿಯಾಗಬೇಕಾಯಿತು. ದ್ವಾರಕೆಗೆ ಬಂದೊಡನೆಯೇ ವಿಷಯಗಳೆಲ್ಲವನ್ನೂ ಯುಯುಧಾನನು ನನಗೆ ವಿವರಿಸಿ ಹೇಳಿದನು. ವಾರ್ತೆಯನ್ನು ಕೇಳಿದನಂತರ ಒಂದು ನಿಮಿಷವಾದರೂ ದ್ವಾರಕೆಯಲ್ಲಿ ನಿಲ್ಲಲು ನನಗೆ ಮನಸ್ಸಾಗಲಿಲ್ಲ. ಬಹಳ ದುಃಖಿತನಾಗಿ ನಿಮ್ಮನ್ನು ನೋಡಬೇಕೆಂದು ಒಡನೆಯೇ ಹೊರಟುಬಂದೆನು. ಯುಧಿಷ್ಠಿರ! ನಿಶ್ಚಯವಾಗಿಯೂ ಅನುಜರೊಡನೆ ವ್ಯಸನದಲ್ಲಿ ಮುಳುಗಿರುವ ನಿನ್ನನ್ನು ನಾವಿಂದು ನೋಡಿ ಬಹಳ ಪರಿತಾಪಗೊಂಡಿದ್ದೇವೆ. ನೀವೆಲ್ಲರೂ ಇಂದು ಮಹಾದುಃಖದಲ್ಲಿ ಮುಳುಗಿರುವಿರಿ"–ಎಂದು ಹೇಳಿ ಶ್ರೀಕೃಷ್ಣನು ನಿಟ್ಟುಸಿರು ಬಿಟ್ಟನು.

೧೩ನೆಯ ಅಧ್ಯಾಯವು ಮುಗಿಯಿತು.

೧೪ನೆಯ ಅಧ್ಯಾಯ ಅರ್ಜುನಾಭಿಗಮನಪರ್ವ (ಮುಂದುವರಿದಿದೆ.)

## ಶ್ರೀಕೃಷ್ಣನು ಶಾಲ್ವವಧೆಯ ವೃತ್ತಾಂತವನ್ನು ಸಂಕ್ಷೇಪವಾಗಿ ಹೇಳಿದುದು

ಜನಮೇಜಯ! ದ್ಯೂತಸಮಯದಲ್ಲಿ ದ್ವಾರಕೆಯಲ್ಲಿರಲಿಲ್ಲವೆಂಬುದನ್ನು ಶ್ರೀಕೃಷ್ಣನ ಮುಖದಿಂದಲೇ ಕೇಳಿದನಂತರ ಆ ಮಹಾನುಭಾವನು ಎಲ್ಲಿಗೆ ತೆರಳಿದ್ದನೆಂದು ತಿಳಿಯಲು ಯುಧಿಷ್ಠಿರನಿಗೆ ಕುತೂಹಲವುಂಟಾಗಿ ಶ್ರೀಕೃಷ್ಣನನ್ನು ಕೇಳಿದನು :

"ಕೃಷ್ಣ! ನೀನು ಆ ಸಮಯದಲ್ಲಿ ದ್ವಾರಕೆಯಲ್ಲೇಕಿರಲಿಲ್ಲ? ಬೇರಾವ ದೇಶಕ್ಕೆ ಹೋಗಿದ್ದೆ? ಪ್ರವಾಸದಿಂದ ಯಾವ ಕಾರ್ಯವನ್ನು ಸಾಧಿಸಿದೆ?"

"ಯುಧಿಷ್ಠಿರ! ಆ ಸಮಯದಲ್ಲಿ ನಾನು ಶಾಲ್ವನ ನಗರಾಕಾರವಾದ ಸೌಭವಿಮಾನವನ್ನು ಧ್ವಂಸಮಾಡಲು ಹೋಗಿದ್ದೆನು. ಅದಕ್ಕೆ ಕಾರಣವನ್ನೂ ಹೇಳುವೆನು, ಕೇಳು. ನೀನು ಮಾಡಿದ ರಾಜಸೂಯಯಾಗದ ಸಮಯದಲ್ಲಿ ದಮಘೋಷನ ಮಗನಾದ ಶಿಶುಪಾಲನನ್ನು ನಾನು ಕೊಂದ ವಿಷಯವು ನಿನಗೂ ತಿಳಿದೇ ಇದೆ. ನನಗೆ ನೀನು ಅರ್ಪಿಸಿದ ಪ್ರಥಮಪೂಜೆಗೆ ಅವನು ಪ್ರತಿಭಟಿಸಿದ್ದರಿಂದಲೂ, ನನ್ನನ್ನೂ ಮತ್ತು ನಿನ್ನನ್ನೂ ಬಹುವಾಗಿ ನಿಂದಿಸಿದುದರಿಂದಲೂ–ಅವನನ್ನು ಅಂದು ಅಲ್ಲಿ ಕೊಲ್ಲಲೇಬೇಕಾಯಿತು. ಶಿಶುಪಾಲನ ಸಂಹಾರವು ನನ್ನಿಂದ ಆಯಿತೆಂಬುದನ್ನು ಕೇಳಿದೊಡನೆಯೇ ಸೌಭಪತಿಯಾದ ಶಾಲ್ವನು ಕುಪಿತನಾಗಿ ದ್ವಾರಕೆಯ ಮೇಲೆ ದಂಡೆತ್ತಿ ಬಂದನು. ಆ ಸಮಯದಲ್ಲಿ ನಾನು ನಿನ್ನೊಡನೆ ಇಂದ್ರಪ್ರಸ್ಥದಲ್ಲಿಯೇ ಇದ್ದೆನು. ಶಾಲ್ವನು ತನ್ನನ್ನು ಎದುರಿಸಿದ ವೃಷ್ಣಿಕುಲದ ರಾಜಕುಮಾರರನ್ನು ನಿಷ್ಕರುಣೆಯಿಂದ ಕೊಂದು, ದ್ವಾರಕೆಯಲ್ಲಿದ್ದ ನಯನಮನೋಹರವಾದ ಉದ್ಯಾನವನಗಳನ್ನೆಲ್ಲಾ ಧ್ವಂಸಮಾಡಿ, ತನ್ನ ನಗರಿಗೆ ತೆರಳಿದನು. ಅವನು ಬಂದುದು ನನ್ನ ಸಂಹಾರಕ್ಕಾಗಿ. ದ್ವಾರಕೆಗೆ ಬಂದೊಡನೆಯೇ ಗರ್ಜಿಸಿ ಹೇಳಿದನಂತೆ–"ಆ ವೃಷ್ಣಿಕುಲಕಳಂಕನೆಲ್ಲಿ? ವಸುದೇವನ ಮಗನಾದ, ದುರಾತ್ಮನಾದ ಆ ವಾಸುದೇವನೆಲ್ಲಿದ್ದಾನೆ? ಯುದ್ಧಪ್ರೇಮಿಯಾದ ಆ ದುರುಳನ ದರ್ಪವನ್ನು ಅಡಗಿಸುವ ಸಲುವಾಗಿಯೇ ನಾನಿಂದು ಇಲ್ಲಿಗೆ

ಬಂದಿರುವೆನು. ಅವನೆಲ್ಲಿ ಹೋಗಿರುವನೆಂದು ನಿಶ್ಚಯವಾಗಿ ಹೇಳಿರಿ. ಅವನಿರುವಲ್ಲಿಗೇ ಹೋಗಿ ಅವನನ್ನು ಧ್ವಂಸಮಾಡುವೆನು. ಕಂಸ-ಕೇಶಿಗಳ ಸಂಹಾರಕನಾದ ಅವನನ್ನು ಸಂಹರಿಸಿದನಂತರವೇ ನಾನು ನನ್ನ ಪಟ್ಟಣಕ್ಕೆ ಹಿಂದಿರುಗುವೆನು. ಎಲ್ಲರೂ ಕೇಳಿರಿ! ಈ ಆಯುಧವನ್ನು ಹಿಡಿದು ಪ್ರಮಾಣಮಾಡಿ ಹೇಳುತ್ತೇನೆ. ಖಂಡಿತವಾಗಿಯೂ ಅವನನ್ನು ಸಂಹರಿಸದೇ ನಾನು ನನ್ನ ಪಟ್ಟಣಕ್ಕೆ ಹಿಂದಿರುಗುವುದಿಲ್ಲ. ಅವನೆಲ್ಲಿ? ಒಡನೆಯೇ ಹೇಳಿರಿ. ನನ್ನ ಸೋದರಸಮಾನನಾದ ಶಿಶುಪಾಲನ ಮರಣವಾರ್ತೆಯನ್ನು ಕೇಳಿದ ನಂತರ ನನ್ನ ಅಂಗಾಂಗಗಳೆಲ್ಲವೂ ಕೋಪಾಗ್ನಿಯಿಂದ ಸುಡುತ್ತಲಿವೆ. ದುಷ್ಟನಾದ, ದ್ರೋಹಿಯಾದ, ನೀಚನಾದ ಆ ಕೃಷ್ಣನನ್ನು ಯಮಾಲಯಕ್ಕೆ ಕಳುಹಿಸಿ ಕೋಪಾಗ್ನಿಯನ್ನು ಶಾಂತಗೊಳಿಸುವೆನು. ಶಿಶುಪಾಲನಿನ್ನೂ ಹರೆಯದವನು. ಯುದ್ಧಕ್ಕೂ ಸಿದ್ಧನಾಗಿರಲಿಲ್ಲ. ಅಂತಹ ನನ್ನ ಸೋದರನನ್ನು ಕೊಂದ ಕಡುಪಾಪಿಯನ್ನು ಒಂದು ನಿಮಿಷವಾದರೂ ಪ್ರಾಣದಿಂದ ಉಳಿಯಲು ಬಿಡುವುದಿಲ್ಲ."

ಇವೇ ಮುಂತಾಗಿ ಹೇಳುತ್ತಾ ಶಾಲ್ವನು ನನ್ನನ್ನು ಬಹುವಾಗಿ ನಿಂದಿಸಿ ಎದುರಾಗಿ ಸಿಕ್ಕಿದ ವೀರರಾದ ವೃಷ್ಣಿಯೋಧರನ್ನು ತುಂಡರಿಸಿ, ಉದ್ಯಾನವನಗಳನ್ನೂ ಧ್ವಂಸಮಾಡಿ, ತನ್ನ ದಿವ್ಯವಾದ ಸೌಭವಿಮಾನವನ್ನೇರಿ ಆಕಾಶಕ್ಕೆ ಹಾರಿದನೆಂಬ ವಾರ್ತೆಯನ್ನು ನಾನು ದ್ವಾರಕೆಗೆ ತಲುಪಿದನಂತರ ತಿಳಿದೆನು. ಆ ವಾರ್ತೆಯನ್ನು ಕೇಳಿ ನನಗೂ ಹೆಚ್ಚಿನ ಕೋಪವುಂಟಾಯಿತು. ಆದರೂ ಮುಂದೇನು ಮಾಡಬೇಕೆಂಬುದನ್ನೂ, ಅದರಿಂದುಂಟಾಗುವ ಪರಿಣಾಮವನ್ನೂ ಶಾಂತವಾಗಿ ಕುಳಿತು ವಿಮರ್ಶಿಸಿ, ಕಟ್ಟಕಡೆಗೆ ಶಾಲ್ವನನ್ನು ಸಂಹರಿಸಬೇಕೆಂದೇ ನಿಶ್ಚಯಿಸಿದೆನು. ಅವನು ವೃಷ್ಣಿಕುಲದ ರಾಜಕುಮಾರರಿಗೆ ಕೊಟ್ಟ ಹಿಂಸೆ, ನನ್ನನ್ನು ಕುರಿತು ಮಾಡಿದ ನಿಂದನೆ ಮತ್ತು ಅವನ ದರ್ಪ–ಇವೆಲ್ಲವನ್ನೂ ಪುನರ್ವಿಮರ್ಶೆಮಾಡಿದನಂತರ–'ಅವನ ಕಾರ್ಯಕ್ಕೆ ಮರಣದಂಡನೆಯೇ ಶಿಕ್ಷೆ'–ಎಂದು ನಿರ್ಧರಿಸಿದವನಾಗಿ ಅವನನ್ನು ಹುಡುಕಿಕೊಂಡು ಅಲ್ಲಲ್ಲಿ ಅಲೆದಾಡಿದೆನು.

ಕಟ್ಟಕಡೆಗೆ ಅವನು ಸಮುದ್ರದ ಮಧ್ಯದ ದ್ವೀಪದಲ್ಲಿರುವನೆಂಬ

ವಾರ್ತೆಯನ್ನು ಕೇಳಿ ಅಲ್ಲಿಗೇ ಹೋಗಿ, ಪಾಂಚಜನ್ಯವನ್ನೂದಿ ಅವನನ್ನು ಯುದ್ಧಕ್ಕೆ ಆಹ್ವಾನಿಸಿದೆನು. ಆ ಸಮಯದಲ್ಲಿ ನಾನು ಅನೇಕದಾನವರನ್ನು ಎದುರಿಸಬೇಕಾಯಿತು. ಆದರೆ ಅವರೆಲ್ಲರನ್ನೂ ಕ್ಷಣಮಾತ್ರದಲ್ಲಿ ಯಮಾಲಯಕ್ಕೆ ಕಳುಹಿಸಿಬಿಟ್ಟೆನು.

ಯುಧಿಷ್ಠಿರ! ಈ ಕಾರಣದಿಂದಾಗಿ ದ್ಯೂತಸಮಯದಲ್ಲಿ ನಾನು ದ್ವಾರಕೆಯಲ್ಲಿರಲಾಗಲಿಲ್ಲ. ಶಾಲ್ವನನ್ನು ಸಂಹರಿಸಿ ದ್ವಾರಕೆಗೆ ಬಂದೊಡನೆಯೇ ನೀವು ದುಃಖದಲ್ಲಿ ಮುಳುಗಿರುವ ವಾರ್ತೆಯು ತಿಳಿಯಿತು. ಒಡನೆಯೇ ನಿಮ್ಮನ್ನು ನೋಡಲು ಬಂದೆನು.”

೧೪ನೆಯ ಅಧ್ಯಾಯವು ಮುಗಿಯಿತು.

೧೫ನೆಯ ಅಧ್ಯಾಯ ಅರ್ಜುನಾಭಿಗಮನಪರ್ವ (ಮುಂದುವರಿದಿದೆ.)

## ಯುಧಿಷ್ಠಿರನ ಪ್ರಾರ್ಥನೆಯಂತೆ ಶ್ರೀಕೃಷ್ಣನಿಂದ ಶಾಲ್ವವಧೆಯ ವಿವರಣೆ

ಜನಮೇಜಯ! ಧರ್ಮಜನು ಹೇಳುತ್ತಾನೆ :

“ಕೃಷ್ಣ! ನೀನು ಶಾಲ್ವನ ವಧೆಯ ವಿಷಯವನ್ನು ಬಹುಸಂಕ್ಷೇಪವಾಗಿ ಹೇಳಿದೆ. ಆ ವಿಷಯವು ಹೇಗೆ ನಡೆಯಿತೋ ಹಾಗೆಯೇ ಸವಿಸ್ತರವಾಗಿಯೇ ಕೇಳಬೇಕೆಂಬ ಅಭಿಲಾಷೆಯಿಂದಿದ್ದೇನೆ. ಸಂಕ್ಷೇಪಕಥನವು ನನಗೆ ತೃಪ್ತಿಯನ್ನುಂಟುಮಾಡಲಿಲ್ಲ.”

“ಯುಧಿಷ್ಠಿರ! ನಿನ್ನ ಅಪೇಕ್ಷೆಯಂತೆ ನಡೆದುದೆಲ್ಲವನ್ನೂ ವಿವರವಾಗಿಯೇ ಹೇಳುತ್ತೇನೆ. ಶ್ರುತಶ್ರವಳ ಮಗನಾದ ಶಿಶುಪಾಲನು ನನ್ನಿಂದ ಸಂಹರಿಸಲ್ಪಟ್ಟನೆಂಬ ವಾರ್ತೆಯನ್ನು ಕೇಳಿದೊಡನೆಯೇ ಶಾಲ್ವನು ಸೈನ್ಯಸಮೇತನಾಗಿ ದ್ವಾರವತಿಗೆ ಬಂದನು. ದ್ವಾರಕಾಪಟ್ಟಣದ ಸುತ್ತಲೂ ತನ್ನ ಸೈನ್ಯವನ್ನು ವ್ಯೂಹಕ್ರಮದಲ್ಲಿ ನಿಲ್ಲಿಸಿದುದು ಮಾತ್ರವಲ್ಲದೇ, ಮಾಯಾಯುದ್ಧದಲ್ಲಿ ಪಾಂಡಿತ್ಯವನ್ನು ಪಡೆದಿದ್ದ ಅವನು ಪಟ್ಟಣದ ಮೇಲ್ಭಾಗದಲ್ಲಿಯೂ ಮಾಯಾಯುದ್ಧಕ್ಕೆ ಸಜ್ಜುಮಾಡಿ ಆ ವಿಭಾಗಕ್ಕೆ ತಾನೇ ನಾಯಕ

ನಾಗಿ ನಿಂತು, ಯುದ್ಧವನ್ನು ಆರಂಭಿಸಿದನು. ನಾಲ್ಕೂ ಕಡೆಗಳಿಂದಲೂ ಅವ್ಯಾಹತವಾದ ಶಸ್ತ್ರವರ್ಷದೊಡನೆ ಯುದ್ಧವು ಆರಂಭವಾಯಿತು.

ಆ ವಿಷಮಪರಿಸ್ಥಿತಿಯಲ್ಲಿ ದ್ವಾರಕಾಪಟ್ಟಣವೇ ಯುದ್ಧಕ್ಕೆ ಸಜ್ಜಾಗಿದ್ದಿತು.

ಧ್ವಜಪತಾಕೆಗಳು ಎಲ್ಲೆಲ್ಲಿಯೂ ಹಾರಾಡುತ್ತಿದ್ದುವು. ತೋರಣಗಳೂ ಕಟ್ಟಲ್ಪಟ್ಟಿದ್ದುವು. ಸೈನಿಕರೆಲ್ಲರೂ ಸಜ್ಜಾಗಿ ನಿಂತಿದ್ದರು. ಶತಘ್ನಿಗಳೂ (ಫಿರಂಗಿಗಳೂ), ಬಂದೂಕುಗಳೂ ಸಿದ್ಧವಾಗಿದ್ದುವು. ಸುರಂಗಮಾರ್ಗಗಳು ತೆರೆಯಲ್ಪಟ್ಟಿದ್ದುವು. ಬೀದಿಗಳಲ್ಲಿ ಉಪಶಲ್ಯಯಂತ್ರಗಳು ಇಡಲ್ಪಟ್ಟಿದ್ದುವು. ಗೋಪುರಗಳ ಮೇಲೆಯೂ ಸಮೃದ್ಧವಾಗಿ ಶಸ್ತ್ರಾಸ್ತ್ರಗಳ ಶೇಖರಣೆಯೂ ಮಾಡಲ್ಪಟ್ಟಿದ್ದಿತು. ಬಹುದೂರದಲ್ಲಿರುವ ಶತ್ರುಗಳ ಮೇಲೆ ಕಲ್ಲುಗಳನ್ನು ಪ್ರಯೋಗಿಸುವ ಯಂತ್ರಗಳು ಸಿದ್ಧವಾಗಿದ್ದುವು. ಸೈನಿಕರು ನೀರನ್ನು ತಮ್ಮೊಡನೆ ಒಯ್ಯಲು ಚರ್ಮದಿಂದ ಮಾಡಲ್ಪಟ್ಟಿದ್ದ ಚೀಲಗಳು ಸಿದ್ಧವಾದುವು. ಯುದ್ಧಕ್ಕೆ ಉತ್ಸಾಹನೀಡುವ ಭೇರಿಗಳೂ, ಕಹಳೆಗಳೂ ಸಿದ್ಧವಾದುವು. ಯುದ್ಧಕ್ಕೆ ಶತಘ್ನಿಗಳೂ (ನೂರು ಯೋಧರನ್ನು ಒಂದೇ ಸಲ ಕೊಲ್ಲುವ ಆಯುಧವಿಶೇಷಗಳೂ), ಅಂಕುಶಗಳೂ, ಭುಶುಂಡಿಗಳೂ, ಕಲ್ಲುಗುಂಡುಗಳೂ, ಪರಶ್ವಧಗಳೂ ಸಿದ್ಧವಾದುವು. ಕೋಟೆಗಳ ಮೇಲೆಯೂ, ಮಹಾದ್ವಾರಗಳ ಮೇಲೆಯೂ ಅಗ್ನಿವರ್ಷವನ್ನು ಮಾಡುವ ದೊಡ್ಡ-ದೊಡ್ಡ ಫಿರಂಗಿಗಳೂ ಇಡಲ್ಪಟ್ಟುವು. ಅರ್ಥಶಾಸ್ತ್ರದ ವಿವರಣೆಯಂತೆಯೇ ಎಲ್ಲವೂ ಸಜ್ಜುಗೊಳಿಸಲ್ಪಟ್ಟಿದ್ದಿತು. ಗದ, ಸಾಂಬ, ಉದ್ಧವ–ಇವರೇ ಮೊದಲಾದ ಅನೇಕ ಮಹಾವೀರರು ಪಟ್ಟಣವನ್ನು ರಕ್ಷಿಸಲು ರಥಾರೂಢರಾಗಿ ನಿಂತಿದ್ದರು. ಅವರೆಲ್ಲರೂ ಯುದ್ಧದಲ್ಲಿ ನಿಷ್ಣಾತರಾಗಿದ್ದರು. ತುರಗ-ಪದಾತಿಸೈನ್ಯಗಳನ್ನು ತಮ್ಮ ಸುತ್ತಲೂ ನಿಲ್ಲಿಸಿಕೊಂಡು ನಗರದ ಆಯಕಟ್ಟಿನ ಜಾಗಗಳಲ್ಲಿ ಜಾಗರೂಕರಾಗಿ ನಿಂತಿದ್ದರು. ಪ್ರಮಾದವನ್ನು ತಪ್ಪಿಸುವ ಸಲುವಾಗಿ ನಗರದಲ್ಲಿ ಯಾರೇ ಆಗಲೀ ಆ ವಿಷಮಪರಿಸ್ಥಿತಿಯಲ್ಲಿ ಸುರಾಪಾನವನ್ನು ಮಾಡಕೂಡದೆಂದು ಉಗ್ರಸೇನನು ಆಜ್ಞೆಯೊಂದನ್ನು ಹೊರಡಿಸಿದ್ದನು. ವೃಷ್ಣಿ ಮತ್ತು

ಅಂಧಕವಂಶದವರು–ತಾವು ಸ್ವಲ್ಪ ಅಜಾಗರೂಕರಾಗಿದ್ದರೂ ಶಾಲ್ವನು ತಮ್ಮನ್ನು ಸಂಹರಿಸಿಬಿಡುವನೆಂದು ನಿಶ್ಚಯಿಸಿ–ಅಲಸಿಕೆಯನ್ನು ತೊರೆದು ಯುದ್ಧಸನ್ನದ್ಧರಾದರು. ಆ ವಿಷಮಪರಿಸ್ಥಿತಿಯ ಕಾಲದಲ್ಲಿ ನೃತ್ಯ-ನಾಟ್ಯ-ಗಾಯನ ಮುಂತಾದುವು ನಿಲ್ಲಿಸಲ್ಪಟ್ಟಿದ್ದು ಮಾತ್ರವಲ್ಲದೇ–ನರ್ತಕರನ್ನೂ, ಗಾಯಕರನ್ನೂ ನಗರದ ರಕ್ಷಕರು ಹೊರಗೆ ಕಳುಹಿಸಿದ್ದರು. ಶತ್ರುಗಳ ಪ್ರವೇಶವನ್ನು ತಡೆಯುವ ಸಲುವಾಗಿ ನದಿಗಳ ಮೇಲೆ ಕಟ್ಟಿದ್ದ ಸೇತುವೆಗಳನ್ನು ಕೆಡಹಲಾಗಿದ್ದಿತು. ದೋಣಿಯ ಸಂಚಾರವು ನಿಲ್ಲಿಸಲ್ಪಟ್ಟಿದ್ದಿತು. ಕೋಟೆಯ ಸುತ್ತಲೂ ಇದ್ದ ಕಂದಕಗಳು ಬಹಳ ಆಳವಾಗಿ ತೋಡಲ್ಪಟ್ಟಿದ್ದುವು. ಪಟ್ಟಣದ ಸುತ್ತಲೂ ಎರಡು ಹರಿದಾರಿಗಳ ಪರ್ಯಂತವಾಗಿ ಭೂಮಿಯು ಹಳ್ಳ-ತಿಟ್ಟುಗಳಾಗಿ ಮಾಡಲ್ಪಟ್ಟಿತು ಮತ್ತು ಅಲ್ಲಲ್ಲಿ ಸಣ್ಣ-ಸಣ್ಣ ಹಳ್ಳಗಳನ್ನು ತೆಗೆದು ಸ್ಫೋಟಕದ್ರವ್ಯಗಳನ್ನು ಇಡಲಾಗಿದ್ದಿತು. ಯುಧಿಷ್ಠಿರ! ನಮ್ಮ ಪಟ್ಟಣವು ಸ್ವಾಭಾವಿಕವಾಗಿಯೇ ದುರ್ಗಮವಾಗಿರುವುದು ; ಸುರಕ್ಷಿತವಾಗಿರುವುದು. ಶಾಲ್ವನ ಆಕ್ರಮಣದಿಂದುಂಟಾದ ವಿಷಮಪರಿಸ್ಥಿತಿಯಿಂದಾಗಿ ನಮ್ಮ ಪಟ್ಟಣವು ಅಭೇದ್ಯವಾಯಿತು. ನಮ್ಮ ಯೋಧರು ಹೆಚ್ಚಿನ ಸಿದ್ಧತೆಯಿಂದ ಶತ್ರುಗಳನ್ನು ಎದುರಿಸಲು ನಿಂತರು. ಆ ಸಮಯದಲ್ಲಿ ನಮ್ಮ ಪಟ್ಟಣವು ಇಂದ್ರನ ಅಮರಾವತಿಯಂತೆಯೇ ವಿರಾಜಿಸುತ್ತಿದ್ದಿತು. ಶಾಲ್ವನು ಆಕ್ರಮಿಸಿದ್ದ ಕಾಲದಲ್ಲಿ ಯಾವನೊಬ್ಬನೂ ಊರಹೊರಗಿನಿಂದ ಒಳಕ್ಕಾಗಲೀ, ಪಟ್ಟಣದಿಂದ ಹೊರಕ್ಕಾಗಲೀ ಬಂದು ಹೋಗಲು ಸಾಧ್ಯವಿರಲಿಲ್ಲ. ಆದರೆ ಕೆಲವು ಸಂಕೇತಗಳೊಡನೆ ಪ್ರವೇಶ ಮತ್ತು ನಿರ್ಗಮನಗಳಿಗೆ ಅವಕಾಶವಿದ್ದಿತು. ಆ ಸಂಕೇತಗಳು ಅಂಧಕ ಮತ್ತು ವೃಷ್ಣಿಗಳಿಗೆ ಮಾತ್ರವೇ ತಿಳಿದಿತ್ತಾದ್ದರಿಂದ ಶತ್ರುಪಕ್ಷದವರು ಬರುವ ಸಾಧ್ಯತೆಯೇ ಇರಲಿಲ್ಲ. ನಗರದ ಪ್ರತಿಯೊಂದು ಬೀದಿಯಲ್ಲಿಯೂ ಗಜ-ತುರಗಸೈನ್ಯಗಳು ಸಜ್ಜಾಗಿಯೇ ನಿಂತಿದ್ದುವು. ಯುದ್ಧಮಾಡಲು ಸಿದ್ಧರಾಗಿದ್ದ ಸೈನಿಕರಿಗೆ ಹೆಚ್ಚಿನ ವೇತನವನ್ನು ಕೊಡಲಾಗುತ್ತಿದ್ದಿತು. ಅವರಲ್ಲಿ ಸುವರ್ಣನಾಣ್ಯಗಳನ್ನು ಪಡೆಯದವರು ಯಾರೂ ಇರಲಿಲ್ಲ. ಒಳ್ಳೊಳ್ಳೆಯ ಉಡುಪುಗಳನ್ನೂ, ಪುಷ್ಟಿಕರವಾದ ಆಹಾರವನ್ನೂ ಕೊಡಲಾಗುತ್ತಿತ್ತು. ಆದುದರಿಂದ ಆ ಸೈನಿಕರೆಲ್ಲರೂ ರಾಜನಿಷ್ಠೆ

ಯುಳ್ಳವರಾಗಿದ್ದರು. ಅಂತಹ ಸೈನಿಕರಿಂದ ಕೂಡಿದ್ದ ದ್ವಾರಕಾಪಟ್ಟಣವನ್ನು ಉಗ್ರಸೇನನು ರಕ್ಷಿಸುತ್ತಿದ್ದನು.”

೧೫ನೆಯ ಅಧ್ಯಾಯವು ಮುಗಿಯಿತು.

ೱನೆಯ ಅಧ್ಯಾಯ ಅರ್ಜುನಾಭಿಗಮನಪರ್ವ (ಮುಂದುವರಿದಿದೆ.)

## ಯಾದವಸೈನ್ಯದ ಆಕ್ರಮಣ : ಅನೇಕದೈತ್ಯರ ವಧೆ : ಪ್ರದ್ಯುಮ್ನನಿಂದ ಸೇನೆಗೆ ಆಶ್ವಾಸನೆ

ಶ್ರೀಕೃಷ್ಣನು ಮುಂದುವರಿದು ಹೇಳುತ್ತಾನೆ :

“ಯುಧಿಷ್ಠಿರ! ಶಾಲ್ವನೂ ಅಮಿತವಾದ ಸೇನೆಯೊಡನೆ ನಮ್ಮ ಪಟ್ಟಣಕ್ಕೆ ಮುತ್ತಿಗೆ ಹಾಕಿದ್ದನು. ಅವನ ಸೈನ್ಯವು ರಥ-ತುರಗ-ಪದಾತಿ-ಗಜಸೇನೆಗಳಿಂದ ಕೂಡಿದ್ದಿತು. ಅವುಗಳನ್ನು ಬಯಲಿನ ಪ್ರದೇಶದಲ್ಲಿ ಶಾಲ್ವನು ನಿಲ್ಲಿಸಿದ್ದನು. ಅವನು ಸೇನೆಗಳನ್ನು ನಿಲ್ಲಿಸಿದ್ದ ಜಾಗವು ಜಲಸಮೃದ್ಧವಾಗಿದ್ದಿತು. ಶ್ಮಶಾನವಾಗಲೀ, ದೇವಮಂದಿರಗಳಾಗಲೀ, ಹುತ್ತಗಳಾಗಲೀ, ಅಶ್ವತ್ಥಾದಿ ವೃಕ್ಷಗಳಾಗಲೀ ಇಲ್ಲದೆಡೆಯಲ್ಲಿ–ಜಲಸಮೃದ್ಧಿಯಿರುವ ಬಯಲಿನ ಪ್ರದೇಶದಲ್ಲಿ ಶಾಲ್ವನು ಸೇನಾವ್ಯೂಹವನ್ನು ರಚಿಸಿದ್ದನು.

ನಮ್ಮ ನಗರದ ಪ್ರವೇಶಮಾರ್ಗಗಳೆಲ್ಲವೂ ಅವನ ಸೈನ್ಯಗಳಿಂದ ಪ್ರತಿಬಂಧಿಸಲ್ಪಟ್ಟಿದ್ದುವು. ಸುರಂಗಮಾರ್ಗಗಳೆಲ್ಲವನ್ನೂ ಕಂಡುಹಿಡಿದು ಅಲ್ಲಿಯೂ ತನ್ನ ಸೇನೆಗಳನ್ನು ಶಾಲ್ವನು ನಿಲ್ಲಿಸಿದ್ದನು. ಪಕ್ಷಿಗಳ ಒಡೆಯನಾದ ಗರುಡನಂತೆ–ಮಹಾಪರಾಕ್ರಮಿಯಾದ ಶಾಲ್ವನು ಸಜ್ಜಾದ ಚತುರಂಗಬಲ ದೊಡನೆ ಅನೇಕವಿಧವಾದ ಶಸ್ತ್ರಾಸ್ತ್ರಗಳೊಡನೆ ನಮ್ಮ ನಗರಿಗೆ ಮುತ್ತಿಗೆ ಹಾಕಿದ್ದನು. ಅವನ ಸೈನಿಕರಿಗೂ ಯಥೇಚ್ಛವಾದ ವೇತನಗಳೂ–ಸಮಯೋಚಿತವಾದ ಸನ್ಮಾನಗಳೂ ಕೊಡಲ್ಪಡುತ್ತಿದ್ದುವು. ಅವನ ಸೈನ್ಯ ದಲ್ಲಿಯೂ ಯಾವನೂ ಅತೃಪ್ತನಾಗಿರಲಿಲ್ಲ. ಆ ಸೈನ್ಯಸಮೂಹವನ್ನು ಕಂಡು ನಗರದೊಳಗಿದ್ದ ವೃಷ್ಣಿಕುಲವೀರರು ನಗರದಿಂದ ಹೊರಕ್ಕೆ ಹೋಗಿ ಯುದ್ಧಮಾಡಲು ನಿಶ್ಚಯಿಸಿದರು. ಚಾರುದತ್ತ, ಸಾಂಬ, ಪ್ರದ್ಯುಮ್ನ–ಇವರು

ಕವಚ-ಕುಂಡಲಗಳನ್ನೂ, ಆಭರಣಗಳನ್ನೂ ಧರಿಸಿದವರಾಗಿ, ಶಸ್ತ್ರಪಾಣಿಗಳಾಗಿ ದಿವ್ಯವಾದ ರಥಗಳಲ್ಲಿ ಕುಳಿತು, ಚತುರಂಗಬಲಸಮೇತರಾಗಿ ಪಟ್ಟಣದಿಂದ ಹೊರಕ್ಕೆ ಹೊರಟರು.

ಯುದ್ಧದ ಕಹಳೆಯಾದೊಡನೆಯೇ ಪರಸ್ಪರವಾಗಿ ಕದನವು ಆರಂಭವಾಯಿತು. ಸಾಂಬನು ಶಾಲ್ವರಾಜನ ದಂಡನಾಯಕನೂ, ಮುಖ್ಯಸಲಹೆಗಾರನೂ ಆದ ಕ್ಷೇಮವೃದ್ಧಿ ಎಂಬುವನನ್ನು ಎದುರಿಸಿ ಯುದ್ಧವನ್ನು ಆರಂಭಿಸಿದನು. ಜಾಂಬವತಿಯ ಪುತ್ರನಾದ ಸಾಂಬನು–ಇಂದ್ರನು ಭೂಮಿಯ ಮೇಲೆ ಮಳೆಗರೆಯುವಂತೆಯೇ–ಶಸ್ತ್ರಗಳ ಮಳೆಯನ್ನೇ ಕ್ಷೇಮವೃದ್ಧಿಯ ಮೇಲೆ ಸುರಿಸಿದನು. ಆದರೆ ಕ್ಷೇಮವೃದ್ಧಿಯು ಆ ಅವ್ಯಾಹತವಾದ ಶಸ್ತ್ರವರ್ಷವನ್ನೂ ಹಿಮವಂತನೋಪಾದಿಯಲ್ಲಿ ತಡೆದು ನಿಶ್ಚಲನಾಗಿ ರಥದಲ್ಲಿ ಕುಳಿತಿದ್ದನು. ಸಾಂಬನು ಬಿಟ್ಟ ಬಾಣಗಳೆಲ್ಲವನ್ನೂ ಕತ್ತರಿಸಿದನಂತರ ಕ್ಷೇಮವೃದ್ಧಿಯು ಮಾಯೆಯಿಂದ ಸಾವಿರಾರು ನಿಶಿತವಾದ ಅಸ್ತ್ರಗಳನ್ನು ನಿರ್ಮಿಸಿ ಸಾಂಬನ ಮೇಲೆ ಪ್ರಯೋಗಿಸಿದನು. ಸಾಂಬನೂ ಮಾಯಾವಿದ್ಯೆಯ ಅಭಿಮಂತ್ರಣದಿಂದಲೇ ತನ್ನ ಎದುರಾಗಿ ಬಂದ ಅಸ್ತ್ರಗಳೆಲ್ಲವನ್ನೂ ನಿರ್ವೀರ್ಯವನ್ನಾಗಿ ಮಾಡಿ, ಪುನಃ ಒಂದು ಸಾವಿರ ಬಾಣಗಳನ್ನು ಏಕಕಾಲದಲ್ಲಿ ಕ್ಷೇಮವೃದ್ಧಿಯ ಮೇಲೆ ಪ್ರಯೋಗಿಸಿದನು. ಆ ಬಾಣಗಳ ಪ್ರಹಾರವನ್ನು ಕ್ಷೇಮವೃದ್ಧಿಯು ತಡೆದುಕೊಳ್ಳಲಾರದೇ ವೇಗಗತಿಯುಳ್ಳ ತನ್ನ ಕುದುರೆಗಳ ಸಹಾಯದಿಂದ ಯುದ್ಧರಂಗವನ್ನು ಬಿಟ್ಟು ಹೊರಟುಹೋದನು.

ಕ್ಷೇಮವೃದ್ಧಿಯು ರಣರಂಗವನ್ನು ಬಿಟ್ಟು ಹೊರಟುಹೋದೊಡನೆಯೇ ವೇಗವಂತನೆಂಬ ರಾಕ್ಷಸನು ನನ್ನ ಮಗ ಸಾಂಬನನ್ನು ಎದುರಿಸಿ ಯುದ್ಧಕ್ಕೆ ನಿಂತನು. ಸಾಂಬನೂ ರಾಕ್ಷಸನ ದಾಳಿಗೆ ಹೆದರದೇ ಧೈರ್ಯವಾಗಿ ನಿಂತು ತನ್ನಲ್ಲಿದ್ದ ಗದೆಯನ್ನು ಗರ-ಗರನೆ ತಿರುಗಿಸಿ ವೇಗವಂತನ ಮೇಲೆ ಪ್ರಯೋಗಿಸಿದನು. ಗದೆಯ ಪ್ರಹಾರವು ಬಿದ್ದೊಡನೆಯೇ–ಅರಣ್ಯದಲ್ಲಿರುವ ಮಹಾವೃಕ್ಷವು ಬಿರುಗಾಳಿಗೆ ಸಿಕ್ಕಿ ಬೇರುಸಹಿತವಾಗಿ ಕೆಳಗುರುಳುವಂತೆ–ವೇಗವಂತನು ಕೆಳಗುರುಳಿದನು. ಆ ರಾಕ್ಷಸನ ಸಂಹಾರವಾದೊಡನೆಯೇ ನನ್ನ

ಮಗನು ಅಪಾರವಾದ ಶಾಲ್ವನ ಸೇನೆಯೊಳಗೆ ನುಗ್ಗಿ, ಅವನ ಸೈನಿಕರೊಡನೆ ಕಾದಾಡಲು ಪ್ರಾರಂಭಿಸಿದನು.

ಮತ್ತೊಂದು ಸೈನ್ಯವಿಭಾಗದಲ್ಲಿ ರುಕ್ಮಿಣೀಪುತ್ರನಾದ ಚಾರುದೇಷ್ಣನು ಮಹಾಪರಾಕ್ರಮಿಯಾದ ವಿವಿಂಧ್ಯನೆಂಬ ರಾಕ್ಷಸನೊಡನೆ ಯುದ್ಧಮಾಡು ತ್ತಿದ್ದನು. ಅವರಿಬ್ಬರ ಕಾಳಗವು ನಿಶ್ಚಯವಾಗಿಯೂ ಹಿಂದಿನ ವಾಸವ-ವೃತ್ರಾಸುರರ ಕಾಳಗದ ಸ್ಮರಣೆಯನ್ನುಂಟುಮಾಡುತ್ತಿದ್ದಿತು. ಎದುರು-ಬದುರಾಗಿ ಕಾಳಗಕ್ಕೆ ನಿಂತು ಎರಡು ಸಿಂಹಗಳು ಗರ್ಜನೆಮಾಡುವಂತೆ—ಆ ಇಬ್ಬರು ವೀರರೂ ಗರ್ಜನೆಮಾಡುತ್ತಾ, ಒಬ್ಬರು ಮತ್ತೊಬ್ಬರನ್ನು ತೀಕ್ಷ್ಣ ವಾದ ಬಾಣಗಳ ಪ್ರಹಾರಗಳಿಂದ ಗಾಯಗೊಳಿಸಿದರು. ಸ್ವಲ್ಪ ಹೊತ್ತು ಅದೇ ರೀತಿಯಲ್ಲಿ ಕಾಳಗವು ನಡೆಯುತ್ತಿದ್ದಿತು. ಕಟ್ಟಕಡೆಗೆ ಕುಪಿತನಾದ ನನ್ನ ಮಗನು ಅಗ್ನಿ-ಸೂರ್ಯರಂತೆ ಪ್ರಕಾಶಮಾನವಾಗಿದ್ದ ಮಹಾಸ್ತ್ರವೊಂದನ್ನು ಬತ್ತಳಿಕೆಯಿಂದ ತೆಗೆದು ಮಂತ್ರಪುನಶ್ಚರಣೆಮಾಡಿ ವಿವಿಂಧ್ಯನ ಮೇಲೆ ಪ್ರಯೋಗಿಸಿದನು. ಆ ಮಹಾಸ್ತ್ರದ ಗುರಿಗೆ ಸಿಕ್ಕಿದ ವಿವಿಂಧ್ಯನು ಕ್ಷಣಮಾತ್ರದಲ್ಲಿ ಅಸುವನ್ನು ತೊರೆದು ನೆಲದಮೇಲುರುಳಿದನು. ವಿವಿಂಧ್ಯನು ಮೃತನಾದೊಡನೆಯೇ ಶಾಲ್ವನ ಸೈನ್ಯಗಳು ತತ್ತರಿಸಿದುವು. ಅದನ್ನು ಕಂಡು ಶಾಲ್ವನು ಸೈನಿಕರನ್ನು ಉತ್ತೇಜಿಸುತ್ತಾ ದಿವ್ಯವಿಮಾನವನ್ನೇರಿ ಯದುವೀರರ ಸಮ್ಮುಖದಲ್ಲಿ ಯುದ್ಧಸನ್ನದ್ಧನಾಗಿ ಬಂದು ನಿಂತನು. ಅವನು ಬಂದುದನ್ನು ಕಂಡು ನಮ್ಮ ಕಡೆಯ ವೀರರು ಭಯಗೊಂಡರು. ಆ ಸಮಯದಲ್ಲಿ ನನ್ನ ಮಗನಾದ ಪ್ರದ್ಯುಮ್ನನು ಮುಂದಾಗಿ ಹೋಗಿ ಯದುಭಟರನ್ನು ಕುರಿತು ಹೇಳಿದನು : “ವೀರರೇ! ಭಯಪಡಬೇಡಿರಿ! ನಾನು ಹೇಗೆ ಯುದ್ಧಮಾಡುವೆನೆಂಬುದನ್ನು ಇಂದು ನೀವು ಕಾಣುವಿರಿ. ನನ್ನ ಅಮಿತವಾದ ಶಕ್ತಿಯನ್ನೆಲ್ಲಾ ಪ್ರಯೋಗಿಸಿ ಈ ಶಾಲ್ವನ ರಥವು ಖಂಡಿತ ವಾಗಿಯೂ ಹಿಂದಿರುಗುವಂತೆ ಮಾಡುವೆನು. ಈ ದಿನ ನಾನು ನಿಶ್ಚಯ ವಾಗಿಯೂ ನನ್ನ ಬತ್ತಳಿಕೆಯಲ್ಲಿ ಸರ್ಪಗಳಂತಿರುವ ಬಾಣಗಳನ್ನು ಈ ದಿವ್ಯಧನುಸ್ಸಿನ ಮೂಲಕ ಪ್ರಯೋಗಿಸಿ ಅಪಾರವಾದ ಶಾಲ್ವನ ಸೈನ್ಯ ಸಮೂಹವನ್ನು ನಿರ್ನಾಮಮಾಡುವೆನು. ನೀವೆಲ್ಲರೂ ಸಮಾಧಾನ ದಿಂದಿರಿ. ಸ್ವಲ್ಪವಾದರೂ ಭಯಪಡುವ ಕಾರಣವಿಲ್ಲ. ಶಾಲ್ವನಿಗೆ ಇಂದು

ಮೃತ್ಯುವು ಸನ್ನಿಹಿತವಾಗಿರುವುದು ನಿಶ್ಚಯ. ನನ್ನಿಂದ ಆಕ್ರಮಿಸಲ್ಪಡುವ ಇವನ ಸೌಭವಿಮಾನವು ನನ್ನ ಬಾಣಪ್ರಹಾರಕ್ಕೆ ಸಿಕ್ಕಿ ವಿನಾಶಹೊಂದುವುದು ನಿಶ್ಚಯ."

ಧರ್ಮಜ! ನನ್ನ ಮಗನ ಆ ವೀರವಾಣಿಯನ್ನು ಕೇಳಿ ಯಾದವಸೈನಿಕರು ಭಯವನ್ನು ತೊರೆದು ಸಂತಸದಿಂದ ಯುದ್ಧವನ್ನು ಮುಂದುವರಿಸಿದರು.

೧೬ನೆಯ ಅಧ್ಯಾಯವು ಮುಗಿಯಿತು.

೧೭ನೆಯ ಅಧ್ಯಾಯ ಅರ್ಜುನಾಭಿಗಮನಪರ್ವ (ಮುಂದುವರಿದಿದೆ.)

## ಪ್ರದ್ಯುಮ್ನ-ಶಾಲ್ವರ ಘೋರಯುದ್ಧ: ಪ್ರದ್ಯುಮ್ನನ ಮೂರ್ಛಾವಸ್ಥೆ

ಶ್ರೀಕೃಷ್ಣನು ಯುಧಿಷ್ಠಿರನಿಗೆ ಹೇಳುತ್ತಾನೆ :

**ಏವಮುಕ್ತ್ವಾ ರೌಕ್ಮಿಣೇಯೋ ಯಾದವಾನ್ಭರತರ್ಷಭ ।**
**ದಂಶಿತೈರ್ಹರಿಭಿರ್ಯುಕ್ತಂ ರಥಮಾಸ್ಥಾಯ ಕಾಞ್ಚನಮ್ ॥೧॥**

"ಯುಧಿಷ್ಠಿರ! ಪ್ರದ್ಯುಮ್ನನು ತನ್ನ ಸೈನಿಕರಿಗೆ ಧೈರ್ಯಹೇಳಿ ಸ್ವರ್ಣಮಯವಾದ ರಥವನ್ನೇರಿ ಕುಳಿತನು. ಆ ರಥವು ನಿಲುವಂಗಿಗಳಿಂದ ಅಲಂಕೃತವಾದ ದಿವ್ಯಾಶ್ವಗಳಿಂದ ಸಜ್ಜಾಗಿದ್ದಿತು. ರಥದ ಮೇಲೆ ಯಮನಂತೆಯೇ ಭಯಂಕರವಾದ ಮಕರವು ಬಾಯ್ತೆರೆದು ಧ್ವಜವನ್ನಲಂಕರಿಸಿ ಕುಳಿತಿದ್ದಿತು. ಕುದುರೆಗಳು ಭೂಮಿಯ ಮೇಲೆ ನಡೆಯುತ್ತಿರಲಿಲ್ಲ. ಇತ್ತಿಂದತ್ತ ಹಾರಾಡುತ್ತಿದ್ದುವು. ನನ್ನ ಮಗನು ಕತ್ತಿ-ಗುರಾಣಿಗಳನ್ನೂ ದಿವ್ಯಕವಚವನ್ನೂ ಧರಿಸಿದವನಾಗಿ, ಮಿಂಚಿನಂತೆ ಹೊಳೆಯುತ್ತಿದ್ದ ಧನುಸ್ಸನ್ನು ಸವ್ಯಸಾಚಿಯಂತೆ ಒಮ್ಮೆ ಎಡಗೈಯಿನಿಂದಲೂ ಮತ್ತೊಮ್ಮೆ ಬಲಗೈಯಿನಿಂದಲೂ ಹಿಡಿದು ಬಾಣಗಳನ್ನು ಪ್ರಯೋಗಿಸುತ್ತಾ ಶಾಲ್ವನ ಸೈನ್ಯವೆಲ್ಲವೂ ಭ್ರಾಂತಿಹೊಂದುವಂತೆ ಮಾಡಿದನು. ಅವನ ಬಾಣಗಳ ಗುರಿಗೆ ಸಿಕ್ಕಿ ಅನೇಕದಾನವರು ಹತರಾದರು. ಅವನು ಬತ್ತಳಿಕೆಯಿಂದ ಬಾಣತೆಗೆ

ಯುವುದು, ಬಾಣವನ್ನು ಧನುಸ್ಸಿಗೇರಿಸುವುದು ಮತ್ತು ಧನುಸ್ಸನ್ನೆಳೆದು ಬಾಣವನ್ನು ಬಿಡುವುದು–ಇದಾವ ಪ್ರಕ್ರಿಯೆಗಳೂ ಎದುರಾಳಿಗೆ ಕಾಣುತ್ತಿರ ಲಿಲ್ಲ. ಬಾಣಗಳ 'ಸೊಯ್', 'ಸೊಯ್' ಎಂಬ ಶಬ್ದವು ಮಾತ್ರವೇ ಕೇಳುತ್ತಲಿದ್ದಿತು. 'ಸೊಯ್' ಎಂ ಬ ಶಬ್ದದೊಡನೆಯೇ ನೂರಾರು ಯೋಧರು ಹತರಾಗುತ್ತಿದ್ದರು. ಪ್ರದ್ಯುಮ್ನನು ಅನವರತವಾಗಿ ಬಾಣ ಪ್ರಯೋಗವನ್ನು ಮಾಡುತ್ತಿದ್ದರೂ ಅವನ ಮುಖಕಮಲವು ಸ್ವಲ್ಪವಾದರೂ ಕುಂದಿರಲಿಲ್ಲ. ಅವನ ಬಾಹುಬಲವು ಉಡುಗಿರಲಿಲ್ಲ. ಸಾವಿರಾರು ಮೀನುಗಳನ್ನು ನುಂಗುವ ಅವನ ಧ್ವಜಪತಾಕೆಯಲ್ಲಿದ್ದ ಮಕರವೂ ಎದುರಾಳಿಯ ಸೈನಿಕರಿಗೆ ಭಯವನ್ನುಂಟುಮಾಡುತ್ತಿದ್ದಿತು. ಎದುರಾಗಿ ಬಂದ ಶಾಲ್ವನ ಯೋಧರನ್ನು ಸಂಹರಿಸಿದನಂತರ, ಶಾಲ್ವನೊಡನೆಯೇ ನೇರವಾಗಿ ಯುದ್ಧಮಾಡುವ ಅಪೇಕ್ಷೆಯಿಂದ ನನ್ನ ಮಗನು ಶಾಲ್ವನಿಗೆ ಎದುರಾಗಿ ತನ್ನ ರಥವನ್ನು ನಡೆಸಲು ಸಾರಥಿಗೆ ಹೇಳಿದನು. ಪ್ರದ್ಯುಮ್ನನು ತನ್ನ ಮೇಲೆಯೇ ಯುದ್ಧಮಾಡಲು ಬರುತ್ತಿರುವುದನ್ನು ಕಂಡು ಶಾಲ್ವನಿಗೆ ಮಹತ್ತರವಾದ ಕೋಪವುಂಟಾಯಿತು. ಮಹಾಪರಾಕ್ರಮಿಯಾದ ಶಾಲ್ವನೂ ನನ್ನ ಮಗನೊಡನೆ ಯುದ್ಧಕ್ಕೆ ಸನ್ನದ್ಧನಾಗಿ ನಿಂತನು. ಶಾಲ್ವ-ಪ್ರದ್ಯುಮ್ನರ ಯುದ್ಧವು ಆರಂಭವಾಯಿತು. ಆ ಮಹಾವೀರರ ಯುದ್ಧವು ಅಸದೃಶವಾಗಿದ್ದು, ವಾಸವ-ಬಲಿಗಳ ಯುದ್ಧವನ್ನೇ ಅನುಕರಿಸುವುದಾಗಿದ್ದಿತು. ದಿವ್ಯವಾದ ಪತಾಕೆಗಳಿಂದಲೂ–ಸಕಲಶಸ್ತ್ರಾಸ್ತ್ರಗಳಿಂದಲೂ ಕೂಡಿದ್ದ ದಿವ್ಯ ವಾದ ಸುವರ್ಣಮಯವಾದ ರಥದಲ್ಲಿ ಕುಳಿತು ಶಾಲ್ವನು ಪ್ರದ್ಯುಮ್ನನ ಮೇಲೆ ಬಾಣಗಳ ಮಳೆಗರೆದನು. ಪ್ರದ್ಯುಮ್ನನು ತನ್ನ ಎದುರಾಗಿ ಬಂದ ಬಾಣಗಳೆಲ್ಲವನ್ನೂ ಕ್ಷಣಮಾತ್ರದಲ್ಲಿ ತುಂಡರಿಸಿ ಶಾಲ್ವನ ಮೇಲೆ ಸಾವಿರಾರು ಬಾಣಗಳನ್ನು ಏಕಕಾಲದಲ್ಲಿ ಪ್ರಯೋಗಿಸಿದನು.

ಶಾಲ್ವನೂ ತನ್ನ ಎದುರಾಗಿ ಬಂದ ಬಾಣಗಳೆಲ್ಲವನ್ನೂ ಕತ್ತರಿಸಿ ಅತಿತೀಕ್ಷ್ಣವಾದ ಬಾಣವರ್ಷವನ್ನು ಪ್ರದ್ಯುಮ್ನನ ಮೇಲೆ ಸುರಿಸಿದನು. ಇದೇ ರೀತಿಯಲ್ಲಿ ಅವರಿಬ್ಬರಿಗೂ ಯುದ್ಧವು ನಡೆಯುತ್ತಿದ್ದಿತು. ಕಟ್ಟಕಡೆಗೆ ನನ್ನ ಮಗನು ಕುಪಿತನಾಗಿ ಶಾಲ್ವನ ಕವಚವನ್ನು ಭೇದಿಸಲು ಸರ್ವ ಸಮರ್ಥವಾದ ಅಸ್ತ್ರವೊಂದನ್ನು ಬಿಲ್ಲಿಗೇರಿಸಿ ಬಿಟ್ಟನು. ಬಹುತೀಕ್ಷ್ಣವಾಗಿದ್ದ

ಮತ್ತು ಅತಿವೇಗವಾಗಿ ಹೊರಟ ಆ ಅಸ್ತ್ರವನ್ನು ಕತ್ತರಿಸಲು ಶಾಲ್ವನಿಗೆ ಸಾಧ್ಯವಾಗಲಿಲ್ಲ. ಆ ಅಸ್ತ್ರವು ಕ್ಷಣಮಾತ್ರದಲ್ಲಿ ಶಾಲ್ವನ ಕವಚವನ್ನು ಭೇದಿಸಿ ಎದೆಯನ್ನು ಹೊಕ್ಕಿತು. ಅದರ ಆಘಾತದಿಂದಾಗಿ ಶಾಲ್ವನು ಮೂರ್ಛೆ ಹೊಂದಿದನು. ಶಾಲ್ವನು ಪ್ರಜ್ಞಾರಹಿತನಾಗಿ ಕೆಳಗೆ ಬಿದ್ದೊಡನೆಯೇ ಅವನ ಪಕ್ಷದಲ್ಲಿದ್ದ ದಾನವಸೈನ್ಯಗಳೆಲ್ಲವೂ ಕಂಗೆಟ್ಟು ದಿಕ್ಕು-ದಿಕ್ಕಿಗೂ ಓಡಲಾರಂಭಿಸಿದುವು. ರಣಾಂಗಣವೆಲ್ಲವೂ ಭೀತರಾದ ಶಾಲ್ವಸೈನಿಕರ ಹಾಹಾಕಾರ ಶಬ್ದಗಳಿಂದ ತುಂಬಿಹೋಯಿತು. ಆ ಸಮಯಕ್ಕೆ ಸರಿಯಾಗಿ ಶಾಲ್ವನಿಗೆ ಪುನಃ ಪ್ರಜ್ಞೆಯುಂಟಾಯಿತು. ಒಂದು ಕ್ಷಣವೂ ತಡಮಾಡದೇ ವೀರಗರ್ಜನೆ ಮಾಡುತ್ತಾ ಸಾವಿರಾರು ಬಾಣಗಳನ್ನು ಶಾಲ್ವನು ಪ್ರಯೋಗಿಸಿದನು. ಕಂಠಮೂಲದಲ್ಲಿ ತೀಕ್ಷ್ಣವಾದ ಆಘಾತವುಂಟಾದುದರಿಂದ ಪ್ರದ್ಯುಮ್ನನು ಬಹುವಾಗಿ ಆಯಾಸಗೊಂಡನು.

ನನ್ನ ಮಗನು ಆಯಾಸಗೊಂಡಿರುವನೆಂದು ತಿಳಿದೊಡನೆಯೇ ಶಾಲ್ವನು ಬಾಣಗಳ ವರ್ಷವನ್ನು ಮತ್ತೂ ಸುರಿಸಿದನಲ್ಲದೇ ನಾಲ್ಕು ದಿಕ್ಕುಗಳಲ್ಲಿಯೂ ಪ್ರತಿಧ್ವನಿತವಾಗುವಂತೆ ವಿಜಯೋತ್ಸಾಹದಿಂದ ಸಿಂಹನಾದಗಳನ್ನೂ ಮಾಡಿದನು. ಎದುರಾಗಿ ಬರುತ್ತಲಿದ್ದ ಬಾಣಗಳ ಪಂಕ್ತಿಯನ್ನು ನನ್ನ ಮಗನು ತಡೆಯಲು ಕೂಡ ಸಾಧ್ಯವಾಗದವನಾಗಿ ಶರೀರದಲ್ಲೆಲ್ಲಾ ಗಾಯಗೊಂಡವನಾಗಿ ಆ ರಣಭೂಮಿಯಲ್ಲಿ ಪ್ರಜ್ಞಾಹೀನನಾದನು."

ಹದಿನೇಳನೆಯ ಅಧ್ಯಾಯವು ಮುಗಿಯಿತು.

೧೮ನೆಯ ಅಧ್ಯಾಯ — ಅರ್ಜುನಾಭಿಗಮನಪರ್ವ (ಮುಂದುವರಿದಿದೆ.)

## ಮೂರ್ಛಾವಸ್ಥೆಯಲ್ಲಿದ್ದ ತನ್ನನ್ನು ರಣಾಂಗಣದಿಂದ ಹೊರಕ್ಕೆ ಕರೆತಂದುದಕ್ಕೆ ಎಚ್ಚರಗೊಂಡ ಪ್ರದ್ಯುಮ್ನನು ಸಾರಥಿಯನ್ನು ಆಕ್ಷೇಪಿಸಿದುದು

ಶ್ರೀಕೃಷ್ಣನು ಧರ್ಮರಾಜನಿಗೆ ಹೇಳುತ್ತಾನೆ :

**ಶಾಲ್ವಬಾಣಾರ್ದಿತೇ ತಸ್ಮಿನ್ಪ್ರದ್ಯುಮ್ನೇ ಬಲಿನಾಂ ವರೇ ।**
**ವೃಷ್ಣಯೋ ಭಗ್ನಸಂಕಲ್ಪಾ ವಿವ್ಯಥುಃ ಪೃತನಾಗತಾಃ ॥೧॥**

"ಧರ್ಮಜ! ಬಲಿಷ್ಠರಲ್ಲಿ ಶ್ರೇಷ್ಠನಾದ ಪ್ರದ್ಯುಮ್ನನು ಪ್ರಜ್ಞಾಹೀನ

ನಾದೊಡನೆಯೇ ಸೇನೆಯಲ್ಲಿದ್ದ ವೃಷ್ಣಿಕುಲದ ವೀರರು ಭೀತರಾದರು. ಶಾಲ್ವನ ಪಕ್ಷದವರು ವಿಜಯೋತ್ಸಾಹದಿಂದ 'ಜಯ-ಜಯ!' ಎಂದು ಕೂಗುತ್ತಿದ್ದಾಗ ಅಂಧಕ-ವೃಷ್ಣಿಗಳು 'ಅಯ್ಯೋ' ಎಂದು ಆರ್ತನಾದಗಳನ್ನು ಮಾಡುತ್ತಿದ್ದರು.

ಸಾರಥಿಯಾದ ದಾರುಕಿಯು–ತನ್ನ ಸ್ವಾಮಿಯು ರಥದ ಮೇಲೆ ನಿಶ್ಚೇಷ್ಟನಾಗಿ ಬಿದ್ದೊಡನೆಯೇ ಅಲ್ಲಿ ಕ್ಷಣಮಾತ್ರವೂ ನಿಲ್ಲದೇ ರಥವನ್ನು ರಣಾಂಗಣದಿಂದ ಹೊರಕ್ಕೆ ಹೊಡೆದುಕೊಂಡು ಹೋಗುತ್ತಿದ್ದನು. ರಥವು ಸ್ವಲ್ಪದೂರ ಹೋಗುವುದರಲ್ಲಿಯೇ ಪ್ರದ್ಯುಮ್ನನಿಗೆ ಪ್ರಜ್ಞೆಯುಂಟಾಯಿತು. ಒಡನೆಯೇ ಧನುಸ್ಸನ್ನು ಹಿಡಿದು, ವೀರಾಸನದಲ್ಲಿ ಕುಳಿತು, ಸಾರಥಿಯನ್ನು ಕುರಿತು ಕೇಳಿದನು : "ಸೂತ! ಏನು ಮಾಡುತ್ತಿರುವೆ? ರಣಾಂಗಣದಿಂದ ಹಿಂದಿರುಗುತ್ತಿರುವೆಯೇಕೆ? ಈ ರೀತಿಯಾಗಿ ರಣಾಂಗಣದಿಂದ ಹಿಂದಿರುಗುವುದು ಅಂಧಕ-ವೃಷ್ಣಿವಂಶೀಯರ ಇತಿಹಾಸದಲ್ಲೇ ಇರುವುದಿಲ್ಲ. ಸೂತ! ಶಾಲ್ವನಿಗೂ ನನಗೂ ನಡೆಯುತ್ತಿದ್ದ ಭಯಂಕರಯುದ್ಧವನ್ನು ಕಂಡು ಭ್ರಾಂತನಾದೆಯಾ? ಅಥವಾ ಯುದ್ಧವನ್ನು ನೋಡಿ ಭೀತನಾದೆಯೋ? ನಿನ್ನ ಮನಸ್ಸಿನಲ್ಲುಂಟಾದ ಪರಿಣಾಮವನ್ನು ಮರೆಮಾಚದೇ ಹೇಳು, ಸೂತ!"

"ಕೇಶವನಂದನ! ನಾನು ಯುದ್ಧವನ್ನು ಕಂಡು ಭ್ರಾಂತನೂ ಆಗಲಿಲ್ಲ ; ಭೀತನೂ ಆಗಲಿಲ್ಲ. ಆದರೆ ನನ್ನ ಅಭಿಪ್ರಾಯದಲ್ಲಿ ನೀನು ಶಾಲ್ವನೊಡನೆ ಯುದ್ಧಮಾಡುವುದು ಬಹಳ ಕಷ್ಟಸಾಧ್ಯವಾದುದು. ಈ ಕಾರಣದಿಂದಲೇ ನಾನು ರಣರಂಗವನ್ನು ಬಿಟ್ಟು ಹೊರಡುತ್ತಿದ್ದೇನೆ. ಈ ದುಷ್ಟನು ನಿಶ್ಚಯವಾಗಿಯೂ ನಿನಗಿಂತಲೂ ಬಲಶಾಲಿಯಾಗಿದ್ದಾನೆ. ಈ ವಿಷಯದಲ್ಲಿ ಹಿರಿಯರ ಅಭಿಪ್ರಾಯವೇನೆಂಬುದನ್ನೂ ಹೇಳುವೆನು ; ಕೇಳು. ಕುಮಾರ! ರಥಿಕನು ಎಷ್ಟೇ ಪರಾಕ್ರಮಿಯಾಗಿದ್ದರೂ ಯುದ್ಧದಲ್ಲಿ ಆಘಾತಕ್ಕೆ ಸಿಕ್ಕಿ ಪ್ರಜ್ಞಾಹೀನನಾದಲ್ಲಿ ಅಂತಹವನನ್ನು ರಕ್ಷಿಸುವುದು ಸಾರಥಿಯ ಕರ್ತವ್ಯ. ಆದುದರಿಂದ, ಆಯುಷ್ಮಂತನೇ! ನಾನು ನಿನ್ನಿಂದ ರಕ್ಷಿಸಲ್ಪಡುವಂತೆಯೇ ಸಮಯಗಳಲ್ಲಿ ನನ್ನಿಂದ ನೀನೂ ರಕ್ಷಿಸಲ್ಪಡಬೇಕು. ಈ ಕಾರಣದಿಂದಾಗಿ ರಥಿಕನು ಪ್ರಜ್ಞಾಹೀನನಾಗಿರುವಾಗ ಸಾರಥಿಯು ರಥಿಕನನ್ನು ರಕ್ಷಿಸಬೇಕೆಂಬ

ಹಿರಿಯರ ಸೂಕ್ತಿಯನ್ನು ನೆನೆದು ನಾನಿಂದು ನಿನ್ನನ್ನು ರಣಾಂಗಣದಿಂದ ಹೊರಕ್ಕೆ ಕರೆದೊಯ್ಯುತ್ತಿದ್ದೇನೆ. ಇದಕ್ಕಿಂತಲೂ ವಿಶೇಷವಾಗಿ : ರಣಾಂಗಣದಲ್ಲಿ ನೀನು ಏಕಾಂಗಿಯಾಗಿದ್ದೆ. ದಾನವಸೈನಿಕರ ಸಂಖ್ಯೆಯು ಅಪಾರವಾಗಿದ್ದಿತು. ಅಪಾರಸೈನ್ಯವನ್ನು ಹೊಂದಿರುವ ಶಾಲ್ವನಿಗೆ ನೀನು ಸಾಟಿಯಲ್ಲವೆಂದು ನಿಶ್ಚಯಿಸಿ, ನಿನ್ನನ್ನು ರಣಾಂಗಣದಿಂದ ಹೊರಗೆ ಕರೆದೊಯ್ಯುತ್ತಿದ್ದೇನೆ."

ಸಾರಥಿಯ ಮಾತುಗಳನ್ನು ಕೇಳಿದನಂತರ ಪ್ರದ್ಯುಮ್ನನು ಖಿನ್ನ ಮನಸ್ಕನಾಗಿ ಹೇಳಿದನು :

"ದಾರುಕಸುತ! ರಥವನ್ನು ರಣಾಂಗಣದ ಕಡೆಗೆ ತಿರುಗಿಸು. ಇನ್ನು ಮುಂದೆ ಹೀಗೆಂದೂ ಮಾಡಕೂಡದು. ನಾನು ಜೀವಂತನಾಗಿರುವಾಗ ನನ್ನ ರಥವು ಖಂಡಿತವಾಗಿಯೂ ಹಿಂದಿರುಗಬಾರದು.

**ನ ಸ ವೃಷ್ಣಿಕುಲೇ ಜಾತೋ ಯೋ ವೈ ತ್ಯಜತಿ ಸಂಗರಮ್ ।**
**ಯೋ ವಾ ನಿಪತಿತಂ ಹನ್ತಿ ತವಾಸ್ಮೀತಿ ಚ ವಾದಿನಮ್ ॥೧೩॥**

**ತಥಾ ಸ್ತ್ರಿಯಂ ಚ ಯೋ ಹನ್ತಿ ಬಾಲಂ ವೃದ್ಧಂ ತಥೈವ ಚ ।**
**ವಿರಥಂ ವಿಪ್ರಕೀರ್ಣಂ ಚ ಭಗ್ನಶಸ್ತ್ರಾಯುಧಂ ತಥಾ ॥೧೪॥**

ಯಾವಾತನು ಯುದ್ಧಮಾಡಲು ಹಿಂಜರಿದು ರಣರಂಗದಿಂದ ಹಿಂದಿರುಗುವನೋ–ಯಾವಾತನು ಕೆಳಗೆ ಬಿದ್ದವನನ್ನು ಕೊಲ್ಲುವನೋ–ಯಾವಾ ತನು ಆಶ್ರಯವನ್ನು ಅಭಿಲಾಷಿಸಿ ಬಂದವನನ್ನು ಕೊಲ್ಲುವನೋ–ಯಾವ ಶೂರನು ಹೆಂಗಸರನ್ನೂ, ಮಕ್ಕಳನ್ನೂ, ವೃದ್ಧರನ್ನೂ ಕೊಲ್ಲುವನೋ– ಯಾವನು ಎದುರಾಳಿಯು ಘಾಸಿಹೊಂದಿದಾಗ, ರಥವನ್ನು ಕಳೆದು ಕೊಂಡಿರುವಾಗ ಮತ್ತು ನಿರಾಯುಧನಾಗಿರುವಾಗ ಸಮಯಕಾಯ್ದು ಕೊಲ್ಲುವನೋ–ಅಂತಹವನು ವೃಷ್ಣಿವಂಶದಲ್ಲಿ ಇದುವರೆಗೂ ಹುಟ್ಟಿಲ್ಲ. ಸೂತಪುತ್ರ! ನೀನು ಸಾರಥ್ಯದಲ್ಲಿ ವಿಶೇಷವಾದ ಪರಿಶ್ರಮವುಳ್ಳವನು. ವೃಷ್ಣಿಕುಲದ ವೀರರು ಯುದ್ಧಸಮಯದಲ್ಲನುಸರಿಸುವ ಸಂಪ್ರದಾಯಗಳನ್ನು ಚೆನ್ನಾಗಿ ಬಲ್ಲವನು ಮತ್ತು ಧರ್ಮಜ್ಞನು. ಹೀಗಿದ್ದರೂ ಇಂದು ನನ್ನ ರಥವನ್ನೇಕೆ ಹಿಂದಿರುಗಿಸಿದೆ? ಹೀಗೆ ಪುನಃ ಎಂದೂ ಮಾಡಬೇಡ.

ಸೂತ! ಭ್ರಾಂತನಾಗಿ ರಣಾಂಗಣದಿಂದ ಓಡಿಹೋದೆನೆಂದೂ ಮತ್ತು ಓಡಿಹೋಗುವಾಗ ಹಿಂಬದಿಯಲ್ಲಿ ಬಾಣವು ತಗುಲಿ ಬೆನ್ನಿಗೆ ಗಾಯವಾಯಿತೆಂದೂ–ಗದಾಗ್ರಜನಾದ, ಅಪ್ರಮೇಯನಾದ ಮಾಧವನಿಗೆ ತಿಳಿದಲ್ಲಿ ಅವನು ನನ್ನ ವಿಷಯದಲ್ಲಿ ಏನು ಹೇಳಿಯಾನೆಂಬುದನ್ನು ಊಹಿಸಿರುವೆಯಾ? ಕೇಶವನ ಅಗ್ರಜನಾದ, ನೀಲವಸ್ತ್ರಧರನಾದ ಬಲಭದ್ರನು ಪಟ್ಟಣಕ್ಕೆ ಹಿಂದಿರುಗಿದನಂತರ ಇದೇ ವಿಷಯವನ್ನು ಕೇಳಿದರೆ ಏನು ಹೇಳುವನೆಂಬುದನ್ನು ಬಲ್ಲೆಯಾ? ನಾನು ಹೇಡಿಯಂತೆ ರಣಾಂಗಣದಿಂದ ಓಡಿಬಂದೆನೆಂಬುದನ್ನು ಕೇಳಿದರೆ ಮಹಾಪರಾಕ್ರಮಿಯಾದ ಸಾತ್ಯಕಿಯು ಸುಮ್ಮನಿರುವನೇ? ಸಾಂಬ, ಚಾರುದೇಷ್ಣ, ಗದ, ಸಾರಣ, ಅಕ್ರೂರ–ಇವರೆಲ್ಲರೂ ನಾನು ಯುದ್ಧವನ್ನು ಬಿಟ್ಟುಬಂದೆನೆಂಬುದನ್ನು ಕೇಳಿ ನನ್ನ ವಿಷಯದಲ್ಲಿ ಎಷ್ಟು ಲಾಘವವಾಗಿ ಮಾತನಾಡುವರೆಂಬುದನ್ನು ಯೋಚಿಸಿದೆಯಾ? ಅದೂ ಇರಲಿ; ಇದುವರೆಗೂ ನನ್ನನ್ನು ವೀರನೆಂದೂ, ಪರಾಕ್ರಮಿಯೆಂದೂ, ಸಂಭಾವಿತನೆಂದೂ, ಶಾಂತನೆಂದೂ, ಮಾನಿಷ್ಠನಾದ ಪುರುಷನೆಂದೂ ಕೊಂಡಾಡುತ್ತಿದ್ದ ವೃಷ್ಣಿಕುಲದ ವೀರಮಹಿಳೆಯರು ಏನು ಹೇಳುವರೆಂಬುದನ್ನಾದರೂ ಬಲ್ಲೆಯಾ? 'ಈ ಪ್ರದ್ಯುಮ್ನನು ಭೀರು. ರಣಾಂಗಣವನ್ನು ಬಿಟ್ಟು ಓಡಿಬಂದಿರುವನು'–ಎಂದು ಮೂದಲಿಸುವುದಿಲ್ಲವೇ? ಪ್ರಾಣವನ್ನುಳಿಸಿಕೊಳ್ಳಲು ರಣಾಂಗಣವನ್ನು ಬಿಟ್ಟುಬಂದುದನ್ನು 'ಸಾಧು' ಎಂದು ಅವರು ಖಂಡಿತವಾಗಿಯೂ ಹೇಳುವುದಿಲ್ಲ.

**ಧಿಗ್ವಾಚಾ ಪರಿಹಾಸೋಽಪಿ ಮಮ ವಾ ಮದ್ವಿಧಸ್ಯ ವಾ ।**
**ಮೃತ್ಯುನಾಭ್ಯಧಿಕಃ ಸೌತೇ ಸ ತ್ವಂ ಮಾ ವ್ಯಪಯಾಃ ಪುನಃ ॥೨೩॥**

ಸಾರಥಿಯೇ! ಧಿಕ್ಕಾರಪೂರ್ವಕವಾದ ಮಾತಿನ ಪರಿಣಾಮವು ಕೂಡ ನನಗಾಗಲೀ, ನನ್ನಂತಹ ವೀರರಿಗಾಗಲೀ–ಸಾವಿಗಿಂತಲೂ ಮಿಗಿಲಾದುದು–ಎಂಬುದನ್ನು ಮರೆಯಬೇಡ. ಆದುದರಿಂದ ನೀನು ಇನ್ನು ಮುಂದೆ ಯಾವಾಗಲೂ ರಥಿಯು ಜೀವಿಸಿರುವಾಗ ರಣಾಂಗಣವನ್ನು ಬಿಟ್ಟು ಹಿಂದಿರುಗಬಾರದು.

ರಾಜ್ಯದ ಆಡಳಿತವೆಲ್ಲವನ್ನೂ ನನಗೊಪ್ಪಿಸಿ ಮಾಧವನು ಭರತಕುಲ

ತಿಲಕನಾದ ಯುಧಿಷ್ಠಿರನ ರಾಜಸೂಯಯಾಗಕ್ಕೆ ತೆರಳಿರುವನು. ಆದುದರಿಂದ ಪಟ್ಟಣದ ರಕ್ಷಣೆಯನ್ನು ನಾನಿಂದು ಮಾಡಿಯೇ ತೀರಬೇಕಾಗಿದೆ. ಈ ಕಾರಣದಿಂದಲೇ ನಾನು ಶಾಲ್ವನನ್ನು ಎದುರಿಸಿ ಹಿಮ್ಮೆಟ್ಟಿಸುವೆನೆಂದು ಕೃತವರ್ಮನಿಗೆ ಹೇಳಿಬಂದಿರುವೆನು. ಅವನೂ ನನ್ನ ಮಾತಿಗೆ ಗೌರವಕೊಟ್ಟು ತಾನು ಯುದ್ಧಕ್ಕೆ ಹೊರಡದೇ ನನ್ನನ್ನೇ ಕಳುಹಿಸಿಕೊಟ್ಟನು. ರಣಾಂಗಣದಿಂದ ಹಿಂದಿರುಗಿದನಂತರ ಕೃತವರ್ಮನು ಸಿಕ್ಕಿ ಕೇಳಿದರೆ ನಾನೇನೆಂದು ಉತ್ತರಕೊಡಲಿ? ಶಂಖ-ಚಕ್ರ-ಗದಾಧಾರಿಯಾದ ಶ್ರೀಕೃಷ್ಣನಿಗೆ ಏನು ಹೇಳಲಿ? ಸಾತ್ಯಕಿ, ಬಲದೇವ ಮತ್ತು ನನ್ನೊಡನೆ ಸ್ಪರ್ಧಿಸುವ ವೃಷ್ಣ್ಯಂಧಕವಂಶಗಳ ರಾಜಕುಮಾರರಿಗೆ ಈ ಯುದ್ಧದ ವಿವರಣೆಯನ್ನು ಹೇಗೆ ತಿಳಿಸಲಿ?

ಸೂತ! ರಣಾಂಗಣದಿಂದ ನೀನು ನನ್ನನ್ನು ಕರೆದುಕೊಂಡು ಬರುವಾಗ ಬೆನ್ನಿನಲ್ಲಿ ಗಾಯಗೊಂಡು ಅಪಯಶಸ್ಸಿಗೆ ಗುರಿಯಾಗಿರುವೆನು. ಈ ಸ್ಥಿತಿಯಲ್ಲಿ ನಾನು ಖಂಡಿತವಾಗಿಯೂ ಜೀವಿಸಿರಲಾರೆನು. ಆದುದರಿಂದ ಒಡನೆಯೇ ಕುದುರೆಗಳನ್ನು ರಣಾಂಗಣದ ಕಡೆಗೆ ತಿರುಗಿಸು. ಇನ್ನು ಮುಂದೆ ಪ್ರಾಣಾಪಾಯವೊದಗಿದ ಸಮಯದಲ್ಲಿಯೂ ಈ ವಿಧವಾದ ಅಕಾರ್ಯವನ್ನು ಮಾಡಬೇಡ. ರಣಾಂಗಣದಿಂದ ಭೀರುವಿನಂತೆ ಓಡಿಹೋಗುತ್ತಿರುವಾಗ ಶತ್ರುವಿನ ಬಾಣದಿಂದ ಬೆನ್ನಿನಲ್ಲಿ ಗಾಯಗೊಂಡಾದರೂ ಜೀವವನ್ನು ಉಳಿಸಿಕೊಳ್ಳಬೇಕೆಂಬ ಅಭಿಲಾಷೆಯು ನನಗಿಲ್ಲ. ಈ ವಿಧದಲ್ಲಿ ಜೀವವನ್ನುಳಿಸಿಕೊಳ್ಳುವುದು ಬಹಳ ನಿಂದ್ಯವಾದುದು, ದಾರುಕಪುತ್ರ! ನೀನು ಇದುವರೆಗೆ ಯಾವಾಗಲಾದರೂ ನಾನು ಹೇಡಿಯಂತೆ ರಣಾಂಗಣವನ್ನು ಬಿಟ್ಟು ಓಡಿರುವುದನ್ನು ಕಂಡಿರುವೆಯಾ? ಸೂತಪುತ್ರ! ನನಗೆ ಕಡೆಯವರೆಗೂ ಯುದ್ಧಮಾಡಬೇಕೆಂಬ ಅಭಿಲಾಷೆಯಿದೆ. ಇದುವರೆಗಿನ ಯುದ್ಧದಿಂದ ನಾನಿನ್ನೂ ತೃಪ್ತನಾಗಿಲ್ಲ. ಆದುದರಿಂದ ಒಡನೆಯೇ ಯುದ್ಧರಂಗದ ಕಡೆಗೆ ರಥವನ್ನು ತಿರುಗಿಸು."

೧೮ನೆಯ ಅಧ್ಯಾಯವು ಮುಗಿಯಿತು.

## ಪ್ರದ್ಯುಮ್ನನಿಂದ ಶಾಲ್ವನ ಪರಾಜಯ

ಯುಧಿಷ್ಠಿರ! ನನ್ನ ಮಗನಾದ ಪ್ರದ್ಯುಮ್ನನು ಹೀಗೆ ಹೇಳಲಾಗಿ, ದಾರುಕನ ಮಗನು ಬದ್ಧಾಂಜಲಿಯಾಗಿ ಬಲಿಷ್ಠರಲ್ಲಿ ಶ್ರೇಷ್ಠನಾದ ಪ್ರದ್ಯುಮ್ನನನ್ನು ಕುರಿತು ಸುಮಧುರವಾದ ಈ ಮಾತುಗಳನ್ನು ಹೇಳಿದನು :

"ಪ್ರದ್ಯುಮ್ನ! ರಣಾಂಗಣದಲ್ಲಿ ರಥವನ್ನು ನಡೆಸಲು ನನಗಾವ ಭಯವೂ ಇಲ್ಲ ಮತ್ತು ಯುದ್ಧಕಾಲದಲ್ಲಿ ವೃಷ್ಣಿಕುಲದವರು ಅನುಸರಿಸುವ ಸಂಪ್ರದಾಯವನ್ನೂ ತಿಳಿದಿರುತ್ತೇನೆ. ಆದರೆ ರಥಿಯು ಆಪತ್ಕಾಲದಲ್ಲಿರುವಾಗ ಅವನನ್ನು ರಕ್ಷಿಸುವುದು ಸೂತನ ಮುಖ್ಯಕರ್ತವ್ಯವೆಂದು ಉಪದೇಶಿಸಲ್ಪಟ್ಟಿದ್ದೇನೆ. ಶಾಲ್ವನೊಡನೆ ಯುದ್ಧಮಾಡಿ ನೀನು ಬಹಳವಾಗಿ ಬಳಲಿದ್ದೆ. ಶಾಲ್ವನ ಬಾಣಗಳಿಂದ ನಿನ್ನ ಶರೀರಾದ್ಯಂತವೂ ಕ್ಷತವಾಗಿದ್ದಿತು. ಮೇಲಾಗಿ ನಿನಗೆ ಪ್ರಜ್ಞೆಯೂ ತಪ್ಪಿದ್ದಿತು. ಆ ಕಾರಣಗಳಿಂದಾಗಿ ನಾನು ಬೇರೆ ಮಾರ್ಗವಿಲ್ಲದೇ ರಣಾಂಗಣದಿಂದ ಹೊರಕ್ಕೆ ರಥವನ್ನು ತರಬೇಕಾಯಿತು. ನಿನಗೀಗ ಪ್ರಜ್ಞೆಯುಂಟಾಗಿರುವುದು. ಪುನಃ ಯುದ್ಧಮಾಡಬೇಕೆಂಬ ಅಭಿಲಾಷೆಯೂ ನಿನಗಿರುವುದು. ಈಗ ನಾನು ಕುದುರೆಗಳನ್ನು ನಡೆಸುವ ಚಾತುರ್ಯವನ್ನಾದರೂ ನೋಡು, ಪ್ರದ್ಯುಮ್ನ! ನಾನು ಸೂತಶ್ರೇಷ್ಠನಾದ ದಾರುಕನ ಮಗನು ಮತ್ತು ನಮ್ಮ ತಂದೆಯಿಂದಲೇ ಸೂತವೃತ್ತಿಯ ಶಿಕ್ಷಣವನ್ನೂ ಪೂರ್ಣವಾಗಿ ಅಭ್ಯಾಸಮಾಡಿರುವೆನು. ಈಗ ನಾನು ನಿರ್ಭೀತನಾಗಿ ಶಾಲ್ವನ ವ್ಯೂಹವನ್ನು ಪ್ರವೇಶಿಸುತ್ತೇನೆ."

ದಾರುಕಿಯು ಹೀಗೆ ಹೇಳಿ ರಥದ ಮೇಲೆ ಕುಳಿತು, ಕುದುರೆಗಳ ಬೆನ್ನಿನ ಮೇಲೆ ಕೈಯಾಡಿಸಿ, ಕಡಿವಾಣವನ್ನೊಮ್ಮೆ ಹಿಡಿದೆಳೆದು, ಚಾವಟಿಯನ್ನು ಶಬ್ದಮಾಡುತ್ತಲೇ ಕುದುರೆಗಳು ವಾಯುವೇಗದಿಂದ ಓಡಲಾರಂಭಿಸಿದುವು. ಒಮ್ಮೆ ಗರ-ಗರನೆ ಸುತ್ತುತ್ತಲೂ, ಮತ್ತೊಮ್ಮೆ ಅರ್ಧಚಂದ್ರಾಕಾರದಲ್ಲಿ ಪರಿಭ್ರಮಣಮಾಡುತ್ತಲೂ, ಚಿತ್ರ-ವಿಚಿತ್ರವಾಗಿ ಹೆಜ್ಜೆಗಳನ್ನಿಡುತ್ತಲೂ ಹೋಗುತ್ತಿದ್ದುವು. ಸೂತನ ಮನಸ್ಸಿನ ಗತಿಯನ್ನು ತಿಳಿದಿವೆಯೋ

ಎಂಬಂತೆ ಆ ಕುದುರೆಗಳು ಭೂಮಿಯನ್ನೇ ಸ್ಪರ್ಶಮಾಡದೆ ಬಹಳ ವೇಗವಾಗಿ ರಣಾಂಗಣದ ಕಡೆಗೆ ಧಾವಿಸಿದುವು. ಶಾಲ್ವನ ಸುತ್ತಲೂ ಇದ್ದ ಸೈನಿಕರು ಕುದುರೆಗಳ ಚಿತ್ರ-ವಿಚಿತ್ರವಾದ ಮತ್ತು ವೇಗವಾದ ಗತಿಯನ್ನು ಕಂಡು ಆಶ್ಚರ್ಯಭರಿತರಾದರು.

ತನ್ನ ಸೈನ್ಯವನ್ನು ಅಪ್ರದಕ್ಷಿಣವಾಗಿ ಸುತ್ತಿಬಂದ ಪ್ರದ್ಯುಮ್ನನ ರಥವನ್ನು ನೋಡಿ ಶಾಲ್ವನು ಸಹಿಸದೆ ಮೂರು ಬಾಣಗಳನ್ನು ಸೂತನಿಗೆ ಗುರಿಯಿಟ್ಟು ಪ್ರಯೋಗಿಸಿದನು. ದಾರುಕಿಯು ತನ್ನೆದುರಾಗಿ ಬರುತ್ತಿದ್ದ ಬಾಣಗಳನ್ನು ಪರಿಗಣಿಸದೆಯೇ ರಥವನ್ನು ಬಲಕ್ಕೆ ತಿರುಗಿಸಿದನು. ಪುನಃ ಶಾಲ್ವನು ನಾನಾವಿಧವಾದ ಅಸ್ತ್ರಗಳನ್ನು ನನ್ನ ಮಗನ ಮೇಲೆ ಪ್ರಯೋಗಿಸಿದನು. ರುಕ್ಮಿಣೀಸುತನು ತನ್ನೆದುರಾಗಿ ಬರುತ್ತಿದ್ದ ಬಾಣಗಳೆಲ್ಲವನ್ನೂ ಕ್ಷಣಮಾತ್ರದಲ್ಲಿ ತನ್ನ ಕೈಚಳಕದಿಂದ ಕತ್ತರಿಸಿದನು.

ತನ್ನ ಬಾಣಗಳೆಲ್ಲವನ್ನೂ ಕ್ಷಣಮಾತ್ರದಲ್ಲಿ ಪ್ರದ್ಯುಮ್ನನು ತುಂಡರಿಸಿ ದುದನ್ನು ಕಂಡು ಶಾಲ್ವನು ಕೋಪಗೊಂಡವನಾಗಿ ಆಸುರೀಮಾಯೆಯಿಂದ ನಾನಾವಿಧವಾದ ಅಸ್ತ್ರಗಳನ್ನು ಕಲ್ಪಿಸಿ, ಅವುಗಳೆಲ್ಲವನ್ನೂ ಪ್ರದ್ಯುಮ್ನನ ಮೇಲೆ ಪ್ರಯೋಗಿಸಿದನು. ಅದರಿಂದ ಕೂಡ ನನ್ನ ಮಗನು ಭೀತನಾಗದೇ ಮಂತ್ರ ಪುನಶ್ಚರಣೆಮಾಡಿ ಬ್ರಹ್ಮಾಸ್ತ್ರವನ್ನು ಪ್ರಯೋಗಿಸಿ, ಆಸುರೀಮಾಯೆಯಿಂದ ಕಲ್ಪಿತವಾಗಿದ್ದ ಅಸ್ತ್ರಜಾಲವನ್ನು ಕ್ಷಣಮಾತ್ರದಲ್ಲಿ ನಿರ್ಮೂಲಮಾಡಿ, ಅನಂತರದಲ್ಲಿ ರೆಕ್ಕೆಗಳಿಂದ ಕೂಡಿದ್ದ ಅನೇಕವಿಧವಾದ ಮಹಾಸ್ತ್ರಗಳನ್ನು ಶಾಲ್ವನ ಮೇಲೆ ಪ್ರಯೋಗಿಸಿದನು. ಆ ಬಾಣಗಳು, ಎದುರಾಗಿ ಬಂದ ಶಾಲ್ವನ ಬಾಣಗಳನ್ನು ಕತ್ತರಿಸಿದುದು ಮಾತ್ರವಲ್ಲದೇ–ಶಾಲ್ವನ ವಕ್ಷಃಸ್ಥಳ-ಮುಖ-ಕಂಠಗಳಲ್ಲಿ ಗಾಯಗಳನ್ನುಂಟುಮಾಡಿದುವು. ಶಾಲ್ವನು ಬಾಣಕ್ಷತದ ಯಾತನೆಯನ್ನು ತಾಳಲಾರದೇ ಮೂರ್ಛಿತನಾದನು. ಒಡನೆಯೇ ಪ್ರದ್ಯು ಮ್ನನು ಶತ್ರುವಿನ ಪ್ರಾಣಾಪಹರಣಸಾಮರ್ಥ್ಯವಿರುವ, ಮಹಾತೇಜಸ್ಸಿನಿಂದ ಕೂಡಿದ್ದ ಮತ್ತೊಂದು ಅಸ್ತ್ರವನ್ನು ಧನುಸ್ಸಿನ ಹೆದೆಗೇರಿಸಿದನು. ಅಂಧಕ-ವೃಷ್ಣಿಗಳಿಂದ ಪೂಜಿಸಲ್ಪಡುತ್ತಿದ್ದ ಆ ಮಹಾಸ್ತ್ರವನ್ನು ಪ್ರದ್ಯುಮ್ನನು ಹೆದೆ ಗೇರಿಸಿದುದನ್ನು ಕಂಡು ನಭೋಮಂಡಲದಲ್ಲಿ ಪ್ರೇಕ್ಷಕರಾಗಿ ವಿಮಾನಗಳ

ಮೇಲೆ ಕುಳಿತಿದ್ದ ದೇವತೆಗಳೆಲ್ಲರೂ 'ಅಯ್ಯೋ!'–ಎಂದು ಆರ್ತನಾದ ಗಳನ್ನು ಮಾಡಿದರು. ಒಡನೆಯೇ ಇಂದ್ರ-ಕುಬೇರಾದಿ ದೇವತೆಗಳು ನಾರದ ರನ್ನೂ ಮತ್ತು ವಾಯುವನ್ನೂ ಕರೆದು–ಪ್ರದ್ಯುಮ್ನನು ಹೆದೆಗೇರಿಸಿದ್ದ ಅಸ್ತ್ರವನ್ನು ಬಿಡದಂತೆ ತಡೆಯಬೇಕೆಂದು–ಹೇಳಿಕಳುಹಿಸಿದರು. ಮನೋವೇಗ ಗತಿಯಿಂದ ನಾರದ-ವಾಯುಗಳು ಪ್ರದ್ಯುಮ್ನನ ಸಮೀಪಕ್ಕೆ ಒಡನೆಯೇ ಬಂದು ದೇವತೆಗಳ ಸಂದೇಶವನ್ನು ವಿವರಿಸಿದರು :

"ಕುಮಾರ! ಶಾಲ್ವನು ನಿನ್ನಿಂದ ಕೊಲ್ಲಲ್ಪಡತಕ್ಕವನಲ್ಲ. ನಿನ್ನ ಅಸ್ತ್ರವನ್ನು ಹಿಂತೆಗೆದುಕೋ. ಅವನು ಯುದ್ಧದಲ್ಲಿ ನಿನ್ನಿಂದ ಹತನಾಗಕೂಡದು. ಆದರೆ ನೀನು ನಿನ್ನ ಈ ದಿವ್ಯಧನುಸ್ಸಿಗೆ ಯೋಜಿಸಿರುವ ಅಸ್ತ್ರದ ಗುರಿಗೆ ಸಿಕ್ಕಿದ ಯಾರೂ ಜೀವಂತರಾಗಿ ಉಳಿಯಲಾರರು. ಇದು ನಿಶ್ಚಯ. ಬ್ರಹ್ಮನು ಶಾಲ್ವನ ಮರಣವು ದೇವಕೀಸುತನಿಂದಲೇ ಆಗತಕ್ಕದ್ದೆಂದು ನಿಯಮಮಾಡಿರುತ್ತಾನೆ. ಬ್ರಹ್ಮನ ನಿಯಮದ ಉಲ್ಲಂಘನೆಯಾಗಕೂಡದು. ಪ್ರದ್ಯುಮ್ನ! ಬ್ರಹ್ಮನ ವಾಣಿಯು ಸುಳ್ಳಾಗಕೂಡದು."

ದೇವತೆಗಳು ಕಳುಹಿಸಿದ್ದ ಆ ಸಂದೇಶವನ್ನು ಪ್ರದ್ಯುಮ್ನನು ಕೇಳಿ ಸಂತುಷ್ಟನಾಗಿ ಧನುಸ್ಸಿನ ಹೆದೆಗೇರಿಸಿದ್ದ ಅಸ್ತ್ರವನ್ನು ತೆಗೆದು ಬತ್ತಳಿಕೆಗೆ ಸೇರಿಸಿದನು.

ಶಾಲ್ವನು ಪುನಃ ಪ್ರಜ್ಞೆಯನ್ನು ಹೊಂದಿದ ಮೇಲೂ ಪ್ರದ್ಯುಮ್ನನ ಸಂಗಡ ಯುದ್ಧಮಾಡಲು ಅಶಕ್ತನಾಗಿ ತನ್ನ ರತ್ನಖಚಿತವಾದ ವಿಮಾನದಲ್ಲಿ ಕುಳಿತು ಆಕಾಶಮಾರ್ಗದಿಂದ ಹೊರಟುಹೋದನು."

೧೯ನೆಯ ಅಧ್ಯಾಯವು ಮುಗಿಯಿತು.

೨೦ನೆಯ ಅಧ್ಯಾಯ ಅರ್ಜುನಾಭಿಗಮನಪರ್ವ (ಮುಂದುವರಿದಿದೆ.)

## ಶ್ರೀಕೃಷ್ಣ ಮತ್ತು ಶಾಲ್ವರ ಭೀಕರಯುದ್ಧ

ಶ್ರೀಕೃಷ್ಣನು ಮುಂದುವರಿದು ಹೇಳಿದನು :

"ಧರ್ಮಜ! ಶಾಲ್ವನು ದ್ವಾರಕೆಯನ್ನು ಬಿಟ್ಟು ಹೊರಟುಹೋದ

ನಂತರ, ನಾನು ರಾಜಸೂಯಯಾಗವನ್ನು ಮುಗಿಸಿಕೊಂಡು ನಿನ್ನಿಂದ ಬೀಳ್ಕೊಡಲ್ಪಟ್ಟವನಾಗಿ ದ್ವಾರವತಿಗೆ ಹೋದೆನು. ಆ ಸಮಯದಲ್ಲಿ ನಗರಿಯು ಕಾಂತಿಹೀನವಾಗಿದ್ದಿತು. ಅಧ್ಯಯನ-ಅಧ್ಯಾಪನಗಳಾಗಲೀ, ಯಜನ-ಯಾಜನಗಳಾಗಲೀ ನಡೆಯುತ್ತಿರಲಿಲ್ಲ. ಸ್ತ್ರೀಯರಾರೂ ಆಭರಣ ಗಳನ್ನೂ ಧರಿಸಿರಲಿಲ್ಲ. ಉದ್ಯಾನವನಗಳೂ ಕಾಂತಿಹೀನವಾಗಿದ್ದುವು. ದ್ವಾರ ವತಿಯಲ್ಲಿ ಈ ವಿಧವಾದ ಮಾರ್ಪಾಡನ್ನು ನೋಡಿ ಭ್ರಾಂತನಾಗಿ ಕೃತವರ್ಮ ನನ್ನು ಕಂಡು–'ದ್ವಾರವತಿಯ ಸ್ತ್ರೀ-ಪುರುಷರೆಲ್ಲರೂ ಯಾವುದೋ ಕಷ್ಟಕ್ಕೆ ಗುರಿಯಾದವರಂತೆ ಕಾಣುತ್ತಾರೆ. ಇದರ ಕಾರಣವನ್ನು ವಿವರಿಸಿ ಹೇಳು'– ಎಂದು ಕೇಳಿದೆನು. ಅದಕ್ಕುತ್ತರವಾಗಿ ಕೃತವರ್ಮನು ಶಾಲ್ವನು ದ್ವಾರವತಿಗೆ ಮುತ್ತಿಗೆ ಹಾಕಿದುದು, ಪ್ರದ್ಯುಮ್ನ-ಶಾಲ್ವರ ಯುದ್ಧ ಮತ್ತು ಶಾಲ್ವನ ನಿರ್ಗಮನ–ಇವೆಲ್ಲವನ್ನೂ ವಿವರವಾಗಿ ತಿಳಿಸಿದನು.

ಅವೆಲ್ಲವನ್ನೂ ಕೇಳಿದನಂತರ ನಾನು ಶಾಲ್ವನನ್ನು ಸಂಹಾರಮಾಡ ಲೆಂದೇ ನಿಶ್ಚಯಿಸಿದೆನು. ನಗರದ ಪ್ರಮುಖರನ್ನು ರಾಜಸಭೆಗೆ ಕರೆಯಿಸಿ ಅವರಿಗೂ ಮತ್ತು ಆಹುಕ-ಆನಕದುಂದುಭಿ (ಉಗ್ರಸೇನ-ವಸುದೇವರು) ಮೊದಲಾದ ವೃಷ್ಣಿಪ್ರಮುಖರಿಗೂ ಆಶ್ವಾಸನೆನೀಡುತ್ತಾ ನಾನು ಅವರನ್ನು ಕುರಿತು ಹೇಳಿದೆನು : 'ನೀವೆಲ್ಲರೂ ಜಾಗರೂಕರಾಗಿದ್ದು ಪಟ್ಟಣದ ರಕ್ಷಣೆ ಮಾಡುತ್ತಾ ಇಲ್ಲಿಯೇ ಇರಿ. ನಾನು ಶಾಲ್ವನ ಸಂಹಾರಕ್ಕಾಗಿ ಹೊರಡುತ್ತೇನೆ. ಶಾಲ್ವನನ್ನು ಸಂಹರಿಸದೇ ನಾನು ಖಂಡಿತವಾಗಿಯೂ ನಗರಿಗೆ ಹಿಂದಿರುಗು ವುದಿಲ್ಲ. ಶಾಲ್ವನನ್ನು ಸಂಹರಿಸಿ ಅವನ ರತ್ನಖಚಿತವಾದ ವಿಮಾನವನ್ನೂ ಧ್ವಂಸಮಾಡಿಯೇ ನಾನು ದ್ವಾರವತಿಗೆ ಹಿಂದಿರುಗುವೆನು. ಮಂದ್ರ, ಮಧ್ಯಮ, ತಾರ–ಈ ಮೂರು ಧ್ವನಿಗಳಿಂದಲೂ ಶತ್ರುಗಳಿಗೆ ಭಯವಾಗುವ ರೀತಿಯಲ್ಲಿ ದುಂದುಭಿಯನ್ನು ಬಾರಿಸಿರಿ.'

ಯುಧಿಷ್ಠಿರ! ನಾನು ಈ ರೀತಿಯಲ್ಲಿ ಅವರೆಲ್ಲರನ್ನೂ ಪ್ರೋತ್ಸಾಹಿಸಿ ದೊಡನೆಯೇ ಅವರ ಮುಖಕಮಲಗಳು ಅರಳಿದುವು. ಎಲ್ಲರೂ ನನ್ನನ್ನು ಕುರಿತು–'ಕೃಷ್ಣ! ನಿನಗೆ ಜಯವಾಗಲಿ! ಈಗಲೇ ಹೋಗಿಬಾ. ಶತ್ರು ವನ್ನು ಸಂಹಾರಮಾಡು'–ಎಂದು ಏಕಕಂಠದಿಂದ ಹೇಳಿದರು. ವೃಷ್ಣಿಕುಲ

ವೀರರಿಂದ ಪ್ರೋತ್ಸಾಹವನ್ನೂ, ಬ್ರಾಹ್ಮಣರಿಂದ ಸ್ವಸ್ತಿವಾಚನ ಮತ್ತು ಆಶೀರ್ವಾದಗಳನ್ನೂ ಪಡೆದು, ಪರಶಿವನಿಗೆ ನಮಸ್ಕರಿಸಿ, ಶೈಬ್ಯ ಮತ್ತು ಸುಗ್ರೀವಗಳೆಂಬ ಎರಡು ಅಶ್ವಶ್ರೇಷ್ಠಗಳಿಂದ ಯುಕ್ತವಾದ ರಥದಲ್ಲಿ ಕುಳಿತು, ಆ ರಥದ ಚಕ್ರಗಳ ಧ್ವನಿಯಿಂದಲೂ, ಪಾಂಚಜನ್ಯದ ಧ್ವನಿಯಿಂದಲೂ ನಾಲ್ಕು ದಿಕ್ಕುಗಳನ್ನೂ ಮೊಳಗಿಸುತ್ತಾ ಶಾಲ್ವನ ವಧೆಗಾಗಿ ಹೊರಟೆನು. ಯುದ್ಧದಲ್ಲಿ ಹೆಚ್ಚಿನ ಪರಿಶ್ರಮವಿದ್ದ ಚತುರಂಗಬಲಸೈನ್ಯಗಳೂ ನನ್ನೊಡನೆ ಹೊರಟುವು. ಅನೇಕ ಪಟ್ಟಣಗಳನ್ನೂ, ನದ-ನದೀ-ಪರ್ವತಗಳನ್ನೂ, ಸರೋವರಗಳನ್ನೂ, ಕಾಡುಗಳನ್ನೂ ದಾಟಿ ಕಟ್ಟಕಡೆಗೆ ನನ್ನ ಸೇನೆಯೊಡನೆ ಮಾರ್ತಿಕಾವತವೆಂಬ ಪ್ರದೇಶವನ್ನು ಸೇರಿದೆನು. ಆ ದೇಶದ ಸಮೀಪದಿಂದ ಸಮುದ್ರದ ದಂಡೆಯಲ್ಲಿ ಶಾಲ್ವನು ಸೌಭವಿಮಾನದಲ್ಲಿ ಕುಳಿತು ಹೋಗುತ್ತಿರುವನೆಂಬ ವಾರ್ತೆಯನ್ನು ಕೇಳಿ, ಅದೇ ಮಾರ್ಗವನ್ನನುಸರಿಸಿ ನಾನೂ ಹೊರಟೆನು. ಸ್ವಲ್ಪಕಾಲ ಪ್ರಯಾಣಮಾಡಿದನಂತರ ನಾನು ನನ್ನ ಸೈನ್ಯದೊಡನೆ ಸಮುದ್ರದ ತೀರಪ್ರದೇಶವನ್ನು ಸೇರಿದೆನು.

ಸಮುದ್ರದ ಅಲೆಗಳ ಮಧ್ಯದಲ್ಲಿ ಶಾಲ್ವನು ತನ್ನ ರತ್ನಖಚಿತವಾದ ಸೌಭವಿಮಾನದಲ್ಲಿ ಕುಳಿತಿರುವುದು ಗೋಚರವಾಯಿತು. ಶಾಲ್ವನು ಬಹು ದೂರದಿಂದಲೇ ನನ್ನನ್ನು ಕಂಡು ಒಡನೆಯೇ ಯುದ್ಧಕ್ಕೆ ಆಹ್ವಾನಿಸಿದನು. ಅವನ ಆಹ್ವಾನವನ್ನು ಅಂಗೀಕರಿಸಿ ಒಡನೆಯೇ ಅವನ ಮೇಲೆ ಪ್ರಯೋಗಿಸಿದ ಬಾಣಗಳು ಅವನ ಸಮೀಪಕ್ಕೂ ಹೋಗಲು ಸಮರ್ಥವಾಗಲಿಲ್ಲ. ಅದು ನನಗೆ ಬಹಳ ಕೋಪವನ್ನುಂಟುಮಾಡಿತು. ದೈತ್ಯಾಪಸದನಾದ, ಪಾಪಿಷ್ಠನಾದ ಶಾಲ್ವನಾದರೋ ನನ್ನ ಮೇಲೆ ಸಾವಿರಾರು ಸಂಖ್ಯೆಯಲ್ಲಿ ಬಾಣಗಳನ್ನು ಸುರಿಸಿದನು. ನನ್ನ ಮೇಲೆ ಸಾವಿರಾರು ಬಾಣಗಳನ್ನು ಅವ್ಯಾಹತವಾಗಿ ಪ್ರಯೋಗಿಸಿದ್ದು ಮಾತ್ರವಲ್ಲದೇ ನನ್ನ ಕುದುರೆಗಳ ಮೇಲೆಯೂ, ಸಾರಥಿಯ ಮೇಲೆಯೂ ಮತ್ತು ನನ್ನ ಚತುರಂಗಬಲದ ಮೇಲೆಯೂ, ಏಕಕಾಲದಲ್ಲಿ ಶಾಲ್ವನು ಸಾವಿರಾರು ಬಾಣಗಳನ್ನು ಬಿಡುತ್ತಿದ್ದನು.

ಅವನ ಸೈನಿಕರೂ ನನ್ನ ಮತ್ತು ನನ್ನ ಸೈನ್ಯದ ಮೇಲೆ ಬಾಣಗಳ ಮಳೆಗರೆಯಲು ಪ್ರಾರಂಭಿಸಿದರು. ದೈತ್ಯಸೈನಿಕರು ನನ್ನ ಕುದುರೆಗಳ

ಮೇಲೆಯೂ, ರಥದ ಮೇಲೆಯೂ ಅಪಾರವಾದ ಬಾಣಪ್ರಯೋಗಮಾಡಿ, ಕುದುರೆಗಳನ್ನೂ, ದಾರುಕನನ್ನೂ ಗಾಯಗೊಳಿಸಿದರು. ಆ ಸಮಯದಲ್ಲಿ ನಿಶ್ಚಯವಾಗಿಯೂ ನಾನು ನನ್ನ ಕುದುರೆಗಳನ್ನಾಗಲೀ, ದಾರುಕನನ್ನಾಗಲೀ, ರಥವನ್ನಾಗಲೀ ಕಾಣಲಿಲ್ಲ. ಎಲ್ಲವೂ ಬಾಣಮಯವಾಗಿದ್ದುವು. ಅತಿಮಾನುಷವಿದ್ಯೆಯಲ್ಲಿ ನಿಷ್ಣಾತನಾದ ನಾನೂ ಶತ್ರುಪಕ್ಷದವರ ಬಾಣ ಪ್ರವರ್ಷವನ್ನು ಕಂಡು ಕುಪಿತನಾಗಿ, ಶಾರ್ಙ್ಗಧನುಸ್ಸಿಗೆ ಹೆದೆಯೇರಿಸಿ, ಮಂತ್ರ ಪುನಶ್ಚರಣೆಮಾಡಿ, ಸಾವಿರಾರು ಸಂಖ್ಯೆಯಲ್ಲಿ ಬಾಣಗಳನ್ನು ಪ್ರಯೋಗಿಸಲು ಪ್ರಾರಂಭಿಸಿದೆನು. ಆ ಸಮಯಕ್ಕೆ ಸರಿಯಾಗಿ ಶಾಲ್ವನ ರತ್ನಖಚಿತವಾದ ವಿಮಾನವು ಭೂಮಿಗಿಂತ ಎರಡು ಯೋಜನಗಳ ಅಂತರದಲ್ಲಿ ಆಕಾಶ ದಲ್ಲಿದ್ದುದರಿಂದ ನನ್ನ ಸೈನಿಕರಿಗೆ ವಿಮಾನವು ಗೋಚರವಾಗುತ್ತಿರಲಿಲ್ಲ. ಆದರಿಂದಾಗಿ ನನ್ನ ಭಟರು ಯುದ್ಧಮಾಡದೇ ತಟಸ್ಥರಾಗಿ ನಿಂತು, ಕ್ಷಣ-ಕ್ಷಣಕ್ಕೂ ವೀರೋಚಿತವಾದ ಮಾತುಗಳಿಂದ ಯುದ್ಧದ ಪ್ರೇಕ್ಷಕರಂತೆ ನನ್ನನ್ನು ಪ್ರೋತ್ಸಾಹಿಸುತ್ತಿದ್ದರು. ನನ್ನ ಸೈನಿಕರು ವಿನೋದವನ್ನು ನೋಡುವ ಪ್ರೇಕ್ಷಕರಂತೆ ನನ್ನ ಬಾಣಾನುಸಂಧಾನವನ್ನು ಕಂಡು 'ಭಲೇ, ಭಲೇ' ಎನ್ನುತ್ತಲೂ, ಮತ್ತೊಮ್ಮೆ ಶತ್ರುಪಕ್ಷದ ಸೈನ್ಯವು ಕೆಳಗುರುಳಿತೆಂದರೆ ಚಪ್ಪಾಳೆ ತಟ್ಟುತ್ತಲೂ ಇದ್ದರು.

ನನ್ನಿಂದ ಬಿಡಲ್ಪಟ್ಟ ತೀಕ್ಷ್ಣವಾದ ಬಾಣಗಳು ದಾನವರ ಶರೀರಗಳಲ್ಲಿ ಶಲಭಗಳೋಪಾದಿಯಲ್ಲಿ ಚುಚ್ಚಿಕೊಳ್ಳುತ್ತಿದ್ದುವು. ಸ್ವಲ್ಪಹೊತ್ತಿನೊಳಗಾಗಿಯೇ ಶಾಲ್ವನ ಪಕ್ಷದಲ್ಲಿ ಹಾಹಾಕಾರವುಂಟಾಯಿತು. ಏಕೆಂದರೆ : ನನ್ನ ಬಾಣಗಳ ಆಘಾತಕ್ಕೆ ಸಿಕ್ಕಿ ಸಾವಿರಾರು ದಾನವರು ಮೃತರಾಗಿ ಸಮುದ್ರದಲ್ಲಿ ಬೀಳುತ್ತಿದ್ದರು.

ಅನೇಕರಾಕ್ಷಸರು ಕತ್ತರಿಸಲ್ಪಟ್ಟ ತೋಳು-ಹೆಗಲುಗಳುಳ್ಳವರಾಗಿ ಆರ್ತನಾದಮಾಡುತ್ತಾ ಶಿರಸ್ಸಿನಿಂದ ವಿಹೀನರಾಗಿ ಕೆಳಗುರುಳುತ್ತಿದ್ದರು. ಅವರು ಸಮುದ್ರದಲ್ಲಿ ಬಿದ್ದೊಡನೆಯೇ ಅಲ್ಲಿದ್ದ ತಿಮಿ-ತಿಮಿಂಗಿಲಗಳು ಅವರ ಶರೀರಗಳನ್ನು ನುಂಗಿಬಿಡುತ್ತಿದ್ದುವು. ಅದನ್ನು ಕಂಡ ನಾನು ಸುಮನೋಹರ ವಾಗಿದ್ದ, ಸಮುದ್ರದಿಂದಲೇ ಉತ್ಪನ್ನವಾಗಿದ್ದ, ಚಂದ್ರನಂತೆಯೂ–ಮಂದಾರ

ಪುಷ್ಪದಂತೆಯೂ–ಹಾಲಿನಂತೆಯೂ–ಬೆಳ್ಳಿಯಂತೆಯೂ ಹೆಚ್ಚು ಬಿಳುಪಾಗಿದ್ದ ಪಾಂಚಜನ್ಯವನ್ನು ಗಟ್ಟಿಯಾಗಿ ಊದಿದೆನು.

ತನ್ನ ಕಡೆಯ ಸೈನಿಕರೆಲ್ಲರೂ ಹತರಾಗುತ್ತಿರುವುದನ್ನು ಕಂಡು ಶಾಲ್ವನು ನನ್ನೊಡನೆ ಮಾಯಾಯುದ್ಧವನ್ನು ಆರಂಭಿಸಿದನು. ಗದೆಗಳು, ಹಲಾಯುಧಗಳು, ಪ್ರಾಸಗಳು, ಶೂಲ-ಶಕ್ತಿ-ಪರಶ್ವಧಗಳು, ಖಡ್ಗಗಳು, ಶಕ್ತ್ಯಾಯುಧಗಳು, ಅಶನಿಗಳು, ಪಾಶಗಳು, ದಂಡಗಳು, ಬಾಣಗಳು, ಪಟ್ಟಿಶ ಗಳೆಂಬ ಆಯುಧವಿಶೇಷಗಳು, ಭುಶುಂಡಿಗಳು–ಇವೇ ಮುಂತಾದ ನಾನಾ ವಿಧವಾದ ತೀಕ್ಷ್ಣವಾದ ಆಯುಧಗಳನ್ನು ಅವ್ಯಾಹತವಾಗಿ ಶಾಲ್ವನು ನನ್ನ ಮೇಲೆ ಪ್ರಯೋಗಿಸಿದನು. ಅವೆಲ್ಲವೂ ನನ್ನ ಸಮೀಪಕ್ಕೆ ಬರುವವರೆಗೂ ನಾನು ಸುಮ್ಮನಿರುತ್ತಿದ್ದೆನು. ನನ್ನ ಸಮೀಪಕ್ಕೆ ಬಂದೊಡನೆಯೇ ಪ್ರತಿಮಾಯಾ ಪ್ರಕ್ರಿಯೆಯಿಂದ ಶಾಲ್ವನು ಪ್ರಯೋಗಿಸಿದ ಆಯುಧಗಳೆಲ್ಲ ವನ್ನೂ ನಾಶಮಾಡುತ್ತಿದ್ದೆನು. ಶಾಲ್ವನ ಮಾಯಾಯುದ್ಧವೂ ನಿರರ್ಥಕ ವಾಗಲು ಅವನು ಪರ್ವತದ ಶಿಖರಗಳನ್ನೇ ಕಿತ್ತು ನನ್ನ ಮೇಲೆ ಪ್ರಯೋಗಿ ಸಲು ಪ್ರಾರಂಭಿಸಿದನು. ಶಾಲ್ವನಿಂದ ಪ್ರಯೋಗಿಸಲ್ಪಟ್ಟ ಪರ್ವತಶೃಂಗಗಳು ಆಕಾಶದಲ್ಲಿ ಬರುತ್ತಿರುವಾಗ ಭೂಮಿಯ ಮೇಲೆ ಕತ್ತಲಾದಂತೆಯೇ ಕಾಣು ತ್ತಿದ್ದಿತು. ಮತ್ತೊಂದು ಕ್ಷಣದಲ್ಲಿ ಬೆಳಕು ಕಾಣುತ್ತಿದ್ದಿತು. ಒಮ್ಮೆ ವಾತಾವರಣವು ದುರ್ದಿನದಂತೆಯೂ, ಮತ್ತೊಮ್ಮೆ ಸುದಿನದಂತೆಯೂ, ಒಮ್ಮೆ ಶೀತವಾಗಿಯೂ ಮತ್ತೊಮ್ಮೆ ಉಷ್ಣವಾಗಿಯೂ ಇರುತ್ತಿದ್ದಿತು. ಶಾಲ್ವನು ಒಮ್ಮೆ ನನ್ನ ಮೇಲೆ ಮಾಯೆಯಿಂದ ಬೆಂಕಿಯನ್ನು ಸುರಿಸುತ್ತಲೂ ಮತ್ತೊಮ್ಮೆ ಸಾವಿರಾರು ಬಾಣಗಳನ್ನು ಸುರಿಸುತ್ತಲೂ ಯುದ್ಧಮಾಡುತ್ತಿದ್ದನು. ಅವನ ಮಾಯಾಸ್ತ್ರಗಳೆಲ್ಲವನ್ನೂ ನಾನು ವಿನಾಶಮಾಡಿ, ಸಾವಿರಾರು ಬಾಣಗಳನ್ನು ಶಾಲ್ವನ ಮೇಲೆ ಪ್ರಯೋಗಿಸಿದೆನು. ಒಡನೆಯೇ ಶಾಲ್ವನು ತನ್ನ ಮಾಯೆಯಿಂದ ಆಕಾಶವೇ ಒಡೆದುಹೋದಂತೆ ಭ್ರಾಂತಿ ಯನ್ನುಂಟುಮಾಡಿದನು. ನೂರಾರು ಚಂದ್ರ-ಸೂರ್ಯರು ಏಕಕಾಲದಲ್ಲಿ ಉದಯಿಸಿರುವಂತೆಯೂ, ಸಾವಿರಾರು ನಕ್ಷತ್ರಗಳು ಬೆಳಗುತ್ತಿರುವಂತೆಯೂ ಕಂಡಿತು. ಅದು ಹಗಲೋ ಅಥವಾ ರಾತ್ರಿಯೋ ಎಂಬುದನ್ನು ಯಾರಿಂದಲೂ ತಿಳಿಯಲಾಗುತ್ತಿರಲಿಲ್ಲ. ಪೂರ್ವಾದಿ ದಶದಿಕ್ಕುಗಳನ್ನೂ ನಿರ್ದೇಶಿಸಲು

ಸಾಧ್ಯವಾಗುತ್ತಿರಲಿಲ್ಲ. ಆದರಿಂದ ನಾನೂ ಭ್ರಾಂತನಾಗಿ ಒಡನೆಯೇ ಪ್ರಜ್ಞಾಸ್ತ್ರವನ್ನು ಶಾರ್ಙ್ಗಧನುಸ್ಸಿನ ಹೆದೆಗೇರಿಸಿ ಪ್ರಯೋಗಿಸಿದೆನು. ಬಿಡಿಸಿದ ನವುರಾದ ಹತ್ತಿಯನ್ನು ಬಿರುಗಾಳಿಯು ಹಾರಿಸುವಂತೆ–ಪ್ರಜ್ಞಾಸ್ತ್ರವು ಶಾಲ್ವನ ಮಾಯಾಸ್ತ್ರವನ್ನು ಕ್ಷಣಮಾತ್ರದಲ್ಲಿ ನಿರಸನಗೊಳಿಸಿತು. ಆ ಯುದ್ಧವು ನಿಶ್ಚಯವಾಗಿಯೂ ರೋಮಾಂಚನವನ್ನುಂಟುಮಾಡಿತು. ಪ್ರಜ್ಞಾಸ್ತ್ರದ ಪ್ರಭಾವದಿಂದಾಗಿ ಶಾಲ್ವನ ಮಾಯೆಗಳೆಲ್ಲವೂ ನಷ್ಟವಾಗಿ ಯಥಾಪೂರ್ವ ಸ್ಥಿತಿಯುಂಟಾಯಿತು. ಪುನಃ ನಮ್ಮಿರ್ವರಿಗೂ ಯುದ್ಧವು ಪ್ರಾರಂಭ ವಾಯಿತು.”

೨೦ನೆಯ ಅಧ್ಯಾಯವು ಮುಗಿಯಿತು.

೨೧ನೆಯ ಅಧ್ಯಾಯ ಅರ್ಜುನಾಭಿಗಮನಪರ್ವ (ಮುಂದುವರಿದಿದೆ.)

## ಶ್ರೀಕೃಷ್ಣನು ಶಾಲ್ವನ ಮಾಯೆಯಿಂದ ಪುನಃ ವಿಮೋಹಿತನಾದುದು

ಶ್ರೀಕೃಷ್ಣನು ಯುಧಿಷ್ಠಿರನಿಗೆ ಹೇಳುತ್ತಾನೆ :

**ಏವಂ ಸ ಪುರುಷವ್ಯಾಘ್ರ ಶಾಲ್ವರಾಜೋ ಮಹಾರಿಪುಃ ।**
**ಯುಧ್ಯಮಾನೋ ಮಯಾ ಸಂಖ್ಯೇ ವಿಯದಭ್ಯಗಮತ್ಪುನಃ ॥೧॥**

“ಪುರುಷಶ್ರೇಷ್ಠನೇ! ಮಹಾಶತ್ರುವಾದ ಶಾಲ್ವರಾಜನು ಹೀಗೆ ನನ್ನೊಡನೆ ಯುದ್ಧಮಾಡುತ್ತಾ ಮತ್ತೆ ಭೂಮಿಯಿಂದ ಆಕಾಶಕ್ಕೆ ಹೋಗಿ ನನ್ನನ್ನು ಎದುರಿಸಿದನು. ನನ್ನನ್ನು ಪರಾಜಯಗೊಳಿಸಬೇಕೆನ್ನುವ ಉತ್ಕಟೇಚ್ಛೆಯಿಂದ ನನ್ನ ಮೇಲೆ ನೂರಾರು ಶತಘ್ನಿಗಳನ್ನೂ, ಗದೆಗಳನ್ನೂ, ಉರಿಯುವ ಶೂಲಗಳನ್ನೂ, ಮುಸಲಗಳನ್ನೂ, ಕತ್ತಿಗಳನ್ನೂ ಪ್ರಯೋಗಿಸಿದನು. ಪ್ರವಾಹರೂಪವಾಗಿ ಬರುತ್ತಿದ್ದ ಆ ಆಯುಧಗಳೆಲ್ಲವನ್ನೂ ನಾನು ಕ್ಷಣಮಾತ್ರದಲ್ಲಿ ನನ್ನ ತೀಕ್ಷ್ಣವಾದ ಬಾಣಗಳಿಂದ ಎರಡು-ಮೂರು-ನಾಲ್ಕು ತುಂಡುಗಳನ್ನಾಗಿ ಕತ್ತರಿಸಿದೆನು. ಆ ವೇಳೆಗೆ ಆಕಾಶದಲ್ಲಿ ಗಂಭೀರ ಧ್ವನಿಯುಂಟಾಯಿತು. ಶಾಲ್ವನು ನನ್ನ ಸಾರಥಿಯಾದ ದಾರುಕನ ಮೇಲೂ,

ನನ್ನ ಕುದುರೆಗಳ ಮೇಲೂ, ರಥದ ಮೇಲೂ ನೇರವಾಗಿ ಸಾವಿರಾರು ಬಾಣಗಳನ್ನು ಪ್ರಯೋಗಿಸಿದನು. ಅದರಿಂದಾಗಿ ದಾರುಕನಿಗೆ ಪೆಟ್ಟುಬಿದ್ದು ಅವನು ಮೂರ್ಛೆಹೊಂದುವ ಸ್ಥಿತಿಯುಂಟಾಯಿತು. ಆ ಸ್ಥಿತಿಯಲ್ಲಿದ್ದ ದಾರುಕನು ನನ್ನನ್ನು ಕುರಿತು–"ಕೃಷ್ಣ! ಶಾಲ್ವನ ಬಾಣಗಳಿಂದ ಘಾಸಿಹೊಂದಿ ಪ್ರಜ್ಞಾಹೀನನಾಗುವ ಸ್ಥಿತಿಯಲ್ಲಿದ್ದರೂ ನಾನು ರಣಾಂಗಣದಲ್ಲಿಯೇ ಇರಲು ನಿಶ್ಚಯಿಸಿದ್ದೇನೆ. ಏಕೆಂದರೆ : ಇದು ಕರ್ತವ್ಯವಾಗಿದೆ. ಆದರೆ ಈ ಸ್ಥಿತಿಯಲ್ಲಿ ನನಗೆ ಹೆಚ್ಚು ಕಾಲ ನಿಲ್ಲಲು ಸಾಧ್ಯವಾಗದಿರಬಹುದು. ನನ್ನ ಅವಯವಗಳು ಶಕ್ತಿಹೀನವಾಗಿವೆ"–ಎಂದು ಹೇಳಿದನು. ಅವನ ಕರುಣಾಜನಕವಾದ ಮಾತುಗಳನ್ನು ಕೇಳಿ ನಾನು ಸಾರಥಿಯ ಕಡೆಗೆ ತಿರುಗಿ ನೋಡಿದೆನು. ದಾರುಕನ ಶರೀರಾದ್ಯಂತವಾಗಿ ಬಾಣಗಳ ಕ್ಷತಗಳಿದ್ದುವು. ವಕ್ಷಃಸ್ಥಳದಲ್ಲಾಗಲೀ, ತಲೆಯ ಮೇಲಾಗಲೀ, ಅವಯವಗಳಲ್ಲಾಗಲೀ, ಭುಜಗಳಲ್ಲಾಗಲೀ–ಬಾಣಗಳ ಪೆಟ್ಟುಬೀಳದ ಜಾಗವೇ ಇರಲಿಲ್ಲ. ಆ ಕ್ಷತಗಳಿಂದ ರಕ್ತವು ಧಾರಾಕಾರವಾಗಿ ಹರಿಯುತ್ತಿದ್ದು–ಮಳೆಯು ಸುರಿದಾಗ ಮನಶ್ಶಿಲಾದಿ ಧಾತುಗಳನ್ನು ಸುರಿಸುವ ಬೆಟ್ಟದಂತೆ–ದಾರುಕನ ಶರೀರವು ಕಾಣುತ್ತಿದ್ದಿತು. ಆ ಸ್ಥಿತಿಯಲ್ಲಿದ್ದ ದಾರುಕನಿಗೆ ಉತ್ಸಾಹವುಂಟಾಗುವ ಮಾತುಗಳನ್ನು ಹೇಳಿ ಸಂತೈಸಿದೆನು.

ಅಷ್ಟರಲ್ಲಿ ಒಂದು ವಿಚಿತ್ರವು ನಡೆಯಿತು ; ಯುಧಿಷ್ಠಿರ! ದ್ವಾರಕಾ ನಿವಾಸಿಯಂತೆ ಕಾಣುತ್ತಿದ್ದ ಒಬ್ಬ ಮನುಷ್ಯನು ಆಪ್ತನಾದ ಗೆಳೆಯನಂತೆ ತೋರಿಸಿಕೊಳ್ಳುತ್ತಾ ನನ್ನ ಪರಿಚಯಮಾಡಿಕೊಂಡು, ಆಹುಕನಿಂದ ಹೇಳಿ ಕಳುಹಿಸಲ್ಪಟ್ಟಿರುವೆನೆಂದು ತನ್ನ ಪರಿಚಯವನ್ನೂ ಹೇಳಿಕೊಂಡು ಆಹುಕನು ಹೇಳಿಕಳುಹಿಸಿದ ಮಾತನ್ನು ನನ್ನೊಡನೆ ಹೇಳತೊಡಗಿದನು. ಆ ಮಾತುಗಳನ್ನು ಹೇಳುವಾಗ ಅವನ ಕಣ್ಣುಗಳಲ್ಲಿ ನೀರೂರಿದ್ದಿತು. ಗದ್ಗದಸ್ವರದಿಂದ, ದುಃಖದಿಂದ ಮ್ಲಾನಿಹೊಂದಿದ ಮುಖಭಾವವನ್ನು ತಾಳಿ ಅವನು ಹೀಗೆ ಹೇಳಿದನು :

"ಕೃಷ್ಣ! ದ್ವಾರಕೆಯ ಅಧಿಪತಿಯಾದ ಆಹುಕನು ನಾನು ಮುಂದೆ ಹೇಳಲಿರುವ ಮಾತುಗಳನ್ನು ನಿನಗೆ ಹೇಳುವಂತೆ ಆಜ್ಞೆಮಾಡಿರುವನು. ನಿನ್ನ ತಂದೆಯ ಮಿತ್ರನಾದ ಆಹುಕನು ಹೇಳಿದ ಮಾತುಗಳನ್ನು ಸಾವಧಾನ

ವಾಗಿ ಕೇಳುವವನಾಗು : "ವೃಷ್ಣಿಕುಲಾವತಂಸನೇ! ನೀನು ದ್ವಾರವತಿಯಲ್ಲಿಲ್ಲದಿರುವುದನ್ನು ತಿಳಿದು ಮಾಯಾವಿಯಾದ ಶಾಲ್ವನು ಇಲ್ಲಿಗೆ ಬಂದು ತನ್ನ ಪ್ರಬಲಶಕ್ತಿಯನ್ನು ಪ್ರಯೋಗಿಸಿ ವಸುದೇವನನ್ನು ಕೊಂದುಬಿಟ್ಟನು. ಈ ಕಾರಣದಿಂದಾಗಿ ನೀನು ಅಲ್ಲಿ ನಿಂತು ಯುದ್ಧಮಾಡುವುದರಿಂದ ಯಾವ ಪ್ರಯೋಜನವೂ ಇಲ್ಲ. ಅಲ್ಲಿಯ ಯುದ್ಧವನ್ನು ಕೂಡಲೇ ನಿಲ್ಲಿಸಿ, ದ್ವಾರಕೆಯನ್ನು ರಕ್ಷಣೆಮಾಡಲು ಹೊರಟು ಬಾ. ಇದು ಇಂದು ನಿನ್ನ ಮುಖ್ಯಕರ್ತವ್ಯವಾಗಿದೆ."

ಯುಧಿಷ್ಠಿರ! ದೂತನು ಹೇಳಿದ ಮಾತುಗಳನ್ನು ಕೇಳಿದೊಡನೆಯೇ ನನಗೆ ಬಹಳ ದುಃಖವಾಯಿತು. ಆ ಸಮಯದಲ್ಲಿ ಏನು ಮಾಡಬೇಕೆಂಬ ಅರಿವೇ ಉಂಟಾಗಲಿಲ್ಲ. ನಮ್ಮ ತಂದೆಯ ಮರಣವಾರ್ತೆಯನ್ನು ಕೇಳಿ ನಾನು ಮನಸ್ಸಿನಲ್ಲಿಯೇ ಸಾತ್ಯಕಿ, ಬಲದೇವ, ಪ್ರದ್ಯುಮ್ನ–ಇವರೆಲ್ಲರನ್ನೂ ನಿಂದಿಸಿದೆನು. ದ್ವಾರವತಿಯ ಮತ್ತು ನಮ್ಮ ತಂದೆಯ ರಕ್ಷಣೆಯ ಭಾರವನ್ನು ಪೂರ್ಣವಾಗಿ ಅವರಿಗೆ ವಹಿಸಿಕೊಟ್ಟು ನಾನು ಶಾಲ್ವನ ಸಂಹಾರಕ್ಕಾಗಿ ಹೊರಟಿದ್ದೆನಲ್ಲವೇ? ನನಗೆ ಬಹಳವಾದ ಪರಿತಾಪವುಂಟಾಗಿ ನನಗೆ ನಾನೇ ಪ್ರಶ್ನಿಸಿಕೊಂಡೆನು–"ಶತ್ರುನಿಷೂದನನಾದ, ಮಹಾಬಾಹುವಾದ ಬಲಭದ್ರನು ನಿಶ್ಚಯವಾಗಿಯೂ ಜೀವಿಸಿರುವನೇ? ಏಕೆಂದರೆ : ಅವನು ಜೀವಿಸಿರುವಾಗ ವಸುದೇವನ ಸಂಹಾರವು ಸಾಧ್ಯವಿಲ್ಲ. ವಜ್ರಾಯುಧಧರನಾದ ಇಂದ್ರನೂ ಶೂರಸುತನನ್ನು ಕೊಲ್ಲಲಾರನೆಂಬ ದೃಢವಿಶ್ವಾಸವು ನನಗಿದ್ದಿತು. ಆದುದರಿಂದ ನಾನು ಈ ನಿಶ್ಚಯಕ್ಕೆ ಬಂದೆನು. 'ವಸುದೇವನ ಸಂಹಾರವಾಗುವ ಸಮಯಕ್ಕೆ ಬಲದೇವ-ಸಾತ್ಯಕಿ-ಪ್ರದ್ಯುಮ್ನ-ಚಾರುದೇಷ್ಣ-ಸಾಂಬ ಮೊದಲಾದವರೂ ಗತಪ್ರಾಣರಾಗಿರಬಹುದು. ಇದು ನಿಶ್ಚಯ'–ಹೀಗೆಂದು ನಿಶ್ಚಯಿಸಿದನಂತರ ನನ್ನ ಹೃದಯವು ದುಃಖದಿಂದ ಮತ್ತಷ್ಟು ಭಾರವಾಯಿತು. ಆದರೆ ಆಹುಕನು ಹೇಳಿಕಳುಹಿಸಿದ ರೀತಿಯಲ್ಲಿ ನಾನು ಯುದ್ಧದಿಂದ ವಿಮುಖನಾಗದೇ ಅವರ ಮರಣವನ್ನೇ ಸ್ಮರಿಸುತ್ತಾ ಕೋಪಾವಿಷ್ಟನಾಗಿ ಶಾಲ್ವನೊಡನೆ ರೋಷಾವೇಶದಿಂದ ಯುದ್ಧಮಾಡಲು ಉಪಕ್ರಮಿಸಿದೆನು.

ಯುಧಿಷ್ಠಿರ! ವಿಷಯವು ಅಲ್ಲಿಗೇ ಮುಗಿಯಲಿಲ್ಲ. ನಾನು ರೋಷಾ

ವೇಶದಿಂದ ಶಾಲ್ವನೊಡನೆ ಯುದ್ಧವನ್ನು ಆರಂಭಿಸುವ ವೇಳೆಗೆ ಸರಿಯಾಗಿ ಸ್ವರ್ಣಮಯವಾದ ಸೌಭದಿಂದ ನನ್ನ ತಂದೆಯೇ ನನ್ನ ಸಮಕ್ಷದಲ್ಲಿ ಕೆಳಗುರುಳಿದನು. ಅದನ್ನು ಕಂಡೊಡನೆಯೇ ನಾನು ಮೂರ್ಛಿತನಾದೆನು. ಪುಣ್ಯಫಲವು ಮುಗಿದನಂತರ ಯಯಾತಿಯು ಸ್ವರ್ಗದಿಂದ ಕೆಳಗುರುಳಿ ದಂತೆ–ನನ್ನ ತಂದೆಯು ಕೆಳಗುರುಳಿದನು.

ಪುಣ್ಯವು ಕ್ಷಯಿಸಿದನಂತರ ಆಕಾಶದಲ್ಲಿರುವ ಗ್ರಹವು ಕೆಳಗುರುಳು ವಂತೆ–ಕೆದರಿದ ತಲೆಯಿಂದಲೂ, ಕೆಳಗೆ ಕಳಚಿಬೀಳುತ್ತಿದ್ದ ಕಿರೀಟದೊಡ ನೆಯೂ, ಅಸ್ತವ್ಯಸ್ತವಾಗಿದ್ದ ವಸ್ತ್ರದಿಂದಲೂ ನಮ್ಮ ತಂದೆಯು ಕೆಳಗುರುಳಿ ದನು. ಅದನ್ನು ನೋಡುತ್ತಲೇ ನನ್ನ ಕೈಲಿದ್ದ ಶಾರ್ಙ್ಗಧನುಸ್ಸೂ ಕಳಚಿ ಕೆಳಗೆ ಬಿದ್ದಿತು. ನಾನು ಮೋಹಾವಿಷ್ಟನಾಗಿ ರಥದ ಹಿಂಬದಿಯಲ್ಲಿ ಸುಮ್ಮನೆ ಕುಳಿತೆನು. ಪ್ರಜ್ಞಾಹೀನನಾಗಿ ಸತ್ತವನಂತೆ ರಥದ ಹಿಂಬದಿಯಲ್ಲಿ ಕುಳಿತ ನನ್ನನ್ನು ಕಂಡು ಸೇನೆಯಲ್ಲಿ ಹಾಹಾಕಾರವುಂಟಾಯಿತು. ಕಾಲುಗಳನ್ನೂ– ಕೈಗಳನ್ನೂ ಪ್ರಸರಿಸಿ ಕೆಳಗೆ ಬೀಳುತ್ತಿದ್ದ ನನ್ನ ತಂದೆಯು ಬೀಳುತ್ತಿರುವ ಪಕ್ಷಿರಾಜನಂತೆಯೇ ಕಂಡನು. ಹೀಗೆ ಬೀಳುತ್ತಿದ್ದ ನಮ್ಮ ತಂದೆಯನ್ನು ದಾನವರು ಈಟಿಗಳಿಂದಲೂ, ಭರ್ಜಿಗಳಿಂದಲೂ ಸುತ್ತಲೂ ತಿವಿಯುತ್ತಿದ್ದುದನ್ನು ಕಂಡು ನನ್ನ ಹೃದಯದಲ್ಲುಂಟಾದ ವೇದನೆಗೆ ಮಿತಿಯೇ ಇರಲಿಲ್ಲ. ನಮ್ಮ ತಂದೆಯ ಅಂತಹ ದಾರುಣಾವಸ್ಥೆಯನ್ನು ಕಂಡು ನಾನು ಕ್ಷಣಕಾಲ ಮೂರ್ಛಿತನಾದೆನು. ಯುಧಿಷ್ಠಿರ! ಮೂರ್ಛೆ ತಿಳಿದನಂತರ, ನಮ್ಮ ತಂದೆಯನ್ನು ಹೊತ್ತುತಂದ ರಥವಾಗಲೀ, ನಮ್ಮ ತಂದೆಯಾಗಲೀ, ಶಾಲ್ವನಾಗಲೀ, ಸೌಭವಿಮಾನವಾಗಲೀ ಕಾಣಲಿಲ್ಲ. ಅನಂತರದಲ್ಲಿ ಅವೆಲ್ಲವೂ ರಾಕ್ಷಸರ ಮಾಯೆಯೆಂದು ನಾನು ನಿಶ್ಚಯಿಸಿದೆನು. ದುಃಖವನ್ನು ದೂರಮಾಡಿ ಮನಸ್ಸನ್ನು ಹಗುರಮಾಡಿಕೊಂಡು, ಉತ್ಸಾಹಭರಿತನಾಗಿ ಪುನಃ ಯುದ್ಧವನ್ನು ಆರಂಭಿಸಿ ನೂರಾರು ಬಾಣಗಳನ್ನು ಪ್ರಯೋಗಿಸಿದೆನು.”

೨೧ನೆಯ ಅಧ್ಯಾಯವು ಮುಗಿಯಿತು.

೨೨ನೆಯ ಅಧ್ಯಾಯ ಅರ್ಜುನಾಭಿಗಮನಪರ್ವ (ಮುಂದುವರಿದಿದೆ.)

## ಶಾಲ್ವವಧೋಪಾಖ್ಯಾನದ ಪರಿಸಮಾಪ್ತಿ: ಯುಧಿಷ್ಠಿರನ ಅನುಮತಿಯನ್ನು ಪಡೆದು ಶ್ರೀಕೃಷ್ಣ-ಧೃಷ್ಟದ್ಯುಮ್ನಾದಿಗಳು ತಮ್ಮ-ತಮ್ಮ ದೇಶಗಳಿಗೆ ಪ್ರಯಾಣಮಾಡಿದುದು

ಶ್ರೀಕೃಷ್ಣನು ಶಾಲ್ವವಧೋಪಾಖ್ಯಾನವನ್ನು ಮುಂದುವರಿಸಿ ಹೇಳಿದನು:

"ಯುಧಿಷ್ಠಿರ! ಬಳಿಕ ನಾನು ಶಾರ್ಙ್ಗಧನುಸ್ಸನ್ನು ಹಿಡಿದು ಸರ್ಪದಂತಹ ಬಾಣಗಳನ್ನು ಯೋಜಿಸಿ, ಅನೇಕದಾನವರ ಶಿರಸ್ಸುಗಳನ್ನು ಕೆಡಹಿದೆನು. ಮೇಲಕ್ಕೆ ಹೋಗುವ ತೀಕ್ಷ್ಣತೇಜಸ್ಸುಳ್ಳ ಸರ್ಪಾಕಾರದ ಒಳ್ಳೆಯ ರೆಕ್ಕೆಗಳುಳ್ಳ ಬಾಣಗಳನ್ನು ಶಾಲ್ವನ ಮೇಲೆ ಪ್ರಯೋಗಿಸಿದೆನು. ಆದರೆ ಮರುಕ್ಷಣದಲ್ಲಿ ಶಾಲ್ವನ ರಥವೇ ಕಾಣದಾಯಿತು. ಅವನ ಸೈನ್ಯಗಳೂ ಕಾಣಲಿಲ್ಲ. ಮಾಯೆಯಿಂದ ಎಲ್ಲವೂ ಅದೃಶ್ಯವಾಯಿತು. ನಾನು ಅಚ್ಚರಿಗೊಂಡೆನು. ವಿಕಾರವಾದ ಮುಖವನ್ನೂ, ಕೂದಲುಗಳನ್ನೂ ಹೊಂದಿರುವ ರಾಕ್ಷಸರು ಒಂದು ಕಡೆಯಲ್ಲಿ ಅದೃಶ್ಯರಾಗಿಯೇ ಘೋರಶಬ್ದವನ್ನು ಮಾಡಿದರು. ನಾನು ಶಬ್ದವೇಧಿಗಳಾದ ಬಾಣಗಳನ್ನು ಪ್ರಯೋಗಿಸಿದೆನು. ಆ ರಾಕ್ಷಸರು ಹತರಾದರು. ಶಬ್ದವು ನಿಂತುಹೋಯಿತು. ಬಳಿಕ ಬೇರೆಯ ಕಡೆಯಲ್ಲಿ ಭಯಂಕರ ಶಬ್ದವಾಯಿತು. ಅಲ್ಲಿಗೂ ಬಾಣಗಳನ್ನು ಬಿಟ್ಟು ರಾಕ್ಷಸರನ್ನು ಸಂಹರಿಸಿದೆನು. ಹೀಗೆ ಹತ್ತು ದಿಕ್ಕುಗಳಲ್ಲಿಯೂ ಶಬ್ದಮಾಡಿದ ದಾನವರನ್ನು ವಧಿಸಿದೆನು. ಕಾಮಗಾಮಿಯಾದ ಶಾಲ್ವನ ಸೌಭವಿಮಾನವು ಅಷ್ಟರಲ್ಲಿಯೇ ಪ್ರಾಗ್ಜ್ಯೋತಿಷಕ್ಕೆ ಹೋಗಿ ಹಿಂದಿರುಗಿ ಬಂದು ನನ್ನೆದುರಿನಲ್ಲಿ ನನ್ನ ಕಣ್ಣುಗಳನ್ನು ಮೋಹಗೊಳಿಸುತ್ತಾ ಕಾಣಿಸಿಕೊಂಡಿತು.

ಬಳಿಕ ಲೋಕವನ್ನೇ ನಾಶಗೊಳಿಸಬಲ್ಲ ಭಯಂಕರನಾದ ರಾಕ್ಷಸನು ಕಲ್ಲುಗಳ ಮಳೆಯಿಂದ ನನ್ನನ್ನು ಮುಚ್ಚಿಬಿಟ್ಟನು. ಕ್ಷಣಮಾತ್ರದಲ್ಲಿ ಕಲ್ಲಿನ ರಾಶಿಯು ನನ್ನ ಸುತ್ತಲೂ ಪರ್ವತೋಪಮವಾಗಿ ಬಿದ್ದಿತು. ಪರ್ವತಗಳ ಮಧ್ಯದಲ್ಲಿರುವ ಸಣ್ಣ ಹುತ್ತದಂತೆ–ನಾನು ಆ ಕಲ್ಲಿನ ರಾಶಿಯ ಮಧ್ಯದಲ್ಲಿ ಮುಚ್ಚಿಹೋದೆನು. ನನ್ನ ಕುದುರೆಗಳು, ಸಾರಥಿ, ರಥ ಯಾವುದೂ ನನ್ನ

ಸೈನಿಕರಿಗೆ ಕಾಣಿಸುತ್ತಿರಲಿಲ್ಲ. ಅದರಿಂದಾಗಿ ನನ್ನ ಸೈನಿಕರು ಭಯಗೊಂಡು ನಾಲ್ಕು ದಿಕ್ಕುಗಳಲ್ಲಿಯೂ ಓಡಲಾರಂಭಿಸಿದರು. ಅವರು 'ಅಯ್ಯೋ-ಅಯ್ಯೋ!'–ಎಂದು ಕೂಗುತ್ತಿದ್ದುದು ನಾಲ್ಕು ದಿಕ್ಕುಗಳಲ್ಲಿಯೂ ಪ್ರತಿಧ್ವನಿತ ವಾಯಿತು. ನನ್ನ ಮಿತ್ರರು ನನ್ನನ್ನು ಕಾಣದೇ ಅಳತೊಡಗಿದರು. ಶತ್ರುಪಕ್ಷದವರಿಗೆ ಬಹಳ ಹರ್ಷವುಂಟಾಯಿತು. ಆ ಪ್ರತಿಕ್ರಿಯೆಗಳನ್ನು ನಾನು ಯುದ್ಧವೆಲ್ಲವೂ ಮುಗಿದನಂತರ ನನ್ನ ಸೈನಿಕರಿಂದ ಕೇಳಿ ತಿಳಿದುಕೊಂಡೆನು. ಬಳಿಕ ನಾನು ಸಮಸ್ತಪಾಷಾಣಗಳನ್ನೂ ಭೇದಿಸಲು ಸಮರ್ಥವಾದ, ಇಂದ್ರ ನಿಗೆ ಪ್ರಿಯವಾದ ವಜ್ರಾಯುಧವನ್ನು ಪ್ರಯೋಗಿಸಿ ಪರ್ವತೋಪಮವಾದ ಕಲ್ಲಿನ ರಾಶಿಯನ್ನು ಕ್ಷಣಮಾತ್ರದಲ್ಲಿ ಕರಗಿಸಿದೆನು. ಕಲ್ಲಿನ ಪ್ರಹಾರದಿಂದ ಘಾಸಿಹೊಂದಿ ನಡುಗುತ್ತಿದ್ದ ನನ್ನ ಕುದುರೆಗಳು ಸತ್ತುಹೋಗುವುದರಲ್ಲಿದ್ದುವು. ತನ್ನನ್ನು ಮಸುಕುಗೊಳಿಸಿರುವ ಮೋಡಗಳನ್ನು ಭೇದಿಸಿಕೊಂಡು ಉದಯಿಸಿದ ಸೂರ್ಯನನ್ನು ಕಂಡು ಜನತೆಯು ಹರ್ಷಿಸುವಂತೆ–ಪಾಷಾಣಪರ್ವತವು ಕರಗಿಹೋದನಂತರ ನನ್ನನ್ನು ಕಂಡು ನನ್ನ ಮಿತ್ರರು ಬಹುವಾಗಿ ಹರ್ಷಿಸಿದರು. ನನ್ನ ಕುದುರೆಗಳ ಅವಸ್ಥೆಯನ್ನು ಕಂಡು ನನ್ನ ಸಾರಥಿಯಾದ ದಾರುಕನು ಕಾಲೋಚಿತವಾದ ಈ ಮಾತನ್ನು ಹೇಳಿದನು :

"ಅಲ್ಲಿ ನೋಡು, ಕೃಷ್ಣ! ರತ್ನಖಚಿತವಾದ ವಿಮಾನದಲ್ಲಿ ಶಾಲ್ವನು ಕುಳಿತಿದ್ದಾನೆ. ಅವನು ದುರ್ಬಲನೆಂದಾಗಲೀ, ನಿನಗೆ ಸಮಾನನಲ್ಲವೆಂದಾಗಲೀ ತಾತ್ಸಾರಮಾಡಬೇಡ. ನೀನು ಪೂರ್ಣಬಲಪ್ರಯೋಗಮಾಡಿ ಅವನನ್ನು ಸಂಹರಿಸು. ಅವನ ವಿಷಯದಲ್ಲಿ ನಿನಗಿರುವ ಅನುಕಂಪವನ್ನು ದೂರಮಾಡು. ಶತ್ರುನಿಬರ್ಹಣನಾದ ನಿನಗೆ ಶತ್ರುಗಳಾದವರನ್ನು ಸಕಲಯತ್ನಗಳಿಂದಲೂ ಸಂಹರಿಸಬೇಕೆಂಬ ವಿಷಯವು ತಿಳಿದಿದೆಯಲ್ಲವೇ?

**ಸರ್ವೈಃ ಪರಾಕ್ರಮೈರ್ವೀರ ವಧ್ಯಃ ಶತ್ರುರಮಿತ್ರಹನ್ ।**
**ನ ಶತ್ರುರವಮನ್ತವ್ಯೋ ದುರ್ಬಲೋಽಪಿ ಬಲೀಯಸಾ ॥೨೩॥**

ಶತ್ರುಹಂತಕನೇ! ಶತ್ರುವು ದುರ್ಬಲನೇ ಆಗಿದ್ದರೂ ಬಲಿಷ್ಠರಾದವರು ಉಪೇಕ್ಷಿಸದೇ ಶತ್ರುವನ್ನು ಸಂಹಾರಮಾಡಿಯೇ ತೀರಬೇಕು. ಹೀಗಿರುವಾಗ ಶತ್ರುವು ಯುದ್ಧಕ್ಕೆ ಸಿದ್ಧನಾಗಿ ಬಂದು ನಿಂತಿರುವಾಗ ಅವನ ವಿಷಯದಲ್ಲಿ ಉಪೇಕ್ಷೆಮಾಡುವುದು ಸರಿಯಲ್ಲ. ಮೃದುಭಾವದಿಂದ ಯುದ್ಧಮಾಡಿದರೆ

ಇವನ ಸಂಹಾರವಾಗದು. ಪೂರ್ಣಬಲಪ್ರಯೋಗದಿಂದಲೇ ಇವನ ಸಂಹಾರವು ಸಾಧ್ಯವಾಗುವುದು. ಮೇಲಾಗಿ ನಿನ್ನೆದುರಾಗಿ ಯುದ್ಧಕ್ಕೆ ಸಿದ್ಧನಾಗಿರುವ ಮತ್ತು ದ್ವಾರವತಿಯನ್ನು ನಾಶಗೊಳಿಸಿರುವ ಇವನು ನಿನಗೆ ಖಂಡಿತವಾಗಿಯೂ ಮಿತ್ರನಾಗಲು ಸಾಧ್ಯವಿಲ್ಲ. ಪೂರ್ಣಪ್ರಯತ್ನದಿಂದ ಇವನನ್ನು ಒಡನೆಯೇ ಸಂಹರಿಸು."

"ಕೌಂತೇಯ! ಸಾರಥಿಯ ಮಾತುಗಳನ್ನು ಕೇಳಿ, ಅವನು ಹೇಳಿದುದು ಸತ್ಯವೆಂದು ನಿಶ್ಚಯಿಸಿ, ಶಾಲ್ವನನ್ನು ಕೊಲ್ಲುವ ದೃಢನಿಶ್ಚಯದಿಂದ ಯುದ್ಧಮಾಡಲು ಉಪಕ್ರಮಿಸಿದೆನು. ದಾರುಕನಿಗೂ ಮುಹೂರ್ತಕಾಲ ನಿಲ್ಲುವಂತೆ ಹೇಳಿ–ಅಪ್ರತಿಮವಾದ, ಅಭೇದ್ಯವಾದ, ದಿವ್ಯವಾದ, ಮಹಾವೀರ್ಯವತ್ತಾದ, ಎಲ್ಲೆಡೆಗಳಲ್ಲಿಯೂ ಹೋಗುವ ಸಾಮರ್ಥ್ಯವುಳ್ಳ, ಮಹಾತೇಜಸ್ಸಿನಿಂದ ಕೂಡಿದ್ದ ಆಗ್ನೇಯಾಸ್ತ್ರವನ್ನು ಮಂತ್ರಪುನಶ್ಚರಣೆಮಾಡಿ :

**ಜಹಿ ಸೌಭಂ ಸ್ವವೀರ್ಯೇಣ ಯೇ ಚಾತ್ರ ರಿಪವೋ ಮಮ ॥**

'ರತ್ನಖಚಿತವಾದ ಶಾಲ್ವನ ಸೌಭವಿಮಾನವನ್ನೂ ಮತ್ತು ಅಲ್ಲಿರುವ ಶತ್ರುಸಮೂಹವನ್ನೂ ವಿನಾಶಮಾಡು'–ಎಂದು ಹೇಳಿ ಧನುಸ್ಸಿನ ಹೆದೆಯೇರಿಸಿ ಪ್ರಯೋಗಿಸಿದೆನು. ಅದರೊಡನೆಯೇ, ಯಕ್ಷ-ರಾಕ್ಷಸ-ದಾನವರನ್ನೂ, ದುಷ್ಟರಾಜರನ್ನೂ ಭಸ್ಮಮಾಡಲು ಸಮರ್ಥವಾದ, ಕತ್ತಿಯಂತೆ ಹರಿತವಾದ ಅಲುಗಿನಿಂದ ಕೂಡಿದ್ದ, ಅಕಳಂಕವಾದ, ಶತ್ರುಗಳಿಗೆ ಯಮಪ್ರಾಯದಂತಿದ್ದ ಸುದರ್ಶನಚಕ್ರವನ್ನೂ ಪ್ರಯೋಗಿಸಿದೆನು. ನನ್ನ ಬಾಹುಬಲದಿಂದ ಪ್ರಯೋಗಿಸಿದ ಆ ಚಕ್ರವು ಆಕಾಶಕ್ಕೆ ಹೋದೊಡನೆಯೇ–ಪ್ರಳಯಕಾಲದಲ್ಲಿ ಆವಿರ್ಭವಿಸುವ ಎರಡನೆಯ ಸೂರ್ಯನಂತೆ–ಪ್ರಜ್ವಲಿಸಿತು. ಒಡನೆಯೇ ಸುದರ್ಶನಚಕ್ರವು ಸೌಭವಿಮಾನವನ್ನು ಪ್ರವೇಶಿಸಿ ಗರಗಸವು ವೃಕ್ಷವನ್ನು ಕತ್ತರಿಸುವಂತೆ–ಆ ವಿಮಾನವನ್ನು ಎರಡಾಗಿ ಸೀಳಿ ಧ್ವಂಸಮಾಡಿ, ಪುನಃ ನನ್ನ ದಕ್ಷಿಣಹಸ್ತವನ್ನಲಂಕರಿಸಿತು.

ಮಹೇಶ್ವರನ ಬಾಣದಿಂದ ಸೀಳಿಹೋದ ತ್ರಿಪುರಗಳಂತೆ ಸುದರ್ಶನದಿಂದ ಭೇದಿಸಲ್ಪಟ್ಟ ಸೌಭವಿಮಾನವು ಬಿದ್ದುಹೋಯಿತು. ವಿಮಾನವನ್ನು ಧ್ವಂಸಮಾಡಿ ಹಿಂದಿರುಗಿ ಬಂದ ಸುದರ್ಶನವನ್ನು ಪುನಃ ನಾನು ಗರ-ಗರನೆ

ತಿರುಗಿಸುತ್ತಾ ಶಾಲ್ವನನ್ನು ಸಂಹರಿಸುವಂತೆ ಮಂತ್ರಪುನಶ್ಚರಣೆಮಾಡಿ ಪ್ರಯೋಗಿಸಿದೆನು. ಮಹಾಚಕ್ರವು ಕ್ಷಣಮಾತ್ರದಲ್ಲಿ–ನನ್ನ ಮೇಲೆ ಗದಾ ಪ್ರಯೋಗಮಾಡಲು ಸಿದ್ಧನಾಗಿ ನಿಂತಿದ್ದ ಶಾಲ್ವನನ್ನು ಎರಡು ಭಾಗವಾಗಿ ಕತ್ತರಿಸಿತು. ಶಾಲ್ವನ ಸಂಹಾರವಾದೊಡನೆಯೇ ಅವನ ಅಂತಃಪುರದ ರಾಕ್ಷಸ ಸ್ತ್ರೀಯರು–'ಅಯ್ಯೋ!'–ಎಂದು ಆರ್ತನಾದಮಾಡಿದರು. ಅಳಿದುಳಿದಿದ್ದ ದಾನವಸೈನ್ಯವು ದಿಕ್ಕಾಪಾಲಾಗಿ ಓಡಿಹೋಯಿತು. ಒಡನೆಯೇ ನಾನು ನನ್ನ ರಥವನ್ನು ಚಕ್ರಾಯುಧದಿಂದ ಧ್ವಂಸಮಾಡಲ್ಪಟ್ಟಿದ್ದ ಸೌಭವಿಮಾನದ ಹತ್ತಿರದಲ್ಲಿ ನಿಲ್ಲಿಸಿ, ಪಾಂಚಜನ್ಯವನ್ನು ಗಟ್ಟಿಯಾಗಿ ಊದಿದೆನು. ಆ ಧ್ವನಿಯು ನಮ್ಮ ಮಿತ್ರರ ಮುಖಕಮಲಗಳನ್ನು ಆನಂದದಿಂದ ಅರಳಿಸಿತು. ಸೌಭವಿಮಾನವನ್ನೂ, ಶಾಲ್ವನನ್ನೂ ಧ್ವಂಸಮಾಡಿ ದ್ವಾರಕೆಗೆ ಬಂದ ನನ್ನನ್ನು ಕಂಡು ಬಂಧು-ಮಿತ್ರರೆಲ್ಲರೂ ಆದರದಿಂದ ಸ್ವಾಗತಿಸಿದರು.

ಯುಧಿಷ್ಠಿರ! ಈ ಕಾರಣದಿಂದ ನಾನು ಪಗಡೆಯಾಟವು ನಡೆಯುತ್ತಿದ್ದಾಗ ಹಸ್ತಿನೆಗೆ ಬರಲಾಗಲಿಲ್ಲ. ಒಂದು ವೇಳೆ ನಾನು ಬಂದಿದ್ದರೆ ದುರ್ಯೋಧನನು ಉಳಿಯುತ್ತಿರಲಿಲ್ಲ. ಅಥವಾ ಅವನಿಗೆ ಜೀವಂತವಾಗಿ ಉಳಿಯುವ ಯೋಗವಿದ್ದಿದ್ದರೆ–ಪಗಡೆಯಾಟವೇ ನಡೆಯುತ್ತಿರಲಿಲ್ಲ. ಕಾಲವು ಮೀರಿಹೋಯಿತು. ಈಗೇನು ಮಾಡಲಿ? ಒಡೆದುಹೋದ ಅಣೆಕಟ್ಟೆಗೆ ನೀರನ್ನು ತಡೆಯುವ ಸಾಧ್ಯತೆಯಿದೆಯೇ?"

ಹೀಗೆ ಶಾಲ್ವವಧೆಯ ವೃತ್ತಾಂತವನ್ನು ಸವಿಸ್ತರವಾಗಿ ಹೇಳಿದನಂತರ ಪುರುಷೋತ್ತಮನಾದ, ಮಧುಸೂದನನಾದ, ಶೌರಿಯಾದ ಶ್ರೀಕೃಷ್ಣನು ದ್ವಾರಕೆಗೆ ಹೊರಡಲು ಅನುವಾಗಿ ಯುಧಿಷ್ಠಿರನಿಗೆ ನಮಸ್ಕರಿಸಿದನು. ಭೀಮನು ಶ್ರೀಕೃಷ್ಣನನ್ನು ಗಾಢಾಲಿಂಗನೆ ಮಾಡಿಕೊಂಡು ಅವನ ತಲೆಯನ್ನು ಆಘ್ರಾಣಿಸಿದನು. ಅನಂತರ ಅರ್ಜುನನು ಶ್ರೀಕೃಷ್ಣನನ್ನು ಬಾಚಿ ತಬ್ಬಿ ಕೊಂಡನು. ನಕುಲ-ಸಹದೇವರು ಶ್ರೀಕೃಷ್ಣನಿಗೆ ವಿನಯಪೂರ್ವಕವಾಗಿ ನಮಸ್ಕರಿಸಿದರು. ಧೌಮ್ಯರು ಪುರುಷೋತ್ತಮನನ್ನು ಯಥಾವಿಧಿಯಾಗಿ ಪೂಜಿಸಿದರು. ದ್ರೌಪದಿಯು ಕಣ್ಣೀರಿನಿಂದಲೇ ಶ್ರೀಕೃಷ್ಣನ ಕಾಲ್ತೊಳೆದಳು. ಸುಭದ್ರೆಯನ್ನೂ ಅಭಿಮನ್ಯುವನ್ನೂ ರಥದ ಮೇಲೆ ಕುಳ್ಳಿರಿಸಿಕೊಂಡು ಧರ್ಮಜನನ್ನು ಪುನಃ ಸಂತೈಸಿ, ಸೂರ್ಯನಂತೆ ಪ್ರಕಾಶಿಸುತ್ತಿದ್ದ, ಶೈಬ್ಯ

ಮತ್ತು ಸುಗ್ರೀವಗಳೆಂಬ ಕುದುರೆಗಳನ್ನು ಕಟ್ಟಿದ್ದ ದಿವ್ಯರಥದಲ್ಲಿ ಕುಳಿತು ಶ್ರೀಕೃಷ್ಣನು ದ್ವಾರವತಿಗೆ ಪ್ರಯಾಣಮಾಡಿದನು. ಶ್ರೀಕೃಷ್ಣನು ಪ್ರಯಾಣ ಮಾಡಿದನಂತರ ದ್ರುಪದನ ಮಗನಾದ ಧೃಷ್ಟದ್ಯುಮ್ನನು ದ್ರೌಪದಿಯ ಐವರು ಮಕ್ಕಳನ್ನೂ ಕರೆದುಕೊಂಡು ಪಾಂಚಾಲದೇಶಕ್ಕೆ ಹೊರಟನು. ಚೇದಿಯ ರಾಜನಾದ ಧೃಷ್ಟಕೇತುವು ತನ್ನ ತಂಗಿಯೂ ನಕುಲನ ಹೆಂಡತಿಯೂ ಆದ ಕರೇಣುಮತಿಯನ್ನು ಕರೆದುಕೊಂಡು ತನ್ನ ರಾಜಧಾನಿಯಾದ ಶುಕ್ತಿಮತಿಗೆ ಹೊರಟನು. ಕೇಕಯರಾಜರೂ ಧರ್ಮಜನ ಅನುಮತಿಯನ್ನು ಪಡೆದು ತಮ್ಮ-ತಮ್ಮ ರಾಜಧಾನಿಗಳಿಗೆ ತೆರಳಿದರು. ಆದರೆ ಪಾಂಡವರೊಡನಿದ್ದ ಬ್ರಾಹ್ಮಣರು, ವೈಶ್ಯರು ಮತ್ತು ಪ್ರಜೆಗಳು ಮಾತ್ರ ಅವರನ್ನಗಲಿ ಹೋಗಲು ಇಷ್ಟವುಳ್ಳವರಾಗಲಿಲ್ಲ. ಯುಧಿಷ್ಠಿರನು ಅವರೆಲ್ಲರನ್ನೂ ಗೌರವಿಸಿ ಆದರಿಸುತ್ತಿದ್ದನು. ಅವರ ಇರುವಿಕೆಯಿಂದ ಕಾಮ್ಯಕವನವು ಅತಿಶಯವಾದ ಕಾಂತಿಯಿಂದ ಪ್ರಕಾಶಿಸುತ್ತಿದ್ದಿತು. ಕೆಲವು ದಿನಗಳು ಕಳೆದುವು. ಅನಂತರ ಯುಧಿಷ್ಠಿರನು ತನ್ನ ಸೇವಕರನ್ನು ಕರೆದು ರಥಗಳನ್ನು ಸಿದ್ಧಗೊಳಿಸುವಂತೆ ಹೇಳಿದನು."

೨೨ನೆಯ ಅಧ್ಯಾಯವು ಮುಗಿಯಿತು.

೨೩ನೆಯ ಅಧ್ಯಾಯ ಅರ್ಜುನಾಭಿಗಮನಪರ್ವ (ಮುಂದುವರಿದಿದೆ.)

## ಪಾಂಡವರು ದ್ವೈತವನಕ್ಕೆ ಹೊರಟುದು : ಪ್ರಜೆಗಳ ವ್ಯಾಕುಲತೆ

ವೈಶಂಪಾಯನರು ಹೇಳುತ್ತಾರೆ :

"ಪಾರಿಕ್ಷಿತ! ಯದುಕುಲದ ಅಧಿಪತಿಯಾದ ಶ್ರೀಕೃಷ್ಣನು ಯುಧಿಷ್ಠಿರನ ಅನುಮತಿಯನ್ನು ಪಡೆದು ಪರಿವಾರಸಮೇತನಾಗಿ ದ್ವಾರವತಿಗೆ ಹಿಂದಿರುಗಿದನಂತರ, ವೀರರಾದ, ಶ್ರೀಶಂಕರನಿಗೆ ಅನುರೂಪರಾದ ಯುಧಿಷ್ಠಿರ-ಭೀಮಾರ್ಜುನ-ನಕುಲ-ಸಹದೇವರೂ, ಕೃಷ್ಣೆಯೂ ಮತ್ತು ಪುರೋಹಿತರಾದ ಧೌಮ್ಯರೂ ಉತ್ತಮಾಶ್ವಗಳಿಂದ ಯುಕ್ತವಾಗಿದ್ದ, ಶ್ರೇಷ್ಠ ವಾದ ರಥಗಳಲ್ಲಿ ಕುಳಿತು ದ್ವೈತವನಕ್ಕೆ ಹೊರಟರು.

ಹೊರಡುವ ವೇಳೆಯಲ್ಲಿ ಪಾಂಡವರು ಶಿಕ್ಷಾಕ್ಷರಮಂತ್ರವೇತ್ತರಾದ ವಿದ್ವಾಂಸರಿಗೆ ಸುವರ್ಣನಾಣ್ಯಗಳನ್ನೂ, ವಸ್ತ್ರಗಳನ್ನೂ, ಹಸುಗಳನ್ನೂ ದಾನರೂಪವಾಗಿ ಕೊಟ್ಟರು.

ಧನುರ್ಧಾರಿಗಳಾದ, ದಿವ್ಯಾಂಬರಧಾರಿಗಳಾದ ಇಪ್ಪತ್ತುಮಂದಿ ಅಂಗ ರಕ್ಷಕರು ಮುಂದೆ ಹೊರಟರು. ಸೇವಕರು ಧನುಸ್ಸುಗಳನ್ನೂ, ಶಸ್ತ್ರಗಳನ್ನೂ, ದೇದೀಪ್ಯಮಾನವಾಗಿದ್ದ ಬಾಣಗಳನ್ನೂ, ಮೌರ್ವಿಗಳನ್ನೂ, ಹಲವಾರು ಯುದ್ಧದ ಯಂತ್ರಗಳನ್ನೂ, ಅನೇಕವಿಧವಾದ ಸಾಯಕಗಳನ್ನೂ ತೆಗೆದು ಕೊಂಡು ಪಾಂಡವರನ್ನು ಅನುಸರಿಸಿ ಹೊರಟರು. ಇಂದ್ರಸೇನನು ದ್ರೌಪದಿಯ ವಸ್ತ್ರಾಭರಣಗಳೊಡನೆ ದ್ರೌಪದಿಯ ದಾಸಿಯರನ್ನೂ ರಥದಲ್ಲಿ ಕುಳ್ಳಿರಿಸಿಕೊಂಡು ಪಾಂಡವರ ರಥಗಳ ಹಿಂದೆ ಹೊರಟನು.

ಪಾಂಡವರು ಈ ರೀತಿಯಲ್ಲಿ ಹೊರಡಲು ಸಿದ್ಧರಾದಾಗ ಕುರುಜಾಂಗ ಲದ ನಾಗರಿಕರು ಅವರ ರಥಗಳನ್ನು ಸುತ್ತುವರಿದು ನಿಂತರು. ಸಮೂಹ ದಲ್ಲಿದ್ದ ಬ್ರಾಹ್ಮಣರು ಧರ್ಮರಾಜನನ್ನು ಯಥೋಚಿತವಾದ ಮತ್ತು ಸಮಯೋಚಿತವಾದ ಮಾತುಗಳಿಂದ ಸಂತೈಸಿದರು. ಅದಕ್ಕೆ ಪ್ರತಿಯಾಗಿ ಧರ್ಮಜನೂ ಅವರನ್ನು ಪುರಸ್ಕರಿಸಿದನು. ತನ್ನ ಸುತ್ತಲೂ ನಿಂತಿದ್ದ ಅಗಾಧವಾದ ಜನಸಮೂಹವನ್ನು ನೋಡಿ ಧರ್ಮಜನಿಗೆ ಅವರನ್ನಗಲಿ ಹೋಗಲು ಸಂಕಟವಾಯಿತು.

**ಪಿತೇವ ಪುತ್ರೇಷು ಸ ತೇಷು ಭಾವಂ**
**ಚಕ್ರೇ ಕುರೂಣಾಮೃಷಭೋ ಮಹಾತ್ಮಾ ।**
**ತೇ ಚಾಪಿ ತಸ್ಮಿನ್ಭರತಪ್ರಬರ್ಹೇ**
**ತದಾ ಬಭೂವುಃ ಪಿತರೀವ ಪುತ್ರಾಃ ॥೭॥**

ಧರ್ಮಜನು–ಮಕ್ಕಳನ್ನು ಬಿಟ್ಟು ಹೋಗುವ ತಂದೆಯಂತೆ–ಪರಿತಾಪ ಪಟ್ಟನು. ನಾಗರಿಕರೂ–ತಂದೆಯನ್ನಗಲುವ ಮಕ್ಕಳಂತೆ–ಪರಿತಾಪಪಟ್ಟರು. ಪ್ರತಿಯೊಬ್ಬರ ಕಣ್ಣುಗಳಲ್ಲಿಯೂ ಕಂಬನಿಗಳು ಧಾರಾವಾಹಿಯಾಗಿ ಹರಿಯು ತ್ತಿದ್ದುವು. ಕ್ಷಣ-ಕ್ಷಣಕ್ಕೂ ಕಣ್ಣೀರೊರೆಸಿಕೊಳ್ಳುತ್ತಾ ನಾಗರಿಕರು ಧರ್ಮಜನನ್ನು ಕುರಿತು ಹೇಳಿದರು : “ಧರ್ಮಜ! ಕುರುಕುಲಾವತಂಸ!

ಮಹಾರಾಜ! ತಂದೆಯು ಮಕ್ಕಳನ್ನಗಲಿ ಹೋಗುವಂತೆ–ನಿನ್ನ ನೆಚ್ಚಿನ ಪ್ರಜೆಗಳಾದ ನಮ್ಮನ್ನು ಬಿಟ್ಟು ಎಲ್ಲಿಗೆ ಹೋಗುವೆ?

**ಧಿಗ್ಧಾರ್ತರಾಷ್ಟ್ರಂ ಸುನೃಶಂಸಬುದ್ಧಿಂ**
**ಧಿಕ್ಸೌಬಲಂ ಪಾಪಮತಿಂ ಚ ಕರ್ಣಮ್ ।**
**ಅನರ್ಥಮಿಚ್ಛನ್ತಿ ನರೇನ್ದ್ರ ಪಾಪಾ**
**ಯೇ ಧರ್ಮನಿತ್ಯಸ್ಯ ಸತಸ್ತವೈವಮ್ ॥೧೦॥**

ಅಯ್ಯೋ! ನಿನ್ನೀ ದುರ್ಗತಿಗೆ ಕಾರಣನಾದ ಧೃತರಾಷ್ಟ್ರನ ಮಗನಾದ ದುರ್ಯೋಧನನಿಗೆ ಧಿಕ್ಕಾರವಿರಲಿ! ಅವನ ಸಂಗಡಿಗರಾದ ಪಾಪಮತಿಗಳಾದ ಕರ್ಣ-ಶಕುನಿಗಳಿಗೂ ಧಿಕ್ಕಾರವಿರಲಿ! ಏಕೆಂದರೆ : ನರೇಂದ್ರನೇ! ಧರ್ಮೈಕ ದೃಷ್ಟಿಯುಳ್ಳ ನಿನ್ನ ವಿಷಯದಲ್ಲಿ ಆ ನೀಚರು ಧೂರ್ತರಾಗಿ ವರ್ತಿಸಿರುವರಲ್ಲವೇ? ಅವರು ಯಾವಾಗಲೂ ನಿನಗೆ ಕೆಟ್ಟದ್ದನ್ನೇ ಬಯಸುವರು.

ಕೈಲಾಸಸದೃಶವಾದ ಇಂದ್ರಪ್ರಸ್ಥವನ್ನು ನಿರ್ಮಾಣಮಾಡಿಸಿ ಅದನ್ನು ಆಳುತ್ತಿದ್ದ ಧರ್ಮರಾಜನು ಅದನ್ನು ಬಿಟ್ಟು ಈಗ ಎಲ್ಲಿಗೆ ಹೋಗುತ್ತಿದ್ದಾನೆ? ಇಂದ್ರಸಭೆಗೆ ಸಮಾನವಾಗಿ ಮಯನಿಂದ ನಿರ್ಮಿಸಲ್ಪಟ್ಟ ದೇವತೆಗಳಿಂದ ರಕ್ಷಿಸಲ್ಪಟ್ಟ ದೇವಮಾಯೆಯಂತಿದ್ದ ಸಭೆಯನ್ನು ತ್ಯಜಿಸಿ ಎಲ್ಲಿಗೆ ಹೋಗು ತ್ತಿದ್ದಾನೆ? (ಧರ್ಮರಾಜನು ಅಂತಹ ಸುಖವನ್ನು ಅನುಭವಿಸುತ್ತಿದ್ದನು. ಅದನ್ನು ತ್ಯಜಿಸಿ ಎಲ್ಲಿಗೋ ಹೋಗುವಂತಾಯಿತಲ್ಲಾ!)"

ಪೌರರ ಆ ಪ್ರಶ್ನೆಗಳಿಗೆ ಯುಧಿಷ್ಠಿರನು ಏನೆಂದು ಹೇಳಿಯಾನು? ಯುಧಿಷ್ಠಿರನ ಸಮೀಪದಲ್ಲಿಯೇ ನಿಂತಿದ್ದ ಧರ್ಮ-ಕಾಮಾರ್ಥಜ್ಞಾನಿಯಾದ ಓಜಸ್ವಿಯಾದ ಅರ್ಜುನನು ಪೌರರನ್ನು ಕುರಿತು ಹೇಳಿದನು :

"ಪ್ರಿಯಪ್ರಜೆಗಳೇ! ಅರಣ್ಯದಲ್ಲಿ ವಾಸಮಾಡುತ್ತಿದ್ದು ನಮ್ಮ ಶತ್ರುಗಳ ಕೀರ್ತಿಯನ್ನು ಅಪಹರಿಸಬೇಕೆಂಬುದೇ ನಮ್ಮ ರಾಜನ ಉದ್ದೇಶವಾಗಿದೆ. ನೀವೆಲ್ಲರೂ ಬ್ರಾಹ್ಮಣಪುರಸ್ಸರರಾಗಿ ತಪಸ್ವಿಗಳನ್ನು ಸಂಧಿಸಿ, ಶತ್ರುಗಳು ನಮಗೆ ಕೊಟ್ಟಿರುವ ಕಷ್ಟಪರಂಪರೆಗಳನ್ನು ಅವರಿಗೆ ವಿವರಿಸಿ ಹೇಳಿ, ನಮಗೆ ಶುಭವಾಗಲೆಂದು ಅನುಗ್ರಹಿಸುವಂತೆ ಪ್ರಾರ್ಥಿಸಿರಿ."

ಅರ್ಜುನನ ಆ ಮಾತುಗಳನ್ನು ಪೌರರೆಲ್ಲರೂ ಅಭಿನಂದಿಸಿದರು. ಬ್ರಾಹ್ಮಣಪುರಸ್ಸರರಾಗಿ ಎಲ್ಲರೂ ಯುಧಿಷ್ಠಿರನನ್ನು ಪ್ರದಕ್ಷಿಣೆಮಾಡಿದರು. ಯುಧಿಷ್ಠಿರನ ಮತ್ತು ಭೀಮಾರ್ಜುನ-ನಕುಲ-ಸಹದೇವ-ದ್ರೌಪದಿಯರ ಅಪ್ಪಣೆಯನ್ನೂ ಪಡೆದವರಾಗಿ ಪಾಂಡವರಿಗೆ ಸುಖಪ್ರಯಾಣವನ್ನು ಆಶಿಸುತ್ತಾ, ಭಾರವಾದ ಹೃದಯಗಳಿಂದ ಎಲ್ಲರೂ ನಗರಾಭಿಮುಖವಾಗಿ ಪ್ರಯಾಣಮಾಡಿದರು.

೨೩ನೆಯ ಅಧ್ಯಾಯವು ಮುಗಿಯಿತು.

೨೪ನೆಯ ಅಧ್ಯಾಯ ಅರ್ಜುನಾಭಿಗಮನಪರ್ವ (ಮುಂದುವರಿದಿದೆ.)

## ಪಾಂಡವರ ದ್ವೈತವನಪ್ರವೇಶ

ಜನಮೇಜಯ! ಕುರುಜಾಂಗಲದ ಪೌರರು ಪ್ರಯಾಣಮಾಡಿದ ನಂತರ ಧರ್ಮಾತ್ಮನಾದ ಸತ್ಯಪ್ರತಿಜ್ಞನಾದ ಯುಧಿಷ್ಠಿರನು ತನ್ನ ಅನುಜರೆಲ್ಲರೊಡನೆ ಹೇಳಿದನು :

"ಸಹೋದರರರೇ! ನಾವು ಹನ್ನೆರಡು ವರ್ಷಗಳ ಕಾಲ ನಿರ್ಜನಪ್ರದೇಶದಲ್ಲಿ ವಾಸಮಾಡಬೇಕಾಗಿದೆ. ಆದುದರಿಂದ ಈ ಮಹಾರಣ್ಯದಲ್ಲಿ-ಮೃಗ-ಪಕ್ಷಿಗಳಿಂದ ನಿಬಿಡವಾಗಿರುವ, ಫಲ-ಪುಷ್ಪಭರಿತವಾಗಿರುವ, ಸತ್ಪುರುಷರಿಂದ ಆವೃತವಾದ ಮತ್ತು ಹನ್ನೆರಡು ವರ್ಷಗಳನ್ನು ನಿರಾತಂಕವಾಗಿ ಕಳೆಯಲು ಯೋಗ್ಯವಾಗಿರುವ ಪ್ರದೇಶವನ್ನು ಹುಡುಕಿರಿ."

ಧರ್ಮಜನ ಆ ಮಾತುಗಳನ್ನು ಕೇಳಿ ಧನಂಜಯನು–ಜ್ಞಾನಪ್ರದಾತೃವಾದ ಗುರುವಿಗೆ ಶಿಷ್ಯನಾದವನು ಅಭಿವಾದನಮಾಡುವಂತೆ–ಗುರುಸಮಾನನಾದ ಯುಧಿಷ್ಠಿರನಿಗೆ ಅಭಿವಾದನಮಾಡಿ ಹೇಳಿದನು :

"ಅಣ್ಣ! ನೀನು ಋಷಿ-ಮಹರ್ಷಿಗಳ ಶುಶ್ರೂಷೆಯನ್ನು ಮಾಡಿರುವೆ. ಆದುದರಿಂದ ನಿನಗೆ ಪ್ರಪಂಚದಲ್ಲಿ ತಿಳಿಯದಿರುವ ವಿಷಯವೇ ಇಲ್ಲ. ಭರತಕುಲಾವತಂಸನೇ! ನೀನು ಕೃಷ್ಣದ್ವೈಪಾಯನರೇ ಮೊದಲಾದ ಬ್ರಾಹ್ಮಣಶ್ರೇಷ್ಠರನ್ನು ಸೇವಿಸಿರುವೆ. ದೇವತೆಗಳ-ಗಂಧರ್ವರ-ಅಪ್ಸರೆಯರ ಲೋಕಗಳೇ ಆದಿಯಾಗಿ ಬ್ರಹ್ಮಲೋಕಾಂತವಾದ ಸಕಲಭುವನಗಳನ್ನೂ

ಸ್ವೇಚ್ಛೆಯಿಂದ ಸಂಚರಿಸುವ, ಜಿತೇಂದ್ರಿಯರಾದ, ಮಹರ್ಷಿಗಳಾದ ನಾರದರನ್ನೂ ಗೌರವಿಸಿ ಉಪಚರಿಸಿರುವೆ. ಯಾವ ಸ್ಥಳವು ವಾಸಕ್ಕೆ ಯೋಗ್ಯವೆಂಬ ವಿಷಯದಲ್ಲಿ ಬ್ರಾಹ್ಮಣರ ಅಭಿಪ್ರಾಯವನ್ನೂ ತಿಳಿದವನಾಗಿರುವೆ ಮತ್ತು ಎಲ್ಲಿ ವಾಸಮಾಡುವುದರಿಂದ ನಮಗೆ ಹಿತವುಂಟಾಗುವುದೆಂಬ ವಿಷಯವೂ ನಿನಗೆ ತಿಳಿದಿರುವುದು. ಆದುದರಿಂದ ನೀನೆಲ್ಲಿ ವಾಸಮಾಡಲು ಇಷ್ಟಪಡುವೆಯೋ ಆ ಸ್ಥಳವೇ ನಮಗೂ ಇಷ್ಟವಾದ ಸ್ಥಳವಾಗಿದೆ. ಇಲ್ಲಿರುವ ದ್ವೈತವನವು ನೀನು ಹೇಳಿದ ರೀತಿಯಲ್ಲಿ ಫಲ-ಪುಷ್ಪಗಳಿಂದಲೂ, ಮೃಗ-ಪಕ್ಷಿಗಳಿಂದಲೂ ಕೂಡಿರುವುದು. ಈ ಸರೋವರವೂ ಪವಿತ್ರವಾದುದೆಂದು ಕೇಳಿದ್ದೇನೆ. ನೀನೂ ಇಷ್ಟಪಡುವುದಾದರೆ ಹನ್ನೆರಡು ವರ್ಷಗಳೂ ನಾವು ಇಲ್ಲಿಯೇ ವಾಸಮಾಡಬಹುದು. ಈ ವಿಷಯದಲ್ಲಿ ನಿನ್ನ ಅಭಿಪ್ರಾಯವೇನು? ಯುಧಿಷ್ಠಿರ!"

"ಅರ್ಜುನ! ನೀನು ಸೂಚಿಸಿದ ಸ್ಥಳವೇ ನನಗೂ ಹಿತವೆನಿಸಿದೆ. ಪವಿತ್ರವಾದ ದ್ವೈತವನದ ಪ್ರದೇಶಕ್ಕೆ ಪ್ರಯಾಣಮಾಡೋಣ."

ಧರ್ಮಜನು ಹೀಗೆ ಸಮಾಲೋಚಿಸಿ, ಅನೇಕಾನೇಕಮಂದಿ ಬ್ರಾಹ್ಮಣರೊಡನೆ ದ್ವೈತಸರೋವರದ ಕಡೆಗೆ ಪ್ರಯಾಣಮಾಡಿದನು. ಹಿಂದೆಯೇ ಹೇಳಿದಂತೆ ಅವನೊಡನಿದ್ದ ಬ್ರಾಹ್ಮಣರಲ್ಲಿ ಕೆಲವರು ಅಗ್ನಿಹೋತ್ರಿಗಳೂ, ಮತ್ತೆ ಕೆಲವರು ಅಗ್ನಿಹೋತ್ರವಿಲ್ಲದವರೂ, ಕೆಲವರು ವೇದಾಧ್ಯಯನ ಮಾಡುವವರೂ, ಮತ್ತೆ ಕೆಲವರು ಭಿಕ್ಷಾವೃತ್ತಿಯನ್ನೇ ಅವಲಂಬಿಸಿದ್ದವರೂ, ವಾನಪ್ರಸ್ಥರೂ ಆಗಿದ್ದರು. ಅವರಲ್ಲದೇ ಅನೇಕಸಿದ್ಧರೂ, ವ್ರತನಿಷ್ಠರಾದ ಮಹಾತ್ಮರೂ ಯುಧಿಷ್ಠಿರನೊಡನಿದ್ದರು. ಅವರೊಡನೆ ಯುಧಿಷ್ಠಿರನು ದ್ವೈತವನವನ್ನು ಪ್ರವೇಶಿಸಿದನು. (ದ್ವೈತವೆಂಬ ಸರೋವರದ ಹೆಸರೇ ಆ ಪ್ರದೇಶದ ಅರಣ್ಯಕ್ಕೂ ಇದ್ದಿತು.) ಆ ಅರಣ್ಯದಲ್ಲಿದ್ದ ತಾಲ, ಮಾವು, ಮಧೂಕ, ನೀಪ, ಕದಂಬ, ಸರ್ಜ, ಅರ್ಜುನ–ಮೊದಲಾದ ವೃಕ್ಷಗಳು ಫಲ-ಪುಷ್ಪಗಳಿಂದ ಕೂಡಿ ಕಂಗೊಳಿಸುತ್ತಿದ್ದುವು.

ಆ ಮಹಾವೃಕ್ಷಗಳ ಅಗ್ರಭಾಗಗಳಲ್ಲಿ ಮಯೂರ-ಚಾತಕ-ಚಕೋರ-ಕೋಕಿಲಗಳು ಮಧುರಧ್ವನಿಗಳನ್ನು ಮಾಡುತ್ತಿದ್ದುವು. ಪರ್ವತೋಪಮ

ಗಳಾಗಿದ್ದ ಮದಗಜಗಳು ಹೆಣ್ಣಾನೆಗಳೊಡನೆ ಕೂಡಿ ಬರುತ್ತಿರುವುದನ್ನು ಯುಧಿಷ್ಠಿರನು ಕಂಡನು. ಸರಸ್ವತೀನದಿಯ ತೀರದಲ್ಲಿ ಪವಿತ್ರಾತ್ಮರಾದ ಅನೇಕ ಮಹರ್ಷಿಗಳು ಜಟಾ-ವಲ್ಕಲಧಾರಿಗಳಾಗಿ ತಪಸ್ಸುಮಾಡುತ್ತಿರುವುದನ್ನು ಕಂಡು ಯುಧಿಷ್ಠಿರನಿಗೆ ಅಮಿತಾನಂದವಾಯಿತು. ಇಂದ್ರನು ಅಮರಾವತಿಯನ್ನು ಪ್ರವೇಶಿಸುವಂತೆ–ಯುಧಿಷ್ಠಿರನು ತನ್ನ ಪರಿವಾರ ದೊಡನೆ ರಥದಿಂದಿಳಿದು ದ್ವೈತವನವನ್ನು ಪ್ರವೇಶಿಸಿದನು.



ಯುಧಿಷ್ಠಿರನು ದ್ವೈತವನಕ್ಕೆ ಬಂದಿರುವನೆಂದು ತಿಳಿದೊಡನೆಯೇ ಅವನನ್ನು ಸಂದರ್ಶಿಸುವ ಸಲುವಾಗಿ ಸಿದ್ಧ-ಚಾರಣರು ಅವನ ಸಮೀಪಕ್ಕೆ ಬಂದರು. ಇತರ ತಪಸ್ವಿಗಳೂ ಅವನ ದರ್ಶನಾಕಾಂಕ್ಷಿಗಳಾಗಿ ಬಂದು ಅವನ ಸುತ್ತಲೂ ನೆರೆದರು. ಧರ್ಮಜನು ಬಂದವರನ್ನು ಯಥೋಚಿತವಾಗಿ

ಸತ್ಕರಿಸಿ, ಅವರಿಂದಲೂ ರಾಜನಂತೆಯೂ ದೇವನಂತೆಯೂ ಸತ್ಕೃತನಾಗಿ, ಬದ್ಧಾಂಜಲಿಯಾಗಿ ಅವರೊಡನೆ ದ್ವೈತವನವನ್ನು ಪ್ರವೇಶಿಸಿದನು.

ಅನಂತರ ಯುಧಿಷ್ಠಿರನು ವಿಶಾಲವಾಗಿಯೂ, ಎತ್ತರವಾಗಿಯೂ ಇರುವ ಒಂದು ಮಹಾವೃಕ್ಷದ ಬುಡದಲ್ಲಿ ಋಷಿ-ಮಹರ್ಷಿಗಳಿಂದಲೂ, ಬ್ರಾಹ್ಮಣರಿಂದಲೂ ಪರಿವೃತನಾಗಿ ಕುಳಿತನು. ಪುಣ್ಯಶೀಲನಾದ ಯುಧಿಷ್ಠಿರನು ಮಹಾತಪಸ್ವಿಗಳ ನಡುವೆ–ತಂದೆಯಾದವನು ಮಕ್ಕಳ ಮಧ್ಯದಲ್ಲಿ ಕುಳಿತುಕೊಳ್ಳುವಂತೆ–ಕುಳಿತು, ಧರ್ಮಪರಾಯಣರಾದ ಋಷಿಗಳಿಂದ ಸಮ್ಮಾನಿತನಾದನು.

ಪ್ರಯಾಣದ ಆಯಾಸದಿಂದ ಬಳಲಿದ್ದ ಭೀಮಾರ್ಜುನ-ನಕುಲ-ಸಹದೇವ-ದ್ರೌಪದಿಯರೂ ಮತ್ತು ಸಹಚರರೂ ತಮ್ಮ-ತಮ್ಮ ವಾಹನ ಗಳಿಂದಿಳಿದು ಧರ್ಮಜನನ್ನು ಸುತ್ತುವರಿದು ಕುಳಿತರು.

ಪರ್ವತದ ತಪ್ಪಲುಪ್ರದೇಶದಲ್ಲಿ ತಂಗಿರುವ ಆನೆಗಳಿಂದ ಪರ್ವತವು ಶೋಭಾಯಮಾನವಾಗುವಂತೆ–ತನ್ನ ಬಳಿಯಲ್ಲಿ ಕುಳಿತಿರುವ ಧನುಷ್ಮಂತ ರಾದ ಐವರು ಪಾಂಡವರಿಂದ ಕೂಡಿ ಲತಾಸಮೂಹದಿಂದ ಆವೃತವಾಗಿದ್ದ ಆ ಮಹಾವೃಕ್ಷವೂ ಶೋಭಾಯಮಾನವಾಯಿತು."

೨೪ನೆಯ ಅಧ್ಯಾಯವು ಮುಗಿಯಿತು.

೨೫ನೆಯ ಅಧ್ಯಾಯ ಅರ್ಜುನಾಭಿಗಮನಪರ್ವ (ಮುಂದುವರಿದಿದೆ.)

## ಮಾರ್ಕಂಡೇಯಮಹರ್ಷಿಗಳು ಪಾಂಡವರಿಗೆ ಧರ್ಮೋಪದೇಶಮಾಡಿ ಉತ್ತರದಿಕ್ಕಿನೆಡೆಗೆ ಪ್ರಯಾಣಮಾಡಿದುದು

ವೈಶಂಪಾಯನರು ಹೇಳುತ್ತಾರೆ :

**ತತ್ಕಾನನಂ ಪ್ರಾಪ್ಯ ನರೇನ್ದ್ರಪುತ್ರಾಃ**
**ಸುಖೋಚಿತಾ ವಾಸಮುಪೇತ್ಯ ಕೃಚ್ಛ್ರಮ್ ।**
**ವಿಜಹ್ರುರಿನ್ದ್ರಪ್ರತಿಮಾಃ ಶಿವೇಷು**
**ಸರಸ್ವತೀಶಾಲವನೇಷು ತೇಷು ॥೧॥**

"ಪಾರಿಕ್ಷಿತ! ಸುಖೋಪಭೋಗಗಳಿಗೆ ಯೋಗ್ಯರಾದ ಇಂದ್ರಸದೃಶ

ರಾದ ಪಾಂಡವರು ಪ್ರಯಾಣಕಾಲದಲ್ಲಿ ಅನೇಕಾನೇಕಕಷ್ಟಗಳನ್ನು ಅನುಭವಿಸಿ ಕಟ್ಟಕಡೆಗೆ ಸುಮನೋಹರವಾದ ಸುಖಕರವಾದ ದ್ವೈತವನಕ್ಕೆ ಬಂದು ಸೇರಿದರು. ದ್ವೈತವನವು ಶಾಲವೃಕ್ಷಗಳಿಂದ ನಿಬಿಡವೂ, ಸರಸ್ವತೀ ನದಿಯಿಂದ ಪವಿತ್ರವೂ ಆಗಿದ್ದಿತು. ಅಂತಹ ಪುಣ್ಯಕ್ಷೇತ್ರದಲ್ಲಿ ಐವರು ಪಾಂಡವರೂ ಇಂದ್ರರೋಪಾದಿಯಲ್ಲಿ ಸ್ವೇಚ್ಛೆಯಿಂದ ಕಾಲಕಳೆಯುತ್ತಿದ್ದರು. ಯುಧಿಷ್ಠಿರನು ಯತಿಗಳಿಗೂ, ಮುನಿಗಳಿಗೂ, ಬ್ರಾಹ್ಮಣರಿಗೂ ಕಂದ-ಮೂಲ-ಫಲಾಹಾರಗಳನ್ನು ಕೊಟ್ಟು ಉಪಚರಿಸುತ್ತಿದ್ದನು. ಆ ಐವರು ಪಾಂಡವರಿಗೂ ತಂದೆಯೋಪಾದಿಯಲ್ಲಿದ್ದ ಧೌಮ್ಯರು ಕಾಲ-ಕಾಲಕ್ಕೆ ಪಿತೃಸಂಬಂಧವಾದ ತರ್ಪಣಾದಿಗಳನ್ನೂ, ದೇವಸಂಬಂಧವಾದ ಇಷ್ಟಿಗಳನ್ನೂ ಅವರಿಂದ ಮಾಡಿಸುತ್ತಿದ್ದರು.

ರಾಜ್ಯಭ್ರಷ್ಟರಾಗಿ ಅರಣ್ಯಕ್ಕೆ ಬಂದು ಅಲ್ಲಿ ವಾಸಮಾಡುತ್ತಿದ್ದ ಶ್ರೀಮಂತರಾದ ಪಾಂಡವರ ಆಶ್ರಮಕ್ಕೆ ಪುರಾಣಪುರುಷರಾದ, ಮಹರ್ಷಿಗಳಾದ ಮಾರ್ಕಂಡೇಯರು ಒಮ್ಮೆ ಅತಿಥಿಗಳಾಗಿ ಆಗಮಿಸಿದರು.

ಅತಿಥಿಗಳಾಗಿ ಆಗಮಿಸಿದ, ಪ್ರಜ್ವಲಿಸುತ್ತಿರುವ ಯಜ್ಞೇಶ್ವರನಿಗೆ ಸದೃಶವಾದ ತೇಜಸ್ಸಿನಿಂದ ಕಂಗೊಳಿಸುತ್ತಿದ್ದ, ಸುರರಿಂದಲೂ–ಋಷಿಗಳಿಂದಲೂ–ಮಾನವರಿಂದಲೂ ಪೂಜಿತರಾಗಿದ್ದ, ಮಹಾಮುನಿಗಳಾದ ಮಾರ್ಕಂಡೇಯರನ್ನು ವಿಶಾಲಮನಸ್ಕನಾದ, ಕುರುಪುಂಗವನಾದ, ಅನುಪಮವಾದ ಸತ್ತ್ವ ಮತ್ತು ವೀರ್ಯಗಳಿಂದ ಪರಿಪೂರ್ಣನಾಗಿದ್ದ ಯುಧಿಷ್ಠಿರನು ಯಥೋಚಿತವಾಗಿ ಪೂಜಿಸಿದನು.

ದ್ರೌಪದೀಸಮೇತರಾದ ಪಂಚಪಾಂಡವರೂ, ಋಷಿ-ಮಹರ್ಷಿಗಳೂ ಮತ್ತು ಬ್ರಾಹ್ಮಣರೂ ಮಾರ್ಕಂಡೇಯರನ್ನು ಸುತ್ತುವರಿದು ಉಪವಿಷ್ಟರಾಗಿದ್ದರು. ತೇಜಸ್ವಿಗಳಾದ ಮಾರ್ಕಂಡೇಯರು ಧರ್ಮಜ-ಭೀಮ-ಅರ್ಜುನ-ನಕುಲ-ಸಹದೇವ-ದ್ರೌಪದಿಯರನ್ನೊಮ್ಮೆ ನೋಡಿದರು. ಅವರಿಗೆ ಹಿಂದಿನ ಯುಗದಲ್ಲಿ ನಡೆದ ರಾಮಾಯಣದ ನೆನಪುಂಟಾಯಿತು. ಜಟಾಧಾರಿಯಾದ ಶ್ರೀರಾಮನ ಅರಣ್ಯವಾಸದ ದೃಶ್ಯವು ಅವರ ಹೃನ್ಮಂದಿರದಲ್ಲಿ ಗೋಚರವಾಯಿತು. ಸ್ವಾಭಾವಿಕವಾದ ಮುಗುಳ್ನಗೆಯು ಮಹರ್ಷಿಗಳ ಮುಖಾರವಿಂದದಲ್ಲಿ ಮೂಡಿತು.

ಮಹರ್ಷಿಗಳ ಮನೋಗತವನ್ನು ತಿಳಿಯಲು ಅಸಮರ್ಥನಾದ ಯುಧಿಷ್ಠಿರನು, ಮಹರ್ಷಿಗಳು ತಮ್ಮನ್ನು ನೋಡಿ ಪರಿಹಾಸ್ಯಮಾಡುತ್ತಿರುವರೆಂದು ಭಾವಿಸಿದನು. ಅದರಿಂದ ಯುಧಿಷ್ಠಿರನ ಮನಸ್ಸಿಗೆ ನೋವುಂಟಾಯಿತು. ಮಹರ್ಷಿಗಳನ್ನು ಸ್ಪಷ್ಟವಾಗಿಯೇ ಕೇಳಿದನು :

"ಮಹರ್ಷಿಗಳೇ! ಇಲ್ಲಿ ನೆರೆದಿರುವ ಋಷಿ-ಮಹರ್ಷಿಗಳೂ, ಬ್ರಾಹ್ಮಣರೂ ನಮ್ಮ ಇಂದಿನ ದುರವಸ್ಥೆಯನ್ನು ನೋಡಿ ವ್ಯಥೆಪಡುತ್ತಿದ್ದಾರೆ. ಆದರೆ ನೀವು ಮಾತ್ರ ನಮ್ಮ ಕಷ್ಟವನ್ನು ನೋಡಿ ಸಂತುಷ್ಟರಾದಂತೆ ಇವರೆಲ್ಲರ ಸಮ್ಮುಖದಲ್ಲಿ ನಗುತ್ತಿರುವಿರಿ. ಇದಕ್ಕೆ ಕಾರಣವೇನೆಂಬುದನ್ನು ತಿಳಿಯಬಹುದೇ?"

ಭಗವಾನ್ ಮಾರ್ಕಂಡೇಯರು ಹೇಳುತ್ತಾರೆ :

**ನ ತಾತ ಹೃಷ್ಯಾಮಿ ನ ಚ ಸ್ಮಯಾಮಿ**
**ಪ್ರಹರ್ಷಜೋ ಮಾಂ ಭಜತೇ ನ ದರ್ಪಃ ।**
**ತವಾಪದಂ ತ್ವದ್ಯ ಸಮೀಕ್ಷ್ಯ ರಾಮಂ**
**ಸತ್ಯವ್ರತಂ ದಾಶರಥಿಂ ಸ್ಮರಾಮಿ ॥೮॥**

"ಮಗು! ಹಾಗೆಂದಿಗೂ ಭಾವಿಸಬೇಡ. ನಿಮ್ಮನ್ನು ಕಂಡು ನನಗೆ ಯಾವ ವಿಧವಾದ ಸಂತೋಷವೂ ಉಂಟಾಗಲಿಲ್ಲ. ನಿಮ್ಮನ್ನು ನೋಡಿ ನಗುತ್ತಲೂ ಇಲ್ಲ. ಹರ್ಷದ ಹೆಚ್ಚಳದಿಂದ ಹುಟ್ಟುವ ದರ್ಪವು ನನ್ನ ಹತ್ತಿರಕ್ಕೂ ಸುಳಿಯದು. ಆದರೆ ನಿಮ್ಮ ಕಷ್ಟವನ್ನು ಕಂಡು ನನಗೆ ಸತ್ಯಸಂಧನಾದ ಶ್ರೀರಾಮನ ವನವಾಸದ ಸ್ಮರಣೆಯುಂಟಾದುದರಿಂದ ನಕ್ಕೆನು. ಶ್ರೀರಾಮನೂ ಸಹ ಪಿತೃವಾಕ್ಯಪರಿಪಾಲನೆಗಾಗಿ ಸೀತಾ-ಲಕ್ಷ್ಮಣರೊಡನೆ ಹದಿನಾಲ್ಕು ವರ್ಷಗಳ ಕಾಲ ವನವಾಸಮಾಡಿದನು. ಅಂದು ನಾನು ಕಂಡಿದ್ದ ಋಷ್ಯಮೂಕ ಪರ್ವತದ ತಪ್ಪಲಿನಲ್ಲಿ ಅನುಜನಾದ ಲಕ್ಷ್ಮಣನೊಡನೆ ಧನುರ್ಧಾರಿಯಾಗಿ ನಿಂತಿದ್ದ ಶ್ರೀರಾಮನ ಚಿತ್ರವು ಇಂದೂ ನನ್ನ ಕಣ್ಣಿಗೆ ಕಟ್ಟಿದಂತಿದೆ. ರಾಮನೇನು ಸಾಮಾನ್ಯನಲ್ಲ, ಯುಧಿಷ್ಠಿರ! ಅವನು ಯಮನಿಗೆ ಅಥವಾ ನಮುಚಿ

ಸೂದನನಾದ ಇಂದ್ರನಿಗೆ ಸಮಾನವಾದ ಪರಾಕ್ರಮವುಳ್ಳವನಾಗಿದ್ದನು. ಆದರೂ ಅವನು ತಂದೆಯ ಆಜ್ಞಾನುಸಾರ–'ಇದು ನನ್ನ ಪವಿತ್ರಕರ್ತವ್ಯ'– ಎಂದು ನಿರ್ಧರಿಸಿ, ಹದಿನಾಲ್ಕು ವರ್ಷಗಳ ಕಾಲ ವನವಾಸವನ್ನು ಮಾಡಿದನು.

ಸ ಚಾಪಿ ಶಕ್ರಸ್ಯ ಸಮಪ್ರಭಾವೋ
ಮಹಾನುಭಾವಃ ಸಮರೇಷ್ವಜೇಯಃ ।
ವಿಹಾಯ ಭೋಗಾನಚರದ್ವನೇಷು
ನೇಶೇ ಬಲಸ್ಯೇತಿ ಚರೇದಧರ್ಮಮ್ ॥೧೧॥

ಶ್ರೀರಾಮನು ಇಂದ್ರನಿಗೆ ಸಮಾನ ಪ್ರಭಾವನು. ಮಹಾನುಭಾವನು. ಯುದ್ಧದಲ್ಲಿ ಅಪ್ರತಿಮನು. ಹೀಗಿದ್ದರೂ ಅವನು ಸುಖೋಪಭೋಗಗಳನ್ನು ತೊರೆದು ಅರಣ್ಯದಲ್ಲಿ ಅಲೆದಾಡಿದನು. ಆದುದರಿಂದ ಯಾರೇ ಆಗಲೀ ; ಪರಾಕ್ರಮವಿದ್ದ ಮಾತ್ರದಿಂದ ಅಧರ್ಮಾಚರಣೆಯನ್ನು ಮಾಡಬಾರದು.

ಭೂಪಾಶ್ಚ ನಾಭಾಗಭಗೀರಥಾದಯೋ
ಮಹೀಮಿಮಾಂ ಸಾಗರಾನ್ತಾಂ ವಿಜಿತ್ಯ ।
ಸತ್ಯೇನ ತೇಽಪ್ಯಜಯಂಸ್ತಾತ ಲೋಕಾ-
ನ್ನೇಶೇ ಬಲಸ್ಯೇತಿ ಚರೇದಧರ್ಮಮ್ ॥೧೨॥

ರಾಜಾಧಿರಾಜರಾದ ನಾಭಾಗ, ಭಗೀರಥ–ಮೊದಲಾದವರು ಮಹಾ ಪರಾಕ್ರಮಿಗಳಾಗಿದ್ದರೂ ಸತ್ಯನಿಷ್ಠರಾಗಿದ್ದು ಸಮುದ್ರಾಂತವಾದ ಈ ಭೂಮಿ ಯನ್ನು ಆಳಿದರು. ಕೇವಲ ಪರಾಕ್ರಮಕ್ಕೆ ಪ್ರಾಧಾನ್ಯವನ್ನು ಕೊಟ್ಟು ಸತ್ಯ ವನ್ನಾಗಲೀ, ಧರ್ಮವನ್ನಾಗಲೀ ದೂರಮಾಡಲಿಲ್ಲ. ಆದುದರಿಂದ ಸಾಮರ್ಥ್ಯವಿರುವುದೆಂದು ಭಾವಿಸಿ ಅಧರ್ಮಾಚರಣೆಯನ್ನು ಮಾಡ ಬಾರದು.

ಅಲರ್ಕಮಾಹುರ್ನರವರ್ಯ ಸನ್ತಂ
ಸತ್ಯವ್ರತಂ ಕಾಶಿಕರೂಷರಾಜಮ್ ।
ವಿಹಾಯ ರಾಜ್ಯಾನಿ ವಸೂನಿ ಚೈವ
ನೇಶೇ ಬಲಸ್ಯೇತಿ ಚರೇದಧರ್ಮಮ್ ॥೧೩॥

ನರಶ್ರೇಷ್ಠನೇ! ಕಾಶಿ-ಕರೂಷಾಧಿಪತಿಯಾದ ಅಲರ್ಕನೂ ಸತ್ಯ ಪಾಲನೆಗಾಗಿಯೇ ರಾಜ್ಯ-ಕೋಶಾದಿಗಳನ್ನೂ ತೊರೆದನು. ಇಂದೂ ಆತನನ್ನು ಸತ್ಯವ್ರತನೆಂದೂ–ಸತ್ಪುರುಷನೆಂದೂ ಶ್ಲಾಘನೆಮಾಡುತ್ತಾರೆ. ಆದುದರಿಂದ ಮಾನವನಿಗೆ ಸತ್ಯ-ಧರ್ಮಗಳು ಮುಖ್ಯವೇ ಹೊರತು ಕೇವಲ ಪರಾಕ್ರಮವಲ್ಲ.

**ಧಾತ್ರಾ ವಿಧಿರ್ಯೋ ವಿಹಿತಃ ಪುರಾಣೈ-**
**ಸ್ತಂ ಪೂಜಯನ್ತೋ ನರವರ್ಯ ಸನ್ತಃ ।**
**ಸಪ್ತರ್ಷಯಃ ಪಾರ್ಥ ದಿವಿ ಪ್ರಭಾನ್ತಿ**
**ನೇಶೇ ಬಲಸ್ಯೇತಿ ಚರೇದಧರ್ಮಮ್ ॥೧೪॥**

ಪಾರ್ಥ! ಅತ್ರಿ-ಅಂಗೀರಸರೇ ಮೊದಲಾದ ಸಪ್ತರ್ಷಿಗಳು–ವಿಧಾತ ನಿಂದ ಶ್ರುತ್ಯನುಸಾರವಾಗಿ ವಿಹಿತವಾದ ಅಗ್ನಿಹೋತ್ರಾದಿ ಕರ್ಮಾಚರಣೆ ಗಳಿಂದಲೂ, ತಪಶ್ಚರ್ಯೆಯಿಂದಲೂ ಸಿದ್ಧಿಪಡೆದವರಾಗಿ ಇಂದೂ ನಭೋ ಮಂಡಲದಲ್ಲಿ ವಿರಾಜಿಸುತ್ತಿದ್ದಾರೆ. ಅವರಿಗೆ ಆ ಸ್ಥಾನಗಳು ಕೇವಲ ಧರ್ಮಾ ಚರಣೆ ಮತ್ತು ಸತ್ಯನಿಷ್ಠೆಗಳಿಂದ ಪ್ರಾಪ್ತವಾದುದೇ ಹೊರತು ಪರಾಕ್ರಮ ದಿಂದಲ್ಲ. ಆದುದರಿಂದ ಪರಾಕ್ರಮವಿದ್ದ ಮಾತ್ರಕ್ಕೆ ಅಧರ್ಮಾಚರಣೆಯನ್ನು ಮಾಡಬಾರದು.

**ಮಹಾಬಲಾನ್ಪರ್ವತಕೂಟಮಾತ್ರಾ-**
**ನ್ವಿಷಾಣಿನಃ ಪಶ್ಯ ಗಜಾನ್ನರೇನ್ದ್ರ ।**
**ಸ್ಥಿತಾನ್ನಿದೇಶೇ ನರವರ್ಯ ಧಾತು-**
**ರ್ನೇಶೇ ಬಲಸ್ಯೇತಿ ಚರೇದಧರ್ಮಮ್ ॥೧೫॥**

ನರೇಂದ್ರನೇ! ಪ್ರಾಣಿಗಳೂ ವಿಧಿನಿಯಮಕ್ಕೆ ಕಟ್ಟುಬಿದ್ದಿವೆ. ಅಲ್ಲಿ ಹೋಗುತ್ತಿರುವ ಮದಗಜಗಳ ಸಮೂಹವನ್ನು ನೋಡು, ಯುಧಿಷ್ಠಿರ! ಅವುಗಳಿಗೆ ಅಪಾರಬಲವಿದೆ. ಒಂದೊಂದೂ ಪರ್ವತೋಪಮವಾಗಿವೆ. ಅವು ಇಚ್ಛಿಸಿದರೆ ಕ್ಷಣಮಾತ್ರದಲ್ಲಿ ಈ ಮಹಾವನವನ್ನೇ ಧ್ವಂಸಮಾಡಿ ಬಿಡಬಲ್ಲುವು. ಆದರೆ ಅವು ಹಾಗೆ ಮಾಡುವುದಿಲ್ಲ. ಅವುಗಳೂ ವಿಧಿಯ ನಿಯಮದಂತೆ ಪ್ರಾಣಿಧರ್ಮದಿಂದ ಬಂಧಿಸಲ್ಪಟ್ಟಿವೆ. ಈ ಕಾರಣದಿಂದಲೂ

ತಾನು ಬಲಿಷ್ಠನಾಗಿರುವೆನೆಂದು ಭಾವಿಸಿ ಅಧರ್ಮಕಾರ್ಯಗಳನ್ನು ಮಾಡ ಬಾರದು.

ಸರ್ವಾಣಿ ಭೂತಾನಿ ನರೇನ್ದ್ರ ಪಶ್ಯ
ತಥಾ ಯಥಾವದ್ವಿಹಿತಂ ವಿಧಾತ್ರಾ ।
ಸ್ವಯೋನಿತಃ ಕರ್ಮ ಸದಾ ಚರನ್ತಿ
ನೇಶೇ ಬಲಸ್ಯೇತಿ ಚರೇದಧರ್ಮಮ್ ॥೧೬॥

ಇಲ್ಲಿ ವಾಸಿಸುತ್ತಿರುವ ಇತರ ಸರ್ಪ-ಮೃಗಾದಿಗಳನ್ನೂ ನೋಡು, ಯುಧಿಷ್ಠಿರ! ಯದ್ಯಪಿ ಇವುಗಳಿಗೆ ವಿಶೇಷಸಾಮರ್ಥ್ಯವಿರುವುದಾದರೂ ದೈವದ ಕಟ್ಟಳೆಯನ್ನು ಮೀರಿ ನಡೆಯಲಾರವು. ಆದುದರಿಂದ ಯಾವ ನೊಬ್ಬನೂ ಬಲವಿದೆಯೆಂದಾಗಲೀ, ಅಧಿಕಾರವಿದೆಯೆಂದಾಗಲೀ–ಅಧರ್ಮ ದಿಂದ ವರ್ತಿಸಲಾಗದು.

ಸತ್ಯೇನ ಧರ್ಮೇಣ ಯಥಾರ್ಹವೃತ್ತ್ಯಾ
ಹ್ರಿಯಾ ತಥಾ ಸರ್ವಭೂತಾನ್ಯತೀತ್ಯ ।
ಯಶಶ್ಚ ತೇಜಶ್ಚ ತವಾಪಿ ದೀಪ್ತಂ
ವಿಭಾವಸೋರ್ಭಾಸ್ಕರಸ್ಯೇವ ಪಾರ್ಥ ॥೧೭॥

ಧರ್ಮಜ! ನಿನ್ನ ವಿಷಯವಾಗಿ ಹೇಳುವುದಾದರೆ–ಸತ್ಯಪಾಲನೆ ಯಲ್ಲಿಯೂ, ಧರ್ಮನಿಷ್ಠೆಯಲ್ಲಿಯೂ, ಅತಿಥಿಸತ್ಕಾರದಲ್ಲಿಯೂ ನೀನು ಎಲ್ಲರನ್ನೂ ಮೀರಿಸಿರುವೆ. ಸೂರ್ಯಾಗ್ನಿಗಳ ತೇಜಸ್ಸಿನಂತೆ ನಿನ್ನ ಯಶಃ-ಕಾಂತಿಗಳು ಎಲ್ಲೆಲ್ಲಿಯೂ ಹರಡಿವೆ.

ಯಥಾಪ್ರತಿಜ್ಞಂ ಚ ಮಹಾನುಭಾವ
ಕೃಚ್ಛ್ರಂ ವನೇ ವಾಸಮಿಮಂ ನಿರುಷ್ಯ ।
ತತಃ ಶ್ರಿಯಂ ತೇಜಸಾ ತೇನ ದೀಪ್ತಾ-
ಮಾದಾಸ್ಯಸೇ ಪಾರ್ಥಿವ ಕೌರವೇಭ್ಯಃ ॥೧೮॥

ಮಹಾನುಭಾವನೇ! ಪ್ರತಿಜ್ಞಾನುಸಾರವಾಗಿ ಈ ಅರಣ್ಯದಲ್ಲಿ ಬಹು ಕಷ್ಟದಿಂದ ಪ್ರತಿಜ್ಞಾತವಾದ ವರ್ಷಗಳನ್ನು ಕಳೆದನಂತರ, ಪ್ರತಿಜ್ಞಾ ಪೂರಣದಿಂದ ಪ್ರಾಪ್ತವಾಗುವ ಜಾಜ್ವಲ್ಯಮಾನವಾದ ಮಹಾತೇಜಸ್ಸಿನಿಂದ

ದೇದೀಪ್ಯಮಾನಳಾದ ನಿನ್ನ ರಾಜ್ಯಲಕ್ಷ್ಮಿಯನ್ನು ಕೌರವರಿಂದ ಪಡೆದುಕೊಳ್ಳುವೆ. ಇದರಲ್ಲಾವ ಸಂಶಯವೂ ಇಲ್ಲ, ಯುಧಿಷ್ಠಿರ!"

ಜನಮೇಜಯ! ತಪಸ್ವಿಗಳ ಮಧ್ಯದಲ್ಲಿ ಸುಹೃದರಿಂದ ಪರಿವೃತನಾಗಿ ಕುಳಿತಿದ್ದ ಯುಧಿಷ್ಠಿರನಿಗೆ ಮಾರ್ಕಂಡೇಯಮಹರ್ಷಿಗಳು ಈ ಪ್ರಕಾರವಾಗಿ ಧರ್ಮೋಪದೇಶಮಾಡಿ, ಧೌಮ್ಯರ ಮತ್ತು ಪಾಂಡವರ ಅನುಮತಿಯನ್ನು ಪಡೆದು ಉತ್ತರಾಭಿಮುಖವಾಗಿ ಪ್ರಯಾಣಮಾಡಿದರು."

೨೫ನೆಯ ಅಧ್ಯಾಯವು ಮುಗಿಯಿತು.

೨೬ನೆಯ ಅಧ್ಯಾಯ ಅರ್ಜುನಾಭಿಗಮನಪರ್ವ (ಮುಂದುವರಿದಿದೆ.)

## ಬಕದಾಲ್ಭ್ಯರ ಉಪದೇಶ

ವೈಶಂಪಾಯನರು ಹೇಳುತ್ತಾರೆ :

**ವಸತ್ಸು ವೈ ದ್ವೈತವನೇ ಪಾಣ್ಡವೇಷು ಮಹಾತ್ಮಸು ।**
**ಅನುಕೀರ್ಣಂ ಮಹಾರಣ್ಯಂ ಬ್ರಾಹ್ಮಣೈಃ ಸಮಪದ್ಯತ ॥೧॥**

"ಪಾರಿಕ್ಷಿತ! ಯುಧಿಷ್ಠಿರನು ದ್ವೈತವನದಲ್ಲಿ ವಾಸಮಾಡುತ್ತಿದ್ದಾಗ ಆ ವಿಶಾಲವನವೇ ಬ್ರಾಹ್ಮಣರಿಂದ ತುಂಬಿಹೋಯಿತು. ಅನವರತವಾದ ವೇದಮಂತ್ರಗಳಿಂದ ಪ್ರತಿಧ್ವನಿಸುತ್ತಿದ್ದ ಆ ಅರಣ್ಯವು ನಿಶ್ಚಯವಾಗಿಯೂ ಬ್ರಹ್ಮಲೋಕದ ಸ್ಮರಣೆಯನ್ನು ತರುವುದಾಗಿದ್ದಿತು. ನಾನಾಶಾಖೆಗಳ ಬ್ರಾಹ್ಮಣರು ಸುಸ್ವರಗಳಿಂದ ಹೇಳುತ್ತಿದ್ದ ಋಗ್ವೇದ-ಯಜುರ್ವೇದ-ಸಾಮ ವೇದ-ಅಥರ್ವವೇದಗಳ ಮಂತ್ರಗಳೂ, ಆ ವೇದಮಂತ್ರಗಳ ಜೊತೆಗೆ ಪಾಂಡವರು ಮಾಡುತ್ತಿದ್ದ ಧನುಷ್ಟೇಂಕಾರಗಳೂ ಕಲೆತು ಬ್ರಹ್ಮ-ಕ್ಷತ್ರಸಂಪ್ರ ದಾಯಗಳ ಸಮಾಗಮವಾದಂತಾಗಿ ಶ್ರೋತೃಗಳಿಗೆ ಹೆಚ್ಚಿನ ಸಂತಸವನ್ನುಂಟು ಮಾಡುವುದಾಗಿದ್ದಿತು. ಆ ಸಂತೋಷವನ್ನು ಅನುಭವಿಸಿದ ಬಕದಾಲ್ಭ್ಯರೆಂಬ ಮಹಾಮುನಿಗಳು ಒಂದು ದಿನ ಸಂಜೆ ಋಷಿಗಳ ಮಧ್ಯದಲ್ಲಿ ಸಂಧ್ಯೋ ಪಾಸನೆಯನ್ನು ಮಾಡಿ ಕುಳಿತಿದ್ದ ಯುಧಿಷ್ಠಿರನಿಗೆ ಹೇಳಿದರು :

"ಯುಧಿಷ್ಠಿರ! ನೋಡು, ಈ ಬ್ರಾಹ್ಮಣರಿಗೆ ಸಾಯಂಕಾಲದ ಹೋಮಕ್ಕೆ ಕಾಲವು ಸನ್ನಿಹಿತವಾಗುತ್ತಲಿದೆ. ಈ ಸನ್ನಿವೇಶವು ಎಷ್ಟು

ರಮಣೀಯವಾಗಿದೆ, ನೋಡು! ಇವರೆಲ್ಲರೂ ಅಗ್ನಿಯನ್ನು ಪ್ರಜ್ವಲಿಸಿ ಅಗ್ನಿದೇವನನ್ನು ಹವನಾದಿಗಳಿಂದ ಅರ್ಚಿಸುತ್ತಾರೆ. ವ್ರತನಿಷ್ಠರಾದ ಇವರೆಲ್ಲರೂ ನಿನ್ನಿಂದ ರಕ್ಷಿಸಲ್ಪಟ್ಟವರಾಗಿ ಹವನಾದಿಗಳೇ ಅಲ್ಲದೇ, ಶ್ರುತಿ-ಸ್ಮೃತ್ಯುಕ್ತವಾದ ಇನ್ನೂ ಅನೇಕಕರ್ಮಗಳನ್ನೂ ಕಾಲ-ಕಾಲಕ್ಕೆ ಮಾಡುತ್ತಿದ್ದಾರೆ. ಭೃಗುವಂಶದ ಮಹರ್ಷಿಗಳು, ಅಂಗಿರಸರು, ವಾಸಿಷ್ಠರು, ಕಾಶ್ಯಪರು, ಅಗಸ್ತ್ಯವಂಶಜರು, ಅತ್ರಿಗೋತ್ರಜರು–ಇವರೆಲ್ಲರೂ ಇಂದು ನಿನ್ನ ಆಶ್ರಯವನ್ನು ಪಡೆದು ತಮ್ಮ-ತಮ್ಮ ಕರ್ಮಾನುಷ್ಠಾನಗಳನ್ನು ಮಾಡುತ್ತಲಿದ್ದಾರೆ. ಎಲ್ಲ ಲೋಕಗಳಲ್ಲಿಯೂ ಶ್ರೇಷ್ಠರಾದ ಬ್ರಾಹ್ಮಣರು ನಿನ್ನೊಡನೆ ಸೇರಿದ್ದಾರೆ. ನಾನು ಹೇಳುವ ಮಾತನ್ನು ಸಹೋದರರೊಡಗೂಡಿ ಕೇಳು, ಯುಧಿಷ್ಠಿರ! ಬ್ರಾಹ್ಮ ಮತ್ತು ಕ್ಷಾತ್ರತೇಜಸ್ಸುಗಳ ಸಂಯೋಗದ ಫಲವೇನೆಂಬುದನ್ನೂ ಹೇಳುವೆನು.

**ಬ್ರಹ್ಮಕ್ಷತ್ರೇಣ ಸಂಸೃಷ್ಟಂ ಕ್ಷತ್ರಂ ಚ ಬ್ರಹ್ಮಣಾ ಸಹ ।**
**ಉದೀರ್ಣೌ ದಹತಃ ಶತ್ರೂನ್ವನಾನೀವಾಗ್ನಿಮಾರುತೌ ॥೧೦॥**

ಯುಧಿಷ್ಠಿರ! ಅಗ್ನಿದೇವನು ಹೇಗೆ ವಾಯುದೇವನ ಸಹಕಾರದಿಂದ ಮಹಾರಣ್ಯಗಳನ್ನೇ ಸುಡಲು ಸಮರ್ಥನಾಗುವನೋ–ಅದೇ ರೀತಿಯಲ್ಲಿ ಬ್ರಹ್ಮತೇಜಸ್ಸು ಕ್ಷತ್ರಬಲದೊಡನೆ ಮತ್ತು ಕ್ಷತ್ರಿಯನ ಶಕ್ತಿಯು ಬ್ರಹ್ಮ ತೇಜಸ್ಸಿನೊಡನೆ ಸೇರಿ ಕಾರ್ಯಮಾಡಿದಲ್ಲಿ ಎಂತಹ ಅಜೇಯನಾದ ಶತ್ರುವನ್ನೂ ವಿನಾಶಮಾಡಲು ಸಮರ್ಥವಾಗುತ್ತದೆ.

**ನಾಬ್ರಾಹ್ಮಣಸ್ತಾತ ಚಿರಂ ಬುಭೂಷೇ-**
**ದಿಚ್ಛನ್ನಿಮಂ ಲೋಕಮಮುಂ ಚ ಜೇತುಮ್ ।**
**ವಿನೀತಧರ್ಮಾರ್ಥಮಪೇತಮೋಹಂ**
**ಲಬ್ಧ್ವಾ ದ್ವಿಜಂ ನುದತಿ ನೃಪಃ ಸಪತ್ನಾನ್ ॥೧೧॥**

ಯಾವ ರಾಜನು ಇಹ-ಪರಗಳೆರಡನ್ನೂ ಸಾಧಿಸಲು ಇಚ್ಛಿಸುವನೋ, ಅವನು ಬ್ರಾಹ್ಮಣರಹಿತನಾದರೆ ಚಿರಕಾಲ ಪ್ರಭಾವಶಾಲಿಯಾಗಿ ಬಾಳಲಾರನು. (ಬ್ರಾಹ್ಮಣರನ್ನು ಬಿಟ್ಟು ತನ್ನ ಕಾರ್ಯದಲ್ಲಿ ಯಶಸ್ವಿಯಾಗಲಾರನು.) ವಿನೀತನಾಗಿರುವ, ಧರ್ಮಾರ್ಥಗಳ ಸೂಕ್ಷ್ಮವನ್ನು ತಿಳಿದಿರುವ,

ಮೋಹವಶನಾಗದಿರುವ ಬ್ರಾಹ್ಮಣನ ಸಹಾಯವನ್ನು ಪಡೆದ ರಾಜನು ತನ್ನ ಶತ್ರುಗಳನ್ನು ವಿನಾಶಮಾಡಲು ಸಮರ್ಥನಾಗುತ್ತಾನೆ. ಬಲಿಚಕ್ರವರ್ತಿಯು ಜ್ಞಾನಿಗಳಾದ ಬ್ರಾಹ್ಮಣರ ಸಲಹೆಯಂತೆಯೇ ಪ್ರಜೆಗಳನ್ನು ಪರಿಪಾಲನೆ ಮಾಡುತ್ತಾ ಶ್ರೇಯಸ್ಸನ್ನು ಪಡೆದನು. ಅವನು ವೇದ-ವೇದಾಂಗಪಾರಂಗತ ರಾದ ಬ್ರಾಹ್ಮಣರೊಡನೆ ಸಮಾಲೋಚನೆಯನ್ನು ಮಾಡದೇ ಯಾವ ಕಾರ್ಯವನ್ನೂ ಮಾಡುತ್ತಿರಲಿಲ್ಲ. ಆ ಕಾರಣದಿಂದಲೇ ಬಲಿಚಕ್ರವರ್ತಿಯ ಸಕಲೇಷ್ಟಗಳೂ ನೆರವೇರುತ್ತಿದ್ದುವು ಮತ್ತು ಅವನು ಅಪಾರವಾದ ಐಶ್ವರ್ಯ ವನ್ನೂ ಪಡೆಯಲು ಸಮರ್ಥನಾದನು. ಆದರೆ ಬ್ರಾಹ್ಮಣರ ಸಹಾಯದಿಂದ ಅಖಂಡಭೂಮಂಡಲವನ್ನೂ ತನ್ನ ಸ್ವಾಧೀನಮಾಡಿಕೊಂಡನಂತರ ದುರಹಂಕಾರದಿಂದಲೂ ಮದದಿಂದಲೂ ಅವರನ್ನು ತಿರಸ್ಕರಿಸಲು ಆರಂಭಿಸಿದನು. ಒಡನೆಯೇ ಅವನಿಗೆ ಆಪತ್ತು ಸಂಭವಿಸಿತು.

**ನಾಬ್ರಾಹ್ಮಣಂ ಭೂಮಿರಿಯಂ ಸಭೂತಿ-**
**ರ್ವರ್ಣಂ ದ್ವಿತೀಯಂ ಭಜತೇ ಚಿರಾಯ ।**
**ಸಮುದ್ರನೇಮಿರ್ನಮತೇ ತು ತಸ್ಮೈ**
**ಯಂ ಬ್ರಾಹ್ಮಣಃ ಶಾಸ್ತಿ ನಯೈರ್ವಿನೀತಮ್ ॥೧೪॥**

ಯಾವ ಕ್ಷತ್ರಿಯನು ಬ್ರಾಹ್ಮಣರ ಸಂಪರ್ಕವಿಲ್ಲದೇ ಇರುವನೋ–ಅವನ ರಾಜ್ಯವು ಖಂಡಿತವಾಗಿಯೂ ಸಂಪತ್ಸಮೃದ್ಧವಾಗಿ ಚಿರಕಾಲ ಅವನಲ್ಲಿರುವುದಿಲ್ಲ. ಯಾವ ರಾಜನು ನೀತಿಶಾಸ್ತ್ರಸಂಪನ್ನನಾದ ಬ್ರಾಹ್ಮಣನ ಸಲಹೆಯಂತೆ ರಾಜ್ಯಶಾಸನವನ್ನು ಮಾಡುವನೋ–ಅವನಿಗೆ ಸಮುದ್ರಾಂತ ವಾದ ಈ ಪೃಥ್ವಿಯೇ ಶರಣಾಗುತ್ತದೆ.

**ಕುಞ್ಜರಸ್ಯೇವ ಸಂಗ್ರಾಮೇ ಪರಿಗೃಹ್ಯಾಙ್ಕುಶಗ್ರಹಮ್ ।**
**ಬ್ರಾಹ್ಮಣೈರ್ವಿಪ್ರಹೀಣಸ್ಯ ಕ್ಷತ್ರಸ್ಯ ಕ್ಷೀಯತೇ ಬಲಮ್ ॥೧೫॥**

ಆನೆಯು ಬಲಶಾಲಿಯಾದರೂ ಯುದ್ಧದಲ್ಲಿ ಅದರ ಸಾಮರ್ಥ್ಯವನ್ನು ಸದುಪಯೋಗಪಡಿಸುವುದರಲ್ಲಿ ಚತುರನಾದ ಮಾವಟಿಗನಿಲ್ಲದಿದ್ದರೆ ಹೇಗೆ ಆನೆಯ ಬಲವು ವ್ಯರ್ಥವಾಗುವುದೋ–ಹಾಗೆಯೇ ಕ್ಷತ್ರಿಯನ ಅಪ್ರತಿಮ ವಾದ ಬಲವೂ ಬ್ರಾಹ್ಮಣನ ಸಂಬಂಧವಿಲ್ಲದೆ ಸರಿಯಾದ ನಿರ್ದೇಶನಕ್ಕೊಳ ಪಡದಿದ್ದರೆ ವ್ಯರ್ಥವಾಗಿ ಹೋಗುತ್ತದೆ.

**ಬ್ರಾಹ್ಮಣ್ಯನುಪಮಾ ದೃಷ್ಟಿಃ ಕ್ಷಾತ್ರಮಪ್ರತಿಮಂ ಬಲಮ್ ।**
**ತೌ ಯದಾ ಚರತಃ ಸಾರ್ಧಂ ತದಾ ಲೋಕಃ ಪ್ರಸೀದತಿ ॥೧೬॥**

ಬ್ರಾಹ್ಮಣರಿಗೆ ಅನುಪಮವಾದ ವಿಚಾರದೃಷ್ಟಿಯಿರುವಂತೆ ಕ್ಷತ್ರಿಯನಿಗೆ ಅಪ್ರತಿಮವಾದ ಬಾಹುಬಲವಿರುವುದು. ಆ ಎರಡು ಮಹಾಶಕ್ತಿಗಳೂ ಒಟ್ಟಿಗೆ ಸೇರಿ ಕೆಲಸಮಾಡಿದರೆ ಇಡೀ ಪ್ರಪಂಚವೇ ಸಂತುಷ್ಟವಾಗುತ್ತದೆ.

**ಯಥಾ ಹಿ ಸುಮಹಾನಗ್ನಿಃ ಕಕ್ಷಂ ದಹತಿ ಸಾನಿಲಃ ।**
**ತಥಾ ದಹತಿ ರಾಜನ್ಯೋ ಬ್ರಾಹ್ಮಣೇನ ಸಮಂ ರಿಪುಮ್ ॥೧೭॥**

ಅಗ್ನಿಯು ವಾಯುವಿನ ಸಹಕಾರದಿಂದ ಪ್ರಚಂಡವಾದ ಮಹಾರಣ್ಯ ವನ್ನಾದರೂ ದಹಿಸಲು ಸಮರ್ಥವಾಗುವಂತೆ–ಕ್ಷತ್ರಿಯನು ಬ್ರಾಹ್ಮಣನೊಡನೆ ಸೇರಿದರೆ ಪ್ರಬಲಶತ್ರುವನ್ನಾದರೂ ಧ್ವಂಸಮಾಡಲು ಸಮರ್ಥನಾಗುತ್ತಾನೆ.

**ಬ್ರಾಹ್ಮಣೇಷ್ವೇವ ಮೇಧಾವೀ ಬುದ್ಧಿಪರ್ಯೇಷಣಂ ಚರೇತ್ ।**
**ಅಲಬ್ಧಸ್ಯ ಚ ಲಾಭಾಯ ಲಬ್ಧಸ್ಯ ಪರಿವೃದ್ಧಯೇ ॥೧೮॥**

ಆದುದರಿಂದ ಮೇಧಾವಿಯಾದ ಕ್ಷತ್ರಿಯನು ಅಲಬ್ಧವಸ್ತುವಿನ ಲಾಭಕ್ಕೂ ಮತ್ತು ಪ್ರಾಪ್ತವಾದ ವಸ್ತುವಿನ ವೃದ್ಧಿಗೂ ಬ್ರಾಹ್ಮಣನ ಸಲಹೆಯನ್ನು ಪಡೆಯಬೇಕು. ಆದುದರಿಂದ–

**ಅಲಬ್ಧಲಾಭಾಯ ಚ ಲಬ್ಧವೃದ್ಧಯೇ**
**ಯಥಾರ್ಹತೀರ್ಥಪ್ರತಿಪಾದನಾಯ ।**
**ಯಶಸ್ವಿನಂ ವೇದವಿದಂ ವಿಪಶ್ಚಿತಂ**
**ಬಹುಶ್ರುತಂ ಬ್ರಾಹ್ಮಣಮೇವ ವಾಸಯ ॥೧೯॥**

ನೀನಾದರೂ ನಿನ್ನ ಅಲಬ್ಧಲಾಭಕ್ಕಾಗಿಯೂ, ಪ್ರಾಪ್ತವಾದ ಐಶ್ವರ್ಯವನ್ನು ಸದ್ವಿನಿಯೋಗಮಾಡುವುದಕ್ಕಾಗಿಯೂ ವೇದ-ವೇದಾಂಗ ಪಾರಂಗತನಾದ, ನೀತಿಶಾಸ್ತ್ರದಲ್ಲಿ ನಿಷ್ಣಾತನಾದ ಬ್ರಾಹ್ಮಣನನ್ನು ಮಂತ್ರಿ ಯನ್ನಾಗಿಟ್ಟುಕೊಳ್ಳುವುದು ಸೂಕ್ತವಾಗಿದೆ. ನಿಶ್ಚಯವಾಗಿಯೂ ನೀನು ಬ್ರಾಹ್ಮಣರನ್ನು ಬಹುವಾಗಿ ಪುರಸ್ಕರಿಸುತ್ತಿರುವುದರಿಂದಲೇ ಇಂದು ನಿನ್ನ

ಕೀರ್ತಿಯು ಎಲ್ಲ ಲೋಕಗಳಲ್ಲಿಯೂ ಪ್ರಖ್ಯಾತವಾಗಿ ಪ್ರಕಾಶಿಸುತ್ತಿದೆ, ಯುಧಿಷ್ಠಿರ!"

ಬಕದಾಲ್ಭ್ಯರು ಬ್ರಹ್ಮ-ಕ್ಷತ್ರತೇಜಸ್ಸುಗಳ ಸಂಯೋಗದಿಂದ ಉಂಟಾಗುವ ಫಲದ ವಿಷಯವಾಗಿ ಮೇಲೆ ಹೇಳಿದಂತೆ ಹೇಳಿದನಂತರ ಅಲ್ಲಿದ್ದ ಬ್ರಾಹ್ಮಣರು ಅವರನ್ನು ಯಥೋಚಿತವಾಗಿ ಸತ್ಕರಿಸಿದರು. ಯುಧಿಷ್ಠಿರನನ್ನು ಪ್ರಶಂಸಿಸುವ ಅವರ ಮಾತುಗಳನ್ನು ಕೇಳಿ ಆ ಬ್ರಾಹ್ಮಣರಿಗೆ ಆನಂದವಾಯಿತು.

ದ್ವೈಪಾಯನ, ನಾರದ, ಪರಶುರಾಮ, ಪೃಥುಶ್ರವಸ, ಇಂದ್ರದ್ಯುಮ್ನ, ಭಾಲುಕಿ, ಕೃತಚೇತಸ, ಸಹಸ್ರಪಾತ್, ಕರ್ಣಶ್ರವಸ, ಮುಂಜ, ಲವಣಾಶ್ವ, ಕಾಶ್ಯಪ, ಹಾರೀತ, ಸ್ಥೂಣಕರ್ಣ, ಅಗ್ನಿವೇಶ್ಯ, ಶೌನಕ, ಕೃತವಾಕ್, ಸುವಾಕ್, ಬೃಹದಶ್ವ, ವಿಭಾವಸು, ಊರ್ಧ್ವರೇತಸ, ವೃಷಾಮಿತ್ರ, ಸುಹೋತ್ರ, ಹೋತ್ರವಾಹನ–ಇವರೇ ಮುಂತಾದ ಬ್ರಾಹ್ಮಣಶ್ರೇಷ್ಠರು–ಸ್ವರ್ಗಾಧಿಪತಿಯಾದ ದೇವೇಂದ್ರನನ್ನು ಋಷಿಗಳು ಪುರಸ್ಕರಿಸುವಂತೆ–ಯುಧಿಷ್ಠಿರನನ್ನು ಪುರಸ್ಕರಿಸುತ್ತಾ ತಮ್ಮ ತಮ್ಮ ಕರ್ಮಾನುಷ್ಠಾನಗಳಲ್ಲಿ ನಿರತರಾಗಿದ್ದರು.

೨೬ನೆಯ ಅಧ್ಯಾಯವು ಮುಗಿಯಿತು.

೨೭ನೆಯ ಅಧ್ಯಾಯ ಅರ್ಜುನಾಭಿಗಮನಪರ್ವ (ಮುಂದುವರಿದಿದೆ.)

## ಶತ್ರುಗಳ ವಿಷಯದಲ್ಲಿ ಯುಧಿಷ್ಠಿರನ ಕೋಪವನ್ನು ಕೆರಳಿಸಲು ದ್ರೌಪದಿಯ ಸಂತಾಪವಚನ

ಜನಮೇಜಯಮಹಾರಾಜ! ಒಂದಾನೊಂದು ದಿನ ಸಾಯಂಕಾಲದಲ್ಲಿ ವನವಾಸಾನುಭವದಿಂದ ದುಃಖಿತರಾಗಿದ್ದ ಪಾಂಡವರು ದ್ರೌಪದಿಯೊಡನೆ ದ್ವೈತವನದಲ್ಲಿ ಕುಳಿತು ಮಾತನಾಡುತ್ತಿದ್ದರು. ಪಾಂಡವರ ಪ್ರೀತಿಗೆ ಪಾತ್ರಳಾದವಳೂ, ದರ್ಶನೀಯಳೂ, ಪಂಡಿತೆಯೂ, ಪತಿವ್ರತೆಯೂ ಆದ ದ್ರೌಪದಿಯು ಕೌರವಸಭಾಭವನದಲ್ಲಿ ತನಗೆ ಪ್ರಾಪ್ತವಾದ ಅಪಮಾನವನ್ನು ನೆನೆದು ಮನಸ್ಸಿನ ಉದ್ವೇಗದಿಂದ ಹೊರಹೊಮ್ಮಿದ ಕಂಬನಿಯನ್ನೊರೆಸಿಕೊಂಡು ಯುಧಿಷ್ಠಿರನಿಗೆ ಹೇಳಿದಳು :

“ಮಹಾರಾಜ! ನಿಶ್ಚಯವಾಗಿಯೂ ಆ ಪಾಪಿಗೆ, ದಸ್ಯುವಿಗೆ, ಕ್ರೂರಿಗೆ–ನಮಗಿಂದು ಅವನಿಂದಲೇ ಪ್ರಾಪ್ತವಾಗಿರುವ ಕಷ್ಟದ ವಿಷಯದಲ್ಲಿ ಅನುಕಂಪವಾಗಲೀ, ಪರಿತಾಪವಾಗಲೀ ಉಂಟಾಗಿರುವುದಿಲ್ಲ. ಆ ದುರಾತ್ಮನಾದ ದುರ್ಯೋಧನನಿಗೆ ನಿಮ್ಮನ್ನೂ ಮತ್ತು ನನ್ನನ್ನೂ ಕೃಷ್ಣಾಜಿನಧಾರಿಗಳನ್ನಾಗಿ ಮಾಡಿ ಕಾಡಿಗೆ ಕಳುಹಿಸಿರುವುದಕ್ಕಾಗಿ ಪಶ್ಚಾತ್ತಾಪವೂ ಉಂಟಾಗಿರುವುದಿಲ್ಲ. ನಿಶ್ಚಯವಾಗಿಯೂ ಆ ದುಷ್ಟನ ಹೃದಯವು ಉಕ್ಕಿನಿಂದಲೇ ಮಾಡಲ್ಪಟ್ಟಿರಬೇಕು. ಏಕೆಂದರೆ : ಧರ್ಮಾತ್ಮನಾದ, ಸತ್ಯಸಂಧನಾದ, ಜ್ಯೇಷ್ಠನಾದ ನಿನ್ನನ್ನು ಅವನು ಬಹಳ ಕಠಿನೋಕ್ತಿಗಳಿಂದ ಹೀಯಾಳಿಸಿದನಲ್ಲವೇ? ಸುಖೋಪಭೋಗಗಳನ್ನು ಅನುಭವಿಸಲು ಯೋಗ್ಯನಾದ ಮತ್ತು ಧರ್ಮಿಷ್ಠನಾದ ನಿನ್ನನ್ನು ಈ ವಿಧವಾದ ಕಷ್ಟಕ್ಕೆ ಗುರಿಮಾಡಿ ಪಶ್ಚಾತ್ತಾಪಪಡುವುದಕ್ಕೆ ಬದಲಾಗಿ ಆ ದುಷ್ಟದುರ್ಯೋಧನನು ತನ್ನ ಗೆಳೆಯರೊಡನೆ ಸಂತೋಷದಿಂದ ಕಾಲಕಳೆಯುತ್ತಿರುವನು.

ಕೃಷ್ಣಾಜಿನವನ್ನು ಧರಿಸಿ ನೀನು ಅರಣ್ಯಕ್ಕೆ ಹೊರಟಾಗ ಮಹಾಪಾಪಿಷ್ಠರಾದ ನಾಲ್ಕು ಜನರ ಕಣ್ಣುಗಳಿಂದ ಮಾತ್ರ ನೀರು ಕೆಳಗೆ ಬೀಳಲಿಲ್ಲ.

ಮಹಾರಾಜ! ಪೀತಾಂಬರಕ್ಕೆ ಬದಲಾಗಿ ಕೃಷ್ಣಾಜಿನವನ್ನು ಧರಿಸಿ ನೀನು ಹಸ್ತಿನೆಯನ್ನು ಬಿಟ್ಟು ಹೊರಟಾಗ–ದುರ್ಯೋಧನ, ಕರ್ಣ, ದುರಾತ್ಮನಾದ ಶಕುನಿ, ಸ್ವಭಾವದಿಂದಲೇ ಬಹುದುಷ್ಟನಾಗಿರುವ ದುಃಶಾಸನ–ಈ ನಾಲ್ವರನ್ನುಳಿದು ಉಳಿದ ಕೌರವರೂ, ಪಟ್ಟಣಿಗರೂ ನಿನ್ನ ದುಃಸ್ಥಿತಿಯನ್ನು ನೋಡಿ ಕಂಬನಿಗರೆದರು.

ಮಹಾರಾಜ! ಇಂದಿನ ನಿನ್ನ ದರ್ಭೆಯ ಹಾಸಿಗೆಯನ್ನು ನೋಡುತ್ತಿರುವಂತೆ ಅಂದು ನೀನು ಹಂಸತೂಲಿಕಾತಲ್ಪದಲ್ಲಿ ಕುಳಿತಿದ್ದ ಚಿತ್ರವು ಕಣ್ಣು ಮುಂದೆ ಬಂದು ನಿಲ್ಲುವುದು. ಯುಧಿಷ್ಠಿರ! ಅದನ್ನು ನೆನೆದಂತೆಲ್ಲಾ ನನ್ನ ಹೃದಯವು ಬೆಂದುಹೋಗುವುದು. ಸುಖೋಪಭೋಗಗಳನ್ನು ಅನುಭವಿಸುತ್ತಿದ್ದ ನಿನಗೆ ಖಂಡಿತವಾಗಿಯೂ ಇಂತಹ ಕಷ್ಟವು ಪ್ರಾಪ್ತವಾಗಬಾರದಾಗಿದ್ದಿತು.

ಅಂದು ನೀನು ದಂತಗಳಿಂದಲೂ ನವರತ್ನಗಳಿಂದಲೂ ಮಾಡಲ್ಪಟ್ಟಿದ್ದ ಸಿಂಹಾಸನದಲ್ಲಿ ಕುಳಿತುಕೊಳ್ಳುತ್ತಿದ್ದೆ. ಇಂದು ನೀನು ಕುಶಾಸನದಲ್ಲಿ ಕುಳಿತಿರುವುದನ್ನು ನೋಡಿದರೆ ನನ್ನ ಹೃದಯವು ಬಹಳವಾಗಿ ಪರಿತಪಿಸುತ್ತದೆ. ನಿನ್ನ ಸಿಂಹಾಸನವನ್ನು ಸುತ್ತುವರಿದು ಆಶ್ರಿತರಾಜರು ನಯ-ವಿನಯಗಳಿಂದ ಕೈಕಟ್ಟಿ ಕುಳಿತುಕೊಳ್ಳುತ್ತಿದ್ದರು. ಇಂದು ನಾನು ಅಂದಿನ ನಿನ್ನ ರಾಜಠೀವಿಯನ್ನು ಹೇಗೆ ತಾನೇ ಕಾಣುವ ಸಾಧ್ಯತೆಯಿದೆ? ನನಗೆ ಹೇಗೆ ತಾನೇ ಶಾಂತಿ ಯುಂಟಾದೀತು? ಯುಧಿಷ್ಠಿರ! ಅಂದು ನಿನ್ನ ಶರೀರವು ರತ್ನಹಾರಗಳನ್ನು ಧರಿಸಿ ಸೂರ್ಯನಂತೆಯೇ ಪ್ರಕಾಶಿಸುತ್ತಿದ್ದಿತು. ಚಂದನಾಗುರು-ಕಸ್ತೂರೀ ಲೇಪನಗಳಿಂದ ಸುಗಂಧಮಯವಾಗಿ ಮಾಡಲ್ಪಡುತ್ತಿದ್ದಿತು. ಆದರೆ ಇಂದು ನಿನ್ನ ದಿವ್ಯಶರೀರವು ಧೂಳಿನಿಂದ ಮುಚ್ಚಿರುವುದನ್ನು ನೋಡಿದರೆ ನನ್ನ ದುಃಖವು ಇಮ್ಮಡಿಯಾಗುತ್ತದೆ. ಮೋಹವುಂಟಾಗುತ್ತದೆ."

ದ್ರೌಪದಿಯು ಆಗಾಗ ಕಣ್ಣೀರನ್ನೊರೆಸಿಕೊಳ್ಳುತ್ತಿದ್ದಳು.

"ಮಹಾರಾಜ! ನೀನು ಹಿಂದೆ ಶುಭ್ರವಾದ, ರೇಷ್ಮೆಯ ಪೀತಾಂಬರವನ್ನು ಧರಿಸುತ್ತಿದ್ದೆ. ಆದರೆ ಈಗ ಹರಿದುಹೋದ ನಾರುಮಡಿಯನ್ನು ಧರಿಸಬೇಕಾಗಿದೆ. ಹಿಂದೆ ಅರಮನೆಯಲ್ಲಿದ್ದ ಪಾಕಶಾಲೆಯಿಂದ ಸ್ವರ್ಣಮಯವಾದ ನೂರಾರು ಪರಾತಗಳಲ್ಲಿ ಷಡ್ರಸೋಪೇತವಾದ ಆಹಾರವು ಸಾವಿರಾರು ಬ್ರಾಹ್ಮಣರಿಗೆ ಅರ್ಪಿಸಲ್ಪಡುತ್ತಿದ್ದಿತು. ನಿನ್ನ ಆಶ್ರಯದಲ್ಲಿದ್ದ ಸಾವಿರಾರು ಮಂದಿ ಯತಿಗಳಿಗೂ, ಬ್ರಹ್ಮಚಾರಿಗಳಿಗೂ, ಗೃಹಸ್ಥರಿಗೂ ನೀನು ಕಾಲ-ಕಾಲಕ್ಕೆ ಊಟ-ಉಪಚಾರಗಳನ್ನೂ ಮಾಡಿಸುತ್ತಿದ್ದೆ. ಪ್ರತಿನಿತ್ಯವೂ ಸಾವಿರಾರು ಬ್ರಾಹ್ಮಣರು ತಾವಿಚ್ಛಿಸಿದುದನ್ನು ಭುಂಜಿಸಿ ಆನಂದಿಸುತ್ತಿದ್ದರು. ಇಂತಹ ವೈಭವವನ್ನು ನಾನಿಂದು ಕಾಣದವಳಾಗಿದ್ದೇನೆ. ನನ್ನ ಮನಸ್ಸಿಗೆ ಶಾಂತಿಯೆಂಬುದೇ ಇಲ್ಲವಾಗಿದೆ, ಮಹಾರಾಜ!

ಹಿಂದೆ ಈ ನಿನ್ನ ಸಹೋದರರೆಲ್ಲರೂ ಸುಖೋಪಭೋಗಗಳನ್ನು ಅನುಭವಿಸುತ್ತಾ, ದಿವ್ಯಾಭರಣಗಳನ್ನೂ, ದಿವ್ಯಾಂಬರಗಳನ್ನೂ ಧರಿಸಿಕೊಂಡು ಪಾಕಶಾಸ್ತ್ರದಲ್ಲಿ ನಿಷ್ಣಾತರಾದವರಿಂದ ಸಿದ್ಧಪಡಿಸಲ್ಪಟ್ಟ ಭಕ್ಷ್ಯ-ಭೋಜ್ಯಾದಿ

ಗಳನ್ನು ಸೇವಿಸುತ್ತಾ ಸುಖವಾಗಿರುತ್ತಿದ್ದರು. ಆದರೆ ಇಂದು ಅವರ ದುರವಸ್ಥೆಯನ್ನು ನೋಡು, ಮಹಾರಾಜ! ಕಾಡಿನಲ್ಲಿ ಸಿಕ್ಕುವ ಗೆಡ್ಡೆ-ಗೆಣಸುಗಳಿಂದಲೇ ಇವರಿಂದು ತೃಪ್ತರಾಗಬೇಕಾಗಿದೆ. ಇದರಿಂದಾಗಿ ನನ್ನ ಮನಸ್ಸಿನ ಶಾಂತಿಯು ಕದಡಿಹೋಗಿದೆ, ಯುಧಿಷ್ಠಿರ! ನನ್ನ ಪತಿಗಳಿಗೊದಗಿರುವ ದಾರುಣಕಷ್ಟವನ್ನು ಕಂಡು ನಾನು ದುಃಖಿಸುವುದು ಸ್ವಾಭಾವಿಕವೇ ಆಗಿದೆ. ಆದರೆ ಮಹಾಪರಾಕ್ರಮಿಯಾದ ಈ ಭೀಮನು ಕಾಡಿನಲ್ಲಿ ಕಷ್ಟಪಡುತ್ತಿರುವುದನ್ನು ಕಂಡು ನಿನ್ನ ಕೋಪವೇಕೆ ಕೆರಳಲಿಲ್ಲ? ಮಹಾರಾಜ! ಈ ಭೀಮಸೇನನು ಭುಜಬಲ-ಪರಾಕ್ರಮವಿರುವವನು. ಎಂತಹ ದುಸ್ಸಾಧ್ಯವಾದ ಕಾರ್ಯವನ್ನಾದರೂ ಏಕಾಕಿಯಾಗಿ ಸಾಧಿಸುವ ಸಾಮರ್ಥ್ಯವಿರುವವನು. ಇಂತಹವನು ಈ ಪರಿಯಲ್ಲಿ ದುಃಸ್ಥಿತಿಗೆ ಈಡಾಗಿರುವುದನ್ನು ನೋಡಿಯೂ ನಿನ್ನ ಕೋಪವೇಕೆ ವೃದ್ಧಿಗೊಳ್ಳಲಿಲ್ಲ? ಯುಧಿಷ್ಠಿರ! ಹಿಂದೆ ಇವನು ಅನರ್ಘವಾದ ವಸ್ತ್ರಾಭರಣಗಳನ್ನು ಧರಿಸಿ, ಸುಮನೋಹರವಾದ ವಾಹನಗಳಲ್ಲಿ ಸಂಚರಿಸುತ್ತಿದ್ದನಲ್ಲವೇ? ಮಹಾಮಹಿಮನಾದ ಈ ಭೀಮಸೇನನು ಇಂದೂ ಕೌರವರನ್ನು ನಿರ್ಮೂಲಮಾಡಲು ಸಿದ್ಧನಾಗಿಯೇ ಇದ್ದಾನೆ. ನಿನ್ನ ಪ್ರತಿಜ್ಞೆಗೆ ಒಳಪಟ್ಟು ಇವನು ಈ ಕಷ್ಟಗಳೆಲ್ಲವನ್ನೂ ಸಹಿಸಿಕೊಳ್ಳುತ್ತಿರುವನು. ಆದುದರಿಂದ ಇವನಿಂದು ವಿಧಿಯಿಲ್ಲದೇ ಈ ಕಷ್ಟವನ್ನು ಅನುಭವಿಸಬೇಕಾಗಿದೆ.”

ದ್ರೌಪದಿಯು ಕೆಲವು ಕ್ಷಣಗಳು ಮಾತನಾಡದೇ ಕುಳಿತುಕೊಂಡಳು; ನಿಟ್ಟುಸಿರುಬಿಟ್ಟಳು ; ಉದ್ವಿಗ್ನಳಾದಳು. ಕಂಬನಿಯನ್ನು ಒರೆಸಿಕೊಂಡು ಪುನಃ ಹೇಳಿದಳು :

“ಈ ಅರ್ಜುನನ ದುಃಸ್ಥಿತಿಯನ್ನು ನೋಡಿಯಾದರೂ ನಿನ್ನ ಕೋಪಾಗ್ನಿಯು ಪ್ರಜ್ವಲಿಸದೇ? ಮಹಾನುಭಾವನಾದ ಈ ಅರ್ಜುನನಿಗಿರುವುದು ಎರಡೇ ಕೈಗಳು. ಆದರೂ ಬಾಣಪ್ರಯೋಗಕೌಶಲದಲ್ಲಿ ಸಹಸ್ರಬಾಹುವಾದ ಕಾರ್ತವೀರ್ಯಾರ್ಜುನನನ್ನೂ ಇವನು ಮೀರಿಸಿರುವನು. ಶತ್ರುಗಳಿಗಿವನು ಪ್ರಳಯಕಾಲದ ಯಮಸದೃಶನಾಗಿರುವನು. ಇವನ ಭುಜಬಲ-ಪರಾಕ್ರಮಗಳ ಕಾರಣದಿಂದಾಗಿ ಈ ಭೂಮಿಯ ಭೂಪಾಲರು ನೀನು ಮಾಡಿದ ರಾಜಸೂಯದಲ್ಲಿ ನಿನ್ನ ಇಚ್ಛಾನುಸಾರವಾಗಿ ಭೂದೇವರ ಸೇವೆಯಲ್ಲಿ ನಿರತರಾಗಿದ್ದರು. ದೇವ-ಮಾನವರಿಂದ ಪುರಸ್ಕರಿಸಲ್ಪಡುವ, ನರವ್ಯಾಘ್ರನಾದ

ಕಿರೀಟಿಯು ಚಿಂತಾಮಗ್ನನಾಗಿ ಕುಳಿತಿರುವ ಇಂದಿನ ಈ ದುಃಸ್ಥಿತಿಯನ್ನು ನೋಡಿಯೂ ನೀನು ತಾಳ್ಮೆಯಿಂದ ಕುಳಿತಿರುವೆಯಲ್ಲ? ಮಹಾರಾಜ! ಸುಖೋಪಭೋಗಗಳನ್ನು ಅನುಭವಿಸಲು ಯೋಗ್ಯನಾದ ಕುಂತಿಯ ಮಗನಾದ ಈ ಕಿರೀಟಿಯು ಇಂತಹ ದುರವಸ್ಥೆಯಲ್ಲಿರುವಾಗಲೂ ನಿನ್ನ ಕೋಪವು ಪ್ರಜ್ವಲಿಸದೇ ಶಾಂತವಾಗಿಯೇ ಇರುವುದಕ್ಕಾಗಿ ನಾನು ವಿಷಾದಿಸುತ್ತೇನೆ. ರಥಾರೂಢನಾದ ಈ ಅರ್ಜುನನು ಏಕಾಂಗಿಯಾಗಿ ಯುದ್ಧಮಾಡಿ, ಶತ್ರುಪಕ್ಷದ ರಾಜರ ಚತುರಂಗಬಲವನ್ನೂ ಧ್ವಂಸಮಾಡಿ, ಅವರನ್ನು ಸೋಲಿಸಿ, ಅವರಿಂದ ಅಪರಿಮಿತವಾದ ಕಪ್ಪ-ಕಾಣಿಕೆಗಳನ್ನು ತೆಗೆದುಕೊಂಡು ಬಂದನು. ಈ ಮಹಾನುಭಾವನು ಏಕಕಾಲದಲ್ಲಿ ಐದು ನೂರು ಬಾಣಗಳನ್ನು ಪ್ರಯೋಗಮಾಡಲು ಸಮರ್ಥನಾಗಿರುವನು. ಏಕರಥನಾಗಿ ದೇವತೆಗಳೊಡನೆ, ರಾಕ್ಷಸರೊಡನೆ ಮತ್ತು ಸರ್ಪಗಳೊಡನೆ ಯುದ್ಧಮಾಡಿ ವಿಜಯಪಡೆದಿರುವ ಇಂತಹವನಿಗೆ ಇಂದೊದಗಿರುವ ದಾರುಣವಾದ ಕಷ್ಟವನ್ನು ಕಂಡು ನಿನ್ನ ಕೋಪವು ಉಲ್ಬಣಿಸದೇ? ಯುಧಿಷ್ಠಿರ!

ಈ ನಕುಲನ ಕಷ್ಟವನ್ನಾದರೂ ಕಂಡು ನಿನ್ನ ಕೋಪವೇಕೆ ಪ್ರಜ್ವಲಿಸಲಿಲ್ಲ? ಇವನು ಸುಂದರಕಾಯನು. ಕತ್ತಿಯ ಕಾಳಗದಲ್ಲಿ ಅಪ್ರತಿಮನು. ಧರ್ಮಿಷ್ಠನಾದ, ನ್ಯಾಯಶಾಸ್ತ್ರವಿಶಾರದನಾದ ಈ ಸಹದೇವನು ಅನುಭವಿಸುತ್ತಿರುವ ಕಷ್ಟವೆಂಬ ಬಿರುಗಾಳಿಯೂ ನಿನ್ನಲ್ಲಿ ಸುಪ್ತವಾಗಿ ಹೋಗಿರುವ ಕೋಪಾಗ್ನಿಯನ್ನು ಕೆರಳಿಸಲು ಸಮರ್ಥವಾಗಲಿಲ್ಲ. ಸಹದೇವನೂ ಕಾಡಿನಲ್ಲಿ ಕಷ್ಟಪಡುತ್ತಿರುವುದನ್ನು ನೋಡಿಯೂ ಏಕೆ ಸಹಿಸಿಕೊಂಡಿರುವೆ? ಸುಂದರಕಾಯರಾದ, ಮಾದ್ರಿಯ ಮಕ್ಕಳಾದ ಈ ನಕುಲ-ಸಹದೇವರು ಯಾವ ಅಪರಾಧಕ್ಕಾಗಿ ಈ ಕಷ್ಟವನ್ನನುಭವಿಸಬೇಕಾಗಿದೆ? ಇವರ ಕಷ್ಟವನ್ನು ಕಂಡಾದರೂ ನೀನೇಕೆ ಕುಪಿತನಾಗಿಲ್ಲ? ಮಹಾರಾಜ!

ನಿಮ್ಮ ಸಹಧರ್ಮಿಣಿಯಾದ ನನ್ನ ದುರವಸ್ಥೆಯನ್ನು ನೋಡಿಯೂ ನಿನ್ನ ಕೋಪವು ಪ್ರಜ್ವಲಿಸದೆಂದರೆ ಖಂಡಿತವಾಗಿಯೂ ಆಶ್ಚರ್ಯಪಡಬೇಕಾಗಿದೆ. ನಾನು ಮಹಾಮಹಿಮನಾದ ದ್ರುಪದನ ಪುತ್ರಿ. ಅಯೋನಿಜೆ. ಧೃಷ್ಟದ್ಯುಮ್ನನ ತಂಗಿ. ಮಹಾತ್ಮನಾದ ಪಾಂಡುರಾಜನ ಸೊಸೆ. ಲೋಕವೀರರಾದ

ಪಂಚಪಾಂಡವರ ಧರ್ಮಪತ್ನೀ. ಇಂತಹ ನನ್ನನ್ನು ದುಷ್ಟರು ಸಭಾಭವನದಲ್ಲಿ ಸೆಳೆದಾಡಿದರು. ಇಂದಿನ ಈ ದುಃಸ್ಥಿತಿಗೂ ಅವರೇ ಕಾರಣರು. ಅಂತಹ ದುಷ್ಟರನ್ನು ನೀನು ಕ್ಷಮಿಸಿ ಕುಳಿತಿರುವೆಯಲ್ಲವೇ? ಯುಧಿಷ್ಠಿರ! ನಿಶ್ಚಯವಾಗಿ ಹೇಳುವುದಾದರೆ ನಿನ್ನ ಹೃದಯದಲ್ಲಿ 'ಕೋಪ' ಎಂಬ ಗುಣಕ್ಕೇ ಸ್ಥಾನವಿಲ್ಲವಾಗಿದೆ. ಹಾಗಿಲ್ಲದಿದ್ದರೆ ನಿನ್ನ, ನಿನ್ನ ಅನುಜರ ಮತ್ತು ನನ್ನ ಇಂದಿನ ದುಃಸ್ಥಿತಿಯನ್ನು ನೋಡಿಯೂ ಸುಮ್ಮನಿರಲು ಸಾಧ್ಯವಾಗು ತ್ತಿದ್ದಿತೇ?

**ನ ನಿರ್ಮನ್ಯುಃ ಕ್ಷತ್ರಿಯೋಽಸ್ತಿ ಲೋಕೇ ನಿರ್ವಚನಂ ಸ್ಮೃತಮ್ ।**
**ತದದ್ಯ ತ್ವಯಿ ಪಶ್ಯಾಮಿ ಕ್ಷತ್ರಿಯೇ ವಿಪರೀತವತ್ ॥೩೭॥**

'ಕೋಪವಿಲ್ಲದ ಕ್ಷತ್ರಿಯನಿಲ್ಲ' ಎಂಬ ಗಾದೆಯು ಲೋಕದಲ್ಲಿ ಪ್ರಥಿತ ವಾಗಿದೆ. ಇಂದು ಅದು ಸುಳ್ಳಾಯಿತು. ಅಥವಾ ಇಂದು ನೀನು ಆ ಗಾದೆ ಯನ್ನೇ ಸುಳ್ಳಾಗಿ ಮಾಡಿರುವೆ. ನೀನಿಂದು 'ಕ್ಷತ್ರಿಯ' ಎಂಬ ಪದದ ಸ್ವಾಭಾವಿಕವಾದ ಅರ್ಥಕ್ಕೆ ವಿಪರೀತವಾಗಿ ವರ್ತಿಸುತ್ತಿರುವೆ.

( ಕ್ಷರತೇ= ಹಿನಸ್ತಿ–ಹಿಂಸಿಸುತ್ತಾನೆ–ಕೊಲ್ಲುತ್ತಾನೆ = ಇತಿ ಕ್ಷತ್ರಿಯಃ )

**ಯೋ ನ ದರ್ಶಯತೇ ತೇಜಃ ಕ್ಷತ್ರಿಯಃ ಕಾಲ ಆಗತೇ ।**
**ಸರ್ವಭೂತಾನಿ ತಂ ಪಾರ್ಥ ಸದಾ ಪರಿಭವನ್ತ್ಯುತ ॥೩೮॥**

ಯಾವ ಕ್ಷತ್ರಿಯನು ಸಮಯಬಂದಾಗ ತನ್ನ ಪರಾಕ್ರಮವೇನೆಂಬು ದನ್ನು ಶತ್ರುಗಳಿಗೆ ತೋರಿಸುವುದಿಲ್ಲವೋ–ಅವನು ಸಕಲರ ಅವಹೇಳನಕ್ಕೂ ಗುರಿಯಾಗುತ್ತಾನೆ. ಆದುದರಿಂದ, ಮಹಾರಾಜ! ನಿನಗೆ ಅಪಾರವಾಗಿ ದ್ರೋಹಮಾಡಿರುವ ಶತ್ರುಗಳ ವಿಷಯದಲ್ಲಿ ನೀನು ಖಂಡಿತವಾಗಿಯೂ ಕ್ಷಮೆಯನ್ನು ತೋರಬೇಡ. ನಿಶ್ಚಯವಾಗಿಯೂ ನಿನ್ನಲ್ಲಿ ಶತ್ರುಗಳೆಲ್ಲರನ್ನೂ ಸಂಹಾರಮಾಡುವ ಪರಾಕ್ರಮವಿದೆ. ನಾನು ಮೇಲೆ ಹೇಳಿದಂತೆ ಕ್ಷತ್ರಿಯ ನಾದವನು ಸಮಯದಲ್ಲಿ ಪರಾಕ್ರಮವನ್ನೂ ತೋರಬೇಕು.

**ತಥೈವ ಯಃ ಕ್ಷಮಾಕಾಲೇ ಕ್ಷತ್ರಿಯೋ ನೋಪಶಾಮ್ಯತಿ ।**
**ಅಪ್ರಿಯಃ ಸರ್ವಭೂತಾನಾಂ ಸೋಽಮುತ್ರೇಹ ಚ ನಶ್ಯತಿ ॥೪೦॥**

ಶತ್ರುವು ಕ್ಷಮಾಯಾಚನೆಗೆ ಬಂದಾಗ ಆಶ್ರಯವನ್ನೂ ನೀಡಬೇಕು.

ಕ್ಷಮೆಯನ್ನು ಯಾಚಿಸಿದ ಕಾಲದಲ್ಲಿ ಕ್ಷಮೆಯನ್ನು ನೀಡದಿರುವ ರಾಜನು ಅಕೀರ್ತಿವಂತನಾಗಿ ಇಹ-ಪರಲೋಕಗಳೆರಡರಲ್ಲಿಯೂ ಸುಖವನ್ನು ಕಾಣದೇ ವಿನಾಶಹೊಂದುವನು. ಆದುದರಿಂದ ಶತ್ರುವಿನ ವಿಷಯದಲ್ಲಿ ಕೋಪಗೊಂಡು ಪ್ರತೀಕಾರಮಾಡಬೇಕಾದ ಕಾಲದಲ್ಲಿ ಕ್ಷಮೆಯೂ, ಕ್ಷಮಿಸ ಬೇಕಾದ ಕಾಲದಲ್ಲಿ ಕೋಪವೂ–ಈ ಎರಡೂ ರಾಜನಾದವನಿಗೆ ಹಿತವನ್ನುಂಟುಮಾಡುವುದಿಲ್ಲ.”

೨೭ನೆಯ ಅಧ್ಯಾಯವು ಮುಗಿಯಿತು.

೨೮ನೆಯ ಅಧ್ಯಾಯ ಅರ್ಜುನಾಭಿಗಮನಪರ್ವ (ಮುಂದುವರಿದಿದೆ.)

## ದ್ರೌಪದಿಯಿಂದ ಪ್ರಹ್ಲಾದ-ಬಲಿಗಳ ಸಂವಾದ ವರ್ಣನೆ : ಕ್ರೋಧ ಮತ್ತು ಕ್ಷಮಾಗುಣಗಳ ವಿಶ್ಲೇಷಣೆ

ಪಾರಿಕ್ಷಿತ! ದ್ರೌಪದಿಯು ಮುಂದುವರಿದು ಹೇಳಿದಳು :

“ಮಹಾರಾಜ! ಕ್ಷಮಾಗುಣವು ಒಬ್ಬ ಮನುಷ್ಯನಲ್ಲಿ ನಿರಂತರವಾಗಿದ್ದರೆ ಉಂಟಾಗುವ ಪರಿಣಾಮವೇನೆಂಬ ವಿಷಯದಲ್ಲಿ ಹಿಂದೆ ಧರ್ಮಾತ್ಮನಾದ ಪ್ರಹ್ಲಾದನಿಗೂ ಮತ್ತು ಅವನ ಮೊಮ್ಮಗ ಬಲಿಗೂ ನಡೆದ ಸಂವಾದರೂಪವಾದ ಇತಿಹಾಸವನ್ನು ಹೇಳುವೆನು, ಕೇಳು :

ಹಿಂದೊಮ್ಮೆ ಬಲಿಚಕ್ರವರ್ತಿಯು ತನ್ನ ಪಿತಾಮಹನೂ, ಅಸುರರ ಒಡೆಯನೂ, ಮಹಾಪ್ರಾಜ್ಞನೂ, ಧರ್ಮದ ರಹಸ್ಯವನ್ನು ತಿಳಿದಿರುವವನೂ ಆದ ಪ್ರಹ್ಲಾದನನ್ನು ಕೇಳಿದನು : “ತಾತ! ಕ್ಷಮಾಗುಣವಿರುವುದರಿಂದ ಯಶಃಪ್ರಾಪ್ತಿಯಾಗುವುದೇ? ಅಥವಾ ಕೋಪ ಮತ್ತು ಬಲಗಳು ಯಶಸ್ಸಿನ ಪ್ರಾಪ್ತಿಗೆ ಕಾರಣವಾಗುವುವೇ? ಈ ವಿಷಯದಲ್ಲಿ ನನ್ನ ಮನಸ್ಸು ಡೋಲಾಯಮಾನವಾಗಿದೆ. ದಯೆಯಿಟ್ಟು ಇದರ ನಿಶ್ಚಯಾಂಶವನ್ನು ಹೇಳಿ ನನ್ನ ಸಂಶಯವನ್ನು ಪರಿಹರಿಸು. ಯಾವ ಗುಣವನ್ನು ಸಾಧನೆಮಾಡುವುದರಿಂದ ಯಶಸ್ಸಿನ ಲಾಭವಾಗುವುದೆಂಬುದನ್ನು ತಿಳಿಸು. ನಾನು ಅದರಂತೆಯೇ ನಡೆದುಕೊಳ್ಳುವೆನು.”

ಬದ್ಧಾಂಜಲಿಯಾಗಿ ನಿಂತು ಈ ಪ್ರಶ್ನೆಯನ್ನು ಕೇಳಿದ ತನ್ನ ಮೊಮ್ಮಗ

ನನ್ನು ಕುರಿತು–'ಇದಮಿತ್ಥಂ'–ಎಂಬ ನಿಶ್ಚಯಜ್ಞಾನವಿದ್ದ ಪ್ರಹ್ಲಾದನು ಕ್ಷಮಾಗುಣದ ಮತ್ತು ಕೋಪದ ವಿಷಯವಾಗಿ ಪ್ರವಚನಮಾಡಿದನು :

**ನ ಶ್ರೇಯಃ ಸತತಂ ತೇಜೋ ನ ನಿತ್ಯಂ ಶ್ರೇಯಸೀ ಕ್ಷಮಾ ।**
**ಇತಿ ತಾತ ವಿಜಾನೀಹಿ ದ್ವಯಮೇತದಸಂಶಯಮ್ ॥೬॥**

"ಮಗು! ಯಾವಾಗಲೂ ಕೋಪವು ಶ್ರೇಯಸ್ಕರವಲ್ಲ. ಹಾಗೆಯೇ ಕ್ಷಮೆಯೂ ಶ್ರೇಯಸ್ಕರವಲ್ಲ. ಈ ಎರಡಂಶಗಳೂ ನಿಶ್ಚಯ. ಇದರಲ್ಲಾವ ಸಂಶಯವೂ ಇಲ್ಲ.

**ಯೋ ನಿತ್ಯಂ ಕ್ಷಮತೇ ತಾತ ಬಹೂನ್ದೋಷಾನ್ಸ ವಿನ್ದತಿ ।**
**ಭೃತ್ಯಾಃ ಪರಿಭವನ್ತ್ಯೇನಮುದಾಸೀನಾಸ್ತಥಾರಯಃ ॥೭॥**

ಯಾವಾಗಲೂ ಕ್ಷಮಾಗುಣವುಳ್ಳವನು ಅನೇಕವಿಧವಾದ ದೋಷ ಗಳಿಗೆ ಗುರಿಯಾಗುತ್ತಾನೆ. ಸೇವಕರೂ, ಉದಾಸೀನರೂ ಮತ್ತು ಶತ್ರುಗಳೂ ಅವನನ್ನು ತಿರಸ್ಕಾರದಿಂದ ನೋಡುತ್ತಾರೆ.

**ಸರ್ವಭೂತಾನಿ ಚಾಪ್ಯಸ್ಯ ನ ನಮನ್ತಿ ಕದಾಚನ ।**
**ತಸ್ಮಾನ್ನಿತ್ಯಂ ಕ್ಷಮಾ ತಾತ ಪಣ್ಡಿತೈರಪಿ ವರ್ಜಿತಾ ॥೮॥**

ಪ್ರಪಂಚದ ಯಾವ ಪ್ರಾಣಿಯೂ ಅವನನ್ನು ಕಂಡರೆ ತಲೆತಗ್ಗಿಸು ವುದಿಲ್ಲ. ಆದುದರಿಂದ ಯಾವಾಗಲೂ ಕ್ಷಮಾಗುಣವಿರುವುದನ್ನು ನೀತಿಶಾಸ್ತ್ರ ವಿಶಾರದರೂ ಪ್ರಶಂಸಿಸುವುದಿಲ್ಲ.

**ಅವಜ್ಞಾಯ ಹಿ ತಂ ಭೃತ್ಯಾ ಭಜನ್ತೇ ಬಹುದೋಷತಾಮ್ ।**
**ಆದಾತುಂ ಚಾಸ್ಯ ವಿತ್ತಾನಿ ಪ್ರಾರ್ಥಯನ್ತೇಽಲ್ಪಚೇತಸಃ ॥೯॥**

ಕ್ಷಮಾಗುಣವಿರುವ ಮನುಷ್ಯನ ಸೇವಕರು–ತಮ್ಮ ಸ್ವಾಮಿಯ ವಿಷಯದಲ್ಲಿ ಅನಾದರಣೆಯಿಂದಿರುವುದಲ್ಲದೇ ಅವನು ತಮ್ಮನ್ನು ಶಿಕ್ಷಿಸುವು ದಿಲ್ಲವೆಂಬ ನಿಶ್ಚಯದಿಂದ–ಅನೇಕವಾದ ಅಪರಾಧಗಳನ್ನೂ ಮಾಡುತ್ತಿರು ತ್ತಾರೆ. ಕುಬುದ್ಧಿಯ ಆ ಸೇವಕರು ತಮ್ಮ ಸ್ವಾಮಿಯ ವಿತ್ತಾಪಹಾರದ ಯೋಚನೆಯನ್ನೂ ಮಾಡುತ್ತಾರೆ. ಏಕೆಂದರೆ : ಏನುಮಾಡಿದರೂ ತಮ್ಮ ಯಜಮಾನನು ಕೋಪಿಸಿಕೊಳ್ಳುವುದಿಲ್ಲವೆಂಬ ದೃಢನಿಶ್ಚಯವು ಅವರಿಗಿರು ತ್ತದೆ.

ದುರಾತ್ಮರಾದ ಸೇವಕರು ಕ್ಷಮಾಗುಣವಿರುವ ತಮ್ಮ ಸ್ವಾಮಿಯ ವಿತ್ತಾಪಹಾರಮಾತ್ರದಿಂದಲೇ ತೃಪ್ತರಾಗುವುದಿಲ್ಲ. ಕ್ರಮ-ಕ್ರಮವಾಗಿ ಅವನು ಉಪಯೋಗಿಸುವ ವಾಹನ, ವಸ್ತ್ರ, ಒಡವೆ, ಆಸನ, ಹಾಸಿಗೆ, ಆಹಾರ ಮತ್ತು ಯಜಮಾನನಿಗೆಂದು ಸಿದ್ಧಪಡಿಸುವ ಸಕಲವಸ್ತುಗಳನ್ನೂ ಉಪಯೋಗಿಸಲು ಆರಂಭಿಸುತ್ತಾರೆ. ತಮ್ಮ ಸ್ವಾಮಿಯು ಯಾವುದಾದರೂ ವಸ್ತುವನ್ನು ಯಾರಿಗಾದರೂ ಕೊಡುವಂತೆ ಸೇವಕರಿಗೆ ಹೇಳಿದರೆ–ಆ ಕೆಲಸವನ್ನೂ ಸೇವಕರು ಮಾಡುವುದಿಲ್ಲ.

**ನ ಚೈನಂ ಭರ್ತೃಪೂಜಾಭಿಃ ಪೂಜಯನ್ತಿ ಕಥಂಚನ ।**
**ಅವಜ್ಞಾನಂ ಹಿ ಲೋಕೇಽಸ್ಮಿನ್ಮರಣಾದಪಿ ಗರ್ಹಿತಮ್ ॥೧೨॥**

ಕ್ಷಮಾಗುಣವಿರುವ ಮನುಷ್ಯನಿಗೆ ಅವನ ಸೇವಕರಿಂದ, ಯಜಮಾನ ನಾದವನಿಗೆ ಸಿಕ್ಕಬೇಕಾದ ಪುರಸ್ಕಾರವು (ಗೌರವವು) ಖಂಡಿತವಾಗಿಯೂ ಸಿಕ್ಕುವುದಿಲ್ಲ. ನಿಶ್ಚಯವಾಗಿ ಹೇಳುವುದಾದರೆ : ಈ ಪ್ರಪಂಚದಲ್ಲಿ ಸೇವಕ ರಿಂದ ತಿರಸ್ಕೃತನಾಗಿ ಜೀವಿಸಿರುವುದಕ್ಕಿಂತಲೂ ಸಾಯುವುದೇ ಮೇಲು.

**ಕ್ಷಮಿಣಂ ತಾದೃಶಂ ತಾತ ಬ್ರುವನ್ತಿ ಕಟುಕಾನ್ಯಪಿ ।**
**ಪ್ರೇಷ್ಯಾಃ ಪುತ್ರಾಶ್ಚ ಭೃತ್ಯಾಶ್ಚ ತಥೋದಾಸೀನವೃತ್ತಯಃ ॥೧೩॥**

ಸೇವಕರು ಮಾತ್ರವೇ ಅಲ್ಲ, ಕ್ಷಮಾಗುಣವಿರುವ ಮನುಷ್ಯನ ವಿಷಯ ದಲ್ಲಿ ಅವನ ಪತ್ನೀ-ಪುತ್ರ-ಸೇವಕರೂ ಮತ್ತು ಸಾಮಾನ್ಯಜನರೂ ಅನಾದರಣೆಯಿಂದಲೂ, ಕಾಠಿನ್ಯದಿಂದಲೂ ವ್ಯವಹರಿಸುವರು. (ಆ ತಿರಸ್ಕಾರವು ಮರಣಕ್ಕಿಂತಲೂ ಕಷ್ಟಕರವಾದುದು.)

**ಅಥಾಸ್ಯ ದಾರಾನಿಚ್ಛನ್ತಿ ಪರಿಭೂಯ ಕ್ಷಮಾವತಃ ।**
**ದಾರಾಶ್ಚಾಸ್ಯ ಪ್ರವರ್ತನ್ತೇ ಯಥಾಕಾಮಮಚೇತಸಃ ॥೧೪॥**

ಕ್ಷಮಾಗುಣವಿರುವ ಮನುಷ್ಯರನ್ನು ಅವಹೇಳನಮಾಡಿ ದುರಾತ್ಮ ರಾದವರು ಅವನ ಪತ್ನಿಯರನ್ನೂ ಉಪಭೋಗಿಸಲು ಇಚ್ಛಿಸುವರು. ಕ್ಷಮಾ ಗುಣವಿರುವ ಮನುಷ್ಯನ ಹೆಂಡತಿಯರೂ ಪತಿಯ ವಿಷಯದಲ್ಲಿ ಅನಾದರಣೆಯಿಂದಿರುತ್ತಾ ಸ್ವೇಚ್ಛಾಚಾರಿಣಿಯಾಗುವರು.

**ತಥಾ ಚ ನಿತ್ಯಮುದಿತಾ ಯದಿ ನಾಲ್ಪಮಪೀಶ್ವರಾತ್ ।**
**ದಣ್ಡಮರ್ಹನ್ತಿ ದುಷ್ಯನ್ತಿ ದುಷ್ಟಾಶ್ಚಾಪ್ಯಪಕುರ್ವತೇ ॥೧೫॥**

ಯಾವ ಅಪರಾಧಮಾಡಿದರೂ ಶಿಕ್ಷೆಯೆಂಬುದನ್ನೇ ಅರಿಯದ ಸೇವಕರು ತಮ್ಮ ಸ್ವಾಮಿಯ ಕ್ಷಮಾಗುಣವನ್ನು ದುರುಪಯೋಗಮಾಡಿಕೊಂಡು ಇನ್ನೂ ಹೆಚ್ಚಿನ ಅಪರಾಧಗಳನ್ನು ಮಾಡುತ್ತಿರುತ್ತಾರೆ. ಇಷ್ಟು ಮಾತ್ರವಲ್ಲದೇ ತಮ್ಮ ಸ್ವಾಮಿಯನ್ನೂ ನಾನಾವಿಧವಾದ ಕಷ್ಟಗಳಿಗೆ ಗುರಿಮಾಡುತ್ತಾರೆ. ಇವೇ ಮೊದಲಾದ ಅನೇಕದೋಷಗಳು ಕ್ಷಮಾಗುಣದಲ್ಲಿರುತ್ತವೆ.

ಕ್ಷಮಾಗುಣವೇ ಇಲ್ಲದೇ ಯಾವಾಗಲೂ ಕೋಪ-ಪರಾಕ್ರಮಗಳಿಗೇ ಪ್ರಾಧಾನ್ಯವನ್ನು ಕೊಟ್ಟು ಕಾರ್ಯಮಾಡುವ ಮನುಷ್ಯನಿಗೆ ಉಂಟಾಗುವ ಅಥವಾ ಅವನಿಂದ ಇತರರಿಗೆ ಉಂಟಾಗುವ ತೊಂದರೆಗಳನ್ನೂ ವಿವರಿಸಿ ಹೇಳುವೆನು ; ಕೇಳು ಮಗು!

**ಅಸ್ಥಾನೇ ಯದಿ ವಾ ಸ್ಥಾನೇ ಸತತಂ ರಜಸಾವೃತಃ ।**
**ಕ್ರುದ್ಧೋ ದಣ್ಡಾನ್ಪ್ರಣಯತಿ ವಿವಿಧಾನ್ಸ್ವೇನ ತೇಜಸಾ ॥೧೭॥**

ಕೋಪಿಷ್ಠನಾದವನು ಕೇವಲ ರಜೋಗುಣದಿಂದ ಕೂಡಿದವನಾಗಿ ಕೋಪಿಸಿಕೊಳ್ಳಬೇಕಾದ ಮತ್ತು ಕೋಪಿಸಿಕೊಳ್ಳಬಾರದ ಎರಡು ಸಮಯಗಳಲ್ಲಿಯೂ ಕ್ರೋಧಪರವಶನಾಗಿ ಪ್ರಪಂಚದ ಜನರನ್ನು ನಾನಾವಿಧವಾದ ದಂಡಗಳಿಂದ ಹಿಂಸಿಸುತ್ತಾನೆ.

**ಮಿತ್ರೈಃ ಸಹ ವಿರೋಧಂ ಚ ಪ್ರಾಪ್ನುತೇ ತೇಜಸಾವೃತಃ ।**
**ಆಪ್ನೋತಿ ದ್ವೇಷ್ಯತಾಂ ಚೈವ ಲೋಕಾತ್ಸ್ವಜನತಸ್ತಥಾ ॥೧೮॥**

ಸರ್ವದಾ ಕೋಪಿಷ್ಠನಾಗಿರತಕ್ಕವನು ಮಿತ್ರರೊಡನೆಯೂ ವಿರೋಧವನ್ನು ಕಟ್ಟಿಕೊಳ್ಳುತ್ತಾನೆ. ಅವನ ಈ ಕೋಪದ ಕಾರಣದಿಂದಾಗಿ ಇತರರೂ ಮತ್ತು ಸ್ವಜನರೂ ಕೋಪಿಷ್ಠನನ್ನು ದ್ವೇಷಿಸುತ್ತಾರೆ.

**ಸೋಽವಮಾನಾದರ್ಥಹಾನಿಮುಪಾಲಮ್ಭಮನಾದರಮ್ ।**
**ಸಂತಾಪದ್ವೇಷಮೋಹಾಂಶ್ಚ ಶತ್ರೂಂಶ್ಚ ಲಭತೇ ನರಃ ॥೧೯॥**

ಯಾವಾತನು ಸರ್ವದಾ ಕೋಪಿಷ್ಠನಾಗಿದ್ದುಕೊಂಡು ತನ್ನ ಪರಾಕ್ರಮ

ದಿಂದ ಮತ್ತೊಬ್ಬರಿಗೆ ಅಪಮಾನವನ್ನು ಮಾಡಲು ಪ್ರಯತ್ನಿಸುವನೋ ಅವನಿಗೆ ಅರ್ಥಹಾನಿಯಾಗುತ್ತದೆ. ಎಲ್ಲರಿಂದಲೂ ತಿರಸ್ಕೃತನಾಗುತ್ತಾನೆ. ಅಂತಹವನನ್ನು ಯಾರೂ ಆದರಿಸುವುದಿಲ್ಲ. ಇದರಿಂದವನಿಗೆ ಸಂತಾಪ ವುಂಟಾಗುವುದಲ್ಲದೇ ಬೇರೆಯವರ ಮೇಲಿನ ದ್ವೇಷವೂ ಹೆಚ್ಚುತ್ತಲೇ ಹೋಗುತ್ತದೆ. ಅಂತಹವನಿಗೆ ಹೊಸ-ಹೊಸ ಶತ್ರುಗಳೂ ಹುಟ್ಟಿಕೊಳ್ಳುತ್ತಲೇ ಇರುತ್ತಾರೆ.

**ಕ್ರೋಧಾದ್ದಣ್ಡಾನ್ಮನುಷ್ಯೇಷು ವಿವಿಧಾನ್ಪುರುಷೋಽನಯಾತ್ ।**
**ಭ್ರಶ್ಯತೇ ಶೀಘ್ರಮೈಶ್ವರ್ಯಾತ್ಪ್ರಾಣೇಭ್ಯಃ ಸ್ವಜನಾದಪಿ ॥೨೦॥**

ಕೋಪಾವಿಷ್ಟನಾದ ಮನುಷ್ಯನು ತನಗೆ ಸಂಬಂಧಿಸಿದ ಜನರ ಮೇಲೆ ಕಾರಣವಿಲ್ಲದೆ ಅಥವಾ ಅಲ್ಪ-ಸ್ವಲ್ಪ ಕಾರಣಗಳಿಗಾಗಿ ಕೋಪಗೊಂಡು ಅವರನ್ನು ದಂಡಿಸುತ್ತಾನೆ. ಹೀಗೆ ಮಾಡುವುದರಿಂದವನು ಎಲ್ಲ ಜನರ ವಿರೋಧಿಯಾಗಿ ಐಶ್ವರ್ಯವನ್ನೂ ಕಳೆದುಕೊಳ್ಳುತ್ತಾನೆ. ಅವನ ಕ್ರೌರ್ಯವು ಹಾಗೆಯೇ ಮುಂದುವರಿದರೆ ಪ್ರಾಣಗಳನ್ನೂ ಕಳೆದುಕೊಳ್ಳಬೇಕಾಗುತ್ತದೆ.

**ಯೋಪಕರ್ತೄಂಶ್ಚ ಹರ್ತೄಂಶ್ಚ ತೇಜಸೈವೋಪಗಚ್ಛತಿ ।**
**ತಸ್ಮಾದುದ್ವಿಜತೇ ಲೋಕಃ ಸರ್ಪಾದ್ವೇಶ್ಮಗತಾದಿವ ॥೨೧॥**

ಯಾವನು ಉಪಕಾರವನ್ನು ಮಾಡಿದವರ ವಿಷಯದಲ್ಲಿಯೂ ಮತ್ತು ಅಪಕಾರಿಗಳಲ್ಲಿಯೂ ತೇಜಸ್ಸಿನಿಂದಲೇ (ಕೋಪದಿಂದಲೇ) ವರ್ತಿಸುತ್ತಾ ನೆಯೋ–ಅಂತಹವನ ವಿಷಯದಲ್ಲಿ ಮನೆಯೊಳಗೆ ಸೇರಿಕೊಂಡಿರುವ ಸರ್ಪಕ್ಕೆ ಹೆದರುವಂತೆ–ಜನರು ಭಯಪಡುತ್ತಾರೆ.

**ಯಸ್ಮಾದುದ್ವಿಜತೇ ಲೋಕಃ ಕಥಂ ತಸ್ಯ ಭವೋ ಭವೇತ್ ।**
**ಅನ್ತರಂ ತಸ್ಯ ದೃಷ್ಟ್ವೈವ ಲೋಕೋ ವಿಕುರುತೇ ಧ್ರುವಮ್ ॥೨೨॥**

ಯಾವನ ವಿಷಯದಲ್ಲಿ ಲೋಕವು (ಜನತೆಯು) ಉದ್ವಿಗ್ನವಾಗಿರು ವುದೋ–ಅಂತಹವನಿಗೆ ಐಶ್ವರ್ಯವು ಹೇಗೆತಾನೇ ಪ್ರಾಪ್ತವಾದೀತು? ಜನರು ಸಮಯಕಾಯುತ್ತಿದ್ದು ಅಂತಹವನನ್ನು ನಾಶಮಾಡುತ್ತಾರೆ.

**ತಸ್ಮಾನ್ನಾತ್ಯುತ್ಸೃಜೇತ್ತೇಜೋ ನ ಚ ನಿತ್ಯಂ ಮೃದುರ್ಭವೇತ್ ।**
**ಕಾಲೇ ಕಾಲೇ ತು ಸಮ್ಪ್ರಾಪ್ತೇ ಮೃದುಸ್ತೀಕ್ಷ್ಣೋಽಪಿ ವಾ ಭವೇತ್ ॥**

ಮಗು! ಆದುದರಿಂದ ನಾನು ಹಿಂದೆ ಹೇಳಿದಂತೆ ಮನುಷ್ಯನು ಅತಿಯಾಗಿ ಕೋಪವನ್ನೂ ಮಾಡಬಾರದು ; ಯಾವಾಗಲೂ ಮೃದುವೂ ಆಗಬಾರದು. ಯಾವ ಕಾಲದಲ್ಲಿ ಕೋಪಿಸಿಕೊಳ್ಳಬೇಕು ಮತ್ತು ಯಾವ ಕಾಲದಲ್ಲಿ ಸಹನೆಯನ್ನು ತಂದುಕೊಳ್ಳಬೇಕು–ಎಂಬುದನ್ನು ಸಂಪೂರ್ಣವಾಗಿ ವಿವೇಚಿಸಿ ಅದರಂತೆ ನಡೆದುಕೊಳ್ಳಬೇಕು.

**ಕಾಲೇ ಮೃದುರ್ಯೋ ಭವತಿ ಕಾಲೇ ಭವತಿ ದಾರುಣಃ ।**
**ಸ ವೈ ಸುಖಮವಾಪ್ನೋತಿ ಲೋಕೇಽಮುಷ್ಮಿನ್ನಿಹೈವ ಚ ॥೨೪॥**

ಸಮಯ-ಸಂದರ್ಭಗಳನ್ನು ನೋಡಿ ಮೃದುತ್ವವನ್ನೂ, ಕೋಪವನ್ನೂ ಪ್ರದರ್ಶಿಸುವವನು ಇಹದಲ್ಲಿಯೂ ಸುಖವಾಗಿರುವನಲ್ಲದೇ ಪರದಲ್ಲಿ ಸದ್ಗತಿಯನ್ನೂ ಹೊಂದುವನು.

ಮಗು! ಮಾನವನಾದವನು ಯಾವ ಸಮಯದಲ್ಲಿ ಕ್ಷಮಾವಂತನಾಗ ಬೇಕೆಂಬ ವಿಷಯದಲ್ಲಿ ಹಿರಿಯರು ಹೇಳಿರುವ ಉಕ್ತಿಗಳನ್ನು ನಿನಗೂ ಹೇಳು ವೆನು, ಕೇಳು. ಜ್ಞಾನಿಗಳಾದವರ ಈ ಪ್ರವಚನವು ನಿಶ್ಚಯವಾಗಿಯೂ ಅನುಸರಣೀಯವಾಗಿದೆ.

**ಪೂರ್ವೋಪಕಾರೀ ಯಸ್ತೇ ಸ್ಯಾದಪರಾಧೇ ಗರೀಯಸಿ ।**
**ಉಪಕಾರೇಣ ತತ್ತಸ್ಯ ಕ್ಷನ್ತವ್ಯಮಪರಾಧಿನಃ ॥೨೬॥**

ಒಂದು ಸಮಯದಲ್ಲಿ ನಿನಗೊಬ್ಬನು ಉಪಕರಿಸಿರುತ್ತಾನೆ. ಅದೇ ಮನುಷ್ಯನು ಮತ್ತೊಂದು ಸಮಯದಲ್ಲಿ ಕಾರಣಾಂತರದಿಂದ ನಿನಗೆ ದೊಡ್ಡ ಅಪರಾಧವನ್ನೆಸಗುತ್ತಾನೆ. ಅಂತಹ ಸಮಯದಲ್ಲಿ ಅವನು ನಿನಗೆ ಹಿಂದೆ ಮಾಡಿದ ಉಪಕಾರವನ್ನು ನೆನೆದು ಅವನನ್ನು ಕ್ಷಮಿಸಬೇಕು.

**ಅಬುದ್ಧಿಮಾಶ್ರಿತಾನಾಂ ತು ಕ್ಷನ್ತವ್ಯಮಪರಾಧಿನಾಮ್ ।**
**ನ ಹಿ ಸರ್ವತ್ರ ಪಾಣ್ಡಿತ್ಯಂ ಸುಲಭಂ ಪುರುಷೇಣ ವೈ ॥೨೭॥**

ತಿಳಿವಳಿಕೆಯಿಲ್ಲದವನು ತಿಳಿಯದೇ ಮಾಡಿದ ಅಪರಾಧವನ್ನೂ ಕ್ಷಮಿಸಬೇಕು. ಏಕೆಂದರೆ : ಎಲ್ಲ ವಿಷಯಗಳಲ್ಲಿಯೂ ತಿಳಿವಳಿಕೆಯಾಗಲೀ, ಪಾಂಡಿತ್ಯವಾಗಲೀ, ವಿವೇಚನೆಯಾಗಲೀ–ಜನಸಾಮಾನ್ಯಕ್ಕೆ ಇರಲಾರದು.

**ಅಥ ಚೇದ್ಬುದ್ಧಿಜಂ ಕೃತ್ವಾ ಬ್ರೂಯುಸ್ತೇ ತದಬುದ್ಧಿಜಮ್ ।**
**ಪಾಪಾನ್ಸ್ವಲ್ಪೇಽಪಿ ತಾನ್ಹನ್ಯಾದಪರಾಧೇ ತಥಾನೃಜೂನ್ ॥೨೮॥**

ತಿಳಿವಳಿಕೆಯಿದ್ದೂ ಅಪರಾಧಮಾಡಿ ತಿಳಿಯದೇ ತಪ್ಪುಮಾಡಿದೆನೆಂದು ವಾದಿಸುವವನನ್ನು ಅವನು ಮಾಡಿದ ಅಪರಾಧವು ಅಲ್ಪವಾಗಿದ್ದರೂ ಕಠಿನವಾಗಿ ಶಿಕ್ಷಿಸಬೇಕು. ಅಂತಹ ದುರಾತ್ಮರನ್ನು ಖಂಡಿತವಾಗಿಯೂ ಕ್ಷಮಿಸಬಾರದು.

**ಸರ್ವಸ್ಯೈಕೋಽಪರಾಧಸ್ತೇ ಕ್ಷನ್ತವ್ಯಃ ಪ್ರಾಣಿನೋ ಭವೇತ್ ।**
**ದ್ವಿತೀಯೇ ಸತಿ ವಧ್ಯಸ್ತು ಸ್ವಲ್ಪೇಪ್ಯಪಕೃತೇ ಭವೇತ್ ॥೨೯॥**

ಯಾವನೇ ಆಗಿರಲಿ–ಮೊದಲನೆಯ ಸಲ ಮಾಡಿದ ಅಪರಾಧವನ್ನು ಕ್ಷಮಿಸಬಹುದು. ಅದೇ ಮನುಷ್ಯನು ಮಾಡುವ ಎರಡನೆಯ ಅಪರಾಧವು ಅಲ್ಪವಾಗಿದ್ದರೂ ಅವನನ್ನು ಶಿಕ್ಷಿಸಬೇಕು.

**ಅಜಾನತಾ ಭವೇತ್ಕಶ್ಚಿದಪರಾಧಃ ಕೃತೋ ಯದಿ ।**
**ಕ್ಷನ್ತವ್ಯಮೇವ ತಸ್ಯಾಹುಃ ಸುಪರೀಕ್ಷ್ಯ ಪರೀಕ್ಷಯಾ ॥೩೦॥**

ತಿಳಿಯದೇ ಅಥವಾ ಇತರರ ಪ್ರೇರಣೆಯಿಂದ ಒಬ್ಬ ಮನುಷ್ಯನು ಅಪರಾಧಮಾಡುವುದೂ ಉಂಟು. ಅಂತಹ ಸಮಯಗಳಲ್ಲಿ ನೀತಿಶಾಸ್ತ್ರ ವಿಶಾರದರಾಗಿರುವವರು ಅವನ ಹೇಳಿಕೆಯನ್ನು ಕೂಲಂಕಷವಾಗಿ ವಿಮರ್ಶಿಸಿ ಮತ್ತು ಅವನು ಹೇಳುವ ಸಾಕ್ಷಿಗಳನ್ನೂ ವಿಚಾರಣೆಮಾಡಿ, ಅವನು ಮಾಡಿರುವ ಅಪರಾಧವು ಅಜ್ಞಾನದಿಂದ ಅಥವಾ ಇತರರ ಪ್ರೇರಣೆಯಿಂದ ನಡೆದಿದೆಯೆಂಬುದು ಸಿದ್ಧವಾದಲ್ಲಿ ಅಂತಹ ಅಪರಾಧವೂ ಕ್ಷಮಾರ್ಹವಾಗುವುದು.

**ಮೃದುನಾ ದಾರುಣಂ ಹನ್ತಿ ಮೃದುನಾ ಹನ್ತ್ಯದಾರುಣಮ್ ।**
**ನಾಸಾಧ್ಯಂ ಮೃದುನಾ ಕಿಂಚಿತ್ತಸ್ಮಾತ್ತೀವ್ರತರಂ ಮೃದು ॥೩೧॥**

ಸಾಮ, ದಾನ, ಭೇದ, ದಂಡ–ಈ ನಾಲ್ಕು ಉಪಾಯಗಳಲ್ಲಿ ನಿಶ್ಚಯ ವಾಗಿಯೂ ಮೊದಲನೆಯದಾದ ಸಾಮೋಪಾಯವು ಅಥವಾ ಮೃದುತ್ವವು ಹೆಚ್ಚು ಫಲವನ್ನುಂಟುಮಾಡುವುದು. ಸಾಮೋಪಾಯವನ್ನು ವಿವೇಚನೆ

ಯಿಂದ ಪ್ರಯೋಗಿಸಿದಲ್ಲಿ ಭಯಂಕರನಾದ ಶತ್ರುವನ್ನೂ ಜಯಿಸಬಹುದು. ಸಾಮೋಪಾಯದಿಂದ ಸಾಧನೆಯಾಗದೇ ಇರುವ ಕಾರ್ಯವೇ ಇಲ್ಲ. ಕಡೆಯದಾಗಿ ಹೇಳುವುದಾದರೆ : ಮೃದುತ್ವದಲ್ಲಿ–ತೋರಿಕೆಯ ಶಕ್ತಿಗಿಂತಲೂ ಹೆಚ್ಚಿನ ಅಂತಃಶಕ್ತಿಯಿರುವುದು.

**ದೇಶಕಾಲೌ ತು ಸಮ್ಪ್ರೇಕ್ಷ್ಯ ಬಲಾಬಲಮಥಾತ್ಮನಃ ।**
**ನಾದೇಶಕಾಲೇ ಕಿಂಚಿತ್ಸ್ಯಾದ್ದೇಶಕಾಲೌ ಪ್ರತೀಕ್ಷತಾಮ್ ।**
**ತಥಾ ಲೋಕಭಯಾಚ್ಚೈವ ಕ್ಷನ್ತವ್ಯಮಪರಾಧಿನಃ ॥೩೨॥**

ಸಾಮ ಅಥವಾ ದಂಡೋಪಾಯಗಳನ್ನು ಪ್ರಯೋಗಿಸುವಾಗ ಮಾನವನು ಕಾಲ-ದೇಶ-ವರ್ತಮಾನಗಳನ್ನೂ, ತನ್ನಲ್ಲಿರುವ ಬಲಾಬಲಗಳನ್ನೂ ವಿವೇಚಿಸಬೇಕು. ವಿಹಿತವಲ್ಲದ ಸ್ಥಳ ಮತ್ತು ಅನುಪಯುಕ್ತಕಾಲಗಳಲ್ಲಿ ಮಾಡುವ ಯಾವ ಕೆಲಸಗಳೂ ಫಲಕಾರಿಯಾಗುವುದಿಲ್ಲ. ಆದುದರಿಂದ, ಮಗು! ಕಾರ್ಯಸಾಧನೆಯಾಗಬೇಕಾದರೆ ದೇಶ-ಕಾಲಗಳ ನಿರೀಕ್ಷೆಮಾಡಬೇಕು. ತಮ್ಮ ಸುತ್ತ-ಮುತ್ತಲಿನ ಜನರು ಕೋಪಿಸಿಕೊಳ್ಳುವರೆಂಬ ಭಯಕ್ಕಾಗಿಯೂ ಕೆಲವು ಸಮಯಗಳಲ್ಲಿ ಅಪರಾಧಿಗಳನ್ನು ಕ್ಷಮಿಸಬೇಕಾಗುವುದು.

ಈ ಮೇಲೆ ಹೇಳಿದ ಸಮಯಗಳು ಕ್ಷಮಾಗುಣಕ್ಕೆ ಅಥವಾ ಸಾಮೋಪಾಯಪ್ರಯೋಗಕ್ಕೆ ಯೋಗ್ಯವೆನಿಸಿದ ಸಮಯಗಳಾಗಿವೆ. ಉಳಿದ ಸಮಯಗಳಲ್ಲಿ ಪರಾಕ್ರಮವನ್ನು ಅಥವಾ ದಂಡೋಪಾಯವನ್ನು ಪ್ರಯೋಗಿಸಬಹುದು.”

ಯುಧಿಷ್ಠಿರ! ಹೀಗೆ ಪ್ರಹ್ಲಾದನು ಬಲಿಚಕ್ರವರ್ತಿಗೆ ಹೇಳಿದನು. ಅದರಂತೆ ನಿನ್ನ ಬಲಪ್ರಯೋಗಕ್ಕೆ ಇದು ಸಕಾಲವಾಗಿದೆಯೆಂದು ನಾನು ಭಾವಿಸುತ್ತೇನೆ. ದುರಾಶೆಯುಳ್ಳ ಧೃತರಾಷ್ಟ್ರನ ಮಕ್ಕಳು ನಮ್ಮನ್ನು ಮೊದಲಿನಿಂದಲೂ ತೊಂದರೆಪಡಿಸುತ್ತಲೇ ಇದ್ದಾರೆ. ಅವರು ಮಾಡಿರುವ ಅಪರಾಧಗಳು ಅಗಣಿತವಾಗಿವೆ. ಆದುದರಿಂದ ಈ ಸಮಯದಲ್ಲಿ ಆ ಕ್ರೂರಿಗಳನ್ನು ಕ್ಷಮಿಸಬೇಕಾದ ಕಾರಣವಿಲ್ಲ. ನಿನ್ನ ಪರಾಕ್ರಮವನ್ನು ತೋರಿಸಲು ಇದು ಸಕಾಲವಾಗಿರುವುದು. ಆದುದರಿಂದ ನೀನು ಈಗಲೇ ಅವರನ್ನು ಶಿಕ್ಷಿಸಲು ಅರ್ಹನಾಗಿರುವೆ.

**ಮೃದುರ್ಭವತ್ಯವಜ್ಞಾತಸ್ತೀಕ್ಷ್ಣಾದುದ್ವಿಜತೇ ಜನಃ ।**
**ಕಾಲೇ ಪ್ರಾಪ್ತೇ ದ್ವಯಂ ಚೈತದ್ಯೋ ವೇದ ಸ ಮಹೀಪತಿಃ ॥೩೭॥**

ಕೇವಲ ಕ್ಷಮಾಗುಣವುಳ್ಳವನು ಈ ಪ್ರಪಂಚದಲ್ಲಿ ಅನಾದರಣೆಯನ್ನು ಹೊಂದುತ್ತಾನೆ. ಆದುದರಿಂದ ರಾಜನಾದವನಿಗೆ ಉಗ್ರತೆಯೂ ಇರಬೇಕು ; ಕ್ಷಮೆಯೂ ಇರಬೇಕು ಮತ್ತು ಈ ಎರಡು ಗುಣಗಳನ್ನೂ ಸಮಯವರಿತು ಪ್ರಯೋಗಿಸುವ ವಿವೇಚನೆಯೂ ಇರಬೇಕು. ಅಂತಹವನೇ ಉತ್ತಮಪ್ರಭು ವೆನಿಸುವನು."

೨೮ನೆಯ ಅಧ್ಯಾಯವು ಮುಗಿಯಿತು.

೨೯ನೆಯ ಅಧ್ಯಾಯ ಅರ್ಜುನಾಭಿಗಮನಪರ್ವ (ಮುಂದುವರಿದಿದೆ.)

## ಯುಧಿಷ್ಠಿರನಿಂದ ಕ್ರೋಧದ ನಿಂದನೆ : ಕ್ಷಮಾಗುಣದ ಪ್ರಶಂಸೆ

ಪಾರಿಕ್ಷಿತ! ದ್ರೌಪದಿಯ ಮಾತುಗಳನ್ನು ಸಾವಧಾನವಾಗಿ ಕೇಳಿದ ಯುಧಿಷ್ಠಿರನು ಕ್ಷಮಾಗುಣವೇ ಶ್ರೇಷ್ಠವಾದ ಗುಣವೆಂದೂ, ಕೋಪವು ಅನರ್ಥಕಾರಿಯೆಂದೂ ಯುಕ್ತಿಯುಕ್ತವಾಗಿ ಉತ್ತರಿಸಿದನು :

**ಕ್ರೋಧೋ ಹನ್ತಾ ಮನುಷ್ಯಾಣಾಂ ಕ್ರೋಧೋ ಭಾವಯಿತಾ ಪುನಃ ।**
**ಇತಿ ವಿದ್ಧಿ ಮಹಾಪ್ರಾಜ್ಞೇ ಕ್ರೋಧಮೂಲೌ ಭವಾಭವೌ ॥೧॥**

"ಮಹಾಪ್ರಾಜ್ಞಳೇ! ಕೋಪವು ಮನುಷ್ಯನನ್ನು ಕೊಂದೇಬಿಡುವುದು. ಕ್ರೋಧವನ್ನು ಜಯಿಸುವುದರಿಂದ ಮನುಷ್ಯನಿಗೆ ಶ್ರೇಯಸ್ಸುಂಟಾಗುತ್ತದೆ. ಉನ್ನತಿ ಮತ್ತು ಅವನತಿಗಳಿಗೆ ಕ್ರೋಧವೇ ಮುಖ್ಯಕಾರಣವಾಗಿರುತ್ತದೆ.

ಯಾವನು ಕೋಪವನ್ನು ಅಡಗಿಸಿಕೊಳ್ಳುತ್ತಾನೆಯೋ–ಅವನು ಅಭಿ ವೃದ್ಧಿಯನ್ನು ಹೊಂದುತ್ತಾನೆ. ಅದಕ್ಕೆ ಬದಲಾಗಿ ಯಾವನು ಕೋಪವನ್ನು ಅಡಗಿಸಲು ಅಸಮರ್ಥನೋ–ಅಂತಹವನ ವಿನಾಶಕ್ಕೆ ಪರಮದಾರುಣವಾದ ಕೋಪವೇ ಕಾರಣವಾಗುತ್ತದೆ.

**ಕ್ರೋಧಮೂಲೋ ವಿನಾಶೋ ಹಿ ಪ್ರಜಾನಾಮಿಹ ದೃಶ್ಯತೇ ।**
**ತತ್ಕಥಂ ಮಾದೃಶಃ ಕ್ರೋಧಮುತ್ಸೃಜೇಲ್ಲೋಕನಾಶನಮ್ ॥೩॥**

ಈ ಪ್ರಪಂಚದಲ್ಲಿ ಪ್ರಜೆಗಳ ವಿನಾಶಕ್ಕೆ ಕೋಪವೇ ಮೂಲಕಾರಣ ವಾಗಿರುತ್ತದೆ. ಪ್ರಪಂಚದ ವಿನಾಶಕ್ಕೇ ಕಾರಣವಾಗಿರುವ ಕೋಪವನ್ನು ನನ್ನಂತಹವನು ಮತ್ತೊಬ್ಬರ ಮೇಲೆ ಹೇಗೆ ಪ್ರಯೋಗಿಸಿಯಾನು?

**ಕ್ರುದ್ಧಃ ಪಾಪಂ ನರಃ ಕುರ್ಯಾತ್ಕ್ರುದ್ಧೋ ಹನ್ಯಾದ್ಗುರೂನಪಿ ।**
**ಕ್ರುದ್ಧಃ ಪರುಷಯಾ ವಾಚಾ ಶ್ರೇಯಸೋಽಪ್ಯವಮನ್ಯತೇ ॥೪॥**

ಕೋಪಿಷ್ಠನಾದ ಮನುಷ್ಯನು ವಿವೇಚನಾರಹಿತನಾಗಿ ಅನೇಕ ಪಾಪ ಕೃತ್ಯಗಳನ್ನು ಮಾಡುತ್ತಾನೆ. ಕೋಪಗೊಂಡವನು ತನ್ನ ಗುರುಜನರನ್ನೂ ಸಂಹರಿಸಿಬಿಡುತ್ತಾನೆ. (ಕಠಿನೋಕ್ತಿಗಳಿಂದ ಮನನೋಯಿಸುತ್ತಾನೆ.) ಕೋಪಿಷ್ಠನಾದವನಿಗೆ ಕಾರ್ಯಾಕಾರ್ಯಗಳ ವಿವೇಚನೆಯೇ ಇರುವುದಿಲ್ಲ.

**ವಾಚ್ಯಾವಾಚ್ಯೇ ಹಿ ಕುಪಿತೋ ನ ಪ್ರಜಾನಾತಿ ಕರ್ಹಿಚಿತ್ ।**
**ನಾಕಾರ್ಯಮಸ್ತಿ ಕ್ರುದ್ಧಸ್ಯ ನಾವಾಚ್ಯಂ ವಿದ್ಯತೇ ತಥಾ ॥೫॥**

ಕೋಪಿಷ್ಠನಾದವನಿಗೆ ಈ ಮಾತುಗಳನ್ನಾಡಬಹುದು ; ಈ ಮಾತು ಗಳನ್ನಾಡಬಾರದು–ಎಂಬ ಪರಿವೆಯೇ ಇರುವುದಿಲ್ಲ. ಕೋಪಗೊಂಡವನು ಮಾಡದ ಕೆಟ್ಟ ಕೆಲಸಗಳಿಲ್ಲ ; ಆಡದ ಕೆಟ್ಟ ಮಾತುಗಳಿಲ್ಲ.

**ಹಿಂಸ್ಯಾತ್ಕ್ರೋಧಾದವಧ್ಯಾಂಸ್ತು ವಧ್ಯಾನ್ಸಮ್ಪೂಜಯೀತ ಚ ।**
**ಆತ್ಮಾನಮಪಿ ಚ ಕ್ರುದ್ಧಃ ಪ್ರೇಷಯೇದ್ಯಮಸಾದನಮ್ ॥೬॥**

ಕೋಪಗೊಂಡವನು ವಧೆಗೆ ಅನರ್ಹನಾದವನನ್ನು ವಧಿಸುತ್ತಾನೆ. ವಧೆಗೆ ಅರ್ಹನಾದವನನ್ನು ಪೂಜಿಸುತ್ತಾನೆ. ಕೋಪವು ಮಿತಿಮೀರಿದ ಸಮಯದಲ್ಲವನು ಆತ್ಮಹತ್ಯೆಯನ್ನೂ ಮಾಡಿಕೊಳ್ಳುತ್ತಾನೆ.

**ಏತಾನ್ದೋಷಾನ್ಪ್ರಪಶ್ಯದ್ಭಿರ್ಜಿತಃ ಕ್ರೋಧೋ ಮನೀಷಿಭಿಃ ।**
**ಇಚ್ಛದ್ಭಿಃ ಪರಮಂ ಶ್ರೇಯ ಇಹ ಚಾಮುತ್ರ ಚೋತ್ತಮಮ್ ॥೭॥**

ಕೋಪದಲ್ಲಿರುವ ಈ ಮಹಾದೋಷಗಳನ್ನು ಕಂಡು, ಐಹಿಕ ಮತ್ತು ಆಮುಷ್ಮಿಕಫಲಾಪೇಕ್ಷಿಗಳಾದ ವಿದ್ವಾಂಸರು ಕೋಪವನ್ನು ಸರ್ವಪ್ರಯತ್ನ ದಿಂದಲೂ ವರ್ಜಿಸುತ್ತಾರೆ.

**ತಂ ಕ್ರೋಧಂ ವರ್ಜಿತಂ ಧೀರೈಃ ಕಥಮಸ್ಮದ್ವಿಧಶ್ಚರೇತ್ ।**
**ಏತದ್ದ್ರೌಪದಿ ಸಂಧಾಯ ನ ಮೇ ಮನ್ಯುಃ ಪ್ರವರ್ಧತೇ ॥೮॥**

ಕೋಪವನ್ನು ವರ್ಜಿಸಿರುವವರನ್ನು ದುರ್ಬಲರೆಂದು ಭಾವಿಸಬೇಡ. ದ್ರೌಪದಿ! ಕೋಪವನ್ನು ತ್ಯಜಿಸಲು ಧೀರರಿಂದ ಮಾತ್ರವೇ ಸಾಧ್ಯವಾದೀತು. ಹೀಗಿರುವಾಗ ನನ್ನಂತಹವನು ಕೋಪಕ್ಕೆ ಆಶ್ರಯವನ್ನೀಯಲು ಸಾಧ್ಯ ವಾದೀತೇ? ಈ ವಿಷಯಗಳ ಸಮಾಲೋಚನೆಯಿಂದಲೇ ಕೋಪವು ನನ್ನಲ್ಲಿ ಉಲ್ಬಣಿಸುವುದಿಲ್ಲ.

**ಆತ್ಮಾನಂ ಚ ಪರಾಂಶ್ಚೈವ ತ್ರಾಯತೇ ಮಹತೋ ಭಯಾತ್ ।**
**ಕ್ರುಧ್ಯನ್ತಮಪ್ರತಿಕ್ರುಧ್ಯನ್ದ್ವಯೋರೇಷ ಚಿಕಿತ್ಸಕಃ ॥೯॥**

ದ್ರೌಪದಿ! ಕೋಪಗೊಂಡಿರುವ ಮನುಷ್ಯನ ಎದುರಾಳಿಯು ಕೋಪ ದಿಂದ ವರ್ತಿಸಬಾರದು. ಹೀಗೆ ಮಾಡುವುದರಿಂದ ಕೋಪಗೊಂಡವನು ಮತ್ತು ಎದುರಾಳಿ ಇಬ್ಬರೂ ದೊಡ್ಡ ಅಪಾಯದಿಂದ ಪಾರಾಗುತ್ತಾರೆ. ಅಂತಹ ಸಮಯಗಳಲ್ಲಿ ಕೋಪಗೊಳ್ಳದೇ ಕ್ಷಮೆಯಿಂದಿರುವವನೇ ಇಬ್ಬರಿಗೂ ವೈದ್ಯನಂತಿರುವನು. (ಪ್ರತಿಗೆ ಪ್ರತಿಮಾಡಿದರೆ ಇಬ್ಬರೂ ನಾಶವಾಗುವರು. ಪ್ರತಿಗೆ ಪ್ರತಿ ಮಾಡದಿದ್ದರೆ ಕೋಪದಿಂದಿರುವವನು ಶಾಂತನಾಗಲೇಬೇಕು. ಆಗ ಇಬ್ಬರೂ ಅಪಾಯದಿಂದ ಪಾರಾಗುವರು–ಎಂಬುದು ಧರ್ಮಜನ ಅಭಿಪ್ರಾಯ.)

**ಮೂಢೋ ಯದಿ ಕ್ಲಿಶ್ಯಮಾನಃ ಕ್ರುಧ್ಯತೇಽಶಕ್ತಿಮಾನ್ನರಃ ।**
**ಬಲೀಯಸಾಂ ಮನುಷ್ಯಾಣಾಂ ತ್ಯಜತ್ಯಾತ್ಮಾನಮಾತ್ಮನಾ ॥೧೦॥**

ಮತ್ತೊಂದು ದೃಷ್ಟಾಂತವನ್ನು ಹೇಳುವೆನು, ಕೇಳು : ದುರ್ಬಲನಾದ ಒಬ್ಬನ ಮೇಲೆ ಪ್ರಬಲನಾದವನು ಕೋಪಿಸಿಕೊಂಡು ತೊಂದರೆಮಾಡಲು ಬಂದ ಸಮಯದಲ್ಲಿ ದುರ್ಬಲನಾದವನೂ ಕೋಪಾವೇಶದಿಂದ ಕದನಕ್ಕೆ ನಿಂತರೆ ದುರ್ಬಲನಾದವನು ತನ್ನ ನಾಶಕ್ಕೆ ತಾನೇ ಕಾರಣನಾಗುತ್ತಾನೆ.

**ತಸ್ಯಾತ್ಮಾನಂ ಸನ್ತ್ಯಜತೋ ಲೋಕಾ ನಶ್ಯನ್ತ್ಯನಾತ್ಮನಃ ।**
**ತಸ್ಮಾದ್ದ್ರೌಪದ್ಯಶಕ್ತಸ್ಯ ಮನ್ಯೋರ್ನಿಯಮನಂ ಸ್ಮೃತಮ್ ॥೧೧॥**

ಬಲಾಬಲಗಳನ್ನು ವಿವೇಚಿಸದೇ ಕೋಪಾವೇಶದಿಂದ ಹೋರಾಡಿ ಅಸು

ವನ್ನು ನೀಗಿಕೊಳ್ಳುವವನಿಗೆ ಇಹ-ಪರಗಳೆರಡೂ ಇರುವುದಿಲ್ಲ. ಆದುದರಿಂದ ದುರ್ಬಲನಾದವನು ಯಾವಾಗಲೂ ಕ್ಷಮಾವಂತನಾಗಿರಬೇಕೆಂದು ಪಂಡಿತರು ಹೇಳುತ್ತಾರೆ.

**ವಿದ್ವಾಂಸ್ತಥೈವ ಯಃ ಶಕ್ತಃ ಕ್ಲಿಶ್ಯಮಾನೋ ನ ಕುಪ್ಯತಿ ।**
**ಅನಾಶಯಿತ್ವಾ ಕ್ಲೇಷ್ಟಾರಂ ಪರಲೋಕೇ ಚ ನನ್ದತಿ ॥೧೨॥**

ಅದೂ ಅಲ್ಲದೇ ವಿವೇಕಿಯಾದವನು ಶಕ್ತನಾಗಿದ್ದರೂ, ಕೋಪಿಷ್ಠನಿಂದ ತೊಂದರೆಯನ್ನು ಅನುಭವಿಸಿದರೂ–ಪ್ರತೀಕಾರಮಾಡಲು ಹೋಗ ದಿದ್ದರೆ–ಅಂತಹವನಿಗೆ ಉತ್ತಮಲೋಕಗಳು ಲಭಿಸುವುವು. ಪರಲೋಕ ದಲ್ಲಿವನು ಆನಂದಪಡುತ್ತಾನೆ.

**ತಸ್ಮಾದ್ಬಲವತಾ ಚೈವ ದುರ್ಬಲೇನ ಚ ನಿತ್ಯದಾ ।**
**ಕ್ಷನ್ತವ್ಯಂ ಪುರುಷೇಣಾಹುರಾಪತ್ಸ್ವಪಿ ವಿಜಾನತಾ ॥೧೩॥**

ಈ ಕಾರಣದಿಂದಲೇ ವಿದ್ಯಾವಂತನಾದವನು, ಬಲಿಷ್ಠನಾಗಿರಲೀ, ದುರ್ಬಲನಾಗಿರಲೀ–ತನಗೆ ತೊಂದರೆಮಾಡಿದವನನ್ನು ಆಪತ್ಕಾಲದಲ್ಲಿಯೂ ಕ್ಷಮಿಸಬೇಕು.

**ಮನ್ಯೋರ್ಹಿ ವಿಜಯಂ ಕೃಷ್ಣೇ ಪ್ರಶಂಸನ್ತೀಹ ಸಾಧವಃ ।**
**ಕ್ಷಮಾವತೋ ಜಯೋ ನಿತ್ಯಂ ಸಾಧೋರಿಹ ಸತಾಂ ಮತಮ್ ॥೧೪॥**

ಕೃಷ್ಣೇ! ಆದುದರಿಂದ ಧರ್ಮಿಷ್ಠರಾದವರು ಕೋಪವನ್ನು ಜಯಿಸಿರು ವವನನ್ನು ಪ್ರಶಂಸಿಸುತ್ತಾರೆ. ಕ್ಷಮಾವಂತರೇ ನಿಶ್ಚಯವಾಗಿಯೂ ವಿಜಯಿ ಗಳೆಂಬುದು ಸತ್ಪುರುಷರ ಅಭಿಪ್ರಾಯವಾಗಿದೆ.

**ಸತ್ಯಂ ಚಾನೃತತಃ ಶ್ರೇಯೋ ನೃಶಂಸ್ಯಾಚ್ಚಾನೃಶಂಸತಾ ।**
**ತಮೇವಂ ಬಹುದೋಷಂ ತು ಕ್ರೋಧಂ ಸಾಧುವಿವರ್ಜಿತಮ್ ।**
**ಮಾದೃಶಃ ಪ್ರಸೃಜೇತ್ಕಸ್ಮಾತ್ಸುಯೋಧನವಧಾದಪಿ ॥೧೫॥**

ಸತ್ಯವನ್ನೇ ಹೇಳುವುದು ಅನೃತಭಾಷಣಕ್ಕಿಂತಲೂ ಶ್ರೇಯಸ್ಕರ ವಾದುದು. ದುಷ್ಟವರ್ತನೆಗಿಂತಲೂ ದಯಾಳುತ್ವವು ಅಥವಾ ಸಾತ್ತ್ವಿಕ ವರ್ತನೆಯು ಶ್ರೇಯಸ್ಕರವಾದುದು. ಹೀಗಿರುವಾಗ ದುರ್ಯೋಧನನನ್ನು

ಸಂಹರಿಸುವ ಕಾರಣಕ್ಕಾಗಿಯೇ ಆದರೂ ಬಹುದೋಷದಿಂದ ಕೂಡಿರುವ, ಸತ್ಪುರುಷರಿಂದ ವಿಸರ್ಜಿಸಲ್ಪಟ್ಟ ಕೋಪಕ್ಕೆ ಹೇಗೆತಾನೇ ನಾನು ಆಶ್ರಯ ವನ್ನೀಯಲಿ? ದ್ರೌಪದಿ!

(ಹಿಂದಿನ ಪ್ರಕರಣದಲ್ಲಿ ದ್ರೌಪದಿಯು ಕ್ರೋಧವನ್ನು ಅಥವಾ ಅದ ರಿಂದ ಉತ್ಪನ್ನವಾಗುವ ಪರಾಕ್ರಮವನ್ನು ತೇಜಸ್ಸೆಂಬ ಪರ್ಯಾಯಶಬ್ದದಿಂದ ಹೇಳಿರುತ್ತಾಳೆ. ಅದೇ ತೇಜಸ್ಸೆಂಬ ಪದವನ್ನು ತೆಗೆದುಕೊಂಡು ಧರ್ಮಜನು ಆ ಪದದ ವಿವರಣೆಯನ್ನು ಕೊಡುತ್ತಾನೆ.)

**ತೇಜಸ್ವೀತಿ ಯಮಾಹುರ್ವೈ ಪಣ್ಡಿತಾ ದೀರ್ಘದರ್ಶಿನಃ ।**
**ನ ಕ್ರೋಧೋऽಭ್ಯನ್ತರಸ್ತಸ್ಯ ಭವತೀತಿ ವಿನಿಶ್ಚಿತಮ್ ॥೧೬॥**

ಶುಭಾಂಗಿ! ಯಾವನು ಅಂತರಂಗದಲ್ಲಿ ಕ್ರೋಧಕ್ಕೆ ಆಸ್ಪದವಿಲ್ಲದಂತೆ ಜಿತಕ್ರೋಧನಾಗಿರುವನೋ–ಅಂತಹವನನ್ನು ಮಾತ್ರವೇ ತತ್ತ್ವದರ್ಶಿಗಳಾದ ವಿದ್ವಾಂಸರು 'ತೇಜಸ್ವೀ'–ಎಂದು ಕರೆಯುತ್ತಾರೆ.

**ಯಸ್ತು ಕ್ರೋಧಂ ಸಮುತ್ಪನ್ನಂ ಪ್ರಜ್ಞಯಾ ಪ್ರತಿಬಾಧತೇ ।**
**ತೇಜಸ್ವಿನಂ ತಂ ವಿದ್ವಾಂಸೋ ಮನ್ಯನ್ತೇ ತತ್ತ್ವದರ್ಶಿನಃ ॥೧೭॥**

ಯಾವಾತನು ಕೋಪವು ಉಲ್ಬಣಿಸಿದಾಗ ಪೂರ್ವಾಪರವಿವೇಚನೆ ಯಿಂದ ಅದನ್ನು ಪ್ರತಿಹತಮಾಡುವನೋ–ಅಂತಹವನನ್ನು ಮಾತ್ರವೇ ತತ್ತ್ವದರ್ಶಿಗಳಾದ ವಿದ್ವಾಂಸರು 'ತೇಜಸ್ವೀ' ಎಂದು ಕರೆಯುತ್ತಾರೆ.

**ಕ್ರುದ್ಧೋ ಹಿ ಕಾರ್ಯಂ ಸುಶ್ರೋಣಿ ನ ಯಥಾವತ್ಪ್ರಪಶ್ಯತಿ ।**
**ನಾಕಾರ್ಯಂ ನ ಚ ಮರ್ಯಾದಾಂ ನರಃ ಕ್ರುದ್ಧೋऽನುಪಶ್ಯತಿ ॥೧೮॥**

ಸುಂದರಿ! ಕೋಪಿಷ್ಠನಾದವನಿಗೆ ವಸ್ತುಗಳ ಸ್ವಭಾವಜನ್ಯವಾದ ಗುಣ ಗಳನ್ನು ತಿಳಿಯಲು ಸಾಧ್ಯವಾಗುವುದಿಲ್ಲ. ಅವನಿಗೆ ತನ್ನ ಮುಂದಿನ ಭವಿತವ್ಯದ ವಿಷಯದಲ್ಲಿಯೂ ಗಮನವಿರುವುದಿಲ್ಲ. ಕಾರ್ಯಾಕಾರ್ಯಗಳ ವಿವೇಚನೆಯೂ ಇರುವುದಿಲ್ಲ. ಸತ್ಪುರುಷರು ಸಮಯೋಚಿತವಾಗಿ ಹೇಳುವ ಹಿತೋಕ್ತಿಗಳ ವಿಷಯದಲ್ಲಿಯೂ ಅನಾದರಣೆಯಿರುತ್ತದೆ.

**ಹನ್ತ್ಯವಧ್ಯಾನಪಿ ಕ್ರುದ್ಧೋ ಗುರೂನ್ರುದ್ಧಸ್ತುದತ್ಯಪಿ ।**
**ತಸ್ಮಾತ್ತೇಜಸಿ ಕರ್ತವ್ಯಃ ಕ್ರೋಧೋ ದೂರೇ ಪ್ರತಿಷ್ಠಿತಃ ॥೧೯॥**

ಈ ಕಾರಣಗಳಿಂದಾಗಿ ಕೋಪಿಷ್ಠನು ಕೆಲವು ಸಮಯಗಳಲ್ಲಿ ಅವಧ್ಯರನ್ನೂ ವಧೆಮಾಡುವನು. ಗುರುಜನರನ್ನೂ ಕಟುವಚನಗಳಿಂದ ನೋಯಿಸುವನು. ಆದುದರಿಂದ ತೇಜಸ್ವಿಯಾದವನು ಕೋಪವನ್ನು ಬಹುದೂರದಲ್ಲಿಟ್ಟಿರಬೇಕು. ತೇಜಸ್ವಿಗಿರಬೇಕಾದ ಗುಣಗಳಾವುವೆಂಬುದನ್ನು ಹೇಳುವೆನು ಕೇಳು, ದ್ರೌಪದಿ!

**ದಾಕ್ಷ್ಯಂ ಹ್ಯಮರ್ಷಃ ಶೌರ್ಯಂ ಚ ಶೀಘ್ರತ್ವಮಿತಿ ತೇಜಸಃ ।**
**ಗುಣಾಃ ಕ್ರೋಧಾಭಿಭೂತೇನ ನ ಶಕ್ಯಾಃ ಪ್ರಾಪ್ತುಮಞ್ಜಸಾ ॥೨೦॥**

ದಕ್ಷತೆ, ಶೌರ್ಯ, ಶೀಘ್ರತ್ವ, ಹತೋಟಿಯಲ್ಲಿರುವ ಕೋಪ–ಇವು ತೇಜಸ್ವಿಗೆ ಇರಬೇಕಾದ ಗುಣಗಳು. ಕೋಪಿಷ್ಠನಾದವನ ಸಮೀಪದಲ್ಲಿಯೂ ಈ ಗುಣಗಳು ಸುಳಿಯಲಾರವು.

**ಕ್ರೋಧಂ ತ್ಯಕ್ತ್ವಾ ತು ಪುರುಷಃ ಸಮ್ಯಕ್ತೇಜೋಽಭಿಪದ್ಯತೇ ।**
**ಕಾಲಯುಕ್ತಂ ಮಹಾಪ್ರಾಜ್ಞೇ ಕ್ರುದ್ಧೈಸ್ತೇಜಃ ಸುದುಃಸಹಮ್ ॥೨೧॥**

ಕೋಪವನ್ನು ಜಯಿಸಿರುವ ತೇಜಸ್ವಿಯು ಸಮಯಗಳಲ್ಲಿ ಪರಾಕ್ರಮವನ್ನು ತೋರಲು ಸಮರ್ಥನಾಗುವನು. ಆದರೆ ಕೋಪಿಷ್ಠರಾದವರು ಸಮಯಗಳಲ್ಲಿ ಸಾಮರ್ಥ್ಯವನ್ನು ತೋರಲು ಅಸಮರ್ಥರಾಗುವರು. (ಕೋಪಿಷ್ಠರಿಗೆ ಕಾಲ-ಅಕಾಲ, ಕಾರ್ಯ-ಅಕಾರ್ಯ ಇವುಗಳ ವಿವೇಚನೆ ಅಸಾಧ್ಯ.)

**ಕ್ರೋಧಸ್ತ್ವಪಣ್ಡಿತೈಃ ಶಶ್ವತ್ತೇಜ ಇತ್ಯಭಿನಿಶ್ಚಿತಮ್ ।**
**ರಜಸ್ತು ಲೋಕನಾಶಾಯ ವಿಹಿತಂ ಮಾನುಷಂ ಪ್ರತಿ ॥೨೨॥**

ಕ್ರೋಧವೇ ತೇಜಸ್ಸೆಂದು ಅಪಂಡಿತರಾದವರು ಮಾತ್ರವೇ ನಿಶ್ಚಯಿಸುತ್ತಾರೆ. ರಜೋಗುಣಪ್ರಧಾನವಾದ ಕ್ರೋಧವು ಲೋಕದ ವಿನಾಶಕ್ಕೆ ಕಾರಣವಾಗುವುದೆಂಬುದು ನಿಶ್ಚಯ.

**ತಸ್ಮಾಚ್ಛಶ್ವತ್ತ್ಯಜೇತ್ಕ್ರೋಧಂ ಪುರುಷಃ ಸಮ್ಯಗಾಚರನ್ ।**
**ಶ್ರೇಯಾನ್ಸ್ವಧರ್ಮಾನಪಗೋ ನ ಕ್ರುದ್ಧ ಇತಿ ನಿಶ್ಚಿತಮ್ ॥೨೩॥**

ಆದುದರಿಂದ ಸತ್ಪುರುಷನಾದವನು ಕ್ರೋಧವನ್ನು ವರ್ಜಿಸಲೇಬೇಕು.

ಸ್ವಧರ್ಮವನ್ನು ಬಿಡದಿರುವವನೇ ಶ್ರೇಯೋವಂತನು. ಕೋಪಿಷ್ಠನಲ್ಲ. (ಕ್ಷತ್ರಿಯರಾದವರು ರಜೋಗುಣಪ್ರಧಾನರೆಂಬುದು ನಿಶ್ಚಯ. ರಜೋಗುಣವನ್ನು ಅಥವಾ ಕೋಪವನ್ನು ತ್ಯಜಿಸುವುದು ಸ್ವಧರ್ಮಕ್ಕೆ ವಿಪರೀತವೆನಿಸಿದರೂ ನಾನು ಕೋಪವನ್ನು ವರ್ಜಿಸಲೇಬೇಕೆಂದೂ, ಕೋಪಿಷ್ಠನಾಗಕೂಡದೆಂದೂ ನಿಶ್ಚಯಿಸಿರುತ್ತೇನೆ.) ಇದೇ ಶ್ರೇಯಸ್ಕರವೆಂದು ನಾನು ಭಾವಿಸಿದ್ದೇನೆ.

**ಯದಿ ಸರ್ವಮಬುದ್ಧೀನಾಮತಿಕ್ರಾನ್ತಮಚೇತಸಾಮ್ ।**
**ಅತಿಕ್ರಮೋ ಮದ್ವಿಧಸ್ಯ ಕಥಂಸ್ವಿತ್ಸ್ಯಾದನಿನ್ದಿತೇ ॥೨೪॥**

ನಿರ್ದುಷ್ಟಳೇ! ಬುದ್ಧಿಹೀನರಿಂದ, ಮೂಢರಿಂದ ಕ್ಷಮಾದಿ ಸುಗುಣಗಳು ಅತಿಕ್ರಮಿಸಲ್ಪಡುತ್ತವೆ. ಅಂತಹವರ ಅನುಕರಣವನ್ನು ನನ್ನಂತಹವರು ಮಾಡುವುದು ಉಚಿತವೇ?

**ಯದಿ ನ ಸ್ಯುರ್ಮಾನುಷೇಷು ಕ್ಷಮಿಣಃ ಪೃಥಿವೀಸಮಾಃ ।**
**ನ ಸ್ಯಾತ್ಸನ್ಧಿರ್ಮನುಷ್ಯಾಣಾಂ ಕ್ರೋಧಮೂಲೋ ಹಿ ವಿಗ್ರಹಃ ॥೨೫॥**

ಭೂಮಿಗೆ ಸಮಾನವಾದ ತಾಳ್ಮೆಯುಳ್ಳ ಮನುಷ್ಯರು ಇಲ್ಲದಿದ್ದರೆ ಪ್ರಪಂಚದಲ್ಲಿ ಶಾಂತಿಯೆಂಬುದೇ ಇರುತ್ತಿರಲಿಲ್ಲ. ಎಲ್ಲೆಡೆಗಳಲ್ಲಿಯೂ ಕೋಪವೇ ಆವರಿಸಿ ಕಿತ್ತಾಟಗಳು ನಡೆಯುತ್ತಲೇ ಇರುತ್ತಿದ್ದುವು. ಪರಸ್ಪರ ಘರ್ಷಣೆಗಳಿಗೆ ಕ್ರೋಧವೇ ಮೂಲ. ಒಂದು ವೇಳೆ ಕ್ರೋಧದ ಪ್ರಭಾವವೇ ಎಲ್ಲೆಡೆಗಳಲ್ಲಿಯೂ ಇರುತ್ತದೆಯೆಂದೇ ಭಾವಿಸೋಣ. ಅದರ ಪರಿಣಾಮವೇನೆಂಬುದನ್ನಾದರೂ ಊಹಿಸಿರುವೆಯಾ? ದ್ರೌಪದಿ!

**ಅಭಿಷಕ್ತೋ ಹ್ಯಭಿಷಜೇದಾಹನ್ಯಾದ್ಗುರುಣಾ ಹತಃ ।**
**ಏವಂ ವಿನಾಶೋ ಭೂತಾನಾಮಧರ್ಮಃ ಪ್ರಥಿತೋ ಭವೇತ್ ॥೨೬॥**

**ಆಕ್ರುಷ್ಟಃ ಪುರುಷಃ ಸರ್ವಂ ಪ್ರತ್ಯಾಕ್ರೋಶೇದನನ್ತರಮ್ ।**
**ಪ್ರತಿಹನ್ಯಾದ್ಧತಶ್ಚೈವ ತಥಾ ಹಿಂಸ್ಯಾಚ್ಚ ಹಿಂಸಿತಃ ॥೨೭॥**

**ಹನ್ಯುರ್ಹಿ ಪಿತರಃ ಪುತ್ರಾನ್ಪುತ್ರಾಶ್ಚಾಪಿ ತಥಾ ಪಿತೄನ್ ।**
**ಹನ್ಯುಶ್ಚ ಪತಯೋ ಭಾರ್ಯಾಃ ಪತೀನ್ಭಾರ್ಯಾಸ್ತಥೈವ ಚ ।**
**ಏವಂ ಸಂಕುಪಿತೇ ಲೋಕೇ ಶಮಃ ಕೃಷ್ಣೇ ನ ವಿದ್ಯತೇ ॥೨೮॥**

ಕೃಷ್ಣೇ! ಕಷ್ಟಗಳನ್ನು ಅನುಭವಿಸಿದವನು ಪುನಃ ತೊಂದರೆಯನ್ನೇ ಮಾಡಲು ಹೋದರೆ, ಹಿರಿಯರು ಕಿರಿಯರನ್ನು ಶಿಕ್ಷಿಸಿದಾಗ–ಕಿರಿಯರು ಹಿರಿಯರನ್ನೂ ಶಿಕ್ಷಿಸಲು ಹೋದರೆ, ಬೈಯ್ಯುತ್ತಿರುವ ಮನುಷ್ಯನನ್ನು ಬೈಯ್ಯಿಸಿಕೊಳ್ಳುತ್ತಿರುವವನು ಕೋಪಗೊಂಡು ನಿಂದಿಸಲು ಆರಂಭಿಸಿದರೆ, ತಂದೆಯು ಶಿಕ್ಷಿಸಿದಾಗ ಮಗನೂ ತಂದೆಯನ್ನು ಶಿಕ್ಷಿಸಲು ಹೋದರೆ, ಗಂಡನು ಹೆಂಡತಿಯನ್ನೂ ಹೆಂಡತಿಯು ಗಂಡನನ್ನೂ ಕೋಪದಿಂದ ಕೊಲೆ ಮಾಡಲು ಆರಂಭಿಸಿದರೆ–ಜೀವರಾಶಿಯೆಲ್ಲಿ ಉಳಿಯುವುದು ; ದ್ರೌಪದಿ! ಜಗತ್ತು ಪಾಪಭೂಯಿಷ್ಠವಾಗುವುದು. ಕೋಪವೆಂಬ ದುಷ್ಟಶಕ್ತಿಯು ಸರ್ವತ್ರ ವ್ಯಾಪಿಸುವುದು. ಪ್ರಪಂಚದಲ್ಲಿ ಶಾಂತಿಯೆಂಬುದೇ ಇರಲಾರದು.

**ಪ್ರಜಾನಾಂ ಸಂಧಿಮೂಲಂ ಹಿ ಶಮಂ ವಿದ್ಧಿ ಶುಭಾನನೇ ॥೨೯॥**

ಶುಭಾನನೇ! ಕ್ಷಮಾಗುಣವೇ ಪ್ರಜೆಗಳ ಸಂಧಾನಕ್ಕೂ, ಪರಸ್ಪರ ವಿಶ್ವಾಸಕ್ಕೂ, ಮುಖ್ಯಕಾರಣವೂ ಮೂಲಕಾರಣವೂ ಆಗಿರುವುದು.

**ತಾಃ ಕ್ಷಿಪೇರನ್ಪ್ರಜಾಃ ಸರ್ವಾಃ ಕ್ಷಿಪ್ರಂ ದ್ರೌಪದಿ ತಾದೃಶೇ ।**
**ತಸ್ಮಾನ್ಮನ್ಯುರ್ವಿನಾಶಾಯ ಪ್ರಜಾನಾಮಭವಾಯ ಚ ॥೩೦॥**

ರಾಜರು ತಮಗಿರಬೇಕಾದ ಕ್ಷಮಾಗುಣವನ್ನು ತೊರೆದು ಕ್ರೂರಿಗಳಾದರೆ–ಪ್ರಜೆಗಳೆಲ್ಲರೂ ವಿನಾಶಹೊಂದುತ್ತಾರೆ. ಆದುದರಿಂದ ಕೋಪವೆಂಬುದು ಯಾವಾಗಲೂ ಪ್ರಜೆಗಳ ವಿನಾಶಕ್ಕೂ ಮತ್ತು ಅವನತಿಗೂ ಕಾರಣಭೂತವಾಗಿದೆ.

**ಯಸ್ಮಾತ್ತು ಲೋಕೇ ದೃಶ್ಯನ್ತೇ ಕ್ಷಮಿಣಃ ಪೃಥಿವೀಸಮಾಃ ।**
**ತಸ್ಮಾಜ್ಜನ್ಮ ಚ ಭೂತಾನಾಂ ಭವಶ್ಚ ಪ್ರತಿಪದ್ಯತೇ ॥೩೧॥**

ಪ್ರಪಂಚದಲ್ಲಿ ಪೃಥ್ವಿಗೆ ಸಮಾನವಾದ ಕ್ಷಮಾಗುಣವುಳ್ಳವರು ಇರುವುದರಿಂದಲೇ ಪ್ರಾಣಿಗಳ ಸೃಷ್ಟಿ ಮತ್ತು ರಕ್ಷಣೆಗಳು ನಡೆಯುತ್ತಿವೆ.

**ಕ್ಷನ್ತವ್ಯಂ ಪುರುಷೇಣೇಹ ಸರ್ವಾಪತ್ಸು ಸುಶೋಭನೇ ।**
**ಕ್ಷಮಾವತೋ ಹಿ ಭೂತಾನಾಂ ಜನ್ಮ ಚೈವ ಪ್ರಕೀರ್ತಿತಮ್ ॥೩೨॥**

ಸುಂದರಾಂಗಿ! ಆಪತ್ಕಾಲದಲ್ಲಿಯೂ ಕ್ಷಮಾಗುಣವನ್ನು ಖಂಡಿತ

ವಾಗಿಯೂ ತ್ಯಜಿಸಬಾರದು. ಕ್ಷಮಾವಂತನಿಂದಲೇ ಪ್ರಾಣಿಗಳ ಜೀವನ ನಿರ್ವಹಣೆಯೂ ಆಗುವುದು.

**ಆಕ್ರುಷ್ಟಸ್ತಾಡಿತಃ ಕ್ರುದ್ಧಃ ಕ್ಷಮತೇ ಯೋ ಬಲೀಯಸಾ ।**
**ಯಶ್ಚ ನಿತ್ಯಂ ಜಿತಕ್ರೋಧೋ ವಿದ್ವಾನುತ್ತಮಪೂರುಷಃ ॥೩೩॥**

ಯಾವನು ಬಲಿಷ್ಠನಾದವನಿಂದ ನಿಂದಿಸಲ್ಪಟ್ಟರೂ ಅಥವಾ ಪೀಡಿಸಲ್ಪಟ್ಟರೂ–ಕೋಪಗೊಳ್ಳದೇ ಸಹನೆಯಿಂದಿರುವನೋ ಅವನೇ ನಿಶ್ಚಯವಾಗಿಯೂ ವಿದ್ವಾಂಸನು ಮತ್ತು ಉತ್ತಮಪುರುಷನು.

**ಪ್ರಭಾವವಾನಪಿ ನರಸ್ತಸ್ಯ ಲೋಕಾಃ ಸನಾತನಾಃ ।**
**ಕ್ರೋಧನಸ್ತ್ವಲ್ಪವಿಜ್ಞಾನಃ ಪ್ರೇತ್ಯ ಚೇಹ ಚ ನಶ್ಯತಿ ॥೩೪॥**

ಬಲಿಷ್ಠನಾಗಿದ್ದರೂ ಯಾವಾತನು ತನ್ನ ಕೋಪವನ್ನು ನಿಗ್ರಹಿಸಿರುವನೋ–ಅವನು ಇಹದಲ್ಲಿ ಸುಖವನ್ನನುಭವಿಸಿ ಪರದಲ್ಲಿ ಉತ್ತಮಲೋಕಗಳನ್ನು ಪಡೆಯುತ್ತಾನೆ. ಕೋಪವನ್ನು ನಿಗ್ರಹಿಸಲು ಶಕ್ತಿಯಿಲ್ಲದವನು ಇಹ-ಪರಗಳೆರಡರಲ್ಲಿಯೂ ಕಷ್ಟವನ್ನೇ ಅನುಭವಿಸುತ್ತಾನೆ.

ಕ್ಷಮಾಗುಣದ ಮಹತ್ತ್ವವು ಮಹಾತ್ಮರಾದ ಕಾಶ್ಯಪರಿಂದ ಗೀತೆಯ ರೂಪದಲ್ಲಿ ಹೇಳಲ್ಪಟ್ಟಿದೆ. ಅವರು ಹೇಳಿರುವುದನ್ನು ಯಥಾಶ್ರುತವಾಗಿ ಹೇಳುವೆನು ; ಕೇಳು, ದ್ರೌಪದಿ :

**ಕ್ಷಮಾ ಧರ್ಮಃ ಕ್ಷಮಾ ಯಜ್ಞಃ ಕ್ಷಮಾ ವೇದಾ ಕ್ಷಮಾ ಶ್ರುತಮ್ ।**
**ಯ ಏತದೇವಂ ಜಾನಾತಿ ಸ ಸರ್ವಂ ಕ್ಷನ್ತುಮರ್ಹತಿ ॥೩೬॥**

**ಕ್ಷಮಾ ಬ್ರಹ್ಮ ಕ್ಷಮಾ ಸತ್ಯಂ ಕ್ಷಮಾ ಭೂತಂ ಚ ಭಾವಿ ಚ ।**
**ಕ್ಷಮಾ ತಪಃ ಕ್ಷಮಾ ಶೌಚಂ ಕ್ಷಮಯೇದಂ ಧೃತಂ ಜಗತ್ ॥೩೭॥**

**ಅತಿ ಯಜ್ಞವಿದಾಂ ಲೋಕಾನ್ ಕ್ಷಮಿಣಃ ಪ್ರಾಪ್ನುವನ್ತಿ ಚ ।**
**ಅತಿ ಬ್ರಹ್ಮವಿದಾಂ ಲೋಕಾನತಿ ಚಾಪಿ ತಪಸ್ವಿನಾಮ್ ॥೩೮॥**

**ಅನ್ಯೇ ವೈ ಯಜುಷಾಂ ಲೋಕಾಃ ಕರ್ಮಿಣಾಮಪರೇ ತಥಾ ।**
**ಕ್ಷಮಾವತಾಂ ಬ್ರಹ್ಮಲೋಕೇ ಲೋಕಾಃ ಪರಮಪೂಜಿತಾಃ ॥೩೯॥**

**ಕ್ಷಮಾ ತೇಜಸ್ವಿನಾಂ ತೇಜಃ ಕ್ಷಮಾ ಬ್ರಹ್ಮ ತಪಸ್ವಿನಾಮ್ ।**
**ಕ್ಷಮಾ ಸತ್ಯಂ ಸತ್ಯವತಾಂ ಕ್ಷಮಾ ಯಜ್ಞಃ ಕ್ಷಮಾ ಶಮಃ ॥೪೦॥**

ಕ್ಷಮಾಗುಣವೇ ಮನುಷ್ಯನ ಮುಖ್ಯಧರ್ಮ. ಕ್ಷಮೆಯಿಂದಿರುವುದೇ ಯಜ್ಞ. ಕ್ಷಮೆಯೇ ವೇದಗಳು. ಕ್ಷಮೆಯೇ ಶಾಸ್ತ್ರಗಳು. ಈ ಸೂಕ್ಷ್ಮವನ್ನು ತಿಳಿದವನು ನಿಶ್ಚಯವಾಗಿಯೂ ಕ್ಷಮಾವಂತನಾಗುತ್ತಾನೆ. ಕ್ಷಮೆಯೇ ಬ್ರಹ್ಮ. ಕ್ಷಮೆಯೇ ಸತ್ಯ. ಈ ಹಿಂದೆ ನಡೆದ ಮತ್ತು ಮುಂದೆ ನಡೆಯುವ ಪ್ರಪಂಚದ ಎಲ್ಲ ವಿದ್ಯಮಾನಗಳಿಗೂ ಕ್ಷಮಾಗುಣವೇ ಆಧಾರಭೂತವಾಗಿದೆ. ಕ್ಷಮೆಯೇ ತಪಸ್ಸು. ಕ್ಷಮೆಯೇ ಸದಾಚಾರಕ್ಕೆ ಮೂಲವಾದ ಮುಖ್ಯಗುಣ. ಕ್ಷಮೆಯಿಂದಲೇ ಈ ಪೃಥ್ವಿಯು ಪರ್ವತ-ಗಿರಿ-ದುರ್ಗಗಳನ್ನೂ, ನದೀ-ನದ-ಸರೋವರಗಳನ್ನೂ, ಜೀವಕೋಟಿಯನ್ನೂ ಹೊತ್ತು ನಿಂತಿದೆ. ವಾಜಪೇಯಾದಿ ಯಾಗಗಳನ್ನು ಮಾಡಿದವರಿಗೆ, ಬ್ರಹ್ಮನಿಷ್ಠರಿಗೆ, ತಪಸ್ವಿಗಳಿಗೆ–ಯಾವ ಲೋಕಗಳು ಪ್ರಾಪ್ತವಾಗುವುವೋ–ಅವೆಲ್ಲಕ್ಕಿಂತಲೂ ಉತ್ತಮವಾದ ಲೋಕಗಳು ಕ್ಷಮಾವಂತರಿಗೆ ಲಭಿಸುವುವು. ಯಜ್ಞ-ಯಾಗಾದಿ ಕಾಮ್ಯಕರ್ಮಗಳನ್ನು ಮಾಡಿದವರಿಗೂ, ವಾಪೀ-ಕೂಪ-ತಟಾಕಾದಿ ನಿಷ್ಕಾಮ ಕರ್ಮಗಳನ್ನು ಮಾಡಿದವರಿಗೂ ಬೇರೆ-ಬೇರೆ ಲೋಕಗಳಿವೆ. ಆದರೆ ಕ್ಷಮಾವಂತರಿಗೆ ಪರಮಪೂಜ್ಯವಾದ ಬ್ರಹ್ಮಲೋಕದಲ್ಲಿಯೇ ಶಾಶ್ವತಸ್ಥಾನವು ಲಭಿಸುತ್ತದೆ. ಬಲಿಷ್ಠರಾದವರಿಗೆ ಕ್ಷಮೆಯೇ ತೇಜಸ್ಸು. ತಪಸ್ವಿಗಳಿಗೆ ಕ್ಷಮೆಯೇ ಬ್ರಹ್ಮ. ಸತ್ಯನಿಷ್ಠರಿಗೆ ಕ್ಷಮೆಯೇ ಸತ್ಯ. ಕ್ಷಮಾಗುಣದ ಪರಿಪಾಲನೆಯೇ ಯಜ್ಞ. ಕ್ಷಮೆಯೇ ಶಮ ಅಥವಾ ಶಾಂತಿಯು.

**ತಾಂ ಕ್ಷಮಾಂ ತಾದೃಶೀಂ ಕೃಷ್ಣೇ ಕಥಮಸ್ಮದ್ವಿಧಸ್ತ್ಯಜೇತ್ ।**
**ಯಸ್ಯಾಂ ಬ್ರಹ್ಮ ಚ ಸತ್ಯಂ ಚ ಯಜ್ಞಾ ಲೋಕಾಶ್ಚ ಧಿಷ್ಠಿತಾಃ ॥೪೧॥**

ಯಾವ ಕ್ಷಮಾಗುಣದಲ್ಲಿ ಬ್ರಹ್ಮ, ಸತ್ಯ, ಯಜ್ಞ ಮತ್ತು ಸಕಲ ಲೋಕಗಳೂ ಅಧಿಷ್ಠಿತವಾಗಿವೆಯೋ–ಅಂತಹ ಕ್ಷಮಾಗುಣವನ್ನು ನನ್ನಂತಹವನು ಹೇಗೆ ತಾನೇ ಬಿಡಲು ಸಾಧ್ಯ? ದ್ರೌಪದಿ!

**ಕ್ಷನ್ತವ್ಯಮೇವ ಸತತಂ ಪುರುಷೇಣ ವಿಜಾನತಾ ।**
**ಯದಾ ಹಿ ಕ್ಷಮತೇ ಸರ್ವಂ ಬ್ರಹ್ಮ ಸಮ್ಪದ್ಯತೇ ತದಾ ॥೪೨॥**

ವಿದ್ವಾಂಸನಾದವನು ಕ್ಷಮಾವಂತನಾಗಿರಬೇಕು. ಎಂತಹ ಮಹಾಪ

ರಾಧವನ್ನಾದರೂ ಕ್ಷಮಿಸಬೇಕು. ಸಕಲವನ್ನೂ ಕ್ಷಮಿಸುವ ಶಕ್ತಿಯಿರುವವನು ಬ್ರಹ್ಮಭಾವವನ್ನೇ ಹೊಂದುತ್ತಾನೆ.

**ಕ್ಷಮಾವತಾಮಯಂ ಲೋಕಃ ಪರಶ್ಚೈವ ಕ್ಷಮಾವತಾಮ್ ।**
**ಇಹ ಸಮ್ಮಾನಮೃಚ್ಛಂತಿ ಪರತ್ರ ಚ ಶುಭಾಂ ಗತಿಮ್ ॥೪೩॥**

ಕ್ಷಮಾವಂತರಿಗೆ ಈ ಲೋಕವೂ ಇದೆ. ಕ್ಷಮಾವಂತರದೇ ಈ ಪ್ರಪಂಚವೆಂದೂ ಹೇಳಬಹುದು. ಪರಲೋಕಗಳೂ ಅವರಿಗೆ ಸಿದ್ಧವಾಗಿಯೇ ಇರುವುವು. ಕ್ಷಮಾವಂತರು ಇಹದಲ್ಲಿ ಗೌರವಿಸಲ್ಪಡುತ್ತಾರೆ ; ಪರದಲ್ಲೂ ಸುಖವನ್ನು ಅನುಭವಿಸುತ್ತಾರೆ.

**ಯೇಷಾಂ ಮನ್ಯುರ್ಮನುಷ್ಯಾಣಾಂ ಕ್ಷಮಯಾಭಿಹತಃ ಸದಾ ।**
**ತೇಷಾಂ ಪರತರೇ ಲೋಕಾಸ್ತಸ್ಮಾತ್ಕ್ಷಾಂತಿಃ ಪರಾ ಮತಾ ॥೪೪॥**

ಯಾರು ಕ್ಷಣ-ಕ್ಷಣಕ್ಕೂ ಉಲ್ಬಣಿಸುವ ಕೋಪವನ್ನು ಎಲ್ಲ ಕಾಲ ದಲ್ಲಿಯೂ ಪರಿತ್ಯಜಿಸಿ ಕ್ಷಮಾಗುಣವನ್ನು ಆಶ್ರಯಿಸುವರೋ–ಅವರಿಗೆ ಬ್ರಹ್ಮಲೋಕದ ಪ್ರಾಪ್ತಿಯಾಗುವುದು. ಈ ಕಾರಣಗಳಿಂದ ಮನುಷ್ಯನಿಗಿರ ಬೇಕಾದ ಮುಖ್ಯಧರ್ಮವು ಕ್ಷಮಾಗುಣವೆಂದು ಹೇಳುತ್ತಾರೆ. ಕ್ಷಮಾವಂತರ ವಿಷಯವಾಗಿ ಕಾಶ್ಯಪರು ಮಾಡಿದ ಶ್ಲಾಘನೆಯ ಗೀತೆಗಳೇ ಇವು.

ಕಾಶ್ಯಪರು ಕ್ಷಮಾಗುಣದ ವಿಷಯವಾಗಿ ಹೇಳಿರುವ ಈ ಗೀತೆಗಳನ್ನು ಕೇಳಿದ ಮೇಲಾದರೂ ನೀನು ತೃಪ್ತಳಾಗು. ಕೋಪಕ್ಕೆ ಎಡೆಗೊಡಬೇಡ. ಶಾಂತನುವಿನ ಮಗನೂ, ನಮ್ಮ ತಾತನೂ ಆದ ಭೀಷ್ಮನು ಕ್ಷಮಾಗುಣವನ್ನೇ ಉಪಾಸನೆಮಾಡುತ್ತಿರುವನು. ದೇವಕೀಪುತ್ರನಾದ ಶ್ರೀಕೃಷ್ಣ, ಆಚಾರ್ಯರಾದ ದ್ರೋಣರು, ವಿದುರ, ಕೃಪ, ಸಂಜಯ–ಇವರೆಲ್ಲರೂ ಕ್ಷಮಾಗುಣವೇ ಶ್ರೇಷ್ಠವಾದ ಗುಣವೆಂಬ ಅಭಿಪ್ರಾಯವುಳ್ಳವರಾಗಿರುವರು. ಸೋಮದತ್ತ, ಯುಯುತ್ಸು, ಅಶ್ವತ್ಥಾಮ ಮತ್ತು ಪಿತಾಮಹರಾದ ವ್ಯಾಸರು–ಇವರೆಲ್ಲರೂ ಇದೇ ಅಭಿಪ್ರಾಯವುಳ್ಳವರಾಗಿದ್ದಾರೆ. ಕ್ಷಮಾಗುಣಪ್ರಧಾನವಾದ ಅವರ ಹಿತೋಪದೇಶಗಳನ್ನು ಕೇಳಿ ರಾಜನಾದ ಧೃತರಾಷ್ಟ್ರನು ನಮ್ಮ ರಾಜ್ಯವನ್ನು ಶಾಂತಿಯಿಂದಲೇ ನಮಗೊಪ್ಪಿಸುವನೆಂಬ ಆಶಯದಿಂದಿರುತ್ತೇನೆ. ದ್ರೌಪದಿ!

ಒಂದು ವೇಳೆ ಅವನು ಅವರ ಉಪದೇಶಗಳನ್ನೂ ಅಲಕ್ಷಿಸಿ ಆಶೆಗೆ ದಾಸನಾದ ನೆಂದರೆ–ಅವನ ವಿನಾಶವು ಖಂಡಿತ. ಭರತವಂಶೀಯರಿಗೆ ವಿಪತ್ತು ಪ್ರಾಪ್ತ ವಾಗುವುದು ನಿಶ್ಚಯ. ಇದನ್ನು ನಾನು ಬಹಳ ಹಿಂದೆಯೇ ಮನಗಂಡಿದ್ದೇನೆ.

**ಸುಯೋಧನೋ ನಾರ್ಹತೀತಿ ಕ್ಷಮಾಮೇವಂ ನ ವಿನ್ದತಿ ।**
**ಅರ್ಹಸ್ತತ್ರಾಹಮಿತ್ಯೇವಂ ತಸ್ಮಾನ್ಮಾಂ ವಿನ್ದತೇ ಕ್ಷಮಾ ॥೫೧॥**

ಸುಯೋಧನನು ನಿಶ್ಚಯವಾಗಿಯೂ ಕ್ಷಮಾಂ (ಭೂಮಿಯನ್ನು) ಹೊಂದಲು ಯೋಗ್ಯನಲ್ಲ. ಈ ಕಾರಣದಿಂದಲೇ ಅವನು ಕ್ಷಮಾಗುಣವನ್ನು ಹೊಂದಿರುವುದಿಲ್ಲ. ನಾನು ಭೂಮಿಯನ್ನಾಳಲು ಯೋಗ್ಯನಾಗಿರುತ್ತೇನೆ. ಈ ಕಾರಣದಿಂದಲೇ ಕ್ಷಮಾಗುಣವು ನನ್ನನ್ನು ಹೊಂದುತ್ತದೆ.

ಕಲ್ಯಾಣಿ! ಆತ್ಮಜ್ಞಾನಿಗಳ ಮಾರ್ಗವೇ ಇದಾಗಿದೆ. ಕ್ಷಮಾವಂತ ನಾಗಿರಬೇಕಾದುದೇ ಸನಾತನಧರ್ಮ. ಆದುದರಿಂದ ನಾನು ತತ್ತ್ವತಃ ಕ್ಷಮಾವಂತನೂ ದಯಾವಂತನೂ ಆಗಿರುತ್ತೇನೆ."

೨೯ನೆಯ ಅಧ್ಯಾಯವು ಮುಗಿಯಿತು.

೩೦ನೆಯ ಅಧ್ಯಾಯ ಅರ್ಜುನಾಭಿಗಮನಪರ್ವ (ಮುಂದುವರಿದಿದೆ.)

## ಯುಧಿಷ್ಠಿರನ ಧರ್ಮ-ವಿಧಿ ಇವುಗಳನ್ನು ಕುರಿತು ದ್ರೌಪದಿಯ ಸಾಧಿಕ್ಷೇಪವಚನ

ಪಾರಿಕ್ಷಿತ! ಧರ್ಮಜನ ಕ್ಷಮಾಗುಣದ ಪ್ರವಚನವು ದ್ರೌಪದಿಗೆ ಸಹ್ಯ ವಾಗಲಿಲ್ಲ. ಒಮ್ಮೆ ದೀರ್ಘವಾಗಿ ನಿಟ್ಟುಸಿರುಬಿಟ್ಟು ಹೇಳಿದಳು :

**ನಮೋ ಧಾತ್ರೇ ವಿಧಾತ್ರೇ ಚ ಯೌ ಮೋಹಂ ಚಕ್ರತುಸ್ತವ ।**
**ಪಿತೃಪೈತಾಮಹೇ ವೃತ್ತೇ ವೋಢವ್ಯೇ ತೇಽನ್ಯಥಾ ಮತಿಃ ॥೧॥**

"ನಿನ್ನ ಬುದ್ಧಿಗೆ ಮೋಹವನ್ನುಂಟುಮಾಡಿರುವ ಪರಮೇಶ್ವರನಿಗೂ ಮತ್ತು ನಿನ್ನ ಈ ದುರವಸ್ಥೆಗೆ ಕಾರಣವಾದ ವಿಧಿಗೂ (ಪ್ರಾರಬ್ಧಕ್ಕೂ) ನನ್ನ ನಮಸ್ಕಾರವಿರಲಿ! ನಿನ್ನ ಬುದ್ಧಿಯು ಪಿತೃ-ಪಿತಾಮಹರು ಅನುಸರಿಸುತ್ತಿದ್ದ ಮಾರ್ಗವನ್ನು ಅನುಸರಿಸಬೇಕಾಗಿದ್ದರೂ ಬೇರೆಯ ದಾರಿಯನ್ನು ಹಿಡಿದಿದೆ.

**ಕರ್ಮಭಿಶ್ಚಿನ್ತಿತೋ ಲೋಕೋ ಗತ್ಯಾಂ ಗತ್ಯಾಂ ಪೃಥಗ್ವಿಧಃ ।**
**ತಸ್ಮಾತ್ಕರ್ಮಾಣಿ ನಿತ್ಯಾನಿ ಲೋಭಾನ್ಮೋಕ್ಷಂ ಯಿಯಾಸತಿ ॥೨॥**

ಕರ್ಮಾನುಸಾರವಾಗಿ ಉತ್ತಮ-ಮಧ್ಯಮ-ಅಧಮಯೋನಿಗಳಲ್ಲಿ ಊರ್ಧ್ವಲೋಕ ಅಥವಾ ಅಧೋಲೋಕಗಳಲ್ಲಿ ಜೀವನಿಗೆ ಸ್ಥಾನವು ಲಭಿಸುತ್ತದೆ. ಆದುದರಿಂದ ಕರ್ಮವು ನಿತ್ಯವು. ಭೋಗದ ಹೊರತು ಕರ್ಮವು ಕ್ಷಯವಾಗುವುದಿಲ್ಲ. ಲೋಭದಿಂದ ಮೋಹಪರವಶರಾಗಿ ಕೆಲವರು ಕರ್ಮಮಾಡದೆಯೇ ದುಃಖಗಳಿಂದ ಮುಕ್ತರಾಗಲು ಇಚ್ಛಿಸುತ್ತಾರೆ.

**ನೇಹ ಧರ್ಮಾನೃಶಂಸ್ಯಾಭ್ಯಾಂ ನ ಕ್ಷಾನ್ತ್ಯಾ ನಾರ್ಜವೇನ ಚ ।**
**ಪುರುಷಃ ಶ್ರಿಯಮಾಪ್ನೋತಿ ನ ಘೃಣಿತ್ವೇನ ಕರ್ಹಿಚಿತ್ ॥೩॥**

ಈ ಪ್ರಪಂಚದಲ್ಲಿ ಮಾನವನು ಧರ್ಮಾನುಸರಣೆಯಿಂದಾಗಲೀ, ಉದಾರತೆಯಿಂದಾಗಲೀ, ಕ್ಷಮೆಯಿಂದಾಗಲೀ, ವಿನಯದಿಂದಾಗಲೀ, ದಯೆ ಯಿಂದಾಗಲೀ–ಐಶ್ವರ್ಯವನ್ನು ಹೊಂದಲಾರನು. ಹಾಗಲ್ಲದೆ ಧರ್ಮಾನು ಸರಣೆಯಿಂದ, ಕ್ಷಮೆಯಿಂದ ಶ್ರೇಯಸ್ಸುಂಟಾಗುವುದಾಗಿದ್ದರೆ ನೀನಿಂದು ಇಂತಹ ದಾರುಣವಾದ ಕಷ್ಟಕ್ಕೊಳಗಾಗುತ್ತಿರಲಿಲ್ಲ. ಮಹಾವೀರರಾದ ನಿನ್ನ ಅನುಜರೂ ಈ ರೀತಿಯಲ್ಲಿ ಕಷ್ಟವನ್ನು ಅನುಭವಿಸಬೇಕಾಗಿರಲಿಲ್ಲ. ಮಹಾರಾಜ! ನೀನು ಧರ್ಮಕ್ಕಿಂತಲೂ ಮಿಗಿಲಾದ ವಸ್ತುವಿರುವುದೆಂದು ಎಂದಾದರೂ ಭಾವಿಸಿರುವೆಯಾ? ಅಂದು ಚಕ್ರವರ್ತಿಯಾಗಿದ್ದಾಗಲೂ ಧರ್ಮಕ್ಕೆ ವಿರುದ್ಧವೆನಿಸಿದ ಯಾವ ಕಾರ್ಯವನ್ನೂ ಮಾಡಲಿಲ್ಲ. ಇಂದು ಇಂತಹ ದಾರುಣಕಷ್ಟಕ್ಕೆ ಸಿಕ್ಕಿದ್ದರೂ ಧರ್ಮಕ್ಕೆ ವಿರೋಧವೆನಿಸುವ ಯಾವ ವಿಷಯವೂ ನಿನ್ನ ಮನಸ್ಸಿನೊಳಗೆ ಪ್ರವೇಶಿಸಲಾರದು. ಧರ್ಮವನ್ನು ನೀನು ನಿನ್ನ ಪ್ರಾಣಗಳಿಗಿಂತಲೂ ಮಿಗಿಲೆಂದು ತಿಳಿದಿರುವೆ.

**ಧರ್ಮಾರ್ಥಮೇವ ತೇ ರಾಜ್ಯಂ ಧರ್ಮಾರ್ಥಂ ಜೀವಿತಂ ಚ ತೇ ।**
**ಬ್ರಾಹ್ಮಣಾ ಗುರವಶ್ಚೈವ ಜಾನನ್ತ್ಯಪಿ ಚ ದೇವತಾಃ ॥೬॥**

**ಭೀಮಸೇನಾರ್ಜುನೌ ಚೋಭೌ ಮಾದ್ರೇಯೌ ಚ ಮಯಾ ಸಹ ।**
**ತ್ಯಜೇಸ್ತ್ವಮಿತಿ ಮೇ ಬುದ್ಧಿರ್ನ ತು ಧರ್ಮಂ ಪರಿತ್ಯಜೇಃ ॥೭॥**

'ಧರ್ಮಕ್ಕಾಗಿಯೇ ನಿನ್ನ ರಾಜ್ಯ', 'ಧರ್ಮಕ್ಕಾಗಿಯೇ ನಿನ್ನ ಪ್ರಾಣ'– ಎಂಬ ವಿಷಯವು ದೇವ-ಗುರು-ಬ್ರಾಹ್ಮಣರಾದಿಯಾಗಿ ಸಕಲರಿಗೂ ತಿಳಿದ ವಿಷಯವೇ ಆಗಿದೆ. ಮಹಾರಾಜ! ನೀನು ಭೀಮಾರ್ಜುನ-ನಕುಲ-ಸಹದೇವರನ್ನೂ ಪರಿತ್ಯಜಿಸಬಲ್ಲೆ ; ನನ್ನನ್ನೂ ತ್ಯಾಗಮಾಡಬಲ್ಲೆ ; ಆದರೆ ಧರ್ಮವನ್ನು ಮಾತ್ರ ಪರಿತ್ಯಜಿಸಲು ನಿನ್ನಿಂದ ಸಾಧ್ಯವಾಗಲಾರದೆಂದು ಭಾವಿಸಿದ್ದೇನೆ.

ಹಿರಿಯರಾಡುವ ಈ ವಾಕ್ಯವನ್ನೂ ನಾನು ಕೇಳಿದ್ದೇನೆ :

**ರಾಜಾನಂ ಧರ್ಮಗೋಪ್ತಾರಂ ಧರ್ಮೋ ರಕ್ಷತಿ ರಕ್ಷಿತಃ ।**
**ಇತಿ ಮೇ ಶ್ರುತಮಾರ್ಯಾಣಾಂ ತ್ವಾಂ ತು ಮನ್ಯೇ ನ ರಕ್ಷತಿ ॥೮॥**

'ಧರ್ಮವನ್ನು ರಕ್ಷಿಸುವ ರಾಜನನ್ನು ಧರ್ಮವು ರಕ್ಷಿಸುತ್ತದೆ.' ಆದರೆ ಇಂದು ಆ ಹಿರಿಯರ ನುಡಿಯೂ ಸುಳ್ಳೆಂದೇ ಭಾವಿಸಬೇಕಾಗಿದೆ. ಏಕೆಂದರೆ: ಪ್ರಾಣರಕ್ಷಣೆಗಿಂತಲೂ ಹೆಚ್ಚು ಮಮತೆಯಿಂದ ಧರ್ಮರಕ್ಷಣೆಯನ್ನು ಮಾಡುತ್ತಿರುವ ನಿನ್ನನ್ನಿಂದು ಯಾವ ಧರ್ಮವೂ ರಕ್ಷಿಸುವುದಿಲ್ಲ. (ರಕ್ಷಿಸಲಿಲ್ಲ.)

**ಅನನ್ಯಾ ಹಿ ನರವ್ಯಾಘ್ರ ನಿತ್ಯದಾ ಧರ್ಮಮೇವ ತೇ ।**
**ಬುದ್ಧಿಃ ಸತತಮನ್ವೇತಿ ಛಾಯೇವ ಪುರುಷಂ ನಿಜಾ ॥೯॥**

ಛಾಯೆಯು ಪ್ರಾಣಿಯನ್ನನುಸರಿಸಿ ಹೋಗುವಂತೆ–ನಿನ್ನ ಬುದ್ಧಿಯು ಧರ್ಮವನ್ನೇ ಅನುಸರಿಸಿ ನಡೆಯುತ್ತಿದೆ. ಛಾಯೆಯನ್ನೂ, ಪ್ರಾಣಿಯನ್ನೂ ಬೇರ್ಪಡಿಸಲು ಹೇಗೆ ಸಾಧ್ಯವಾಗುವುದಿಲ್ಲವೋ–ಹಾಗೆಯೇ ನಿನ್ನನ್ನೂ, ಧರ್ಮವನ್ನೂ ಬೇರ್ಪಡಿಸುವ ಸಾಧ್ಯತೆಯೇ ಇಲ್ಲ. ನಿನ್ನ ತನು-ಮನ-ಧನಗಳೆಲ್ಲವೂ ಕೇವಲ ಧರ್ಮಕ್ಕಾಗಿಯೇ ಮೀಸಲಾಗಿವೆ.

ನಿನಗೆ ಸಮಾನರನ್ನಾಗಲೀ, ನಿನಗಿಂತಲೂ ಹಿರಿಯರನ್ನಾಗಲೀ, ಕಿರಿಯರನ್ನಾಗಲೀ ನೀನೆಂದೂ ತಿರಸ್ಕರಿಸಿದವನಲ್ಲ. ಅಖಂಡಭೂಮಂಡಲಕ್ಕೂ ಚಕ್ರವರ್ತಿಯಾಗಿದ್ದರೂ ಅಹಂಕಾರಕ್ಕೆ ನಿನ್ನಲ್ಲಿ ಸ್ಥಾನವು ಸಿಕ್ಕದಾಯಿತು. ನೀನು ಸ್ವಾಹಾಕಾರಗಳಿಂದ ದೇವತೆಗಳನ್ನೂ, ಸ್ವಧಾಕಾರಗಳಿಂದ ಪಿತೃಗಳನ್ನೂ, ದಕ್ಷಿಣೆಗಳಿಂದ ಬ್ರಾಹ್ಮಣರನ್ನೂ ಸರ್ವದಾ ತೃಪ್ತಿಪಡಿಸುತ್ತಿರುವೆ.

ಯತಿಗಳು, ಸಂನ್ಯಾಸಿಗಳು, ಗೃಹಸ್ಥರು–ಇವರೆಲ್ಲರೂ ನಿನ್ನ ಮನೆಯಲ್ಲಿ ಚಿನ್ನದ ಪರಾತಗಳಲ್ಲಿ ಮೃಷ್ಟಾನ್ನಭೋಜನವನ್ನು ಮಾಡುತ್ತಿದ್ದರು. ಅವರೆಲ್ಲರನ್ನೂ ನಾನೇ ಉಪಚರಿಸುತ್ತಿದ್ದೆನು. ವಾನಪ್ರಸ್ಥರಿಗೂ ನೀನು ಯಥೇಚ್ಛವಾಗಿ ಸುವರ್ಣನಾಣ್ಯಗಳನ್ನೂ, ಆಹಾರವನ್ನೂ ಕೊಡುತ್ತಿದ್ದೆ. ಬ್ರಾಹ್ಮಣರಿಗೆ ಕೊಡಬಾರದೆನ್ನುವ ವಸ್ತುವೇ ನಿನ್ನ ಅರಮನೆಯಲ್ಲಿರಲಿಲ್ಲ. ಅನುದಿನವೂ ವೈಶ್ವದೇವವನ್ನು ಮಾಡಿ ಅತಿಥಿಗಳಿಗೂ, ಪ್ರಾಣಿಗಳಿಗೂ ಆಹಾರವನ್ನು ಅರ್ಪಿಸಿದನಂತರ ಉಳಿದುದನ್ನು (ವಿಘಸವನ್ನು) ನೀನು ತಿನ್ನುತ್ತಿದ್ದೆ. ಇಷ್ಟಿ, ಪಶುಬಂಧ, ಪಾಕಯಜ್ಞ ಮುಂತಾದ ಕಾಮ್ಯ-ನಿತ್ಯ-ನೈಮಿತ್ತಿಕಕರ್ಮಗಳು, ನಿನ್ನ ಅರಮನೆಯಲ್ಲಿ ಅನುದಿನವೂ, ನಡೆಯುತ್ತಲೇ ಇರುತ್ತಿದ್ದುವು.

ದಸ್ಯುಗಳ ವಾಸಕ್ಕೆ ಯೋಗ್ಯವಾದ, ನಿರ್ಜನವಾದ ಈ ಮಹಾರಣ್ಯದಲ್ಲಿಯೂ ನೀನು ಹಿಂದೆ ಆಚರಿಸುತ್ತಿದ್ದಂತೆಯೇ ಧರ್ಮವನ್ನು ಕಿಂಚಿತ್ತಾದರೂ ಲೋಪವಿಲ್ಲದಂತೆ ಆಚರಿಸುತ್ತಿರುವೆ. ಬಹುದಕ್ಷಿಣೆಯನ್ನು ಕೊಡಬೇಕಾಗುವ ಅಶ್ವಮೇಧ, ರಾಜಸೂಯ, ಪುಂಡರೀಕಾದಿ ಮಹಾಯಾಗಗಳೂ ನಿನ್ನಿಂದ ಮಾಡಲ್ಪಟ್ಟುವು. ಇಷ್ಟೆಲ್ಲಾ ಸದ್ಗುಣಗಳಿದ್ದರೂ ನೀನು ವಿಪರೀತಬುದ್ಧಿಯಿಂದ ಪಗಡೆಯಾಡಲು ಕುಳಿತು ರಾಜ್ಯ-ಕೋಶಾದಿಗಳನ್ನೂ, ತಮ್ಮಂದಿರನ್ನೂ, ಕಟ್ಟಕಡೆಗೆ ನನ್ನನ್ನೂ ಪಣವನ್ನಾಗಿಟ್ಟು ಕಳೆದುಕೊಂಡೆ. ಯುಧಿಷ್ಠಿರ! ಸರಳಸ್ವಭಾವದ, ಕರುಣಾಮಯನಾದ, ದಾನಿಯಾದ, ಸತ್ಯನಿಷ್ಠನಾದ ನೀನು ಪಗಡೆಯಾಟಕ್ಕೆ ಹೇಗೆ ಸಮ್ಮತಿಸಿದೆ? ನಿನ್ನ ಬುದ್ಧಿಯು ಹೇಗೆ ಜೂಜಾಟಕ್ಕೆ ಒಪ್ಪಿತು?

ಧರ್ಮಿಷ್ಠನಾದ ನಿನಗಿಂದು ಒದಗಿರುವ ದುಃಖವನ್ನೂ, ಆಪತ್ತನ್ನೂ, ಕಂಡು ನನ್ನ ಹೃದಯವು ಪರಿತಪಿಸುತ್ತಿದೆ. ಈ ಕಾರಣದಿಂದಲೇ ನನ್ನ ಮನಸ್ಸು ಧರ್ಮಾಧರ್ಮಗಳ ವಿಷಯಗಳಲ್ಲಿ ಭ್ರಾಂತವಾಗಿದೆ.

ಮನುಷ್ಯರು ಈಶ್ವರನ ಅಧೀನಕ್ಕೊಳಪಟ್ಟಿರುವರೇ ಹೊರತು ಸ್ವತಂತ್ರರಾಗಿ ಏನು ಮಾಡಲೂ ಅಸಮರ್ಥರೆಂಬ ವಿಷಯದಲ್ಲಿ ದೃಷ್ಟಾಂತವಾಗಿ ಹಿಂದಿನ ಇತಿಹಾಸಗಳು ಅನೇಕವಿವೆ.

**ಧಾತ್ರೈವ ಖಲು ಭೂತಾನಾಂ ಸುಖದುಃಖೇ ಪ್ರಿಯಾಪ್ರಿಯೇ ।**
**ದಧಾತಿ ಸರ್ವಮೀಶಾನಃ ಪುರಸ್ತಾಚ್ಛುಕ್ರಮುಚ್ಚರನ್ ॥೨೨॥**

ಒಂದು ಸಣ್ಣ ಬೀಜದಲ್ಲಿ ವೃಕ್ಷ-ಫಲಗಳನ್ನು ಪರಮಾತ್ಮನು ನಿಕ್ಷೇಪಿಸಿರುವಂತೆ–ಮಾನವನು ಜೀವಿತಕಾಲದಲ್ಲಿ ಅವನು ಅನುಭವಿಸಬೇಕಾದ ಕಷ್ಟ-ಸುಖಗಳು, ಪ್ರಿಯವಾದ ಮತ್ತು ಅಪ್ರಿಯವಾದ ಕಾರ್ಯಗಳು–ಎಲ್ಲವನ್ನೂ ಹುಟ್ಟುವ ಮೊದಲೇ ಸಿದ್ಧಮಾಡಿರುತ್ತಾನೆ.

**ಯಥಾ ದಾರುಮಯೀ ಯೋಷಾ ನರವೀರ ಸಮಾಹಿತಾ ।**
**ಈರಯತ್ಯಙ್ಗಮಙ್ಗಾನಿ ತಥಾ ರಾಜನ್ನಿಮಾಃ ಪ್ರಜಾಃ ॥೨೩॥**

ನರವೀರನೇ! ಸೂತ್ರಧಾರನು ಮರದ ಹೆಣ್ಣುಗೊಂಬೆಯ ಕೈ-ಕಾಲುಗಳನ್ನು ಕೈಚಳಕದಿಂದ ಹೇಗೆ ಆಡಿಸುವನೋ–ಅದೇ ರೀತಿಯಲ್ಲಿ ಪರಮಾತ್ಮನು ಸಕಲಜೀವಕೋಟಿಯ ಜೀವಸೂತ್ರಗಳನ್ನೂ ತನ್ನ ಕೈಯಲ್ಲಿ ಹಿಡಿದು ತನಗಿಚ್ಛೆಬಂದಂತೆ ಆಡಿಸುತ್ತಿರುತ್ತಾನೆ.

**ಆಕಾಶ ಇವ ಭೂತಾನಿ ವ್ಯಾಪ್ಯ ಸರ್ವಾಣಿ ಭಾರತ ।**
**ಈಶ್ವರೋ ವಿದಧಾತೀಹ ಕಲ್ಯಾಣಂ ಯಚ್ಚ ಪಾಪಕಮ್ ॥೨೪॥**

ಆಕಾಶವು ಹೇಗೆ ಸರ್ವವ್ಯಾಪಿಯಾಗಿರುವುದೋ–ಅದೇ ರೀತಿಯಲ್ಲಿ ಪರಮಾತ್ಮನೂ ಸರ್ವವ್ಯಾಪಿಯಾಗಿದ್ದುಕೊಂಡು ಜೀವರ ಸುಖ-ದುಃಖಗಳ ನಿರ್ದೇಶನವನ್ನು ಮಾಡುತ್ತಿರುತ್ತಾನೆ.

**ಶಕುನಿಸ್ತನ್ತುಬದ್ಧೋ ವಾ ನಿಯತೋಽಯಮನೀಶ್ವರಃ ।**
**ಈಶ್ವರಸ್ಯ ವಶೇ ತಿಷ್ಠೇನ್ನಾನ್ಯೇಷಾಂ ನಾತ್ಮನಃ ಪ್ರಭುಃ ॥೨೫॥**

ದಾರದಿಂದ ಕಟ್ಟಿದ ಪಕ್ಷಿಯಂತೆ–ಜೀವಕೋಟಿಯು ಈಶ್ವರನ ಅಧೀನವಾಗಿದೆ. ಈಶ್ವರನಿಗಿಂತಲೂ ಬೇರೊಬ್ಬ ಪ್ರಭುವಿಲ್ಲ. (ಜೀವನು ತನಗೂ ಪ್ರಭುವಲ್ಲ ; ಬೇರೆಯವರಿಗೂ ಪ್ರಭುವಲ್ಲ.)

**ಮಣಿಃ ಸೂತ್ರ ಇವ ಪ್ರೋತೋ ನಸ್ಯೋತ ಇವ ಗೋವೃಷಃ ।**
**ಸ್ರೋತಸೋ ಮಧ್ಯಮಾಪನ್ನಃ ಕೂಲಾದ್ವೃಕ್ಷ ಇವ ಚ್ಯುತಃ ॥೨೬॥**
**ಧಾತುರಾದೇಶಮನ್ವೇತಿ ತನ್ಮಯೋ ಹಿ ತದರ್ಪಣಃ ।**
**ನಾತ್ಮಾಧೀನೋ ಮನುಷ್ಯೋಽಯಂ ಕಾಲಂ ಭಜತಿ ಕಂಚನ ॥೨೭॥**

ದಾರದಲ್ಲಿ ಪೋಣಿಸಲ್ಪಟ್ಟ ಮಣಿಯಂತೆ–ಮೂಗುದಾರವನ್ನು ಹಾಕಿದ ಎತ್ತಿನಂತೆ ಮತ್ತು ಪ್ರವಾಹದ ಮಧ್ಯದಲ್ಲಿ ಸಿಕ್ಕಿಕೊಂಡ ವೃಕ್ಷದಂತೆ–ಪ್ರತಿಯೊಬ್ಬ ಜೀವನೂ ಪರಮಾತ್ಮನ ಇಚ್ಛೆಗೆ ಒಳಪಟ್ಟಿರುತ್ತಾನೆ. ಪರಮಾತ್ಮನ ಅಧೀನಕ್ಕೆ ಸಿಕ್ಕಿರುವ ಈ ಮಾನವನು ಸ್ವತಂತ್ರನಾಗಿ ಏನನ್ನೂ ಮಾಡಲಾರನು.

**ಅಜ್ಞೋ ಜನ್ತುರನೀಶೋಽಯಮಾತ್ಮನಃ ಸುಖದುಃಖಯೋಃ।**
**ಈಶ್ವರಪ್ರೇರಿತೋ ಗಚ್ಛೇತ್ಸ್ವರ್ಗಂ ನರಕಮೇವ ಚ ॥೨೮॥**

ಮಾನವನು ಅಜ್ಞ. ಏನನ್ನೂ ತಿಳಿಯದವನಾಗಿರುತ್ತಾನೆ. ಅವನ ಸುಖ-ದುಃಖಗಳಿಗೆ ಅವನೇ ಹೊಣೆಯಲ್ಲ. ದೈವಪ್ರೇರಿತನಾಗಿ ಕಾರ್ಯಗಳನ್ನು ಮಾಡಿ ಮಾನವನು ಸ್ವರ್ಗಕ್ಕೆ ಅಥವಾ ನರಕಕ್ಕೆ ಹೋಗುತ್ತಾನೆ.

**ಯಥಾ ವಾಯೋಸ್ತೃಣಾಗ್ರಾಣಿ ವಶಂ ಯಾನ್ತಿ ಬಲೀಯಸಃ ।**
**ಧಾತುರೇವಂ ವಶಂ ಯಾನ್ತಿ ಸರ್ವಭೂತಾನಿ ಭಾರತ ॥೨೯॥**

ಬಿರುಗಾಳಿಯ ಹೊಡೆತಕ್ಕೆ ಸಿಕ್ಕಿದ ಸಣ್ಣ ಹುಲ್ಲುಕಡ್ಡಿಯು ಗಾಳಿಯು ಚಲಿಸಿದತ್ತ ಚಲಿಸುವಂತೆ–ಈ ನರನು ಬಲಿಷ್ಠವಾದ ದೈವಪ್ರೇರಣೆಯಂತೆ ಪಾಪ-ಪುಣ್ಯಕಾರ್ಯಗಳನ್ನು ಮಾಡುತ್ತಾನೆ.

**ಆರ್ಯೇ ಕರ್ಮಣಿ ಯುಞ್ಜಾನಃ ಪಾಪೇ ವಾ ಪುನರೀಶ್ವರಃ ।**
**ವ್ಯಾಪ್ಯ ಭೂತಾನಿ ಚರತೇ ನ ಚಾಯಮಿತಿ ಲಕ್ಷ್ಯತೇ ॥೩೦॥**

ಯುಧಿಷ್ಠಿರ! ಇದರಲ್ಲಿರುವ ಒಂದು ವಿಚಿತ್ರವಾದ ಅಂಶವೇನೆಂದರೆ : ದೈವವು ಸರ್ವಾಂತರ್ಯಾಮಿಯಾಗಿರುವುದು ನಿಶ್ಚಯ. ದೈವಪ್ರೇರಣೆಯಿಂದಲೇ ಪ್ರಾಣಿವರ್ಗವು ಒಳ್ಳೆಯ ಅಥವಾ ಕೆಟ್ಟ ಕಾರ್ಯಗಳನ್ನು ಮಾಡುತ್ತಿರುವುದೂ ನಿಶ್ಚಯ. ಹೀಗಿದ್ದರೂ ಒಳ್ಳೆಯ ಅಥವಾ ಕೆಟ್ಟ ಕಾರ್ಯಗಳು ದೈವಪ್ರೇರಿತವೆಂದು ಯಾರೂ ಭಾವಿಸುವುದಿಲ್ಲ.

**ಹೇತುಮಾತ್ರಮಿದಂ ಧಾತುಃ ಶರೀರಂ ಕ್ಷೇತ್ರಸಂಜ್ಞಿತಮ್ ।**
**ಯೇನ ಕಾರಯತೇ ಕರ್ಮ ಶುಭಾಶುಭಫಲಂ ವಿಭುಃ ॥೩೧॥**

ಕ್ಷೇತ್ರವೆಂಬ ಹೆಸರಿನ ಈ ಶರೀರವು ಬ್ರಹ್ಮನಿಗೆ ಒಂದು ನಿಮಿತ್ತ

ಮಾತ್ರವಾಗಿರುತ್ತದೆ. ಶುಭಾಶುಭಫಲಪ್ರದವಾದ ಕರ್ಮಗಳನ್ನು ವಿಧಾತನು ತನ್ನ ಇಚ್ಛಾನುಸಾರವಾಗಿ ಈ ಶರೀರದ ಮೂಲಕವಾಗಿ ಮಾಡಿಸುತ್ತಾನೆ.

**ಪಶ್ಯ ಮಾಯಾಪ್ರಭಾವೋಽಯಮೀಶ್ವರೇಣ ಯಥಾ ಕೃತಃ ।**
**ಯೋ ಹನ್ತಿ ಭೂತೈರ್ಭೂತಾನಿ ಮೋಹಯಿತ್ವಾತ್ಮಮಾಯಯಾ ॥೩೨॥**

ಪರಮಾತ್ಮನ ಮಾಯೆಯ ಮಹತ್ತ್ವವನ್ನಾದರೂ ನೋಡು, ಯುಧಿಷ್ಠಿರ! ಮೂಢನಾದ ಮಾನವನು ನಿಮಿತ್ತಮಾತ್ರವಾಗಿರುವ ಈ ಶರೀರವನ್ನೇ 'ತಾನು-ತನ್ನದು' ಎಂದು ನಂಬುವಂತೆ ಮಾಡಿ, ತನ್ನಂತೆಯೇ ಇರುವ ಮತ್ತೊಂದು ಕ್ಷೇತ್ರವನ್ನು ( ಶರೀರವನ್ನು ) ಕೊಲ್ಲುವಂತೆ ಮಾಡುತ್ತಾನೆ.

**ಅನ್ಯಥಾ ಪರಿದೃಷ್ಟಾನಿ ಮುನಿಭಿಸ್ತತ್ತ್ವದರ್ಶಿಭಿಃ ।**
**ಅನ್ಯಥಾ ಪರಿವರ್ತನ್ತೇ ವೇಗಾ ಇವ ನಭಸ್ವತಃ ॥೩೩॥**

**ಅನ್ಯಥೈವ ಹಿ ಮನ್ಯನ್ತೇ ಪುರುಷಾಸ್ತಾನಿ ತಾನಿ ಚ ।**
**ಅನ್ಯಥೈವ ಪ್ರಭುಸ್ತಾನಿ ಕರೋತಿ ವಿಕರೋತಿ ಚ ॥೩೪॥**

ತತ್ತ್ವದರ್ಶಿಗಳಾದ ಮಹರ್ಷಿಗಳಿಂದ ಒಂದು ಕಾಲದಲ್ಲಿ ತಿಳಿಯಲ್ಪಟ್ಟ ವಿಷಯಗಳು ಮತ್ತೊಂದು ಕಾಲದಲ್ಲಿ ವಾಯುವಿನ ವೇಗಗಳು ವ್ಯತ್ಯಾಸ ಹೊಂದುವಂತೆ ಪರಿವರ್ತನೆಯನ್ನು ಹೊಂದುತ್ತವೆ. ಮನುಷ್ಯನು ತಿಳಿಯುವುದೇ ಬೇರೆ ; ದೈವವು ಮಾಡುವುದೇ ಬೇರೆ. ಈ ಬ್ರಹ್ಮಾಂಡವು ಇಂದ್ರಜಾಲ, ಮಹೇಂದ್ರಜಾಲ, ಸ್ವಪ್ನಸದೃಶವೆಂದು ಜ್ಞಾನಿಗಳು ನಿಶ್ಚಯಿಸಿರುತ್ತಾರೆ. ಯುಧಿಷ್ಠಿರ! ದೈವವೇ ಇವೆಲ್ಲವನ್ನೂ ಸೃಷ್ಟಿಸುತ್ತದೆ. ದೈವವೇ ಈ ಜಗತ್ತಿನ ಲಯಕ್ಕೂ ಕಾರಣವಾಗುತ್ತದೆ. ಒಂದೆಡೆಯಲ್ಲಿ ಜೀವರಾಶಿಯನ್ನು ಸೃಷ್ಟಿಸಿ, ಮತ್ತೊಂದೆಡೆಯಲ್ಲಿ ಸೃಷ್ಟಿಸಿದ ಜೀವರಾಶಿಯನ್ನು ಕೊಲ್ಲುವ ಜೀವಕೋಟಿಯನ್ನೂ ಸೃಷ್ಟಿಸುತ್ತದೆ. ಅದಕ್ಕೂ ಮಿಗಿಲಾಗಿ ಸಜಾತಿಯಲ್ಲಿ ವೈಷಮ್ಯವನ್ನು ಹುಟ್ಟಿಸಿ ಜಾತಿವಿನಾಶಕ್ಕೇ ಈ ದೈವವು ಕಾರಣವಾಗುತ್ತದೆ. ಈ ವೈಚಿತ್ರ್ಯವನ್ನು ಸ್ಥಾವರ-ಜಂಗಮಗಳಲ್ಲಿಯೂ ನಾವು ಕಾಣಬಹುದಾಗಿದೆ.

**ಯಥಾ ಕಾಷ್ಠೇನ ವಾ ಕಾಷ್ಠಮಶ್ಮಾನಂ ಚಾಶ್ಮನಾ ಪುನಃ ।**
**ಅಯಸಾ ಚಾಪ್ಯಯಶ್ಛಿನ್ದ್ಯಾನ್ನಿರ್ವಿಚೇಷ್ಟಮಚೇತನಮ್ ॥೩೫॥**

ಯುಧಿಷ್ಠಿರ! ಅಚೇತನವಾದ ಮರವನ್ನು ಕತ್ತರಿಸಬೇಕಾದರೆ, ಮರದ ಕಾವುಹಾಕಿದ ಕೊಡಲಿಯನ್ನೇ ಉಪಯೋಗಿಸುತ್ತಾರೆ. ಕಲ್ಲಿನಿಂದಲೇ ಕಲ್ಲನ್ನು ಒಡೆಯುತ್ತಾರೆ. ಕಬ್ಬಿಣವನ್ನು ತುಂಡುಮಾಡಬೇಕಾದರೆ ಕಬ್ಬಿಣದ ಆಯುಧ ದಿಂದಲೇ ಸಾಧ್ಯವಾಗುವುದು. ಅಚೇತನವು ಕ್ರಿಯಾಹೀನವಾದುದು. ದೈವವೇ ಎಲ್ಲವನ್ನೂ ಮಾಡಿಸುತ್ತದೆ.

**ಏವಂ ಸ ಭಗವಾನ್ದೇವಃ ಸ್ವಯಮ್ಭೂಃ ಪ್ರಪಿತಾಮಹಃ ।**
**ಹಿನಸ್ತಿ ಭೂತೈರ್ಭೂತಾನಿ ಛದ್ಮ ಕೃತ್ವಾ ಯುಧಿಷ್ಠಿರ ॥೩೬॥**

ಯುಧಿಷ್ಠಿರ! ಈ ರೀತಿಯಲ್ಲಿ ಪ್ರಪಿತಾಮಹನಾದ, ಸ್ವಯಂಭುವಾದ, ದೇವದೇವನಾದ ಭಗವಂತನು ತನ್ನ ಮಾಯೆಯಿಂದ ಪ್ರಾಣಿಗಳಿಂದಲೇ ಪ್ರಾಣಿಗಳನ್ನು ಕೊಲ್ಲಿಸುತ್ತಾನೆ.

**ಸಮ್ಪ್ರಯೋಜ್ಯ ವಿಯೋಜ್ಯಾಯಂ ಕಾಮಕಾರಕರಃ ಪ್ರಭುಃ ।**
**ಕ್ರೀಡತೇ ಭಗವಾನ್ಭೂತೈರ್ಬಾಲಃ ಕ್ರೀಡನಕೈರಿವ ॥೩೭॥**

ಮಕ್ಕಳು ಬೊಂಬೆಯಾಟವಾಡುವಂತೆ–ಭಗವಂತನೇ ಲೀಲಾರ್ಥವಾಗಿ ತನ್ನ ಇಚ್ಛೆಯಂತೆ ಜೀವಕೋಟಿಯನ್ನು ಸೃಷ್ಟಿಸುವುದು ಮತ್ತು ಸೃಷ್ಟಿಸಿದ ಜೀವಕೋಟಿಯ ವಿನಾಶವನ್ನೂ ಮಾಡುವುದು–ಹೀಗೆ ಆಡುತ್ತಾನೆ.

**ನ ಮಾತೃಪಿತೃವದ್ರಾಜನ್ಧಾತಾ ಭೂತೇಷು ವರ್ತತೇ ।**
**ರೋಷಾದಿವ ಪ್ರವೃತ್ತೋಽಯಂ ಯಥಾಯಮಿತರೋ ಜನಃ ॥೩೮॥**

ಈ ಪರದೈವವು ತಂದೆ-ತಾಯಿಗಳಂತೆ ವಾತ್ಸಲ್ಯಪೂರ್ಣವಾಗಿ ಸಮಸ್ತ ಪ್ರಾಣಿಗಳ ವಿಷಯದಲ್ಲಿ ವರ್ತಿಸುವುದಿಲ್ಲ. (ಸ್ವಜನರಲ್ಲದ) ಇತರ ಮನುಷ್ಯ ರಂತೆ ಅಥವಾ ಶತ್ರುಗಳಂತೆ ಈ ದೈವವು ಮನುಷ್ಯನ ವಿಷಯದಲ್ಲಿ ರೋಷ ಪೂರಿತವಾಗಿದೆಯೋ ಎಂಬಂತೆಯೇ ವರ್ತಿಸುತ್ತದೆ.

**ಆರ್ಯಾಞ್ಶೀಲವತೋ ದೃಷ್ಟ್ವಾ ಹ್ರೀಮತೋ ವೃತ್ತಿಕರ್ಶಿತಾನ್ ।**
**ಅನಾರ್ಯಾನ್ಸುಖಿನಶ್ಚೈವ ವಿಹ್ವಲಾಮೀವ ಚಿನ್ತಯಾ ॥೩೯॥**

ಏಕೆಂದರೆ : ಪ್ರಪಂಚದಲ್ಲಿ ಈ ದೈವದ ಚೇಷ್ಟೆಯ ಕಾರಣದಿಂದಾಗಿ

ಸತ್ಪುರುಷರೂ, ಸತ್ಯನಿಷ್ಠರೂ, ಧರ್ಮಸಂಪನ್ನರೂ ಆದವರು ಕಷ್ಟವನ್ನೇ ಅನುಭವಿಸುವುದನ್ನೂ–ದುರಾತ್ಮರು ಸುಖಲೋಲುಪತೆಯಿಂದಿರುವುದನ್ನೂ ಕಂಡು ನನಗೆ ಬಹಳ ವ್ಯಥೆಯಾಗಿದೆ, ಧರ್ಮಜ!

**ತವೇಮಾಮಾಪದಂ ದೃಷ್ಟ್ವಾ ಸಮೃದ್ಧಿಂ ಚ ಸುಯೋಧನೇ ।**
**ಧಾತಾರಂ ಗರ್ಹಯೇ ಪಾರ್ಥ ವಿಷಮಂ ಯೋಽನುಪಶ್ಯತಿ ॥೪೦॥**

ನಿನಗಿಂದು ಒದಗಿರುವ ಕಷ್ಟವನ್ನೂ, ದುರ್ಯೋಧನನಿಂದು ಅನುಭವಿಸುತ್ತಿರುವ ಸುಖೋಪಭೋಗಗಳನ್ನೂ ನೋಡುತ್ತಿರುವ ನಾನು– ಈ ನಿಮ್ಮಿಬ್ಬರ ಕಷ್ಟ-ಸುಖಗಳಿಗೆ ಕಾರಣನಾದ ಪರಮಾತ್ಮನನ್ನು ಪರಮ ಶ್ರೇಷ್ಠನಾದವನೆಂದು ಖಂಡಿತವಾಗಿಯೂ ಒಪ್ಪುವುದಿಲ್ಲ. ಅವನನ್ನು ನಾನು ನಿಂದಿಸುತ್ತೇನೆ. ಅವನು ಪಕ್ಷಪಾತಿಯಾಗಿದ್ದಾನೆ.

**ಆರ್ಯಶಾಸ್ತ್ರಾತಿಗೇ ಕ್ರೂರೇ ಲುಬ್ಧೇ ಧರ್ಮಾಪಚಾಯಿನಿ ।**
**ಧಾರ್ತರಾಷ್ಟ್ರೇ ಶ್ರಿಯಂ ದತ್ತ್ವಾ ಧಾತಾ ಕಿಂ ಫಲಮಶ್ನುತೇ ॥೪೧॥**

ಆರ್ಯರ ಶಾಸನವನ್ನೂ-ಶಾಸ್ತ್ರಗಳನ್ನೂ ಮೀರಿ ನಡೆಯುವ, ಕ್ರೂರಿಯಾದ, ಅಧರ್ಮಿಯಾದ, ಅತಿಗರ್ವಿಯಾದ, ಅತ್ಯಾಶೆಯಿಂದ ಕೂಡಿರುವ ದುರುಳನಾದ ದುರ್ಯೋಧನನಿಗೆ ಅತುಲೈಶ್ವರ್ಯವನ್ನು ಕೊಟ್ಟ ದೈವವು ಯಾವ ಮಹಾಫಲವನ್ನು ಉಪಭುಂಜಿಸುತ್ತದೆ? ಇದರಿಂದ ದೈವಕ್ಕೆ ಆಗುವ ಪ್ರಯೋಜನವಾದರೂ ಏನು?

**ಕರ್ಮ ಚೇತ್ಕೃತಮನ್ವೇತಿ ಕರ್ತಾರಂ ನಾನ್ಯಮೃಚ್ಛತಿ ।**
**ಕರ್ಮಣಾ ತೇನ ಪಾಪೇನ ಲಿಪ್ಯತೇ ನೂನಮೀಶ್ವರಃ ॥೪೨॥**

'ಮಾಡಿದ ಕರ್ಮವು ಕರ್ತನನ್ನೇ ಅನುಸರಿಸುತ್ತದೆ. ಇತರರಿಗೆ ಅದರ ಸಂಬಂಧವಿಲ್ಲ'–ಎನ್ನುವುದಾದರೆ ಈಗ ಕರ್ಮಪ್ರೇರಕನಾದ ಸರ್ವೇಶ್ವರನೂ ಪಾಪಕರ್ಮಗಳಿಗೆ (ಪಾಂಡವ-ಕೌರವರಿಗೆ ವಿರುದ್ಧಫಲವನ್ನು ಕೊಟ್ಟಿರುವುದರಿಂದ) ಖಂಡಿತವಾಗಿಯೂ ಭಾಗಿಯಾಗಬೇಕಾಗುತ್ತದೆ.

ಹಾಗಲ್ಲದೇ ಒಂದು ವೇಳೆ ಮಾನವನು ಮಾಡಿದ ಒಳ್ಳೆಯ ಅಥವಾ ಕೆಟ್ಟ ಕರ್ಮಫಲಗಳು ಸರ್ವಾಂತರ್ಯಾಮಿಯಾದ, ಪ್ರೇರಕನಾದ ಪರಮಾತ್ಮನಿಗೆ ಸೇರುವುದಿಲ್ಲವೆಂದು ಹೇಳುವುದಾದರೆ ( ಪಾಪಮಾಡಿದವನು ಅದರ

ಫಲವನ್ನು ಅನುಭವಿಸಬೇಕಾಗಿಲ್ಲವೆನ್ನುವುದಾದರೆ)–ಪ್ರಪಂಚದಲ್ಲಿ ಸುಖ-ದುಃಖಗಳಿಗೆ ಬಲಾಬಲಗಳೇ ಮುಖ್ಯಕಾರಣವೆಂದು ನಿರ್ಧರಿಸಿ ನಿರ್ಬಲರಾದ (ನಿಮ್ಮಂತಹ) ವರ ವಿಷಯವಾಗಿ ವಿಷಾದಿಸುತ್ತೇನೆ."

(ದ್ರೌಪದಿಯು ಹೇಳಿದ ಮೇಲಿನ ಮಾತುಗಳನ್ನು ನಾವೂ ನಮ್ಮ ಮನೆಗಳಲ್ಲಿಯೂ ಆಡುತ್ತೇವೆ. ಇಂದಿನ ಪ್ರಪಂಚವೂ ಇದೇ ರೀತಿಯಲ್ಲಿದೆ. ಸತ್ಯ-ಧರ್ಮಪರಾಯಣರೆನಿಸಿದವರು ಅನೇಕಾನೇಕ ಕಷ್ಟ-ಕೋಟಲೆಗಳಿಗೆ ಗುರಿಯಾಗುತ್ತಾರೆ. ಅಧರ್ಮ, ಲಂಚ, ದುರ್ಮಾರ್ಗ, ಮೋಸ–ಇವುಗಳಲ್ಲಿ ನಿರತರಾಗಿರುವವರು ಸಕಲವಿಧವಾದ ಸುಖೋಪಭೋಗಗಳನ್ನೂ ಅನುಭವಿಸುತ್ತಿರುತ್ತಾರೆ. ಸಾತ್ತ್ವಿಕನಾದವನು ಸ್ವಭಾವತಃ ಪರರ ಐಶ್ವರ್ಯವನ್ನು ಕಂಡು ಅಸೂಯೆಪಡುವುದಿಲ್ಲ. ತನಗೆ ಸಿಕ್ಕುವುದರಲ್ಲಿಯೇ ತೃಪ್ತಿಪಡುತ್ತಿರುತ್ತಾನೆ. ಆದರೆ ಸಾತ್ತ್ವಿಕನಾದವನಿಗೆ ಕಷ್ಟಪರಂಪರೆಗಳು ಒದಗಿದರೆ ಮಾತ್ರ ಅವನ ಸುತ್ತಲೂ ಇರುವವರು ಅವನನ್ನು ನೋಡಿ ಪರಿಹಾಸ್ಯಮಾಡುತ್ತಾರೆ. ಅಂತಹ ಸಂದರ್ಭಗಳಲ್ಲಿ ದ್ರೌಪದಿಯಾಡಿದ ಮಾತುಗಳೇ ಜನರ ಬಾಯಿಂದಲೂ ಪುನರುಚ್ಚರಿಸಲ್ಪಡುತ್ತಿರುತ್ತವೆ.

ಆದರೆ ಧರ್ಮನಿಷ್ಠನಾದ ಯುಧಿಷ್ಠಿರನು ದ್ರೌಪದಿಯ ಮಾತುಗಳಿಂದ ವಿಮೋಹಿತನಾಗುವುದಿಲ್ಲ. '**ನೇಶೇ ಬಲಸ್ಯೇತಿ ಚರೇದಧರ್ಮಮ್**' ಎಂಬ ಮಂತ್ರವನ್ನು ಆಗ ತಾನೇ ಮಹರ್ಷಿಗಳಾದ ಮಾರ್ಕಂಡೇಯರು ಉಪದೇಶಿಸಿ ಹೋಗಿದ್ದರಲ್ಲವೇ? ಧರ್ಮಮಾರ್ಗವನ್ನೇ ಅನುಸರಿಸಿ ಧರ್ಮಜನು ಉತ್ತರಕೊಡುತ್ತಾನೆ.)

ಖ೩೦ನೆಯ ಅಧ್ಯಾಯವು ಮುಗಿಯಿತು.

ಖ೩೧ನೆಯ ಅಧ್ಯಾಯ ಅರ್ಜುನಾಭಿಗಮನಪರ್ವ (ಮುಂದುವರಿದಿದೆ.)

## ದ್ರೌಪದಿಯ ಆಕ್ಷೇಪಕ್ಕೆ ಯುಧಿಷ್ಠಿರನ ಸಮಾಧಾನಕರವಾದ ಉತ್ತರ

ಜನಮೇಜಯ! ಧರ್ಮಜನು ದ್ರೌಪದಿಗೆ ಹೇಳುತ್ತಾನೆ :

**ವಲ್ಗು ಚಿತ್ರಪದಂ ಶ್ಲಕ್ಷ್ಣಂ ಯಾಜ್ಞಸೇನಿ ತ್ವಯಾ ವಚಃ ।**
**ಉಕ್ತಂ ತಚ್ಛ್ರುತಮಸ್ಮಾಭಿರ್ನಾಸ್ತಿಕ್ಯಂ ತು ಪ್ರಭಾಷಸೇ ॥೧॥**

"ದ್ರೌಪದಿ! ನಿನ್ನ ಮಾತುಗಳು ನಿಶ್ಚಯವಾಗಿಯೂ ಮನಸ್ಸಿಗೆ ಉಲ್ಲಾಸವನ್ನುಂಟುಮಾಡುತ್ತವೆ. ಒಳ್ಳೆಯ ನಿರೂಪಣೆಗಳಿಂದ ಕೂಡಿದುವುಗಳಾಗಿವೆ. ನಿನ್ನ ಮಾತುಗಳೆಲ್ಲವನ್ನೂ ಸಂಪೂರ್ಣವಾಗಿ ಮನನಮಾಡಿರುತ್ತೇನೆ. ನಿನ್ನ ಮಾತುಗಳು ತೋರಿಕೆಯಲ್ಲಿ ತರ್ಕಬದ್ಧವಾಗಿ ಕಂಡುಬಂದರೂ ತತ್ತ್ವತಃ ಅವು ನಾಸ್ತಿಕವಾದದ ರೀತಿಯಲ್ಲಿವೆ.

ಯಾಜ್ಞಸೇನಿ! ನಾನು ಕರ್ಮಾಚರಣೆಯನ್ನು ಫಲಾಪೇಕ್ಷೆಯಿಂದ ಮಾಡುತ್ತಿಲ್ಲ. ದಾನಮಾಡುವುದು ನನ್ನ ಕರ್ತವ್ಯವೆಂದು ದಾನಮಾಡುತ್ತೇನೆ. ಯಜ್ಞಮಾಡುವುದು ನನ್ನ ಕರ್ತವ್ಯವೆಂದು ಯಜ್ಞಮಾಡುತ್ತೇನೆ. ಗೃಹಸ್ಥಾಶ್ರಮದಲ್ಲಿರುವವನು ಯಾವ ಕರ್ಮಾಚರಣೆಗಳನ್ನು ಮಾಡಬೇಕಾಗಿದೆಯೋ ಅಥವಾ ಯಾವ ಕರ್ಮಗಳನ್ನು ಮಾಡಬೇಕೆಂದು ಸ್ಮೃತಿಗಳು ಸಾರಿವೆಯೋ– ಆ ಕರ್ಮಗಳಲ್ಲಿ ನನ್ನಿಂದ ಸಾಧ್ಯವಾದಷ್ಟನ್ನು ಅಥವಾ ನನ್ನ ಶಕ್ತಿಯಿದ್ದಷ್ಟನ್ನು ಮಾಡುತ್ತೇನೆ. ಶ್ರುತಿ-ಸ್ಮೃತ್ಯುಕ್ತವಾಗಿರುವ ಈ ಕರ್ಮಾಚರಣೆಗಳಿಂದ ಫಲಬರಲಿ ; ಬಾರದಿರಲಿ–ಅದರ ವಿವೇಚನೆಯೇ ಇಲ್ಲದೇ ಕರ್ಮಗಳನ್ನು ಆಚರಿಸುತ್ತೇನೆ. ಪಾಂಚಾಲಿ! ನಾನು ಧರ್ಮಾಚರಣೆಮಾಡುವುದೂ ಫಲಾಪೇಕ್ಷೆಯಿಂದಲ್ಲ. ವೇದಮಾರ್ಗದಲ್ಲಿ ಪ್ರವೃತ್ತನಾಗಿರುವುದರಿಂದಲೂ, ಸತ್ಪುರುಷರು ಅನುಸರಿಸುವ ಮಾರ್ಗವನ್ನೇ ಅನುಸರಿಸುವ ಅಪೇಕ್ಷೆಯಿಂದಲೂ ನಾನು ಧರ್ಮಮಾರ್ಗಾವಲಂಬಿಯಾಗಿರುತ್ತೇನೆ. ಸ್ವಭಾವತಃ ನನ್ನ ಮನಸ್ಸು ಧರ್ಮವನ್ನೇ ಅವಲಂಬಿಸಿದೆ.

**ಧರ್ಮವಾಣಿಜ್ಯಕೋ ಹೀನೋ ಜಘನ್ಯೋ ಧರ್ಮವಾದಿನಾಮ್ ।**
**ನ ಧರ್ಮಫಲಮಾಪ್ನೋತಿ ಯೋ ಧರ್ಮಂ ದೋಗ್ಧುಮಿಚ್ಛತಿ ॥೬॥**

ಫಲಾಪೇಕ್ಷೆಯಿಂದ ಧರ್ಮಾಚರಣೆಮಾಡುವವನು 'ವ್ಯಾಪಾರಿ' ಎನಿಸಿಕೊಳ್ಳುತ್ತಾನೆ. ಅಂತಹವನ ಸ್ವಭಾವವೂ ನೀಚವಾಗಿರುತ್ತದೆ. ಧರ್ಮಿಷ್ಠರ ಪಙ್ಕ್ತಿಯಲ್ಲಿ ಅವನನ್ನು ಸೇರಿಸುವ ಸಾಧ್ಯತೆಯೂ ಇಲ್ಲ. ಫಲಾಪೇಕ್ಷೆಯಿಂದಲೇ ಧರ್ಮಾಚರಣೆಮಾಡುವವನಿಗೆ ಧರ್ಮಫಲವೂ ಸಿಕ್ಕುವುದಿಲ್ಲ. ಎರಡನೆಯದಾಗಿ :

**ಯಶ್ಚೈನಂ ಶಙ್ಕತೇ ಕೃತ್ವಾ ನಾಸ್ತಿಕ್ಯಾತ್ಪಾಪಚೇತನಃ ।**
**ಅತಿವಾದಾದ್ವದಾಮ್ಯೇಷ ಮಾ ಧರ್ಮಮಭಿಶಙ್ಕಿಥಾಃ ॥೭॥**

ಕರ್ಮಗಳಲ್ಲಿ ಸಂಶಯವಿರುವವನು ಕರ್ಮಮಾಡಿದರೂ ಕರ್ಮಫಲವನ್ನು ಹೊಂದುವುದಿಲ್ಲ. ನಾನು ವೇದಪ್ರಾಮಾಣ್ಯದಿಂದಲೇ ಈ ಮಾತುಗಳನ್ನು ಹೇಳುತ್ತಿದ್ದೇನೆ. ವೇದಗಳ ಪ್ರಮಾಣವೇ ನಮ್ಮೆಲ್ಲರಿಗೂ ಮಾರ್ಗದರ್ಶನವಾಗಿದೆ. ವೇದಪ್ರಮಾಣವಾಗಿರುವ ಧರ್ಮದ ವಿಷಯದಲ್ಲಿ ಖಂಡಿತವಾಗಿಯೂ ಸಂಶಯಪಡಬೇಡ, ದ್ರೌಪದಿ!

**ಧರ್ಮಾಭಿಶಙ್ಕೀ ಪುರುಷಸ್ತಿರ್ಯಗ್ಗತಿಪರಾಯಣಃ ।**
**ಧರ್ಮೋ ಯಸ್ಯಾಭಿಶಙ್ಕ್ಯಃ ಸ್ಯಾದಾರ್ಷಂ ವಾ ದುರ್ಬಲಾತ್ಮನಃ ।**
**ವೇದಾಚ್ಛೂದ್ರ ಇವಾಪೇಯಾತ್ಸ ಲೋಕಾದಜರಾಮರಾತ್ ॥೮॥**

ಯಾವನು ಧರ್ಮದ ವಿಷಯದಲ್ಲಿ ಸಂಶಯಪಡುವನೋ–ಅವನು ಜನ್ಮಾಂತರದಲ್ಲಿ ತಿರ್ಯಗ್ಯೋನಿಯಲ್ಲಿ ಪಶು-ಪಕ್ಷಿಗಳಾಗಿ ಹುಟ್ಟುತ್ತಾನೆ. ಯಾವಾತನಿಗೆ ಧರ್ಮದ ವಿಷಯದಲ್ಲಿ, ಋಷಿಪ್ರೋಕ್ತವಾದ ಪ್ರವಚನಗಳ ವಿಷಯದಲ್ಲಿ ದುರ್ಬಲವಾದ ಬುದ್ಧಿಯಿರುವುದೋ (ಸಂಶಯವಿರುವುದೋ) ಅವನಿಗೆ ಉತ್ತಮಲೋಕಗಳೂ ಮತ್ತು ಮೋಕ್ಷಮಾರ್ಗವೂ ಅತಿ ದೂರವಾಗುವುವು. ವೇದಗಳಿಗೂ ಮತ್ತು ದಸ್ಯುಗಳಿಗೂ ಬಹಳ ಅಂತರವಿರುವುದೆಂದು ಕೇಳಿರುವೆಯಲ್ಲವೇ? ಅಷ್ಟೇ ಅಂತರವು ಅಧರ್ಮಿಗೂ ಮತ್ತು ಮೋಕ್ಷಕ್ಕೂ ಇರುವುದು.

**ವೇದಾಧ್ಯಾಯೀ ಧರ್ಮಪರಃ ಕುಲೇ ಜಾತೋ ಮನಸ್ವಿನಿ ।**
**ಸ್ಥವಿರೇಷು ಸ ಯೋಕ್ತವ್ಯೋ ರಾಜರ್ಷಿರ್ಧರ್ಮಚಾರಿಭಿಃ ॥೯॥**

ಸತ್ಕುಲಪ್ರಸೂತನಾದ ಬಾಲಕನೊಬ್ಬನು ವೇದ-ವೇದಾಂಗಗಳನ್ನು ಅಧ್ಯಯನಮಾಡಿ ವೇದೋಕ್ತವಾದ ಕರ್ಮಗಳನ್ನು ಅನುಷ್ಠಾನಮಾಡುತ್ತಾ ಧರ್ಮಪರಾಯಣನಾಗಿದ್ದರೆ–ಅಂತಹವನನ್ನು ಧರ್ಮಾತ್ಮರು ವಯಸ್ಸಿಗೆ ಪ್ರಾಧಾನ್ಯವನ್ನು ಕೊಡದೇ ಕೇವಲ ಜ್ಞಾನಕ್ಕೆ ಮತ್ತು ಧರ್ಮಕ್ಕೆ ಪ್ರಾಧಾನ್ಯವನ್ನು ಕೊಟ್ಟು ರಾಜರ್ಷಿಗಳಂತೆಯೇ ಪೂಜಿಸಿ ಗೌರವಿಸುತ್ತಾರೆ.

**ಪಾಪೀಯಾನ್ಸ ಹಿ ಶೂದ್ರೇಭ್ಯಸ್ತಸ್ಕರೇಭ್ಯೋ ವಿಶಿಷ್ಯತೇ ।**
**ಶಾಸ್ತ್ರಾತಿಗೋ ಮನ್ದಬುದ್ಧಿರ್ಯೋ ಧರ್ಮಮಭಿಶಙ್ಕತೇ ॥೧೦॥**

ಯಾವಾತನು ಧರ್ಮಮಾರ್ಗವನ್ನು ತಿರಸ್ಕರಿಸುವನೋ, ಕರ್ಮಗಳಲ್ಲಿ

ಸಂಶಯವುಳ್ಳವನಾಗುವನೋ ಮತ್ತು ಕೇವಲ ದ್ರವ್ಯಕ್ಕಾಗಿ ಪಾಪಕಾರ್ಯಗಳನ್ನು ಮಾಡುವನೋ–ಅಂತಹವನು ವೃದ್ಧನಾಗಿದ್ದರೂ ಶೂದ್ರರಿಗಿಂತಲೂ, ದಸ್ಯುಗಳಿಗಿಂತಲೂ ಹೀನನೆನಿಸುತ್ತಾನೆ.

ದ್ರೌಪದಿ! ಕೆಲವು ದಿನಗಳ ಹಿಂದೆ ಮಹಾಮಹಿಮರಾದ ಮಾರ್ಕಂಡೇಯರ ದರ್ಶನಮಾಡಿದೆಯಲ್ಲವೇ? ಆ ಮಹರ್ಷಿಗಳು ಕೇವಲ ಧರ್ಮಾನುಷ್ಠಾನದಿಂದಲೇ ಚಿರಂಜೀವಿತ್ವವನ್ನು ಪಡೆದವರು. ವ್ಯಾಸ, ವಸಿಷ್ಠ, ಮೈತ್ರೇಯ, ನಾರದ, ಲೋಮಶ, ಶುಕ–ಮೊದಲಾದ ಮಹರ್ಷಿಗಳು ಕೇವಲ ಧರ್ಮಮಾರ್ಗಾವಲಂಬನದಿಂದಲೇ ಪೂತಾತ್ಮರಾಗಿರುತ್ತಾರೆ. ಅವರೆಲ್ಲರನ್ನೂ ನೀನು ಸಂದರ್ಶಿಸಿರುವೆಯಲ್ಲವೇ? ಆ ಮಹರ್ಷಿಗಳು ಶಾಪಾನುಗ್ರಹಗಳೆರಡರಲ್ಲಿಯೂ ಸಮರ್ಥರು ; ಮಹಾತಪಸ್ವಿಗಳು ; ದೇವತೆಗಳಿಂದಲೂ ಪೂಜಿಸಲ್ಪಡತಕ್ಕವರು. (ದೇವತೆಗಳಿಗಿಂತಲೂ ಶ್ರೇಷ್ಠರು.)

ಅವರೆಲ್ಲರೂ ವೇದಮಾರ್ಗಪ್ರವರ್ತಕರಾಗಿರುತ್ತಾರೆ ಮತ್ತು ವೇದವಿಹಿತ ಕರ್ಮಾನುಷ್ಠಾನವೇ ಸರ್ವಶ್ರೇಷ್ಠವಾದುದೆಂದೂ ಸಾರುತ್ತಿದ್ದಾರೆ. ಆದುದರಿಂದ ದೈವವನ್ನು ತೆಗಳುವುದಾಗಲೀ, ಧರ್ಮದಲ್ಲಿ ಸಂಶಯಪಡುವುದಾಗಲೀ ನಿನಗೆ ಉಚಿತವೆನಿಸುವುದಿಲ್ಲ.

**ಉನ್ಮತ್ತಾನ್ಮನ್ಯತೇ ಬಾಲಃ ಸರ್ವಾನಾಗತನಿಶ್ಚಯಾನ್ ।**
**ಧರ್ಮಾಭಿಶಙ್ಕೀ ನಾನ್ಯಸ್ಮಾತ್ಪ್ರಮಾಣಮಧಿಗಚ್ಛತಿ ॥೧೬॥**

ನೀಚನಾದವನು ತಾನೇ ಸರ್ವಜ್ಞನೆಂದು ಭಾವಿಸಿ ಧರ್ಮವನ್ನೂ, ದೈವವನ್ನೂ ತೆಗಳುವ ನಾಸ್ತಿಕವಾದವನ್ನು ಮಾಡುತ್ತಾನೆ. ಆದರೆ ಅವನು ಭೂತ-ಭವಿಷ್ಯದ್ವರ್ತಮಾನಗಳನ್ನು ತಿಳಿದಿರುವ ತ್ರಿಕಾಲಜ್ಞರಾದ ಮಹರ್ಷಿಗಳು ಏನು ಹೇಳುವರೆಂಬ ವಿಷಯಕ್ಕೆ ಸ್ವಲ್ಪವೂ ಗಮನಕೊಡುವುದಿಲ್ಲ. ಆ ಮಹನೀಯರನ್ನು ಹುಚ್ಚರೆನ್ನುತ್ತಾನೆ. ಅವನಿಗೆ ಈ ಪ್ರಪಂಚದಲ್ಲಿ ಇಂದ್ರಿಯತೃಪ್ತಿಗಾಗಿ ಸಿಕ್ಕುವ ವಸ್ತುಗಳೇ ಅತಿಮುಖ್ಯವೆನಿಸುವುವು. ಆ ಮೂಢನು ಇಂದ್ರಿಯಸುಖವೇ ಪರಮಸುಖವೆಂದೂ ಭಾವಿಸುವನು. ಅವನಿಗೆ ಪರಲೋಕ-ಪರದೈವಗಳ ಚಿಂತನೆಯೇ ಇರುವುದಿಲ್ಲ.

**ಪ್ರಾಯಶ್ಚಿತ್ತಂ ನ ತಸ್ಯಾಸ್ತಿ ಯೋ ಧರ್ಮಮಭಿಶಙ್ಕತೇ ।**
**ಧ್ಯಾಯನ್ಸ ಕೃಪಣಃ ಪಾಪೋ ನ ಲೋಕಾನ್ಪ್ರತಿಪದ್ಯತೇ ॥೧೮॥**

ಯಾವನಿಗೆ ಧರ್ಮಾಚರಣೆಯಲ್ಲಿ ಸಂಶಯವಿರುವುದೋ–ಅವನು ಮಾಡುವ ಅಪರಾಧಗಳಿಗೆ ಪ್ರಾಯಶ್ಚಿತ್ತವೆಂಬುದೇ ಇಲ್ಲ. ಅರ್ಥ-ಕಾಮ ಗಳನ್ನೇ ಸದಾ ಚಿಂತಿಸುವ ಕೃಪಣನಾದ ಮತ್ತು ಪಾಪಿಯಾದ ಅವನು ಪರಲೋಕಗಳನ್ನು ಪಡೆಯಲಾರನು.

**ಪ್ರಮಾಣಾದ್ಧಿ ನಿವೃತ್ತೋ ಹಿ ವೇದಶಾಸ್ತ್ರಾರ್ಥನಿನ್ದಕಃ ।**
**ಕಾಮಲೋಭಾತಿಗೋ ಮೂಢೋ ನರಕಂ ಪ್ರತಿಪದ್ಯತೇ ॥೧೯॥**

ವೇದಪ್ರಾಮಾಣ್ಯವನ್ನು ನಿರಾಕರಿಸುವವನು, ವೇದಗಳಿಗೆ ಅಪಾರ್ಥ ಮಾಡುವವನು, ಕಾಮಾರ್ಥಪರನಾಗಿರುವ ಮೂಢನು–ಕಾಲಾಂತರದಲ್ಲಿ ನರಕವಾಸವನ್ನು ಅನುಭವಿಸುತ್ತಾನೆ.

**ಯಸ್ತು ನಿತ್ಯಂ ಕೃತಮತಿರ್ಧರ್ಮಮೇವಾಭಿಪದ್ಯತೇ ।**
**ಅಶಙ್ಕಮಾನಃ ಕಲ್ಯಾಣಿ ಸೋಽಮುತ್ರಾನನ್ತ್ಯಮಶ್ನುತೇ ॥೨೦॥**

ಕಲ್ಯಾಣಿ! ಯಾವಾತನು ವೇದ ಮತ್ತು ಧರ್ಮಗಳ ವಿಷಯದಲ್ಲಿ ಶಂಕಿಸದೇ ಕರ್ತವ್ಯದೃಷ್ಟಿಯಿಂದ ನಿತ್ಯವೂ ಧರ್ಮಾಚರಣೆಮಾಡುವನೋ–ಅಂತಹವನಿಗೆ ನಿಶ್ಚಯವಾಗಿಯೂ ಉತ್ತಮಲೋಕಗಳು ಸಿಕ್ಕುತ್ತವೆ.

**ಆರ್ಷಂ ಪ್ರಮಾಣಮುತ್ಕ್ರಮ್ಯ ಧರ್ಮಂ ನ ಪ್ರತಿಪಾಲಯನ್ ।**
**ಸರ್ವಶಾಸ್ತ್ರಾತಿಗೋ ಮೂಢಃ ಶಂ ಜನ್ಮಸು ನ ವಿನ್ದತಿ ॥೨೧॥**

ಆರ್ಷಪ್ರಮಾಣವನ್ನು ಅಲ್ಲಗಳೆಯುತ್ತಾ ಧರ್ಮವನ್ನು ಪರಿಪಾಲಿಸದೇ ಶಾಸ್ತ್ರಗಳನ್ನು ವಿರೋಧಿಸುವ ಮೂಢನು ಜನ್ಮ-ಜನ್ಮಾಂತರಗಳಲ್ಲಿಯೂ ಸುಖವನ್ನು ಪಡೆಯುವುದಿಲ್ಲ.

**ಯಸ್ಯ ನಾರ್ಷಂ ಪ್ರಮಾಣಂ ಸ್ಯಾಚ್ಛಿಷ್ಟಾಚಾರಶ್ಚ ಭಾಮಿನಿ ।**
**ನ ವೈ ತಸ್ಯ ಪರೋ ಲೋಕೋ ನಾಯಮಸ್ತೀತಿ ನಿಶ್ಚಯಃ ॥೨೨॥**

ಆರ್ಷಪ್ರಮಾಣವನ್ನು ಯಾವನು ಒಪ್ಪುವುದಿಲ್ಲವೋ, ಶಿಷ್ಟಾಚಾರದಂತೆ ಯಾವನು ನಡೆಯುವುದಿಲ್ಲವೋ–ಅವನಿಗೆ ಖಂಡಿತವಾಗಿಯೂ ಉತ್ತಮಲೋಕಗಳ ಪ್ರಾಪ್ತಿಯಿಲ್ಲ. ಏಕೆಂದರೆ : ಪರಲೋಕವಿಲ್ಲವೆಂಬುದೇ ಅವನ ನಿಶ್ಚಯವಷ್ಟೇ. ಕೃಷ್ಣೇ! ಶಿಷ್ಟರು ಆಚರಿಸುವ ಧರ್ಮದಲ್ಲಿ ಸಂಶಯ

ಪಡಬೇಡ. ಶಿಷ್ಟರಿಂದ ಆಚರಿಸಲ್ಪಟ್ಟ ಈ ಧರ್ಮವು ಬಹಳ ಪುರಾತನವಾದುದು ; ಋಷಿಪ್ರೋಕ್ತವಾದುದು ಮತ್ತು ಸರ್ವಜ್ಞರಿಂದಲೂ, ಆತ್ಮದರ್ಶಿಗಳಿಂದಲೂ ಪ್ರತಿಪಾದಿತವಾದುದು.

**ಧರ್ಮ ಏವ ಪ್ಲವೋ ನಾನ್ಯಃ ಸ್ವರ್ಗಂ ದ್ರೌಪದಿ ಗಚ್ಛತಾಮ್ ।**
**ಸೈವ ನೌಃ ಸಾಗರಸ್ಯೇವ ವಣಿಜಃ ಪಾರಮಿಚ್ಛತಃ ॥೨೪॥**

ಸಮುದ್ರವನ್ನು ದಾಟಲು ಇಚ್ಛಿಸುವ ವ್ಯಾಪಾರಿಗೆ ನೌಕೆಯು ಸಾಧನವಾಗುವಂತೆ–ಸ್ವರ್ಗವನ್ನು ಅಥವಾ ಉತ್ತಮಲೋಕಗಳನ್ನು ಪಡೆಯಲು ಇಚ್ಛಿಸುವವನಿಗೆ ಧರ್ಮವೇ ಹಡಗಿನ ರೂಪದಲ್ಲಿರುತ್ತದೆ. ಬೇರೆ ಯಾವುದೂ ಇಲ್ಲ.

**ಅಫಲೋ ಯದಿ ಧರ್ಮಃ ಸ್ಯಾಚ್ಚರಿತೋ ಧರ್ಮಚಾರಿಭಿಃ ।**
**ಅಪ್ರತಿಷ್ಠೇ ತಮಸ್ಯೇತಜ್ಜಗನ್ಮಜ್ಜೇದನಿನ್ದಿತೇ ॥೨೫॥**

ಅನಿಂದ್ಯಳೇ! ಧರ್ಮಾತ್ಮರಿಂದ ಆಚರಿಸಲ್ಪಡುವ ಈ ಧರ್ಮವು ನಿಷ್ಫಲವೇ ಆಗಿದ್ದರೆ–ಈ ವೇಳೆಗೆ ಈ ಪ್ರಪಂಚವೇ ಗಾಢಾಂಧಕಾರದಲ್ಲಿ ಮುಳುಗಿಹೋಗುತ್ತಿತ್ತು.

**ನಿರ್ವಾಣಂ ನಾಧಿಗಚ್ಛೇಯುರ್ಜೀವೇಯುಃ ಪಶುಜೀವಿಕಾಮ್ ।**
**ವಿದ್ಯಾಂ ತೇ ನೈವ ಯುಜ್ಯೇಯುರ್ನ ಚಾರ್ಥಂ ಕೇಚಿದಾಪ್ನುಯುಃ ॥**

ಮೋಕ್ಷಕ್ಕಾಗಿ ಯಾರೂ ಯತ್ನಿಸುತ್ತಿರಲಿಲ್ಲ. ಅರ್ಥ ಮತ್ತು ವಿದ್ಯೆಗಳೂ ಯಾರಿಗೂ ಬೇಕಾಗುತ್ತಿರಲಿಲ್ಲ. ಮಾನವರೆಲ್ಲರೂ ಪಶುಗಳಂತೆಯೇ ಜೀವನವನ್ನು ನಡೆಸುತ್ತಿದ್ದರು. ತಪಸ್ಸು, ಬ್ರಹ್ಮಚರ್ಯೆ, ಯಜ್ಞ, ಅಧ್ಯಯನ, ದಾನ, ಆರ್ಜವ–ಇವೆಲ್ಲವೂ ನಿಷ್ಫಲಗಳೇ ಆಗಿದ್ದರೆ–ಅನೂಚಾನವಾಗಿ ಸತ್ಪುರುಷರು ಈ ಶ್ರೇಷ್ಠಧರ್ಮಗಳನ್ನು ಆಚರಿಸಿಕೊಂಡು ಬರುತ್ತಿರಲಿಲ್ಲ. ಈ ಕರ್ಮಗಳು ಫಲಪ್ರದವಾಗದಿದ್ದರೆ–ಇವುಗಳಲ್ಲಿ ಪ್ರವೃತ್ತಿಯೂ ವಂಚನೆಯೆಂದೇ ಹೇಳಬೇಕಾಗುತ್ತದೆ. ನಿನ್ನ ಅಭಿಪ್ರಾಯದಂತೆ ಈ ಕರ್ಮಗಳು ಫಲವಿಹೀನವೇ ಆಗುವುದಾದರೆ ಈ ಧರ್ಮಗಳ ಪ್ರವರ್ತಕರಾದ ಋಷಿಗಳೂ, ದೇವತೆಗಳೂ, ಗಂಧರ್ವರೂ, ಸುರರೂ, ರಾಕ್ಷಸರೂ–ಈ ಧರ್ಮಗಳನ್ನೇಕೆ ಬಹಳ ಆಸಕ್ತಿಯಿಂದ ಆಚರಿಸುತ್ತಿದ್ದರು?

**ಫಲದಂ ತ್ವಿಹ ವಿಜ್ಞಾಯ ಧಾತಾರಂ ಶ್ರೇಯಸಿ ಧ್ರುವಮ್ ।**
**ಧರ್ಮಂ ತೇ ವ್ಯಚರನ್ಕೃಷ್ಣೇ ತದ್ಧಿ ಶ್ರೇಯಃ ಸನಾತನಮ್ ॥೩೦॥**

ಧರ್ಮಾಚರಣೆಯು ಫಲದಾಯಕವೆಂಬ ಮತ್ತು ಧರ್ಮವನ್ನಾಚರಿಸಿದರೆ ದೈವವು ಶ್ರೇಯಸ್ಸನ್ನುಂಟುಮಾಡುವುದೆಂಬ ದೃಢನಿಶ್ಚಯದಿಂದ ಅವರು ಆರ್ಷೇಯವಾದ ಧರ್ಮಾಚರಣೆಗಳನ್ನು ಮಾಡುತ್ತಿದ್ದರು. ಇದೇ ವಿಶ್ವಾಸದಿಂದ ಧರ್ಮಾಚರಣೆಮಾಡುವುದೇ ಸನಾತನಧರ್ಮ ಮತ್ತು ಶ್ರೇಯಸ್ಸಿಗೆ ಸಾಧನ. ದ್ರೌಪದಿ! ವಿದ್ಯೆ ಮತ್ತು ತಪಸ್ಸುಗಳ ಫಲಗಳೂ ನಮಗೆ ಪ್ರತ್ಯಕ್ಷಗೋಚರವಾಗಿರುವಾಗ ಅಧರ್ಮ ಮತ್ತು ಧರ್ಮಗಳ ಫಲಗಳೂ ಸಿದ್ಧವಾದಂತೆಯೇ ಅಲ್ಲವೇ? ಅಧರ್ಮಕ್ಕೆ ದುಷ್ಟಫಲಗಳೂ, ಸದ್ಧರ್ಮಕ್ಕೆ ಒಳ್ಳೆಯ ಫಲಗಳೂ ಉಂಟಾಗುತ್ತವೆ. ತಪಸ್ಸಿಗೆ ಫಲವುಂಟೆಂಬುದಕ್ಕೆ ನೀನೇ ಪ್ರತ್ಯಕ್ಷಸಾಕ್ಷಿಯಾಗಿರುವೆ.

ನೀನು ಹೇಗೆ ಹುಟ್ಟಿದೆಯೆಂಬುದನ್ನೇ ಸ್ಮರಿಸು, ಪಾಂಚಾಲಿ! ಮಹಾಮಹಿಮನಾದ ಧೃಷ್ಟದ್ಯುಮ್ನನು ಹೇಗೆ ಜನ್ಮತಾಳಿದನು? ಆ ವೃತ್ತಾಂತವನ್ನು ನೀನು ಪೂರ್ಣವಾಗಿ ಕೇಳಿರುವೆಯಲ್ಲವೇ? ನೀವಿಬ್ಬರೂ ಜನ್ಮತಾಳಿರುವುದು ಧರ್ಮಾಚರಣೆಯ ಫಲದಿಂದಲೇ ಅಲ್ಲವೇ? ಧರ್ಮವು ಫಲದಾಯಕವೆಂಬುದಕ್ಕೆ ಇದಕ್ಕಿಂತಲೂ ಹೆಚ್ಚಿನ ನಿದರ್ಶನವು ಬೇಕಾಗಿರುವುದೇ? ಯಾರು ಜಿತೇಂದ್ರಿಯರಾಗಿ, ಅಲ್ಪಸಂತುಷ್ಟರಾಗಿ ಕರ್ಮಾಚರಣೆ ಮಾಡುವರೋ–ಅವರು ಕರ್ಮದ ಫಲವನ್ನೂ ಪಡೆದೇ ಪಡೆಯುತ್ತಾರೆ.

**ಬಹುನಾಪಿ ಹ್ಯವಿದ್ವಾಂಸೋ ನೈವ ತುಷ್ಯನ್ತ್ಯಬುದ್ಧಯಃ ।**
**ತೇಷಾಂ ನ ಧರ್ಮಜಂ ಕಿಂಚಿತ್ಪ್ರೇತ್ಯ ಶರ್ಮಾಸ್ತಿ ವಾ ಪುನಃ ॥೩೪॥**

ಮೂಢರಾದವರು ಯಾವಾಗಲೂ ಎಷ್ಟೇ ಸಿಕ್ಕಿದರೂ ಅಸಂತುಷ್ಟರಾಗಿದ್ದುಕೊಂಡು ಇಹದಲ್ಲಿಯೂ ಸಂತೋಷಿಸುವುದಿಲ್ಲ. ಧರ್ಮಾಚರಣೆಯನ್ನು ಮಾಡದ ಅವರಿಗೆ ಪರಲೋಕದಲ್ಲಿಯೂ ಧರ್ಮಜನಿತವಾದ ಸುಖವು ಸಿಕ್ಕುವುದಿಲ್ಲ.

ಕರ್ಮಗಳಿಗೆ ಪಾಪ-ಪುಣ್ಯಫಲಗಳು ಹೇಗೆ ಪ್ರಾಪ್ತವಾಗುತ್ತವೆ?

ಮತ್ತು ಕರ್ಮಗಳಲ್ಲಿ ಪ್ರವೃತ್ತಿ-ನಿವೃತ್ತಿಗಳು ಹೇಗೆ?–ಎಂಬುದು ದೇವರಹಸ್ಯ ವಾಗಿದೆ, ದ್ರೌಪದಿ!

ಜನಸಾಮಾನ್ಯರು ಈ ಧರ್ಮಸೂಕ್ಷ್ಮವನ್ನರಿಯದೇ ಭ್ರಾಂತರಾಗಿ ಅವಿದ್ಯೆಯನ್ನು–ವಿದ್ಯೆಯೆಂಬುದಾಗಿಯೂ, ವಿದ್ಯೆಯನ್ನು–ಅವಿದ್ಯೆಯೆಂಬು ದಾಗಿಯೂ ತಿಳಿದು ಅದರಂತೆ ಆಚರಿಸುವುದರಿಂದ ಸಹಸ್ರಕಲ್ಪಗಳವರೆಗೂ ಶ್ರೇಯಸ್ಸನ್ನು ಸಾಧಿಸಲಾಗದೇ ನಾನಾಯೋನಿಗಳಲ್ಲಿ ಜನ್ಮಗಳನ್ನು ಪಡೆಯು ತ್ತಾರೆ. ದೇವತೆಗಳ ಮಾಯೆಯು ಗುಟ್ಟಾದುದು. ಈ ರಹಸ್ಯಗಳನ್ನು ದೇವತೆ ಗಳು ರಕ್ಷಿಸಿಕೊಳ್ಳುತ್ತಾರೆ. ಶಾಂತರಾಗಿರುವ, ದಾಂತರಾಗಿರುವ, ಅಲ್ಪಸಂತುಷ್ಟ ರಾಗಿರುವ, ಆಶೆಯನ್ನು ಪರಿತ್ಯಜಿಸಿರುವ, ತಪಸ್ಸಿನಿಂದ ಪಾಪಗಳನ್ನು ಕಳೆದುಕೊಂಡಿರುವ ಯೋಗಿಗಳು ತದೇಕಚಿತ್ತರಾಗಿ ಧ್ಯಾನೋಪಾಸನೆಗಳಿಂದ ದೇವರಹಸ್ಯವನ್ನು ಅಥವಾ ಧರ್ಮಸೂಕ್ಷ್ಮವನ್ನು ತಿಳಿಯಲು ಸಮರ್ಥರಾಗುತ್ತಾರೆ.

**ನ ಫಲಾದರ್ಶನಾದ್ಧರ್ಮಃ ಶಙ್ಕಿತವ್ಯೋ ನ ದೇವತಾಃ ।**
**ಯಷ್ಟವ್ಯಂ ಚ ಪ್ರಯತ್ನೇನ ದಾತವ್ಯಂ ಚಾನಸೂಯತಾ ॥೩೮॥**

ಧರ್ಮದ ಫಲವನ್ನು ಸದ್ಯಃ ಕಾಣದ ಮಾತ್ರಕ್ಕೆ ಧರ್ಮವನ್ನೂ ಮತ್ತು ದೇವತೆಗಳನ್ನೂ ಶಂಕಿಸಬೇಡ, ದ್ರೌಪದಿ! ಕರ್ತವ್ಯದೃಷ್ಟಿಯಿಂದ ಯಜ್ಞ-ಯಾಗಾದಿಗಳನ್ನು ಮಾಡಿಯೇ ತೀರಬೇಕು ಮತ್ತು ಅಸೂಯೆಯಿಲ್ಲದೇ ದಾನಮಾಡಬೇಕು.

**ಕರ್ಮಣಾಂ ಫಲಮಸ್ತೀಹ ತಥೈತದ್ಧರ್ಮಶಾಸನಮ್ ।**
**ಬ್ರಹ್ಮಾ ಪ್ರೋವಾಚ ಪುತ್ರಾಣಾಂ ಯದೃಷಿರ್ವೇದ ಕಶ್ಯಪಃ ॥೩೯॥**

'ಕರ್ಮಗಳಿಗೆ ಫಲವಿದ್ದೇ ಇದೆ. ಇದು ಧರ್ಮಶಾಸ್ತ್ರದ ಶಾಸನ' ಹೀಗೆಂದು ಬ್ರಹ್ಮನು ತನ್ನ ಪುತ್ರರಿಗೆ ಹೇಳಿದನು. ಹೀಗೆ ಆ ರಹಸ್ಯವನ್ನು ಕಶ್ಯಪರು ತಿಳಿದುಕೊಂಡರು. ನನ್ನೀ ಪ್ರವಚನದಿಂದ ನಿನ್ನ ಸಂಶಯವು–ಸೂರ್ಯೋದಯವಾದ ಕೂಡಲೇ ಕರಗಿ ಹೋಗುವ ಮಂಜಿನಂತೆ–ನಾಶ ಹೊಂದಲಿ. ನಾನು ಹೇಳಿದುದೆಲ್ಲವನ್ನೂ ಮನಸ್ಸಿನಲ್ಲಿ ತರ್ಕಿಸುವುದರಿಂದ ಎಲ್ಲವೂ ಇದೆಯೆಂದು ನಿಶ್ಚಯಿಸಿ, ನಿನ್ನ ಮನಸ್ಸಿನಲ್ಲಿ ಉದ್ಭೂತವಾಗಿರುವ ನಾಸ್ತಿಕ್ಯವು ನಷ್ಟವಾಗಿ ಆಸ್ತಿಕ್ಯದ ಪ್ರಾದುರ್ಭಾವವಾಗಲಿ.

**ಈಶ್ವರಂ ಚಾಪಿ ಭೂತಾನಾಂ ಧಾತಾರಂ ಮಾ ಚ ವೈ ಕ್ಷಿಪ ।**
**ಶಿಕ್ಷಸ್ವೈನಂ ನಮಸ್ವೈನಂ ಮಾ ತೇಽಭೂದ್ಬುದ್ಧಿರೀದೃಶೀ ॥೪೧॥**

**ಯಸ್ಯ ಪ್ರಸಾದಾತ್ತದ್ಭಕ್ತೋ ಮರ್ತ್ಯೋ ಗಚ್ಛತ್ಯಮರ್ತ್ಯತಾಮ್ ।**
**ಉತ್ತಮಾಂ ದೇವತಾಂ ಕೃಷ್ಣೇ ಮಾವಮಂಸ್ಥಾಃ ಕಥಂಚನ ॥೪೨॥**

ಕೃಷ್ಣೇ! ಚರಾಚರಪ್ರಾಣಿಗಳಿಗೆ ಸಾಕ್ಷಿಭೂತನಾಗಿರುವ, ಸರ್ವಾಂತರ್ಯಾಮಿಯಾಗಿರುವ, ಸಕಲರಿಗೂ ಸ್ವಾಮಿಯಾಗಿರುವ ಪರಮಪುರುಷನನ್ನು ನಿಂದಿಸಬೇಡ. ಅವನನ್ನು ಸೇರುವುದು ಹೇಗೆಂಬುದನ್ನು ದಾನ-ತಪೋ-ಯಜ್ಞಗಳಿಂದ ತಿಳಿ. ಅವನಿಗೆ ಶರಣಾಗತಳಾಗು. ಯಾರ ಪ್ರಸಾದದಿಂದ ಮರ್ತ್ಯನು ಅಮರ್ತ್ಯನಾಗುವನೋ–ಅಂತಹ ಪರಮಪುರುಷನನ್ನು ಯಾವ ಕಾರಣದಿಂದಲೂ ಅನಾದರಣೆಮಾಡಬೇಡ."

೩೧ನೆಯ ಅಧ್ಯಾಯವು ಮುಗಿಯಿತು.

೩೨ನೆಯ ಅಧ್ಯಾಯ ಅರ್ಜುನಾಭಿಗಮನಪರ್ವ (ಮುಂದುವರಿದಿದೆ.)

## ದ್ರೌಪದಿಯಿಂದ ಪುರುಷಪ್ರಯತ್ನದ ಪ್ರಶಂಸೆ

(ಧರ್ಮಜನು ಆಡಿದ ಮಾತುಗಳು ದ್ರೌಪದಿಗೆ ಸಮ್ಮತವಾಗಲಿಲ್ಲ. ಧರ್ಮವನ್ನೇ ಪ್ರಧಾನವನ್ನಾಗಿಟ್ಟುಕೊಂಡು ದೈವವನ್ನೇ ಆಶ್ರಯಿಸಿ ಕುಳಿತುಕೊಳ್ಳಕೂಡದೆಂಬುದು ದ್ರೌಪದಿಯ ಅಭಿಪ್ರಾಯ. ಮನುಷ್ಯಪ್ರಯತ್ನವೇ ಪ್ರಧಾನವಾದುದೆಂದೂ, ಆ ಪ್ರಯತ್ನಕ್ಕೆ ದೈವಬಲವಿರಬೇಕೆಂಬುದೂ ದ್ರೌಪದಿಯ ಅಭಿಪ್ರಾಯವಾಗಿದೆ.)

ತನ್ನ ನಿಶ್ಚಯವನ್ನೇ ಪ್ರತಿಪಾದಿಸುತ್ತಾ ದ್ರೌಪದಿಯು ಧರ್ಮಜನಿಗೆ ಹೇಳುತ್ತಾಳೆ :

**ನಾವಮನ್ಯೇ ನ ಗರ್ಹೇ ಚ ಧರ್ಮಂ ಪಾರ್ಥ ಕಥಂಚನ ।**
**ಈಶ್ವರಃ ಕುತ ಏವಾಹಮವಮಂಸ್ಯೇ ಪ್ರಜಾಪತಿಮ್ ॥೧॥**

"ಧರ್ಮಜ! ನೀನು ಭಾವಿಸಿರುವಂತೆ ನಾನು ಧರ್ಮವನ್ನು ತಿರಸ್ಕರಿಸುವುದೂ ಇಲ್ಲ ; ನಿಂದಿಸುವುದೂ ಇಲ್ಲ. ಚರಾಚರಪ್ರಾಣಿಗಳಿಗೂ ಸ್ವಾಮಿಯಾದ ಪರಮಾತ್ಮನನ್ನು ನಾನೇಕೆ ನಿಂದಿಸಲಿ? ನಾನಾವಿಧವಾದ ಕಷ್ಟಗಳಿಗೆ

ಸಿಕ್ಕಿ ತೊಳಲುತ್ತಿರುವ ನಾನು ನನ್ನ ದುಃಖವನ್ನು ನಿನ್ನಲ್ಲಿ ತೋಡಿ ಕೊಂಡೆನು ; ವಿಲಪಿಸಿದೆನು ; ಮತ್ತೂ ವಿಲಪಿಸುತ್ತೇನೆ. ನನ್ನ ವಿಲಾಪವನ್ನು ಒಳ್ಳೆಯ ಮನಸ್ಸಿನಿಂದ ಕೇಳು, ಯುಧಿಷ್ಠಿರ!

**ಕರ್ಮ ಖಲ್ವಿಹ ಕರ್ತವ್ಯಂ ಜಾನತಾಮಿತ್ರಕರ್ಶನ ।**
**ಅಕರ್ಮಾಣೋ ಹಿ ಜೀವನ್ತಿ ಸ್ಥಾವರಾ ನೇತರೇ ಜನಾಃ ॥೩॥**

ಶತ್ರುಗಳ ವಿಧ್ವಂಸಕನೇ! ಈ ಪ್ರಪಂಚದಲ್ಲಿ ಕರ್ಮಮಾಡುವುದು ಬುದ್ಧಿಯಿರುವ ಪ್ರಾಣಿಮಾತ್ರದ ಮುಖ್ಯಕರ್ತವ್ಯವಾಗಿದೆ. ಸ್ಥಾವರಗಳು ಮಾತ್ರ ಯಾವ ಕರ್ಮವನ್ನೂ ಮಾಡಲಾರವು. ಸ್ಥಾವರಗಳನ್ನು ಬಿಟ್ಟು ಉಳಿದ ಯಾರೇ ಆದರೂ ಕರ್ಮಮಾಡದೇ ಬದುಕಲಾರರು.

**ಯಾವದ್ಗೋಸ್ತನಪಾನಾಚ್ಚ ಯಾವಚ್ಛಾಯೋಪಸೇವನಾತ್ ।**
**ಜನ್ತವಃ ಕರ್ಮಣಾ ವೃತ್ತಿಮಾಪ್ನುವನ್ತಿ ಯುಧಿಷ್ಠಿರ ॥೪॥**

**ಜಙ್ಗಮೇಷು ವಿಶೇಷೇಣ ಮನುಷ್ಯಾ ಭರತರ್ಷಭ ।**
**ಇಚ್ಛನ್ತಿ ಕರ್ಮಣಾ ವೃತ್ತಿಮವಾಪ್ತುಂ ಪ್ರೇತ್ಯ ಚೇಹ ಚ ॥೫॥**

ಯಾವ ರೀತಿಯಲ್ಲಿ ಹುಟ್ಟಿದೊಡನೆಯೇ ಕರುವು ಯಾರಿಂದಲೂ ನಿರ್ದೇಶಿಸಲ್ಪಡದಿದ್ದರೂ ತನ್ನ ತಾಯಿಯ ಕೆಚ್ಚಲನ್ನು ಹುಡುಕಿಕೊಂಡು ಹೋಗುವುದೋ ಮತ್ತು ಯಾವ ರೀತಿಯಲ್ಲಿ ನೆರಳಿರುವ ಕಡೆ ವಿಶ್ರಮಿಸಿ ಕೊಳ್ಳುವುದೋ–ಅದೇ ರೀತಿಯಲ್ಲಿ ಸಮಸ್ತಪ್ರಾಣಿಗಳೂ ಕರ್ಮದಿಂದಲೇ ಜೀವನನಿರ್ವಹಣೆಯನ್ನು ಮಾಡುತ್ತವೆ. ಆದರೆ ಪ್ರಾಣಿಕೋಟಿಯಲ್ಲಿ ಮನುಷ್ಯನನ್ನುಳಿದು ಇತರ ಪ್ರಾಣಿಗಳು ಸ್ವಭಾವಜನ್ಯವಾದ ಕಾರ್ಯ ಮಾಡುತ್ತವೆಯೇ ಹೊರತು ಆಮುಷ್ಮಿಕ ಸುಖಗಳನ್ನು ಅನುಭವಿಸುವ ಕರ್ಮಗಳನ್ನು ಮಾಡಲಾರವು. ಮನುಷ್ಯನು ಮಾತ್ರ ಇಹ-ಪರಗಳಲ್ಲಿ ತನ್ನ ಉಚ್ಛ್ರಾಯಕ್ಕಾಗಲೀ, ಅಧೋಗತಿಗಾಗಲೀ ಸಾಧಕವಾದ ಕಾರ್ಯಮಾಡಲು ಸಮರ್ಥನಾಗಿರುತ್ತಾನೆ.

**ಉತ್ಥಾನಮಭಿಜಾನನ್ತಿ ಸರ್ವಭೂತಾನಿ ಭಾರತ ।**
**ಪ್ರತ್ಯಕ್ಷಂ ಫಲಮಶ್ನನ್ತಿ ಕರ್ಮಣಾಂ ಲೋಕಸಾಕ್ಷಿಕಮ್ ॥೬॥**

ಸಮಸ್ತಪ್ರಾಣಿಗಳೂ ಅವುಗಳ ಅಭಿವೃದ್ಧಿಯು ಹೇಗೆಂಬುದನ್ನು ತಿಳಿ

ದಿರುತ್ತವೆ. ಲೋಕಸಾಕ್ಷಿಕವಾದ ಪ್ರತ್ಯಕ್ಷಫಲವನ್ನು ಅವು ಉಪಭೋಗಿಸುತ್ತಲೇ ಇರುತ್ತವೆ.

**ಸರ್ವೇ ಹಿ ಸ್ವಂ ಸಮುತ್ಥಾನಮುಪಜೀವನ್ತಿ ಜನ್ತವಃ ।**
**ಅಪಿ ಧಾತಾ ವಿಧಾತಾ ಚ ಯಥಾಯಮುದಕೇ ಬಕಃ ॥೭॥**

ಸಕಲಪ್ರಾಣಿಗಳೂ ಅಭಿವೃದ್ಧಿ ಹೊಂದುವ ಉದ್ಯೋಗವನ್ನು ಆಶ್ರಯಿಸಿ ಜೀವಿಸುತ್ತವೆ. ಸರೋವರದ ಸಮೀಪದಲ್ಲಿ (ಮೀನನ್ನು ಹಿಡಿಯಲು) ಬಕವು ಕಣ್ಣುಮುಚ್ಚಿಕೊಂಡು ಧ್ಯಾನಮಾಡುತ್ತಿರುವಂತೆ ನಿಂತಿರುತ್ತದೆ. ಹೀಗೆ ಮಾಡಬೇಕೆಂದು ಯಾರಾದರೂ ಅದಕ್ಕೆ ಹೇಳಿಕೊಟ್ಟಿರುವರೇ? ಇದು ಬಕದ ಸ್ವಭಾವಜನ್ಯವಾದ ಕರ್ಮ. ಅದೇ ರೀತಿಯಲ್ಲಿ ಸಕಲಪ್ರಾಣಿಗಳೂ ತಮ್ಮ ಸ್ವಾಭಾವಿಕವಾದ ಕರ್ಮಗಳಿಂದ ಜೀವನನಿರ್ವಹಣೆಯನ್ನು ಮಾಡಿಕೊಳ್ಳುತ್ತವೆ. ಬ್ರಹ್ಮನೂ ಹಿಂದೆ ಸೃಷ್ಟಿಸಿದ್ದಂತೆಯೇ ಈ ಜಗತ್ತನ್ನು ಪುನಃ ಸೃಷ್ಟಿಸಿದ್ದಾನೆ. '**ಧಾತಾ ಯಥಾಪೂರ್ವಮಕಲ್ಪಯತ್**' ಎಂಬ ಶ್ರುತಿಪ್ರಮಾಣದಂತೆ ಪ್ರಪಂಚವನ್ನು ಪುನಃ ಪುನಃ ಸೃಷ್ಟಿಸುತ್ತಿರುವುದೇ ಬ್ರಹ್ಮನ ಸ್ವಭಾವಜನ್ಯವಾದ ಕರ್ಮ. ಆದುದರಿಂದ :

**ಅಕರ್ಮಣಾಂ ವೈ ಭೂತಾನಾಂ ವೃತ್ತಿಸ್ಸ್ಯಾನ್ನ ಹಿ ಕಾಚನ ।**
**ತದೇವಾಭಿಪ್ರಪದ್ಯೇತ ನ ವಿಹನ್ಯಾತ್ಕದಾಚನ ॥೮॥**

ಪ್ರಪಂಚದಲ್ಲಿ ಪ್ರಾಣಿಗಳಿಗೆ ಕರ್ಮವೆಂಬುದು ಜನ್ಮಸಿದ್ಧವಾದುದು. ಯಾವ ಪ್ರಾಣಿಗೂ ಕರ್ಮಮಾಡದೇ ಬದುಕಲು ಸಾಧ್ಯವೇ ಇಲ್ಲ. ಹಿಂದೆಯೇ ಹೇಳಿದಂತೆ ಕರ್ಮವು ಮನುಷ್ಯನನ್ನು ಛಾಯೆಯಂತೆ ಅನುಸರಿಸಿಕೊಂಡಿದೆ. ಆದುದರಿಂದ ನೀನೂ ನಿನ್ನ ಕರ್ತವ್ಯವನ್ನು ಮಾಡು. ಆಲಸ್ಯದಿಂದಿರಬೇಡ. ತಾನು ಹಿಂದೆಮಾಡಿದ ಇಂತಹ ಕರ್ಮದ ಫಲವೇ ಇಂದು ತಾನು ಅನುಭವಿಸುತ್ತಿರುವ ಕಷ್ಟ ಅಥವಾ ಸುಖ ಎಂದು ನೆನಪಿಗೆ ತಂದುಕೊಳ್ಳ ಬಲ್ಲವನು ಸಹಸ್ರ ಜನರಲ್ಲಿ ಒಬ್ಬನಾದರೂ ಇರುವನೋ ಇಲ್ಲವೋ!

**ತಸ್ಯ ಚಾಪಿ ಭವೇತ್ಕಾರ್ಯಂ ವಿವೃದ್ಧೌ ರಕ್ಷಣೇ ತಥಾ ।**
**ಭಕ್ಷ್ಯಮಾಣೋ ಹ್ಯನಾದಾನಾತ್ಕ್ಷೀಯೇತ ಹಿಮವಾನಪಿ ॥೧೦॥**

ಮಾನವನು ಐಶ್ವರ್ಯದ ಪ್ರಾಪ್ತಿಗಾಗಿಯೂ, ವೃದ್ಧಿಗಾಗಿಯೂ ಮತ್ತು

ಪ್ರಾಪ್ತವಾದ ಐಶ್ವರ್ಯದ ರಕ್ಷಣೆಗಾಗಿಯೂ ಕಾರ್ಯೋನ್ಮುಖನಾಗಬೇಕು. ಮಾನವನು ಐಶ್ವರ್ಯವನ್ನು ಗಳಿಸಲು ಯತ್ನಿಸದೇ ವ್ಯಯವನ್ನೇ ಮಾಡುತ್ತಿದ್ದರೆ ಅವನ ಐಶ್ವರ್ಯವು ಹಿಮವತ್ಪರ್ವತದಷ್ಟಿದ್ದರೂ ಕಾಲಾನುಕ್ರಮವಾಗಿ ಕ್ಷಯಿಸಿಹೋಗುತ್ತದೆ.

**ಉತ್ಸೀದೇರನ್ಪ್ರಜಾಃ ಸರ್ವಾ ನ ಕುರ್ಯುಃ ಕರ್ಮ ಚೇದ್ಭುವಿ ।**
**ತಥಾ ಹ್ಯೇತಾ ನ ವರ್ಧೇರನ್ಕರ್ಮ ಚೇದಫಲಂ ಭವೇತ್ ॥೧೧॥**

ಈ ಪ್ರಪಂಚದಲ್ಲಿ ಪ್ರಜೆಗಳು ಕರ್ಮ (ಕೆಲಸ) ಮಾಡದೆಯೇ ಇದ್ದು ಬಿಟ್ಟಿದ್ದರೆ–ಅವರು ಬದುಕುವ ಸಾಧ್ಯತೆಯೇ ಇರುತ್ತಿರಲಿಲ್ಲ. ವಿನಾಶ ಹೊಂದುತ್ತಿದ್ದರು. ಕರ್ಮಕ್ಕೆ ಫಲವೇ ಇಲ್ಲದಿದ್ದರೆ ಪ್ರಾಣಿಗಳ ಅಭಿವೃದ್ಧಿಯೇ ಆಗುತ್ತಿರಲಿಲ್ಲ.

**ಅಪಿ ಚಾಪ್ಯಫಲಂ ಕರ್ಮ ಪಶ್ಯಾಮಃ ಕುರ್ವತೋ ಜನಾನ್ ।**
**ನಾನ್ಯಥಾ ಹ್ಯಪಿ ಗಚ್ಛನ್ತಿ ವೃತ್ತಿಂ ಲೋಕಾಃ ಕಥಂಚನ ॥೧೨॥**

ಫಲವಿಲ್ಲದ ಕಾರ್ಯಗಳನ್ನು ಮಾಡುತ್ತಿರುವ ಜನರನ್ನು ಕೆಲವು ವೇಳೆ ನೋಡುತ್ತೇವೆ. ಆದರೆ ಕರ್ಮಮಾಡದೆಯೇ ಜನರು ಜೀವನವೃತ್ತಿಯನ್ನು ಹೇಗೂ ಹೊಂದಲಾರರು. ಆದುದರಿಂದ ಕರ್ಮವನ್ನು ಬಿಡಲು ಸಾಧ್ಯವಿಲ್ಲ.

**ಯಶ್ಚ ದಿಷ್ಟಪರೋ ಲೋಕೇ ಯಶ್ಚಾಪಿ ಹಠವಾದಿಕಃ ।**
**ಉಭಾವಪಿ ಶಠಾವೇತೌ ಕರ್ಮಬುದ್ಧಿಃ ಪ್ರಶಸ್ಯತೇ ॥೧೩॥**

ಪ್ರಪಂಚದಲ್ಲಿ ದೈವಮಾತ್ರವನ್ನೇ ನಂಬಿ ಸಕಲವನ್ನೂ ಸಾಧಿಸ ಬಯಸುವವನು ಮತ್ತು ಅದೃಷ್ಟಪರೀಕ್ಷಕನು–ಈ ಇಬ್ಬರನ್ನೂ ನಾನು ಪುರುಷಾಧಮರೆಂದೇ ಭಾವಿಸುತ್ತೇನೆ. ಯಾವನು ಯಾವಾಗಲೂ ಕಾರ್ಯೋನ್ಮುಖನಾಗಿರುವನೋ–ಅವನೇ ಪ್ರಶಂಸಾರ್ಹನು.

**ಯೋ ಹಿ ದಿಷ್ಟಮುಪಾಸೀನೋ ನಿರ್ವಿಚೇಷ್ಟಃ ಸುಖಂ ಶಯೇತ್ ।**
**ಅವಸೀದೇತ್ಸ ದುರ್ಬುದ್ಧಿರಾಮೋ ಘಟ ಇವೋದಕೇ ॥೧೪॥**

ಯಾವನು ಯಾವಾಗಲೂ ಮನುಷ್ಯಯತ್ನವನ್ನೇ ಮಾಡದೇ ದೈವದ ಪ್ರಭಾವವನ್ನೇ ನಂಬಿ ಮಲಗಿರುವನೋ ಅವನು–ಹಸಿಮಡಕೆಯು ನೀರಿನಲ್ಲಿ ಕರಗಿಹೋಗುವಂತೆ–ವಿನಾಶಹೊಂದುತ್ತಾನೆ.

**ತಥೈವ ಹಠದುರ್ಬುದ್ಧಿಃ ಶಕ್ತಃ ಕರ್ಮಣ್ಯಕರ್ಮಕೃತ್ ।**
**ಆಸೀತ ನ ಚಿರಂ ಜೀವೇದನಾಥ ಇವ ದುರ್ಬಲಃ ॥೧೫॥**

ಕಾರ್ಯಮಾಡಲು ಶರೀರದಾರ್ಢ್ಯವಿದ್ದರೂ ಅದೃಷ್ಟವನ್ನೇ ನಂಬಿ (ಜೂಜು ಮೊದಲಾದುವುಗಳಲ್ಲಿ) ಐಶ್ವರ್ಯವು ಬರುತ್ತದೆಂದು ಕುಳಿತು ಕೊಳ್ಳುವವನೂ–ದುರ್ಬಲನಾದ ಅನಾಥನೊಬ್ಬನು ವಿನಾಶಹೊಂದು ವಂತೆ–ಬಹಳ ಶೀಘ್ರವಾಗಿ ವಿನಾಶಹೊಂದುತ್ತಾನೆ. (ದುರ್ಬಲನಾದ ಅನಾಥ ನೆಂದು ಅದೃಷ್ಟಾಕಾಂಕ್ಷಿಗೆ ಉಪಮಾನಕೊಟ್ಟಿರುವುದು ಹೃದಯಂಗಮವಾಗಿದೆ. ಹೇಗೆಂದರೆ : ದೈವವನ್ನಾದರೂ ನಂಬಿ ಕುಳಿತವನು ದುರ್ಬಲನೇ ಹೊರತು ಅನಾಥನಲ್ಲ. ದೈವವನ್ನೇ ನಾಥನೆಂದಾದರೂ ನಂಬಿರುತ್ತಾನೆ. ಒಂದು ವೇಳೆ ಕಟ್ಟಕಡೆಗೆ ದೈವವಾದರೂ ಸ್ವಲ್ಪ ಕರುಣೆಯನ್ನು ತೋರಬಹುದು. ಆದರೆ ಕೇವಲ ಅದೃಷ್ಟವನ್ನೇ ನಂಬಿರುವವನಿಗೆ ದೈವಬಲವೂ ಇಲ್ಲದೇ ಅನಾಥನಂತಾಗುತ್ತಾನೆ. ಮೊದಲೇ ದುರ್ಬಲನಾಗಿದ್ದು ಹೇಳುವ-ಕೇಳುವವರೂ ಇಲ್ಲದ ಅನಾಥನೂ ಆದರೆ ಅವನ ಪಾಡು ನಿಶ್ಚಯವಾಗಿಯೂ ಅತಿದಾರುಣವಲ್ಲವೇ?)

**ಅಕಸ್ಮಾದಿಹ ಯಃ ಕಶ್ಚಿದರ್ಥಂ ಪ್ರಾಪ್ನೋತಿ ಪೂರುಷಃ ।**
**ತಂ ಹಠೇನೇತಿ ಮನ್ಯನ್ತೇ ಸ ಹಿ ಯತ್ನೋ ನ ಕಸ್ಯಚಿತ್ ॥೧೬॥**

ಆಕಸ್ಮಿಕವಾಗಿ ಐಶ್ವರ್ಯವು ಪ್ರಾಪ್ತವಾದಲ್ಲಿ ಅಂತಹ ಐಶ್ವರ್ಯವನ್ನು ಅದೃಷ್ಟಾಯತ್ತವಾದ (ಆಕಸ್ಮಿಕ) ಐಶ್ವರ್ಯವೆನ್ನುತ್ತಾರೆ. ಅದು ಯಾರ ಪ್ರಯತ್ನದಿಂದಲೂ ಪ್ರಾಪ್ತವಾದುದಲ್ಲವಷ್ಟೆ.

**ಯಚ್ಚಾಪಿ ಕಿಂಚಿತ್ಪುರುಷೋ ದಿಷ್ಟಂ ನಾಮ ಭಜತ್ಯುತ ।**
**ದೈವೇನ ವಿಧಿನಾ ಪಾರ್ಥ ತದ್ದೈವಮಿತಿ ನಿಶ್ಚಿತಮ್ ॥೧೭॥**

ಮಂತ್ರಜಪ-ಹೋಮಾದಿಗಳನ್ನು ಮಾಡಿ ಐಶ್ವರ್ಯವನ್ನು ಪಡೆದಲ್ಲಿ ಅದನ್ನು ದೈವಾಯತ್ತವಾದ ಐಶ್ವರ್ಯವೆನ್ನುತ್ತಾರೆ.

**ಯತ್ಸ್ವಯಂ ಕರ್ಮಣಾ ಕಿಂಚಿತ್ಫಲಮಾಪ್ನೋತಿ ಪೂರುಷಃ ।**
**ಪ್ರತ್ಯಕ್ಷಮೇತಲ್ಲೋಕೇಷು ತತ್ಪೌರುಷಮಿತಿ ಶ್ರುತಮ್ ॥೧೮॥**

ಶ್ರಮಪಟ್ಟು ಕೆಲಸಮಾಡಿ ಪುರುಷನು ಪ್ರತ್ಯಕ್ಷವಾಗಿ ಸಂಪಾದಿಸಿದ ಐಶ್ವರ್ಯವನ್ನು ಪುರುಷಪ್ರಯತ್ನದಿಂದ ಸಂಪಾದಿಸಿದ ಐಶ್ವರ್ಯವೆನ್ನುತ್ತಾರೆ.

**ಸ್ವಭಾವತಃ ಪ್ರವೃತ್ತೋ ಯಃ ಪ್ರಾಪ್ನೋತ್ಯರ್ಥಂ ನ ಕಾರಣಾತ್ ।**
**ತತ್ಸ್ವಭಾವಾತ್ಮಕಂ ವಿದ್ಧಿ ಫಲಂ ಪುರುಷಸತ್ತಮ ॥೧೯॥**

ಪುರುಷಶ್ರೇಷ್ಠನೇ! ಮನುಷ್ಯನು ಕಾರ್ಯೋನ್ಮುಖನಾಗಿರುವಾಗ ಎಂದರೆ–ಭೂಮಿಯನ್ನು ಕಾರಣಾಂತರದಿಂದ ಅಗೆಯುವ ಕಾಲದಲ್ಲಿ ನಿಧಿಯು ಸಿಕ್ಕುವಂತೆ–ಐಶ್ವರ್ಯವು ಪ್ರಾಪ್ತವಾದರೆ ಅದನ್ನು ಸ್ವಭಾವಜನ್ಯವಾದ ಐಶ್ವರ್ಯವೆಂದೇ ಭಾವಿಸಬೇಕು.

**ಏವಂ ಹಠಾಚ್ಚ ದೈವಾಚ್ಚ ಸ್ವಭಾವಾತ್ಕರ್ಮಣಸ್ತಥಾ ।**
**ಯಾನಿ ಪ್ರಾಪ್ನೋತಿ ಪುರುಷಸ್ತತ್ಫಲಂ ಪೂರ್ವಕರ್ಮಣಾಮ್ ॥೨೦॥**

ಈ ರೀತಿಯಲ್ಲಿ ಆಕಸ್ಮಿಕವಾಗಿ ಪ್ರಾಪ್ತವಾಗುವ ಐಶ್ವರ್ಯ, ದೈವಿಕವಾಗಿ ಪ್ರಾಪ್ತವಾಗುವ ಐಶ್ವರ್ಯ, ಮಂತ್ರಜಪ-ಹೋಮಾದಿಗಳಿಂದ ಪ್ರಾಪ್ತವಾಗುವ ಐಶ್ವರ್ಯ ಮತ್ತು ಸ್ವಭುಜಬಲ-ಪರಾಕ್ರಮಗಳಿಂದ ಸಂಪಾದಿಸುವ ಐಶ್ವರ್ಯ–ಇವೆಲ್ಲವೂ ಹಿಂದಿನ ಜನ್ಮಗಳ ಕರ್ಮಗಳನ್ನೇ ಅನುಸರಿಸಿ ಲಭ್ಯ ವಾಗುತ್ತವೆ.

**ಧಾತಾಪಿ ಹಿ ಸ್ವಕರ್ಮೈವ ತೈಸ್ತೈರ್ಹೇತುಭಿರೀಶ್ವರಃ ।**
**ವಿದಧಾತಿ ವಿಭಜ್ಯೇಹ ಫಲಂ ಪೂರ್ವಕೃತಂ ನೃಣಾಮ್ ॥೨೧॥**

ಸರ್ವಾಂತರ್ಯಾಮಿಯಾದ ಪರಮಾತ್ಮನು ಕೂಡ ಮೇಲೆ ಹೇಳಿದ ಕಾರಣಗಳ ಮೂಲಕವಾಗಿ ಪ್ರಾಣಿಗಳು ತಮ್ಮ ಪೂರ್ವಜನ್ಮಗಳಲ್ಲಿ ಮಾಡಿದ ಪುಣ್ಯಾಪುಣ್ಯಕರ್ಮಗಳನ್ನು ವಿಭಾಗಿಸಿ ಫಲಕೊಡುತ್ತಾನೆ.

**ಯದ್ಯ್ವಯಂ ಪುರುಷಃ ಕಿಂಚಿತ್ಕುರುತೇ ವೈ ಶುಭಾಶುಭಮ್ ।**
**ತದ್ಧಾತೃವಿಹಿತಂ ವಿದ್ಧಿ ಪೂರ್ವಕರ್ಮಫಲೋದಯಮ್ ॥೨೨॥**

ಪುರುಷನು ಈ ಪ್ರಪಂಚದಲ್ಲಿ ಯಾವ ಕೆಲವು ಶುಭಾಶುಭಕರ್ಮ ಗಳನ್ನು ಮಾಡುತ್ತಾನೆಯೋ–ಆ ಕರ್ಮಗಳೆಲ್ಲವೂ ಆ ಪುರುಷನ ಹಿಂದಿನ

ಜನ್ಮಗಳ ಕರ್ಮಫಲಾನುಸಾರವಾಗಿ ವಿಧಾತನ ಚೋದನೆಯಿಂದ ಮಾಡಲ್ಪಟ್ಟುವೆಂದು ತಿಳಿ.

**ಕಾರಣಂ ತಸ್ಯ ದೇಹೋಽಯಂ ಧಾತುಃ ಕರ್ಮಣಿ ವರ್ತತೇ ।**
**ಸ ಯಥಾ ಪ್ರೇರಯತ್ಯೇನಂ ತಥಾಯಂ ಕುರುತೇಽವಶಃ ॥೨೩॥**

ಕರ್ಮಪ್ರವರ್ತಕವಾಗಿರುವ ಈ ಶರೀರವು ಬ್ರಹ್ಮನಿಂದ ನಿಯೋಜಿತವಾಗಿ ಕಾರ್ಯಮಾಡಲು ಕೇವಲ ಸಾಧನಭೂತವಾಗಿರುತ್ತದೆ. ಆದುದರಿಂದಲೇ ಬ್ರಹ್ಮಪ್ರೇರಣೆಯಂತೆ ಶರೀರಿಯು ಅಸ್ವತಂತ್ರನಾದರೂ ತಾನು ಸ್ವತಂತ್ರನೆಂದೇ ಭಾವಿಸಿ ಸ್ವೇಚ್ಛಾಪ್ರಾರಬ್ಧಫಲಾನುಭವಕ್ಕಾಗಿ ಕಾರ್ಯಮಾಡುತ್ತಿರುತ್ತಾನೆ.

**ತೇಷು ತೇಷು ಹಿ ಕೃತ್ಯೇಷು ವಿನಿಯೋಕ್ತಾ ಮಹೇಶ್ವರಃ ।**
**ಸರ್ವಭೂತಾನಿ ಕೌನ್ತೇಯ ಕಾರಯತ್ಯವಶಾನ್ಯಪಿ ॥೨೪॥**

ಸರ್ವಾಂತರ್ಯಾಮಿಯಾದ ಮಹೇಶ್ವರನು ಈ ಜನ್ಮದಲ್ಲಿ ಮನುಷ್ಯರು ಮಾಡುತ್ತಿರುವ ಪ್ರತಿಯೊಂದು ಕಾರ್ಯಕ್ಕೂ ನಿಯಂತ್ರಕನಾಗಿರುತ್ತಾನೆ. ಸರ್ವಪ್ರಾಣಿಗಳನ್ನೂ ಅವು ಅಸ್ವತಂತ್ರವಾದರೂ ಕೆಲಸಮಾಡುವಂತೆ ಮಾಡುತ್ತಾನೆ.

**ಮನಸಾರ್ಥಾನ್ವಿನಿಶ್ಚಿತ್ಯ ಪಶ್ಚಾತ್ಪ್ರಾಪ್ನೋತಿ ಕರ್ಮಣಾ ।**
**ಬುದ್ಧಿಪೂರ್ವಂ ಸ್ವಯಂ ವೀರ ಪುರುಷಸ್ತತ್ರ ಕಾರಣಮ್ ॥೨೫॥**

ಮನುಷ್ಯನು ಮೊದಲು ತನ್ನ ಪೂರ್ವಜನ್ಮದ ಅನುಬಂಧದಿಂದ ಯಾವುದಾದರೂ ಕಾರ್ಯಮಾಡಲು ಸಂಕಲ್ಪಿಸುತ್ತಾನೆ. ಅನಂತರದಲ್ಲಿ ಬುದ್ಧಿಯ ಚಾತುರ್ಯದಿಂದ ಸಂಕಲ್ಪಿಸಿದ ಕಾರ್ಯವನ್ನು ಪೂರೈಸುತ್ತಾನೆ.

ಆದುದರಿಂದ ದೈವಪ್ರೇರಣೆಯಿಂದಾಗಿ ಸಂಕಲ್ಪಿಸಿದ ಕಾರ್ಯವನ್ನು ಪೂರ್ಣಮಾಡಲು ಪುರುಷನು ಕಾರಣನಾಗುತ್ತಾನೆ.

(ದ್ರೌಪದಿಯು ಹೇಳಿರುವುದನ್ನು ಈ ವಿಧವಾಗಿಯೂ ತರ್ಕಿಸಬಹುದಾಗಿದೆ. ಮಾನವನು ಮಾಡಿದ ಕರ್ಮಾನುಸಾರವಾಗಿ ದೈವವು ಫಲಕೊಡಲು ಸಮರ್ಥವಾಗುವುದೇ ಹೊರತು ಮಾನವನು ಈ ಜನ್ಮದಲ್ಲಿ ಕರ್ಮಮಾಡ

ದಿದ್ದರೆ ಮುಂದಿನ ಜನ್ಮದಲ್ಲಿ ದೈವವು ಫಲಕೊಡಲಾರದು. ಮಾನವನು ಮಾಡಿದ ಕರ್ಮಫಲವನ್ನು ಪರಮಾತ್ಮನು ಕೊಡುವನೇ ಹೊರತು ಕರ್ಮ ಮಾಡದೇ ಫಲವನ್ನು ಪರಮಾತ್ಮನೂ ಕೊಡಲಾರನು. ಆದುದರಿಂದ ಮನುಷ್ಯನು ತಾನು ಮಾಡುವ ಕರ್ಮಕ್ಕೆ ತಾನೇ ಪೂರ್ಣಸ್ವತಂತ್ರನು. ಸಂಕಲ್ಪಿಸಿದುದನ್ನು ಬುದ್ಧಿಯ ಸಹಾಯದಿಂದ ಪೂರ್ಣಮಾಡುವ ಸಾಮರ್ಥ್ಯವು ಮಾನವನಿಗಲ್ಲದೇ ಬೇರಾರಿಗೂ ಇರುವುದಿಲ್ಲ.)

ಈ ಅಭಿಪ್ರಾಯವನ್ನೇ ದೃಢೀಕರಿಸುತ್ತಾ ದ್ರೌಪದಿಯು ಹೇಳುತ್ತಾಳೆ :

"ಯುಧಿಷ್ಠಿರ! ಮಾನವನು ಹಿಂದೆ ಮಾಡಿದ, ಮುಂದೆ ಮಾಡಲಿರುವ ಕಾರ್ಯಗಳು ಅಸಂಖ್ಯವಾಗಿವೆ. ಮಹಾಸೌಧಗಳು, ಅವುಗಳನ್ನೊಳಗೊಂಡ ಮಹಾನಗರಗಳೂ–ಎಲ್ಲವೂ ಮಾನವಕಲ್ಪಿತಗಳೇ ಆಗಿವೆ. ಮನುಷ್ಯನು ಬುದ್ಧಿಶಕ್ತಿಯಿಂದಲೇ ಎಳ್ಳಿನಿಂದ ಎಣ್ಣೆಯನ್ನು ತೆಗೆಯಲು ತಿಳಿದುಕೊಂಡನು. ಹಸುವಿನಲ್ಲಿರುವ ಹಾಲನ್ನು ಕರೆದು ಆ ಹಾಲನ್ನು ಮೊಸರುಮಾಡಲು ತಿಳಿದುಕೊಂಡನು. ಕಟ್ಟಿಗೆಯಲ್ಲಿರುವ ಬೆಂಕಿಯನ್ನು ಹೊತ್ತಿಸಿ ಆಹಾರವನ್ನು ಬೇಯಿಸಿ ತಿನ್ನಲೂ ಮನುಷ್ಯನು ತನ್ನ ಬುದ್ಧಿಶಕ್ತಿಯಿಂದಲೇ ಅರಿತನು. ಪದಾರ್ಥಗಳನ್ನು ಸಿದ್ಧಪಡಿಸುವ ರೀತಿಯನ್ನು ತಿಳಿದನಂತರ ಮನುಷ್ಯನು ಅದಕ್ಕೆ ಬೇಕಾಗುವ ಸಾಮಗ್ರಿಗಳನ್ನೂ ಒದಗಿಸಿಕೊಳ್ಳುತ್ತಾನೆ. ತಾನು ಮಾಡಿದ ಕಾರ್ಯಗಳಿಗೆ ಒಡನೆಯೇ ಫಲವು ಸಿಕ್ಕುವ ಕಾರಣದಿಂದಲೇ ಮಾನವನು ಪೃಥ್ವಿಯಲ್ಲಿ ಜೀವಿಸಲು ಸಾಧ್ಯವಾಗಿದೆ. ಆದರೆ ಸಾಮಗ್ರಿಗಳು ಸಿದ್ಧವಾದಾಗಲೂ ಅಕುಶಲನಾದವನು ಅಥವಾ ವಿನಿಯೋಗವನ್ನು ಸರಿಯಾಗಿ ತಿಳಿಯದಿರುವವನು ಉತ್ತಮಫಲವನ್ನು ಪಡೆಯಲಾರನು. ವಿನಿಯೋಗವನ್ನು ಪೂರ್ಣವಾಗಿ ತಿಳಿದವನು ಉತ್ತಮಫಲವನ್ನು ಪಡೆಯುತ್ತಾನೆ. ಒಬ್ಬನು ಸಿದ್ಧಪಡಿಸಿದ ವಸ್ತುವನ್ನು ನೋಡಿಯೇ ನಾವು ಅದನ್ನು ಮಾಡಿದವನು ಕುಶಲನೇ ಅಥವಾ ಅಕುಶಲನೇ–ಎಂಬುದನ್ನು ತಿಳಿದುಕೊಳ್ಳಬಹುದಾಗಿದೆ.

ಇಷ್ಟಾಪೂರ್ತಫಲಂ ಸ್ಯಾನ್ನ ಶಿಷ್ಯೋ ನ ಗುರುರ್ಭವೇತ್ ।
ಪುರುಷಃ ಕರ್ಮಸಾಧ್ಯೇಷು ಸ್ಯಾಚ್ಚೇದಯಮಕಾರಣಮ್ ॥೩೦॥

ಮಹಾರಾಜ! 'ಪುರುಷಸಾಧ್ಯವಾದ ಕರ್ಮಗಳಲ್ಲಿಯೂ ಪುರುಷನು

ಕಾರಣನಲ್ಲ; ದೈವವೇ ಕಾರಣ'–ಎನ್ನುವುದಾದರೆ ಯಜ್ಞ-ಯಾಗಾದಿಗಳೂ, ವಾಪೀ-ಕೂಪ-ತಟಾಕಾದಿ ಧಾರ್ಮಿಕಕ್ರಿಯೆಗಳೆಲ್ಲವೂ ನಿಷ್ಫಲಗಳೇ ಆಗುತ್ತವೆ. ಪ್ರಪಂಚದಲ್ಲಿ ಗುರು-ಶಿಷ್ಯ, ಮೊದಲಾದ ತಾರತಮ್ಯಕ್ಕೇ ಅವಕಾಶ ವಿರುವುದಿಲ್ಲ.

**ಕರ್ತೃತ್ವಾದೇವ ಪುರುಷಃ ಕರ್ಮಸಿದ್ಧೌ ಪ್ರಶಸ್ಯತೇ ।**
**ಅಸಿದ್ಧೌ ನಿನ್ದ್ಯತೇ ಚಾಪಿ ಕರ್ಮನಾಶಾತ್ಕಥಂ ತ್ವಿಹ ॥೩೧॥**

ಆದುದರಿಂದ ಮಾನವನು ತನ್ನ ಕಾರ್ಯಕ್ಕೆ ತಾನೇ ಕರ್ತನಾಗುತ್ತಾನೆ. ಅವನು ತನ್ನ ಕರ್ತವ್ಯದಲ್ಲಿ ವಿಜಯಿಯಾದರೆ ಎಲ್ಲರಿಂದಲೂ ಶ್ಲಾಘಿಸಲ್ಪಡು ತ್ತಾನೆ. ಒಂದು ವೇಳೆ ವಿಜಯಿಯಾಗದಿದ್ದರೆ ಅಪಯಶಸ್ಸಿಗೆ ಗುರಿಯಾಗು ತ್ತಾನೆ. ಮಾನವನು ತನ್ನ ಕಾರ್ಯಗಳಿಗೆ ತಾನೇ ಕರ್ತನೆಂದು ಸಿದ್ಧಾಂತವಾಗ ದಿದ್ದರೆ ಕಾರ್ಯದಲ್ಲಿ ವಿಜಯಿಯಾದಾಗ ಶ್ಲಾಘಿಸುವುದೇಕೆ? ಕಾರ್ಯದಲ್ಲಿ ಪರಾಜಿತನಾದಾಗ ಅವನನ್ನು ನಿಂದೆಮಾಡುವುದೇಕೆ? (ಆದುದರಿಂದ ಮಾನವನ ಸುಖ-ದುಃಖಗಳಿಗೆ, ಜಯಾಪಜಯಗಳಿಗೆ, ಯಶಸ್ಸು-ಅಪ ಯಶಸ್ಸುಗಳಿಗೆ ಅವನು ಮಾಡುವ ಕರ್ಮ ಅಥವಾ ಕ್ರಿಯೆಯೇ ಕಾರಣವೆಂದು ಸಿದ್ಧಾಂತಮಾಡಬಹುದಾಗಿದೆ.)

**ಸರ್ವಮೇವ ಹಠೇನೈಕೇ ದೈವೇನೈಕೇ ವದನ್ತ್ಯುತ ।**
**ಪುಂಸಃ ಪ್ರಯತ್ನಜಂ ಕೇಚಿತ್ತ್ರೈಧಮೇತನ್ನಿರುಚ್ಯತೇ ॥೩೨॥**

ಮಹಾರಾಜ! ಕೆಲವರು–ಎಲ್ಲವೂ ಆಕಸ್ಮಿಕವಾಗಿಯೇ ಒದಗುತ್ತದೆ ಎಂಬ ನಂಬಿಕೆಯುಳ್ಳವರಾಗಿರುತ್ತಾರೆ. ಮತ್ತೆ ಕೆಲವರು ಸುಖ-ದುಃಖಗಳು ದೈವಾಯತ್ತವೆಂದೇ ಹೇಳುತ್ತಾರೆ. ಇನ್ನೂ ಕೆಲವರು ಪುರುಷಪ್ರಯತ್ನದಿಂದಲೇ ಫಲಪ್ರಾಪ್ತಿಯೆನ್ನುತ್ತಾರೆ. ಹೀಗೆ ಮೂರು ಬಗೆಯ ಭಾವನೆಗಳಿವೆ.

**ನ ಚೈವೈತಾವತಾ ಕಾರ್ಯಂ ಮನ್ಯನ್ತ ಇತಿ ಚಾಪರೇ ।**
**ಅಸ್ತಿ ಸರ್ವಮದೃಶ್ಯಂ ತು ದಿಷ್ಟಂ ಚೈವ ತಥಾ ಹಠಃ ॥೩೩॥**

ಇವುಗಳಲ್ಲಿ ಒಂದರಿಂದಲೇ ಕಾರ್ಯವಾಗಲಾರದು–ಎಂಬ ಅಭಿಪ್ರಾಯ ದವರೂ ಇದ್ದಾರೆ. ಆಕಸ್ಮಿಕ, ಹಿಂದಿನ ಕರ್ಮಫಲ, ದೈವ ಮತ್ತು ಪುರುಷ

ಪ್ರಯತ್ನಗಳಿಂದ ಎಲ್ಲವನ್ನೂ ಪಡೆಯಬಹುದೆಂಬುದು ಅವರ ಅಭಿಪ್ರಾಯ ವಾಗಿದೆ.

**ದೃಶ್ಯತೇ ಹಿ ಹಠಾಚ್ಚೈವ ದಿಷ್ಟಾಚ್ಚಾರ್ಥಸ್ಯ ಸನ್ತತಿಃ ।**
**ಕಿಂಚಿದ್ದೈವಾದ್ಧಠಾತ್ಕಿಂಚಿತ್ಕಿಂಚಿದೇವ ಸ್ವಭಾವತಃ ॥೩೪॥**

**ಪುರುಷಃ ಫಲಮಾಪ್ನೋತಿ ಚತುರ್ಥಂ ನಾತ್ರ ಕಾರಣಮ್ ।**
**ಕುಶಲಾಃ ಪ್ರತಿಜಾನನ್ತಿ ಯೇ ವೈ ತತ್ತ್ವವಿದೋ ಜನಾಃ ॥೩೫॥**

ಮನುಷ್ಯನು ತನ್ನ ಜೀವನದಲ್ಲಿ ಅದೃಷ್ಟಾಯತ್ತವಾದ ಫಲವನ್ನೂ, ದೈವದತ್ತವಾದ ಫಲವನ್ನೂ ಮತ್ತು ತನ್ನ ಪ್ರಯತ್ನದ ಫಲವನ್ನೂ ಪಡೆಯುವುದನ್ನು ನಾವು ನೋಡುತ್ತಿದ್ದೇವೆ. ಈ ಮೂರು ವಿಧಗಳನ್ನುಳಿದು ನಾಲ್ಕನೆಯ ರೀತಿಯಲ್ಲಿ ಫಲಪ್ರಾಪ್ತಿಯಾಗಲಾರದು. ಸತ್ಯನಿಷ್ಠರಾದ ವಿದ್ವಾಂಸರೂ ಇದೇ ಅಭಿಪ್ರಾಯವುಳ್ಳವರಾಗಿದ್ದಾರೆ.

**ತಥೈವ ಧಾತಾ ಭೂತಾನಾಮಿಷ್ಟಾನಿಷ್ಟಫಲಪ್ರದಃ ।**
**ಯದಿ ನ ಸ್ಯಾನ್ನ ಭೂತಾನಾಂ ಕೃಪಣೋ ನಾಮ ಕಶ್ಚನ ॥೩೬॥**

**ಯಂ ಯಮರ್ಥಮಭಿಪ್ರೇಪ್ಸುಃ ಕುರುತೇ ಕರ್ಮ ಪೂರುಷಃ ।**
**ತತ್ತತ್ಸಫಲಮೇವ ಸ್ಯಾದ್ಯದಿ ನ ಸ್ಯಾತ್ಪುರಾಕೃತಮ್ ॥೩೭॥**

ಮಹಾರಾಜ! ಒಂದು ವೇಳೆ ಪೂರ್ವಜನ್ಮದಲ್ಲಿ ಮಾಡಿರುವ ಪಾಪ-ಪುಣ್ಯಕಾರ್ಯಗಳ ಫಲವನ್ನು ದೈವವು ಯಥಾಕ್ರಮವಾಗಿ ಕೊಡದಿದ್ದರೆ–ಈ ಪ್ರಪಂಚದಲ್ಲಿ ಹುಟ್ಟಿದ ಪ್ರಾಣಿಯು ಕಷ್ಟ-ಸುಖಗಳನ್ನೇಕೆ ಅನುಭವಿಸಬೇಕಾಗಿದ್ದಿತು? ಪೂರ್ವಜನ್ಮದ ಕರ್ಮಫಲವಿರದಿದ್ದರೆ ಹುಟ್ಟಿದವರೆಲ್ಲರೂ ಸುಖವಾಗಿಯೇ ಇರಬೇಕಾಗಿತ್ತಲ್ಲವೇ? ಈ ಜನ್ಮದಲ್ಲಿ ಮನುಷ್ಯನು ಪ್ರಯೋಜನಾಪೇಕ್ಷಿಯಾಗಿ ಮಾಡಿದ ಕಾರ್ಯವೆಲ್ಲವೂ ಜಯಪ್ರದವೇ ಆಗುತ್ತಿದ್ದಿತು. ಅಪಜಯವೆಂಬುದಕ್ಕೆ ಅವಕಾಶವೇ ಇರುತ್ತಿರಲಿಲ್ಲ.

**ತ್ರಿದ್ವಾರಾಮರ್ಥಸಿದ್ಧಿಂ ತು ನಾನುಪಶ್ಯನ್ತಿ ಯೇ ನರಾಃ ।**
**ತಥೈವಾನರ್ಥಸಿದ್ಧಿಂ ಚ ಯಥಾ ಲೋಕಾಸ್ತಥೈವ ತೇ ॥೩೮॥**

ಯಾರು–ಪ್ರಯೋಜನವು ಸಿದ್ಧಿಸಬೇಕಾದರೆ ಅಥವಾ ಸಿದ್ಧಿಸದಿರ

ಬೇಕಾದರೆ ದೈವಾಯತ್ತ, ಆಕಸ್ಮಿಕ, ಪೌರುಷ–ಈ ಮೂರೇ ಕಾರಣಗಳಿಂದು ತಿಳಿಯಲಾರರೋ–ಅವರು ಸಾಧಾರಣಮನುಷ್ಯರಂತೆ ಅಜ್ಞರೇ ಸರಿ.

**ಕರ್ತವ್ಯಮೇವ ಕರ್ಮೇತಿ ಮನೋರೇಷ ವಿನಿಶ್ಚಯಃ ।**
**ಏಕಾನ್ತೇನ ಹ್ಯನೀಹೋಽಯಂ ಪರಾಭವತಿ ಪೂರುಷಃ ॥೩೯॥**

ಆದುದರಿಂದ ಮಾನವನು ಕರ್ಮವನ್ನು ಮಾಡಲೇಬೇಕು. ಮನುವಿನ ಅಭಿಪ್ರಾಯವೂ ಇದೇ ಆಗಿರುತ್ತದೆ. ಕಾರ್ಯೋನ್ಮುಖನಾಗದೇ ದೈವವನ್ನೋ ಅಥವಾ ಅದೃಷ್ಟವನ್ನೋ ನಂಬಿ ಕುಳಿತಿರುವವನು ಹಾಳಾಗುತ್ತಾನೆ.

**ಕುರ್ವತೋ ಹಿ ಭವತ್ಯೇವ ಪ್ರಾಯೇಣೇಹ ಯುಧಿಷ್ಠಿರ ।**
**ಏಕಾನ್ತಫಲಸಿದ್ಧಿಂ ತು ನ ವಿನ್ದತ್ಯಲಸಃ ಕ್ವಚಿತ್ ॥೪೦॥**

ಕರ್ತವ್ಯೋನ್ಮುಖನಾಗಿರುವವನಿಗೆ ಯಶಸ್ಸು ಸಾಮಾನ್ಯವಾಗಿ ಸಿದ್ಧಿಸಿಯೇ ಸಿದ್ಧಿಸುತ್ತದೆ. ಯಾವನು ಅಲಸನೋ, ತನ್ನ ಕರ್ತವ್ಯವನ್ನು ಮಾಡುವುದಿಲ್ಲವೋ–ಅಂತಹವನಿಗೆ ಯಾವ ವಿಧವಾದ ಫಲವೂ ಲಭ್ಯ ವಾಗುವುದಿಲ್ಲ.

**ಅಸಮ್ಭವೇ ತ್ವಸ್ಯ ಹೇತುಃ ಪ್ರಾಯಶ್ಚಿತ್ತಂ ತು ಲಕ್ಷಯೇತ್ ।**
**ಕೃತೇ ಕರ್ಮಣಿ ರಾಜೇನ್ದ್ರ ತಥಾನೃಣ್ಯಮವಾಪ್ನುತೇ ॥೪೧॥**

ಮಾಡಿದ ಪ್ರಯತ್ನಕ್ಕೆ ಒಮ್ಮೆ ಜಯವು ಸಿದ್ಧಿಸದಿದ್ದರೆ ತನ್ನ ಪ್ರಯತ್ನದಲ್ಲಿ ಯಾವ ನ್ಯೂನತೆಯಿದೆಯೆಂಬುದನ್ನು ತಿಳಿದು ಸರಿಪಡಿಸಿಕೊಂಡು ಪುನಃ ಪ್ರಯತ್ನಿಸಬೇಕು. ಒಂದು ವೇಳೆ ಹಾಗೂ ಅವನ ಯತ್ನವು ಫಲಿಸದಿದ್ದರೆ ಅವನು ನಿಂದ್ಯನಾಗುವುದಿಲ್ಲ. ತನ್ನ ಕರ್ತವ್ಯವನ್ನು ಮಾಡುವುದರಿಂದ ಋಣಮುಕ್ತನಾಗುತ್ತಾನೆ.

**ಅಲಕ್ಷ್ಮೀರಾವಿಶತ್ಯೇನಂ ಶಯಾನಮಲಸಂ ನರಮ್ ।**
**ನಿಃಸಂಶಯಂ ಫಲಂ ಲಬ್ಧ್ವಾ ದಕ್ಷೋ ಭೂತಿಮುಪಾಶ್ನುತೇ ॥೪೨॥**

ಯಾವನು ಆಲಸ್ಯದಿಂದ ದಿನವೆಲ್ಲಾ ತನ್ನ ಸುಖ-ದುಃಖಗಳಿಗೆ ದೈವವನ್ನೋ, ಅದೃಷ್ಟವನ್ನೋ ನಂಬಿ ಮಲಗಿರುವನೋ–ಅವನಿಗೆ ದರಿದ್ರಲಕ್ಷ್ಮಿಯ ಅನುಗ್ರಹವೇ ಆಗುವುದು. ಯಾವನು ಚತುರನಾಗಿ,

ಆಲಸಿಕೆಯಿಲ್ಲದೇ ಕೆಲಸಮಾಡುವುದು ತನ್ನ ಕರ್ತವ್ಯವೆಂದು ಭಾವಿಸಿ ಕಾರ್ಯಗಳನ್ನು ಮಾಡುತ್ತಿರುವನೋ–ಅಂತಹವನು ಶ್ರೇಯಃ-ಪ್ರೇಯಗಳನ್ನು ಪಡೆಯುವುದರಲ್ಲಿ ಲೇಶಮಾತ್ರವೂ ಸಂಶಯವಿಲ್ಲ.

**ಅನರ್ಥಾಃ ಸಂಶಯಾವಸ್ಥಾಃ ಸಿದ್ಧ್ಯನ್ತೇ ಮುಕ್ತಸಂಶಯಾಃ ।**
**ಧೀರಾ ನರಾಃ ಕರ್ಮರತಾ ನನು ನಿಃಸಂಶಯಾಃ ಕ್ವಚಿತ್ ॥೪೩॥**

ಮಾಡಿದ ಕಾರ್ಯಕ್ಕೆ ಫಲವಿರುವುದೋ, ಇಲ್ಲವೋ–ಎಂದು ಸಂಶಯಪಡುವುದು ಅನರ್ಥಕಾರಿಯು. ಸಂಶಯಪಡದೇ ಕರ್ಮಮಾಡುವವರೂ, ಕಾರ್ಯೋನ್ಮುಖರಾದ ಧೀರರೂ ಖಂಡಿತವಾಗಿಯೂ ಸಿದ್ಧಿಯನ್ನು ಪಡೆಯುತ್ತಾರೆ. ಯಾವಾಗಲೂ ಸಂಶಯದಿಂದಿರುವವರು ಕರ್ಮಮಾಡುವುದೂ ಇಲ್ಲ ; ಅವರಿಗೆ ಫಲವೂ ಸಿದ್ಧಿಸುವುದಿಲ್ಲ.

ಮಹಾರಾಜ! ಈಗ ನಮಗೆ ಕಷ್ಟವು ಪ್ರಾಪ್ತವಾಗಿದೆ. ಈ ಕಷ್ಟ ನಿವಾರಣೆಗೆ ಕಾರ್ಯಮಾಡಬೇಕು. ನೀನು ಕಾರ್ಯಮಾಡಿದರೆ ಈ ಕಷ್ಟವು ನಿವಾರಣೆಯಾಗುವುದು ನಿಶ್ಚಯ. ಒಂದು ವೇಳೆ ಯತ್ನಿಸಿದ ಕಾರ್ಯವು ಸಿದ್ಧಿಸುವುದಿಲ್ಲವೆಂಬ ಸಂಶಯವು ಅಥವಾ ಸಿದ್ಧಾಂತವು ನಿನಗಿರುವುದಾದರೆ ಭೀಮಾರ್ಜುನ-ನಕುಲ-ಸಹದೇವರಾದರೂ ನಮ್ಮ ಕಷ್ಟನಿವಾರಣೆಗಾಗಿ ಅರ್ಥಾತ್ ರಾಜ್ಯದ ಪುನಃಪ್ರಾಪ್ತಿಗೆ ಯತ್ನಿಸಲಿ. ಬೇರೆಯವರು ಯತ್ನಿಸಿ ಕರ್ಮಫಲವನ್ನು ಪಡೆಯಬಹುದಾದರೆ ನಾವೂ ಪ್ರಯತ್ನಮಾಡಿ ವಿಜಯಿಗಳಾಗಬಹುದಲ್ಲವೇ? ಒಂದು ಕಾರ್ಯಮಾಡಿದರೆ ಅದರ ಪರಿಣಾಮವು ಹೀಗೆಯೇ ಆಗುವುದೆಂಬುದನ್ನು ಕಾರ್ಯಾರಂಭದ ಮೊದಲೇ ಹೇಳುವ ಅಥವಾ ಯೋಚಿಸುವ ಸಾಧ್ಯತೆಯಿದೆಯೇ? ನೀನು ಮೊದಲು ಕಾರ್ಯಮಾಡಿ ಅನಂತರ ಜಯಾಪಜಯರೂಪವಾದ ಫಲನಿರೀಕ್ಷಣೆಯನ್ನು ಮಾಡಬಹುದು.

**ಪೃಥಿವೀಂ ಲಾಙ್ಗಲೇನೇಹ ಭಿತ್ತ್ವಾ ಬೀಜಂ ವಪತ್ಯುತ ।**
**ಆಸ್ತೇಽಥ ಕರ್ಷಕಸ್ತೂಷ್ಣೀಂ ಪರ್ಜನ್ಯಸ್ತತ್ರ ಕಾರಣಮ್ ॥೪೭॥**

**ವೃಷ್ಟಿಶ್ಚೇನ್ನಾನುಗೃಹ್ಣೀಯಾದನೇನಾಸ್ತತ್ರ ಕರ್ಷಕಃ ।**
**ಯದನ್ಯಃ ಪುರುಷಃ ಕುರ್ಯಾತ್ತತ್ಕೃತಂ ಸಫಲಂ ಮಯಾ ॥೪೮॥**

**ತಚ್ಛೇದಂ ಫಲಮಸ್ಮಾಕಮಪರಾಧೋ ನ ಮೇ ಕ್ವಚಿತ್ ।**
**ಇತಿ ಧೀರೋಽನ್ವವೇಕ್ಷ್ಯೈವ ನಾತ್ಮಾನಂ ತತ್ರ ಗರ್ಹಯೇತ್ ॥೪೯॥**

ರೈತನು ಮೊದಲು ಭೂಮಿಯನ್ನು ಉಳುತ್ತಾನೆ. ಅನಂತರ ಭೂಮಿಯನ್ನು ಹದಮಾಡಿ ಬೀಜವನ್ನು ಬಿತ್ತುತ್ತಾನೆ. ಇಷ್ಟು ಮಾಡಿದನಂತರ ಮಳೆಯು ಬಾರದೆ, ರೈತನಿಗೆ ಬೆಳೆಯು ಸಿಕ್ಕದೆ ಅವನ ಯತ್ನವು ವಿಫಲವಾಗಬಹುದು. ಅದರಿಂದ ರೈತನು ನಿಂದ್ಯನಾಗುವುದಿಲ್ಲ. 'ಬೇರೆಯವರು ಮಾಡಿದಂತೆ ನಾನೂ ಮಾಡಿದೆನು. ಶ್ರದ್ಧೆಯಿಂದ ಮಾಡಿರುವೆನು. ಕರ್ತವ್ಯದಲ್ಲಿ ಲೋಪಮಾಡಿರುವುದಿಲ್ಲ. ಮಳೆಯು ಬಾರದುದರಿಂದ ಬೆಳೆಯು ಬರಲಿಲ್ಲ. ಒಟ್ಟಿನಲ್ಲಿ ತಪ್ಪು ನನ್ನದಲ್ಲ'–ಎಂದು ಭಾವಿಸಿ ರೈತನು ಸಮಾಧಾನ ಪಟ್ಟುಕೊಳ್ಳುತ್ತಾನೆ. ಅವನು ಕರ್ತವ್ಯಭ್ರಷ್ಟನಾದೆನೆಂದು ಆತ್ಮನಿಂದೆಯನ್ನು ಮಾಡಿಕೊಳ್ಳಬೇಕಾದ ಕಾರಣವಿಲ್ಲ. ಒಂದು ಬಾರಿ ಮಳೆಯು ಹೋಗಿ ಪೈರು ಹಾಳಾಯಿತೆಂಬ ಕಾರಣದಿಂದ ರೈತನು ಪುನಃ ಯತ್ನವನ್ನು ನಿಲ್ಲಿಸುವುದಿಲ್ಲ. ಏಕೆಂದರೆ : ಮಳೆಯು ಒಂದು ಸಲ ಬಾರದೇ ಇರಬಹುದೇ ಹೊರತು ಪ್ರತಿವರ್ಷವೂ ಬರದಿರುವ ಸಾಧ್ಯತೆಯೇ ಇಲ್ಲ. ರೈತನು ಪುನಃ ಭೂಮಿಯನ್ನುತ್ತು, ಹದಮಾಡಿ, ಬೀಜಬಿತ್ತಿ ಫಲವನ್ನು ಪಡೆದೇ ಪಡೆಯುತ್ತಾನೆ. ಆದುದರಿಂದ ಯಾರೇ ಆದರೂ ತನ್ನ ಮೊದಲನೆಯ ಯತ್ನವು ಫಲಿಸಲಿಲ್ಲವೆಂದು ನಿರಾಶೆಯನ್ನು ಹೊಂದಬಾರದು.

**ಕುರ್ವತೋ ನಾರ್ಥಸಿದ್ಧಿರ್ಮೇ ಭವತೀತಿ ಹ ಭಾರತ ।**
**ನಿರ್ವೇದೋ ನಾತ್ರ ಕರ್ತವ್ಯೋ ದ್ವಾವನ್ಯೌ ಹ್ಯತ್ರ ಕಾರಣಮ್ ॥೫೦॥**

**ಸಿದ್ಧಿರ್ವಾಪ್ಯಥವಾಸಿದ್ಧಿರಪ್ರವೃತ್ತಿರತೋಽನ್ಯಥಾ ।**
**ಬಹೂನಾಂ ಸಮವಾಯೇ ಹಿ ಭಾವಾನಾಂ ಕರ್ಮ ಸಿದ್ಧ್ಯತಿ ॥೫೧॥**

ಯುಧಿಷ್ಠಿರ! ಪ್ರಯತ್ನದ ಜೊತೆಗೆ ಕರ್ಮದ ಫಲವನ್ನು ಹೊಂದಲು ಪ್ರಾರಬ್ಧ ಮತ್ತು ಈಶ್ವರಕೃಪೆಗಳೆಂಬ ಮತ್ತೂ ಎರಡು ಕಾರಣಗಳಿವೆ. ಕಾರ್ಯವು ಸಿದ್ಧಿಸಲಿ ಅಥವಾ ಸಿದ್ಧಿಸದಿರಲಿ–ನಿರಾಶೆಹೊಂದುವ ಕಾರಣವಿಲ್ಲ. ಮಾಡಿರುವ ಕಾರ್ಯದಲ್ಲಿ ಸ್ವಲ್ಪ ನ್ಯೂನತೆಯಿದ್ದರೂ ಕಾರ್ಯವು ಫಲಿಸುವುದಿಲ್ಲವೆಂಬ ಭಾವನೆಯಿಂದ ಕಾರ್ಯವನ್ನೇ ಆರಂಭಿಸದೇ ಇರುವುದು

ಮೂಢತನ. ಕಾರ್ಯವನ್ನು ಮಾಡಿದರೆ ಫಲದ ನಿರೀಕ್ಷಣೆಯನ್ನಾದರೂ ಮಾಡಬಹುದು. ಎಲ್ಲ ಅನುಕೂಲಗಳೂ ಕೂಡಿಬಂದಾಗಲೇ ಕಾರ್ಯವು ಸಿದ್ಧಿಸುವುದು.

**ಗುಣಾಭಾವೇ ಫಲಂ ನ್ಯೂನಂ ಭವತ್ಯಫಲಮೇವ ಚ ।**
**ಅನಾರಮ್ಭೇ ಹಿ ನ ಫಲಂ ನ ಗುಣೋ ದೃಶ್ಯತೇ ಕ್ವಚಿತ್ ॥೫೨॥**

ಎಲ್ಲ ಅನುಕೂಲಗಳೂ ಕೂಡಿಬರದಿದ್ದಾಗ ನಾವು ನಿರೀಕ್ಷಿಸಿದುದಕ್ಕಿಂತಲೂ ಕಡಿಮೆಯಾದ ಫಲವು ಸಿಕ್ಕಬಹುದು. ಒಂದು ವೇಳೆ ಪ್ರಯತ್ನವು ಸಂಪೂರ್ಣವ್ಯರ್ಥವಾಗಿ ಫಲವು ಸಿಕ್ಕದೆಯೂ ಇರಬಹುದು. (ಕಾರ್ಯಪ್ರವೃತ್ತನಾಗಿರುವವನು ಪೂರ್ಣಫಲವನ್ನು ಪಡೆಯಬಹುದು ; ಅರ್ಧಫಲವನ್ನು ಪಡೆಯಬಹುದು ; ಫಲವನ್ನು ಪಡೆಯದೆಯೂ ಇರಬಹುದು.) ಕಾರ್ಯವನ್ನು ಪ್ರಾರಂಭಿಸದವನಿಗೆ ಯಾವ ವಿಧವಾದ ಅನುಕೂಲ್ಯಗಳೂ ಒದಗಲಾರವು. ಫಲವೂ ಸಿಕ್ಕಲಾರದು.

**ದೇಶಕಾಲಾವುಪಾಯಾಂಶ್ಚ ಮಙ್ಗಲಂ ಸ್ವಸ್ತಿವೃದ್ಧಯೇ ।**
**ಯುನಕ್ತಿ ಮೇಧಯಾ ಧೀರೋ ಯಥಾಶಕ್ತಿ ಯಥಾಬಲಮ್ ॥೫೩॥**

ಬುದ್ಧಿವಂತನಾದವನು ಪ್ರಯತ್ನದ ಜೊತೆಗೆ ತನ್ನ ಬುದ್ಧಿಯನ್ನೂ ನಿಯೋಜಿಸಿ, ದೇಶ-ಕಾಲಗಳನ್ನೂ ಪರಿಶೀಲಿಸಿ, ಉಪಾಯಗಳಿಂದಲೂ–ಶ್ರಮದಿಂದಲೂ ಕಾರ್ಯಸಿದ್ಧಿಯನ್ನು ಪಡೆಯುತ್ತಾನೆ.

**ಅಪ್ರಮತ್ತೇನ ತತ್ಕಾರ್ಯಮುಪದೇಷ್ಟಾ ಪರಾಕ್ರಮಃ ।**
**ಭೂಯಿಷ್ಠಂ ಕರ್ಮಯೋಗೇಷು ದೃಷ್ಟ ಏವ ಪರಾಕ್ರಮಃ ॥೫೪॥**

ಜಯವನ್ನಪೇಕ್ಷಿಸುವವನು ಅಪ್ರಮತ್ತನಾಗಿ ಜಾಗರೂಕತೆಯಿಂದ ಪರಾಕ್ರಮವನ್ನೇ ಪ್ರಧಾನವನ್ನಾಗಿಟ್ಟುಕೊಂಡು ಕಾರ್ಯಮಾಡಬೇಕು. ಕಾರ್ಯಸಿದ್ಧಿಗೆ ಇರಬೇಕಾದ ಗುಣಗಳಲ್ಲಿ ಪರಾಕ್ರಮವೇ ಮುಖ್ಯವಾದುದು.

**ಯತ್ರ ಧೀಮಾನವೇಕ್ಷೇತ ಶ್ರೇಯಾಂಸಂ ಬಹುಭಿರ್ಗುಣೈಃ ।**
**ಸಾಮ್ನೈವಾರ್ಥಂ ತತೋ ಲಿಪ್ಸೇತ್ಕರ್ಮ ಚಾಸ್ಮೈ**
**ಪ್ರಯೋಜಯೇತ್ ॥೫೫॥**

ಶತ್ರುವು ಅಥವಾ ಎದುರಾಳಿಯು ಎಲ್ಲ ವಿಧಗಳಲ್ಲಿಯೂ ತನಗಿಂತಲೂ ಶ್ರೇಷ್ಠನೆಂದು ತಿಳಿದಾಗ ಬುದ್ಧಿವಂತನಾದವನು–ಸಂಧಿಯೇ ಮುಂತಾದ ಸಾಮೋಪಾಯದಿಂದಲೇ ತನ್ನ ಕಾರ್ಯಸಾಧನೆಯನ್ನು ಮಾಡಿಕೊಳ್ಳಬೇಕು.

**ವ್ಯಸನಂ ವಾಸ್ಯ ಕಾಂಕ್ಷೇತ ವಿವಾಸಂ ವಾ ಯುಧಿಷ್ಠಿರ ।**
**ಅಪಿ ಸಿನ್ಧೋರ್ಗಿರೇರ್ವಾಪಿ ಕಿಂ ಪುನರ್ಮರ್ತ್ಯಧರ್ಮಿಣಃ ॥೫೭॥**

ಸಂಧಿಯನ್ನು ಮಾಡಿಕೊಂಡ ಮೇಲೂ ಶತ್ರುವಿನೊಡನೆ ವಿಶ್ವಾಸವನ್ನು ಬೆಳೆಸುವ ಕಾರಣವಿಲ್ಲ. ಸಮಯವರಿತು ಶತ್ರುವಿನ ವಿನಾಶಕ್ಕೆ ಯತ್ನಿಸುತ್ತಲೇ ಇರಬೇಕು. ಶತ್ರುವು ಸಾಧಾರಣಮನುಷ್ಯನಾಗಿರದೇ ಪರ್ವತೋಪಮನಾಗಿದ್ದರೂ, ಸಮುದ್ರದ ರೂಪದಲ್ಲಿದ್ದರೂ (ಅಚಲನೂ ಅನುಲ್ಲಂಘನೀಯನೂ ಆಗಿದ್ದರೂ) ಮನುಷ್ಯಧರ್ಮವುಳ್ಳ ಅವನಿಗೂ ವ್ಯಸನವು ಒದಗಿ ಬರಬಹುದು ; ದೇಶಾಂತರವಾಸವೂ ಪ್ರಾಪ್ತವಾಗಬಹುದು. ಆಗ ಉಪಾಯಗಳನ್ನು ಸಂದರ್ಭೋಚಿತವಾಗಿ ಪ್ರಯೋಗಿಸುವುದರಿಂದ ಅವನನ್ನು ವಿನಾಶ ಮಾಡುವ ಸಾಧ್ಯತೆಯಿದೆ.

**ಉತ್ಥಾನಯುಕ್ತಃ ಸತತಂ ಪರೇಷಾಮನ್ತರೈಷಣೇ ।**
**ಆನೃಣ್ಯಮಾಪ್ನೋತಿ ನರಃ ಪರಸ್ಯಾತ್ಮನ ಏವ ಚ ॥೫೮॥**

ಸರ್ವಕಾಲದಲ್ಲಿಯೂ ಪ್ರಯತ್ನಶೀಲನಾಗಿರುತ್ತಾ ಶತ್ರುವಿನಲ್ಲುಂಟಾಗಬಹುದಾದ ನ್ಯೂನತೆಯನ್ನು ಹುಡುಕಿ ಅವನ ವಿನಾಶಕ್ಕೆ ಯತ್ನಿಸುವವನು ತಾನೂ ನಿರ್ದೋಷಿಯಾಗುತ್ತಾನೆ ಮತ್ತು ತನ್ನ ಸಲಹೆಗಾರರನ್ನೂ ನಿರ್ದೋಷಿಗಳನ್ನಾಗಿ ಮಾಡುತ್ತಾನೆ.

(ರಾಜಕಾರಣದಲ್ಲಿ ಸಲಹೆಗಾರರ ಹೊಣೆಯೂ ಹೆಚ್ಚಿನದಾಗಿದೆ. ಸಮಯಗಳಲ್ಲಿ ರಾಜನಿಗೆ ಸರಿಯಾದ ಸಲಹೆ ನೀಡದಿದ್ದರೆ ದೇಶಕ್ಕೇ ಅಹಿತವಾಗುವುದು. ಸಲಹೆಗಾರರೂ ದೋಷಭಾಗಿಗಳಾಗುವರು. ಯುಕ್ತವಾದ ಸಲಹೆಗಳನ್ನು ನೀಡಿದರೂ ರಾಜನ ಔದಾಸೀನ್ಯದಿಂದ ದೇಶಕ್ಕೆ ಹಾನಿ ಯಾಗುವ ಸಂಭವವುಂಟು. ಈ ಸಮಯದಲ್ಲಿಯೂ ಸಲಹೆಗಾರರು ದೋಷಭಾಗಿಗಳಾಗುತ್ತಾರೆ. ರಾಜನಿಗೆ ಸಕಾಲದಲ್ಲಿ ಯುಕ್ತಸಲಹೆಗಳನ್ನು ನೀಡಿದ

ರೆಂಬ ವಿಷಯವು ಬಹಿರಂಗಕ್ಕೆ ಬರುವುದಿಲ್ಲ. ಇಂದಿನ ರಾಜಕೀಯದಲ್ಲಿಯೂ ಇಂತಹ ಸಂದರ್ಭಗಳು ಅನೇಕವಾಗಿರುತ್ತವೆ.)

**ನ ತ್ವೇವಾತ್ಮಾವಮನ್ತವ್ಯಃ ಪುರುಷೇಣ ಕದಾಚನ ।**
**ನ ಹ್ಯಾತ್ಮಪರಿಭೂತಸ್ಯ ಭೂತಿರ್ಭವತಿ ಶೋಭನಾ ॥೫೮॥**

ಆತ್ಮನಿಂದೆಯನ್ನು ಮಾನವನು ಎಂದೂ ಮಾಡಿಕೊಳ್ಳಕೂಡದು. ತಾನು ನಿರ್ಬಲನೆಂದು ಎಂದೂ ಭಾವಿಸಬಾರದು. ಆತ್ಮವಿಶ್ವಾಸವಿಲ್ಲದವನಿಗೆ ಶ್ರೇಯಃ-ಪ್ರೇಯಗಳು ಖಂಡಿತವಾಗಿಯೂ ಸಿದ್ಧಿಸಲಾರವು. ಯುಧಿಷ್ಠಿರ! ಜಯಸಿದ್ಧಿಗೆ ಇಷ್ಟೊಂದು ನಿಬಂಧನೆಗಳಿವೆ. ಜಯಸಿದ್ಧಿಗೆ ಕಾಲ-ದೇಶಗಳ ಅನ್ವೇಷಣೆಯನ್ನು ಮಾಡುತ್ತಿರಬೇಕು. ಪ್ರಯತ್ನಿಸುತ್ತಿರಬೇಕು.

ನನ್ನ ತಂದೆಯಾದ ದ್ರುಪದನು ಸಲಹೆ ನೀಡುವ ಸಲುವಾಗಿಯೇ ಒಬ್ಬ ಬ್ರಾಹ್ಮಣೋತ್ತಮನನ್ನು ತನ್ನ ಬಳಿಯಲ್ಲಿಟ್ಟುಕೊಂಡಿದ್ದನು. ನಾನು ಹೇಳಿದ ರಾಜನೀತಿಯು ಮೊದಲು ದೇವಗುರುವಾದ ಬೃಹಸ್ಪತಿಯಿಂದಲೇ ಪ್ರೋಕ್ತವಾಗಿದೆ. ಅದು ಆ ಬ್ರಾಹ್ಮಣನಿಂದ ನನ್ನ ಭ್ರಾತೃಗಳಾದ ಧೃಷ್ಟದ್ಯುಮ್ನಾದಿಗಳಿಗೆ ಉಪದೇಶಿಸಲ್ಪಟ್ಟಿತು. ವಿರಾಮಕಾಲದಲ್ಲಿ ನಮ್ಮ ತಂದೆಯ ತೊಡೆಯ ಮೇಲೆ ಕುಳಿತು ಬ್ರಾಹ್ಮಣನು ಹೇಳುತ್ತಿದ್ದುದೆಲ್ಲವನ್ನೂ ನಾನು ಕೇಳುತ್ತಿದ್ದೆನು. ನನಗಾಗಿಯೇ ಬ್ರಾಹ್ಮಣನು ಎಲ್ಲವನ್ನೂ ವಿಶದವಾಗಿ ವಿವರಿಸಿ ಹೇಳುತ್ತಿದ್ದನು. ಅಂದು ಅವನು ಹೇಳಿದುದೆಲ್ಲವನ್ನೂ ಯಥಾಶ್ರುತವಾಗಿ ನಿನಗೆ ಹೇಳಿರುವೆನು, ಮಹಾರಾಜ!"

ಇ೨ನೆಯ ಅಧ್ಯಾಯವು ಮುಗಿಯಿತು.

ಇಇನೆಯ ಅಧ್ಯಾಯ ಅರ್ಜುನಾಭಿಗಮನಪರ್ವ (ಮುಂದುವರಿದಿದೆ.)

## ಭೀಮಸೇನನಿಂದ ಪುರುಷಪ್ರಯತ್ನದ ಪ್ರಶಂಸೆ : ಕ್ಷತ್ರಿಯಧರ್ಮಾನುಸಾರವಾಗಿ ಯುದ್ಧಮಾಡುವುದೇ ಉಚಿತವೆಂದು ಧರ್ಮರಾಜನನ್ನು ಹುರಿದುಂಬಿಸಿದುದು

ವೈಶಂಪಾಯನರು ಹೇಳುತ್ತಾರೆ :

**ಯಾಜ್ಞಸೇನ್ಯಾ ವಚಃ ಶ್ರುತ್ವಾ ಭೀಮಸೇನೋ ಹ್ಯಮರ್ಷಣಃ ।**
**ನಿಃಶ್ವಸನ್ನುಪಸಂಗಮ್ಯ ಕ್ರುದ್ಧೋ ರಾಜಾನಮಬ್ರವೀತ್ ॥೧॥**

"ಪಾರಿಕ್ಷಿತ! ಮಹಾಕೋಪಿಷ್ಠನಾದ ಭೀಮಸೇನನು ಯಾಜ್ಞಸೇನಿಯ ಮಾತುಗಳನ್ನು ಕೇಳಿ ಮತ್ತೂ ಕ್ರುದ್ಧನಾಗಿ ದೀರ್ಘವಾಗಿ ನಿಟ್ಟುಸಿರುಬಿಡುತ್ತಾ ಧರ್ಮರಾಜನ ಬಳಿಗೆ ಸರಿದು ಅವನಿಗೆ ಹೇಳಿದನು :

"ಮಹಾರಾಜ! ಸತ್ಪುರುಷರಿಂದ ಆಚರಿಸಲ್ಪಟ್ಟ ರಾಜಧರ್ಮವನ್ನು ಅನುಸರಿಸು. ಧರ್ಮ, ಅರ್ಥ, ಕಾಮ–ಈ ಮೂರರಿಂದಲೂ ವಿಹೀನರಾಗಿ ನಾವು ಈ ಕಾಡಿನಲ್ಲಿ ಋಷಿಗಳಂತೆ ಜೀವಿಸುತ್ತಾ ಸಾಧಿಸುವ ಕಾರ್ಯವಾದರೂ ಏನಿದೆ? ಧರ್ಮದಿಂದಾಗಲೀ, ನಿಷ್ಕಾಪಟ್ಯದಿಂದಾಗಲೀ, ಪರಾಕ್ರಮದಿಂದಾಗಲೀ ದುರ್ಯೋಧನನು ನಮ್ಮ ರಾಜ್ಯವನ್ನು ಗೆದ್ದು ಕೊಂಡಿಲ್ಲ. ಮೋಸದ ಪಗಡೆಯಾಟವಾಡಿ ನಮ್ಮ ರಾಜ್ಯವನ್ನೂ, ಐಶ್ವರ್ಯ ವನ್ನೂ ಅಪಹರಿಸಿದ್ದಾನೆ.

**ಗೋಮಾಯುನೇವ ಸಿಂಹಾನಾಂ ದುರ್ಬಲೇನ ಬಲೀಯಸಾಮ್ ।**
**ಆಮಿಷಂ ವಿಘಸಾಶೇನ ತದ್ವದ್ರಾಜ್ಯಂ ಹಿ ನೋ ಹೃತಮ್ ॥೪॥**

ದುರ್ಬಲವಾದ ನರಿಯು, ಬಲಿಷ್ಠವಾದ ಸಿಂಹಗಳು ತಿನ್ನುತ್ತಿರುವ ಮಾಂಸವನ್ನು ಮೋಸದಿಂದ ಅಪಹರಿಸಿ ತಿನ್ನುವಂತೆ–ಬಲಿಷ್ಠರಾದ ನಮ್ಮ ರಾಜ್ಯವನ್ನು ದುರ್ಬಲನಾದ ದುರ್ಯೋಧನನು ಮೋಸದಿಂದ ಅಪಹರಿಸಿ ಅನುಭವಿಸುತ್ತಿದ್ದಾನೆ. ಪ್ರತಿಜ್ಞಾಪಾಲನೆಯೇ ಮುಖ್ಯಕರ್ತವ್ಯವೆಂಬ ಭ್ರಾಂತಿ ಯಿಂದ ನೀನು ಧರ್ಮ-ಕಾಮಗಳಿಗೆ ಮೂಲಭೂತವಾದ ಅರ್ಥವನ್ನು ಎಂದರೆ ರಾಜ್ಯವನ್ನು ಪರಿತ್ಯಜಿಸಿ, ಈ ದಾರುಣವಾದ ಕಷ್ಟಕ್ಕೆ ಗುರಿಯಾಗಿ ರುವೆಯಲ್ಲವೇ? ಇಂದ್ರನಿಂದಲೂ ಅಪಹರಿಸಲು ಸಾಧ್ಯವಾಗದಿದ್ದ, ಅರ್ಜುನನಿಂದ ರಕ್ಷಿಸಲ್ಪಟ್ಟಿದ್ದ ನಮ್ಮ ರಾಜ್ಯವು ಕೇವಲ ನಿನ್ನ ಅಜಾಗರೂಕತೆಯ ಕಾರಣದಿಂದಾಗಿ ದಸ್ಯುಗಳಿಂದ ನಮ್ಮ ಸಮಕ್ಷದಲ್ಲಿಯೇ ಅಪಹರಿಸಲ್ಪಟ್ಟಿತು.

**ಕುಣೀನಾಮಿವ ಬಿಲ್ವಾನಿ ಪಙ್ಗೂನಾಮಿವ ಧೇನವಃ ।**
**ಹೃತಮೈಶ್ವರ್ಯಮಸ್ಮಾಕಂ ಜೀವತಾಂ ಭವತಃ ಕೃತೇ ॥೭॥**

ಅಣ್ಣ! ಕೈಯೇ ಇಲ್ಲದವರ (ಕುಣಿಗಳ) ಬಳಿಯಲ್ಲಿರುವ ಬಿಲ್ವದ ಹಣ್ಣುಗಳನ್ನು ಅಪಹರಿಸಿದಂತೆಯೂ, ಕಾಲಿಲ್ಲದವರ (ಹೆಳವರ) ಬಳಿಯಲ್ಲಿ

ರುವ ಗೋವುಗಳನ್ನು ಅಪಹರಿಸಿದಂತೆಯೂ–ನಮ್ಮ ರಾಜ್ಯವನ್ನು ನಾವು ಜೀವಂತವಾಗಿರುವಾಗಲೇ ನಮ್ಮ ಕಣ್ಣೆದುರಿನಲ್ಲಿಯೇ ನಿನ್ನ ದೌರ್ಬಲ್ಯದ ಕಾರಣದಿಂದಾಗಿ ಕೌರವರು ಅಪಹರಿಸಿದರು. ಯುಧಿಷ್ಠಿರ! ನೀನು ಕೇವಲ ಧರ್ಮಕಾಮನಾಗಿರುವೆ. ನಿನಗೆ ಅಪ್ರಿಯವನ್ನುಂಟುಮಾಡಕೂಡದೆಂಬ ಕಾರಣದಿಂದ ನಾವೂ ಈ ದಾರುಣವಾದ ಕಷ್ಟವನ್ನು ಅನುಭವಿಸುತ್ತಿದ್ದೇವೆ. ನಾವಿಂದು ನಿನ್ನ ಅಧೀನಕ್ಕೊಳಪಟ್ಟಿರುವುದರಿಂದಲೇ ನಮ್ಮ ಮಿತ್ರರಿಗೆ ಸಂಕಟವನ್ನೂ, ಶತ್ರುಗಳಿಗೆ ಸಂತೋಷವನ್ನೂ ಉಂಟುಮಾಡುತ್ತಿದ್ದೇವೆ. ನಿನಗೆ ವಿಧೇಯರಾಗಿದ್ದ ಕಾರಣದಿಂದ ಅಂದು ಸಭಾಮಂಟಪದಲ್ಲಿ ದುರುಳರಾದ ಧೃತರಾಷ್ಟ್ರನ ಮಕ್ಕಳನ್ನು ಯಮಾಲಯಕ್ಕೆ ಕಳುಹಿಸದೇ ಇದ್ದುದು ನಿಶ್ಚಯವಾಗಿಯೂ ನಾವು ಮಾಡಿದ ಮಹಾಪರಾಧವೆಂದೇ ಇಂದು ಒಪ್ಪಿಕೊಳ್ಳಬೇಕಾಗಿದೆ. ಅದನ್ನು ನೆನೆದೊಡನೆಯೇ ನನ್ನ ಹೃದಯವು ಬಹಳ ಸಂಕಟಕ್ಕೊಳಗಾಗುತ್ತದೆ.

ಅಗ್ರಜ! ಇಂದು ನಿನ್ನ ಸ್ಥಿತಿಯನ್ನಾದರೂ ನೋಡು. ಕೇವಲ ಮೃಗದಂತೆ ವನವಾಸಮಾಡುತ್ತಿರುವೆ. ಇದು ನಿಶ್ಚಯವಾಗಿಯೂ ದುರ್ಬಲರಾದವರಿಗೆ ಉಚಿತವೆನಿಸುವುದೇ ಹೊರತು ಸಮರ್ಥರಾದವರಿಗೆ ನಿಶ್ಚಯವಾಗಿಯೂ ಉಚಿತವೆನಿಸುವುದಿಲ್ಲ. ಈ ನಿನ್ನ ವರ್ತನೆಯನ್ನು ಕೃಷ್ಣನಾಗಲೀ, ಅರ್ಜುನನಾಗಲೀ, ಅಭಿಮನ್ಯುವಾಗಲೀ, ಸೃಂಜಯರಾಗಲೀ, ನಾನಾಗಲೀ ಅಥವಾ ನಕುಲ-ಸಹದೇವರಾಗಲೀ ಖಂಡಿತವಾಗಿಯೂ ಅನುಮೋದಿಸುವುದಿಲ್ಲ. ಇಲ್ಲ-ಸಲ್ಲದ ಪ್ರತಿಜ್ಞೆಗಳನ್ನು ಮಾಡಿ ಅದರಿಂದ ಅನೇಕವಿಧವಾದ ಕಷ್ಟಕ್ಕೊಳಗಾಗಿಯೂ ಅದನ್ನೇ ನೀನು 'ಧರ್ಮ, ಧರ್ಮ'–ಎಂದು ಹೇಳುತ್ತಾ ಕುಳಿತುಕೊಂಡಿರುವೆ. ಒಂದು ವೇಳೆ ಜೀವನದಲ್ಲಿ ನಿರಾಸೆಯುಂಟಾಗಿ ಈ ವಿಧವಾದ ನಪುಂಸಕಜೀವನವನ್ನು ಅವಲಂಬಿಸಿರುವೆಯಾ? ಯುಧಿಷ್ಠಿರ!

**ದುರ್ಮನುಷ್ಯಾ ಹಿ ನಿರ್ವೇದಮಫಲಂ ಸ್ವಾರ್ಥಘಾತಕಮ್ ।**
**ಅಶಕ್ತಾಃ ಶ್ರಿಯಮಾಹರ್ತುಮಾತ್ಮನಃ ಕುರ್ವತೇ ಪ್ರಿಯಮ್ ॥೧೭॥**

ದುರ್ಬಲಾತ್ಮರಾದವರು ಮಾತ್ರ ತಾವು ಕಳೆದುಕೊಂಡ ಸಂಪತ್ತನ್ನು

ಪುನಃ ಪಡೆಯಲು ಅಸಮರ್ಥರಾಗಿ ನಿರಾಶೆಹೊಂದುತ್ತಾರೆ. ಜೀವನದಲ್ಲಿ ನಿರಾಶೆಯು ಸ್ವಾರ್ಥಘಾತಕವಾದುದು ಮತ್ತು ನಿಷ್ಫಲವಾದುದು.

ಯುಧಿಷ್ಠಿರ! ನಿನಗೆ ದೂರದೃಷ್ಟಿಯಿದೆ. ನೀನು ಶಕ್ತನೂ ಆಗಿರುವೆ ಮತ್ತು ನಾವು ಪರಾಕ್ರಮಿಗಳೆಂಬುದನ್ನೂ ತಿಳಿದಿರುವೆ. ಇಷ್ಟಾದರೂ ನೀನು ಅತಿಯಾದ ಶಾಂತಸ್ವಭಾವದವನು. ಆದುದರಿಂದಲೇ ಇಂದಿನ ನಮ್ಮ ಕಷ್ಟ ಗಳು ಅನರ್ಥಕಾರಿಯೆಂದು ನೀನು ಭಾವಿಸುತ್ತಿಲ್ಲ. ನಿನ್ನ ಕ್ಷಮಾಗುಣವೇ ಇದಕ್ಕೆ ಕಾರಣವಾಗಿದೆ. ಆದರೆ ಧೃತರಾಷ್ಟ್ರನ ದುಷ್ಟಪುತ್ರರು ಹಾಗೆ ಭಾವಿಸು ವುದಿಲ್ಲ. ಕ್ಷಮಾಶೀಲರಾದ ನಾವು ಅಸಮರ್ಥರೆಂದೂ, ರಾಜ್ಯದ ಪುನಃ ಪ್ರಾಪ್ತಿಗೆ ನಮ್ಮಲ್ಲಿ ಪರಾಕ್ರಮವಿಲ್ಲವೆಂದೂ ಭಾವಿಸುತ್ತಾರೆ. ಈ ವಿಷಯ ವನ್ನು ಯೋಚಿಸಿದೊಡನೆಯೇ ನನ್ನ ಮನಸ್ಸು ಬಹಳ ಸಂಕಟಕ್ಕೊಳಗಾಗುತ್ತದೆ. ಯುದ್ಧದಲ್ಲಿ ಪ್ರಾಣತೊರೆಯುವುದಕ್ಕಿಂತಲೂ ಹೆಚ್ಚಿನ ವೇದನೆಯನ್ನು ಅನುಭವಿಸುತ್ತಿದ್ದೇನೆ. ನಾವೆಲ್ಲರೂ ನಮ್ಮ ಶತ್ರುಗಳ ಮೇಲೆ ಧರ್ಮಯುದ್ಧ ವನ್ನಾರಂಭಿಸಿ ಯುದ್ಧದಿಂದ ಪರಾಙ್ಮುಖರಾಗದೇ ಕಡೆಯವರೆಗೂ ಹೋರಾಡಿ ಪ್ರಾಣತೊರೆದು ವೀರಸ್ವರ್ಗವನ್ನು ಪಡೆಯುವುದೇ ಎಲ್ಲ ವಿಧಗಳಲ್ಲಿಯೂ ಶ್ರೇಯಸ್ಕರವೆಂಬುದು ನನ್ನ ಅಭಿಪ್ರಾಯವಾಗಿದೆ. ಒಂದು ವೇಳೆ ಯುದ್ಧದಲ್ಲಿ ನಾವೇ ಜಯಗಳಿಸಿದರೆ ಆಗ ಈ ಪೃಥ್ವಿಯೇ ನಮ್ಮದಾಗುತ್ತದೆ. ಇದರಿಂದಲೂ ನಾವು ಶ್ರೇಯಸ್ಸನ್ನೇ ಪಡೆಯಬಹುದಾಗಿದೆ. ಸ್ವಧರ್ಮದಲ್ಲಿಯೇ ಶ್ರೇಯಸ್ಸನ್ನು ಪಡೆಯಬೇಕೆಂಬ ಅಭಿಲಾಷೆಯಿಂದ, ಕೀರ್ತಿಕಾಮರಾದ ಮತ್ತು ಪ್ರತಿಗೆ ಪ್ರತಿಯನ್ನು ಮಾಡಲಿಚ್ಛಿಸಿರುವ ನಮಗೆ ಯುದ್ಧಮಾಡುವುದೇ ಸೂಕ್ತಮಾರ್ಗವಾಗಿದೆ. ಇದರಿಂದ ಲೋಕಾಪವಾದವುಂಟಾಗುವುದೆಂದು ನೀನು ಭಾವಿಸಬಹುದು. ಆದರೆ ನಾವು ದುರ್ಯೋಧನಾದಿಗಳಿಂದ ವಂಚಿತರಾದೆವೆಂಬುದೂ ಮತ್ತು ನಮ್ಮ ರಾಜ್ಯವು ಮೋಸದಿಂದಲೇ ಅಪಹರಿಸಲ್ಪಟ್ಟಿತೆಂಬುದೂ ಲೋಕಕ್ಕೆಲ್ಲಾ ತಿಳಿದಿದೆ. ಆದುದರಿಂದ ನಾವಿಂದು ನಮ್ಮ ರಾಜ್ಯದ ಪುನಃಪ್ರಾಪ್ತಿಗೆ ಯುದ್ಧಮಾಡಿದರೆ ಯಾರೇ ಆಗಲಿ ; ನಮ್ಮನ್ನು ನಿಂದಿಸಲಾರರು. ಪ್ರಶಂಸಿಸುತ್ತಾರೆ. ಬೇರೆಯವರು ನಿಂದಿಸದಿದ್ದರೂ ಪ್ರತಿಜ್ಞೆಗೆ ವಿರುದ್ಧವಾಗಿ ಕಾರ್ಯಮಾಡುವುದು ಅಧರ್ಮವೆಂದು ಹೇಳುವೆಯಲ್ಲವೇ?

ನೀನು ಅವಲಂಬಿಸಿರುವ ಈ ಧರ್ಮವನ್ನು ಖಂಡಿತವಾಗಿಯೂ ಕುಧರ್ಮವೆಂದೇ ನಾನು ಹೇಳುತ್ತೇನೆ. ಏಕೆಂದರೆ :

**ಕರ್ಶನಾರ್ಥೋ ಹಿ ಯೋ ಧರ್ಮೋ ಮಿತ್ರಾಣಾಮಾತ್ಮನಸ್ತಥಾ ।**
**ವ್ಯಸನಂ ನಾಮ ತದ್ರಾಜನ್ನ ಧರ್ಮಃ ಸ ಕುಧರ್ಮ ತತ್ ॥೨೧॥**

ತನ್ನನ್ನೂ ಮತ್ತು ಮಿತ್ರರನ್ನೂ ಸಂಕಟಕ್ಕೊಳಪಡಿಸಿರುವ ಧರ್ಮವು ಧರ್ಮವೆನಿಸುವುದೇ? ಅದು ಖಂಡಿತವಾಗಿಯೂ ಧರ್ಮವಲ್ಲ. ಅದು ವ್ಯಸನ; ಅದು ಕುಧರ್ಮ.

**ಸರ್ವಥಾ ಧರ್ಮನಿತ್ಯಂ ತು ಪುರುಷಂ ಧರ್ಮದುರ್ಬಲಮ್ ।**
**ತ್ಯಜತಸ್ತಾತ ಧರ್ಮಾರ್ಥೌ ಪ್ರೇತಂ ದುಃಖಸುಖೇ ಯಥಾ ॥೨೨॥**

ಅಣ್ಣ! ಸರ್ವಕಾಲದಲ್ಲಿಯೂ 'ಧರ್ಮ-ಧರ್ಮ' ಎಂದು ಹೇಳಿಕೊಂಡು ಕುಳಿತಿರುವವನನ್ನು ಕೆಲವು ಸಮಯಗಳಲ್ಲಿ ಆ ಧರ್ಮವೇ ದುರ್ಬಲನನ್ನಾಗಿಯೂ ಮಾಡಿಬಿಡುತ್ತದೆ. ಸತ್ತವನನ್ನು ಸುಖ-ದುಃಖಗಳು ಪರಿತ್ಯಜಿಸುವಂತೆ–ದುರ್ಬಲನಾದ ಅವನನ್ನು ಧರ್ಮಾರ್ಥಗಳೆರಡೂ ಪರಿತ್ಯಜಿಸುತ್ತವೆ.

**ಯಸ್ಯ ಧರ್ಮೋ ಹಿ ಧರ್ಮಾರ್ಥಂ ಕ್ಲೇಶಭಾಙ್ನ ಸ ಪಣ್ಡಿತಃ ।**
**ನ ಸ ಧರ್ಮಸ್ಯ ವೇದಾರ್ಥಂ ಸೂರ್ಯಸ್ಯಾನ್ಧಃ ಪ್ರಭಾಮಿವ ॥೨೩॥**

ಯಾವನು ಕೇವಲ ಧರ್ಮಕ್ಕಾಗಿಯೇ (ಅರ್ಥ-ಕಾಮಗಳನ್ನು ತ್ಯಜಿಸಿ) ಧರ್ಮಿಷ್ಠನಾಗಿರುತ್ತಾನೆಯೋ–ಅವನು ನಾನಾವಿಧವಾದ ಕ್ಲೇಶಗಳನ್ನು ಅನುಭವಿಸುತ್ತಾನೆ. ಧರ್ಮದ ಪ್ರಯೋಜನವನ್ನು ಆತನು ತಿಳಿಯಲಾರನು. ಅಂತಹವನು ಸೂರ್ಯನ ಪ್ರಭೆಯನ್ನು ಕಾಣಲು ಅಸಮರ್ಥನಾದ ಕುರುಡನಂತೆಯೇ ಸರಿ.

**ಯಸ್ಯ ಚಾರ್ಥಾರ್ಥಮೇವಾರ್ಥಃ ಸ ಚ ನಾರ್ಥಸ್ಯ ಕೋವಿದಃ ।**
**ರಕ್ಷೇತ ಭೃತಕೋಽರಣ್ಯೇ ಯಥಾ ಗಾಸ್ತಾದೃಗೇವ ಸಃ ॥೨೪॥**

ಅದರಂತೆಯೇ ಕೇವಲ ಐಶ್ವರ್ಯಕ್ಕಾಗಿಯೇ ಹಣದ ಸಂಪಾದನೆ ಮಾಡುವವನು ಹಣದ ಪ್ರಯೋಜನವನ್ನು ತಿಳಿಯಲಾರನು. ಅರಣ್ಯದಲ್ಲಿ ಕೂಲಿಗಾಗಿ ದನಗಳನ್ನು ಕಾಯುವ ಗೋಪಾಲಕನಂತೆ–ಅವನು ಹಣದ ರಕ್ಷಣೆಯಲ್ಲಿ ಮಾತ್ರವೇ ಆಸಕ್ತನಾಗಿರುತ್ತಾನೆ.

**ಅತಿವೇಲಂ ಹಿ ಯೋಽರ್ಥಾರ್ಥೀ ನೇತರಾವನುತಿಷ್ಠತಿ ।**
**ಸ ವಧ್ಯಃ ಸರ್ವಭೂತಾನಾಂ ಬ್ರಹ್ಮಹೇವ ಜುಗುಪ್ಸಿತಃ ॥೨೫॥**

ತಾನು ಸಂಪಾದಿಸಿದ ಹಣವನ್ನು ಧರ್ಮ ಮತ್ತು ಕಾಮಗಳಿಗೆ ವಿನಿಯೋಗಿಸದೇ ಇರುವವನು ಅಧಮನು. ವಧೆಗೆ ಅರ್ಹನಾಗುತ್ತಾನೆ. ಬ್ರಹ್ಮಹತ್ಯೆಯನ್ನು ಮಾಡಿದವನು ಸರ್ವಪ್ರಾಣಿಗಳ ನಿಂದೆಗೂ ಪಾತ್ರನಾಗುವಂತೆ–ಲೋಭಿಯೂ ಎಲ್ಲರ ನಿಂದೆಗೂ ಪಾತ್ರನಾಗುತ್ತಾನೆ.

**ಸತತಂ ಯಶ್ಚ ಕಾಮಾರ್ಥೀ ನೇತರಾವನುತಿಷ್ಠತಿ ।**
**ಮಿತ್ರಾಣಿ ತಸ್ಯ ನಶ್ಯನ್ತಿ ಧರ್ಮಾರ್ಥಾಭ್ಯಾಂ ಚ ಹೀಯತೇ ॥೨೬॥**

ಅದರಂತೆಯೇ ಕಾಮಕ್ಕಾಗಿಯೇ ಜೀವಿಸುತ್ತಾ ಧರ್ಮಾರ್ಥಗಳನ್ನು ವಿಸರ್ಜಿಸಿರುವವನು ಬಂಧು-ಮಿತ್ರರಿಂದ ಪರಿತ್ಯಜಿಸಲ್ಪಟ್ಟವನಾಗಿ ಧರ್ಮಾರ್ಥಹೀನನಾಗಿ ದರಿದ್ರನಾಗುತ್ತಾನೆ.

**ತಸ್ಯ ಧರ್ಮಾರ್ಥಹೀನಸ್ಯ ಕಾಮಾನ್ತೇ ನಿಧನಂ ಧ್ರುವಮ್ ।**
**ಕಾಮತೋ ರಮಮಾಣಸ್ಯ ಮೀನಸ್ಯೇವಾಮ್ಭಸಃ ಕ್ಷಯೇ ॥೨೭॥**

ಕಾಮೋಪಭೋಗಗಳನ್ನೇ ಪ್ರಧಾನವನ್ನಾಗಿಟ್ಟುಕೊಂಡು ಧರ್ಮಾರ್ಥಗಳ ಸಂಚಯನದಲ್ಲಿ ಸ್ವಲ್ಪವೂ ಯತ್ನಿಸದೇ ಇರುವವನು ಕೆಲವು ಕಾಲ ಕಳೆದ ನಂತರ–ಸರೋವರದಲ್ಲಿರುವ ನೀರು ಬತ್ತಿಹೋದಮೇಲೆ ಅಲ್ಲಿ ವಾಸ ಮಾಡುವ ಮೀನುಗಳಿಗುಂಟಾಗುವ ದುರವಸ್ಥೆಯನ್ನೇ–ಅರ್ಥಾತ್ ವಿನಾಶವನ್ನೇ ಹೊಂದುತ್ತಾನೆ.

**ತಸ್ಮಾದ್ಧರ್ಮಾರ್ಥಯೋರ್ನಿತ್ಯಂ ನ ಪ್ರಮಾದ್ಯನ್ತಿ ಪಣ್ಡಿತಾಃ ।**
**ಪ್ರಕೃತಿಃ ಸಾ ಹಿ ಕಾಮಸ್ಯ ಪಾವಕಸ್ಯಾರಣಿರ್ಯಥಾ ॥೨೮॥**

ಈ ಕಾರಣದಿಂದಲೇ ವಿದ್ವಾಂಸರಾದವರು ಧರ್ಮಾರ್ಥಗಳ ವಿಷಯದಲ್ಲಿ ಬಹಳ ಜಾಗರೂಕತೆಯಿಂದಿರುತ್ತಾರೆ. ಅಗ್ನಿಗೆ ಅರಣಿಯು (ಅಗ್ನ್ಯುತ್ಪಾದಕ ದಾರುವಿಶೇಷವು) ಪ್ರಕೃತಿಯಾಗಿರುವಂತೆ–ಕಾಮಪ್ರಾಪ್ತಿಗೆ ಧರ್ಮಾರ್ಥಗಳೆರಡೂ ಮುಖ್ಯಾಂಗಗಳಾಗಿವೆ.

**ಸರ್ವಥಾ ಧರ್ಮಮೂಲೋಽರ್ಥೋ ಧರ್ಮಶ್ಚಾರ್ಥಪರಿಗ್ರಹಃ ।**
**ಇತರೇತರಯೋರ್ನೀತೌ ವಿದ್ಧಿ ಮೇಘೋದಧೀ ಯಥಾ ॥೨೯॥**

ಅರ್ಥವು ಯಾವಾಗಲೂ ಧರ್ಮಮೂಲವಾಗಿರಬೇಕು. ಅದರಂತೆಯೇ ಧರ್ಮವೂ ಅರ್ಥಪ್ರಯೋಜನವುಳ್ಳದ್ದಾಗಿರಬೇಕು. ಸಮುದ್ರವು ಮೋಡವನ್ನೂ–ಮೋಡವು ಸಮುದ್ರವನ್ನೂ ಅವಲಂಬಿಸಿಕೊಂಡಿರುವಂತೆ ಧರ್ಮಾರ್ಥಗಳೆರಡೂ ಒಂದನ್ನೊಂದು ಅವಲಂಬಿಸಿ ನಿಂತಿವೆ. (ಸಮುದ್ರದ ನೀರು ಆವಿಯಾಗಿ ಮೋಡವಾಗುವುದು. ಪುನಃ ಮೋಡವು ಮಳೆಗರೆದು ಸಮುದ್ರವನ್ನು ತುಂಬುವುದು.)

**ದ್ರವ್ಯಾರ್ಥಸ್ಪರ್ಶಸಂಯೋಗೇ ಯಾ ಪ್ರೀತಿರುಪಜಾಯತೇ ।**
**ಸಕಾಮಶ್ಚಿತ್ತಸಂಕಲ್ಪಃ ಶರೀರಂ ನಾಸ್ಯ ದೃಶ್ಯತೇ ॥೩೦॥**

ಸ್ರಕ್ಚಂದನಾದಿಗಳ ಸ್ಪರ್ಶ ಮತ್ತು ಧನ-ಕನಕ-ವಸ್ತು-ವಾಹನಾದಿಗಳ ಲಾಭ–ಇವುಗಳಿಂದ ಉಂಟಾಗುವ ಮನಸ್ಸಿನ ಆನಂದವೇ ಕಾಮ. ಕಾಮವೆಂಬುದು ಕೇವಲ ಮನಸ್ಸಿನಲ್ಲಿರುವುದೇ ಹೊರತು ಅದಕ್ಕೆ ಬೇರೆಯ ಶರೀರವಿಲ್ಲ. ಅದು ಅನಂಗ. ಅದನ್ನು ಯಾರೂ ನೋಡಲು ಸಾಧ್ಯವಿಲ್ಲ.

**ಅರ್ಥಾರ್ಥೀ ಪುರುಷೋ ರಾಜನ್ಬೃಹನ್ತಂ ಧರ್ಮಮಿಚ್ಛತಿ ।**
**ಅರ್ಥಮಿಚ್ಛತಿ ಕಾಮಾರ್ಥೀ ನ ಕಾಮಾದನ್ಯಮಿಚ್ಛತಿ ॥೩೧॥**

ಅರ್ಥವನ್ನು ಅಥವಾ ಐಶ್ವರ್ಯವನ್ನು ಅಭಿಲಾಷಿಸುವ ಪುರುಷನು ಮಹಾಧರ್ಮದ ಮೂಲವಾಗಿ ಐಶ್ವರ್ಯವನ್ನು ಸಂಪಾದಿಸುತ್ತಾನೆ. ಕಾಮಾರ್ಥಿಯು ದ್ರವ್ಯವನ್ನು ಅಪೇಕ್ಷಿಸುತ್ತಾನೆ. ಎಂದರೆ ಧರ್ಮದಿಂದ ಅರ್ಥವೂ–ಅರ್ಥದಿಂದ ಕಾಮವೂ ಸಿದ್ಧಿಸುತ್ತದೆ. ಆದರೆ ಕಾಮದಿಂದ ಬೇರೆ ಯಾವ ವಸ್ತುವೂ ಸಿದ್ಧಿಸುವುದಿಲ್ಲ.

**ನ ಹಿ ಕಾಮೇನ ಕಾಮೋಽನ್ಯಃ ಸಾಧ್ಯತೇ ಫಲಮೇವ ತತ್ ।**
**ಉಪಭೋಗಾತ್ಫಲಸ್ಯೈವ ಕಾಷ್ಠಾದ್ಭಸ್ಮೇವ ಪಣ್ಡಿತೈಃ ॥೩೨॥**

ಒಂದು ಕಾಮನೆಯಿಂದ ಮತ್ತೊಂದು ಕಾಮನೆಯನ್ನು ಪಡೆಯುವ ಸಾಧ್ಯತೆಯಿಲ್ಲ. ಏಕೆಂದರೆ : ಅದು ಫಲರೂಪವೇ ಆಗಿದೆ. ಕೇವಲ ಉಪಭೋಗವೇ ಕಾಮಕ್ಕೆ ಪ್ರಯೋಜನ. ಸೌದೆಯನ್ನು ಸುಡುವುದರಿಂದ ಬೂದಿಯಾಗುವುದು. ಆದರೆ ಬೂದಿಯಿಂದ ಪುನಃ ಮತ್ತಾವ ವಸ್ತುವನ್ನೂ ಪಡೆಯಲು ಸಾಧ್ಯವಾಗುವುದಿಲ್ಲ. ಅಂತೆಯೇ ಧರ್ಮಾರ್ಥಗಳು ಕಾಮೋಪ

ಭೋಗಗಳನ್ನು ಸಿದ್ಧಮಾಡಿಕೊಡುವುವು. ಕಾಮವು ಉಪಭೋಗದಲ್ಲಿ ಪರ್ಯವಸಾನಹೊಂದುವುದು.

**ಇಮಾಞ್ಛಕುನಕಾನ್ರಾಜನ್ಹನ್ತಿ ವೈತಂಸಿಕೋ ಯಥಾ ।**
**ಏತದ್ರೂಪಮಧರ್ಮಸ್ಯ ಭೂತೇಷು ಹಿ ವಿಹಿಂಸತಾ ॥೩೩॥**

ಈ ಅರಣ್ಯದಲ್ಲಿರುವ ಪಕ್ಷಿಗಳನ್ನು ಬೇಡನು ಹೇಗೆ ಹಿಂಸೆಪಡಿಸುವನೋ–ಅದೇ ರೀತಿಯಲ್ಲಿ ಅಧರ್ಮದ ಪ್ರಭಾವವು ಪ್ರಪಂಚದ ಪ್ರಾಣಿಗಳನ್ನು ಪೀಡಿಸುತ್ತದೆ. ಪ್ರಾಣಿಹಿಂಸೆಯೇ ಅಧರ್ಮದ ಸ್ವರೂಪವಾಗಿದೆ.

**ಕಾಮಾಲ್ಲೋಭಾಚ್ಚ ಧರ್ಮಸ್ಯ ಪ್ರಕೃತಿಂ ಯೋ ನ ಪಶ್ಯತಿ ।**
**ಸ ವಧ್ಯಃ ಸರ್ವಭೂತಾನಾಂ ಪ್ರೇತ್ಯ ಚೇಹ ಚ ದುರ್ಮತಿಃ ॥೩೪॥**

ಯಾವನು ಕಾಮಕ್ಕೂ ಮತ್ತು ದುರಾಶೆಗೂ ಅಧೀನನಾಗಿ ಧರ್ಮದ ನಿಜಸ್ವರೂಪವನ್ನು ತಿಳಿಯುವುದಿಲ್ಲವೋ–ಅವನು ವಧಾರ್ಹನಾಗುತ್ತಾನೆ. ಇಹ-ಪರಗಳೆರಡರಲ್ಲಿಯೂ ಅವನು ದುರಾತ್ಮನೆನಿಸಿಕೊಳ್ಳುತ್ತಾನೆ.

**ವ್ಯಕ್ತಂ ತೇ ವಿದಿತೋ ರಾಜನ್ನರ್ಥೋ ದ್ರವ್ಯಪರಿಗ್ರಹಃ ।**
**ಪ್ರಕೃತಿಂ ಚಾಪಿ ವೇತ್ಥಾಸ್ಯ ವಿಕೃತಿಂ ಚಾಪಿ ಭೂಯಸೀಮ್ ॥೩೫॥**

ಮಹಾರಾಜ! ಅರ್ಥವೆಂದರೆ ದ್ರವ್ಯಪರಿಗ್ರಹ. ಈ ವಿಷಯವು ನಿನಗೆ ತಿಳಿದೇ ಇರುವುದು. ದ್ರವ್ಯದ ನಿಜಸ್ವರೂಪಗಳೂ ನಿನಗೆ ತಿಳಿದಿವೆ. (ಹಣವೊಂದೇ ಅರ್ಥವಲ್ಲ. ಸ್ವರ್ಣ, ಭೂಮಿ, ಹಸು, ಆನೆ, ಕುದುರೆ ಕಾಲಾಳುಗಳು, ದಾಸ-ದಾಸಿಯರು–ಇವರೂ ಅರ್ಥರೂಪವಾಗಿರುತ್ತಾರೆ.)

ಅರ್ಥದಿಂದ ಯಾವ ಯಾವ ಕಾರ್ಯಗಳು ಸಿದ್ಧಿಸುವುದೆಂಬ ವಿಷಯವೂ ನಿನಗೆ ತಿಳಿದೇ ಇದೆ. (ಅರ್ಥದಿಂದ ಸಿದ್ಧಿಸಲಾಗದ ಕಾರ್ಯಗಳೇ ಇಲ್ಲ.) ವಸ್ತುಗಳ ವಿನಿಯೋಗವೂ ನಿನಗೆ ತಿಳಿದಿರುವ ವಿಷಯವೇ ಆಗಿದೆ.

**ತಸ್ಯ ನಾಶೇ ವಿನಾಶೇ ವಾ ಜರಯಾ ಮರಣೇನ ವಾ ।**
**ಅನರ್ಥ ಇತಿ ಮನ್ಯನ್ತೇ ಸೋಽಯಮಸ್ಮಾಸು ವರ್ತತೇ ॥೩೬॥**

ಐಶ್ವರ್ಯವು ನಾಶವಾದರೆ–ಮುಪ್ಪು ಮತ್ತು ಮರಣಗಳಿಂದ ಅರ್ಥದ

ವಿಯೋಗವೂ ಅಥವಾ ವಿನಾಶವೂ ಉಂಟಾದರೆ–ಅದು ಅನರ್ಥವೆನಿಸುತ್ತದೆ. ಇಂತಹ ಅನರ್ಥವು ನಮಗಿಂದು ಸಂಭವಿಸಿದೆ.

**ಇನ್ದ್ರಿಯಾಣಾಂ ಚ ಪಞ್ಚಾನಾಂ ಮನಸೋ ಹೃದಯಸ್ಯ ಚ ।**
**ವಿಷಯೇ ವರ್ತಮಾನಾನಾಂ ಯಾ ಪ್ರೀತಿರುಪಜಾಯತೇ ।**
**ಸ ಕಾಮ ಇತಿ ಮೇ ಬುದ್ಧಿಃ ಕರ್ಮಣಾಂ ಫಲಮುತ್ತಮಮ್ ॥೩೮॥**

ಕಿವಿ, ಕಣ್ಣು–ಮೊದಲಾದ ಪಂಚೇಂದ್ರಿಯಗಳೂ ವಿಷಯಗಳಲ್ಲಿ ಅಥವಾ ಯಾವುದಾದರೂ ವಸ್ತುವಿನಲ್ಲಿ ನಿಯೋಜಿತವಾದಾಗ ಮನಸ್ಸು ಆ ವಸ್ತುವಿನ ಗ್ರಹಣಕ್ಕೆ ಸಂಕಲ್ಪಿಸುತ್ತದೆ ; ಹೃದಯವು ನಿಶ್ಚಯಮಾಡುತ್ತದೆ. ವಿಷಯೋಪಭೋಗದಿಂದುಂಟಾಗುವ ಹರ್ಷವನ್ನೇ 'ಕಾಮ' ಎಂದು ನಾನು ತಿಳಿಯುತ್ತೇನೆ. ನಾವು ಮಾಡುವ ಕಾರ್ಯಗಳಿಗೆ ಇಚ್ಛಾಪೂರಣವೇ ಉತ್ತಮವಾದ ಫಲ.

**ಏವಮೇವ ಪೃಥಗ್ದೃಷ್ಟ್ವಾ ಧರ್ಮಾರ್ಥೌ ಕಾಮಮೇವ ಚ ।**
**ನ ಧರ್ಮಪರ ಏವ ಸ್ಯಾನ್ನ ಚಾರ್ಥಪರಮೋ ನರಃ ।**
**ನ ಕಾಮಪರಮೋ ವಾ ಸ್ಯಾತ್ಸರ್ವಾನ್ಸೇವೇತ ಸರ್ವದಾ ॥೩೯॥**

ಈ ಕಾರಣದಿಂದಲೇ ಧರ್ಮಾರ್ಥ-ಕಾಮಗಳು ಹಿರಿಯರಿಂದ ಅನುಕ್ರಮವಾಗಿ ಹೇಳಲ್ಪಟ್ಟಿವೆ. ಧರ್ಮದಿಂದ ಅರ್ಥಪ್ರಾಪ್ತಿಯೂ ಅರ್ಥದಿಂದ ಕಾಮಪ್ರಾಪ್ತಿಯೂ ಆಗುತ್ತದೆ. ಯಾರೇ ಆಗಲೀ–ಕೇವಲ ಧರ್ಮವನ್ನೇ ಅನುಸರಿಸುತ್ತಾ ಅರ್ಥ-ಕಾಮಗಳನ್ನು ತಿರಸ್ಕರಿಸಬಾರದು. ಅರ್ಥವನ್ನೇ ಆಶ್ರಯಿಸಿ ಧರ್ಮ-ಕಾಮಗಳನ್ನೂ ಬಿಡಬಾರದು. ಅಥವಾ ಕೇವಲ ಕಾಮಿಯಾಗಿ ಧರ್ಮಾರ್ಥಗಳನ್ನೂ ಅಲಕ್ಷಿಸಬಾರದು.

ಧರ್ಮಾರ್ಥ-ಕಾಮಗಳ ಅನುಸರಣೆಯು ಹೇಗೆಂಬುದನ್ನು ಶಾಸ್ತ್ರಗಳು ಹೀಗೆ ಸಾರುತ್ತವೆ :

**ಧರ್ಮಂ ಪೂರ್ವೇ ಧನಂ ಮಧ್ಯೇ ಜಘನ್ಯೇ ಕಾಮಮಾಚರೇತ್ ।**
**ಅಹನ್ಯನುಚರೇದೇವಮೇಷ ಶಾಸ್ತ್ರಕೃತೋ ವಿಧಿಃ ॥೪೦॥**

ದಿನದ ಪೂರ್ವಾಹ್ಣದಲ್ಲಿ ಧರ್ಮಕಾರ್ಯಗಳನ್ನು ಮಾಡಬೇಕು.

ಮಧ್ಯಾಹ್ನದಲ್ಲಿ ಧನಾರ್ಜನೆಯನ್ನು ಮಾಡಬೇಕು. ಸಾಯಂಕಾಲದಲ್ಲಿ ತನ್ನ ಮನೋಗತವಾದ ಅಭಿಲಾಷೆಯನ್ನು ಪೂರೈಸಿಕೊಳ್ಳಬೇಕು. ಹೀಗೆ ಮಾಡಬೇಕೆಂಬುದೇ ಶಾಸ್ತ್ರವಿಧಿಯಾಗಿರುತ್ತದೆ.

**ಕಾಮಂ ಪೂರ್ವೇ ಧನಂ ಮಧ್ಯೇ ಜಘನ್ಯೇ ಧರ್ಮಮಾಚರೇತ್ ।**
**ವಯಸ್ಯನುಚರೇದೇವಮೇಷ ಶಾಸ್ತ್ರಕೃತೋ ವಿಧಿಃ ॥೪೧॥**

**ಧರ್ಮಂ ಚಾರ್ಥಂ ಚ ಕಾಮಂ ಚ ಯಥಾವದ್ವದತಾಂ ವರ ।**
**ವಿಭಜ್ಯ ಕಾಲೇ ಕಾಲಜ್ಞಃ ಸರ್ವಾನ್ಸೇವೇತ ಪಣ್ಡಿತಃ ॥೪೨॥**

ಜೀವನದ ಪೂರ್ವವಯಸ್ಸಿನಲ್ಲಿ ಅಭಿಲಾಷೆಗಳನ್ನು ಪೂರ್ಣಮಾಡಿಕೊಳ್ಳಬೇಕೆಂದೂ, ಮಧ್ಯವಯಸ್ಸಿನಲ್ಲಿ ಧನಾರ್ಜನೆಯನ್ನು ಮಾಡಬೇಕೆಂದೂ ಮತ್ತು ಇಳಿವಯಸ್ಸಿನಲ್ಲಿ ಧರ್ಮಾರ್ಜನೆಯನ್ನು ಮಾಡಬೇಕೆಂದೂ ಶಾಸ್ತ್ರವಿಧಿಯಾಗಿರುತ್ತದೆ. ಹೀಗೆ ಮಾಡುವಾಗಲೂ ಧರ್ಮಾರ್ಥ-ಕಾಮಗಳ ಅನುಸರಣೆಯು ಅತ್ಯಾವಶ್ಯಕ. ಯಾವ ವಯಸ್ಸಿನಲ್ಲಿ ಯಾವುದಕ್ಕೆ ಹೆಚ್ಚಿನ ಗಮನಕೊಡಬೇಕೆಂಬುದರ ವಿಷಯವಾಗಿ ಶಾಸ್ತ್ರವು ಮೇಲೆ ಹೇಳಿದಂತೆ ನಿರ್ದೇಶಿಸುತ್ತದೆ. ಕರ್ತವ್ಯವನ್ನೂ, ಧರ್ಮವನ್ನೂ ಮತ್ತು ಅರ್ಥವನ್ನೂ ಬದಿಗೊತ್ತಿ ಕಾಮಾರ್ಥಿಯಾಗಿಯೇ ಪೂರ್ವವಯಸ್ಸನ್ನು ಕಳೆಯಬೇಕೆಂಬ ಅಭಿಪ್ರಾಯವಲ್ಲ. ಧರ್ಮದಿಂದ ಅರ್ಥ, ಅರ್ಥದಿಂದ ಕಾಮ–ಎಂಬುದು ಸರ್ವಥಾ ಸಿದ್ಧವಾದುದು. ಯುಧಿಷ್ಠಿರ! ಬುದ್ಧಿವಂತರಾದವರು ಮತ್ತು ಕಾಲನಿರ್ಣಯಮಾಡಲು ಶಕ್ತರಾದವರು ಧರ್ಮಾರ್ಥ-ಕಾಮಗಳನ್ನು ನಾನು ಮೇಲೆ ಹೇಳಿದ ರೀತಿಯಲ್ಲಿ ಆಯಾಕಾಲಗಳಲ್ಲಿ ಸೇವಿಸುತ್ತಾರೆ.

ಅಣ್ಣ! ಧರ್ಮಾರ್ಥ-ಕಾಮಗಳನ್ನು ಪ್ರತ್ಯೇಕಿಸಿ, ಧರ್ಮಕ್ಕಾಗಿಯೇ ಧರ್ಮಾಚರಣೆಯನ್ನು ಮಾಡುವುದು, ಕೇವಲ ಅರ್ಥಿಯಾಗಿಯೇ ಇರುವುದು ಅಥವಾ ಕೇವಲ ಕಾಮುಕನಾಗಿಯೇ ಇರುವುದು ಸುಖಪ್ರಾಪ್ತಿಯ ಮಾರ್ಗವೇ? ಅಥವಾ ಮೂರು ಪುರುಷಾರ್ಥಗಳನ್ನೂ ಸಾಧಿಸುವ ಸಲುವಾಗಿ ಒಂದರ ಬಲದಿಂದ ಮತ್ತೊಂದನ್ನು ಸಾಧಿಸುವುದು ಸುಖಪ್ರಾಪ್ತಿಯ ಮಾರ್ಗವೇ?–ಎಂಬುದನ್ನು ನೀನೀಗ ಕೂಲಂಕಷವಾಗಿ ವಿಮರ್ಶಿಸಿ ನಿರ್ಧರಿಸ

ಬೇಕಾಗಿದೆ. ಈ ವಿಷಯವನ್ನು ನಿರ್ಧರಿಸಿ ನೀನು ಒಂದಕ್ಕೊಂದಕ್ಕೆ ಸಂಬಂಧಿಸಿರುವ ಧರ್ಮಾರ್ಥ-ಕಾಮಗಳನ್ನು ಪೂರ್ಣವಾಗಿ ವಿಸರ್ಜಿಸಿ ಮೋಕ್ಷವನ್ನಾದರೂ ಪಡೆಯಬಹುದು ಅಥವಾ ಶಾಸ್ತ್ರವಿಧಿಯಂತೆ ಧರ್ಮ-ಕಾಮಾರ್ಥಗಳನ್ನು ಸೇವಿಸಿ ರಾಜ್ಯಪ್ರಾಪ್ತಿಗಾದರೂ ಯತ್ನಿಸಬಹುದು. ಆದರೆ ಈ ಎರಡು ವಿಷಯಗಳಲ್ಲಿಯೂ ಡೋಲಾಯಮಾನವಾಗಿರುವ ಮನಸ್ಸುಳ್ಳವನು 'ಇದಮಿತ್ಥಂ'–ಎಂಬ ನಿರ್ಧಾರವಿಲ್ಲದವನಾಗಿ ದುಃಖದಲ್ಲಿ ಮುಳುಗುತ್ತಾನೆ. ಅವನ ಸ್ಥಿತಿಯು ರೋಗಿಯ ಜೀವನದಂತಾಗುತ್ತದೆ.

ಅಣ್ಣ! ನೀನು ಸರ್ವಥಾ 'ಧರ್ಮಚಾರೀ' ಎಂಬುದು ನನಗೂ ಮತ್ತು ಸರ್ವರಿಗೂ ತಿಳಿದ ವಿಷಯವೇ ಆಗಿದೆ. ನೀನು ಧರ್ಮಮಾರ್ಗದಲ್ಲಿರುವೆಯೆಂಬುದನ್ನು ತಿಳಿದೇ ಸುಹೃದರು ನಿನ್ನನ್ನು ವೇದವಿಹಿತವಾದ ಯಜ್ಞ-ಯಾಗಾದಿಗಳನ್ನು ಮಾಡಲು ಪ್ರಚೋದಿಸುತ್ತಾರೆ.

**ದಾನಂ ಯಜ್ಞಾಃ ಸತಾಂ ಪೂಜಾ ವೇದಧಾರಣಮಾರ್ಜವಮ್ ।**
**ಏಷ ಧರ್ಮಃ ಪರೋ ರಾಜನ್ಬಲವಾನ್ಪ್ರೇತ್ಯ ಚೇಹ ಚ ॥೪೬॥**

ಯಜ್ಞ, ದಾನ, ಸತ್ಪುರುಷರ ಸಮ್ಮಾನ, ವೇದಾಧ್ಯಯನ ಮತ್ತು ಕಪಟವಿಲ್ಲದಿರುವುದು–ಇವುಗಳು ಶ್ರೇಷ್ಠವಾದ ಧರ್ಮಗಳೆಂದು ಹೇಳಲ್ಪಟ್ಟಿವೆ. ಐಹಿಕ ಮತ್ತು ಆಮುಷ್ಮಿಕಫಲಗಳನ್ನು ಕೊಡುವ ಸಾಮರ್ಥ್ಯವಿರುವ ಧರ್ಮಗಳಿವು. ಇದನ್ನು ನೀನೂ ಒಪ್ಪುವೆಯಲ್ಲವೇ?

**ಏಷ ನಾರ್ಥವಿಹೀನೇನ ಶಕ್ಯೋ ರಾಜನ್ನಿಷೇವಿತುಮ್ ।**
**ಅಖಿಲಾಃ ಪುರುಷವ್ಯಾಘ್ರ ಗುಣಾಃ ಸ್ಯುರ್ಯದ್ಯಪೀತರೇ ॥೪೭॥**

ಪುರುಷಪ್ರವರನೇ! ಆದರೆ ಈ ಶ್ರೇಷ್ಠಧರ್ಮಗಳನ್ನು ಅರ್ಥದ ಸಹಾಯವಿಲ್ಲದೇ ಆಚರಿಸಲು ಸಾಧ್ಯವಿಲ್ಲ. ಬೇರೆ ವಿಧವಾದ ಅನೇಕ ಸೌಕರ್ಯಗಳಿದ್ದರೂ ಹಣವಿಲ್ಲದಿದ್ದರೆ ಯಜ್ಞ-ಯಾಗಾದಿಗಳನ್ನೂ, ದಾನ-ಸತ್ಪುರುಷಾರ್ಚನೆಗಳನ್ನೂ ಮಾಡಲು ಸಾಧ್ಯವಿಲ್ಲ.

**ಧರ್ಮಮೂಲಂ ಜಗದ್ರಾಜನ್ನಾನ್ಯದ್ಧರ್ಮಾದ್ವಿಶಿಷ್ಯತೇ ।**
**ಧರ್ಮಶ್ಚಾರ್ಥೇನ ಮಹತಾ ಶಕ್ಯೋ ರಾಜನ್ನಿಷೇವಿತುಮ್ ॥೪೮॥**

ಈ ಅಖಂಡಬ್ರಹ್ಮಾಂಡವೇ ಧರ್ಮವನ್ನು ಅವಲಂಬಿಸಿ ನಿಂತಿರುವುದು ನಿಶ್ಚಯ. ಧರ್ಮಕ್ಕಿಂತಲೂ ಮಿಗಿಲಾದುದು ಮತ್ತೊಂದಿಲ್ಲ. ಆದರೆ ಈ ಧರ್ಮಾಚರಣೆಯು ಹಣವಿರುವವನಿಂದ ಮಾತ್ರವೇ ಸಾಧ್ಯವಾದೀತು.

**ನ ಚಾರ್ಥೋ ಭೈಕ್ಷ್ಯಚರ್ಯೇಣ ನಾಪಿ ಕ್ಲೈಬ್ಯೇನ ಕರ್ಹಿಚಿತ್ ।**
**ವೇತ್ತುಂ ಶಕ್ಯಃ ಸದಾ ರಾಜನ್ಕೇವಲಂ ಧರ್ಮಬುದ್ಧಿನಾ ॥೬೯॥**

ಭಿಕ್ಷಾಚರಣೆಯಿಂದಾಗಲೀ, ದೌರ್ಬಲ್ಯದಿಂದಾಗಲೀ, ಕೇವಲ ಧರ್ಮ ಬುದ್ಧಿಯುಳ್ಳವನಿಂದ ಹಣವನ್ನು ಸಂಪಾದಿಸಲು ಶಕ್ಯವಾಗುವುದಿಲ್ಲ. (ಕೇವಲ ಧರ್ಮಪರವಾದ ಬುದ್ಧಿಯಿರುವವನು ಭಿಕ್ಷಾಚರಣೆಯಿಂದಾಗಲೀ ಕ್ರಿಯಾ ಹೀನತೆಯಿಂದಾಗಲೀ ಹಣವನ್ನು ಗಳಿಸಲಾರನು.)

**ಪ್ರತಿಷಿದ್ಧಾ ಹಿ ತೇ ಯಾಚ್ಞಾ ಯಥಾ ಸಿಧ್ಯತಿ ವೈ ದ್ವಿಜಃ ।**
**ತೇಜಸೈವಾರ್ಥಲಿಪ್ಸಾಯಾಂ ಯತಸ್ವ ಪುರುಷರ್ಷಭ ॥೭೦॥**

ಬ್ರಾಹ್ಮಣನಾದವನು ಯಾಚನೆಯಿಂದಾದರೂ ಧನಾರ್ಜನೆಯನ್ನು ಮಾಡಬಹುದು. ಆದರೆ ಯಾಚನೆಯು ನಿನಗೆ ನಿಷಿದ್ಧವಾದುದು. ನಮಗೆ ಪರಾಕ್ರಮದಿಂದಲೇ ಅರ್ಥಸಿದ್ಧಿಯಾಗುವುದು. ಆದುದರಿಂದ ಸ್ವಧರ್ಮವಾದ ಪರಾಕ್ರಮವನ್ನೇ ಅವಲಂಬಿಸಿ ಧರ್ಮಕಾರ್ಯಕ್ಕೆ ಅತ್ಯವಶ್ಯವಾಗಿ ಬೇಕಾದ ಧನಾರ್ಜನೆಯನ್ನು ಮಾಡುವುದು ಯುಕ್ತವಾಗಿದೆ.

**ಭೈಕ್ಷ್ಯಚರ್ಯಾ ನ ವಿಹಿತಾ ನ ಚ ವಿಟ್ಪ್ರೋದ್ರಜೀವಿಕಾ ।**
**ಕ್ಷತ್ರಿಯಸ್ಯ ವಿಶೇಷೇಣ ಧರ್ಮಸ್ತು ಬಲಮೌರಸಮ್ ॥೭೧॥**

ಬ್ರಾಹ್ಮಣರು ತಮ್ಮ ಧರ್ಮದಂತೆ ಅನುಸರಿಸುವ ಭಿಕ್ಷಾಚರಣೆ ಯಾಗಲೀ, ವೈಶ್ಯನ ಕೃಷಿ ಅಥವಾ ವಾಣಿಜ್ಯಜೀವನವಾಗಲೀ, ಶೂದ್ರನ ಸೇವಾ ವೃತ್ತಿಯಾಗಲೀ–ಕ್ಷತ್ರಿಯರಾದ ನಮಗೆ ಯೋಗ್ಯವಲ್ಲ. ಬಲ-ಪರಾಕ್ರಮಗಳನ್ನು ಅವಲಂಬಿಸಿ ಕಾರ್ಯಮಾಡುವುದೇ ಕ್ಷಾತ್ರಧರ್ಮ.

**ಸ್ವಧರ್ಮಂ ಪ್ರತಿಪದ್ಯಸ್ವ ಜಹಿ ಶತ್ರೂನ್ಸಮಾಗತಾನ್ ।**
**ಧಾರ್ತರಾಷ್ಟ್ರವನಂ ಪಾರ್ಥ ಮಯಾ ಪಾರ್ಥೇನ ನಾಶಯ ॥೭೨॥**

ಆದುದರಿಂದ ನೀನು ಕ್ಷತ್ರಿಯರಿಗೆ ವಿಹಿತವಾಗಿರುವ ಧರ್ಮಾಚರಣೆ ಯನ್ನೇ ಮಾಡು. ಶತ್ರುವನ್ನು ಯಾವ ರೀತಿಯಿಂದಲಾದರೂ ವಿನಾಶಮಾಡ

ಬೇಕೆಂಬುದೇ ಕ್ಷತ್ರಿಯನ ಮುಖ್ಯಧರ್ಮ. ಅದರಂತೆಯೇ ನೀನಿಂದು ಸ್ವಧರ್ಮಾನುಸಾರವಾಗಿ ಶತ್ರುಗಳನ್ನು ನಿಗ್ರಹಿಸಲು ಸಿದ್ಧನಾಗು. ನನ್ನ ಮತ್ತು ಅರ್ಜುನನ ಸಹಾಯದಿಂದ ವನರೂಪರಾಗಿರುವ ಧೃತರಾಷ್ಟ್ರನ ಮಕ್ಕಳನ್ನು ನಾಶಮಾಡು.

**ಉದಾರಮೇವಂ ವಿದ್ವಾಂಸೋ ಧರ್ಮಂ ಪ್ರಾಹುರ್ಮನೀಷಿಣಃ ।**
**ಉದಾರಂ ಪ್ರತಿಪದ್ಯಸ್ವ ನಾವರೇ ಸ್ಥಾತುಮರ್ಹಸಿ ॥೫೩॥**

ದಾನಶೀಲತೆಯನ್ನು ವಿದ್ವಾಂಸರು ಶ್ರೇಷ್ಠವಾದ ಧರ್ಮವೆನ್ನುತ್ತಾರೆ. ಆದುದರಿಂದ ದಾನಶೀಲನಾಗು. ದೈನ್ಯದಿಂದ ಬಾಳುವುದು ನಿನಗೆ ಖಂಡಿತ ವಾಗಿಯೂ ಉಚಿತವೆನಿಸುವುದಿಲ್ಲ.

**ಅನುಬುಧ್ಯಸ್ವ ರಾಜೇನ್ದ್ರ ವೇತ್ಥ ಧರ್ಮಾನ್ಸನಾತನಾನ್ ।**
**ಕ್ರೂರಕರ್ಮಾಭಿಜಾತೋಽಸಿ ಯಸ್ಮಾದುದ್ವಿಜತೇ ಜನಃ ॥೫೪॥**

ಜಾಗ್ರತನಾಗು, ರಾಜೇಂದ್ರ! ಸನಾತನಧರ್ಮಗಳೆಲ್ಲವೂ ನಿನಗೆ ತಿಳಿದಿವೆ. ಕ್ರೂರಕರ್ಮಗಳನ್ನು ಮಾಡುವ ಕ್ಷತ್ರಿಯವಂಶದಲ್ಲಿ ನೀನು ಜನಿಸಿ ರುವೆ. ಈ ಕಾರಣದಿಂದಲೇ ಜನರು ಕ್ಷತ್ರಿಯನ ವಿಷಯದಲ್ಲಿ ಉದ್ವಿಗ್ನ ರಾಗುತ್ತಾರೆ. (ಭಯಪಡುತ್ತಾರೆ.)

**ಪ್ರಜಾಪಾಲನಸಮ್ಭೂತಂ ಫಲಂ ತವ ನ ಗರ್ಹಿತಮ್ ।**
**ಏಷ ತೇ ವಿಹಿತೋ ರಾಜನ್ಧಾತ್ರಾ ಧರ್ಮಃ ಸನಾತನಃ ॥೫೫॥**

ಶತ್ರುಗಳನ್ನು ವಿನಾಶಮಾಡು ಮತ್ತು ಪ್ರಜೆಗಳನ್ನು ಮಕ್ಕಳಂತೆ ಕಾಪಾಡು. ಅದರ ಫಲವನ್ನನುಭವಿಸು. ಹೀಗೆ ಮಾಡುವುದು ಖಂಡಿತವಾಗಿಯೂ ನಿಂದ್ಯವಲ್ಲ. ಇದು ದೈವಕಲ್ಪಿತವಾದ ರಾಜಧರ್ಮ. ಇದು ನಿನಗೆ ಸ್ವಧರ್ಮವಾಗಿಯೂ ಇದೆ. ಇದನ್ನೇ ಸನಾತನಧರ್ಮವೆನ್ನುತ್ತಾರೆ.

**ತಸ್ಮಾದಪಚಿತಃ ಪಾರ್ಥ ಲೋಕೇ ಹಾಸ್ಯಂ ಗಮಿಷ್ಯಸಿ ।**
**ಸ್ವಧರ್ಮಾದ್ಧಿ ಮನುಷ್ಯಾಣಾಂ ಚಲನಂ ನ ಪ್ರಶಸ್ಯತೇ ॥೫೬॥**

ನೀನು ಈ ಸ್ವಧರ್ಮದಿಂದ ಚ್ಯುತನಾದೆಯೆಂದರೆ ನಿನ್ನನ್ನು ಲೋಕವು ಪರಿಹಾಸ್ಯಮಾಡುವುದು. ಬೇರೆಯ ಧರ್ಮದಲ್ಲಿ ಎಷ್ಟೇ ಗುಣಗಳು ಕಂಡು

ಬಂದರೂ ಸ್ವಧರ್ಮವನ್ನು ಬಿಟ್ಟು ಬೇರೆಯ ಧರ್ಮವನ್ನಾಶ್ರಯಿಸುವುದು ಖಂಡಿತವಾಗಿಯೂ ಶ್ರೇಯಸ್ಕರವಲ್ಲ. ಇದು ಪ್ರಶಂಸನೀಯವೂ ಅಲ್ಲ.

**ಸ ಕ್ಷಾತ್ರಂ ಹೃದಯಂ ಕೃತ್ವಾ ತ್ಯಕ್ತ್ವೇದಂ ಶಿಥಿಲಂ ಮನಃ ।**
**ವೀರ್ಯಮಾಸ್ಥಾಯ ಕೌರವ್ಯ ಧುರಮುದ್ವಹ ಧುರ್ಯವತ್ ॥೫೭॥**

ಕುರುನಂದನ! ಹೃದಯವನ್ನು ಕ್ಷಾತ್ರಹೃದಯವನ್ನಾಗಿ ಪರಿವರ್ತಿಸಿಕೊಂಡು ಈ ನಿನ್ನ ಮನಸ್ಸಿನ ದೌರ್ಬಲ್ಯವನ್ನು ದೂರಮಾಡು. ಪರಾಕ್ರಮವನ್ನು ಆಶ್ರಯಿಸಿ–ಎತ್ತಿನಂತೆ ರಾಜ್ಯವೆಂಬ ರಥದ ಮೂಕಿಯನ್ನು ಧರಿಸುವವನಾಗು. (ರಾಜ್ಯಭಾರಮಾಡು.)

**ನ ಹಿ ಕೇವಲಧರ್ಮಾತ್ಮಾ ಪೃಥಿವೀಂ ಜಾತು ಕಶ್ಚನ ।**
**ಪಾರ್ಥಿವೋ ವ್ಯಜಯದ್ರಾಜನ್ನ ಭೂತಿಂ ನ ಪುನಃ ಶ್ರಿಯಮ್ ॥೫೮॥**

ಯಾವೊಬ್ಬ ರಾಜನೂ ಕೇವಲ ಧಾರ್ಮಿಕನಾಗಿದ್ದುಕೊಂಡೇ ಚಕ್ರಾಧಿಪತ್ಯವನ್ನಾಗಲೀ, ಐಶ್ವರ್ಯವನ್ನಾಗಲೀ ಗೆದ್ದಿರುವುದಿಲ್ಲ.

**ಜಿಹ್ವಾಂ ದತ್ತ್ವಾ ಬಹೂನಾಂ ಹಿ ಕ್ಷುದ್ರಾಣಾಂ ಲುಬ್ಧಚೇತಸಾಮ್ ।**
**ನಿಕೃತ್ಯಾ ಲಭತೇ ರಾಜ್ಯಮಾಹಾರಮಿವ ಶಲ್ಯಕಃ ॥೫೯॥**

ಬೇಡನು ಕಾಡುಪ್ರಾಣಿಗಳಿಗೆ ಆಹಾರವನ್ನು ಎರಚಿ ಅವು ಬಂದೊಡನೆಯೇ ಬಲೆಯನ್ನು ಬೀಸಿ ಅವುಗಳನ್ನು ಹಿಡಿಯುವಂತೆ ಅಥವಾ ಬೆಸ್ತನು ಗಾಳಕ್ಕೆ ಹುಳುವನ್ನು ಕಟ್ಟಿ ಅದನ್ನು ನೀರಿನಲ್ಲಿ ಬಿಟ್ಟು ಮೀನು ಹಿಡಿಯುವಂತೆ–ರಾಜರು ಶತ್ರುಪಕ್ಷದಲ್ಲಿರುವ ಅಧಿಕಾರಿಗಳನ್ನು ಏಕಾಂತದಲ್ಲಿ ಸಂಧಿಸಿ, ಅವರಿಗೆ ಯಥೇಚ್ಛವಾಗಿ ಧನ-ಕನಕ-ವಸ್ತು-ವಾಹನಗಳನ್ನು ಕೊಡುವುದಾಗಿ ಮಾತುಕೊಟ್ಟು, ಅವರನ್ನು ಶತ್ರುರಾಜರಿಂದ ಬೇರ್ಪಡಿಸಿ, ಶತ್ರುರಾಜ್ಯದ ರಹಸ್ಯಗಳನ್ನು ತಿಳಿದು, ಶತ್ರುರಾಜರನ್ನು ಪರಾಭವಗೊಳಿಸಿ ರಾಜ್ಯವನ್ನು ವಶಪಡಿಸಿಕೊಳ್ಳುತ್ತಾರೆ.

**ಭ್ರಾತರಃ ಪೂರ್ವಜಾತಾಶ್ಚ ಸುಸಮೃದ್ಧಾಶ್ಚ ಸರ್ವಶಃ ।**
**ನಿಕೃತ್ಯಾ ನಿರ್ಜಿತಾ ದೇವೈರಸುರಾಃ ಪಾರ್ಥಿವರ್ಷಭ ॥೬೦॥**

ದೇವಾಸುರರಲ್ಲಿಯೂ ಹೀಗೆಯೇ ನಡೆಯಿತಲ್ಲವೇ? ಅಸುರರು

ಮೊದಲು ಹುಟ್ಟಿದರು ; ಸಂಪತ್ತಿನಿಂದ ಕೂಡಿದ್ದರು ; ಪರಾಕ್ರಮಶಾಲಿಗಳಾಗಿಯೂ ಇದ್ದರು. ಅನಂತರ ದೇವತೆಗಳು ಅವರೆಲ್ಲರನ್ನೂ ಉಪಾಯದಿಂದ ಧ್ವಂಸಮಾಡಿದರು. ಈಗ ದೇವತೆಗಳನ್ನು ಯಾರಾದರೂ ನಿಂದೆಮಾಡುವರೇ?

**ಏವಂ ಬಲವತಃ ಸರ್ವಮಿತಿ ಬುದ್ಧ್ವಾ ಮಹೀಪತೇ ।**
**ಜಹಿ ಶತ್ರೂನ್ಮಹಾಬಾಹೋ ಪರಾಂ ನಿಕೃತಿಮಾಸ್ಥಿತಃ ॥೬೧॥**

ಮಹಾರಾಜ! ಆದುದರಿಂದ, ಪ್ರತಿಯೊಂದು ಕಾರ್ಯವೂ ಪರಾಕ್ರಮವನ್ನೇ ಅವಲಂಬಿಸಿ ನಿಂತಿದೆ. ಬಲಿಷ್ಠನಿಗೇ ಎಲ್ಲವೂ ಲಭಿಸುತ್ತದೆ. ನೀನೀಗಲೇ ಸಾಮ-ದಾನ-ಭೇದ-ದಂಡೋಪಾಯಗಳಿಂದಲೂ, ಕೂಟನೀತಿಗಳಿಂದಲೂ ಶತ್ರುಗಳನ್ನು ನಿಗ್ರಹಿಸು. ಧನುರ್ಧಾರಿಗಳಲ್ಲಿ ಅರ್ಜುನನಿಗೆ ಸಮಾನರು ಈ ಪ್ರಪಂಚದಲ್ಲಿಯೇ ಯಾರೂ ಇರುವುದಿಲ್ಲ. ಗದಾಧರರಲ್ಲಿ ನನಗೆ ಸಮಾನರಾದವರೂ ಯಾರೂ ಇರುವುದಿಲ್ಲ.

**ಸತ್ತ್ವೇನ ಕುರುತೇ ಯುದ್ಧಂ ರಾಜನ್ಸುಬಲವಾನಪಿ ।**
**ಅಪ್ರಮಾದೀ ಮಹೋತ್ಸಾಹೀ ಸತ್ತ್ವಸ್ಥೋ ಭವ ಪಾಣ್ಡವ ॥೬೩॥**

ಪರಾಕ್ರಮಿಗಳಾದವರು ಯಾವಾಗಲೂ ತಮ್ಮ ಭುಜಬಲಪರಾಕ್ರಮವನ್ನೇ ಅವಲಂಬಿಸಿ ಯುದ್ಧಸನ್ನದ್ಧರಾಗುವರೇ ಹೊರತು ಸೇನಾಬಲದ ಗಣನೆಯಿಂದಾಗಲೀ, ಗೂಢಚಾರರಿಂದ ಶತ್ರುಪಕ್ಷದ ರಂಧ್ರಾನ್ವೇಷಣೆಮಾಡಿಯಾಗಲೀ ಯುದ್ಧಸನ್ನದ್ಧರಾಗಿರುವುದಿಲ್ಲ. ಆದುದರಿಂದ ಶತ್ರುಪಕ್ಷದಲ್ಲಿರುವ ಅಪಾರಸೈನ್ಯವನ್ನೂ ನೀನು ಗಣನೆಗೆ ತೆಗೆದುಕೊಳ್ಳದೇ ನಮ್ಮ ಪರಾಕ್ರಮದ ಅವಲಂಬನೆಯಿಂದಲೇ ರಾಜ್ಯಪ್ರಾಪ್ತಿಗೆ ಪ್ರಯತ್ನಿಸು.

**ಸತ್ತ್ವಂ ಹಿ ಮೂಲಮರ್ಥಸ್ಯ ವಿತಥಂ ಯದತೋಽನ್ಯಥಾ ।**
**ನ ತು ಪ್ರಸಕ್ತಂ ಭವತಿ ವೃಕ್ಷಚ್ಛಾಯೇವ ಹೈಮನೀ ॥೬೪॥**

ಪರಾಕ್ರಮವೇ ಐಶ್ವರ್ಯಕ್ಕೆ ಮೂಲಕಾರಣ. ಕ್ಷತ್ರಿಯನಾದವನಿಗೆ ಸ್ವಧರ್ಮವಾದ ಪರಾಕ್ರಮವನ್ನು ಬಿಟ್ಟು ಅರ್ಥಸಂಚಯಕ್ಕೆ ಬೇರೆಯ ಮಾರ್ಗವೇ ಇಲ್ಲ. ಕ್ಷತ್ರಿಯನಾದವನಿಗೆ ಪರಾಕ್ರಮವೊಂದನ್ನುಳಿದು ಬೇರಾವ ಗುಣಗಳಿದ್ದರೂ ವ್ಯರ್ಥವೇ ಆಗುವುದು. ಹಿಮಂತರ್ತುವಿನಲ್ಲಿ ಮರದ ನೆರಳಿನಿಂದ ಜನರಿಗೆ ಎಷ್ಟು ಪ್ರಯೋಜನವಿರುವುದೋ–ಅಷ್ಟೇ

ಪ್ರಯೋಜನವು ನಿರ್ವೀರ್ಯನಾದ ಕ್ಷತ್ರಿಯನಿಂದಲೂ ಪ್ರಪಂಚಕ್ಕುಂಟಾಗುತ್ತದೆ. (ಅವನಿಂದ ಯಾವ ಪ್ರಯೋಜನವೂ ಲೋಕಕ್ಕುಂಟಾಗುವುದಿಲ್ಲ.)

**ಅರ್ಥತ್ಯಾಗೋಽಪಿ ಕಾರ್ಯಃ ಸ್ಯಾದರ್ಥಂ ಶ್ರೇಯಾಂಸಮಿಚ್ಛತಾ ।**
**ಬೀಜೌಪಮ್ಯೇನ ಕೌನ್ತೇಯ ಮಾ ತೇ ಭೂದತ್ರ ಸಂಶಯಃ ॥೬೫॥**

ಸ್ವಲ್ಪ ಬೀಜವನ್ನು ಬಿತ್ತಿ ಅಪಾರವಾದ ಫಸಲನ್ನು ಪಡೆಯುವಂತೆ ಕೆಲವು ಸಮಯಗಳಲ್ಲಿ ಅಪಾರವಾದ ಐಶ್ವರ್ಯವನ್ನು ಸಂಪಾದಿಸಲು ಸ್ವಲ್ಪ ಐಶ್ವರ್ಯವನ್ನು ವ್ಯಯಮಾಡಬೇಕಾಗುತ್ತದೆ. ನಾನು ಮೇಲೆ ಹೇಳಿದ ವಿಷಯಗಳಲ್ಲಿ ಸ್ವಲ್ಪವಾದರೂ ಸಂಶಯಪಡಬೇಡ, ಯುಧಿಷ್ಠಿರ!

**ಅರ್ಥೇನ ತು ಸಮೋ ನಾರ್ಥೋ ಯತ್ರ ಲಭ್ಯೇತ ನೋದಯಃ ।**
**ನ ತತ್ರ ವಿಪಣಃ ಕಾರ್ಯಃ ಖರಕಣ್ಡೂಯನಂ ಹಿ ತತ್ ॥೬೬॥**

ಆದರೆ ಸಮನಾದ ಅಥವಾ ಹೆಚ್ಚಾದ ಐಶ್ವರ್ಯದ ಸಂಪಾದನೆಯಾಗಲಾರದೆಂದು ತಿಳಿದೆಡೆಯಲ್ಲಿ ಅರ್ಥವನ್ನು ವ್ಯಯಮಾಡಬಾರದು. ಹೀಗೆ ವ್ಯಯಮಾಡುವುದರಿಂದ ಖರಕಂಡೂಯನನ್ಯಾಯದಂತೆ–ಕತ್ತೆಯ ಕತ್ತನ್ನು ಕೆರೆದರೆ ಉಂಟಾಗುವ ಪ್ರಯೋಜನವೇ ಉಂಟಾಗುವುದು.

(ಇದಕ್ಕೆ ವ್ಯಾಖ್ಯಾನಕಾರರ ವ್ಯಾಖ್ಯೆಯು ಈ ರೀತಿಯಾಗಿದೆ : ಅಪಾರವಾದ ಹಣದ ಸಂಪಾದನೆಗೆ ಸ್ವಲ್ಪ ಹಣವನ್ನು ವ್ಯಯಮಾಡಬೇಕಾದುದು ಆವಶ್ಯಕವಾದರೂ ದುರ್ಯೋಧನನಿಗೆ ರಾಜ್ಯವನ್ನು ಅರ್ಪಣೆಮಾಡುವುದರಿಂದ ಯಾವ ವಿಧವಾದ ಪ್ರಯೋಜನವೂ ಉಂಟಾಗಲಾರದು. ಮತ್ತಷ್ಟು ತೊಂದರೆಯೇ ಉಂಟಾಗುವುದು. ಹೇಗೆಂದರೆ : ಕತ್ತೆಯ ಕತ್ತನ್ನು ಕೆರೆದರೆ ಸ್ನಾನಮಾಡಬೇಕಾಗುವುದು. ಕತ್ತೆಗೂ ಹಿತವಾಗುವುದಿಲ್ಲ. ಕತ್ತೆಯಿಂದ ಯಾವ ಪ್ರಯೋಜನವೂ ಇರುವುದಿಲ್ಲ. ಅದಕ್ಕೆ ಪ್ರತಿಯಾಗಿ ಗೋವಿನ ಕತ್ತನ್ನು ಕೆರೆದರೆ ಪುಣ್ಯಪ್ರಾಪ್ತಿಯಾಗುವುದು ಮತ್ತು ನಮಗೆ ಬೇಕಾಗುವ ಅಮೃತಸಮಾನವಾದ ಹಾಲನ್ನೂ ಅದು ಕೊಡುವುದು.)

( ಹೆಚ್ಚು ಐಶ್ವರ್ಯವನ್ನು ಸಂಪಾದಿಸಲು ಸ್ವಲ್ಪ ಐಶ್ವರ್ಯವನ್ನು

ವ್ಯಯಮಾಡಬೇಕಾಗುತ್ತದೆ. ಹನ್ನೆರಡು ವರ್ಷಗಳ ಕಾಲ ವನವಾಸಮಾಡ ಬೇಕೆಂದು ಮಾಡಿರುವ ಪ್ರತಿಜ್ಞೆಯನ್ನು ಬದಿಗೊತ್ತಿ ಕೌರವರನ್ನು ಸೋಲಿಸಿ ರಾಜ್ಯವನ್ನು ಈಗಲೇ ಪಡೆದುಕೊಂಡರೆ ಇದೇ ಹನ್ನೆರಡು ವರ್ಷಗಳ ಅವಧಿ ಯಲ್ಲಿ ಯಜ್ಞ-ಯಾಗಾದಿಗಳನ್ನು ಮಾಡಿ ಹೆಚ್ಚು ಪುಣ್ಯವನ್ನು ಸಂಪಾದಿಸ ಬಹುದೆಂಬುದು ಭೀಮನ ಅಭಿಪ್ರಾಯ. ಅದನ್ನೇ ಸ್ಪಷ್ಟವಾಗಿ ಹೇಳುತ್ತಾನೆ.)

ಏವಮೇವ ಮನುಷ್ಯೇನ್ದ್ರ ಧರ್ಮಂ ತ್ಯಕ್ತ್ವಾಲ್ಪಕಂ ನರಃ ।
ಬೃಹನ್ತಂ ಧರ್ಮಮಾಪ್ನೋತಿ ಸ ಬುದ್ಧ ಇತಿ ನಿಶ್ಚಿತಮ್ ॥೬೭॥

ಸ್ವಲ್ಪ ಹಣವನ್ನು ವ್ಯಯಮಾಡಿ ಬುದ್ಧಿವಂತಿಕೆಯಿಂದ ಅಪಾರವಾದ ಹಣವನ್ನು ಗಳಿಸುವಂತೆ–ಸ್ವಲ್ಪವೇ ಧರ್ಮವನ್ನು ತ್ಯಾಗಮಾಡಿ ಅಪಾರವಾದ ಧರ್ಮಕಾರ್ಯಗಳನ್ನು ಮಾಡಬಹುದು. ಹೀಗೆ ಮಾಡುವವನೇ ಜ್ಞಾನಿಯು.

ಅಮಿತ್ರಂ ಮಿತ್ರಸಮ್ಪನ್ನಂ ಮಿತ್ರೈರ್ಭಿನ್ದನ್ತಿ ಪಣ್ಡಿತಾಃ ।
ಭಿನ್ನೈರ್ಮಿತ್ರೈಃ ಪರಿತ್ಯಕ್ತಂ ದುರ್ಬಲಂ ಕುರ್ವತೇ ವಶಮ್ ॥೬೮॥

ಬುದ್ಧಿವಂತರಾದವರು ತಮ್ಮ ಶತ್ರುಪಕ್ಷದ ಮಿತ್ರರಾರೆಂದು ತಿಳಿದು ಅವರೊಡನೆ ಸಂಧಾನಮಾಡಿ ಶತ್ರುಪಕ್ಷದವರ ಮಿತ್ರರನ್ನು ಭೇದೋಪಾಯ ದಿಂದ ಬೇರ್ಪಡಿಸಿ, ತಮ್ಮ ಕಡೆಗೆ ತಿರುಗಿಸಿಕೊಂಡು, ಶತ್ರುವನ್ನು ಪೂರ್ಣ ದುರ್ಬಲನನ್ನಾಗಿ ಮಾಡಿ, ಸಮಯವನ್ನು ಕಾದು ಅವನನ್ನು ವಶಪಡಿಸಿ ಕೊಳ್ಳುತ್ತಾರೆ.

ಸತ್ತ್ವೇನ ಕುರುತೇ ಯುದ್ಧಂ ರಾಜನ್ಸುಬಲವಾನಪಿ ।
ನೋದ್ಯಮೇನ ನ ಹೋತ್ರಾಭಿಃ ಸರ್ವಾಃ ಸ್ವೀಕುರುತೇ ಪ್ರಜಾಃ ॥೬೯॥

ಬಲಿಷ್ಠರಾದವರು ತಮ್ಮ ಸೇನಾಬಲವನ್ನೇ ಅವಲಂಬಿಸಿ ಯುದ್ಧ ಮಾಡುವುದಿಲ್ಲ. ಅವರಲ್ಲಿ ಆತ್ಮಶಕ್ತಿಯೂ ಇರಬೇಕು. ಮನೋದಾರ್ಢ್ಯ ಅಥವಾ ಆತ್ಮಶಕ್ತಿಯುಳ್ಳವರು ಮಾತ್ರವೇ ಯುದ್ಧಮಾಡಲು ಸಮರ್ಥರಾಗು ತ್ತಾರೆ. ಬೇರಾವ ಪ್ರಯತ್ನದಿಂದಲೇ ಆಗಲೀ, ಮತ್ತೊಬ್ಬರನ್ನು ಪ್ರಶಂಸೆ

ಮಾಡುವುದರಿಂದಲೇ ಆಗಲೀ ಪ್ರಜೆಗಳನ್ನಾಳುವ (ರಾಜ್ಯವನ್ನು ಪಡೆದು ಕೊಳ್ಳುವ) ಸಾಧ್ಯತೆಯಿಲ್ಲ.

(ಯದ್ಯಪಿ ನಮ್ಮಲ್ಲಿ ಅಪಾರವಾದ ಶಕ್ತಿಯಿದ್ದರೂ ನಿನ್ನಲ್ಲಿ ಆತ್ಮಬಲವೇ ಇಲ್ಲದಿರುವುದರಿಂದ ಯುದ್ಧಮಾಡಲು ನೀನು ಅವಕಾಶವನ್ನೇ ಕೊಡುತ್ತಿಲ್ಲ. ಯುದ್ಧಮಾಡಲು ಆತ್ಮಬಲವೂ ಇರಬೇಕು.)

**ಸರ್ವಥಾ ಸಂಹತೈರೇವ ದುರ್ಬಲೈರ್ಬಲವಾನಪಿ ।**
**ಅಮಿತ್ರಃ ಶಕ್ಯತೇ ಹನ್ತುಂ ಮಧುಹಾ ಭ್ರಮರೈರಿವ ॥೨೦॥**

ಸಣ್ಣ-ಸಣ್ಣ ಜೇನುಹುಳುಗಳು ಒಟ್ಟಾಗಿ ಸೇರಿ ಜೇನುತುಪ್ಪವನ್ನು ಅಪಹರಿಸಲು ಬರುವ ಮನುಷ್ಯರನ್ನು ಕಚ್ಚಿ ಕೊಲ್ಲುವಂತೆ–ಕೆಲವು ಸಮಯ ಗಳಲ್ಲಿ ದುರ್ಬಲರಾದವರೂ ಒಟ್ಟುಗೂಡಿ ಎದುರಾಳಿಯನ್ನು ನಿರ್ಮೂಲ ಮಾಡಬಲ್ಲರು.

**ಯಥಾ ರಾಜನ್ಪ್ರಜಾಃ ಸರ್ವಾಃ ಸೂರ್ಯಃ ಪಾತಿ ಗಭಸ್ತಿಭಿಃ ।**
**ಅತ್ತಿ ಚೈವ ತಥೈವ ತ್ವಂ ಸದೃಶಃ ಸವಿತುರ್ಭವ ॥೨೧॥**

ಈ ರೀತಿಯಲ್ಲಿ ನೀನೂ ಸಹ ಯಾವುದಾದರೊಂದು ಮಾರ್ಗದಿಂದ ಶತ್ರುನಿಗ್ರಹವನ್ನು ಮಾಡಬೇಕಾಗಿದೆ. ಸೂರ್ಯನು ತನ್ನ ಕಿರಣಗಳಿಂದ ಜೀವಕೋಟಿಯನ್ನು ಸಂತಾಪಗೊಳಿಸುವಂತೆ ಮತ್ತು ರಕ್ಷಿಸುವಂತೆ–ನೀನು ದುಷ್ಟರಾದವರನ್ನು ನಿಗ್ರಹಿಸಿ, ಶಿಷ್ಟರಾದವರನ್ನು ಪರಿಪಾಲನೆಮಾಡುತ್ತಾ ಸೂರ್ಯಸದೃಶನಾಗು.

**ಏತಚ್ಚಾಪಿ ತಪೋ ರಾಜನ್ಪುರಾಣಮಿತಿ ನಃ ಶ್ರುತಮ್ ।**
**ವಿಧಿನಾ ಪಾಲನಂ ಭೂಮೇರ್ಯತ್ಕೃತಂ ನಃ ಪಿತಾಮಹೈಃ ॥೨೨॥**

'ಶತ್ರುಗಳಿಂದ ದೇಶದ ರಕ್ಷಣೆ ಮತ್ತು ಪ್ರಜಾಪಾಲನೆ'–ಇವೇ ಕ್ಷತ್ರಿಯನ ತಪಸ್ಸೆಂಬ ಪುರಾಣವಾಕ್ಯವೂ ನಮ್ಮಿಂದ ಅನೇಕಬಾರಿ ಕೇಳಲ್ಪಟ್ಟಿದೆ. ಇದನ್ನೇ ನಮ್ಮ ಪೂರ್ವಜರೂ ಅನುಸರಿಸುತ್ತಿದ್ದರು.

**ನ ತಥಾ ತಪತಾ ರಾಜಲ್ಲೋಕಾನ್ಪ್ರಾಪ್ನೋತಿ ಕ್ಷತ್ರಿಯಃ ।**
**ಯಥಾ ಸೃಷ್ಟೇನ ಯುದ್ಧೇನ ವಿಜಯೇನೇತರೇಣ ವಾ ॥೨೩॥**

ಇದನ್ನು ಬಿಟ್ಟು ಬ್ರಾಹ್ಮಣನ ಧರ್ಮವಾದ ಯಜ್ಞ-ತಪಃಕ್ರಿಯೆಗಳನ್ನು ಮಾಡುತ್ತಾ ಕುಳಿತರೆ ಕ್ಷತ್ರಿಯನಾದವನು ಖಂಡಿತವಾಗಿಯೂ ಶ್ರೇಯಸ್ಸನ್ನು ಪಡೆಯಲಾರನು. ವಿಜಯದಿಂದ ಅಥವಾ ಮರಣದಿಂದ–ಧರ್ಮ ಯುದ್ಧದಲ್ಲಿ ನಿರತನಾಗುವ ಕ್ಷತ್ರಿಯನಿಗೆ ಸಿಕ್ಕುವ ಪುಣ್ಯಲೋಕಗಳು ಯಜ್ಞ-ತಪಃಕ್ರಿಯೆಗಳನ್ನು ಮಾಡುತ್ತಾ ಕುಳಿತಿರುವ ಕ್ಷತ್ರಿಯನಿಗೆ ಖಂಡಿತ ವಾಗಿಯೂ ಲಭಿಸಲಾರವು.

**ಅಪೇಯಾತ್ಕಿಲ ಭಾಃ ಸೂರ್ಯಾಲ್ಲಕ್ಷ್ಮೀಶ್ಚನ್ದ್ರಮಸಸ್ತಥಾ ।**
**ಇತಿ ಲೋಕೋ ವ್ಯವಸಿತೋ ದೃಷ್ಟ್ವೇಮಾಂ ಭವತೋ ವ್ಯಥಾಮ್ ॥**

ಇಂದಿನ ನಿನ್ನ ದುರವಸ್ಥೆಯನ್ನು ಕಂಡು ಜನರು–ಕಾಲಾಂತರದಲ್ಲಿ ಸೂರ್ಯನಿಂದ ತೇಜಸ್ಸೂ, ಚಂದ್ರನಿಂದ ಬೆಳದಿಂಗಳೂ ಬೇರೆಯಾಗಿಬಿಡ ಬಹುದೆಂದು ಭ್ರಾಂತರಾಗಿದ್ದಾರೆ. (ಧರ್ಮರಾಜನಿಗೇ ಈ ವಿಧವಾದ ಕಷ್ಟವು ಸಂಭವಿಸಿದರೆ ಬೇರೆಯವರ ಪಾಡೇನು? ಎನ್ನುತ್ತಿದ್ದಾರೆ.) ಸತ್ಪುರುಷರು ಸಭೆ ಸೇರಿದಾಗಲೂ ಮತ್ತು ತಮ್ಮ ಬಂಧು-ಮಿತ್ರರೊಡನೆ ಮಾತನಾಡುವಾಗಲೂ ನಿನ್ನ ವಿಷಯವನ್ನು ಪ್ರಸ್ತಾಪಿಸಿ ದುರ್ಯೋಧನನ ಕಾರ್ಯವನ್ನು ಖಂಡಿಸಿ ನಿನ್ನನ್ನು ಶ್ಲಾಘಿಸುತ್ತಾರೆ. ಇದಕ್ಕಿಂತಲೂ ಮಿಗಿಲಾಗಿ ಕೌರವರೂ ಮತ್ತು ಬ್ರಾಹ್ಮಣರೂ ನಿನ್ನ ವಿಷಯವಾಗಿ ಬಹಳ ಶ್ಲಾಘನೆಮಾಡುತ್ತಾರೆ. 'ಯುಧಿಷ್ಠಿರನು ಸತ್ಯಪ್ರಿಯನು. ಸತ್ಯನಿಷ್ಠನು. ವಿಸ್ಮರಣೆಯಿಂದಾಗಲೀ, ಕಾರ್ಪಣ್ಯದಿಂದಾಗಲೀ, ಲೋಭದಿಂದಾಗಲೀ, ಐಶ್ವರ್ಯದ ಕಾರಣದಿಂದಾ ಗಲೀ–ಸುಳ್ಳನ್ನಾಡುವುದಿಲ್ಲ.' ಹೀಗೆಲ್ಲಾ ನಿನ್ನನ್ನು ಶ್ಲಾಘಿಸುತ್ತಿರುತ್ತಾರೆ.

**ಯದೇನಃ ಕುರುತೇ ಕಿಂಚಿದ್ರಾಜಾ ಭೂಮಿಮವಾಪ್ನುವನ್ ।**
**ಸರ್ವಂ ತನ್ನುದತೇ ಪಶ್ಚಾದ್ಯಜ್ಞೈರ್ವಿಪುಲದಕ್ಷಿಣೈಃ ॥೭೮॥**

ಸಾಮ್ರಾಜ್ಯವನ್ನು ಪಡೆಯುವ ಸಲುವಾಗಿ ಅಲ್ಪ-ಸ್ವಲ್ಪ ಪಾಪಮಾಡಿ ದರೂ ಪ್ರಭುತ್ವವನ್ನು ಪಡೆದನಂತರ ಅನೇಕಾನೇಕ ಯಜ್ಞ-ಯಾಗಗಳನ್ನು ಮಾಡಿ, ಭೂರಿದಕ್ಷಿಣೆಗಳನ್ನು ಕೊಟ್ಟು ಆ ಪಾಪವನ್ನು ತೊಡೆದುಕೊಳ್ಳ ಬಹುದಾಗಿದೆ.

**ಬ್ರಾಹ್ಮಣೇಭ್ಯೋ ದದದ್ಗ್ರಾಮಾನ್ಗಾಶ್ಚ ರಾಜನ್ಸಹಸ್ರಶಃ ।**
**ಮುಚ್ಯತೇ ಸರ್ವಪಾಪೇಭ್ಯಸ್ತಮೋಭ್ಯ ಇವ ಚನ್ದ್ರಮಾಃ ॥೭೯॥**

ಬ್ರಾಹ್ಮಣರಿಗೆ ಸಾವಿರಾರು ಗ್ರಾಮಗಳನ್ನೂ ಮತ್ತು ಸಾವಿರಾರು ಗೋವುಗಳನ್ನೂ ಯಥೇಚ್ಛವಾಗಿ ದಾನಕೊಟ್ಟು ಪಾಪಗಳಿಂದ ವಿಮುಕ್ತನಾಗಿ–ಮೋಡದಿಂದ ಹೊರಬರುವ ಚಂದ್ರನಂತೆ–ರಾಜನಾದವನು ಪ್ರಕಾಶಿಸುತ್ತಾನೆ.

ಕುರುಜಾಂಗಲನಿವಾಸಿಗಳಾದ ಪ್ರಜೆಗಳೆಲ್ಲರೂ ಆಬಾಲವೃದ್ಧರಾದಿಯಾಗಿ ನಿನ್ನನ್ನು ಶ್ಲಾಘಿಸುತ್ತಿದ್ದಾರೆ. ನಿನ್ನನ್ನು ಶ್ಲಾಘಿಸುವುದು ಮಾತ್ರವಲ್ಲದೇ ದುರ್ಯೋಧನನಿಗೆ ರಾಜ್ಯಪ್ರಾಪ್ತಿಯಾಗಿರುವುದನ್ನು ತೆಗಳುತ್ತಲೂ ಇದ್ದಾರೆ.

**ಶ್ವದೃತೌ ಕ್ಷೀರಮಾಸಕ್ತಂ ಬ್ರಹ್ಮ ವಾ ವೃಷಲೇ ಯಥಾ ।**
**ಸತ್ಯಂ ಸ್ತೇನೇ ಬಲಂ ನಾರ್ಯಾಂ ರಾಜ್ಯಂ ದುರ್ಯೋಧನೇ ತಥಾ ॥**

ದುರ್ಯೋಧನನಲ್ಲಿ ರಾಜ್ಯದ ರಕ್ಷಣಾಭಾರವಿರುವುದು 'ನಾಯಿಯ ಚರ್ಮದಿಂದ ಮಾಡಿರುವ ಚೀಲದಲ್ಲಿ ಹಾಲಿರುವಂತೆ–ಕೀಳುಜಾತಿಯವನಲ್ಲಿ ವೇದಗಳಿರುವಂತೆ–ಕಳ್ಳನಲ್ಲಿ ಸತ್ಯಭಾಷಣವಿರುವಂತೆ ಮತ್ತು ಹೆಂಗಸಿನಲ್ಲಿ ಪರಾಕ್ರಮವಿರುವಂತೆ–ಸರ್ವಥಾ ಅನುಚಿತವಾದುದು'–ಎಂಬುದಾಗಿ ಜನರು ಪರಸ್ಪರವಾಗಿ ಮಾತನಾಡಿಕೊಳ್ಳುತ್ತಾರೆ.

ಈ ಸತ್ಯಪ್ರವಾದವು ಹಿಂದಿನಿಂದಲೂ ಲೋಕದಲ್ಲಿ ಪ್ರಸಿದ್ಧವಾಗಿದೆ. (ವಟುಗಳು ಅನುದಿನವೂ ವೇದವನ್ನು ಅಧ್ಯಯನಮಾಡುವಂತೆ) ಹೆಂಗಸರೂ ಮತ್ತು ಮಕ್ಕಳೂ ಈ ಶ್ಲೋಕವನ್ನು ಹೇಳುತ್ತಿರುತ್ತಾರೆ.

ಅಜಾತಶತ್ರುವೇ! ನೀನು ಇಂದು ಈ ವಿಧವಾದ ದಾರುಣವಾದ ಕಷ್ಟಕ್ಕೆ ಒಳಗಾಗಿರುವೆ. ನೀನು ರಾಜ್ಯಭ್ರಷ್ಟನಾಗಿರುವುದರಿಂದ ನಾವೂ ಅನೇಕ ಕಷ್ಟಗಳಿಗೆ ಗುರಿಯಾಗಿದ್ದೇವೆ. ಆದುದರಿಂದ ನೀನೀಗಲೇ ಸಕಲಶಸ್ತ್ರಾಸ್ತ್ರಗಳಿಂದಲೂ ಸಜ್ಜಾಗಿರುವ ರಥವನ್ನು ಹತ್ತಿ, ಶ್ರೇಷ್ಠರಾದ ಬ್ರಾಹ್ಮಣರಿಂದ ಆಶೀರ್ವಚನಗಳನ್ನು ಪಡೆದು, ಹಸ್ತಿನಾಪುರಕ್ಕೆ ಪ್ರಯಾಣಮಾಡು. ದೇವತೆಗಳಿಂದೊಡಗೂಡಿದ ಇಂದ್ರನು ಅಸುರರನ್ನು ಆಕ್ರಮಿಸಿದಂತೆ–ಸರ್ಪಗಳಂತೆ

ಶತ್ರುಭಯಂಕರರಾದ, ಧನುರ್ವಿದ್ಯೆಯಲ್ಲಿ ನಿಷ್ಣಾತರಾದ ನಿನ್ನ ಅನುಜರೊಡನೆ ವಿಜಯಯಾತ್ರೆ ಹೊರಟು ಹಸ್ತಿನಾಪುರವನ್ನು ಆಕ್ರಮಿಸು. ಇಂದ್ರನು ಅಸುರರನ್ನು ತನ್ನ ವಜ್ರಾಯುಧದಿಂದ ಮರ್ದನಮಾಡಿದಂತೆ– ನೀನೂ ದುರ್ಬಲರಾದ ನಿನ್ನ ಶತ್ರುಗಳನ್ನು ಧ್ವಂಸಮಾಡಿ, ಧೃತರಾಷ್ಟ್ರನ ಮಗನಿಂದ ನಾವು ಕಳೆದುಕೊಂಡಿರುವ ರಾಜ್ಯವನ್ನು ಹೊಂದು. ನಮಗಿರುವ ಪರಾಕ್ರಮದ ವಿಷಯದಲ್ಲಿ ನೀನು ಸ್ವಲ್ಪವಾದರೂ ಸಂಶಯಪಡಬೇಕಾದ ಕಾರಣವಿಲ್ಲ. ಗೃಧ್ರಪಕ್ಷಿಗಳ ರೆಕ್ಕೆಗಳಿಂದ ಕೂಡಿದ, ಹಾವುಗಳಿಗೆ ಸಮನಾದ, ಗಾಂಡೀವಧನುಸ್ಸಿನಿಂದ ನಿರ್ಮುಕ್ತವಾದ ಅರ್ಜುನನ ಬಾಣಗಳಿಗೆ ಎದುರಾಗಿ ನಿಂತು ಯುದ್ಧಮಾಡುವ ಮಾನವನು ಈ ಪೃಥ್ವಿಯಲ್ಲಿಯೇ ಇಲ್ಲ. ಯಾವನೂ ಆ ತೀಕ್ಷ್ಣಬಾಣಗಳ ಆಘಾತವನ್ನು ಸಹಿಸಲಾರನು. ಪ್ರಪಂಚದ ಯಾವ ಯೋಧನಾಗಲೀ, ಆನೆಯಾಗಲೀ, ಕುದುರೆಯಾಗಲೀ–ಯುದ್ಧದಲ್ಲಿ ಕೋಪಾವೇಶದಿಂದ ಪ್ರಯೋಗಿಸುವ ನನ್ನ ಗದೆಯ ಪ್ರಹಾರವನ್ನು ತಡೆದು ಕೊಳ್ಳುವ ಸಾಧ್ಯತೆಯಿಲ್ಲ. ನಮ್ಮ ಮಿತ್ರರಾದ ಸೃಂಜಯರು, ಕೈಕೇಯರು ಮತ್ತು ವೃಷ್ಣಿಕುಲಾವತಂಸನಾದ ಶ್ರೀಕೃಷ್ಣ–ಇವರಿಂದೊಡಗೂಡಿ, ನಾವು ಮೋಸದಿಂದ ಕಳೆದುಕೊಂಡಿರುವ ರಾಜ್ಯವನ್ನು ಯುದ್ಧದಲ್ಲೇಕೆ ಗಳಿಸ ಬಾರದು? ನಾವು ಪ್ರಯತ್ನಿಸಿದರೆ ಅಪಾರವಾದ ಸೈನ್ಯದೊಡನೆ ಹಸ್ತಿನೆಯನ್ನು ಆಕ್ರಮಿಸಿ ಶತ್ರುವಿನ ವಶವಾಗಿರುವ ರಾಜ್ಯವನ್ನು ಗೆದ್ದುಕೊಳ್ಳಲಾರೆವೇ?

ಯುಧಿಷ್ಠಿರ! ಜಯದ ವಿಷಯದಲ್ಲಿ ನೀನು ಸ್ವಲ್ಪವೂ ಸಂಶಯ ಪಡಬೇಡ. ಕಾರ್ಯೋನ್ಮುಖನಾಗು.”

ಃಃನೆಯ ಅಧ್ಯಾಯವು ಮುಗಿಯಿತು.

ಃಳನೆಯ ಅಧ್ಯಾಯ ಅರ್ಜುನಾಭಿಗಮನಪರ್ವ (ಮುಂದುವರಿದಿದೆ.)

## ಪ್ರತಿಜ್ಞಾಪಾಲನೆಯೇ ಶ್ರೇಷ್ಠಧರ್ಮವೆಂದು ಯುಧಿಷ್ಠಿರನ ಉದ್ಘೋಷಣೆ

ಜನಮೇಜಯ! ಧರ್ಮಾತ್ಮನಾದ, ಸತ್ಯಸಂಧನಾದ ಯುಧಿಷ್ಠಿರನು

ಭೀಮಸೇನನ ಮಾತುಗಳನ್ನು ಕೇಳಿದನಂತರ ದುರ್ಬಲಹೃದಯನಾಗದೇ ಧೈರ್ಯತಳೆದು ಭೀಮಸೇನನೊಡನೆ ಹೇಳಿದನು :

“ನೀನು ಹೇಳಿದುದೆಲ್ಲವೂ ನಿಜ, ಭೀಮಸೇನ! ಶಸ್ತ್ರರೂಪವಾದ ನಿನ್ನ ಮಾತುಗಳಿಂದ ನನ್ನ ಹೃದಯವನ್ನು ಘಾಸಿಮಾಡುತ್ತಿರುವುದಕ್ಕಾಗಿ ನಾನು ನಿನ್ನನ್ನು ಪ್ರತಿಯಾಗಿ ನಿಂದಿಸುವುದಿಲ್ಲ. ನನ್ನ ಅಪರಾಧದ ಸಲುವಾಗಿಯೇ ಇಂದು ನೀವೆಲ್ಲರೂ ಈ ದಾರುಣಾವಸ್ಥೆಗೆ ಈಡಾಗಿರುವಿರೆಂಬುದರಲ್ಲಿ ಸಂಶಯವಿಲ್ಲ.

ಧೃತರಾಷ್ಟ್ರನ ಮಗನಾದ ಸುಯೋಧನನಿಂದ ಸಾಮ್ರಾಜ್ಯವನ್ನು ಪಡೆದುಕೊಳ್ಳುವ ಸಲುವಾಗಿಯೇ ನಾನು ಪಗಡೆಯಾಟವನ್ನು ಆಡಲು ಒಪ್ಪಿದೆನು. ಆದರೆ ಶಠನಾದ, ಜೂಜುಕೋರನಾದ, ಮೋಸಗಾರನಾದ ಶಕುನಿಯು ದುರ್ಯೋಧನನನ್ನು ಪ್ರತಿನಿಧಿಸಿ ಆಟಕ್ಕೆ ಕುಳಿತನು. ಮಹಾ ಮಾಯಾವಿಯಾದ ಶಕುನಿಯು ಮೋಸದ ಪಗಡೆಯಾಟದಲ್ಲಿ ಮಹಾ ನಿಪುಣನು. ಸಭಾಮಧ್ಯದಲ್ಲಿ ಕುಳಿತು ಮೋಸದ ಆಟವೇನೆಂಬುದನ್ನೇ ತಿಳಿಯದ ನನ್ನೊಡನೆ ಮೋಸದ ಆಟವಾಡಿ ನನ್ನನ್ನು ಗೆದ್ದನು. ಪಗಡೆಯಾಟದ ದಾಳಗಳೇ ಪಾಪರೂಪವಾಗಿ ನಮ್ಮನ್ನಿಂದು ಈ ಕಷ್ಟಕ್ಕೆ ಗುರಿಮಾಡಿದುವು.

ಭೀಮಸೇನ! ಶಕುನಿಯು ಮೋಸದ ಆಟವಾಡುತ್ತಿರುವನೆಂಬುದು ನನಗೆ ತಿಳಿಯದೇ ಇರಲಿಲ್ಲ. ಅವನು ನಾಲ್ಕರ ಗರವನ್ನು ಕೇಳಿದರೆ ನಾಲ್ಕರ ಗರವೇ ಬೀಳುತ್ತಿದ್ದಿತು. ಹತ್ತು ಕೇಳಿದರೆ ಹತ್ತರ ಗರವೇ ಬೀಳುತ್ತಿದ್ದಿತು. ಒಂಬತ್ತು ಕೇಳಿದರೆ ಒಂಬತ್ತರ ಗರವೇ ಬೀಳುತ್ತಿದ್ದಿತು. ಆದರಿಂದಲೇ ಅವನಾಡುತ್ತಿರುವುದು ಮೋಸದ ಆಟವೆಂಬುದನ್ನು ನಾನು ತಿಳಿದುಕೊಂಡೆನು. (ಹತ್ತುಬಾರಿ ಇಂತಹುದೇ ಗರವು ಬೇಕೆಂದು ಕೇಳಿದರೆ ಕಾಕ ತಾಳನ್ಯಾಯದಂತೆ–ಒಂದೆರಡು ಬಾರಿ ಕೇಳಿದ ಗರವು ಬೀಳಬಹುದೇ ಹೊರತು ಕೇಳಿದ ಗರಗಳೆಲ್ಲವೂ ಆಟದಲ್ಲಿ ಬೀಳುವ ಸಾಧ್ಯತೆಯಿಲ್ಲ.) ಆಗಲೇ ನಾನು ನನ್ನ ಮನಸ್ಸನ್ನು ತಡೆಹಿಡಿದು ನಿಲ್ಲಿಸಬಹುದಾಗಿತ್ತು. ಆದರೆ ಭೀಮಸೇನ! ‘ಮನ್ಯುಸ್ತು ಹನ್ಯಾತ್ಪುರುಷಸ್ಯ ಧೈರ್ಯಂ’–ಕೋಪವು ಪುರುಷನ ಧೈರ್ಯವನ್ನು ಅರ್ಥಾತ್ ತಾಳ್ಮೆಯನ್ನು ಹಾಳುಮಾಡುತ್ತದೆ.

ಆಟವನ್ನು ಮಧ್ಯದಲ್ಲಿ ನಿಲ್ಲಿಸಿಬಿಡಲು ಧೈರ್ಯವೇ ಬರಲಿಲ್ಲ.

**ಯನ್ತುಂ ನಾತ್ಮಾ ಶಕ್ಯತೇ ಪೌರುಷೇಣ**
**ಮಾನೇನ ವೀರ್ಯೇಣ ಚ ತಾತ ನದ್ಧಃ ।**
**ನ ತೇ ವಾಚೋ ಭೀಮಸೇನಾಭ್ಯಸೂಯೇ**
**ಮನ್ಯೇ ತಥಾ ತದ್ಭವಿತವ್ಯಮಾಸೀತ್ ॥೬॥**

ಪೌರುಷ, ಅಭಿಮಾನ, ವೀರ್ಯ–ಇವುಗಳಿಂದ ಬದ್ಧನಾದವನ ಬುದ್ಧಿಯು ಹತೋಟಿಯಲ್ಲಿರಲಾರದು. ನಾನು ನೀನು ಹೇಳಿದುದಕ್ಕಾಗಿ ನಿನ್ನಲ್ಲಿ ದೋಷವೆಣಿಸುವುದಿಲ್ಲ. ಆದರೆ ನೀನು ನಿಶ್ಚಯಿಸಿರುವಂತೆ ಇಂದಿನ ನಮ್ಮ ದುರ್ಗತಿಗೆ ನಾನೇ ಕಾರಣನಲ್ಲ. ಇದು ಕೇವಲ ದೈವನಿಯಮ. ಇದು ನನ್ನ ಅಥವಾ ನಿನ್ನ ಹತೋಟಿಗೆ ಸಿಕ್ಕತಕ್ಕ ವಿಷಯವಲ್ಲ. ನಮ್ಮ ರಾಜ್ಯ- ಕೋಶಗಳನ್ನು ಕಸಿದುಕೊಳ್ಳುವ ದುರಾಶೆಯಿಂದ ದುರ್ಯೋಧನನು ನಮ್ಮನ್ನು ದ್ಯೂತಕ್ಕೆ ಆಹ್ವಾನಿಸಿ ದ್ಯೂತದಲ್ಲಿ ಶಕುನಿಯ ಸಹಾಯದಿಂದ ನಮ್ಮನ್ನು ಸೋಲಿಸಿದನು. ನಿಯಮದಂತೆ ನಾವೆಲ್ಲರೂ ಅವನ ಸೇವಕರಾದೆವು. ಆ ಸಮಯದಲ್ಲಿ ಸೇವಾವೃತ್ತಿಯಿಂದ ನಮ್ಮನ್ನು ದ್ರೌಪದಿಯೇ ಪಾರುಮಾಡಿದಳು.

ಆದರೆ ಇದು ದುರ್ಯೋಧನನಿಗೆ ಸಹ್ಯವಾಗಲಿಲ್ಲ. ನಾವು ನಮ್ಮ ರಾಜಧಾನಿಯನ್ನು ಸೇರುವುದರೊಳಗಾಗಿಯೇ ಪುನಃ ನಮ್ಮನ್ನು ದ್ಯೂತಕ್ಕೆ ಕರೆಯಿಸಿದನು. ಆ ಭವ್ಯಸಭಾಮಂದಿರದಲ್ಲಿ ದ್ಯೂತವಾಡುವ ಮೊದಲು ದುರ್ಯೋಧನನು ಏನು ಹೇಳಿದನೆಂಬುದನ್ನು ನೀನೂ ಕೇಳಿರುವೆ. ಅರ್ಜುನನೂ ಕೇಳಿರುವನು. ಇದು ನಮ್ಮೆಲ್ಲರಿಗೂ ತಿಳಿದ ವಿಷಯವೇ ಆಗಿದೆ. ಆದರೂ ಅವನು ಏನು ಹೇಳಿದನೆಂಬುದನ್ನು ಪುನಃ ನಿನ್ನ ಗಮನಕ್ಕೆ ತರಲು ಇಚ್ಛಿಸುತ್ತೇನೆ. ದುರ್ಯೋಧನನು ನನ್ನನ್ನು ಸಂಬೋಧಿಸಿ ಹೀಗೆಂದು ಹೇಳಿದನು:

**ವನೇ ಸಮಾ ದ್ವಾದಶ ರಾಜಪುತ್ರ**
**ಯಥಾಕಾಮಂ ವಿದಿತಮಜಾತಶತ್ರೋ ।**

ಅಥಾಪರಂ ಚಾವಿದಿತಂ ಚರೇಥಾಃ
ಸರ್ವೈಃ ಸಹ ಭ್ರಾತೃಭಿಶ್ಛದ್ಮಗೂಢಃ ॥೯॥

ತ್ವಾಂ ಚೇಚ್ಛ್ರುತ್ವಾ ತಾತ ತಥಾ ಚರನ್ತ-
ಮವಭೋತ್ಸ್ಯನ್ತೇ ಭರತಾನಾಂ ಚರಾಶ್ಚ ।
ಅನ್ಯಾಂಶ್ಚರೇಥಾಸ್ತಾವತೋಽಬ್ದಾಂಸ್ತಥಾ ತ್ವಂ
ನಿಶ್ಚಿತ್ಯ ತತ್ಪ್ರತಿಜಾನೀಹಿ ಪಾರ್ಥ ॥೧೦॥

ಚರೇಶ್ಚೇನ್ನೋಽವಿದಿತಃ ಕಾಲಮೇತಂ
ಯುಕ್ತೋ ರಾಜನ್ಮೋಹಯಿತ್ವಾ ಮದೀಯಾನ್ ।
ಬ್ರವೀಮಿ ಸತ್ಯಂ ಕುರುಸಂಸದೀಹ
ತವೈವ ತಾ ಭಾರತ ಪಞ್ಚ ನದ್ಯಃ ॥೧೧॥

ವಯಂ ಚೈತದ್ಭಾರತ ಸರ್ವ ಏವ
ತ್ವಯಾ ಜಿತಾಃ ಕಾಲಮಪಾಸ್ಯ ಭೋಗಾನ್ ।
ವಸೇಮ ಇತ್ಯಾಹ ಪುರಾ ಸ ರಾಜಾ
ಮಧ್ಯೇ ಕುರೂಣಾಂ ಸ ಮಯೋಕ್ತಸ್ತಥೇತಿ ॥೧೨॥

'ಅಜಾತಶತ್ರುವೇ! ಮುಂದೆ ನಾವು ಆಡಲಿರುವ ಜೂಜಾಟದಲ್ಲಿ ನೀನು ನಮ್ಮಿಂದ ಸೋಲಿಸಲ್ಪಟ್ಟರೆ ನಿನ್ನ ಅನುಜರಿಂದ ಕೂಡಿದವನಾಗಿ ಹನ್ನೆರಡು ವರ್ಷಗಳಕಾಲ ಅರಣ್ಯದಲ್ಲಿ ಇಷ್ಟಬಂದಂತೆ ವಾಸಮಾಡಬಹುದು ಮತ್ತು ನಿನ್ನ ನಿವಾಸಸ್ಥಾನವು ಸಕಲರಿಗೂ ತಿಳಿದಿರಬಹುದು. ಹದಿಮೂರನೆಯ ವರ್ಷ ಅಜ್ಞಾತವಾಸದಲ್ಲಿರುವಾಗ ನಮ್ಮ ಗೂಢಚಾರರೇನಾದರೂ ನೀನು ವಾಸವಾಗಿರುವ ಸ್ಥಳವನ್ನು ಕಂಡುಹಿಡಿಯಲು ಸಮರ್ಥರಾದರೆ ಅಥವಾ ನೀನು ಅವರಿಂದ ಕಂಡುಹಿಡಿಯಲ್ಪಟ್ಟರೆ–ಪುನಃ ನೀನು ನಿನ್ನ ಅನುಜರೊಡನೆ ಹನ್ನೆರಡು ವರ್ಷಗಳ ಕಾಲ ವನವಾಸವನ್ನೂ, ಒಂದು ವರ್ಷ ಅಜ್ಞಾತವಾಸವನ್ನೂ ಮಾಡಬೇಕಾಗುವುದು.

ನಮ್ಮ ಕಡೆಯವರನ್ನು ಮೋಹಪರವಶರನ್ನಾಗಿ ಮಾಡಿ ನೀನು ನಿನ್ನ ಅನುಜರಿಂದೊಡಗೂಡಿ ಆ ಒಂದು ವರ್ಷದ ಅಜ್ಞಾತವಾಸವನ್ನೂ ಕಳೆದೆ

ಯಾದರೆ–ಈ ಕುರುಸಭೆಯಲ್ಲಿ ಸತ್ಯವಾಗಿ ಹೇಳುತ್ತೇನೆ ; ಐದು ನದಿಗಳಿಂದ ಕೂಡಿರುವ ಇಂದ್ರಪ್ರಸ್ಥರಾಜ್ಯವು ಪುನಃ ನಿನ್ನದೇ ಆಗುತ್ತದೆ.

ಈ ಪಣವನ್ನು ಪರಿಶೀಲಿಸಿ ಆಟವನ್ನು ಆರಂಭಿಸು. ನಮ್ಮ ವಿಷಯ ವಾಗಿ ಹೇಳುವುದಾದರೆ ನಾನೇನಾದರೂ ಸೋತುಹೋದಲ್ಲಿ ನನ್ನ ತೊಂಬ ತ್ತೊಂಬತ್ತು ಮಂದಿ ಅನುಜರೊಡನೆ ಹನ್ನೆರಡು ವರ್ಷಗಳ ಕಾಲ ವನವಾಸ ವನ್ನೂ–ಒಂದು ವರ್ಷಕಾಲ ಅಜ್ಞಾತವಾಸವನ್ನೂ ಮಾಡಲು ಪ್ರತಿಜ್ಞಾಬದ್ಧ ನಾಗಿರುವೆನು.'

ದುರ್ಯೋಧನನ ಆ ಮಾತುಗಳಿಗೆ ಕುರುಪ್ರಮುಖರ ಸಮ್ಮುಖದಲ್ಲಿ ನಾನು **'ತಥಾಸ್ತು'** ಎಂದೆನು.

ಆಟವು ಆರಂಭವಾಯಿತು. ನಾನೇ ಸೋತುಹೋದೆನು. ಅದರಿಂದಾಗಿ ನಾವು ರಾಜ್ಯಭ್ರಷ್ಟರಾಗಿ ಅರಣ್ಯವಾಸವನ್ನು ಅನುಭವಿಸಬೇಕಾಯಿತು. ಈ ಕಾರಣದಿಂದಲೇ ನಾವಿಂದು ನಾನಾವಿಧವಾದ ಕಷ್ಟಗಳನ್ನು ಅನುಭವಿಸುತ್ತಾ ಕಾಡು-ಮೇಡುಗಳಲ್ಲಿ ಅಲೆಯುತ್ತಿದ್ದೇವೆ. ಆದರೆ ಇಷ್ಟರಿಂದಲೇ ಸುಯೋಧನನಿಗೆ ತೃಪ್ತಿಯಾಯಿತೆಂದಾಗಲೀ, ಅವನು ಶಾಂತನಾದ ನೆಂದಾಗಲೀ ಭಾವಿಸಬೇಡ. ನಾವು ಕಾಡಿನಲ್ಲಿ ಅಲೆಯುತ್ತಿರುವುದರಿಂದ ಅವನು ಶಾಂತನಾಗಿ ಕುಳಿತಿರುವುದಿಲ್ಲ. ನಮ್ಮ ಮೇಲಿನ ಆಗ್ರಹವು ಅವನಲ್ಲಿ ಮೂರ್ತಿಮತ್ತಾಗಿ ನೆಲೆಸಿದೆ. ನಮಗೆ ಮತ್ತಷ್ಟು ತೊಂದರೆಕೊಡುವ ಸಲುವಾಗಿ ಕುರುವಂಶದವರಲ್ಲಿ ಅವನ ವಶಾನುವರ್ತಿಗಳಾದವರನ್ನು ನಿಯೋಜಿಸುತ್ತಲೇ ಇರುತ್ತಾನೆ. (ಆದುದರಿಂದ ದುರ್ಯೋಧನನನ್ನು ಎಲ್ಲರೂ ದ್ವೇಷಿಸುತ್ತಾರೆಂದು ಭಾವಿಸಬೇಡ. ಅವನನ್ನು ಅನುಸರಿಸಿರುವವರೂ ಕುರುವಂಶದಲ್ಲಿದ್ದಾರೆ.) ಹೀಗಿರುವಾಗ ಅಂದು ನಾನು ನೆರೆದ ಸತ್ಪುರುಷರ ಸಭೆಯಲ್ಲಿ ಹನ್ನೆರಡು ವರ್ಷಗಳ ವನವಾಸದ ಮತ್ತು ಒಂದು ವರ್ಷದ ಅಜ್ಞಾತವಾಸದ ಪಣಕ್ಕೆ ಒಪ್ಪಿ, ಇಂದು ಚಕ್ರಾಧಿಪತ್ಯದ ಆಶೆಯಿಂದ ಪ್ರತಿಜ್ಞೆಯನ್ನು ಉಲ್ಲಂಘಿಸಲೇ? ನನಗಂತೂ ಇದು ಸಾಧ್ಯವೇ ಇಲ್ಲ.

**ತಂ ಸಂಧಿಮಾಸ್ಥಾಯ ಸತಾಂ ಸಕಾಶೇ**
**ಕೋ ನಾಮ ಜಹ್ಯಾದಿಹ ರಾಜ್ಯಹೇತೋಃ ।**

**ಆರ್ಯಸ್ಯ ಮನ್ಯೇ ಮರಣಾದ್ಗರೀಯೋ**
**ಯದ್ಧರ್ಮಮುತ್ಕ್ರಮ್ಯ ಮಹೀಂ ಪ್ರಶಾಸೇತ್ ॥**

ಸತ್ಪುರುಷರ ಸಮಕ್ಷದಲ್ಲಿ ಆ ವಿಧವಾಗಿ ಸಂಧಾನಮಾಡಿಕೊಂಡು ಕೇವಲ ರಾಜ್ಯಪ್ರಾಪ್ತಿಗಾಗಿ ಯಾವನು ತಾನೇ ಪ್ರತಿಜ್ಞೆಯ ಉಲ್ಲಂಘನೆಯನ್ನು ಮಾಡಿಯಾನು?

ಪ್ರಪಂಚದಲ್ಲಿ ಯಾರೇ ಆದರೂ ಈ ರೀತಿಯಲ್ಲಿ ಪ್ರತಿಜ್ಞೆಯನ್ನು ಉಲ್ಲಂಘಿಸುವ ಧೈರ್ಯವನ್ನು ಮಾಡಲಾರರೆಂದು ನಾನು ಭಾವಿಸುತ್ತೇನೆ. ಆರ್ಯನಿಗೆ ಅಥವಾ ಸತ್ಪುರುಷನಿಗೆ–ಧರ್ಮವನ್ನು ಅತಿಕ್ರಮಿಸಿ ಸಾಮ್ರಾಜ್ಯ ವನ್ನು ಪಡೆಯುವುದು–ಮರಣಕ್ಕಿಂತಲೂ ಹೆಚ್ಚು ದುಃಖಕರವೆಂಬುದು ನನ್ನ ಅಭಿಮತವಾಗಿದೆ.

ಭೀಮಸೇನ! ಸಭಾಮಂದಿರದಲ್ಲಿ ನೀನು ನನ್ನ ಕೈಗಳನ್ನು ಸುಡಲು ನಿಶ್ಚಯಿಸಿದೆ. ಪರಿಘೋಪಮವಾದ ನಿನ್ನ ಬಾಹುಗಳನ್ನು ಮುಟ್ಟಿಕೊಂಡೆ (ತಟ್ಟಿಕೊಂಡೆ). ಅರ್ಜುನನು ತಡೆದುದರಿಂದ ನನ್ನ ಕೈಗಳನ್ನು ಸುಡಲಿಲ್ಲ. ಆಗ ನೀನು ನಿಶ್ಚಯಿಸಿದ್ದಂತೆ ನನ್ನ ಕೈಗಳನ್ನೇ ಸುಟ್ಟುಬಿಟ್ಟಿದ್ದರೆ ಕೆಟ್ಟುದೇನಾಗುತ್ತಿದ್ದಿತು? ಹಾಗೆ ಮಾಡಲಿಲ್ಲ. ಪುನಃ ನಾನು ಪಗಡೆಯಾಟಕ್ಕೆ ಆಹ್ವಾನಿತನಾದಾಗ ಆಟಕ್ಕೆ ಮೊದಲು ಬಲದಲ್ಲಿ ಭರವಸೆಯುಳ್ಳ ನೀನು ನನ್ನ ಅಂಗೀಕಾರವನ್ನಾದರೂ ತಡೆಯಬಹುದಾಗಿದ್ದಿತು. ಅಥವಾ ಆಟವನ್ನೇ ನಿಲ್ಲಿಸಬಹುದಾಗಿದ್ದಿತು. ಅದರ ಪ್ರತಿಕ್ರಿಯೆಯು ಯುದ್ಧದಲ್ಲಿ ಪರ್ಯವ ಸಾನಹೊಂದುವುದಾಗಿದ್ದರೆ ನಿನ್ನ ಭುಜಬಲ-ಪರಾಕ್ರಮಗಳಿಗೂ ಒಂದು ಪ್ರಯೋಜನವಾಗುತ್ತಿದ್ದಿತು. ಆಗಲೂ ನೀನು ಮೌನಧರಿಸಿಯೇ ಕುಳಿತಿದ್ದೆ. ನಾವು ಸೋತೆವು. ನಾನು ಮಾಡಿದ ಪ್ರತಿಜ್ಞೆಯಂತೆ ಅರಣ್ಯಕ್ಕೆ ಬಂದಿರುತ್ತೇವೆ. ಅನೇಕದಿನಗಳನ್ನು ಅರಣ್ಯದಲ್ಲಿಯೂ ಕಳೆದಿರುತ್ತೇವೆ. ಈಗ ನೀನು, ಕಾಲಮೀರಿದ ಮೇಲೆ, ನಾನು ಮಾಡಿದುದು ತಪ್ಪೆಂದೂ ಸ್ವಧರ್ಮ ವಿಹಿತವಾದ ಕರ್ಮವನ್ನು ಮಾಡಲಿಲ್ಲವೆಂದೂ–ನನ್ನನ್ನು ಕಠಿನೋಕ್ತಿಗಳಿಂದ ಟೀಕಿಸುತ್ತಿರುವೆ.

ಭೀಮಸೇನ! ನಮ್ಮ ಸಮಕ್ಷದಲ್ಲಿಯೇ ದ್ರೌಪದಿಯ ಮಾನಭಂಗ

ಮಾಡಲು ದುಷ್ಟರು ಯತ್ನಿಸಿದಾಗಲೂ ನಾವು ಏನು ಮಾಡಲೂ ಸಾಧ್ಯವಾಗದೇ ಕುಳಿತಿದ್ದೆವು. ಆದರಿಂದ ನಿಶ್ಚಯವಾಗಿಯೂ ನಾನು ಬಹಳ ದುಃಖಿತನಾಗಿದ್ದೇನೆ. ಆ ದೃಶ್ಯವನ್ನು ಸ್ಮರಿಸಿದೊಡನೆಯೇ–ವಿಷವನ್ನು ಕುಡಿದ ಮನುಷ್ಯನ ಹೃದಯವು ಬೆಂದುಹೋಗುವಂತೆ–ನನ್ನ ಹೃದಯವೂ ಸುಡಲು ಪ್ರಾರಂಭವಾಗುತ್ತದೆ.

**ನ ತ್ವದ್ಯ ಶಕ್ಯಂ ಭರತಪ್ರವೀರ**
**ಕೃತ್ವಾ ಯದುಕ್ತಂ ಕುರುವೀರಮಧ್ಯೇ ।**
**ಕಾಲಂ ಪ್ರತೀಕ್ಷಸ್ವ ಸುಖೋದಯಸ್ಯ**
**ಪಕ್ತಿಂ ಫಲಾನಾಮಿವ ಬೀಜವಾಪಃ ॥೧೯॥**

ಭರತಪ್ರವೀರನೇ! ಕುರುಪ್ರಮುಖರ ಮಧ್ಯದಲ್ಲಿ ನಾನು ಮಾಡಿದ ಪ್ರತಿಜ್ಞೆಯನ್ನು ರಾಜ್ಯಲೋಭದಿಂದ ಭಂಗಪಡಿಸಲು ನನಗೆ ಖಂಡಿತವಾಗಿಯೂ ಸಾಧ್ಯವಿಲ್ಲ. ನಮ್ಮ ಇಂದಿನ ಕಷ್ಟವೇ ಎಂದೆಂದಿಗೂ ಇರುವುದೆಂದು ಭ್ರಾಂತನಾಗಬೇಡ. ಒಳ್ಳೆಯ ದಿನಗಳು ನಮಗೂ ಕಾದಿವೆ. ರೈತನು ಬೀಜವನ್ನು ಬಿತ್ತಿ ಬೆಳೆಯು ಪಕ್ವವಾಗುವವರೆಗೂ (ಕುಯಿಲಿಗೆ ಬರುವವರೆಗೂ) ಕಾಯುವಂತೆ–ನೀನು ನಮ್ಮ ಸುಖೋದಯದ ದಿನಗಳಿಗಾಗಿ ಕಾಯಬೇಕಾಗಿದೆ.

**ಯದಾ ಹಿ ಪೂರ್ವಂ ನಿಕೃತೋ ನಿಕೃತ್ಯಾ**
**ವೈರಂ ಸಪುಷ್ಪಂ ಸಫಲಂ ವಿದಿತ್ವಾ ।**
**ಮಹಾಗುಣಂ ಹರತಿ ಹಿ ಪೌರುಷೇಣ**
**ತದಾ ವೀರೋ ಜೀವತಿ ಜೀವಲೋಕೇ ॥೨೦॥**

ಹಿಂದೆ ಶತ್ರುವಿನ ವಂಚನೆಯಿಂದ ವಂಚಿತನಾದ ವೀರನು, ವೈರಿಯು ಪುಷ್ಪ-ಫಲಗಳಿಂದ (ಸಾಧನಸಂಪತ್ತುಗಳಿಂದ) ಕೂಡಿರುವನೆಂಬುದನ್ನು ತಿಳಿದು ಸಮಯವರಿತು ಶತ್ರುವಿನ ಮಹಾಗುಣವನ್ನು ( ವೀರ್ಯಸಂಪತ್ತನ್ನು ) ಪೌರುಷದಿಂದ ಯಾವಾಗ ಅಪಹರಿಸುವನೋ ಆಗ ಆ ವೀರನು ಈ ಪ್ರಪಂಚದಲ್ಲಿ ಕೀರ್ತಿವಂತನಾಗಿ ಬಾಳುತ್ತಾನೆ.

ಶ್ರಿಯಂ ಚ ಲೋಕೇ ಲಭತೇ ಸಮಗ್ರಾಂ
ಮನ್ಯೇ ಚಾಸ್ಮೈ ಶತ್ರವಃ ಸಂನಮನ್ತೇ ।
ಮಿತ್ರಾಣಿ ಚೈನಮಚಿರಾದ್ಭಜನ್ತೇ
ದೇವಾ ಇವೇನ್ದ್ರಮುಪಜೀವನ್ತಿ ಚೈನಮ್ ॥೨೧॥

ಅಂತಹ ವೀರಾಗ್ರಣಿಯು ಪರಿಪೂರ್ಣವಾದ ಸಂಪತ್ತನ್ನೂ ಪಡೆದುಕೊಳ್ಳುತ್ತಾನೆ. ಶತ್ರುಗಳೂ ಅಂತಹವನಿಗೆ ಶರಣಾಗತರಾಗುವರೆಂದು ನಾನು ಭಾವಿಸುತ್ತೇನೆ.

ದೇವತೆಗಳು ಇಂದ್ರನನ್ನು ರಕ್ಷಣೆಗಾಗಿ ಆಶ್ರಯಿಸುವಂತೆ–ಸತ್ಪುರುಷರೂ ಮತ್ತು ಬಂಧು-ಮಿತ್ರರೂ ಅಂತಹ ವೀರಪುರುಷನನ್ನು ರಕ್ಷಣೆಗಾಗಿ–ಆಶ್ರಯಿಸುತ್ತಾರೆ. ಆದುದರಿಂದ ನಾವು ಕಾಲನಿರೀಕ್ಷಣೆಯನ್ನು ಮಾಡಲೇ ಬೇಕಾಗಿದೆ. ಆದುದರಿಂದ ಭೀಮಸೇನ!

ಮಮ ಪ್ರತಿಜ್ಞಾಂ ಚ ನಿಬೋಧ ಸತ್ಯಾಂ
ವೃಣೇ ಧರ್ಮಮಮೃತಾಜ್ಜೀವಿತಾಚ್ಚ ।
ರಾಜ್ಯಂ ಚ ಪುತ್ರಾಶ್ಚ ಯಶೋ ಧನಂ ಚ
ಸರ್ವಂ ನ ಸತ್ಯಸ್ಯ ಕಲಾಮುಪೈತಿ ॥೨೨॥

ನಾನು ಪುನಃ ಮಾಡಲಿರುವ ಸತ್ಯವಾದ ಪ್ರತಿಜ್ಞೆಯನ್ನು ಕೇಳು :

ಅಮರತ್ವಕ್ಕಿಂತಲೂ ಮತ್ತು ಪ್ರಾಣಗಳಿಗಿಂತಲೂ ಧರ್ಮವೇ ಮಿಗಿಲಾದುದೆಂದು ನಾನು ನಿಶ್ಚಯಿಸಿರುತ್ತೇನೆ. ಸಾಮ್ರಾಜ್ಯ, ಮಕ್ಕಳು, ಕೀರ್ತಿ, ಐಶ್ವರ್ಯ–ಇವುಗಳಾವುವೂ ಸತ್ಯನಿಷ್ಠೆಯಿಂದ ಪ್ರಾಪ್ತವಾಗಬಹುದಾದ ಫಲದ ಹದಿನಾರನೆಯ ಒಂದು ಭಾಗದಷ್ಟು ಫಲವನ್ನೂ ಕೊಡಲಾರವು. ಆದುದರಿಂದ ನಾನು ಖಂಡಿತವಾಗಿಯೂ ಮಾಡಿದ ಪ್ರತಿಜ್ಞೆಗೆ ಯಾವ ಕಾರಣದಿಂದಲೂ ಭಂಗತರಲಾರೆನು, ಭೀಮಸೇನ!”

ಇಳನೆಯ ಅಧ್ಯಾಯವು ಮುಗಿಯಿತು.

## ಅಣ್ಣನ ಮಾತಿನಿಂದ ದುಃಖಿತನಾದ ಭೀಮಸೇನನು ಯುದ್ಧಮಾಡುವಂತೆ ಯುಧಿಷ್ಠಿರನನ್ನು ಪುನಃ ಪ್ರೋತ್ಸಾಹಿಸಿದುದು

ಭೀಮಸೇನನು ಹೇಳುತ್ತಾನೆ :

ಸಂಧಿಂ ಕೃತ್ವೇವ ಕಾಲೇನ ಹ್ಯನ್ತಕೇನ ಪತತ್ರಿಣಾ ।
ಅನನ್ತೇನಾಪ್ರಮೇಯೇಣ ಸ್ರೋತಸಾ ಸರ್ವಹಾರಿಣಾ ॥೧॥

ಪ್ರತ್ಯಕ್ಷಂ ಮನ್ಯಸೇ ಕಾಲಂ ಮರ್ತ್ಯಃ ಸನ್ಕಾಲಬನ್ಧನಃ ।
ಫೇನಧರ್ಮಾ ಮಹಾರಾಜ ಫಲಧರ್ಮಾ ತಥೈವ ಚ ॥೨॥

“ಧರ್ಮಜ! ನಾವು ಮಾನವರೆಂಬುದನ್ನು ಮರೆಯಬೇಡ. ನೊರೆಯಂತೆ ನಮ್ಮ ಜೀವನವು ಸ್ವಲ್ಪಕಾಲ ಮಾತ್ರವೇ ಇರುವುದು. ಮಾಗಿದ ಹಣ್ಣು ಮರದಿಂದ ಕಳಚಿ ಬೀಳುವಂತೆ–ನಮ್ಮೀ ಪಾರ್ಥಿವಶರೀರವೂ ಕುಸಿದುಬೀಳುವುದು. ಆದರೆ ನಮ್ಮ ಅವಸಾನಕಾಲವು ಯಾವಾಗ ಸಂಭವಿಸುವುದೆಂಬ ತಿಳಿವಳಿಕೆಯು ನಮಗಿರುವುದಿಲ್ಲ. ಕಾಲನಿರ್ಣಯಮಾಡಲು ನಾವು ಸಮರ್ಥರಲ್ಲ. ಏಕೆಂದರೆ : ಕಾಲವು ಅನಂತವಾದುದು ; ಅಪ್ರಮೇಯವಾದುದು. ಹಕ್ಕಿಯಂತೆ ಅಥವಾ ನದಿಯಂತೆ ಅಖಂಡಬ್ರಹ್ಮಾಂಡವನ್ನೂ ಸಾಗಿಸಿಕೊಂಡು ಕಾಲವು ಬಹುವೇಗವಾಗಿ ಮುನ್ನಡೆಯುತ್ತಿದೆ. ಈ ಕಾಲವನ್ನು ಅಂತಕನೆಂದೂ (ಯಮನೆಂದೂ) ಹೇಳುವರು. ನೀನು ಮರ್ತ್ಯನಾಗಿದ್ದು ಅಂತಹ ಕಾಲಬಂಧನಕ್ಕೆ ಸಿಕ್ಕಿಕೊಂಡಿದ್ದರೂ ಆ ಕಾಲವು ಪ್ರತ್ಯಕ್ಷವಾಗಿಬಿಟ್ಟಿರುವುದೆಂದು ಭಾವಿಸಿ ಹದಿಮೂರು ವರ್ಷಗಳ ಅವಧಿಗೆ ಒಪ್ಪಿ, ಅದರ ನಿರೀಕ್ಷಣೆಮಾಡುತ್ತಾ ನೀನು ಕುಳಿತಿರುವೆ. (ಕಾಲದ ಉಡಿಯಲ್ಲಿ ಸಿಕ್ಕಿಬಿದ್ದಿರುವ ನಾವು ಹದಿಮೂರು ವರ್ಷಗಳ ಪರ್ಯಂತವೂ ಜೀವಂತರಾಗಿ ಉಳಿಯುವೆವೆಂಬ ಭರವಸೆಯಾದರೂ ಎಲ್ಲಿದೆ? )

ನಿಮೇಷಾದಪಿ ಕೌನ್ತೇಯ ಯಸ್ಯಾಯುರಪಚೀಯತೇ ।
ಸೂಚ್ಯೇವಾಞ್ಜನಚೂರ್ಣಸ್ಯ ಕಿಮಿತಿ ಪ್ರತಿಪಾಲಯೇತ್ ॥೩॥

ಧರ್ಮಜ! ಕಣ್ಣಿಗೆ ಹಚ್ಚಿಕೊಳ್ಳುವ ಕಾಡಿಗೆಯನ್ನು ಸ್ತ್ರೀಯರು ಸೂಜಿಯ ತುದಿಯಿಂದ ತೆಗೆದು ಹಚ್ಚಿಕೊಳ್ಳುತ್ತಾರೆ. ಆದರೂ ಕೆಲವು ದಿನಗಳ ನಂತರ ಕಾಡಿಗೆಯು ಮುಗಿದುಹೋಗುವುದಲ್ಲವೇ? ಅದೇ ರೀತಿಯಲ್ಲಿ ಕಾಲವೂ ನಮಗೆ ತಿಳಿದೂ ತಿಳಿಯದಂತೆ ಬಹುವೇಗವಾಗಿ ಗತಿಸುತ್ತದೆ. ಪ್ರತಿಕ್ಷಣದಲ್ಲಿಯೂ ನಮ್ಮ ಆಯುಃಪ್ರಮಾಣವೂ ಕಡಿಮೆಯಾಗುತ್ತಿರುತ್ತದೆ. ಹೀಗಿದ್ದರೂ ನೀನು ಆ ಕಾಲವನ್ನು ನಂಬಿ ಕುಳಿತಿರುವೆಯಲ್ಲವೇ?

ಯಾರಿಗೆ ಚಿರಾಯುಷ್ಯವಿರುವುದೋ ಮತ್ತು ಯಾರು ತಮ್ಮ ಜೀವನದ ಮುಂದಿನ ದಿನಗಳೂ ಇದೇ ರೀತಿಯಲ್ಲಿ ನಡೆಯುವುವೆಂದು ತಿಳಿದಿರುವರೋ, ಯಾರಿಗೆ ಮುಂದಿನ ದಿನಗಳಲ್ಲಿ ನಡೆಯಲಿರುವ ವಿಷಯಗಳ ಅರಿವು ಇಂದೇ ಇರುವುದೋ, ಯಾರು ಕಾಲಜ್ಞರೋ–ಅಂತಹವರು ಮಾತ್ರವೇ ಕಾಲದ ನಿರೀಕ್ಷಣೆಮಾಡುತ್ತಾ ಕುಳಿತುಕೊಳ್ಳಲು ಸಮರ್ಥರಾಗುತ್ತಾರೆ. ಈ ಹದಿಮೂರು ವರ್ಷಗಳಲ್ಲಿ ಏನಾಗಬಹುದೆಂಬುದನ್ನೇ ಅರಿಯದ ನಾವು ನಿಷ್ಕಾರಣವಾಗಿ ಈ ಹದಿಮೂರು ವರ್ಷಗಳನ್ನೂ ಕಾಡಿನಲ್ಲೇ ಕಳೆದೆವಾದರೆ–ಯಾವ ವಿಧವಾದ ಪ್ರಯೋಜನವೂ ಇಲ್ಲದೆಯೇ ನಮ್ಮ ಆಯುಷ್ಯವೂ ಕ್ಷಯಿಸಿ ಮೃತ್ಯುವು ಸನ್ನಿಹಿತವಾಗುತ್ತದೆ. ಆದುದರಿಂದ ಪ್ರಾಣತ್ಯಾಗಮಾಡುವ ಮೊದಲು ರಾಜ್ಯವನ್ನು ಪಡೆಯಲು ಯತ್ನಿಸುವುದು ಸೂಕ್ತವೆಂಬುದು ನನ್ನ ಅಭಿಪ್ರಾಯವಾಗಿದೆ.

**ಯೋ ನ ಯಾತಿ ಪ್ರಸಂಖ್ಯಾನಮಸ್ಪಷ್ಟೋ ಭೂಮಿವರ್ಧನಃ ।**
**ಅಯಾತಯಿತ್ವಾ ವೈರಾಣಿ ಸೋಽವಸೀದತಿ ಗೌರಿವ ॥೭॥**

ಯಾವಾತನು ವೈರಿಗಳನ್ನು ಧ್ವಂಸಮಾಡುವುದರಿಂದ ಪ್ರಾಪ್ತವಾಗುವ ಕೀರ್ತಿ-ಪ್ರತಿಷ್ಠೆಗಳನ್ನು ಪಡೆಯದೇ ಪ್ರಪಂಚದಲ್ಲಿ ಅಗಣ್ಯನಾಗಿರುವನೋ– ಅವನು ಬಂಜೆಯಾದ ಹಸುವಿನ ರೀತಿಯಲ್ಲಿ ಕೆಲವು ದಿನಗಳು ಭೂಮಿಗೆ ಭಾರಭೂತನಾಗಿದ್ದು ವಿನಾಶಹೊಂದುತ್ತಾನೆ.

**ಯೋ ನ ಯಾತಯತೇ ವೈರಮಲ್ಪಸತ್ತ್ವೋದ್ಯಮಃ ಪುಮಾನ್ ।**
**ಅಫಲಂ ಜನ್ಮ ತಸ್ಯಾಹಂ ಮನ್ಯೇ ದುರ್ಜಾತಜಾಯಿನಃ ॥೮॥**

ಯಾವಾತನು ದೌರ್ಬಲ್ಯದಿಂದಲೂ, ಅಧೈರ್ಯದಿಂದಲೂ ಶತ್ರುವನ್ನು ವಿನಾಶಗೊಳಿಸಲು ಯತ್ನಿಸದೇ ಅಲಸಿಕೆಯಿಂದಿರುವನೋ–ಅವನ ಜನ್ಮವು ವ್ಯರ್ಥ ಮತ್ತು ಅವನ ಹುಟ್ಟೂ ಅತ್ಯಂತ ಕುತ್ಸಿತವಾದುದೆಂದು ನಾನು ತಿಳಿಯುತ್ತೇನೆ. ಆದುದರಿಂದ ಇಂತಹ ಅಪಯಶಸ್ಸಿಗೆ ಎಡೆಗೊಡಬೇಡ. ಯುಧಿಷ್ಠಿರ! ಯುದ್ಧದಲ್ಲಿ ಶತ್ರುಗಳನ್ನು ಸಂಹರಿಸು. ಈ ಭೂಮಂಡಲಕ್ಕೆ ಚಕ್ರವರ್ತಿಯಾಗು. ಸುಖೋಪಭೋಗಗಳನ್ನು ಅನುಭವಿಸು. ನಿನ್ನ ಕೈಗಳು ಹಿರಣ್ಮಯವಾಗುತ್ತವೆ. ಕನಕಾಂಗದ-ಕೇಯೂರಗಳಿಂದ ಅಲಂಕೃತವಾಗುತ್ತವೆ. ಅಥವಾ ದಾನಮಾಡಲು ಸರ್ವದಾ ನಿನ್ನ ಕೈಯಲ್ಲಿ ಹಿರಣ್ಯವಿರುತ್ತದೆ. ಪೃಥುಚಕ್ರವರ್ತಿಯಂತೆ ಕುಂತಿಯ ಮಕ್ಕಳ ಕೀರ್ತಿಯು ಸರ್ವತ್ರ ವ್ಯಾಪ್ತವಾಗುತ್ತದೆ. ನಿನ್ನ ಬಾಹುಬಲದಿಂದ ಉಪಾರ್ಜಿತವಾದ ಐಶ್ವರ್ಯವನ್ನು ಅನುಭವಿಸು.

**ಹತ್ವಾ ವೈ ಪುರುಷೋ ರಾಜನ್ನಿಕರ್ತಾರಮರಿನ್ದಮ ।**
**ಅಹ್ನಾಯ ನರಕಂ ಗಚ್ಛೇತ್ಸ್ವರ್ಗೇಣಾಸ್ಯ ಸ ಸಮ್ಮಿತಃ ॥೧೦॥**

ಶತ್ರುನಿಷೂದನನೇ! 'ಧರ್ಮ, ಧರ್ಮ'–ಎಂದು ಹೇಳಿಕೊಂಡು ಅವಸಾನದವರೆಗೂ ಕಾನನದಲ್ಲಿ ಕಷ್ಟವನ್ನನುಭವಿಸಿ ಅನಂತರ ಧರ್ಮ ಮೂಲವಾಗಿ ಪ್ರಾಪ್ತವಾಗುವ ಸ್ವರ್ಗಕ್ಕಿಂತಲೂ ನಮ್ಮನ್ನು ವಂಚಿಸಿದ ಶತ್ರು ಗಳನ್ನು ರಣರಂಗದಲ್ಲಿ ಈಗಲೇ ಸಂಹರಿಸಿ ಪ್ರತಿಜ್ಞಾಭಂಗದಿಂದ ಪ್ರಾಪ್ತ ವಾಗುವ ನರಕವೇ ಲೇಸೆಂದು ನಾನು ಅಭಿಪ್ರಾಯಪಡುತ್ತೇನೆ. ನಮ್ಮನ್ನು ಸಂಕಟಪಡಿಸಿರುವ ನಮ್ಮ ಶತ್ರುಗಳನ್ನು ಕೊಲ್ಲುವುದರಿಂದ ನಮ್ಮ ಮನಸ್ಸಿನ ಸಂಕಟವು ಪರಿಹಾರವಾಗುತ್ತದೆ. ಯುಧಿಷ್ಠಿರ! ದುರ್ಯೋಧನಾದಿಗಳು ನಮ್ಮ ವಿಷಯದಲ್ಲಿ ಮಾಡಿದ ಮಹಾಪಚಾರವನ್ನು ಮನದಲ್ಲಿ ಕ್ಷಣ-ಕ್ಷಣಕ್ಕೂ ನೆನೆಯುತ್ತಾ ಕಾಲಕಳೆಯುವುದು ದುಸ್ಸಾಧ್ಯ. ಏಕೆಂದರೆ :

**ಅಮರ್ಷಜೋ ಹಿ ಸಂತಾಪಃ ಪಾವಕಾದ್ದೀಪ್ತಿಮತ್ತರಃ ।**
**ಯೇನಾಹಮಭಿಸಂತಪ್ತೋ ನ ನಕ್ತಂ ನ ದಿವಾ ಶಯೇ ॥೧೧॥**

ಈ ವೇದನೆಯು ಸಾಕ್ಷಾತ್ ಅಗ್ನಿಯನ್ನೇ ಎದೆಯ ಮೇಲಿಟ್ಟುಕೊಂಡು ಅನುಭವಿಸುವ ವೇದನೆಗಿಂತಲೂ ಹೆಚ್ಚಿನದು, ಯುಧಿಷ್ಠಿರ! ಈ ದಾರುಣ

ವೇದನೆಯನ್ನು ನಾನು ಸಹಿಸಲಾರದವನಾಗಿದ್ದೇನೆ. ಈ ಕಾರಣದಿಂದಾಗಿ ಹಗಲಿನಲ್ಲಾಗಲೀ, ರಾತ್ರಿಯಲ್ಲಾಗಲೀ ನನಗೆ ನಿದ್ರೆಯೆಂಬುದೇ ಇಲ್ಲವಾಗಿದೆ.

ಧನುರ್ಧಾರಿಗಳಲ್ಲಿ ಅಗ್ರಗಣ್ಯನಾದ ಈ ಪಾರ್ಥನೂ ಇದೇ ಸಂಕಟ ದಿಂದ ಪರಿತಪಿಸುತ್ತಿದ್ದಾನೆ. ಆದರೆ ಗುಹೆಯಲ್ಲಿರುವ ಸಿಂಹದಂತೆ ನಿನ್ನ ಆಜ್ಞೆಗೊಳಪಟ್ಟು ಮೌನವನ್ನು ಧರಿಸಿ ಕುಳಿತಿದ್ದಾನೆ. ಏಕಾಕಿಯಾಗಿಯೇ ಪ್ರಪಂಚದಲ್ಲಿರುವ ಮಹಾವೀರರಾದ ಧನುರ್ಧಾರಿಗಳೆಲ್ಲರನ್ನೂ ಧ್ವಂಸ ಮಾಡಲು ಸಮರ್ಥನಾದ ಈ ಅರ್ಜುನನು–ಮದಿಸಿದ ಆನೆಯು ಬಿಸಿಲಿನ ತಾಪವನ್ನು ಅತಿಕಷ್ಟದಿಂದ ತಡೆದುಕೊಳ್ಳುವಂತೆ–ಆತ್ಮಜನ್ಯವಾದ ಕೋಪ ವನ್ನು ಅತಿಕಷ್ಟದಿಂದ ಶಮನಮಾಡುತ್ತಿದ್ದಾನೆ. ನಕುಲ, ಸಹದೇವ ಮತ್ತು ವೀರಮಾತೆಯಾದ ಕುಂತೀ–ಇವರಿಗೂ ಈ ವನವಾಸವು ಸಹ್ಯವಲ್ಲ. ಆದರೂ ನಿನಗೆ ಪ್ರಿಯವನ್ನುಂಟುಮಾಡುವ ಅಪೇಕ್ಷೆಯಿಂದ ಮೌನಧರಿಸಿ ಕುಳಿತಿದ್ದಾರೆ. ನಮ್ಮ ಬಂಧು-ಮಿತ್ರರೂ, ಸೃಂಜಯರೂ ನಿನಗೆ ಬೇಸರ ವನ್ನುಂಟುಮಾಡಬಾರದೆಂಬ ಭಾವನೆಯಿಂದ ನಿನ್ನ ಅಭಿಪ್ರಾಯಕ್ಕೆ ವಿರೋಧ ವಾಗಿ ಮಾತನಾಡುತ್ತಿಲ್ಲವೇ ಹೊರತು ಅವರು ನಿನ್ನ ಅಭಿಪ್ರಾಯಕ್ಕೆ ಅನುಮೋದಿಸಿರುವರೆಂದು ತಿಳಿಯಬೇಡ. ನಿನ್ನ ಮನಸ್ಸನ್ನು ಆಹ್ಲಾದಗೊಳಿ ಸಲು ನಿನ್ನೊಡನೆ ಪ್ರಿಯೋಕ್ತಿಗಳನ್ನಾಡುವರು. ಆದರೆ ನಾನು ಮತ್ತು ದ್ರೌಪದಿ ಇಬ್ಬರು ಮಾತ್ರವೇ ನಮ್ಮ ಮನಸ್ಸಿನಲ್ಲಿರುವುದನ್ನು ನಿನ್ನೊಡನೆ ಸ್ಪಷ್ಟವಾಗಿ ಹೇಳುತ್ತಿದ್ದೇವೆ. ನಮ್ಮಿಬ್ಬರಿಗೂ ಹೃದಯವೇದನೆಯನ್ನು ನಿರೋಧಿಸಲು ಸಾಧ್ಯವಾಗದೇ ನಮ್ಮ ಅಭಿಪ್ರಾಯವನ್ನು ನಿನಗೆ ಸ್ಪಷ್ಟವಾಗಿ ಹೇಳಿರುತ್ತೇವೆ. ನಾವಿಬ್ಬರೂ ಏನು ಹೇಳಿರುವೆವೋ ಆ ಮಾತುಗಳಿಗೆ ಎಲ್ಲರ ಒಪ್ಪಿಗೆಯೂ ಇರುವುದು. ಏಕೆಂದರೆ : ಎಲ್ಲರೂ ದುಃಖದಲ್ಲಿ ನಿಮಗ್ನರಾಗಿದ್ದಾರೆ ಮತ್ತು ಯುದ್ಧಾಕಾಂಕ್ಷಿಗಳಾಗಿದ್ದಾರೆ. ಯುಧಿಷ್ಠಿರ! ದುರ್ಬಲರಿಂದ, ನೀಚರಿಂದ ನಮ್ಮ ರಾಜ್ಯವು ಬಲಾತ್ಕಾರದಿಂದ ಅಪಹರಿಸಲ್ಪಟ್ಟು ಅನುಭವಿಸಲ್ಪಡುತ್ತಿದೆ. ಇದಕ್ಕಿಂತಲೂ ಹೆಚ್ಚಿನ ದುರ್ಗತಿಯನ್ನು ನಾವು ಇನ್ನೂ ಅನುಭವಿಸಬೇಕೇ?

**ಶೀಲದೋಷಾದ್ಘೃಣಾವಿಷ್ಟ ಆನೃಶಂಸ್ಯಾತ್ಪರಂತಪ ।**
**ಕ್ಲೇಶಾಂಸ್ತಿತಿಕ್ಷಸೇ ರಾಜನ್ನಾನ್ಯಃ ಕಶ್ಚಿತ್ಪ್ರಶಂಸತಿ ॥೧೮॥**

ಅಣ್ಣ! ನೀನೀಗ ಸೌಶೀಲ್ಯವೆಂಬ ದೋಷದಿಂದಲೂ ಕನಿಕರದಿಂದಲೂ ಕೂಡಿರುವೆ. ಇದರ ಜೊತೆಗೆ ನೀನು ಪರಮದಯಾಳುವೂ ಆಗಿರುವೆ. ಈ ಕಾರಣದಿಂದಲೇ ನೀನು ದಾರುಣವಾದ ಕಷ್ಟಗಳನ್ನು ಸಹಿಸುತ್ತಿರುವೆ. ಆದರೆ ನಿನ್ನ ಈ ಕಾರ್ಯವನ್ನು ಯಾರೂ ಪ್ರಶಂಸೆಮಾಡುವುದಿಲ್ಲ.

**ಶ್ರೋತ್ರಿಯಸ್ಯೇವ ತೇ ರಾಜನ್ಮಂದಕಸ್ಯಾವಿಪಶ್ಚಿತಃ ।**
**ಅನುವಾಕಹತಾ ಬುದ್ಧಿರ್ನೈಷಾ ತತ್ತ್ವಾರ್ಥದರ್ಶಿನೀ ॥೧೯॥**

ಮಂದಬುದ್ಧಿಯ ಶ್ರೋತ್ರಿಯನು ಅರ್ಥವನ್ನು ತಿಳಿಯದೇ ವೇದಾಧ್ಯಯನವನ್ನು ಮಾಡುವಂತೆ–'ಸತ್ಯಸಂಧನಾಗಿರಬೇಕು. ಅನೃತವನ್ನು ಕನಸಿನಲ್ಲಿಯೂ ಹೇಳಬಾರದು. ಪ್ರತಿಜ್ಞಾಭಂಗವಾಗಕೂಡದು'–ಈ ನಿಯಮಗಳನ್ನು ನೀನು ಆಚರಿಸುತ್ತಿರುವೆಯೇ ಹೊರತು ತತ್ತ್ವಾರ್ಥಗಳನ್ನು ತಿಳಿದು ಈ ನಿಯಮಗಳನ್ನಾಚರಿಸುತ್ತಿಲ್ಲ. (ಸತ್ಯಸಂಧನಾಗಿರಬೇಕೆಂಬುದು ಮತ್ತು ದೃಢಪ್ರತಿಜ್ಞನಾಗಿರಬೇಕೆಂಬುದು ಸಾಮಾನ್ಯನಿಯಮವಾದರೂ ಸರ್ವ ಕಾಲದಲ್ಲಿಯೂ ಸತ್ಯವನ್ನೇ ಹೇಳಲು ಸಾಧ್ಯವಿಲ್ಲ. ಸತ್ಯದಿಂದ ತೊಂದರೆಗಳು ಸಂಭವಿಸುವುದೂ ಉಂಟು. ಆಪತ್ಕಾಲದಲ್ಲಿ ಸುಳ್ಳನ್ನೂ ಹೇಳಬೇಕಾಗುವುದು; ಪ್ರತಿಜ್ಞಾಭಂಗವನ್ನೂ ಮಾಡಬೇಕಾಗುವುದು. ಆದುದರಿಂದ ಸತ್ಯ-ಪ್ರತಿಜ್ಞೆಗಳನ್ನೂ ಗುರೂಪದಿಷ್ಟಮಂತ್ರದಂತೆ ಆಚರಣೆಯಲ್ಲಿಟ್ಟುಕೊಳ್ಳದೇ ವಿವೇಚನೆಯಿಂದ ಆಚರಿಸಬೇಕು.)

**ಘೃಣೀ ಬ್ರಾಹ್ಮಣರೂಪೋಽಸಿ ಕಥಂ ಕ್ಷತ್ರೇಽಭ್ಯಜಾಯಥಾಃ ।**
**ಅಸ್ಯಾಂ ಹಿ ಯೋನೌ ಜಾಯಂತೇ ಪ್ರಾಯಶಃ ಕ್ರೂರಬುದ್ಧಯಃ ॥೨೦॥**

ಅಣ್ಣ! ನೀನು ನಿಶ್ಚಯವಾಗಿಯೂ ಪರಮದಯಾಳುವಾದ ಬ್ರಾಹ್ಮಣನೇ ಆಗಿರುವೆ. ಆದರೆ ನೀನು ಕ್ಷತ್ರಿಯವಂಶದಲ್ಲಿ ಹೇಗೆ ಹುಟ್ಟಿದೆಯೆಂದೇ ನಾನು ಯೋಚಿಸುತ್ತಿದ್ದೇನೆ. ಏಕೆಂದರೆ : ಕ್ಷತ್ರಿಯವಂಶದಲ್ಲಿ ಪ್ರಾಯಶಃ ಕ್ರೂರಬುದ್ಧಿಯವರೇ ಹುಟ್ಟುವರು. ನೀನು ಮನುವು ಹೇಳಿರುವ ರಾಜ ಧರ್ಮಗಳನ್ನು ಕೇಳಿರುವೆ. ಹೀಗಿರುವಾಗ :

**ಕ್ರೂರಾನ್ನಿಕೃತಿಸಮ್ಪನ್ನಾನ್ನಿಹಿತಾನಶಮಾತ್ಮಕಾನ್ ।**
**ಧಾರ್ತರಾಷ್ಟ್ರಾನ್ಮಹಾರಾಜ ಕ್ಷಮಸೇ ಕಿಂ ದುರಾತ್ಮನಃ ॥೨೧॥**

ಕ್ಷತ್ರಿಯಕುಲೋತ್ಪನ್ನನಾಗಿರುವ ನೀನು ಕ್ರೂರಿಗಳಾದ, ವಂಚಕರಾದ, ನಮಗೆ ಅಹಿತವನ್ನು ಮಾಡುವುದರಲ್ಲಿಯೇ ಆಸಕ್ತರಾಗಿರುವ, ಅಶಾಂತಚಿತ್ತರಾದ, ದುರಾತ್ಮರಾದ ಧೃತರಾಷ್ಟ್ರನ ಮಕ್ಕಳನ್ನು ಏಕೆ ಕ್ಷಮಿಸುವೆ?

ನೀನು ಬುದ್ಧಿಶಾಲೀ ; ಬಲಶಾಲೀ ; ಶಾಸ್ತ್ರಗಳನ್ನೂ ಅಧ್ಯಯನ ಮಾಡಿರುವೆ. ಒಳ್ಳೆಯ ವಂಶದಲ್ಲಿ ಜನ್ಮತಾಳಿರುವೆ. ಇಷ್ಟಿದ್ದರೂ ವಿಷವಿಲ್ಲದ ಸರ್ಪದಂತೆ ಅಥವಾ ಸಿಂಹಾಸನದಲ್ಲಿ ಕೆತ್ತಿರುವ ಹಾವಿನಂತೆ ಪೌರುಷವಿಲ್ಲದವನಾಗಿರುವೆ. ಕರ್ತವ್ಯಪರಿಪಾಲನೆಯಲ್ಲಿ ವಿಮುಖನಾಗಿರುವೆ.

ನಿನ್ನ ಪ್ರತಿಜ್ಞಾನುಸಾರವಾಗಿ ನಾವು ಅನುಭವಿಸಬೇಕಾಗಿರುವ ಅಜ್ಞಾತವಾಸದ ಸಾಧ್ಯಾಸಾಧ್ಯತೆಯನ್ನು ಯೋಚಿಸಿರುವೆಯಾ? ಧರ್ಮಜ!

**ತೃಣಾನಾಂ ಮುಷ್ಟಿನೈಕೇವ ಹಿಮವನ್ತಂ ಚ ಪರ್ವತಮ್ ।**
**ಛನ್ನಮಿಚ್ಛಸಿ ಕೌನ್ತೇಯ ಯೋಽಸ್ಮಾನ್ಸಂವರ್ತುಮಿಚ್ಛಸಿ ॥೨೩॥**

ನಮ್ಮನ್ನು ಗೋಪ್ಯವಾಗಿಟ್ಟಿರಲು ಅಪೇಕ್ಷಿಸುವ ನೀನು ಒಂದು ಮುಷ್ಟಿ ಹುಲ್ಲಿನಿಂದ ಹಿಮವತ್ಪರ್ವತವನ್ನು ಮುಚ್ಚಲು ಆಶಿಸಿದವನಂತೆಯೇ ಆಗಿರುವೆ.

**ಅಜ್ಞಾತಚರ್ಯಾ ಗೂಢೇನ ಪೃಥಿವ್ಯಾಂ ವಿಶ್ರುತೇನ ಚ ।**
**ದಿವೀವ ಪಾರ್ಥ ಸೂರ್ಯೇಣ ನ ಶಕ್ಯಾಚರಿತುಂ ತ್ವಯಾ ॥೨೪॥**

ಅಣ್ಣ! ಎಷ್ಟೇ ಮೋಡಗಳಿದ್ದರೂ ಸೂರ್ಯನು ಮಾನವರಿಗೆ ಅಗೋಚರನಾಗಿ ಆಕಾಶದಲ್ಲಿ ಸಂಚರಿಸಲು ಸಾಧ್ಯವಾದೀತೇ? ಹಾಗೆಯೇ ಲೋಕವಿಖ್ಯಾತನಾದ ನೀನು ಯಾರಿಗೂ ತಿಳಿಯದ ರೀತಿಯಲ್ಲಿ ಜೀವಿಸಿರಲು ಸಾಧ್ಯವೇ?

**ಬೃಹಚ್ಛಾಲ ಇವಾನೂಪೇ ಶಾಖಾಪುಷ್ಪಪಲಾಶವಾನ್ ।**
**ಹಸ್ತೀ ಶ್ವೇತ ಇವಾಜ್ಞಾತಃ ಕಥಂ ಜಿಷ್ಣುಶ್ಚರಿಷ್ಯತಿ ॥೨೫॥**

ಜಲಸಮೃದ್ಧವಾಗಿರುವೆಡೆಯಲ್ಲಿ ಬೆಳೆದಿರುವ, ಶಾಖಾ-ಪುಷ್ಪ-ಪತ್ರ ಭರಿತವಾಗಿರುವ ಮಹಾವೃಕ್ಷವು ಯಾವ ಕಾರಣದಿಂದಲಾದರೂ ಮಾನವರಿಗೆ

ಅಗೋಚರವಾಗಿರಲು ಸಾಧ್ಯವೇ? ಇಂದ್ರನ ಐರಾವತವೆಂಬ ಬಿಳಿಯ ಆನೆಯನ್ನು ಯಾರಿಗೂ ಕಾಣದಂತೆ ಮುಚ್ಚಿಡಲು ಸಾಧ್ಯವೇ? ಹಾಗೆಯೇ ಈ ಜಿಷ್ಣುವೂ ಮನುಷ್ಯರಿಂದ ಗುರುತಿಸಲ್ಪಡದೇ ಇರಲಾರನು. ಸಿಂಹ ಪ್ರಾಯರಾಗಿರುವ ಈ ನಕುಲ-ಸಹದೇವರು ಹೇಗೆತಾನೇ ಮನುಷ್ಯರಿಂದ ಗುರುತಿಸಲ್ಪಡದೇ ಒಂದು ವರ್ಷವನ್ನು ಕಳೆಯುವರು? ವಿಶ್ವವಿಖ್ಯಾತೆಯಾದ, ವೀರಮಾತೆಯಾದ, ಧರ್ಮಿಷ್ಠೆಯಾದ, ರಾಜಪುತ್ರಿಯಾದ ದ್ರೌಪದಿಯು ಹೇಗೆತಾನೇ ಅಜ್ಞಾತೆಯಾಗಿರಬಲ್ಲಳು?

**ಮಾಂ ಚಾಪಿ ರಾಜಞ್ಜಾನನ್ತಿ ಹ್ಯಾಕುಮಾರಮಿಮಾಃ ಪ್ರಜಾಃ ।**
**ನಾಜ್ಞಾತಚರ್ಯಾಂ ಪಶ್ಯಾಮಿ ಮೇರೋರಿವ ನಿಗೂಹನಮ್ ॥೨೮॥**

ಚಿಕ್ಕಮಕ್ಕಳು ಮೊದಲುಗೊಂಡು ಎಲ್ಲ ಪ್ರಜೆಗಳೂ ನನ್ನನ್ನು ತಿಳಿದಿರುತ್ತಾರೆ. ಆದುದರಿಂದ ನಾನು ತಾನೇ ಹೇಗೆ ನನ್ನ ಈ ಬೃಹದಾಕಾರದ ಶರೀರವನ್ನು ಗೋಪ್ಯವಾಗಿಟ್ಟುಕೊಳ್ಳಲು ಸಮರ್ಥನಾಗುವೆನು? ನನ್ನನ್ನು ಗೋಪ್ಯವಾಗಿಡುವುದೆಂದರೆ ಮೇರುಪರ್ವತವನ್ನು ಗೋಪ್ಯವಾಗಿಟ್ಟಂತೆಯೇ ಸರಿ. ಒಂದು ವರ್ಷಕಾಲ ಅಜ್ಞಾತದಲ್ಲಿರುವುದು ಮಾತ್ರವೇ ಅಲ್ಲ. ಮಹಾರಾಜ! ಗೂಢಚಾರರ ಉಪಟಳಗಳಿಂದಲೂ ನಮ್ಮನ್ನು ನಾವು ರಕ್ಷಿಸಿಕೊಳ್ಳಬೇಕಾಗುವುದು. ಏಕೆಂದರೆ : ನಮ್ಮಿಂದ ಪರಾಜಿತರಾದ ಅನೇಕ ರಾಜರು ದುರ್ಯೋಧನನನ್ನು ಆಶ್ರಯಿಸಿರುವರು. ಪರಾಭವದ ಸೇಡನ್ನು ತೀರಿಸಿಕೊಳ್ಳುವ ಆಶಯದಿಂದ ಅವರು ನಮ್ಮ ಶತ್ರುಗಳಾಗಿಯೇ ಇರುವರು. ಅವರೀಗ ಸಮಯವನ್ನು ಕಾಯುತ್ತಿದ್ದಾರೆ. ದುರ್ಯೋಧನನಿಗೆ ಹಿತವನ್ನುಂಟುಮಾಡುವ ಸಲುವಾಗಿ, ನಮ್ಮನ್ನು ಬಹಿರಂಗಪಡಿಸಲು ನೂರಾರು ಗೂಢಚಾರರನ್ನೂ ಅವರು ಕಳುಹಿಸುತ್ತಾರೆ.

ಆ ರಾಜರು ತಮ್ಮ ಪ್ರಯತ್ನದಲ್ಲಿ ಸಫಲರಾಗಿ ನಮ್ಮ ನಿವಾಸಸ್ಥಾನವನ್ನು ಹೊರಗೆಡಹಿದರೆ ನಮಗೆ ಪುನಃ ಹನ್ನೆರಡು ವರ್ಷಗಳ ವನವಾಸವು ಸಿದ್ಧವಾಗುವುದು.

**ಅಸ್ಮಾಭಿರುಷಿತಾಃ ಸಮ್ಯಗ್ವನೇ ಮಾಸಾಸ್ತ್ರಯೋದಶ ।**
**ಪರಿಮಾಣೇನ ತಾನ್ಪಶ್ಯ ತಾವತಃ ಪರಿವತ್ಸರಾನ್ ॥೩೨॥**

ಅಣ್ಣ! ನಾವೀಗ ಹದಿಮೂರು ತಿಂಗಳ ಕಾಲ ವನವಾಸವನ್ನು ಅನುಭವಿಸಿರುವೆವಲ್ಲವೇ? ಈ ಹದಿಮೂರು ಮಾಸಗಳನ್ನೇ ನೀನು ಹದಿಮೂರು ವರ್ಷಗಳೆಂದು ಭಾವಿಸಬಾರದೇಕೆ?

**ಅಸ್ತಿ ಮಾಸಃ ಪ್ರತಿನಿಧಿರ್ಯಥಾ ಪ್ರಾಹುರ್ಮನೀಷಿಣಃ ।**
**ಪೂತಿಕಾಮಿವ ಸೋಮಸ್ಯ ತಥೇದಂ ಕ್ರಿಯತಾಮಿತಿ ॥೩೩॥**

ಆಪತ್ಕಾಲದಲ್ಲಿ ಮಾಸಗಳನ್ನೇ ವರ್ಷಗಳನ್ನಾಗಿ ಪರಿಗಣಿಸಬಹುದೆಂದು ಧರ್ಮಜ್ಞರು ಹೇಳುತ್ತಾರೆ. 'ಯೋ ಮಾಸಃ ಸ ಸಂವತ್ಸರಃ' ಮುಂತಾಗಿ ಶ್ರುತಿಗಳೂ ಸಾರುತ್ತವೆ. ಯಾಗಗಳಲ್ಲಿಯೂ ಸೋಮಲತೆಯು ಸಿಕ್ಕದಿದ್ದರೆ ಅದಕ್ಕೆ ಬದಲಾಗಿ 'ಪೂತಿಕಾ' ಎಂಬ ಲತೆಯನ್ನು ಉಪಯೋಗಿಸುವುದಿಲ್ಲವೇ? ಪ್ರಪಂಚದಲ್ಲಿ ಪ್ರತಿಯೊಂದಕ್ಕೂ ಆಪದ್ಧರ್ಮವೆಂಬ ಪ್ರತಿನಿಯಮವು ಇದ್ದೇ ಇರುವುದು. ಅದನ್ನು ಋಷಿ-ಮಹರ್ಷಿಗಳೂ ಒಪ್ಪುತ್ತಾರೆ. ಆದುದರಿಂದ ಹದಿಮೂರು ತಿಂಗಳುಗಳನ್ನೇ ಹದಿಮೂರು ವರ್ಷಗಳೆಂದು ಭಾವಿಸಿ ಕಾರ್ಯೋನ್ಮುಖನಾಗು, ಯುಧಿಷ್ಠಿರ!

**ಅಥವಾನಡುಹೇ ರಾಜನ್ಸಾಧವೇ ಸಾಧುವಾಹಿನೇ ।**
**ಸೌಹಿತ್ಯದಾನಾದೇತಸ್ಮಾದೇನಸಃ ಪ್ರತಿಮುಚ್ಯತೇ ॥೩೪॥**

ಇಷ್ಟಾದರೂ ನಿನಗೆ ಸತ್ಯಭ್ರಷ್ಟನಾಗುವೆನೆಂಬ ಮನಃಕ್ಲೇಶವಿರುವುದಾದರೆ–'ಅನಡುಹೇ ಪೂರ್ಣಂ ಘಾಸಮುಪಾಹೃತ್ಯಾನೃತಾನ್ಮುಚ್ಯತೇ' ಎಂಬ ಧರ್ಮಶಾಸ್ತ್ರೋಕ್ತಿಯಂತೆ ಸಾಧುಗಳಾದ ಸತ್ಪುರುಷರನ್ನು ಹೊರುವ ಎತ್ತುಗಳಿಗೆ ಹುಲ್ಲು-ನೀರುಕೊಟ್ಟು ಪಾಪವಿಮೋಚನೆಯನ್ನು ಮಾಡಿಕೊಳ್ಳಬಹುದಾಗಿದೆ. ಆದುದರಿಂದ ಶತ್ರುಗಳ ಸಂಹಾರಕ್ಕೆ ಇಂದೇ ಸಂಕಲ್ಪಿಸು. ಮಹಾರಾಜ!

**ಕ್ಷತ್ರಿಯಸ್ಯ ಹಿ ಸರ್ವಸ್ಯ ನಾನ್ಯೋ ಧರ್ಮೋಽಸ್ತಿ ಸಂಯುಗಾತ್ ॥**

ಕ್ಷತ್ರಿಯನಾದವನಿಗೆ–ಶತ್ರುವಿನೊಡನೆ ಯುದ್ಧಮಾಡುವುದಕ್ಕಿಂತಲೂ ಮಿಗಿಲಾದ ಬೇರೆಯ ಧರ್ಮವೇ ಇಲ್ಲ."

ಮೂವತ್ತೈದನೆಯ ಅಧ್ಯಾಯವು ಮುಗಿಯಿತು.

## ಭೀಮಸೇನನಿಗೆ ಯುಧಿಷ್ಠಿರನ ಸಮಾಧಾನ : ವ್ಯಾಸಮಹರ್ಷಿಗಳ ಆಗಮನ : ಯುಧಿಷ್ಠಿರನಿಗೆ ಪ್ರತಿಸ್ಮೃತಿವಿದ್ಯೆಯ ಪ್ರದಾನ : ಪಾಂಡವರು ಕಾಮ್ಯಕವನಕ್ಕೆ ಪುನಃ ಹಿಂದಿರುಗಿದುದು

ಜನಮೇಜಯ! ಯುಧಿಷ್ಠಿರನು ಭೀಮಸೇನನ ಮಾತುಗಳನ್ನು ಕೇಳಿ ನಿಟ್ಟುಸಿರುಬಿಡುತ್ತಾ ಮನಸ್ಸಿನಲ್ಲಿಯೇ ಯೋಚಿಸತೊಡಗಿದನು :

"ರಾಜಧರ್ಮಗಳೆಲ್ಲವೂ ನನಗೆ ತಿಳಿದಿದೆ. ರಾಜಧರ್ಮಗಳನ್ನು ಚೆನ್ನಾಗಿ ಅಭ್ಯಾಸಮಾಡಿದ್ದೇನೆ. ವರ್ಣಾಶ್ರಮಧರ್ಮಗಳನ್ನೂ ತಿಳಿದಿರುತ್ತೇನೆ. ಆಪದ್ಧರ್ಮಗಳೂ ನನಗೆ ತಿಳಿದಿವೆ. ಯಾವನು ಈ ಧರ್ಮಗಳನ್ನು ಮನದಲ್ಲಿಟ್ಟುಕೊಂಡು ಧರ್ಮಕ್ಕೆ ಯಾವ ವಿಧದಲ್ಲಿಯೂ ನ್ಯೂನತೆಯುಂಟಾಗದಂತೆ ವರ್ತಿಸುವನೋ–ಅವನ ಜೀವನವು ಸುವ್ಯವಸ್ಥೆಗೊಳಪಟ್ಟಿರುತ್ತದೆ. ಅಂತಹವನೇ ಮುಂದೇನಾಗುವುದೆಂಬುದನ್ನು ಆಲೋಚಿಸಿ ಕಾರ್ಯಮಾಡಲು ಅರ್ಹನಾಗುತ್ತಾನೆ. (ಈಗಿನ ಸ್ಥಿತಿಯನ್ನೂ, ಮುಂದೇನಾಗುವುದೆಂಬುದನ್ನೂ ಆಲೋಚಿಸಿ ತಿಳಿಯಬಲ್ಲವನೇ ಪಂಡಿತನು.) ತಿಳಿಯಲಸಾಧ್ಯವಾದ, ಅತಿಗೋಪ್ಯವಾದ ಮತ್ತು ಅತಿದುಸ್ತರವಾದ ಇಂತಹ ಧರ್ಮಮಾರ್ಗವನ್ನು ತಿಳಿದಿರುವ ನಾನು ಇಂದು ಈ ಧರ್ಮವನ್ನೇ ವಿಸರ್ಜಿಸಲೇ? ಈ ಧರ್ಮವು ನನ್ನಲ್ಲಿ ಮೇರುವಿನಂತೆ ಅಚಲವಾಗಿ ನಿಂತಿದೆ. ಮೇರುವನ್ನು ಕಿತ್ತೊಗೆಯುವ ಸಾಧ್ಯತೆಯಿದ್ದರೆ ನನ್ನಲ್ಲಿರುವ ಧರ್ಮವನ್ನೂ ಕಿತ್ತೊಗೆಯಬಹುದು. (ಎರಡೂ ಅಸಾಧ್ಯ.) ಆದರೆ ಈ ಸಮಯದಲ್ಲಿ ಭೀಮನನ್ನು ಸಮಾಧಾನಪಡಿಸುವುದೂ ನನ್ನ ಕರ್ತವ್ಯಗಳಲ್ಲೊಂದಾಗಿರುತ್ತದೆ"– ಹೀಗೆಂದು ಮನದಲ್ಲಿ ನಿಶ್ಚಯಿಸಿ ಭೀಮನನ್ನು ಕುರಿತು ಹೇಳಿದನು :

"ಭೀಮಸೇನ! ನೀನು ಹೇಳಿದುದೆಲ್ಲವೂ ನಿಜ. ಆದರೆ ನಾನು ಹೇಳುವುದನ್ನೂ ಕೇಳು :

**ಮಹಾಪಾಪಾನಿ ಕರ್ಮಾಣಿ ಯಾನಿ ಕೇವಲಸಾಹಸಾತ್ ।**
**ಆರಭ್ಯನ್ತೇ ಭೀಮಸೇನ ವ್ಯಥನ್ತೇ ತಾನಿ ಭಾರತ ॥೬॥**

ವಿಚಾರಮಾಡದೆಯೇ ದುಡುಕಿ ಮಾಡುವ ಕೆಲಸಗಳು ಮಹಾ ಪಾಪಕರವಾಗುತ್ತವೆ. ಅಂತಹ ಕೆಲಸಗಳು ಕೆಟ್ಟೂಹೋಗುತ್ತವೆ. ಸಿದ್ಧಿಸುವುದೂ ಇಲ್ಲ. ದುಃಖಕ್ಕೂ ಕಾರಣಗಳಾಗುತ್ತವೆ.

**ಸುಮನ್ತ್ರಿತೇ ಸುವಿಕ್ರಾನ್ತೇ ಸುಕೃತೇ ಸುವಿಚಾರಿತೇ ।**
**ಸಿಧ್ಯನ್ತ್ಯರ್ಥಾ ಮಹಾಬಾಹೋ ದೈವಂ ಚಾತ್ರ ಪ್ರದಕ್ಷಿಣಮ್ ॥೬॥**

ಸಾಹಸವನ್ನು ಅಥವಾ ಬಲವನ್ನು ಪ್ರಯೋಗಿಸಬೇಕಾದರೆ ಪೂರ್ವಾಪರವಿವೇಚನೆಯನ್ನು ಮಾಡಬೇಕು. ಧರ್ಮಕ್ಕೂ ನ್ಯೂನತೆಯುಂಟಾಗದಂತೆ ಕಾರ್ಯಮಾಡಬೇಕು. ಬಲಪ್ರಯೋಗದಿಂದ ಒದಗಬಹುದಾದ ಅಪಾಯವನ್ನು ಮನಗಂಡು ಅದಕ್ಕೆ ತಕ್ಕ ಉಪಾಯವನ್ನೂ ಸಿದ್ಧಪಡಿಸಿಕೊಳ್ಳಬೇಕು. ಕೋಪಕ್ಕೆ ಎಡೆಗೊಟ್ಟು ಕಾರ್ಯಮಾಡದೇ–ಪ್ರತಿಯೊಂದನ್ನೂ ಕೂಲಂಕಷವಾಗಿ ತರ್ಕಿಸಿ, ಕಾರ್ಯಮಾಡಬೇಕು. ಹೀಗೆ ಕಾರ್ಯಮಾಡಿದರೆ ದೈವಸಹಾಯವೂ ಸಿಕ್ಕಿ ಕಾರ್ಯಗಳೂ ಸಿದ್ಧಿಸುತ್ತವೆ.

ಭೀಮಸೇನ! ನೀನು ನಿನ್ನಲ್ಲಿರುವ ಬಲದಿಂದ ಪ್ರಮತ್ತನಾಗಿ ಚಾಪಲ್ಯದಿಂದಲೂ ಮತ್ತು ಕೋಪದಿಂದಲೂ ರಾಜ್ಯದ ಪುನಃಪ್ರಾಪ್ತಿಯ ಕಾರ್ಯವನ್ನು ಈಗಲೇ ಆರಂಭಿಸಬೇಕೆನ್ನುವೆ. ಆ ವಿಷಯದಲ್ಲಿ ನನ್ನ ಮಾತನ್ನು ಕೇಳು. ನಾವು ಎದುರಿಸಬೇಕಾಗಿರುವ ಶತ್ರುಗಳಾರು? ಅವರ ಪರಾಕ್ರಮವೆಷ್ಟು?–ಎಂಬುದನ್ನಾದರೂ ವಿವೇಚಿಸಿರುವೆಯಾ? ಭೂರಿಶ್ರವ, ಶಲ, ಜಲಸಂಧ, ಭೀಷ್ಮ, ದ್ರೋಣ, ಕರ್ಣ, ಅಶ್ವತ್ಥಾಮಾ ಮತ್ತು ಪರಾಕ್ರಮಿಗಳಾದ ದುರ್ಯೋಧನಪ್ರಮುಖರಾದ ಧೃತರಾಷ್ಟ್ರನ ನೂರು ಮಂದಿ ಮಕ್ಕಳು–ಇವರೆಲ್ಲರನ್ನೂ ಸಾಮಾನ್ಯರೆಂದು ತಿಳಿಯಬೇಡ. ಎಲ್ಲರೂ ಧನುರ್ವಿದ್ಯೆಯಲ್ಲಿ ನಿಷ್ಣಾತರು. ಯುದ್ಧದಲ್ಲಿ ಜಯಿಸಲು ದುಸ್ಸಾಧ್ಯರು. ನಮ್ಮೊಡನೆ ಯುದ್ಧಮಾಡಲು ಸರ್ವದಾ ಸನ್ನದ್ಧರಾಗಿರುವವರು. ಅದರ ಜೊತೆಗೆ ನಮ್ಮಿಂದ ಪರಾಜಿತರಾದ ಭೂಪಾಲರೆಲ್ಲರೂ ದುರ್ಯೋಧನನ ಪಕ್ಷವನ್ನು ಅವಲಂಬಿಸಿರುವರು. ಅವರಿಗೂ ಮತ್ತು ದುರ್ಯೋಧನನಿಗೂ ಪರಸ್ಪರ ಮೈತ್ರಿಯು ಬೆಳೆದಿರುವುದರಿಂದ ಅವರೆಲ್ಲರೂ ದುರ್ಯೋಧನನಿಗೆ ಹಿತವನ್ನೇ ಬಯಸುವವರಾಗಿದ್ದಾರೆ. ಆ ರಾಜರೆಲ್ಲರೂ ಅಪಾರಬಲಸಮೇತರಾಗಿ ನಮ್ಮೊಡನೆ

ಯುದ್ಧಮಾಡುತ್ತಾರೆ. ಹಿಂದೆ ನಾವು ಅವರನ್ನು ಪರಾಜಯಗೊಳಿಸಿದ ಸೇಡನ್ನು ತೀರಿಸಿಕೊಳ್ಳಲು ಸಮಯವನ್ನು ಕಾಯುತ್ತಿದ್ದಾರೆ. ದುರ್ಯೋಧನನು ಅಪಾರವಾದ ಸೈನ್ಯವನ್ನು ಶೇಖರಿಸಿದ್ದಾನೆ. ಸೈನ್ಯಾಧಿಪತಿಗಳಿಗೂ, ದಂಡನಾಯಕರಿಗೂ ಮತ್ತು ಅವರ ಬಂಧು-ಮಿತ್ರರಿಗೂ ದುರ್ಯೋಧನನು ಆಗಿಂದಾಗ್ಯೆ ಸನ್ಮಾನಮಾಡುತ್ತಾ ಅವರೆಲ್ಲರನ್ನೂ ಸಂಪೂರ್ಣವಾಗಿ ತನ್ನ ಸ್ವಾಧೀನದಲ್ಲಿಟ್ಟುಕೊಂಡಿದ್ದಾನೆ. ಈ ಕಾರಣದಿಂದಾಗಿ ಆ ಅಪಾರಸೈನ್ಯವೂ ಮತ್ತು ಸೈನ್ಯಾಧಿಪತಿಗಳೂ ದುರ್ಯೋಧನನ ಸಲುವಾಗಿ ಯುದ್ಧದಲ್ಲಿ ಪ್ರಾಣತೊರೆಯಲೂ ಸಿದ್ಧರಾಗಿರುವರು.

ಭೀಷ್ಮ, ದ್ರೋಣ, ಮಹಾನುಭಾವನಾದ ಕೃಪ–ಇವರು ಮಾತ್ರ ಕೌರವ-ಪಾಂಡವರಲ್ಲಿ ಪರಸ್ಪರ ಭೇದವನ್ನೆಣಿಸುವುದಿಲ್ಲ. ಅವರಿಗೆ ನಾವೂ ಮತ್ತು ದುರ್ಯೋಧನಾದಿಗಳೂ ಸಮಾನರು. ಆದರೂ ಅವರು ದುರ್ಯೋಧನನಿಂದ ಗೌರವಿಸಲ್ಪಡುತ್ತಿದ್ದಾರೆಂಬುದನ್ನೂ ಮತ್ತು ಅವನಿಂದ ರಕ್ಷಿಸಲ್ಪಡುತ್ತಿದ್ದಾರೆಂಬುದನ್ನೂ ನೀನು ಮರೆಯಬೇಡ. ಕೌರವ-ಪಾಂಡವರಲ್ಲಿ ಯುದ್ಧವು ಆರಂಭವಾದಲ್ಲಿ-ಅವರೆಲ್ಲರೂ ಕೌರವರ ಕಡೆಗೇ ಸೇರಿ ನಮ್ಮೊಡನೆ ಕಾದಾಡಿ ಎಲ್ಲಕ್ಕಿಂತಲೂ ಪ್ರಿಯತಮವಾದ ಪ್ರಾಣಗಳನ್ನೂ ತೊರೆಯಲು ಸಿದ್ಧರಾಗುತ್ತಾರೆ. ಇದು ನನ್ನ ಸಿದ್ಧಾಂತ. ಅವರೆಲ್ಲರೂ ದಿವ್ಯಾಸ್ತ್ರಗಳನ್ನು ತಿಳಿದ ವಿದ್ವಾಂಸರು ಮತ್ತು ಧರ್ಮಪರಾಯಣರು. ದೇವತೆಗಳಿಂದೊಡಗೂಡಿ ಬರುವ ದೇವೇಂದ್ರನಿಂದಲೂ ಅವರು ಯುದ್ಧದಲ್ಲಿ ಪರಾಜಿತರಾಗುವುದಿಲ್ಲ. ಅವರ ಜೊತೆಗೆ ಮಹಾಶೂರನಾದ, ಮಹಾಕೋಪಿಷ್ಠನಾದ, ಮಹಾರಥನಾದ, ಸರ್ವಾಸ್ತ್ರಕೋವಿದನಾದ, ಅಜೇಯನಾದ ಕರ್ಣನಿರುವನು. ಅವನು ಸಹಜವಾದ ಮತ್ತು ಅಭೇದ್ಯವಾದ ಕವಚವನ್ನೂ ಧರಿಸಿರುತ್ತಾನೆ. ಯಾರೊಬ್ಬರ ಸಹಾಯವೂ ಇಲ್ಲದ ನೀನು ಆ ಮಹಾಶೂರರನ್ನು ಪರಾಜಯಗೊಳಿಸದೇ ಅಥವಾ ಸಂಹರಿಸದೇ ದುರ್ಯೋಧನನನ್ನು ಸಂಹರಿಸುವ ಸಾಧ್ಯತೆಯಿದೆಯೇ? ಭೀಮಸೇನ! ಅದು ಅಶಕ್ಯ. ನಿಜವಾಗಿ ಹೇಳುವುದಾದರೆ, ಬಾಣಪ್ರಯೋಗಚಾತುರ್ಯದಲ್ಲಿ ಕರ್ಣನಿಗಿರುವ ಕೈಚಳಕವನ್ನು ನೆನೆದು ನನಗೆ ನಿದ್ರೆಯೇ ಬರುತ್ತಿಲ್ಲ. ಧನುರ್ವಿದ್ಯೆಯಲ್ಲಿ ಅವನು ಎಲ್ಲರನ್ನೂ ಮೀರಿಸಿರುವನೆಂದು ನಾನು ಭಾವಿಸುತ್ತೇನೆ.

(ಶತ್ರುಪಕ್ಷದವರು ಇಷ್ಟು ಪ್ರಬಲರಾಗಿರುವಾಗ ನಾವು ಪ್ರತಿಜ್ಞೆಯನ್ನೂ ಮುರಿದು, ಅಧರ್ಮಿಗಳೆನಿಸಿಕೊಂಡು, ಅಸಹಾಯಕರಾಗಿ ನಮ್ಮ ಶತ್ರುಗಳನ್ನು ವಿನಾಶಮಾಡುವ ಸಾಧ್ಯತೆಯಿದೆಯೇ?–ಎಂಬುದನ್ನು ಹೇಳು, ಭೀಮಸೇನ!)"

ಯುಧಿಷ್ಠಿರನ ಆ ಮಾತುಗಳನ್ನು ಕೇಳಿ ಭೀಮನ ಹೃದಯವು ಕಂಪಿಸಿತು. ಮುಂದೆ ಒಂದು ಮಾತನ್ನೂ ಆಡದೇ ಮೌನವಾಗಿ ಕುಳಿತುಬಿಟ್ಟನು. ಆ ಸಮಯಕ್ಕೆ ಸರಿಯಾಗಿ ಮಹಾಮಹಿಮರಾದ ವ್ಯಾಸರು ಪಾಂಡವರು ಮಾತನಾಡುತ್ತಿದ್ದೆಡೆಗೆ ಆಗಮಿಸಿದರು. ಒಡನೆಯೇ ಪಾಂಡವರೆದ್ದು, ಮಹರ್ಷಿಗಳನ್ನು ಸ್ವಾಗತಿಸಿ ಸತ್ಕರಿಸಿದರು. ಸತ್ಕೃತರಾದ ವ್ಯಾಸರು ಸ್ಮಿತವದನರಾಗಿ ಯುಧಿಷ್ಠಿರನನ್ನು ಕುರಿತು ಹೇಳಿದರು :

"ಯುಧಿಷ್ಠಿರ! ಭೀಷ್ಮ-ದ್ರೋಣ-ಕರ್ಣಾದಿಗಳ ಸಾಹಸವನ್ನು ನೆನೆದು ನಿನ್ನ ಮನಸ್ಸಿನಲ್ಲಿ ಉಂಟಾಗುವ ಆತಂಕವನ್ನು ನನ್ನ ಅಂತರ್ದೃಷ್ಟಿಯಿಂದ ತಿಳಿದು, ಅದರ ಪರಿಹಾರಕ್ಕೆ ಉಪಾಯವನ್ನು ತಿಳಿಯಹೇಳುವ ಸಲುವಾಗಿಯೇ ಇಲ್ಲಿಗೆ ಬಂದಿರುವೆನು. ನಾನು ಹೇಳುವುದನ್ನು ಕೇಳಿ, ಅದರಂತೆ ನಡೆದು, ನಿನ್ನ ಮಾನಸಿಕವ್ಯಥೆಯನ್ನು ದೂರೀಕರಿಸು. ಧರ್ಮಜ!" ಹೀಗೆಂದು ಹೇಳಿ ವ್ಯಾಸರು ಧರ್ಮರಾಜನನ್ನು ಏಕಾಂತಸ್ಥಳಕ್ಕೆ ಕರೆದೊಯ್ದು ಹೇಳಿದರು :

"ಭರತಕುಲಾವತಂಸನೇ! ನಿನ್ನ ಅಭ್ಯುದಯಕಾಲವು ಸಮೀಪಿಸುತ್ತಿದೆ. ಧನಂಜಯನು ನಿನ್ನ ಶತ್ರುಗಳೆಲ್ಲರನ್ನೂ ವಿನಾಶಗೊಳಿಸಲು ಸಮರ್ಥನಾಗುತ್ತಾನೆ. 'ಪ್ರತಿಸ್ಮೃತಿ' ಎಂಬ ವಿದ್ಯೆಯನ್ನು ನಾನಿಂದು ನಿನಗೆ ಉಪದೇಶಿಸುತ್ತೇನೆ. ಈ ವಿದ್ಯೆಯನ್ನು ವಿಜಯದ ಅಧಿದೇವತೆಯೆಂದೇ ನೀನು ಭಾವಿಸು. ಈ ಮಹಾವಿದ್ಯೆಯ ಉಪದೇಶಕ್ಕೆ ನೀನು ಅರ್ಹನೂ ಆಗಿರುವೆ. ಈ ಮಹಾವಿದ್ಯೆಯನ್ನೇ ನೀನು ಅರ್ಜುನನಿಗೂ ಉಪದೇಶಿಸು. ಈ ವಿದ್ಯೆಯ ಪ್ರಭಾವದಿಂದಾಗಿ ಅರ್ಜುನನು ತನ್ನ ಇಚ್ಛೆಯನ್ನು ನೆರವೇರಿಸಿಕೊಳ್ಳಲು ಸಮರ್ಥನಾಗುತ್ತಾನೆ.

ಈ ಮಹಾವಿದ್ಯೆಯ ಉಪದೇಶವನ್ನು ನಿನ್ನಿಂದ ಪಡೆದನಂತರ ಅರ್ಜು

ನನು ಮಹೇಂದ್ರ, ರುದ್ರ, ವರುಣ, ಕುಬೇರ, ಯಮ–ಇವರಲ್ಲಿಗೆ ಮಹಾಸ್ತ್ರಗಳನ್ನು ಪಡೆಯುವ ಸಲುವಾಗಿ ಹೋಗಿಬರಲಿ. ಇವನು ತನ್ನ ತಪಃಪ್ರಭಾವದಿಂದಾಗಿ ದೇವತೆಗಳನ್ನು ಕಾಣಲು ದೇವಲೋಕಕ್ಕೆ ಹೋಗಲು ಸಮರ್ಥನಾಗುತ್ತಾನೆ. ಅರ್ಜುನನನ್ನು ಸಾಮಾನ್ಯನೆಂದು ತಿಳಿಯಬೇಡ.

**ಋಷಿರೇಷ ಮಹಾತೇಜಾ ನಾರಾಯಣಸಹಾಯವಾನ್ ।**
**ಪುರಾಣಃ ಶಾಶ್ವತೋ ದೇವಸ್ತ್ವಜೇಯೋ ಜಿಷ್ಣುರಚ್ಯುತಃ ॥೩೩॥**

ಇವನು ಪೂರ್ವದಲ್ಲಿ ಮಹಾತೇಜಸ್ವಿಯಾದ ನರನೆಂಬ ಮಹರ್ಷಿಯಾಗಿ ನಾರಾಯಣನ ಮಿತ್ರನಾಗಿದ್ದನು. ಇವನು ಪುರಾಣಪುರುಷನು, ಶಾಶ್ವತನು, ದೇವಕಲ್ಪನು, ಅಜೇಯನು, ಜಯಶೀಲನು ಮತ್ತು ಜರಾಮರಣರಹಿತನು. ಮಹಾಬಾಹುವಾದ ಇವನು ಇಂದ್ರನಿಂದಲೂ, ಈಶ್ವರನಿಂದಲೂ, ಲೋಕಪಾಲಕರಿಂದಲೂ ಮಹಾಸ್ತ್ರಗಳನ್ನು ಪಡೆದು ಮಹಾಕಾರ್ಯಗಳನ್ನು ಮಾಡುತ್ತಾನೆ.

ಯುಧಿಷ್ಠಿರ! ನೀನು ಈ ದ್ವೈತವನದಲ್ಲಿಯೇ ಹೆಚ್ಚುಕಾಲ ಇರಬೇಡ. ಬೇರಾವುದಾದರೂ ಅರಣ್ಯಕ್ಕೆ ಹೋಗಲು ನಿಶ್ಚಯಿಸು. ಏಕೆಂದರೆ : ಒಂದೆಡೆಯಲ್ಲಿಯೇ ಇದ್ದುಬಿಡುವುದು ಮನಸ್ಸಿಗೆ ಹಿತವೆನಿಸುವುದಿಲ್ಲ. ಮೇಲಾಗಿ ಇಲ್ಲಿರುವ ತಪಸ್ವಿಗಳಿಗೂ ಕಾಲಕ್ರಮದಲ್ಲಿ ನಿನ್ನ ನಿವಾಸವು ಸಹ್ಯವಾಗದಿರಬಹುದು. ಏಕೆಂದರೆ : ನಿನ್ನ ಪರಿವಾರವು ಬಹಳ ದೊಡ್ಡದಾಗಿದೆ. ನಿನ್ನನ್ನೇ ಅನುಸರಿಸಿ ವೇದ-ವೇದಾಂಗಪಾರಂಗತರಾದ ಅನೇಕ ಬ್ರಾಹ್ಮಣರು ಬಂದಿರುತ್ತಾರೆ. ಇವರೆಲ್ಲರ ರಕ್ಷಣಾಭಾರವೂ ನಿನ್ನದಾಗಿರುತ್ತದೆ. ಜನರ ಆಹಾರಕ್ಕಾಗಿ ಇಲ್ಲಿರುವ ಜಿಂಕೆಗಳೂ ಮತ್ತು ಕಂದ-ಮೂಲಗಳೂ ಉಪಯೋಗಿಸಲ್ಪಡುತ್ತಿವೆ. ಇನ್ನು ಮುಂದೆಯೂ ನೀನು ಇದೇ ವನದಲ್ಲಿ ಇರುವೆಯಾದರೆ ಜಿಂಕೆಗಳೇ ಸಿಕ್ಕದ ಕಾಲವೂ ಬರಬಹುದು. ಕಂದ-ಮೂಲ-ಫಲಗಳೂ ಸಿಕ್ಕದಿರಬಹುದು. ಇದರಿಂದಾಗಿ ಇಲ್ಲಿಯೇ ಶಾಶ್ವತವಾಗಿ ನೆಲೆಸಿರುವ ತಪಸ್ವಿಗಳಿಗೆ ಬಹಳ ಕಷ್ಟವಾಗುವುದು. ಆದುದರಿಂದ ನೀನು ದ್ವೈತವನವನ್ನು ಬಿಟ್ಟು ಬೇರೊಂದು ಅರಣ್ಯಕ್ಕೆ ಹೋಗಲು ಪ್ರಯತ್ನಿಸು."

ತ್ರಿಕಾಲಜ್ಞರಾದ ವ್ಯಾಸರು ಹೀಗೆ ಹೇಳಿ ಪರಿಶುದ್ಧನಾಗಿ ಬಂದ

ಯುಧಿಷ್ಠಿರನಿಗೆ 'ಪ್ರತಿಸ್ಮೃತಿ' ಎಂಬ ಮಹಾವಿದ್ಯೆಯನ್ನು ಉಪದೇಶಮಾಡಿ ಯುಧಿಷ್ಠಿರನನ್ನು ಆಶೀರ್ವದಿಸಿ ಅಲ್ಲಿಯೇ ಅಂತರ್ಹಿತರಾದರು.

ಯುಧಿಷ್ಠಿರನು ವ್ಯಾಸರಿಂದ ಮಹಾಮಂತ್ರದ ಉಪದೇಶ ಪಡೆದು, ಆ ಮಹಾಮಂತ್ರವನ್ನು ಸರ್ವದಾ ಮನಸ್ಸಿನಲ್ಲಿಯೇ ಧ್ಯಾನಮಾಡುತ್ತಾ, ಸಂಧ್ಯಾಕಾಲಗಳಲ್ಲಿ ಸಹಸ್ರಸಂಖ್ಯೆಯಲ್ಲಿ ಜಪಮಾಡುತ್ತಿದ್ದನು. ವ್ಯಾಸರ ಸಲಹೆಯಂತೆ ದ್ವೈತವನವನ್ನು ಬಿಟ್ಟು ಸರಸ್ವತೀನದಿಯ ತೀರದಲ್ಲಿದ್ದ ಕಾಮ್ಯಕವನಕ್ಕೆ ಯುಧಿಷ್ಠಿರನು ಪ್ರಯಾಣಮಾಡಿದನು.

ದೇವತೆಗಳ ಅಧಿಪತಿಯಾದ ಇಂದ್ರನನ್ನು ಮಹರ್ಷಿಗಳು ಅನುಸರಿಸಿ ಹೋಗುವಂತೆ–ವೇದ-ವೇದಾಂಗಪಾರಂಗತರಾದ ಬ್ರಾಹ್ಮಣರು ಯುಧಿಷ್ಠಿರನನ್ನು ಹಿಂಬಾಲಿಸಿದರು. ಕಾಮ್ಯಕವನದಲ್ಲಿ ಪರ್ಣಶಾಲೆಗಳನ್ನು ನಿರ್ಮಿಸಿ ನಿವಾಸಮಾಡಿದನಂತರ ಬ್ರಾಹ್ಮಣರು ಹೇಳುತ್ತಿದ್ದ ವೇದಗಳ ಶ್ರವಣ ಮತ್ತು ಧನುರ್ವಿದ್ಯೆಯ ಅಭ್ಯಾಸ–ಇವೇ ಪಾಂಡವರ ನಿತ್ಯಕ್ರಿಯೆಗಳಾಗಿದ್ದುವು. ಪಾಂಡವರು ವಿಷದಿಂದ ಲೇಪಿತವಾಗದಿರುವ ಬಾಣಗಳನ್ನು ಪ್ರಯೋಗಿಸಿ ಆಹಾರಕ್ಕಾಗಿ ಜಿಂಕೆಗಳನ್ನು ಬೇಟೆಯಾಡಿ ತರುತ್ತಿದ್ದರು. ತಂದ ಆಹಾರವನ್ನು ಮೊದಲು ದೇವತೆಗಳಿಗೂ, ಪಿತೃದೇವತೆಗಳಿಗೂ ನಿತ್ಯ-ನೈಮಿತ್ತಿಕವಾದ ಕರ್ಮಗಳ ಮೂಲಕ ನಿವೇದನಮಾಡಿ, ಬ್ರಾಹ್ಮಣರನ್ನು ತೃಪ್ತಿಪಡಿಸಿ ಅನಂತರದಲ್ಲಿ ತಾವೂ ಭೋಜನಮಾಡುತ್ತಿದ್ದರು."

ಇ೬ನೆಯ ಅಧ್ಯಾಯವು ಮುಗಿಯಿತು.

## ಇಂದ್ರಕೀಲಪರ್ವತಕ್ಕೆ ಅರ್ಜುನನ ಪ್ರಯಾಣ : ಇಂದ್ರದರ್ಶನ

ಪಾರಿಕ್ಷಿತ! ಈ ರೀತಿಯಲ್ಲಿ ಕೆಲವು ದಿನಗಳು ಕಳೆದುವು. ಯುಧಿಷ್ಠಿರನಿಗೆ ವ್ಯಾಸರು ಹೇಳಿದ್ದ ಮಾತುಗಳು ಸ್ಮರಣೆಗೆ ಬಂದುವು. ಯುಧಿಷ್ಠಿರನು ಅರ್ಜುನನನ್ನು ಏಕಾಂತಸ್ಥಳಕ್ಕೆ ಕರೆದೊಯ್ದು, ಅವನನ್ನು ಆದರದಿಂದ ತನ್ನ ಮುಂದೆ ಕುಳ್ಳಿರಿಸಿಕೊಂಡು ಮೈದಡವುತ್ತಾ ಮಂದಸ್ಮಿತನಾಗಿ ಕುಳಿತನು. ಅರ್ಜುನನನ್ನು ಕ್ಷಣಕಾಲ ದಿಟ್ಟಿಸಿ ನೋಡಿ, ಮುಹೂರ್ತಕಾಲ ವನವಾಸದ ವಿಷಯವನ್ನು ಚಿಂತಿಸಿ ತನ್ನ ಕರ್ತವ್ಯವನ್ನು ನಿಶ್ಚಯಿಸಿ, ಅರ್ಜುನನನ್ನು ಕುರಿತು ಮೃದುವಾದ ನುಡಿಗಳಿಂದ ಹೇಳಿದನು :

"ಭರತಕುಲಾವತಂಸನೇ! ಭೀಷ್ಮ-ದ್ರೋಣ-ಕೃಪ-ಕರ್ಣ-ಅಶ್ವತ್ಥಾಮರಲ್ಲಿ ಧನುರ್ವೇದವೇ ಮೂರ್ತಿಮತ್ತಾಗಿ ನೆಲೆಸಿದೆ. ಅವರೆಲ್ಲರೂ ಐಂದ್ರ-ವಾಯವ್ಯಾದಿ ದಿವ್ಯಾಸ್ತ್ರಗಳನ್ನೂ, ಬ್ರಹ್ಮಾಸ್ತ್ರವನ್ನೂ ತಿಳಿದಿರುವರು. ಬಾಣಗಳ ಗ್ರಹಣ-ಧಾರಣ-ಪ್ರಯೋಗಗಳಲ್ಲಿ ನಿಷ್ಣಾತರಾಗಿರುವರು. ದಿವ್ಯಾಸ್ತ್ರಗಳನ್ನು ಉಪಶಾಂತಗೊಳಿಸುವುದರಲ್ಲಿಯೂ ಸಂಪೂರ್ಣವಾದ ಪರಿಶ್ರಮವನ್ನೂ ಅವರು ಪಡೆದಿರುತ್ತಾರೆ. ಆಚಾರ್ಯರೆಂದು ಗೌರವಿಸಿ ಅವರೆಲ್ಲರನ್ನೂ ದುರ್ಯೋಧನನು ಸಂತೈಸಿ ಆದರಿಸುತ್ತಿದ್ದಾನೆ. ಸೈನ್ಯಾಧಿಪತಿಗಳನ್ನೂ ದುರ್ಯೋಧನನು ಕಾಲಕಾಲಕ್ಕೆ ಆದರಿಸಿ ಗೌರವಿಸುತ್ತಿದ್ದಾನೆ. ಅದಕ್ಕೆ ಪ್ರತಿಯಾಗಿ ಅವರೂ ಯಾವಾಗಲೂ ದುರ್ಯೋಧನನ ಸಂರಕ್ಷಣೆಯಲ್ಲಿಯೇ ನಿರತರಾಗಿದ್ದಾರೆ. ದುರ್ಯೋಧನನಿಂದ ಅನವರತವೂ ಗೌರವಿಸಲ್ಪಡುತ್ತಿರುವ ಅವರೆಲ್ಲರೂ ಸಮಯಗಳಲ್ಲಿ ತಮ್ಮ ಸಂಪೂರ್ಣ ಶಕ್ತಿಯನ್ನೂ ವಿನಿಯೋಗಿಸಿ (ಪ್ರಾಣಗಳ ಮೇಲಿನ ಆಸೆಯನ್ನೂ ತೊರೆದು) ದುರ್ಯೋಧನನ ರಕ್ಷಣೆಗೆ ಸಿದ್ಧರಾಗುವರೆಂಬುದರಲ್ಲಿ ಸಂಶಯವಿಲ್ಲ. ಅದರ ಜೊತೆಗೆ ಪ್ರಸಕ್ತಸಮಯದಲ್ಲಿ ನದೀ-ನದ-ಸರೋವರಗಳಿಂದಲೂ, ಅನೇಕಾನೇಕ ಖನಿಜಸಂಪತ್ತಿನಿಂದಲೂ, ಸಾವಿರಾರು ಗ್ರಾಮಗಳಿಂದಲೂ, ನೂರಾರು ಪಟ್ಟಣಗಳಿಂದಲೂ, ಹತ್ತಾರು ದೇಶಗಳಿಂದಲೂ ಕೂಡಿರುವ ಈ ಚಕ್ರಾಧಿಪತ್ಯವು ದುರ್ಯೋಧನನ ಆಡಳಿತಕ್ಕೆ ಸಂಪೂರ್ಣವಾಗಿ

ಒಳಪಟ್ಟಿದೆ. ರಾಜರಿಂದ ಕಪ್ಪ-ಕಾಣಿಕೆಗಳು ಯಥೇಚ್ಛವಾಗಿ ಬರುವುದರಿಂದ ದುರ್ಯೋಧನನಿಗೆ ತನ್ನ ಬಲವನ್ನು ಮತ್ತಷ್ಟು ಅಭಿವೃದ್ಧಿಪಡಿಸಲು ಹೆಚ್ಚು ಅನುಕೂಲಗಳಿವೆ. ಪ್ರಕೃತಸಂದರ್ಭದಲ್ಲಿ ನಮಗೆ ಪ್ರಿಯವಾದುದನ್ನು ಮಾಡಲು ನೀನೊಬ್ಬನೇ ಸಮರ್ಥನಾಗಿರುವೆ. ಯುದ್ಧಕಾಲವು ಸನ್ನಿಹಿತವಾದಲ್ಲಿ ಮೇಲೆ ಹೇಳಿದ ಮಹಾವೀರರನ್ನು ಎದುರಿಸಿ ನಮ್ಮನ್ನು ಸಂರಕ್ಷಿಸುವ ಭಾರವು ಸಂಪೂರ್ಣವಾಗಿ ನಿನ್ನದಾಗುತ್ತದೆ. ಅದಕ್ಕೆ ಬೇಕಾಗುವ ಸಾಧನಗಳ ಪ್ರಾಪ್ತಿಗೆ ಇದೇ ಸಮಯವೆಂದು ನಾನು ಭಾವಿಸುತ್ತೇನೆ.

ಅರ್ಜುನ! ಕೆಲವು ದಿನಗಳ ಹಿಂದೆ ಮಹರ್ಷಿಗಳಾದ ಕೃಷ್ಣದ್ವೈಪಾಯನರು ನಮ್ಮ ಆಶ್ರಮಕ್ಕೆ ಬಂದಿದ್ದರಲ್ಲವೇ? ಆ ಮಹಾಮಹಿಮರು ನನಗೆ 'ಪ್ರತಿಸ್ಮೃತಿ' ಎಂಬ ಮಹಾಮಂತ್ರವೊಂದನ್ನು ಉಪದೇಶಿಸಿರುತ್ತಾರೆ. ಆ ಮಹಾಮಂತ್ರದ ಪ್ರಭಾವದಿಂದ ತ್ರಿಜಗತ್ತುಗಳಲ್ಲಿಯೂ ನಡೆಯುವ ವಿದ್ಯಮಾನಗಳೆಲ್ಲವೂ ತಿಳಿಯುವುವು. ಆದುದರಿಂದ ಮನೋವಾಕ್ಕಾಯಗಳಲ್ಲಿ ಪರಿಶುದ್ಧನಾಗಿ ಆ ಮಹಾಮಂತ್ರವನ್ನು ನನ್ನಿಂದ ಪಡೆಯಲು ಸಿದ್ಧನಾಗು. ಈ ವಿದ್ಯೆಯಿಂದ ನಿನಗೆ ತ್ರಿಜಗತ್ತುಗಳಲ್ಲಿ ನಡೆಯುತ್ತಿರುವ ವಿಷಯಗಳೆಲ್ಲವೂ ವೇದ್ಯವಾಗುವುವು. ಆ ವಿದ್ಯೆಯ ಪ್ರಭಾವದಿಂದಲೇ ನಿನಗೆ ದೇವತೆಗಳೂ ಪ್ರಸನ್ನರಾಗುವರು. ಅರ್ಜುನ! ನನ್ನಿಂದ ಆ ಮಹಾಮಂತ್ರವನ್ನು ಉಪದೇಶಪಡೆದನಂತರ ನೀನು ಘೋರವಾದ ತಪಸ್ಸನ್ನು ಮಾಡಬೇಕು. ಯಾರಿಗೂ ನಿನ್ನ ಮಾರ್ಗವು ತಿಳಿಯದ ರೀತಿಯಲ್ಲಿ ನೀನು ಉತ್ತರದಿಕ್ಕಿಗೆ ಪ್ರಯಾಣಮಾಡಬೇಕು. ಧನುಷ್ಪಾಣಿಯಾಗಿ ಕವಚ-ಕುಂಡಲಗಳನ್ನೂ, ಬತ್ತಳಿಕೆಗಳನ್ನೂ ಧರಿಸಿದವನಾಗಿ ವ್ರತನಿಷ್ಠನಾಗಬೇಕು. ನಿನ್ನ ಉಗ್ರತಪಸ್ಸಿನಿಂದ ಇಂದ್ರನನ್ನು ಒಲಿಸಿಕೊಂಡು ಅವನಿಂದ ಸರ್ವಾಸ್ತ್ರಗಳನ್ನೂ ಪಡೆಯಬೇಕು. ಏಕೆಂದರೆ : ಈಗ ತ್ರಿಭುವನಗಳಲ್ಲಿರುವ ಸಕಲ ದಿವ್ಯಾಸ್ತ್ರಗಳೂ ಇಂದ್ರನೊಬ್ಬನಲ್ಲಿಯೇ ಕೇಂದ್ರೀಕೃತವಾಗಿವೆ. ವೃತ್ರಾಸುರನ ಉಪಟಳದಿಂದ ಭೀತರಾದ ದೇವತೆಗಳು ತಮ್ಮ ರಕ್ಷಣೆಗಾಗಿ ತಮ್ಮಲ್ಲಿದ್ದ ದಿವ್ಯಾಸ್ತ್ರಗಳೆಲ್ಲವನ್ನೂ ಇಂದ್ರನಿಗೆ ಉಪದೇಶಿಸಿದರು. ಆ ಮಹಾಸ್ತ್ರಗಳನ್ನು ಪಡೆದುದರಿಂದಲೇ ಇಂದ್ರನು ವೃತ್ರಾಸುರನನ್ನು ವಧಿಸಲು ಸಮರ್ಥನಾದನು. ಈ ಕಾರಣದಿಂದ ನೀನು

ಇಂದ್ರನೊಬ್ಬನನ್ನು ತಪಸ್ಸಿನಿಂದ ಪ್ರಸನ್ನನನ್ನಾಗಿ ಮಾಡಿಕೊಂಡೆಯಾದರೆ ಸಕಲಮಹಾಸ್ತ್ರಗಳೂ ನಿನಗೆ ಲಭಿಸುವುವು. ಶಕ್ರನು ಪ್ರಸನ್ನನಾದರೆ ಸಕಲಾಸ್ತ್ರಗಳನ್ನೂ ನಿನಗೆ ದಯಪಾಲಿಸುವನು. ಆದುದರಿಂದ ನೀನೀಗಲೇ ದೀಕ್ಷಾಬದ್ಧನಾಗಿ ದೃಢವ್ರತನಾಗಿ ಪುರಂದರನ ದರ್ಶನಕ್ಕಾಗಿ ಹೋಗಿ ಬಾ."

ಯುಧಿಷ್ಠಿರನ ಮಾತನ್ನು ಕೇಳಿ ಸಂತುಷ್ಟನಾದ ಅರ್ಜುನನು ಪರಿಶುದ್ಧನಾಗಿ ಬಂದು ಯುಧಿಷ್ಠಿರನ ಮುಂದೆ ಕುಳಿತನು. ಯುಧಿಷ್ಠಿರನು ಪ್ರಣವಪೂರ್ವಕವಾಗಿ 'ಪ್ರತಿಸ್ಮೃತಿ' ಮಹಾಮಂತ್ರವನ್ನು ಜಿತೇಂದ್ರಿಯನಾದ ಅರ್ಜುನನಿಗೆ ಯಥಾವಿಧಿಯಾಗಿ ಉಪದೇಶಿಸಿ ಅದರ ಪುನಶ್ಚರಣಕ್ರಮವನ್ನೂ ಹೇಳಿ ದೀಕ್ಷಾಬದ್ಧನಾಗಿ ತಪಶ್ಚರಣೆಗೆ ಹೋಗಿಬರಲು ಆದೇಶವನ್ನಿತ್ತನು. ಅರ್ಜುನನು ಯುಧಿಷ್ಠಿರನಿಗೆ ನಮಸ್ಕರಿಸಿ ಅವನ ಅನುಮತಿಯನ್ನು ಪಡೆದು, ಗಾಂಡೀವವನ್ನೂ–ಅಕ್ಷಯವಾದ ಬತ್ತಳಿಕೆಗಳನ್ನೂ–ಕವಚವನ್ನೂ–ಗೋಧಾಂಗುಲಿತ್ರಗಳನ್ನೂ ಧರಿಸಿದವನಾಗಿ, ಬ್ರಾಹ್ಮಣರ ನಿರ್ದೇಶನದಂತೆ ಯಜ್ಞೇಶ್ವರನಿಗೆ ಆಹುತಿಯನ್ನರ್ಪಿಸಿ, ಬ್ರಾಹ್ಮಣರಿಗೆ ಯಥೇಷ್ಟವಾಗಿ ದಕ್ಷಿಣೆಗಳನ್ನು ಕೊಟ್ಟು ಅವರಿಂದ ಸ್ವಸ್ತಿವಾಚನಪೂರ್ವಕವಾದ ಆಶೀರ್ವಾದಗಳನ್ನು ಪಡೆದು ಹೊರಡಲು ಉದ್ಯುಕ್ತನಾದನು. ಧನುರ್ಧರನಾದ ಅರ್ಜುನನು ಧಾರ್ತರಾಷ್ಟ್ರರ ಸಂಹಾರವನ್ನು ನೆನೆದು ಒಮ್ಮೆ ನಿಟ್ಟುಸಿರುಬಿಟ್ಟು, ಕ್ಷಣಕಾಲ ಆಕಾಶವನ್ನವಲೋಕಿಸಿ ಮುಂದೆ ಹೊರಟನು. ಕುಂತಿಯ ಮಗನು ಹೊರಟಾಗ ಸುತ್ತಲೂ ಇದ್ದ ಬ್ರಾಹ್ಮಣರೂ ಮತ್ತು ಅಗೋಚರವಾದ ಭೂತಗಣಗಳೂ, ಸಿದ್ಧರೂ "ಅರ್ಜುನ! ನಿನ್ನ ಮನದಲ್ಲಿರುವ ಅಭಿಲಾಷೆಯನ್ನು ನೀನು ಬಹುಶೀಘ್ರದಲ್ಲಿಯೇ ಪಡೆಯುವೆ"–ಎಂದು ಹೇಳಿದರು :

**'ಸಂಸಾಧಯಸ್ವ ಕೌನ್ತೇಯ ಧ್ರುವೋಽಸ್ತು ವಿಜಯಸ್ತವ'**
'ಸಾಧನೆಮಾಡು. ಹೋಗಿಬಾ, ಕೌಂತೇಯ! ನಿನಗೆ ಶಾಶ್ವತವಾದ ವಿಜಯವು ಉಂಟಾಗಲಿ'–ಎಂದು ಬ್ರಾಹ್ಮಣರು ಆಶೀರ್ವಾದಮಾಡಿದರು. ಶಾಲವೃಕ್ಷದಂತಿರುವ ಹೆಗಲು ಮತ್ತು ತೊಡೆಗಳಿಂದ ಕೂಡಿದ್ದ ಅರ್ಜುನನು ಆಶ್ರಮದಲ್ಲಿದ್ದ ಸಕಲರ ಹೃದಯಗಳನ್ನೂ ತನ್ನೊಡನೆ ಸೆಳೆದುಕೊಂಡು ಹೊರಟಿದ್ದನ್ನು ಕಂಡು ದ್ರೌಪದಿಯು ಹೇಳಿದಳು :

**ಯತ್ತೇ ಕುನ್ತೀ ಮಹಾಬಾಹೋ ಜಾತಸ್ಯೈಚ್ಛದ್ಧನಂಜಯ ।**
**ತತ್ತೇಽಸ್ತು ಸರ್ವಂ ಕೌನ್ತೇಯ ಯಥಾ ಚ ಸ್ವಯಮಿಚ್ಛಸಿ ॥೨೪॥**

"ಮಹಾಬಾಹುವೇ! ಧನಂಜಯ! ನೀನು ಹುಟ್ಟಿದಾಗ ಕುಂತಿಯು ನಿನ್ನಿಂದ ಏನಾಗಬೇಕೆಂಬುದನ್ನು ಅಭಿಲಾಷಿಸಿದ್ದಳೋ ಮತ್ತು ಇಂದು ನೀನು ಯಾವ ಅಭಿಲಾಷೆಯಿಂದ ಪ್ರಯಾಣಸಿದ್ಧನಾಗಿರುವೆಯೋ–ಆ ಎರಡೂ ಫಲಿತವಾಗಲಿ.

**ಮಾಸ್ಮಾಕಂ ಕ್ಷತ್ರಿಯಕುಲೇ ಜನ್ಮ ಕಶ್ಚಿದವಾಪ್ನುಯಾತ್ ।**
**ಬ್ರಾಹ್ಮಣೇಭ್ಯೋ ನಮೋ ನಿತ್ಯಂ ಯೇಷಾಂ ಭೈಕ್ಷ್ಯೇಣ ಜೀವಿಕಾ ॥೨೫॥**

ಅರ್ಜುನ! ನಿಶ್ಚಯವಾಗಿಯೂ ಇನ್ನು ಮುಂದೆ ನಮ್ಮಲ್ಲಿ ಯಾರಿಗೂ ಕ್ಷತ್ರಿಯವಂಶದಲ್ಲಿ ಜನ್ಮಪ್ರಾಪ್ತಿಯಾಗುವುದು ಬೇಡ. ಯಾವ ವಿಧವಾದ ಮನಃಕ್ಲೇಶ-ಕಾಯಕ್ಲೇಶಗಳೂ ಇಲ್ಲದೇ ಕೇವಲ ಭಿಕ್ಷಾಟನೆಯಿಂದ ಜೀವಿಸುವ ಬ್ರಾಹ್ಮಣರಿಗೆ ನನ್ನ ಅನಂತಾನಂತ ನಮಸ್ಕಾರಗಳಿರಲಿ. ನನಗೆ ಅತ್ಯಂತ ದುಃಖದ ಪ್ರಸಂಗವು ಯಾವುದೆಂದರೆ: ದುಷ್ಟನಾದ ದುರ್ಯೋಧನನು ನನ್ನನ್ನು ತುಂಬಿದ ಸಭೆಯಲ್ಲಿ '**ಗೌಃ**' (ಹಸುವಿನಂತೆ ದ್ರೌಪದಿಯು ಅನೇಕರಿಂದ ಉಪಭೋಗ್ಯಳು) ಎಂದು ಸಂಬೋಧಿಸಿದುದು. ಅವನಾಡಿದ ತೀಕ್ಷ್ಣವಾದ ಬಾಣಸದೃಶವಾದ ಆ ಮಾತು ಇಂದೂ ನನ್ನ ಹೃದಯವನ್ನು ಚುಚ್ಚುತ್ತಿದೆ. ಕೇವಲ '**ಗೌಃ**' ಎಂದು ಸಂಬೋಧಿಸಿದುದು ಮಾತ್ರವಲ್ಲದೇ–ಇನ್ನೂ ಅನುಚಿತವಾದ ಹಲವಾರು ಮಾತುಗಳನ್ನೂ ಆ ದುಷ್ಟನಾಡಿದನು. ಅವನ ಮಾತುಗಳನ್ನು ಪ್ರತಿಕ್ಷಣದಲ್ಲಿಯೂ ಸ್ಮರಿಸಿ ನಾನು ಅನುಭವಿಸುತ್ತಿರುವ ದಾರುಣವೇದನೆಗಿಂತಲೂ ನಿನ್ನ ಅಗಲಿಕೆಯಿಂದುಂಟಾಗುವ ವೇದನೆಯು ನೂರು ಪಾಲು ಹೆಚ್ಚಿನದು. ನೀನಿಲ್ಲದಿರುವಾಗ ನಿನ್ನ ಸೋದರರು ನೀನು ಹಿಂದೆ ಮಾಡಿದ ಸಾಹಸಕಾರ್ಯಗಳನ್ನು ನೆನೆಯುತ್ತಿರುತ್ತಾರೆ. ಅದರಿಂದ ನನ್ನ ವೇದನೆಯು ಮತ್ತೂ ಉಲ್ಬಣಿಸುತ್ತದೆ. ಪಾರ್ಥ! ನೀನು ನಮ್ಮನ್ನು ಅಗಲಿರುವ ಪರ್ಯಂತವೂ ನಾವು ಯಾವ ವಿಧವಾದ ಸುಖ-ಸಂತೋಷಗಳನ್ನೂ ಅನುಭವಿಸಲಾರೆವು. ಜೀವನವೇ ನಮಗೆ ಬೇಸರವಾಗು

ವುದು. ಕುಂತೀಪುತ್ರ! ನಮ್ಮ ಸುಖ, ದುಃಖ, ಜೀವಿತ, ಮರಣ, ಸಾಮ್ರಾಜ್ಯ ಮತ್ತು ಐಶ್ವರ್ಯ–ಇವೆಲ್ಲವೂ ನಿನ್ನನ್ನೇ ಅವಲಂಬಿಸಿರುವುವು. ಭಾರತ! ನಿನ್ನ ಕಾರ್ಯವು ಸಾಧಿತವಾಗಲೆಂದು ನಿನಗೆ ನಾನು ಶುಭಾಶಯಗಳನ್ನು ಕೋರುತ್ತೇನೆ. ನೀನು ಬಲಿಷ್ಠರಿಗೆ ವಿರುದ್ಧವಾದ ಕಾರ್ಯವನ್ನು ಮಾಡಬೇಡ. ಬಲಿಷ್ಠರು ನಿನಗೆ ವಿರೋಧಿಗಳಾಗದಿರಲಿ. ನಿನ್ನ ಕಾರ್ಯದ ಮಧ್ಯದಲ್ಲಿ ಯಾವ ವಿಘ್ನಗಳೂ ಬಾರದೇ ನೀನು ಮಹಾಸ್ತ್ರಗಳನ್ನು ಪಡೆದುಬರುವಂತಾಗಲಿ.

**ನಮೋ ಧಾತ್ರೇ ವಿಧಾತ್ರೇ ಚ ಸ್ವಸ್ತಿ ಗಚ್ಛ ಹ್ಯನಾಮಯಮ್ ।**
**ಹ್ರೀಃ ಶ್ರೀಃ ಕೀರ್ತಿರ್ದ್ಯುತಿಃ ಪುಷ್ಟಿರುಮಾ ಲಕ್ಷ್ಮೀಃ ಸರಸ್ವತೀ ।**
**ಇಮಾ ವೈ ತವ ಪಾನ್ಥಸ್ಯ ಪಾಲಯನ್ತು ಧನಂಜಯ ॥೩೩॥**

**ಜ್ಯೇಷ್ಠಾಪಚಾಯೀ ಜ್ಯೇಷ್ಠಸ್ಯ ಭ್ರಾತುರ್ವಚನಕಾರಕಃ ।**
**ಪ್ರಪದ್ಯೇಽಹಂ ವಸೂನ್ರುದ್ರಾನಾದಿತ್ಯಾನ್ಸಮರುದ್ಗಣಾನ್ ॥೩೪॥**

**ವಿಶ್ವೇದೇವಾಂಸ್ತಥಾ ಸಾಧ್ಯಾಞ್ಶಾನ್ತ್ಯರ್ಥಂ ಭರತರ್ಷಭ ।**
**ಸ್ವಸ್ತಿ ತೇಽಸ್ತ್ವಾನ್ತರಿಕ್ಷೇಭ್ಯಃ ಪಾರ್ಥಿವೇಭ್ಯಶ್ಚ ಭಾರತ ।**
**ದಿವ್ಯೇಭ್ಯಶ್ಚೈವ ಭೂತೇಭ್ಯೋ ಯೇ ಚಾನ್ಯೇ ಪರಿಪನ್ಥಿನಃ ॥೩೫॥**

ನಿನಗೆ ಯಾವ ವಿಧವಾದ ಅಪಾಯಗಳೂ ಸಂಭವಿಸದಿರಲಿ–ಎಂದು ಧಾತೃ-ವಿಧಾತೃಗಳಿಗೆ ಮನಸಾರ ನಮಿಸಿ ಪ್ರಾರ್ಥಿಸುವೆನು. ನಿನಗೆ ಮಂಗಳ ವುಂಟಾಗಲಿ. ಧರ್ಮಿಷ್ಠನಾದ ಹಿರಿಯಣ್ಣನ ಆಜ್ಞಾಪಾಲನೆಯಲ್ಲಿಯೇ ಯಾವಾಗಲೂ ನಿರತನಾಗಿರುವ ನಿನ್ನ ಮಾರ್ಗವನ್ನು ಹ್ರೀ, ಶ್ರೀ, ಕೀರ್ತಿ, ಧೃತಿ, ಪುಷ್ಟಿ, ಉಮಾ, ಲಕ್ಷ್ಮೀ ಮತ್ತು ಸರಸ್ವತಿಯರು ಸುಗಮಗೊಳಿಸಲಿ. ನಿನ್ನ ಯೋಗಕ್ಷೇಮಕ್ಕಾಗಿ ನಾನು ಅಷ್ಟವಸುಗಳನ್ನೂ, ಏಕಾದಶರುದ್ರರನ್ನೂ, ದ್ವಾದಶಾದಿತ್ಯರನ್ನೂ, ಸಪ್ತಮರುತ್ತುಗಳನ್ನೂ, ವಿಶ್ವೇದೇವತೆಗಳನ್ನೂ ಮತ್ತು ಸಾಧ್ಯರನ್ನೂ ಪೂಜಿಸಿ ನಮಿಸುವೆನು. ಭೂಮಿ, ಆಕಾಶ ಮತ್ತು ಸ್ವರ್ಗ ಗಳಲ್ಲಿರಬಹುದಾದ ಇತರ ಭೂತಗಳಿಂದಲೂ ನಿನಗೆ ಯಾವ ವಿಧವಾದ ತೊಂದರೆಯೂ ಉಂಟಾಗದಿರಲಿ.”

ದ್ರೌಪದಿಯ ಕಣ್ಣುಗಳು ಕಂಬನಿದುಂಬಿದುವು. ಅವಳು ಆಶ್ರಮದೊಳಕ್ಕೆ ಹೊರಟುಹೋದಳು.

ಅನಂತರದಲ್ಲಿ ಅರ್ಜುನನು ಯುಧಿಷ್ಠಿರ-ಭೀಮರಿಗೆ ನಮಸ್ಕರಿಸಿ ನಕುಲ-ಸಹದೇವರನ್ನು ಆಲಿಂಗಿಸಿ, ಪುರೋಹಿತರಾದ ಧೌಮ್ಯರಿಗೆ ನಮಸ್ಕರಿಸಿ ಆಶೀರ್ವಚನಪಡೆದು, ಧನುಷ್ಪಾಣಿಯಾಗಿ ಆಶ್ರಮದಿಂದ ಹೊರಹೊರಟನು. ಮಹೇಂದ್ರನ ದರ್ಶನಾರ್ಥವಾಗಿ ಹೊರಟ ಮಹಾಪರಾಕ್ರಮಿಯಾದ ಅರ್ಜುನನ ಮಾರ್ಗದಲ್ಲಿದ್ದ ಪ್ರಾಣಿಗಳೂ, ಭೂತಗಣಗಳೂ ಪಕ್ಕಕ್ಕೆ ಸರಿದು ನಿಂತುವು. (ಶಕುನಶಾಸ್ತ್ರದ ಪ್ರಕಾರ ಪ್ರಯಾಣಹೊರಟ ಕಾಲದಲ್ಲಿ ಪ್ರಾಣಿಗಳು ಅಡ್ಡಲಾಗಿ ಹೋಗುವುದು, ಎದುರಾಗಿ ಬರುವುದು ಅಶುಭ ಸೂಚಕವಾಗಿರುತ್ತದೆ.) ಅರ್ಜುನನು ಋಷಿ-ಮಹರ್ಷಿಗಳಿಂದ ಸೇವಿಸಲ್ಪಡುತ್ತಿದ್ದ ಅನೇಕಪರ್ವತಗಳನ್ನು ದಾಟಿ, ವಾಯುವೇಗ-ಮನೋವೇಗಗಳನ್ನೂ ಮೀರಿದ ವೇಗದಿಂದ ಪ್ರಯಾಣಮಾಡಿ ಒಂದೇ ದಿನದ ಅವಧಿಯಲ್ಲಿ ಹಿಮವತ್ಪರ್ವತವನ್ನು ಸೇರಿದನು. ಅಲ್ಲಿಂದ ಮುಂದೆ ಪ್ರಯಾಣಮಾಡುತ್ತಾ ಗಂಧಮಾದನಪರ್ವತಕ್ಕೆ ಹೋಗಿ, ಅಲ್ಲಿದ್ದ ಮಹರ್ಷಿಗಳನ್ನು ಸಂದರ್ಶಿಸಿ, ಅನಂತರ ಅನೇಕಾನೇಕ ಹಳ್ಳ-ತಿಟ್ಟುಗಳನ್ನು ದಾಟಿ, ಹಗಲು-ರಾತ್ರಿಗಳೆಂಬ ವಿವೇಚನೆಯಿಲ್ಲದೆ ಇಂದ್ರನನ್ನು ಕಾಣಬೇಕೆಂಬ ಏಕೈಕಧ್ಯೇಯದಿಂದ ನಡೆದುಹೋಗುತ್ತಿದ್ದನು. ಕಾರ್ಯೋನ್ಮುಖನಾಗಿದ್ದ ಅವನಿಗೆ ಆಯಾಸದ ಅರಿವೇ ಉಂಟಾಗಲಿಲ್ಲ. ಕೆಲವು ದಿನಗಳು ಇದೇ ರೀತಿಯಲ್ಲಿ ನಡೆದು ಇಂದ್ರಕೀಲವನ್ನು ಸೇರಿ ಅಲ್ಲಿ ಕ್ಷಣಕಾಲ ನಿಂತನು. ಆ ಸಮಯಕ್ಕೆ ಸರಿಯಾಗಿ 'ತಿಷ್ಠ' 'ನಿಲ್ಲು' ಎಂದು ಅಂತರಿಕ್ಷದಲ್ಲಿ ಯಾರೋ ಹೇಳಿದಂತಾಯಿತು. ಅನಿರೀಕ್ಷಿತವಾದ ಆ ಮಾತನ್ನು ಕೇಳಿ ಅರ್ಜುನನು ಸುತ್ತಲೂ ನೋಡಿದನು. ಅನತಿದೂರದಲ್ಲಿ ಪಿಂಗಲವರ್ಣದ ಜಟೆಯನ್ನು ಧರಿಸಿದ್ದ ಮತ್ತು ಬ್ರಹ್ಮತೇಜಸ್ಸಿನಿಂದ ಪ್ರಜ್ವಲಿಸುತ್ತಿದ್ದ ಕೃಶಾಂಗನಾದ ಮಹರ್ಷಿಯೊಬ್ಬನು ವೃಕ್ಷದ ಬುಡದಲ್ಲಿ ಮಂದಸ್ಮಿತನಾಗಿ ಕುಳಿತಿರುವುದನ್ನು ಸವ್ಯಸಾಚಿಯು ಕಂಡನು. ತನ್ನನ್ನು ನೋಡಿದ ಅರ್ಜುನನನ್ನು ಕುರಿತು ತಪಸ್ವಿಯು ಹೇಳಿದನು :

"ಮಗು! ನೀನು ಯಾರು? ಧನುಷ್ಪಾಣಿಯಾಗಿ, ಕವಚ-ಕುಂಡಲ

ಗಳನ್ನೂ, ಕತ್ತಿಯನ್ನೂ ಧರಿಸಿರುವುದನ್ನು ನೋಡಿದರೆ ನೀನು ಕ್ಷತ್ರಿಯ ಕುಲೋತ್ಪನ್ನನಂತೆ ಕಾಣುತ್ತಿರುವೆ. ಆದರೆ ಈ ಸ್ಥಳದಲ್ಲಿ ಆಯುಧಪಾಣಿ ಯಾಗಿರುವ ಅವಶ್ಯಕತೆಯೇ ಇಲ್ಲ. ಕಾಮ-ಕ್ರೋಧಗಳನ್ನೂ, ಸುಖ-ದುಃಖಗಳನ್ನೂ ತೊರೆದ ಶಾಂತಿಪ್ರಿಯರಾದ ಬ್ರಾಹ್ಮಣರಿಗೆ ಋಷಿ-ಮಹರ್ಷಿ ಗಳಿಗೆ ಇದು ನಿವಾಸಸ್ಥಾನವಾಗಿದೆ. ಆದುದರಿಂದ ಇಲ್ಲಿ ನಿನ್ನ ಧನುಸ್ಸಿನಿಂದ ಯಾವ ಪ್ರಯೋಜನವೂ ಇಲ್ಲ ಮತ್ತು ಇಲ್ಲಿ ಯಾವ ವಿಧವಾದ ಘರ್ಷಣೆಗೂ ಅವಕಾಶವೇ ಇಲ್ಲ. ಆದುದರಿಂದ ನೀನೀಗಲೇ ನಿನ್ನ ಧನುರ್ಬಾಣಗಳನ್ನು ವರ್ಜಿಸುವವನಾಗು. ನೀನು ಮಹಾಪರಾಕ್ರಮಿಯೆಂಬುದರಲ್ಲಿ ಸಂಶಯವೇ ಇಲ್ಲ. (ಮಾನವರಲ್ಲಿ ಯಾರಿಗೂ ಇಲ್ಲಿಗೆ ಬರುವ ಸಾಮರ್ಥ್ಯವಿರುವುದಿಲ್ಲ.")

(ಈ ರೀತಿಯಲ್ಲಿ ಬ್ರಹ್ಮತೇಜಸ್ಸಿನಿಂದ ಪ್ರಜ್ವಲಿಸುತ್ತಿದ್ದ ಬ್ರಾಹ್ಮಣನು ನಗುತ್ತಿರುವಂತೆ ತೋರ್ಪಡಿಸಿಕೊಳ್ಳುತ್ತಾ ಬಾರಿ-ಬಾರಿಗೂ ಅರ್ಜುನನಿಗೆ ಕ್ಷತ್ರಿಯಧರ್ಮವನ್ನು ವಿಸರ್ಜಿಸಿ, ಬ್ರಹ್ಮನಿಷ್ಠನಾಗುವಂತೆ ಹೇಳುತ್ತಿದ್ದನು. ಆದರೆ ಅರ್ಜುನನು ಬ್ರಹ್ಮಸಾಕ್ಷಾತ್ಕಾರಕ್ಕಾಗಿ ಬಂದವನಲ್ಲ. ಇಂದ್ರನಿಂದ ಮಹಾಸ್ತ್ರಗಳನ್ನು ಪಡೆಯುವ ಸಲುವಾಗಿ ಬಂದಿರುವನಲ್ಲವೇ? ಬ್ರಹ್ಮ ಸಾಕ್ಷಾತ್ಕಾರವೆಂಬುದು ಸಕಲಸೌಭಾಗ್ಯಗಳಿಗಿಂತಲೂ ಮಿಗಿಲಾದ ಸೌಭಾಗ್ಯ ವಾದರೂ–ಅರ್ಜುನನಿಗದು ಅಪ್ರಾರ್ಥಿತವಾಗಿ ಪ್ರಾಪ್ತವಾಗುವುದಾಗಿದ್ದರೂ– ಪ್ರಕೃತಸಂದರ್ಭದಲ್ಲಿ ಕರ್ತವ್ಯನಿಷ್ಠನಾದ ಅರ್ಜುನನಿಗದು ಬೇಡವಾಯಿತು.)

ಅರ್ಜುನನು ತನ್ನ ದೃಢನಿಶ್ಚಯವನ್ನು ಬಿಡಲಿಲ್ಲ ; ಧೈರ್ಯಗೆಡಲಿಲ್ಲ. ಅದರಿಂದ ಸಂತುಷ್ಟನಾದ ಬ್ರಾಹ್ಮಣನು ನಸುನಗುತ್ತಾ ಅರ್ಜುನನನ್ನು ಕುರಿತು ಹೇಳಿದನು :

"ಶತ್ರುನಿಷೂದನ! ನಿನಗೆ ಮಂಗಳವಾಗಲಿ. ನಾನೇ ಇಂದ್ರನು. ನಿನ್ನ ಕರ್ತವ್ಯನಿಷ್ಠೆಯನ್ನು ಪರೀಕ್ಷಿಸಿ ಪ್ರೀತನಾಗಿದ್ದೇನೆ. ನಿನಗೆ ಬೇಕಾದ ವರಗಳನ್ನು ಕೇಳು. ಕೊಡಲು ಸಿದ್ಧನಾಗಿರುವೆನು."

ಅರ್ಜುನನು ತಪಸ್ಸುಮಾಡಿ ಒಲಿಸಿಕೊಳ್ಳಬೇಕೆಂದಿದ್ದ ಮಹೇಂದ್ರನು

ತಾನಾಗಿಯೇ ಅರ್ಜುನನ ಸಮೀಪಕ್ಕೆ ಬಂದನೆಂದರೆ ಅರ್ಜುನನಿಗೆ ಎಷ್ಟೊಂದು ಸಂತಸವಾಗಿರಬಹುದು!

ಅರ್ಜುನನ ಕಣ್ಣುಗಳಿಂದ ಆನಂದಬಾಷ್ಪಗಳು ಉದುರಿದುವು. ನತಶಿರನಾಗಿ, ಕೈಜೋಡಿಸಿ ಮಹೇಂದ್ರನಿಗೆ ಹೇಳಿದನು :

"ಮಹಾನುಭಾವ! ನಾನು ನಿನ್ನಿಂದ ಸಕಲವಿಧವಾದ ಅಸ್ತ್ರಗಳ ಉಪದೇಶವನ್ನು ಪಡೆಯಲು ಬಂದಿರುವೆನು. ದಯಮಾಡಿ ಅಂತಹ ವರವನ್ನು ದಯಪಾಲಿಸು."

ಇಂದ್ರನು ನಸುನಗುತ್ತಾ ಅರ್ಜುನನನ್ನು ಕುರಿತು ಹೇಳಿದನು :

"ಅರ್ಜುನ! ಅಸತ್ಪುರುಷರಿಂದ ಅಗಮ್ಯವಾದ ಈ ಪುಣ್ಯಭೂಮಿಯನ್ನು ಸೇರಿರುವ ನಿನಗೆ ಅಸ್ತ್ರಗಳಿಂದ ಆಗುವ ಪ್ರಯೋಜನವೇನು? ಉತ್ತಮಲೋಕಗಳ ಪ್ರಾಪ್ತಿಗಾಗಿಯೇ ಮಾನವರು ಅನೇಕ ಯಜ್ಞ-ಯಾಗಾದಿಗಳನ್ನು ಮಾಡಿ ಬಹಳ ಕಷ್ಟದಿಂದ ಪೂತಾತ್ಮರಾಗುವರು. ನೀನು ಈ ಕ್ಷೇತ್ರಕ್ಕೆ ಆಗಮಿಸಿದ ಮಾತ್ರದಿಂದಲೇ ಪೂತಾತ್ಮನಾಗಿರುವೆ. ಈ ಕ್ಷೇತ್ರದ ಮಹತ್ತ್ವವೇ ಅಂತಹುದು. ಅನೇಕ ಸಹಸ್ರವರ್ಷಗಳ ಪರ್ಯಂತವೂ ಅನುಭವಿಸಬಹುದಾದ ಉತ್ತಮಲೋಕಗಳನ್ನು ಕೇಳು, ಕೊಡುವೆನು."

ಇಂದ್ರನ ಮಾತಿಗೆ ಪ್ರತ್ಯುತ್ತರವಾಗಿ ಅರ್ಜುನನು ಹೇಳಿದನು :

**ನ ಲೋಭಾನ್ನ ಪುನಃ ಕಾಮಾನ್ನ ದೇವತ್ವಂ ಪುನಃ ಸುಖಮ್ ।**
**ನ ಚ ಸರ್ವಾಮರೈಶ್ವರ್ಯಂ ಕಾಮಯೇ ತ್ರಿದಶಾಧಿಪ ॥೫೪॥**

**ಭ್ರಾತೄಂಸ್ತಾನ್ವಿಪಿನೇ ತ್ಯಕ್ತ್ವಾ ವೈರಮಪ್ರತಿಯಾತ್ಯ ಚ ।**
**ಅಕೀರ್ತಿಂ ಸರ್ವಲೋಕೇಷು ಗಚ್ಛೇಯಂ ಶಾಶ್ವತೀಃ ಸಮಾಃ ॥೫೫॥**

"ಮಹೇಂದ್ರ! ಯಾವುದೇ ವಿಧವಾದ ಲೋಭದಿಂದಲೂ ನಾನಿಲ್ಲಿಗೆ ಬರಲಿಲ್ಲ. ನನಗೆ ಉತ್ತಮಲೋಕಗಳನ್ನು ಅನುಭವಿಸಬೇಕೆನ್ನುವ ಕಾಮನೆಯೂ ಇಲ್ಲ. ನನಗೆ ದೇವತ್ವವೂ ಬೇಕಾಗಿಲ್ಲ. ಅದರಿಂದ ಪ್ರಾಪ್ತವಾಗುವ ಸುಖವೂ ಬೇಡ. ದೇವತೆಗಳಿಂದು ಅನುಭವಿಸುತ್ತಿರುವ ಸಕಲೋಪ-

ಭೋಗವಸ್ತುಗಳನ್ನು ಕೊಡುವೆನೆಂದರೂ ನನಗದು ಬೇಡ. ಮಹೇಂದ್ರ! ಕಾಡಿನಲ್ಲಿ ನನ್ನ ಸಹೋದರರನ್ನು ಬಿಟ್ಟು ಬಂದಿರುವ ನಾನು ಶತ್ರುಗಳ ಮೇಲಿನ ಸೇಡನ್ನೂ ತೀರಿಸಿಕೊಳ್ಳದೆ ನಿನ್ನ ವರಪ್ರಸಾದದಿಂದ ಸ್ವರ್ಗದಲ್ಲಿ ಸುಖೋಪಭೋಗಗಳನ್ನು ಅನುಭವಿಸುತ್ತಾ ಸರ್ವಲೋಕಗಳಲ್ಲಿಯೂ 'ಭ್ರಾತೃದ್ರೋಹಿ' ಎಂಬ ದುಷ್ಕೀರ್ತಿಯನ್ನು ಪಡೆಯಲೇ?"

ಅರ್ಜುನನ ಕರ್ತವ್ಯನಿಷ್ಠೆಗೆ ಸುಪ್ರೀತನಾದ ಇಂದ್ರನು ಅರ್ಜುನನನ್ನು ಸಂತೈಸುತ್ತಾ ಹೇಳಿದನು :

"ಮಗು! ತ್ರಿಶೂಲಿಯಾದ, ಸಕಲಚರಾಚರಗಳಿಗೂ ಸ್ವಾಮಿಯಾದ, ತ್ರಿಲೋಚನನಾದ ಪರಶಿವನನ್ನು ಯಾವಾಗ ನೀನು ನೋಡಲು ಸಮರ್ಥ ನಾಗುವೆಯೋ–ಆಗ ನಾನು ನನ್ನಲ್ಲಿರುವ ಸಕಲದಿವ್ಯಾಸ್ತ್ರಗಳನ್ನೂ ಉಪದೇಶಿಸುವೆನು. ಆದುದರಿಂದ ನೀನೀಗಲೇ ದೇವದೇವನಾದ ಪರಶಿವ ನನ್ನು ಧ್ಯಾನ-ಧಾರಣ-ತಪಸ್ಸುಗಳಿಂದ ಸಾಕ್ಷಾತ್ಕರಿಸಲು ಯತ್ನಿಸು. ಆ ಮಹಾನುಭಾವನ ಸಂದರ್ಶನವಾದನಂತರವೇ ನಿನ್ನ ಸಕಲವಾದ ಅಭಿಲಾಷೆ ಗಳೂ ನೆರವೇರುವುವು. ಅನಂತರ ಸ್ವರ್ಗಕ್ಕೆ ಬರುವೆಯಂತೆ."

ಈ ರೀತಿಯಾಗಿ ಇಂದ್ರನು ಅರ್ಜುನನಿಗೆ ತಿಳಿಯಹೇಳಿ ಅಂತರ್ಧಾನ ಹೊಂದಿದನು. ಅರ್ಜುನನು ಇಂದ್ರನು ಹೇಳಿದಂತೆ ಪರಶಿವನನ್ನು ಸಂದರ್ಶಿ ಸುವ ಸಲುವಾಗಿ ತಪಸ್ಸಿನಲ್ಲಿ ನಿರತನಾದನು."

ಖ೦ನೆಯ ಅಧ್ಯಾಯವು ಮುಗಿಯಿತು.

ಖ೮ನೆಯ ಅಧ್ಯಾಯ ಕೈರಾತಪರ್ವ

## ಅರ್ಜುನನ ಉಗ್ರತಪಸ್ಸು : ಶಂಕರನಲ್ಲಿ ಋಷಿಗಳ ಮೊರೆ

ದೈನಂದಿನ ಯಜ್ಞ-ಜಪಾದಿ ಪ್ರಕ್ರಿಯೆಗಳೆಲ್ಲವೂ ಮುಗಿದನಂತರ ವೈಶಂಪಾಯನರು ಮಹಾಭಾರತದ ಕಥಾಪ್ರವಚನಕ್ಕಾಗಿ ಕುಳಿತಿದ್ದರು. ಜನಮೇಜಯನೂ ಪರಿವಾರಸಮೇತನಾಗಿ–ಅರ್ಜುನನು ಪರಮೇಶ್ವರನನ್ನು ಒಲಿಸಿಕೊಂಡ ಪವಿತ್ರತಮವಾದ, ಪಾಪಹರವಾದ ಉಪಾಖ್ಯಾನವನ್ನು ಕೇಳುವ ಕುತೂಹಲದಿಂದ ಕುಳಿತಿದ್ದನು. ಸಂಪ್ರದಾಯಾನುಸಾರವಾಗಿ

ಮಂಗಳಶ್ಲೋಕಪಠನವಾದನಂತರ ಜನಮೇಜಯನು ವೈಶಂಪಾಯನರನ್ನು ಕೇಳಿದನು :

“ಪೂಜ್ಯರೇ! ಮಹಾಕ್ಲಿಷ್ಟವಾದ ಕಾರ್ಯಗಳನ್ನು ಮಾಡಲೂ ಕೂಡ ಸಮರ್ಥನಾದ ಅರ್ಜುನನು ಮಹಾಸ್ತ್ರಗಳನ್ನು ಹೇಗೆ ಪಡೆದನೆಂಬ ಕಥೆಯನ್ನು ಸವಿಸ್ತರವಾಗಿ ಕೇಳಬೇಕೆಂಬ ಕುತೂಹಲದಿಂದಿದ್ದೇನೆ. ಪುರುಷವ್ಯಾಘ್ರನಾದ ದೀರ್ಘಬಾಹುವಾದ ಧನಂಜಯನು ಮನುಷ್ಯಸಂಚಾರವಿಲ್ಲದ ಘೋರಾರಣ್ಯವನ್ನು ಹೇಗೆ ಪ್ರವೇಶಿಸಿದನು? ಪರಮೇಶ್ವರನನ್ನು ಕುರಿತು ತಪಸ್ಸು ಮಾಡುತ್ತಿದ್ದ ಕಾಲದಲ್ಲಿ ಅವನ ದೈನಂದಿನ ಚರ್ಯೆಗಳೇನು? ಪರಮೇಶ್ವರನು ಸುಪ್ರೀತನಾದುದು ಹೇಗೆ?–ಇವೆಲ್ಲವನ್ನೂ ವಿಶದವಾಗಿ ತಮ್ಮ ಮುಖಾರವಿಂದದಿಂದ ಕೇಳಬೇಕೆಂದಿದ್ದೇನೆ.

ಮಹಾನುಭಾವರೇ! ತಾವು ಸಾಮಾನ್ಯರಲ್ಲ. ತ್ರಿಕಾಲಜ್ಞರು ; ದೈವ-ಮಾನುಷವಿಷಯಗಳೆಲ್ಲವನ್ನೂ ತಮ್ಮ ದಿವ್ಯಜ್ಞಾನದಿಂದ ತಿಳಿದವರಾಗಿರುವಿರಿ. ಆದುದರಿಂದ ದಯೆಯಿಟ್ಟು ಹೇಗೆ ನಡೆಯಿತೋ ಹಾಗೆಯೇ ಹೇಳಿರಿ. ಅಪಜಯವೆಂಬುದನ್ನೇ ಕಾಣದ, ಮಹಾಪರಾಕ್ರಮಿಯಾದ ಪಾರ್ಥನು ದೇವದೇವನಾದ ಶಂಕರನೊಡನೆ ಅನುಪಮವಾದ, ಅತ್ಯದ್ಭುತವಾದ, ರೋಮಾಂಚಕಾರಕವಾದ ಯುದ್ಧವನ್ನು ಹೇಗೆ ಮಾಡಿದನು?

ಅರ್ಜುನ-ಶಂಕರರ ನಡುವೆ ನಡೆದ ಯುದ್ಧದ ವಿವರಣೆಯನ್ನು ಕೇಳಿ ಪ್ರಪಂಚದ ರಾಜರ ಮತ್ತು ಮಹಾಪರಾಕ್ರಮಿಗಳಾದ ಯುಧಿಷ್ಠಿರ-ಭೀಮ-ನಕುಲ-ಸಹದೇವರ ಹೃದಯಗಳಲ್ಲಿ ದೈನ್ಯ-ಹರ್ಷ-ವಿಸ್ಮಯಗಳು ಏಕಕಾಲದಲ್ಲಿ ಉಂಟಾದುವು ಎಂದು ಕೇಳಿದ್ದೇನೆ. ಅರ್ಜುನನು ಆ ಸಮಯದಲ್ಲಿ ಏನೇನು ಮಾಡಿದನೆಂಬುದೆಲ್ಲವನ್ನೂ ವಿಸ್ತಾರವಾಗಿ ಹೇಳಿರಿ. ಸಂಕ್ಷೇಪಿಸಿ ಹೇಳುವ ಕಥೆಯಿಂದ ನನ್ನ ಮನಸ್ಸು ತಣಿಯದು. ಅರ್ಜುನನ ಜೀವಿತದಲ್ಲಿ ಒಂದು ಸಣ್ಣ ನ್ಯೂನತೆಯನ್ನೂ ನಾನು ಕಂಡಿಲ್ಲ ಮತ್ತು ಕೇಳಿಲ್ಲ. ನಿಷ್ಕಳಂಕವಾದ, ದೋಷರಹಿತವಾದ, ಪವಿತ್ರತಮವಾದ ಜೀವಿತವು ಅರ್ಜುನನದಾಗಿತ್ತು. ಅಂತಹ ಸುವ್ರತನ, ಸತ್ಯಪರಾಕ್ರಮಿಯ ಸಚ್ಚರಿತ್ರೆಯನ್ನು ಹೇಳಿರಿ.”

ವೈಶಂಪಾಯನರು ಹೇಳುತ್ತಾರೆ :

“ಜನಮೇಜಯ! ಮಹಾತ್ಮನಾದ ಅರ್ಜುನನ ದಿವ್ಯವಾದ, ಅದ್ಭುತವಾದ, ಅನುಪಮವಾದ ಕಥೆಯನ್ನು ಯಥಾವತ್ತಾಗಿ, ವಿಸ್ತಾರವಾಗಿಯೇ ಹೇಳುವೆನು. ಪಾರ್ಥ-ಶಂಕರರ ಸಮಾಗಮ, ಪರಸ್ಪರಬಾಣಪ್ರವರ್ಷ, ಅನಂತರದಲ್ಲಿ ಶರೀರಸ್ಪರ್ಶಕವಾದ ದ್ವಂದ್ವಯುದ್ಧ–ಇವೆಲ್ಲವನ್ನೂ ವಿಶದವಾಗಿಯೇ ಹೇಳುವೆನು.

ಮಹಾರಾಜ! ಅರ್ಜುನನು ಯುಧಿಷ್ಠಿರನಿಂದ ‘ಪ್ರತಿಸ್ಮೃತಿ’ ಮಹಾಮಂತ್ರವನ್ನು ಉಪದೇಶಪಡೆದುದು; ಅವನ ಅನುಜ್ಞೆಯನ್ನು ಪಡೆದು ಮಹಾಸ್ತ್ರಗಳ ಸಂಗ್ರಹಣಕ್ಕಾಗಿ ಉತ್ತರದಿಕ್ಕಿಗೆ ಪ್ರಯಾಣಮಾಡಿದುದು ; ಇಂದ್ರಕೀಲಪರ್ವತದಲ್ಲಿ ಬ್ರಾಹ್ಮಣವೇಷಧಾರಿಯಾಗಿದ್ದ ಇಂದ್ರನ ಸಂದರ್ಶನ ಇವೆಲ್ಲವನ್ನೂ ಹೇಳಿದೆನಲ್ಲವೇ? ಮುಂದೆ ಅರ್ಜುನನು ಇಂದ್ರನ ಆದೇಶದಂತೆ ಪಿನಾಕಿಯನ್ನು ಕುರಿತು ಮಾಡಿದ ತಪಸ್ಸಿನ ವಿಷಯವನ್ನು ಹೇಳುವೆನು, ಕೇಳು:

ಅರ್ಜುನನು ಇಂದ್ರನ ಆದೇಶದಂತೆ ಈಶ್ವರನನ್ನು ಕುರಿತು ತಪಸ್ಸು ಮಾಡಲು ಹಿಮವತ್ಪರ್ವತದ ತಪ್ಪಲಿನಲ್ಲಿದ್ದ ಘೋರಾರಣ್ಯವನ್ನು ಪ್ರವೇಶಿಸಿದನು. ಆ ಅರಣ್ಯವು ಅನೇಕವಿಧವಾದ ಮುಳ್ಳುಗಿಡಗಳಿಂದಲೂ–ಗಗನಚುಂಬಿಯಾದ, ಫಲಭರಿತವಾದ ವೃಕ್ಷಗಳಿಂದಲೂ–ಸುಮನೋಹರವಾದ ಕುಸುಮಗಳುಳ್ಳ ಲತಾಗುಲ್ಮಗಳಿಂದಲೂ ನಿಬಿಡವಾಗಿದ್ದಿತು. ನಾನಾವಿಧವಾದ ಪಕ್ಷಿಗಳು ಅಲ್ಲಿ ವಾಸಮಾಡುತ್ತಿದ್ದುವು. ಆ ಘೋರಾರಣ್ಯವು ಸಿದ್ಧ-ಚಾರಣರಿಗೆ ನಿವಾಸಸ್ಥಾನವಾಗಿದ್ದಿತು. ಅಂತಹ ನಿರ್ಜನವಾದ ಕಾಡನ್ನು ಅರ್ಜುನನು ಪ್ರವೇಶಿಸಿದೊಡನೆಯೇ ಅಂತರಿಕ್ಷದಲ್ಲಿ ಶಂಖ ಮತ್ತು ಭೇರಿಗಳು ಮೊಳಗಿದುವು. ಭೂಮಿಯ ಮೇಲೆ ಕುಸುಮಗಳ ಮಳೆಗರೆಯಿತು. (ಇವು ಶುಭಸೂಚಕಚಿಹ್ನೆಗಳು.) ಗುಂಪಾಗಿ ಸೇರಿದ್ದ ಮೇಘಗಳು ಭೂಮಿಯನ್ನು ಆಚ್ಛಾದಿಸಿದುವು. (ನೆಳಲನ್ನುಂಟುಮಾಡಿದುವು.) ಅರ್ಜುನನು ದುರ್ಗಮವಾಗಿದ್ದ ಆ ಅರಣ್ಯಪ್ರದೇಶದಲ್ಲಿ ಬಹಳ ದೂರ ಸಂಚರಿಸಿ, ಕಟ್ಟಕಡೆಗೆ ಹಿಮವತ್ಪರ್ವತದ ತಪ್ಪಲಿನಲ್ಲಿದ್ದ ಪ್ರಶಾಂತವಾದ ಅರಣ್ಯಕ್ಕೆ ಬಂದು ಸೇರಿದನು. ಅನವರತವಾಗಿ ಧ್ಯಾನ-ತಪಸ್ಸುಗಳಲ್ಲಿ ನಿರತನಾಗಿದ್ದ ಅರ್ಜುನನು ಅಮಿತ

ವಾದ ತೇಜಸ್ಸಿನಿಂದ ಪ್ರಕಾಶಿಸುತ್ತಿದ್ದನು. ಆ ಸುಂದರವಾದ ಅರಣ್ಯದಲ್ಲಿದ್ದ ಮಹಾವೃಕ್ಷಗಳು ಪ್ರಸರಿಸಿದ ನೂರಾರು ರೆಂಬೆಗಳಿಂದ ಕೂಡಿದ್ದು ನಯನ ಮನೋಹರವಾಗಿ ಕಾಣುತ್ತಿದ್ದುವು. ಅವುಗಳ ಮೇಲೆ ಪಕ್ಷಿಗಳು ಕುಳಿತು ಸುಮಧುರವಾಗಿ ಕೂಗುತ್ತಿದ್ದುವು. ಪಕ್ಕದಲ್ಲಿ ಹರಿಯುತ್ತಿದ್ದ ನದಿಗಳಲ್ಲಿ ನೀರು ವೈಡೂರ್ಯದಂತೆ ಸ್ವಚ್ಛವಾಗಿದ್ದಿತು. ಆ ನದಿಗಳಲ್ಲಿದ್ದ ಸುಳಿಗಳು ಪ್ರಕಾಶಮಾನವಾಗಿದ್ದುವು. ಹಂಸ-ಕಾರಂಡವ ಮತ್ತು ಸಾರಸಪಕ್ಷಿಗಳು ಸುಮ ಧುರವಾಗಿ ನಿನಾದಮಾಡುತ್ತಿದ್ದುವು. ಅವುಗಳ ಧ್ವನಿಗೆ ಪ್ರತಿಧ್ವನಿಮಾಡು ವುವೋ ಎಂಬಂತೆ ನದಿಯ ದಂಡೆಯಲ್ಲಿ ವೃಕ್ಷಗಳ ಮೇಲೆ ವಾಸಿಸುತ್ತಿದ್ದ ಗಂಡುಕೋಗಿಲೆಗಳೂ–ಕ್ರೌಂಚಪಕ್ಷಿಗಳೂ ನಿನಾದಮಾಡುತ್ತಿದ್ದುವು. ಮರದ ಕೆಳಭಾಗದಲ್ಲಿ ನವಿಲುಗಳು ಕುಣಿದಾಡುತ್ತಿದ್ದುವು. ಆ ನದಿಗಳನ್ನೂ, ವಿಶಾಲ ವಾದ ವೃಕ್ಷಗಳನ್ನೂ ಮತ್ತು ಕೋಗಿಲೆ-ಕಾರಂಡವಗಳೇ ಮೊದಲಾದ ಪಕ್ಷಿಗಳ ನಿನಾದವನ್ನೂ, ನವಿಲುಗಳ ನಾಟ್ಯವನ್ನೂ ನೋಡಿ ಮತ್ತು ಕೇಳಿ ಅರ್ಜುನನ ಹೃದಯವು ಆನಂದದಿಂದ ಪ್ರಫುಲ್ಲವಾಗುತ್ತಿದ್ದಿತು.

ಮಹಾನುಭಾವನಾದ ಮತ್ತು ಮಹಾಪರಾಕ್ರಮಿಯಾದ ಅರ್ಜುನನು ಅಂತಹ ಸುಂದರವನದಲ್ಲಿ ಘೋರವಾದ ತಪಸ್ಸನ್ನು ಮಾಡಲುಪಕ್ರಮಿಸಿದನು. ನಾರುಮಡಿಯನ್ನುಟ್ಟು ದಂಡಾಜಿನಗಳಿಂದ ಭೂಷಿತನಾಗಿ ದರ್ಭಾಸನದಲ್ಲಿ ಕುಳಿತು ತಪಸ್ಸುಮಾಡುತ್ತಿದ್ದನು. ಮೂರು ದಿನಗಳಿಗೊಮ್ಮೆ ತರಗೆಲೆಗಳನ್ನು ಭಕ್ಷಿಸುತ್ತಾ ಒಂದು ತಿಂಗಳು ತಪಸ್ಸುಮಾಡಿದನು. ಆರು ದಿನಗಳಿಗೊಮ್ಮೆ ಹಣ್ಣುಗಳನ್ನು ಭಕ್ಷಿಸುತ್ತಾ ಎರಡನೆಯ ತಿಂಗಳನ್ನು ಕಳೆದನು. ಮೂರನೆಯ ತಿಂಗಳಿನಲ್ಲಿ ಪಕ್ಷಕ್ಕೊಮ್ಮೆ ಆಹಾರವನ್ನು ತಿಂದು ತಪಸ್ಸುಮಾಡಿದನು. ನಾಲ್ಕ ನೆಯ ತಿಂಗಳು ಫಲಾಹಾರವನ್ನೂ ವರ್ಜಿಸಿ, ಕೇವಲ ವಾಯುಭಕ್ಷನಾಗಿ ಕಾಲಕಳೆದನು. ಎರಡು ಕೈಗಳನ್ನೂ ಮೇಲೆತ್ತಿ ಪಾದಗಳ ಹೆಬ್ಬೆಟ್ಟುಗಳ ಮೇಲೆ ಮಾತ್ರವೇ ನಿಂತು ನಿರಾಲಂಬನಾಗಿ ತಪಸ್ಸನ್ನು ಮಾಡಲುಪಕ್ರಮಿಸಿದನು.

ಅವನು ಪ್ರತಿದಿನವೂ ತ್ರಿಕಾಲಸ್ನಾನವನ್ನು ಮಾಡುತ್ತಿದ್ದುದರಿಂದ ಅವನ ಜಟೆಯು ಮಿಂಚಿನಂತೆಯೂ, ಕಮಲದಂತೆಯೂ ಕಾಣುತ್ತಿದ್ದಿತು.

ಅವನ ಘೋರವಾದ ತಪಸ್ಸನ್ನು ಕಂಡು ಭೀತರಾದ ಋಷಿ-ಮಹರ್ಷಿಗಳು ಆ ವಿಷಯವನ್ನು ತಿಳಿಸುವ ಸಲುವಾಗಿ ಪರಮೇಶ್ವರನ ಬಳಿಗೆ ಧಾವಿಸಿದರು. ಪರಮೇಶ್ವರನನ್ನು ಅನೇಕವಿಧವಾದ ಸ್ತೋತ್ರಗಳಿಂದ ಸ್ತುತಿಸಿ, ಅರ್ಜುನನ ಘೋರವಾದ ತಪಸ್ಸಿನ ಉಗ್ರಭಾವವನ್ನು ವರ್ಣಿಸತೊಡಗಿದರು :

"ಮಹಾದೇವ! ಮಹಾಪರಾಕ್ರಮಿಯಾದ ಅರ್ಜುನನು ಬಹಳ ಕಠಿನವಾದ ತಪಸ್ಸಿನಲ್ಲಿ ತೊಡಗಿದ್ದಾನೆ. ಅವನು ಹಿಮವತ್ಪರ್ವತದ ತಪ್ಪಲಿನಲ್ಲಿ ಮಾಡುತ್ತಿರುವ ಘೋರತಪಸ್ಸಿನ ಜ್ವಾಲೆಗಳು ಎಲ್ಲೆಡೆಗಳಲ್ಲಿಯೂ ಪ್ರಸರಿಸಿ, ದಶದಿಕ್ಕುಗಳೂ ಹೊಗೆಯಿಂದ ಆಚ್ಛಾದಿತವಾಗಿವೆ. ಅವನ ತಪಸ್ಸಿಗೆ ಕಾರಣ ಮತ್ತು ಉದ್ದೇಶಗಳು ನಮಗೆ ತಿಳಿಯವು. ನಮಗಂತೂ ಅವನ ತಪಸ್ಸಿನ ಬೇಗೆಯನ್ನು ತಡೆದುಕೊಳ್ಳಲು ಸಾಧ್ಯವಾಗುತ್ತಿಲ್ಲ. ನಮ್ಮನ್ನು ಪಾರ್ಥನು ತನ್ನ ತಪಸ್ಸಿನಿಂದ ಸಂತಾಪಗೊಳಿಸುತ್ತಿದ್ದಾನೆ. ಆದುದರಿಂದ ನೀನು ದಯಮಾಡಿ ಅವನ ಈ ಘೋರತಪಸ್ಸು ಮುಂದುವರಿಯದಂತೆ ಮಾಡಿ ನಮ್ಮ ಆತಂಕವನ್ನು ಪರಿಹರಿಸಬೇಕಾಗಿ ಕೇಳಿಕೊಳ್ಳುತ್ತೇವೆ."

ಜಿತೇಂದ್ರಿಯರಾದ ಮಹರ್ಷಿಗಳ ಮಾತುಗಳನ್ನು ಕೇಳಿ ಪಶುಪತಿಯಾದ ಉಮೇಶನು ಹೇಳಿದನು :

"ಮಹರ್ಷಿಗಳೇ! ನೀವು ಅರ್ಜುನನ ತಪಸ್ಸಿಗಾಗಿ ಸರ್ವಥಾ ವಿಷಾದಿಸಬೇಕಾಗಿಲ್ಲ. ನೀವು ಸಂತುಷ್ಟಹೃದಯರಾಗಿ ನಿರ್ಭೀತರಾಗಿ ಈಗಲೇ ನಿಮ್ಮ ಆಶ್ರಮಗಳನ್ನು ಸೇರಿರಿ. ಅರ್ಜುನನು ಯಾವ ಕಾರಣದಿಂದ ಇಷ್ಟೊಂದು ಕಠಿನವಾದ ತಪಸ್ಸನ್ನು ಆಚರಿಸುತ್ತಿರುವನೆಂಬ ವಿಷಯವು ನನಗೆ ತಿಳಿದಿದೆ. ಅವನು ಸ್ವರ್ಗವನ್ನಾಶಿಸಿಯಾಗಲೀ, ಚಿರಂಜೀವಿತ್ವವನ್ನಾಶಿಸಿಯಾಗಲೀ ಅಥವಾ ಹೆಚ್ಚಿನ ಐಶ್ವರ್ಯವನ್ನು ಆಶಿಸಿಯಾಗಲೀ–ತಪಸ್ಸನ್ನು ಮಾಡುತ್ತಿಲ್ಲ. ಅವನ ಆಶಯವನ್ನು ಈಗಲೇ ನಾನು ಪೂರ್ಣಗೊಳಿಸುತ್ತೇನೆ. ಆದುದರಿಂದ ನೀವು ನಿಶ್ಚಿಂತೆಯಿಂದ ತೆರಳಿರಿ."

ಪರಮೇಶ್ವರನು ಹೇಳಿದ ಮಾತುಗಳನ್ನು ಕೇಳಿ ಸತ್ಯವಾದಿಗಳಾದ ಮುನಿಗಳು ಸಂತುಷ್ಟಹೃದಯರಾಗಿ ತಮ್ಮ-ತಮ್ಮ ಆಶ್ರಮಗಳಿಗೆ ತೆರಳಿದರು.

ಇಲನೆಯ ಅಧ್ಯಾಯವು ಮುಗಿಯಿತು.

೩೯ನೆಯ ಅಧ್ಯಾಯ ಕೈರಾತಪರ್ವ (ಮುಂದುವರಿದಿದೆ.)

## ಶಂಕರಾರ್ಜುನರ ಯುದ್ಧ: ಶಂಕರನು ಅರ್ಜುನನಿಗೆ ಪ್ರಸನ್ನನಾದುದು : ಅರ್ಜುನಕೃತ ಶಂಕರಸ್ತುತಿ

ಜನಮೇಜಯ! ಮಹಾತ್ಮರಾದ ತಪಸ್ವಿಗಳು ತಮ್ಮ-ತಮ್ಮ ಆಶ್ರಮಗಳಿಗೆ ತೆರಳಿದನಂತರ ಪಿನಾಕಪಾಣಿಯಾದ, ಭಗವಂತನಾದ, ಪಾಪಹರನಾದ ಪರಶಿವನು ಕಿರಾತವೇಷವನ್ನು ಧರಿಸಿದನು. ಅವನು ಆ ವೇಷದಲ್ಲಿ ಸ್ವರ್ಣವೃಕ್ಷದಂತೆಯೂ, ಮೇರುಪರ್ವತದಂತೆಯೂ ಪ್ರಕಾಶಿಸುತ್ತಿದ್ದನು. ಧನುಸ್ಸನ್ನು ಕೈಯಲ್ಲಿ ಹಿಡಿದವನಾಗಿ, ವಿಷಸರ್ಪಗಳಂತಿದ್ದ ಸಾವಿರಾರು ಬಾಣ ಗಳಿಂದ ಕೂಡಿದ್ದ ಬತ್ತಳಿಕೆಯನ್ನು ಭುಜದಲ್ಲಿ ಧರಿಸಿ ಶರೀರವನ್ನು ಧರಿಸಿರುವ ಯಜ್ಞೇಶ್ವರನಂತೆ ಪ್ರಕಾಶಿಸುತ್ತಾ, ಹಿಮವತ್ಪರ್ವತದ ತಪ್ಪಲಿಗೆ ಬಂದನು. ಅವನ ಜೊತೆಯಲ್ಲಿಯೇ ಲೋಕಮಾತೆಯಾದ ಉಮಾದೇವಿಯೂ ಕಿರಾತಿಯ ವೇಷವನ್ನು ಧರಿಸಿ ಬಂದಳು. ಭೂತಗಣಗಳೆಲ್ಲವೂ ಕಿರಾತರಂತೆ ಅನೇಕವಿಧವಾದ ವೇಷ-ಭೂಷಣಗಳನ್ನು ಧರಿಸಿ ಪರಮೇಶ್ವರನನ್ನು ಅನು ಸರಿಸಿ ಬಂದುವು. ಉಮೆಯ ಸಖಿಯರಾದ ಸಾವಿರಾರು ಮಂದಿ ಸ್ತ್ರೀಯರೂ ಕಿರಾತಸ್ತ್ರೀಯರ ವೇಷ-ಭೂಷಣಗಳನ್ನು ಧರಿಸಿದವರಾಗಿ ಶಂಕರನ ಪರಿವಾ ರಕ್ಕೆ ಸೇರಿದರು. ದೇವದೇವನಾದ ಪರಶಿವನು ತನ್ನ ಪರಿವಾರದೊಡನೆ ಬಂದ ಕಾರಣದಿಂದಾಗಿ ಆ ಪ್ರದೇಶವೆಲ್ಲವೂ ವಿಶೇಷವಾದ ಸೌಂದರ್ಯಾತಿಶಯ ದಿಂದ ಬೆಳಗಿತು. ನದಿಯಪ್ರವಾಹದ ಶಬ್ದವಾಗಲೀ, ಪಕ್ಷಿಗಳ ಕಲಕಲರವ ಗಳಾಗಲೀ ಕೇಳಿಸುತ್ತಿರಲಿಲ್ಲ. ಪರಮೇಶ್ವರನ ಉಪಸ್ಥಿತಿಯಿಂದ ಪ್ರಕೃತಿಯೇ ಸ್ತಬ್ಧವಾಯಿತು. ವಾತಾವರಣವೂ ಅಷ್ಟೊಂದು ಪ್ರಶಾಂತವಾಗಿದ್ದ ಸಮಯ ದಲ್ಲಿ ಕಿರಾತವೇಷಧಾರಿಯಾಗಿದ್ದ ಪರಮೇಶ್ವರನು ಪರಿವಾರದೊಡನೆ ಪಾರ್ಥನ ಸಮೀಪಕ್ಕೆ ಬಂದನು. ಅದೇ ವೇಳೆಗೆ ಸರಿಯಾಗಿ ಮೂಕನೆಂಬ

ರಾಕ್ಷಸನೊಬ್ಬನು ಹಂದಿಯ ರೂಪವನ್ನು ಧರಿಸಿ ಪಾರ್ಥನನ್ನು ಕೊಲ್ಲಲು ರಭಸದಿಂದ ಪಾರ್ಥನೆಡೆಗೆ ನುಗ್ಗಿ ಬರುತ್ತಿದ್ದನು. ತನಗೆದುರಾಗಿ ಬರುತ್ತಿದ್ದ ಶತ್ರುವನ್ನು ಸಂಹರಿಸಲು ಪಾರ್ಥನು ಗಾಂಡೀವಧನುಸ್ಸಿಗೆ ಹೆದೆಯನ್ನೇರಿಸಿ, ವಿಷಸರ್ಪಕ್ಕೆ ಸಮಾನವಾದ ಬಾಣಗಳನ್ನು ಬತ್ತಳಿಕೆಯಿಂದ ಹೊರತೆಗೆದು ಧನುಸ್ಸಿನಲ್ಲಿ ಯೋಜಿಸಿ, ಧನುಷ್ಟೇಂಕಾರಮಾಡುತ್ತಾ ಹಂದಿಯನ್ನು ಕುರಿತು ಹೇಳಿದನು :

"ನಾನಿಲ್ಲಿಗೆ ತಪಸ್ಸಿಗಾಗಿ ಬಂದಿರುವೆನೇ ಹೊರತು ನಿನಗೆ ತೊಂದರೆ ಕೊಡಲು ನಾನಿಲ್ಲಿಗೆ ಬಂದಿಲ್ಲ. ಆದರೆ ನೀನಿಂದು ನನ್ನನ್ನು ಕೊಲ್ಲುವ ಉದ್ದೇಶದಿಂದ ಬರುತ್ತಿರುವೆಯಾದ ಕಾರಣ ನಿಶ್ಚಯವಾಗಿಯೂ ನಿನ್ನನ್ನು ಯಮಾಲಯಕ್ಕೆ ಕಳುಹಿಸಿಯೇ ತೀರುತ್ತೇನೆ."

ಅರ್ಜುನನು ಆ ಮಾತುಗಳನ್ನು ಹೇಳಿ ಬಾಣಪ್ರಯೋಗಮಾಡುವುದ ರೊಳಗಾಗಿಯೇ ಕಿರಾತವೇಷಧಾರಿಯಾಗಿದ್ದ ಶಂಕರನು ಅರ್ಜುನನನ್ನು ಕುರಿತು ಹೇಳಿದನು :

"ಬಾಣಪ್ರಯೋಗವನ್ನು ನಿಲ್ಲಿಸು. ಇಂದ್ರಕೀಲಪರ್ವತಕ್ಕೆ ಸಮಾನ ವಾದ ಶರೀರಕಾಂತಿಯುಳ್ಳ ಈ ಹಂದಿಯ ಮೇಲೆ ನಾನು ಮೊದಲು ಗುರಿಯಿಟ್ಟಿರುವೆನು."

ಕಿರಾತನು ಹೇಳಿದ ಮಾತುಗಳಿಗೆ ಅರ್ಜುನನು ಲಕ್ಷ್ಯಕೊಡಲಿಲ್ಲ. ಧನುಸ್ಸಿನಿಂದ ಬಾಣವು 'ಸೊಯ್' ಎಂಬ ಶಬ್ದದೊಡನೆ ಹೊರಬಂದಿತು.

ಕಿರಾತನೂ ಹಂದಿಗೆ ಗುರಿಯಿಟ್ಟು ವಜ್ರಾಯುಧಕ್ಕೆ ಸದೃಶವಾದ ಶಕ್ತಿಯಿಂದ ಕೂಡಿದ್ದ, ಉರಿಯುತ್ತಿರುವ ಬೆಂಕಿಯಂತೆ ಪ್ರಜ್ವಲಿಸುತ್ತಿದ್ದ ಬಾಣವನ್ನು ಪ್ರಯೋಗಿಸಿದನು. ಅರ್ಜುನ ಮತ್ತು ಕಿರಾತರ ಬಾಣಗಳೆರಡೂ ಒಂದೇ ಕಾಲದಲ್ಲಿ ಹಂದಿಯ ರೂಪದಲ್ಲಿದ್ದ ಮೂಕನೆಂಬ ರಾಕ್ಷಸನ ಶರೀರವನ್ನು ಹೊಕ್ಕುವು. ಆ ಎರಡು ಬಾಣಗಳ ಆಘಾತದಿಂದುಂಟಾದ ಶಬ್ದವು ಇಂದ್ರನ ವಜ್ರಾಯುಧದ ಪ್ರಹಾರಶಬ್ದವನ್ನು ಅಥವಾ ಪರ್ವತದ ಮೇಲೆ ಸಿಡಿಲು ಬಡಿದರೆ ಉಂಟಾಗುವ ಶಬ್ದವನ್ನು ಅನುಕರಿಸಿತು. ಇಬ್ಬರೂ ಪ್ರಯೋಗಿಸಿದ ತೀಕ್ಷ್ಣವಾದ ಬಾಣಗಳ ಪ್ರಹಾರದಿಂದ ಮೂಕನು

ಹಂದಿಯ ರೂಪವನ್ನು ತ್ಯಜಿಸಿ ಬೃಹದಾಕಾರದ ತನ್ನ ರಾಕ್ಷಸರೂಪವನ್ನು ತಾಳಿ ಪ್ರಾಣಗಳನ್ನು ತೊರೆದನು.



ಅನಂತರದಲ್ಲಿ ಅರ್ಜುನನು ಸುವರ್ಣದಂತೆ ಪ್ರಕಾಶಮಾನವಾದ ಶರೀರಕಾಂತಿಯಿಂದ ಕೂಡಿದ್ದ, ಕಿರಾತನ ವೇಷ-ಭೂಷಣಗಳನ್ನು ಧರಿಸಿದ್ದ, ಅನೇಕ ಸ್ತ್ರೀಯರಿಂದ ಪರಿವೃತನಾಗಿದ್ದ, ಕಿರಾತರಾಜನನ್ನು ನೋಡಿ ನಸುನಕ್ಕು ಹೇಳಿದನು :

"ಕನಕಪ್ರಭನೇ! ಈ ಸ್ತ್ರೀಯರಿಂದ ಪರಿವೃತನಾಗಿ ನಿರ್ಜನಪ್ರದೇಶದಲ್ಲಿ ಸಂಚಾರ ಹೊರಟಿರುವ ನೀನು ಯಾರು? ನಿನಗೆ ಈ ಘೋರಾರಣ್ಯದಲ್ಲಿ ಭಯವಾಗುವುದಿಲ್ಲವೇ? ನಾನು ಮೊದಲು ಗುರಿಯಿಟ್ಟಿದ್ದ ಹಂದಿಗೇಕೆ

ನೀನು ಬಾಣಪ್ರಯೋಗಮಾಡಿದೆ? ಈ ರಾಕ್ಷಸನು ನನ್ನನ್ನು ಕೊಲ್ಲುವ ಸಲುವಾಗಿ ಬಂದಿದ್ದನು. ಅವನನ್ನು ಸಂಹರಿಸುವುದು ನನ್ನ ಕರ್ತವ್ಯವಾಗಿದ್ದಿತು. ಆದುದರಿಂದಲೇ ನಾನು ವರಾಹರೂಪದಲ್ಲಿದ್ದ ರಾಕ್ಷಸನ ಮೇಲೆ ಗುರಿಯಿಟ್ಟೆನು. ಈ ಮಧ್ಯದಲ್ಲಿ ನೀನೇಕೆ ಗುರಿಯಿಟ್ಟು ಹಂದಿಗೆ ಬಾಣ ಪ್ರಯೋಗಮಾಡಿದೆ? ನೀನು ಮಾಡಿದ ಕಾರ್ಯವು ಬೇಟೆಗಾರರು ಅನುಸರಿಸಬೇಕಾದ ಧರ್ಮಕ್ಕೆ ವಿರುದ್ಧವಾಗಿದೆ. ಒಬ್ಬನು ಗುರಿಯಿಟ್ಟ ಪ್ರಾಣಿಗೆ ಮತ್ತೊಬ್ಬ ಬೇಟೆಗಾರನು ಖಂಡಿತವಾಗಿಯೂ ಗುರಿಯಿಟ್ಟು ಹೊಡೆಯುವುದಿಲ್ಲ. ಆದುದರಿಂದ ನೀನು ಶಿಕ್ಷಾರ್ಹನಾಗಿರುವೆ. ನಿನ್ನ ಪ್ರಾಣವಿಮೋಚನೆಯೇ ನಿನ್ನ ಅಪರಾಧಕ್ಕೆ ತಕ್ಕ ಶಿಕ್ಷೆಯಾಗಿರುವುದು. ನಿನ್ನನ್ನಿಂದು ಪ್ರಾಣಸಹಿತನಾಗಿ ಬಿಡಲಾರೆನು."

ಹೀಗೆ ಹೇಳಿದ ಸವ್ಯಸಾಚಿಯಾದ ಅರ್ಜುನನ ಮಾತುಗಳನ್ನು ಕೇಳಿ ಕಿರಾತನೂ ನಸುನಗುತ್ತಾ ಮೃದುವಚನಗಳಿಂದಲೇ ಉತ್ತರಿಸಿದನು :

"ವೀರಾಗ್ರಣಿಯೇ! ನೀನು ನನ್ನ ವಿಷಯದಲ್ಲಿ ಅನುಕಂಪವನ್ನು ತೋರಬೇಕಾದ ಕಾರಣವಿಲ್ಲ. ಕಿರಾತರಾದ ನಮಗೆ ಅರಣ್ಯಗಳೇ ಯೋಗ್ಯ ವಾದ ನಿವಾಸಸ್ಥಾನಗಳಾಗಿರುವುವು. ಆದುದರಿಂದ ನಾವು ಈ ಅರಣ್ಯದಲ್ಲಿ ಭಯಪಡುವ ಕಾರಣವೂ ಇಲ್ಲ. ನೀನು ಈ ವಿಷಯವಾಗಿ ಯೋಚಿಸ ಬೇಕಾಗಿಯೂ ಇಲ್ಲ. ಆದರೆ ಈ ದುರ್ಗಮವಾದ ಅರಣ್ಯದಲ್ಲಿ ನೀನೇಕೆ ವಾಸಮಾಡುತ್ತಿರುವೆ? ನಾನಾವಿಧವಾದ ದುಷ್ಟಪ್ರಾಣಿಗಳಿಗೆ ನಿವಾಸಸ್ಥಾನ ವಾಗಿರುವ ಈ ಘೋರಾರಣ್ಯವು ನಮಗೆ ಮಾತ್ರವೇ ವಾಸಿಸಲು ಯೋಗ್ಯ ವಾಗಿರುವುದು. ಮೇಲಾಗಿ ನೀನು ಅಗ್ನಿಯಂತೆ ಪ್ರಕಾಶಮಾನನಾಗಿ ಸುಕುಮಾರನಾಗಿರುವೆ. ಸುಖೋಪಭೋಗಗಳನ್ನು ಅನುಭವಿಸಲು ಯೋಗ್ಯ ನಾಗಿರುವೆ. ಇಂತಹ ನೀನು ನಿರ್ಜನವಾದ ಈ ಪ್ರದೇಶದಲ್ಲಿ ಏಕಾಕಿಯಾಗಿ ಸಂಚರಿಸುತ್ತಿರುವೆಯೇಕೆ?"

"ಕಿರಾತರಾಜ! ಈ ಗಾಂಡೀವಧನುಸ್ಸಿನ ಮತ್ತು ತೀಕ್ಷ್ಣವಾದ ಈ ಬಾಣಗಳ ಅವಲಂಬನೆಯಿಂದ ಈ ಘೋರಾರಣ್ಯದಲ್ಲಿ ನಾನು ನಿರ್ಭೀತ ನಾಗಿ ಎರಡನೆಯ ಷಣ್ಮುಖನಂತೆ ಕಾಲಕಳೆಯುತ್ತಿರುವೆನು. ನನ್ನ ಪರಾಕ್ರಮ

ವೆಷ್ಟೆಂಬುದನ್ನು ನೀನು ಈಗಲೇ ನೋಡಿದೆಯಲ್ಲವೇ? ನನ್ನನ್ನು ಕೊಲ್ಲುವ ಸಲುವಾಗಿ ಹಂದಿಯ ರೂಪವನ್ನು ಧರಿಸಿ ಬಂದ ರಾಕ್ಷಸನನ್ನು ಕ್ಷಣಮಾತ್ರ ದಲ್ಲಿ ನನ್ನ ಬಾಣಪ್ರಯೋಗದಿಂದ ಯಮಾಲಯಕ್ಕೆ ಕಳುಹಿಸಿಬಿಟ್ಟೆನು."

ಕಿರಾತನೊಮ್ಮೆ ಗಹ-ಗಹಿಸಿ ಗಟ್ಟಿಯಾಗಿ ನಕ್ಕು ಹೇಳಿದನು :

"ತಾಪಸನೇ! ಈ ರಾಕ್ಷಸನು ಮೊದಲು ನನ್ನಿಂದಲೇ ಗುರಿಯಿಡ ಲ್ಪಟ್ಟು, ನನ್ನ ಬಾಣದ ಪ್ರಹಾರದಿಂದಲೇ ಯಮನ ಅತಿಥಿಯಾಗಿ ಹೋಗಿರು ತ್ತಾನೆ. ನಾನು ಗುರಿಯಿಟ್ಟನಂತರವೇ ನೀನೂ ಗುರಿಯಿಟ್ಟು ರಾಕ್ಷಸನ ಮೇಲೆ ಬಾಣಪ್ರಯೋಗಮಾಡಿದೆ. ಈ ಮಧ್ಯದಲ್ಲಿ ನೀನು ಬಾಣಪ್ರಯೋಗ ಮಾಡಕೂಡದೆಂದೂ ನಾನು ಹೇಳಿರುತ್ತೇನೆ. ನಾನು ಮೊದಲು ಗುರಿಯಿಟ್ಟ ಲಕ್ಷ್ಯಕ್ಕೇ ನೀನೂ ಗುರಿಯಿಟ್ಟು ಹೊಡೆದು ಬೇಟೆಯ ಧರ್ಮವನ್ನು ಪರಾಕ್ರಮದ ಅಹಂಕಾರದಿಂದ ಮುರಿದಿರುವೆಯೇ ಹೊರತು ನಾನು ಬೇಟೆಯ ಧರ್ಮಕ್ಕೆ ವಿರುದ್ಧವಾಗಿ ವರ್ತಿಸಿಲ್ಲ. ಈ ವಿಧವಾಗಿ ನೀನು ಅಪರಾಧಮಾಡಿದುದೂ ಅಲ್ಲದೇ–ನನ್ನನ್ನೇ ಅಪರಾಧೀ ಎಂದೂ ಹೇಳು ತ್ತಿರುವೆ. ಇದು ಖಂಡಿತವಾಗಿಯೂ ನಿನ್ನಂತಹ ವೀರನಿಗೆ ಉಚಿತವೆನಿಸು ವುದಿಲ್ಲ. ಸ್ವಯಂ ಅಪರಾಧಮಾಡಿಯೂ ಬೇರೆಯವರು ಅಪರಾಧಿಗಳೆಂದು ಆರೋಪಿಸುತ್ತಿರುವ ಮಂದಾತ್ಮನಾದ ನಿನ್ನನ್ನು ನಾನು ಖಂಡಿತವಾಗಿಯೂ ಪ್ರಾಣಸಹಿತವಾಗಿ ಬಿಡಲಾರೆನು. ನನ್ನೊಡನೆ ಯುದ್ಧಕ್ಕೆ ಸಿದ್ಧನಾಗಿ ನಿಲ್ಲು. ಇಂದ್ರನ ವಜ್ರಾಯುಧಕ್ಕೆ ಸಮಾನವಾದ ಬಾಣಗಳನ್ನು ನಿನ್ನ ಮೇಲೆ ಪ್ರಯೋಗಿಸುವೆನು. ನೀನೂ ನಿನ್ನ ಪೌರುಷವನ್ನು ಸಂಪೂರ್ಣವಾಗಿ ವಿನಿಯೋಗಿಸಿ, ನಿನ್ನಲ್ಲಿರುವ ಬಾಣಗಳನ್ನು ನನ್ನ ಮೇಲೆ ಪ್ರಯೋಗಿಸು."

ಕಿರಾತನ ಔದ್ಧತ್ಯದ ಮಾತುಗಳು ಎಂತಹವನಿಗಾದರೂ ಕೋಪವ ನ್ನುಂಟುಮಾಡತಕ್ಕುವುಗಳಲ್ಲವೇ? ಮಹಾಪರಾಕ್ರಮಿಯಾದ ಕಿರೀಟಿಯ ವಿಷಯದಲ್ಲಿ ಹೇಳಬೇಕಾಗಿಯೇ ಇಲ್ಲ. ಅರ್ಜುನನು ಕೋಪದಿಂದ ಕಿಡಿ-ಕಿಡಿಯಾದನು. ಧನುಷ್ಟೇಂಕಾರಮಾಡಿ, ಸರ್ಪಸದೃಶಬಾಣಗಳನ್ನು ಧನುಸ್ಸಿನಲ್ಲಿ ಯೋಜಿಸಿ, ಒಂದಾದ ಮೇಲೊಂದರಂತೆ ಕಿರಾತನ ಮೇಲೆ ಪ್ರಯೋಗಿಸತೊಡಗಿದನು.

ಕಿರಾತನು ತನ್ನ ಕಡೆಗೆ ವೇಗವಾಗಿ ಬರುತ್ತಿದ್ದ ಬಾಣಗಳೆಲ್ಲವನ್ನೂ ನಗು-ನಗುತ್ತಲೇ ಹಿಡಿದು ಕೆಳಕ್ಕೆ ಹಾಕುತ್ತಾ ಅರ್ಜುನನನ್ನು ಕುರಿತು ಹೇಳಿದನು:

"ಮಂದಾತ್ಮನೇ! ನೀನು ಪ್ರಯೋಗಿಸುತ್ತಿರುವ ಈ ಬಾಣಗಳು ನನ್ನನ್ನೇನೂ ಮಾಡಲಾರವು. ನನ್ನ ಚರ್ಮದೊಳಗೆ ನುಸುಳುವ ಶಕ್ತಿಯುಳ್ಳ ತೀಕ್ಷ್ಣವಾದ ಬಾಣಗಳನ್ನಾದರೂ ಪ್ರಯೋಗಿಸು."

ಕಿರಾತನ ಮಾತುಗಳನ್ನು ಕೇಳಿ ಅರ್ಜುನನ ಕೋಪವು ಮತ್ತಷ್ಟು ಹೆಚ್ಚಿತು. ಬಾಣಗಳ ಮಳೆಯನ್ನೇ ಕಿರಾತನ ಮೇಲೆ ಸುರಿಸಿದನು. ಕಿರಾತನೂ ಹತ್ತಿರಕ್ಕೆ ಬಂದ ಬಾಣಗಳೆಲ್ಲವನ್ನೂ ಕತ್ತರಿಸಿ, ಕಾಳಸರ್ಪದಂತಿದ್ದ ಬಾಣಗಳನ್ನು ಅರ್ಜುನನ ಮೇಲೆ ಪ್ರಯೋಗಿಸಿದನು.

ಅರ್ಜುನನು ಪ್ರಯೋಗಿಸುತ್ತಿದ್ದ ಬಾಣಗಳೆಲ್ಲವನ್ನೂ ಕಿರಾತನು ಪರ್ವತದಂತೆ ಅಚಲನಾಗಿ ನಿಂತು ಎದುರಿಸುತ್ತಿದ್ದನು. ಆ ಬಾಣಗಳಿಂದ ಕಿರಾತನಿಗೆ ಒಂದು ಸಣ್ಣ ಗಾಯವನ್ನು ಮಾಡಲೂ ಅರ್ಜುನನು ಸಮರ್ಥನಾಗಲಿಲ್ಲ. ಅದನ್ನು ಕಂಡು ಧನಂಜಯನಿಗೆ ಬಹಳ ಆಶ್ಚರ್ಯವಾಯಿತು. ಕಿರಾತನ ಮೇಲೆ ಪ್ರಯೋಗಿಸಿದ ಸಾವಿರಾರು ಬಾಣಗಳು ಕಿರಾತನ ಸಮೀಪವನ್ನು ಸೇರಲೂ ಸಮರ್ಥವಾಗಲಿಲ್ಲ. ಬಾಣಗಳೆಲ್ಲವೂ ವಿಫಲವಾಗಲು ಅರ್ಜುನನು ಮನದಲ್ಲಿಯೇ ಕಿರಾತನ ಪರಾಕ್ರಮವನ್ನು ಶ್ಲಾಘನೆಮಾಡುತ್ತಾ ಹೇಳಿಕೊಂಡನು :

"ಭಲೇ! ಸುಕುಮಾರವಾದ ಶರೀರವನ್ನು ಧರಿಸಿರುವ, ಹಿಮವತ್ಪರ್ವತದ ತಪ್ಪಲಿನಲ್ಲಿ ವಾಸಮಾಡುವ ಈ ಕಿರಾತನು ಗಾಂಡೀವಮಹಾಧನುಸ್ಸಿನಿಂದ ಪ್ರಯೋಗಿಸಲ್ಪಟ್ಟ ಬಾಣವರ್ಷವನ್ನು ಸ್ವಲ್ಪವೂ ವಿಚಲಿತನಾಗದೇ ಭಯಪಡದೇ ಎದುರಿಸುತ್ತಿದ್ದಾನೆ. ಇವನು ಯಾರಾಗಿರಬಹುದು? ಇವನೇನು ರುದ್ರನೇ? ಅಥವಾ ಮತ್ತಾವ ದೇವತೆಯಾದರೂ ಕಿರಾತವೇಷಧಾರಿಯಾಗಿ ಬಂದಿರುವನೇ? ಅಥವಾ ಯಕ್ಷನೋ–ರಾಕ್ಷಸನೋ ಇವನಾಗಿರಬಹುದೇ? ಕೆಲವು ಸಮಯಗಳಲ್ಲಿ ದೇವತೆಗಳೂ ಹಿಮವತ್ಪರ್ವತದ ತಪ್ಪಲಿನಲ್ಲಿ ಸಂಚರಿಸುವರೆಂದು ಕೇಳಿರುವೆನು. ಪಿನಾಕಪಾಣಿಯಾದ ಪರಮೇಶ್ವರ

ನೊಬ್ಬನನ್ನು ಬಿಟ್ಟು, ಈ ಗಾಂಡೀವಧನುಸ್ಸಿನಿಂದ ಪ್ರಯೋಗಿಸಲ್ಪಟ್ಟ ಬಾಣಗಳನ್ನು ಸಹಿಸಿಕೊಳ್ಳುವ ಸಾಮರ್ಥ್ಯವು ಮತ್ತಾರಿಗೆ ತಾನೇ ಇರಲು ಸಾಧ್ಯ? ಇವನು ಯಕ್ಷನಾಗಿರಲೀ, ಬೇರಾವ ದೇವನೇ ಆಗಿರಲೀ–ರುದ್ರ ನೊಬ್ಬನಲ್ಲದಿದ್ದರೆ ಈ ಕಿರಾತನನ್ನು ಖಂಡಿತವಾಗಿಯೂ ನಿಮಿಷಮಾತ್ರದಲ್ಲಿ ಯಮಾಲಯಕ್ಕೆ ಕಳುಹಿಸಿಬಿಡುವೆನು."–ಹೀಗೆಂದು ಮನಸ್ಸಿನಲ್ಲಿ ಯೋಚಿಸಿ, ಪುನಃ ನವಚೇತನವನ್ನು ಪಡೆದವನಾಗಿ ಸೂರ್ಯನ ಕಿರಣಗಳಿಗೆ ಸಮಾನವಾದ ಅಸಂಖ್ಯಾತ ಬಾಣಗಳನ್ನು ಕಿರಾತನ ಮೇಲೆ ಪ್ರಯೋಗಿಸಿ ದನು. ಪರ್ವತವು ಎಂತಹ ಕಲ್ಲಿನ ಮಳೆಯನ್ನಾದರೂ ಅಚಲವಾಗಿ ನಿಂತು ಧರಿಸುವಂತೆ–ಅಪಾರವಾದ ಅರ್ಜುನನ ಬಾಣವರ್ಷವನ್ನು ಭಗವಂತನಾದ ಸೃಷ್ಟಿ-ಸ್ಥಿತಿ-ಲಯಗಳಿಗೆ ಕಾರಣಭೂತನಾದ ಶೂಲಪಾಣಿಯು ಮಂದಸ್ಮಿತ ನಾಗಿ ಧರಿಸಿದನು. ಸ್ವಲ್ಪ ಹೊತ್ತಿನಲ್ಲಿಯೇ ಅರ್ಜುನನ ಬತ್ತಳಿಕೆಗಳು ಬರಿದಾದುವು. ಅಕ್ಷಯವಾದ ಬತ್ತಳಿಕೆಗಳೂ ಬಾಣರಹಿತವಾದುದನ್ನು ಕಂಡು ಅರ್ಜುನನಿಗೆ ಸ್ವಲ್ಪ ಭಯವೂ ಉಂಟಾಯಿತು. ಅಕ್ಷಯತೂಣೀರ ಗಳನ್ನು ಕೊಟ್ಟ ಅಗ್ನಿಯನ್ನು ಸ್ಮರಿಸಿದನು.

"ಅಗ್ನಿದೇವನು ಖಾಂಡವದಾಹದ ಕಾಲದಲ್ಲಿ ನನಗೆ ಈ ಅಕ್ಷಯ ತೂಣೀರಗಳನ್ನು ಕೊಟ್ಟಿದ್ದನು. ಈ ಬತ್ತಳಿಕೆಗಳಲ್ಲಿ ಬಾಣಗಳು ಉದ್ಭವ ವಾಗುತ್ತಲೇ ಇರುತ್ತವೆ. ಆದರೆ ಈ ಸಮಯದಲ್ಲಿ ಈ ಅಕ್ಷಯತೂಣೀರ ಗಳೂ ಬತ್ತಿಹೋದುವಲ್ಲವೇ? ಮುಂದೇನು ಮಾಡಲಿ? ಕೇವಲ ಈ ಧನುಸ್ಸಿನಿಂದ ಏನನ್ನು ತಾನೇ ಮಾಡಲು ಸಾಧ್ಯವಿದೆ? ನನ್ನ ಬಾಣಗಳೆಲ್ಲವನ್ನೂ ನುಂಗಿದ ಈ ಮನುಷ್ಯನು ಯಾರಾಗಿರಬಹುದು? ಇವನು ಯಾರೇ ಆಗಿರಲಿ–ಇವನನ್ನು ಸಂಹರಿಸಿಯೇ ತೀರುತ್ತೇನೆ. ವೀರಭಟನು ಈಟಿಯಿಂದ ಆನೆಯನ್ನು ಇರಿದು ಕೊಲ್ಲುವಂತೆ–ಇವನನ್ನು ಈ ಧನುಸ್ಸಿನಿಂದಲೇ ಪ್ರಹರಿಸಿ ಕೊಂದು ಯಮಾಲಯಕ್ಕೆ ಕಳುಹಿಸಿಬಿಡುವೆನು." ಹೀಗೆಂದು ಅರ್ಜುನನು ನಿಶ್ಚಯಿಸಿ, ತನ್ನ ಗಾಂಡೀವವನ್ನು ತೆಗೆದುಕೊಂಡು, ಧನುಸ್ಸಿನಿಂದ ನಾಲ್ಕಾರು ಬಾರಿ ಕಿರಾತನ ತಲೆಯ ಮೇಲೆ ರಭಸದಿಂದ ಪ್ರಹರಿಸಿದನು. ಮುಷ್ಟಿ ಗಳಿಂದಲೂ ಹೊಡೆದನು. ಆ ಪ್ರಹಾರಗಳು ಸಿಡಿಲಿನಂತಿದ್ದುವು. ಮಹಾ

ಮಹಿಮನಾದ ಕಿರಾತನು ನಸುನಗುತ್ತಾ ನಾಲ್ಕಾರು ಪ್ರಹಾರಗಳನ್ನೂ ಸಹಿಸಿಕೊಂಡು ಅರ್ಜುನನ ಕೈಯಿಂದ ಗಾಂಡೀವಧನುಸ್ಸನ್ನು ಕ್ಷಣಮಾತ್ರದಲ್ಲಿ ಕಿತ್ತುಕೊಂಡನು. ಗಾಂಡೀವವು ಕೈಬಿಟ್ಟು ಹೋದೊಡನೆಯೇ ಅರ್ಜುನನು ಕುಪಿತನಾಗಿ ಕಿರಾತನನ್ನು ಸಂಹರಿಸಿಬಿಡಬೇಕೆಂಬ ನಿಶ್ಚಯದಿಂದ ತನ್ನ ಕೊನೆಯ ಆಯುಧವಾಗಿ ಉಳಿದಿದ್ದ ಕತ್ತಿಯನ್ನು ಸೆಳೆದು, ಕಿರಾತನ ಮೇಲೆ ರಭಸದಿಂದ ನುಗ್ಗಿ, ಅವನ ತಲೆಗೆ ಗುರಿಯಿಟ್ಟು ಹೊಡೆದನು. ಕಿರಾತನ ತಲೆಯು ನುಚ್ಚುನೂರಾಯಿತೆಂದೇ ಅರ್ಜುನನು ಭಾವಿಸಿದ್ದನು. ಏಕೆಂದರೆ : ಆ ಕತ್ತಿಯು ಕಲ್ಲನ್ನಾದರೂ ಚೂರುಮಾಡುವ ಸಾಮರ್ಥ್ಯವುಳ್ಳದ್ದಾಗಿದ್ದಿತು.

ಆದರೆ ಅರ್ಜುನನಿಗೆ ಪರಮಾಶ್ಚರ್ಯವಾಗುವ ರೀತಿಯಲ್ಲಿ ಕಿರಾತನ ತಲೆಯನ್ನು ಸೀಳಲು ಹೋದ ಕತ್ತಿಯು ತಾನೇ ನೂರಾರು ಚೂರುಗಳಾಗಿ ಒಡೆದು, ಪುಡಿ-ಪುಡಿಯಾಗಿ ಕೆಳಗೆ ಬಿದ್ದಿತು. ಅರ್ಜುನನು ಮುಂದೇನು ಮಾಡಬೇಕು? ಅರ್ಜುನನಿಗೆ ಕೋಪವು ಮತ್ತಷ್ಟು ಉಲ್ಬಣಿಸಿತು. ಹತ್ತಿರದಲ್ಲಿದ್ದ ಮರಗಳನ್ನೇ ಕಿತ್ತು ಕಿರಾತನನ್ನು ಪ್ರಹರಿಸಿದನು. ಬಂಡೆಗಳನ್ನೇ ಎತ್ತಿ ಕಿರಾತನ ಮೇಲೆ ತೂರಿದನು. ಮಹಾನುಭಾವನಾದ ಶಂಕರನು ಆ ಪ್ರಹಾರಗಳೆಲ್ಲವನ್ನೂ ತಾಳ್ಮೆಯಿಂದಲೇ ಸಹಿಸಿದನು. ಎಷ್ಟು ಮರಗಳನ್ನು ಕಿತ್ತು ಪ್ರಹರಿಸಿದರೂ, ಎಷ್ಟು ಬಂಡೆಗಳನ್ನು ಕಿರಾತನ ಮೇಲೆ ತೂರಿದರೂ ಕಿರಾತನು ಸ್ವಲ್ಪವಾದರೂ ವಿಚಲಿತನಾಗಲಿಲ್ಲ. ಪರ್ವತದಂತೆ ಅಚಲನಾಗಿಯೇ ನಿಂತು ನಸುನಗುತ್ತಾ ಪ್ರತಿಯೊಂದು ಪ್ರಹಾರವನ್ನೂ ದೂರದಿಂದಲೇ ತಡೆದುಬಿಡುತ್ತಿದ್ದನು. ಸಮೀಪದಲ್ಲಿದ್ದ ವೃಕ್ಷಗಳೆಲ್ಲಾ ಮುಗಿದು ಹೋದುವು. ಬಂಡೆಗಳೂ ಕಾಣಲಿಲ್ಲ. ಕೋಪದ ಆಧಿಕ್ಯದಿಂದಾಗಿ ಅರ್ಜುನನ ಬಾಯಿಂದ ಧೂಮವು ಹೊರಹೊಮ್ಮುತ್ತಿದ್ದಿತು. ತನ್ನ ಮುಷ್ಟಿಯೇ ಕಡೆಯ ಆಯುಧವೆಂದು ನಿಶ್ಚಯಿಸಿದ ಅರ್ಜುನನು ಬಿಗಿಮುಷ್ಟಿಮಾಡಿ ರಭಸದಿಂದ ಕಿರಾತನ ಕಡೆಗೆ ನುಗ್ಗಿ ಇಂದ್ರನ ವಜ್ರಾಯುಧಕ್ಕೆ ಸಮಾನವಾದ ಮುಷ್ಟಿಯಿಂದ ಕಿರಾತನ ತಲೆಯ ಮೇಲೆ ಪ್ರಹರಿಸಿದನು. ಅದಕ್ಕೆ ಪ್ರತಿಯಾಗಿ ಕಿರಾತರೂಪಿಯಾದ ಶಂಕರನೂ ಅರ್ಜುನನನ್ನು ತನ್ನ ಮುಷ್ಟಿಯಿಂದ ಪ್ರಹರಿಸಿದನು. ಅವರಿಬ್ಬರ ಮುಷ್ಟಿಯುದ್ಧದ ಪರಿಣಾಮವಾಗಿ ಆ ಹಿಮವ

ತ್ಪರ್ವತದ ತಪ್ಪಲುಪ್ರದೇಶವು ಭಯಂಕರವಾದ ಶಬ್ದಗಳಿಂದ ಪ್ರತಿಧ್ವನಿತವಾಗುತ್ತಿದ್ದಿತು. ವೃತ್ರ-ವಾಸವರ ಯುದ್ಧಕ್ಕೆ ಸದೃಶವಾದ, ರೋಮಾಂಚಕಾರಕವಾದ ಆ ಮುಷ್ಟಿಯುದ್ಧವು ಸ್ವಲ್ಪಕಾಲ ನಡೆಯಿತು. ಅನಂತರದಲ್ಲಿ ಅರ್ಜುನನು ಮುಷ್ಟಿಯುದ್ಧವನ್ನು ನಿಲ್ಲಿಸಿ ಕಿರಾತನನ್ನು ಬಾಹುಪಾಶಗಳಿಂದಲೇ ಬಂಧಿಸಿ ತನ್ನ ವಕ್ಷಸ್ಥಳದಿಂದ ಕಿರಾತನ ವಕ್ಷಸ್ಥಳವನ್ನು ಗಟ್ಟಿಯಾಗಿ ಅಪ್ಪಳಿಸಿದನು. ಅದಕ್ಕೆ ಪ್ರತಿಯಾಗಿ ಕಿರಾತನೂ ಅರ್ಜುನನನ್ನು ತನ್ನ ಬಾಹುಪಾಶಗಳಿಂದ ಬಿಗಿದು, ಉಸಿರಾಡಲು ಕೂಡ ಆಗದಂತೆ ಹಿಸುಕಿದನು. ಅವರಿಬ್ಬರ ಭುಜಗಳ ಮತ್ತು ವಕ್ಷಸ್ಥಳಗಳ ಸಂಘಟ್ಟನೆಯಿಂದಾಗಿ ಧೂಮಸಮೇತವಾದ ಅಗ್ನಿಯು ಪ್ರಾದುರ್ಭೂತವಾಯಿತು. ಶಂಕರನು ಕೋಪಾವಿಷ್ಟನಾಗಿ ಅದುವರೆಗಾಗಲೇ ಬಹುವಾಗಿ ಪೀಡಿಸಲ್ಪಟ್ಟಿದ್ದ ಅರ್ಜುನನನ್ನು ಪುನಃ ತನ್ನ ಬಾಹುಪಾಶಗಳಿಂದ ಬಿಗಿದು ಅವನ ಅಂಗಾಂಗಗಳೆಲ್ಲವನ್ನೂ ಹಿಸುಕಿಬಿಟ್ಟನು. ಅರ್ಜುನನ ಶರೀರದಲ್ಲಿದ್ದ ಮೂಳೆಗಳೆಲ್ಲವೂ ನುಚ್ಚುನೂರಾಗಿ, ನಖ-ಶಿಖಾಂತವಾದ ಶರೀರವು ಕೇವಲ ಮಾಂಸದ ಮುದ್ದೆಯಂತಾಯಿತು. ಕಿರಾತನಿಂದ ಈ ರೀತಿಯಲ್ಲಿ ಪೀಡಿಸಲ್ಪಟ್ಟ ಅರ್ಜುನನಿಗೆ ಉಸಿರಾಡಲು ಕೂಡ ಅಸಾಧ್ಯವಾಯಿತು. ನಿಲ್ಲಲು ಕೂಡ ಸಾಧ್ಯವಾಗದೇ ಸೊರಗಿ ಸತ್ತವನಂತೆ ಕೆಳಗುರುಳಿದನು. ಜ್ಞಾನಶೂನ್ಯನಾಗಿ ಕೆಲವು ಕ್ಷಣಗಳು ಬಿದ್ದಿದ್ದು ಅನಂತರ ಎಚ್ಚರಗೊಂಡ ಅರ್ಜುನನು ಮೆಲ್ಲ-ಮೆಲ್ಲನೆ ಮೇಲೆದ್ದು ಕುಳಿತು ತನ್ನ ಶರೀರವೆಲ್ಲವೂ ರಕ್ತದಿಂದ ತೋಯ್ದಿರುವುದನ್ನೂ ಕಂಡು ತಾನು ಹೆಚ್ಚು ದುರ್ಬಲನಾಗಿರುವುದನ್ನೂ ಮನಗಂಡನು. ದುಃಖಿತನಾದ ಅರ್ಜುನನಿಗೆ ಮುಂದೇನು ಮಾಡಬೇಕೆಂಬುದೇ ತಿಳಿಯದಾಯಿತು. ಕುಳಿತಲ್ಲಿಯೇ ತನ್ನ ಉಪಾಸ್ಯದೈವನಾದ, ಮಂಗಳಮೂರ್ತಿಯಾದ ಪರಶಿವನನ್ನು ಮನಸ್ಸಿನಲ್ಲಿಯೇ ನಮಿಸಿ ಮಣ್ಣನ್ನು ಬಗೆದು ಪೀಠವನ್ನು ನಿರ್ಮಿಸಿ, ಲಿಂಗಾಕಾರದ ಶಿವಮೂರ್ತಿಯನ್ನು ಕಲ್ಪಿಸಿ, ವನಕುಸುಮಗಳಿಂದ ಮಾಡಿದ ಮಾಲೆಯನ್ನು ಅರ್ಪಿಸಿ ಧ್ಯಾನಾಸಕ್ತನಾದನು. ಕೆಲವು ನಿಮಿಷಗಳು ಕಳೆದು ಕಣ್ತೆರೆದು ನೋಡಲಾಗಿ ಅವನು ಲಿಂಗಕ್ಕೆ ಹಾಕಿದ್ದ ಮಾಲೆಯು ಮಾಯವಾಗಿದ್ದಿತು. ಸುತ್ತಲೂ ನೋಡಿದನು. ವನಸುಮಮಾಲೆಯು ಕಿರಾತನ

ತಲೆಯನ್ನು ಅಲಂಕರಿಸಿದ್ದಿತು. ಅದನ್ನು ನೋಡಿದೊಡನೆಯೇ ಅರ್ಜುನನ ಕಣ್ಣುಗಳಿಂದ ಆನಂದಬಾಷ್ಪಗಳು ಸುರಿದುವು. ಮಹಾನಂದವಾಯಿತು. ನವಚೇತನವುಂಟಾಯಿತು. ಯುದ್ಧಮಾಡಿದ ಆಯಾಸವು ಲೇಶಮಾತ್ರವೂ ಉಳಿಯಲಿಲ್ಲ. ಅರ್ಜುನನು ಒಡನೆಯೇ ಮೇಲೆದ್ದು ಪರಮೇಶ್ವರನಿಗೆ ಸಾಷ್ಟಾಂಗಪ್ರಣಾಮಮಾಡಿದನು. ಶಂಕರನೂ ಸುಪ್ರೀತನಾಗಿ ದೀರ್ಘದಂಡ ಪ್ರಣಾಮಮಾಡಿದ ಅರ್ಜುನನನ್ನು ಹಿಡಿದು ಮೇಲೆತ್ತಿ, ತಪಸ್ಸಿನಿಂದ ಕ್ಷೀಣ ವಾಗಿದ್ದ ಅರ್ಜುನನ ಶರೀರವನ್ನು ಸ್ಪರ್ಶಮಾಡುತ್ತಾ ವಿಸ್ಮಯಾನ್ವಿತನಾದ ಅರ್ಜುನನನ್ನು ಕುರಿತು ಮೇಘದಂತೆ ಗಂಭೀರವಾದ ವಾಣಿಯಿಂದ ಹೇಳಿದನು:

**ಭೋ ಭೋಃ ಫಾಲ್ಗುನ ತುಷ್ಟೋಽಸ್ಮಿ ಕರ್ಮಣಾಪ್ರತಿಮೇನ ತೇ ।**
**ಶೌರ್ಯೇಣಾನೇನ ಧೃತ್ಯಾ ಚ ಕ್ಷತ್ರಿಯೋ ನಾಸ್ತಿ ತೇ ಸಮಃ ॥೬೮॥**

**ಸಮಂ ತೇಜಶ್ಚ ವೀರ್ಯಂ ಚ ಮಯಾದ್ಯ ತವ ಚಾನಘ ।**
**ಪ್ರೀತಸ್ತೇಽಹಂ ಮಹಾಬಾಹೋ ಪಶ್ಯ ಮಾಂ ಭರತರ್ಷಭ ॥೬೯॥**

**ದದಾಮಿ ತೇ ವಿಶಾಲಾಕ್ಷ ಚಕ್ಷುಃ ಪೂರ್ವಋಷಿರ್ಭವಾನ್ ।**
**ವಿಜೇಷ್ಯಸಿ ರಣೇ ಶತ್ರೂನಪಿ ಸರ್ವಾನ್ದಿವೌಕಸಃ ॥೭೦॥**

**ಪ್ರೀತ್ಯಾ ಚ ತೇಽಹಂ ದಾಸ್ಯಾಮಿ ಯದಸ್ತ್ರಮನಿವಾರಿತಮ್ ।**
**ತ್ವಂ ಹಿ ಶಕ್ತೋ ಮದೀಯಂ ತದಸ್ತ್ರಂ ಧಾರಯಿತುಂ ಕ್ಷಣಾತ್ ॥**

"ಅರ್ಜುನ! ನಾನು ನಿನ್ನ ಅಪ್ರತಿಮಸಾಹಸವನ್ನು ಕಂಡು ಪ್ರೀತ ನಾಗಿದ್ದೇನೆ. ಶೌರ್ಯದಲ್ಲಿಯೂ, ಸ್ಥೈರ್ಯದಲ್ಲಿಯೂ ನಿನಗೆ ಸಮಾನರಾದ ಕ್ಷತ್ರಿಯರೇ ಇಲ್ಲ. ಹೆಚ್ಚೇನು ಹೇಳಲಿ, ಅರ್ಜುನ! ನಿನ್ನ ತೇಜಸ್ಸೂ ಮತ್ತು ಪರಾಕ್ರಮವೂ ನನ್ನ ತೇಜಸ್ಸಿಗೂ ಮತ್ತು ಪರಾಕ್ರಮಕ್ಕೂ ಸದೃಶವಾಗಿದೆ. ನಾನು ನಿನ್ನ ವಿಷಯದಲ್ಲಿ ಸುಪ್ರೀತನಾಗಿದ್ದೇನೆ. ನಿನಗೆ ನನ್ನ ನಿಜಸ್ವರೂಪವನ್ನು ನೋಡಲು ಶಕ್ಯವಾಗುವಂತೆ ದಿವ್ಯಚಕ್ಷುಸ್ಸನ್ನು ಕೊಡುತ್ತೇನೆ. ನೀನು ಹಿಂದೆ ನರನೆಂಬ ಋಷಿಯಾಗಿದ್ದೆ. ನಿನ್ನ ಶತ್ರುಗಳೆಲ್ಲರನ್ನೂ ಅವರು ದೇವತೆಗಳೇ ಆಗಿದ್ದರೂ ಜಯಿಸಿ ವಿಜಯಿ ಯಾಗುವೆ. ನಿನ್ನ ತಪಸ್ಸಿಗೂ ಮತ್ತು ಸಾಮರ್ಥ್ಯಕ್ಕೂ ಮೆಚ್ಚಿರುವ ನಾನು

ನಿನಗೆ ಅನಿವಾರ್ಯವಾದ, ಅಪ್ರತಿಹತವಾದ ಅಸ್ತ್ರವನ್ನು ಕೊಡುತ್ತೇನೆ. ಈ ಮಹಾಸ್ತ್ರವನ್ನು ಧಾರಣೆಮಾಡಲೂ ಮತ್ತು ಪ್ರಯೋಗಮಾಡಲೂ ನೀನೊಬ್ಬನೇ ಸಮರ್ಥನಾಗಿರುವೆ"–ಹೀಗೆಂದು ಹೇಳಿ ಪರಮೇಶ್ವರನು ಅರ್ಜುನನಿಗೆ ದಿವ್ಯದೃಷ್ಟಿಯನ್ನು ದಯಪಾಲಿಸಿದನು.



ಜನಮೇಜಯ! ಅರ್ಜುನನು ದಿವ್ಯಸುಂದರಮೂರ್ತಿಯಾದ ಮಹಾದೇವನ ದಿವ್ಯಸ್ವರೂಪವನ್ನು ಕಂಡನು. ಪ್ರಜ್ವಲಿಸುತ್ತಿದ್ದ ಶರೀರಕಾಂತಿ ; ಕೈಯಲ್ಲಿ ಪಿನಾಕಧನುಸ್ಸು ; ಪಕ್ಕದಲ್ಲಿ ಸರ್ವಮಂಗಳೆಯಾದ ಉಮಾದೇವಿ-ಕೈಲಾಸವಾಸಿಯಾದ ಪರಮೇಶ್ವರನ ಅಂತಹ ದಿವ್ಯಮಂಗಳರೂಪವನ್ನು ಕಂಡು ಪರಪುರಂಜಯನಾದ ಅರ್ಜುನನು ಆನಂದಭರಿತನಾಗಿ ಮಂಡಿಯನ್ನೂರಿ

ನಮಸ್ಕರಿಸಿ, ಭಕ್ತಿಯಿಂದ ಉದ್ಭೂತವಾದ ಅನೇಕಸ್ತೋತ್ರಗಳಿಂದ ಹರನನ್ನು ಸುಪ್ರಸನ್ನನನ್ನಾಗಿ ಮಾಡಿದನು :

ಕಪರ್ದಿನ್ಸರ್ವದೇವೇಶ ಭಗನೇತ್ರನಿಪಾತನ ।
ದೇವದೇವ ಮಹಾದೇವ ನೀಲಗ್ರೀವ ಜಟಾಧರ ॥೭೪॥

ಕಾರಣಾನಾಂ ಚ ಪರಮಂ ಜಾನೇ ತ್ವಾಂ ತ್ರ್ಯಮ್ಬಕಂ ವಿಭುಮ್ ।
ದೇವಾನಾಂ ಚ ಗತಿಂ ದೇವ ತ್ವತ್ಪ್ರಸೂತಮಿದಂ ಜಗತ್ ॥೭೫॥

ಅಜೇಯಸ್ತ್ವಂ ತ್ರಿಭಿರ್ಲೋಕೈಃ ಸದೇವಾಸುರಮಾನುಷೈಃ ।
ಶಿವಾಯ ವಿಷ್ಣುರೂಪಾಯ ವಿಷ್ಣವೇ ಶಿವರೂಪಿಣೇ ॥೭೬॥

ದಕ್ಷಯಜ್ಞವಿನಾಶಾಯ ಹರಿರುದ್ರಾಯ ವೈ ನಮಃ ।
ಲಲಾಟಾಕ್ಷಾಯ ಶರ್ವಾಯ ಮೀಢುಷೇ ಶೂಲಪಾಣಯೇ ॥೭೭॥

ಪಿನಾಕಗೋಪ್ತ್ರೇ ಸೂರ್ಯಾಯ ಮಙ್ಗಲ್ಯಾಯ ಚ ವೇಧಸೇ ।
ಪ್ರಸಾದಯೇ ತ್ವಾಂ ಭಗವನ್ಸರ್ವಭೂತಮಹೇಶ್ವರ ॥೭೮॥

ಗಣೇಶಂ ಜಗತಃ ಶಮ್ಭುಂ ಲೋಕಕಾರಣಕಾರಣಮ್ ।
ಪ್ರಧಾನಪುರುಷಾತೀತಂ ಪರಂ ಸೂಕ್ಷ್ಮತರಂ ಹರಮ್ ॥೭೯॥

ವ್ಯತಿಕ್ರಮಂ ಮೇ ಭಗವನ್ ಕ್ಷನ್ತುಮರ್ಹಸಿ ಶಂಕರ ।
ಭಗವದ್ದರ್ಶನಾಕಾಂಕ್ಷೀ ಪ್ರಾಪ್ತೋಽಸ್ಮೀಮಂ ಮಹಾಗಿರಿಮ್ ॥೮೦॥

ದಯಿತಂ ತವ ದೇವೇಶ ತಾಪಸಾಲಯಮುತ್ತಮಮ್ ।
ಪ್ರಸಾದಯೇ ತ್ವಾಂ ಭಗವನ್ಸರ್ವಲೋಕನಮಸ್ಕೃತಮ್ ॥೮೧॥

ನ ಮೇ ಸ್ಯಾದಪರಾಧೋಽಯಂ ಮಹಾದೇವಾತಿಸಾಹಸಾತ್ ।
ಕೃತೋ ಮಯಾಯಮಜ್ಞಾನಾದ್ವಿಮರ್ದೋ ಯಸ್ತ್ವಯಾ ಸಹ ।
ಶರಣಂ ಪ್ರತಿಪನ್ನಾಯ ತತ್ಕ್ಷಮಸ್ವಾದ್ಯ ಶಂಕರ ॥೮೨॥

“ಭೋಃ ಕಪರ್ದಿನ್! ದೇವದೇವ! ಭಗನೇತ್ರವಿನಾಶಕನೇ! ಮಹಾದೇವನೇ! ನೀಲಕಂಠನೇ! ಜಟಾಧರನೇ! ನೀನು ಕಾರಣಗಳೆಲ್ಲಕ್ಕೂ ಮೂಲಕಾರಣನಾಗಿರುವೆ. ನೀನು ತ್ರಿನೇತ್ರನಾಗಿರುವೆ. ಎಲ್ಲರಿಗೂ ನೀನೇ

ಪ್ರಭುವು. ನೀನು ದೇವತೆಗಳಿಗೂ ಶರಣ್ಯನು. ಅಖಂಡಬ್ರಹ್ಮಾಂಡವೂ ನಿನ್ನಿಂದಲೇ ಉತ್ಪನ್ನವಾಗಿದೆ. ಭುವನತ್ರಯಗಳಲ್ಲಿರುವ ದೇವಾಸುರ-ಮಾನವರಾರೂ ನಿನ್ನನ್ನು ಜಯಿಸಲಾರರು. ವಿಷ್ಣುರೂಪನಾಗಿರುವ ಶಿವನೇ ನೀನು ; ಶಿವರೂಪನಾಗಿರುವ ವಿಷ್ಣುವೂ ನೀನೇ ಆಗಿರುವೆ. ದಕ್ಷಯಜ್ಞ ವಿನಾಶಕನು ನೀನು. ಹರಿಯೇ! ಶಂಕರನೇ! ನಾನು ನಿನಗೆ ಸಾಷ್ಟಾಂಗಪೂರ್ವಕವಾಗಿ ನಮಸ್ಕರಿಸುವೆನು. ನೀನು ಹಣೆಯಲ್ಲಿಯೂ ಕಣ್ಣನ್ನು ಹೊಂದಿದ್ದು ಫಾಲನೇತ್ರನಾಗಿರುವೆ. ನೀನು ಭಕ್ತರ ಇಷ್ಟಾರ್ಥಗಳನ್ನು ಪೂರ್ಣಗೊಳಿಸುವೆ. ನಿನಗೆ ಶರ್ವನೆಂದೂ ಹೆಸರು. ತ್ರಿಶೂಲಧಾರಿಯೇ! ನೀನು ಪಿನಾಕಪಾಣಿಯೂ ಆಗಿರುವೆ. ಶುದ್ಧಾತ್ಮನು ನೀನು ; ಸೃಷ್ಟಿಗೆ ಕಾರಣನೂ ಆಗಿರುವ. ನಿನಗೆ ನಮಿಸುವೆನು. ಚರಾಚರಪ್ರಾಣಿಗಳಿಗೂ ಈಶ್ವರನಾಗಿರುವ ನಿನ್ನನ್ನು, ನಿನ್ನ ಅನುಗ್ರಹವನ್ನು ಪಡೆಯುವ ಆಶಯದಿಂದ ಪೂಜಿಸುತ್ತೇನೆ.

ನೀನೇ ಗಣೇಶ್ವರನು ; ಪ್ರಪಂಚಕ್ಕೆಲ್ಲಾ ಮಂಗಳವನ್ನುಂಟುಮಾಡುವ ಶಂಭುವೂ ನೀನೇ ; ಲೋಕಕಾರಣಕ್ಕೂ ಕಾರಣನು ನೀನಾಗಿರುವೆ. ಪ್ರಕೃತಿ-ಪುರುಷರಿಗಿಂತಲೂ ಅತೀತನಾದವನು ನೀನು. ಸೂಕ್ಷ್ಮಾತ್ ಸೂಕ್ಷ್ಮಸ್ವರೂಪನೂ ನೀನೇ ಆಗಿರುವೆ. ಪಾಪಹರನಾದ ಹರನು ನೀನು. ಭೋ ಶಂಕರ! ನನ್ನ ವ್ಯತಿಕ್ರಮವನ್ನೂ, ನಾನು ಮಾಡಿದ ಅಪರಾಧವನ್ನೂ ಕ್ಷಮಿಸಲು ಅರ್ಹನಾಗಿರುವೆ. ಮಹಾದೇವ! ನಿನ್ನ ದರ್ಶನಾಕಾಂಕ್ಷಿ ಯಾಗಿಯೇ ನಾನಿಲ್ಲಿಗೆ–ಈ ಹಿಮವತ್ಪರ್ವತಕ್ಕೆ ಬಂದಿರುತ್ತೇನೆ. ತಪಸ್ವಿಗಳ ನಿವಾಸಕ್ಕೆ ಯೋಗ್ಯವಾದ ಈ ಪುಣ್ಯಭೂಮಿಗೆ ಬಂದಿರುತ್ತೇನೆ. ಸರ್ವಲೋಕ ನಮಸ್ಕೃತನಾದ ಪರಮೇಶ್ವರನೇ! ನಿನ್ನ ದಿವ್ಯಾನುಗ್ರಹವನ್ನು ಪಡೆಯುವ ಸಲುವಾಗಿ ನಿನ್ನನ್ನು ಪೂಜಿಸುವೆನು. ಸಾಮರ್ಥ್ಯದ ಮದದಿಂದ ಮಾಡಿರುವ ನನ್ನೀ ಕಾರ್ಯವು ದಯಾಮಯನಾದ ನಿನ್ನಿಂದ ಅಪರಾಧವೆಂದು ಪರಿಗಣಿತ ವಾಗದಿರಲಿ. ನಾನು ನಿನ್ನೊಡನೆ ಅಜ್ಞಾನದಿಂದ ಯುದ್ಧಮಾಡಿದೆನೇ ಹೊರತು ನೀನು ಪರಮೇಶ್ವರನೆಂದು ತಿಳಿದು ಮಾಡಿರುವುದಿಲ್ಲ. ನಿನ್ನೊಡನೆ ಯುದ್ಧಮಾಡುವ ಸಾಮರ್ಥ್ಯವೂ ನನಗಿರುವುದಿಲ್ಲ. ಅಜ್ಞಾನದಿಂದ ಮಾಡಿ

ರುವ ಈ ಅಪರಾಧವನ್ನು ಕ್ಷಮಿಸಿ, ಶರಣಾಗತನಾಗಿರುವ ನನ್ನನ್ನು ಕಾಪಾಡು, ಮಹಾಪ್ರಭೋ!"

ವೃಷಭಧ್ವಜನಾದ ಶಂಕರನು, ಅರ್ಜುನನು ಮಾಡಿದ ಸ್ತೋತ್ರಕ್ಕೆ ಸುಪ್ರೀತನಾಗಿ ನಸುನಗುತ್ತಾ ತನ್ನ ಕೈಯಿಂದ ಅರ್ಜುನನ ಭುಜವನ್ನು ಹಿಡಿದುಕೊಂಡು ಹೇಳಿದನು : "ನಾನು ನಿನ್ನನ್ನು ಕ್ಷಮಿಸಿರುವೆನು, ಅರ್ಜುನ!"

ಭಕ್ತಶರಣ್ಯನಾದ, ದಯಾಮಯನಾದ ಪರಮೇಶ್ವರನ ಬಾಹುಲತೆಗಳು ಭಕ್ತಾಗ್ರೇಸರನಾದ ಅರ್ಜುನನನ್ನು ತಬ್ಬಿದುವು. ತಂದೆಯು ಮಗನ ನೆತ್ತಿಯನ್ನು ವಾತ್ಸಲ್ಯದಿಂದ ಆಘ್ರಾಣಿಸುವಂತೆ–ಪರಮೇಶ್ವರನು ಅರ್ಜುನನ ನೆತ್ತಿಯನ್ನು ವಾತ್ಸಲ್ಯಪೂರ್ವಕವಾಗಿ ಆಘ್ರಾಣಿಸಿ–ಮೈದಡವಿ ಸಂತೈಸಿ ಹೇಳತೊಡಗಿದನು.

೩೯ನೆಯ ಅಧ್ಯಾಯವು ಮುಗಿಯಿತು.

೪೦ನೆಯ ಅಧ್ಯಾಯ ಕೈರಾತಪರ್ವ (ಮುಂದುವರಿದಿದೆ.)

## ಭಗವಾನ್ ಶಂಕರನು ಅರ್ಜುನನಿಗೆ ವರದಾನಮಾಡಿ ಸ್ವಸ್ಥಾನಕ್ಕೆ ತೆರಳಿದುದು

ಜನಮೇಜಯ! ಪರಶಿವನು ಹೇಳುತ್ತಾನೆ :

**ನರಸ್ತ್ವಂ ಪೂರ್ವದೇಹೇ ವೈ ನಾರಾಯಣಸಹಾಯವಾನ್ ।**
**ಬದರ್ಯಾಂ ತಪ್ತವಾನುಗ್ರಂ ತಪೋ ವರ್ಷಾಯುತಾನ್ಬಹೂನ್ ॥೧॥**

**ತ್ವಯಿ ವಾ ಪರಮಂ ತೇಜೋ ವಿಷ್ಣೌ ವಾ ಪುರುಷೋತ್ತಮೇ ।**
**ಯುವಾಭ್ಯಾಂ ಪುರುಷಾಗ್ರ್ಯಾಭ್ಯಾಂ ತೇಜಸಾ ಧಾರ್ಯತೇ ಜಗತ್ ॥೨॥**

**ಶಕ್ರಾಭಿಷೇಕೇ ಸುಮಹದ್ಧನುರ್ಜಲದನಿಃಸ್ವನಮ್ ।**
**ಪ್ರಗೃಹ್ಯ ದಾನವಾಃ ಶಸ್ತಾಸ್ತ್ವಯಾ ಕೃಷ್ಣೇನ ಚ ಪ್ರಭೋ ॥೩॥**

"ಅರ್ಜುನ! ನೀನು ಹಿಂದಿನ ಜನ್ಮದಲ್ಲಿ ನರನೆಂಬ ಋಷಿಯಾಗಿ, ನಾರಾಯಣನ ಮಿತ್ರನಾಗಿದ್ದೆ. ಬದರಿಕಾಶ್ರಮದಲ್ಲಿ ಅನೇಕಸಹಸ್ರವರ್ಷ

ಗಳ ಕಾಲ ನೀನು ಘೋರವಾದ ತಪಸ್ಸನ್ನು ಮಾಡುತ್ತಿದ್ದೆ. ನಿನ್ನಲ್ಲಿಯೂ ಮತ್ತು ಪರಮಪುರುಷನಾದ ಶ್ರೀಮನ್ನಾರಾಯಣನಲ್ಲಿಯೂ ಮಹತ್ತರವಾದ ತೇಜಸ್ಸು ಅಡಗಿರುವುದು. ನಿಮ್ಮಿಬ್ಬರ ಮಹಾತೇಜಸ್ಸಿನಿಂದಲೇ ಈ ಪ್ರಪಂಚವು ಧರಿಸಲ್ಪಟ್ಟಿದೆ. ಹಿಂದೆ ಇಂದ್ರನಿಗೆ ತ್ರೈಲೋಕ್ಯಾಧಿಪತ್ಯದ ಪಟ್ಟಾಭಿಷೇಕಕಾಲದಲ್ಲಿ ಪಟ್ಟಾಭಿಷೇಕವನ್ನು ತಡೆಯಲು ಬಂದ ದಾನವರನ್ನು ನೀನೂ ಮತ್ತು ಕೃಷ್ಣನೂ (ವಿಷ್ಣುವೂ)–ಸಿಡಿಲಿನ ಶಬ್ದಕ್ಕೆ ಸಮಾನವಾದ ಟೇಂಕಾರದಿಂದ ಕೂಡಿದ ಧನುಸ್ಸಿನ ಸಹಾಯದಿಂದ–ಸದೆಬಡಿದು ಓಡಿಸಿದಿರಿ. ನೀನು ಈಗ ಧರಿಸಿರುವ ಈ ಗಾಂಡೀವಧನುಸ್ಸೇ ಅಂದು ಅಸುರ ರನ್ನು ಸದೆಬಡಿದು ಓಡಿಸಿದ ಧನುಸ್ಸಾಗಿದ್ದಿತು. ನಾನು ಮಾಯಾವಿದ್ಯೆಯನ್ನು ಪ್ರಯೋಗಿಸಿ, ನಿನ್ನಲ್ಲಿದ್ದ ಈ ಮಹಾಧನುಸ್ಸನ್ನು ಕಿತ್ತುಕೊಂಡಿರುವೆನು. ನಿನ್ನಿಂದ ಧರಿಸಲು ಯೋಗ್ಯವಾಗಿರುವ ಆ ಬತ್ತಳಿಕೆಗಳೂ ಪುನಃ ಮೊದಲಿ ನಂತೆಯೇ ಅಕ್ಷಯತೂಣೀರಗಳಾಗುತ್ತವೆ. ನಿನ್ನ ಶರೀರವೂ ಎಂದೆಂದಿಗೂ ನೀರೋಗದೃಢವಾಗಿರುತ್ತದೆ. ಪಾರ್ಥ! ನೀನು ಅಪ್ರತಿಮಪರಾಕ್ರಮಿ ಯಾಗಿರುವೆ. ನಿನ್ನ ಪರಾಕ್ರಮಕ್ಕೆ ನಾನು ಸುಪ್ರೀತನಾಗಿದ್ದೇನೆ. ನಿನಗೆ ಬೇಕಾದ ವರಗಳನ್ನು ಕೇಳು. ಕೊಡಲು ಸಿದ್ಧನಾಗಿರುವೆನು. ಅರಿಂದಮ! ನಿನಗೆ ಸಮಾನರಾದ ಪುರುಷಸಿಂಹರು ದೇವಲೋಕದಲ್ಲಾಗಲೀ, ಮರ್ತ್ಯಲೋಕ ದಲ್ಲಾಗಲೀ ಇರುವುದಿಲ್ಲ. ಕ್ಷತ್ರಿಯಕುಲಕ್ಕೇ ನೀನು ಪರಾಕ್ರಮದಲ್ಲಿ ಪ್ರಧಾನಭೂತನಾಗಿರುವೆ." (ಕ್ಷತ್ರಿಯರಲ್ಲಿ ಮಹಾಪರಾಕ್ರಮಶಾಲಿಗಳಾ ರೆಂದು ಗಣನೆಮಾಡುವುದಾದರೆ ಮೊದಲು ಅರ್ಜುನನ ಹೆಸರನ್ನು ಹೇಳಿ ಎರಡನೆಯವರ ಹೆಸರನ್ನು ಹೇಳಬೇಕು.)

ಪರಮೇಶ್ವರನ ದಯಾರಸಪೂರ್ಣವಾದ ಆ ಮಾತುಗಳನ್ನು ಕೇಳಿ ಮಾನದನಾದ ಅರ್ಜುನನು ವಿನೀತನಾಗಿ ಪರಮೇಶ್ವರನಿಗೆ ಹೇಳಿದನು :

**ವರಂ ದದಾಸಿ ಚೇನ್ಮಹ್ಯಂ ಕಾಮಂ ಪ್ರೀತ್ಯಾ ವೃಷಧ್ವಜ ।**
**ಕಾಮಯೇ ದಿವ್ಯಮಸ್ತ್ರಂ ತದ್ಘೋರಂ ಪಾಶುಪತಂ ಪ್ರಭೋ ॥೮॥**

"ಮಹಾನುಭಾವನೇ! ವೃಷಧ್ವಜನೇ! ನನ್ನ ವಿಷಯದಲ್ಲಿ ನೀನು ಸುಪ್ರೀತನಾಗಿರುವೆಯಾದರೆ–ನನಗೆ ವರವನ್ನು ಕೊಡುವ ಇಚ್ಛೆಯುಳ್ಳವ

ನಾಗಿರುವೆಯಾದರೆ–ರೌದ್ರಾಕಾರದ, ಭಯಂಕರಪರಾಕ್ರಮವುಳ್ಳ, ಯುಗಾಂತ್ಯದಲ್ಲಿ ಪ್ರಪಂಚವೆಲ್ಲವನ್ನೂ ಕ್ಷಣಮಾತ್ರದಲ್ಲಿ ನಿರ್ಮೂಲನ ಮಾಡುವ ಸಾಮರ್ಥ್ಯವಿರುವ, ದಿವ್ಯವಾದ ಪಾಶುಪತಾಸ್ತ್ರವನ್ನು ದಯ ಪಾಲಿಸು. ಆ ಮಹಾಸ್ತ್ರವನ್ನು ನಿನ್ನಿಂದ ಪಡೆಯಲು ನಾನು ಇಚ್ಛಿಸಿದ್ದೇನೆ. ನಿನ್ನ ಅನುಗ್ರಹದಿಂದ ಪಡೆಯಲಿರುವ ಆ ಮಹಾಸ್ತ್ರದ ಅವಲಂಬನೆಯಿಂದ ಮುಂದೆ ಸಂಭವಿಸಲಿರುವ ಯುದ್ಧದಲ್ಲಿ ಕರ್ಣ-ಭೀಷ್ಮ-ಕೃಪ-ದ್ರೋಣರ ಮೇಲೆ ಜಯಗಳಿಸುವ ಆಶಯದಿಂದಿರುತ್ತೇನೆ. ಮಂತ್ರಪೂರ್ವಕವಾಗಿ ಅಭಿಮಂತ್ರಿಸಿ ಪ್ರಯೋಗಿಸಿದೊಡನೆಯೇ ಯಾವ ಮಹಾಸ್ತ್ರಕ್ಕೆ ಸಾವಿರಾರು ಶೂಲಗಳನ್ನೂ, ಸಾವಿರಾರು ಗದೆಗಳನ್ನೂ, ವಿಷಸರ್ಪಸದೃಶಗಳಾದ ಸಾವಿರಾರು ಬಾಣಗಳನ್ನೂ ಉತ್ಪಾದನೆಮಾಡುವ ಸಾಮರ್ಥ್ಯವಿರುವುದೋ–ಆ ಮಹಾಸ್ತ್ರದ ಅವಲಂಬನೆಯಿಂದ ನನಗೆ ಎದುರಾಗಿ ಬರುವ ಯಕ್ಷ-ದಾನವ- ರಾಕ್ಷಸರನ್ನೂ, ಪಿಶಾಚ-ಗುಹ್ಯ-ನಾಗರುಗಳನ್ನೂ ಧ್ವಂಸಮಾಡಿಬಿಡುವ ಆಶಯದಿಂದಿರುತ್ತೇನೆ. ಯಾವ ಮಹಾಸ್ತ್ರವು ನನ್ನಲ್ಲಿದೆಯೆಂಬ ಭರವಸೆಯಿಂದಲೇ ಭೀಷ್ಮ-ದ್ರೋಣ-ಕೃಪರೊಡನೆಯೂ, ಕಟುಭಾಷಿಯಾದ ಸೂತಪುತ್ರನೊಡನೆಯೂ ಧೈರ್ಯದಿಂದ ಮುನ್ನುಗ್ಗಿ ಯುದ್ಧಮಾಡಲು ಸಮರ್ಥನಾಗುತ್ತೇನೆಯೋ–ಅಂತಹ ಮಹಾಸ್ತ್ರವಾದ ಪಾಶುಪತವನ್ನು ದಯಪಾಲಿಸು. ಭಗನೇತ್ರಾಪ ಹಾರಕನೇ! ಆ ಮಹಾಸ್ತ್ರದ ಧಾರಣೆಯಿಂದ ನನ್ನ ಶತ್ರುಗಳನ್ನು ಎದುರಿಸಿ ವಿಜಯಿಯಾಗಬೇಕೆಂಬುದೇ ನನ್ನ ಅತ್ಯುತ್ಕಟವಾದ ಇಚ್ಛೆಯಾಗಿದೆ.”

“ವಿಭೋ! ಅರ್ಜುನ! ನನಗೆ ಅತ್ಯಂತಪ್ರಿಯತಮವಾಗಿರುವ ಪಾಶುಪತಾಸ್ತ್ರವನ್ನು ನಿನಗೆ ಕೊಡುವೆನು. ನೀನು ಈ ಮಹಾಸ್ತ್ರವನ್ನು ಧಾರಣೆ ಮಾಡಲೂ ಸಮರ್ಥನಾಗಿರುವೆ. ಪ್ರಯೋಗೋಪಸಂಹಾರಗಳಲ್ಲಿಯೂ ನೀನು ಸಮರ್ಥನಾಗುವೆ. ಇದರ ಧಾರಣ-ಮೋಕ್ಷ-ಸಂಹಾರಗಳ ರಹಸ್ಯವು ದೇವಾಧಿಪತಿಯಾದ ಇಂದ್ರನಿಗೂ, ಯಮನಿಗೂ, ಕುಬೇರನಿಗೂ, ವರುಣನಿಗೂ ಮತ್ತು ವಾಯುವಿಗೂ ತಿಳಿಯದು. ದಿಕ್ಪಾಲಕರುಗಳಿಗೇ ತಿಳಿಯದಿರುವ ಈ ರಹಸ್ಯವು ಮಾನವರಿಗೆ ಹೇಗೆ ತಾನೇ ತಿಳಿಯಲು ಸಾಧ್ಯವಾದೀತು? ಆದರೆ ಪಾರ್ಥ!

**ನ ತ್ವೇತತ್ಸಹಸಾ ಪಾರ್ಥ ಮೋಕ್ತವ್ಯಂ ಪುರುಷೇ ಕ್ವಚಿತ್ ।**
**ಜಗದ್ವಿನಾಶಯೇತ್ಸರ್ವಮಲ್ಪತೇಜಸಿ ಪಾತಿತಮ್ ॥೧೭॥**

**ಅವಧ್ಯೋ ನಾಮ ನಾಸ್ತ್ಯತ್ರ ತ್ರೈಲೋಕ್ಯೇ ಸಚರಾಚರೇ ।**
**ಮನಸಾ ಚಕ್ಷುಷಾ ವಾಚಾ ಧನುಷಾ ಚ ನಿಪಾತಯೇತ್ ॥೧೮॥**

ಈ ಮಹಾಸ್ತ್ರವನ್ನು ವಿವೇಚನೆಯಿಲ್ಲದೇ ದುಡುಕಿ ಖಂಡಿತವಾಗಿಯೂ ಪ್ರಯೋಗಿಸಬಾರದು. ಅಲ್ಪಬಲವಿರುವವರ ಮೇಲೆ ಪ್ರಯೋಗಿಸಿದರೆ ಈ ಮಹಾಸ್ತ್ರವು ಅಖಂಡಬ್ರಹ್ಮಾಂಡವನ್ನೇ ದಹಿಸಿಬಿಡಬಲ್ಲುದು. ಸ್ವರ್ಗಲೋಕ-ಮರ್ತ್ಯಲೋಕ-ಪಾತಾಳಲೋಕಗಳಲ್ಲಿರುವ ಚರಾಚರಪ್ರಾಣಿಗಳಲ್ಲಿ ಯಾವುದೊಂದು ಪ್ರಾಣಿಯೂ ಈ ಮಹಾಸ್ತ್ರವನ್ನು ಎದುರಿಸಿ ನಿಲ್ಲಲಾರದು. ಎದುರಿಸಿ ನಿಂತರೆ ಅವುಗಳ ಅವಸಾನವು ಸನ್ನಿಹಿತವಾದಂತೆಯೇ ಸರಿ. ಈ ಮಹಾಸ್ತ್ರದ ಅಧಿದೇವತೆಯನ್ನು ಮನಸ್ಸಿನಲ್ಲಿ ಧ್ಯಾನಮಾಡಿ ದಿಟ್ಟಿಸಿ ನೋಡಿ, ಮಂತ್ರಪುನಶ್ಚರಣೆಮಾಡಿ ಧನುಸ್ಸಿಗೇರಿಸಿ ಪ್ರಯೋಗಿಸಬೇಕು."

ಪರಶಿವನ ಮಾತುಗಳನ್ನು ಕೇಳಿ ಪಾರ್ಥನು ಸಂತೋಷಭರಿತನಾಗಿ, ಒಡನೆಯೇ ಸರಸ್ಸಿನಲ್ಲಿ ಮಿಂದು, ಶುದ್ಧಾಂತಃಕರಣನಾಗಿ, ಮಹಾದೇವನ ಬಳಿಗೆ ಹೋಗಿ ಅಭಿವಾದನಪೂರ್ವಕವಾಗಿ ನಮಸ್ಕರಿಸಿ, ಗುರುವಿನ ಬಳಿಯಲ್ಲಿ ಶಿಷ್ಯನು ಕುಳಿತುಕೊಳ್ಳುವಂತೆ ವಿನೀತನಾಗಿ ಕುಳಿತು, ಮಹಾದೇವನನ್ನು ಕುರಿತು ಹೇಳಿದನು : 'ಪ್ರಭೋ! ಅಧೀಷ್ವ'–'ಪ್ರಭುವೇ! ಉಪದೇಶಿಸು.'

ಮಹಾದೇವನು ಪ್ರೀತಮನಸ್ಕನಾಗಿ ಅರ್ಜುನನಿಗೆ–ಶರೀರವನ್ನು ಧರಿಸಿರುವ ಅಂತಕನೋಪಾದಿಯಲ್ಲಿದ್ದ ಅಧಿದೇವತೆಯಿಂದ ಕೂಡಿದ್ದ ಮಹಾಪಾಶುಪತಾಸ್ತ್ರಮಂತ್ರವನ್ನು ಪ್ರಣವಪೂರ್ವಕವಾಗಿ ಉಪದೇಶಮಾಡಿ, ಮೋಕ್ಷೋಪಸಂಹಾರಗಳನ್ನೂ ಉಪದೇಶಿಸಿದನು. ಶಂಕರನನ್ನು ಸೇವಿಸುತ್ತಿದ್ದ ಆ ಮಹಾಸ್ತ್ರದ ಅಧಿದೇವತೆಯು ಒಡನೆಯೇ ಅರ್ಜುನನ ಸಮೀಪಕ್ಕೆ ಬಂದು ನಿಂತಿತು. ಅರ್ಜುನನು ಆ ದೇವತೆಯನ್ನು ಪ್ರೇಮಪುರಸ್ಸರವಾಗಿ ಸ್ವಾಗತಿಸಿದನು. ಆ ಸಮಯದಲ್ಲಿ ಪರ್ವತ-ಗಿರಿ-ದುರ್ಗಗಳೂ, ವೃಕ್ಷಗಳೂ, ಸಮುದ್ರಗಳೂ, ಕಾಡುಗಳೂ, ಗ್ರಾಮ-ನಗರಗಳೂ, ಖನಿಗಳೂ ಕಂಪಿಸಿ

ದುವು. (ಅವುಗಳಿಂದ ಕೂಡಿದ ಭೂಮಿಯೇ ಕಂಪಿಸಿತು.) ಶಂಖ-ಭೇರಿಗಳ ನಿನಾದಗಳು ಪ್ರತಿಧ್ವನಿಸಿದುವು. ಚಂಡಮಾರುತಗಳು ಬೀಸತೊಡಗಿದುವು. ಪಾಶುಪತಮಹಾಸ್ತ್ರವು ಮೂರ್ತಿಮತ್ತಾಗಿ ಅರ್ಜುನನ ಸಮೀಪಗತವಾದು ದನ್ನು ದೇವ-ದಾನವರೆಲ್ಲರೂ ನೋಡಿದರು. ಅಧಿದೇವತೆಯು ಅರ್ಜುನನ ಹೃದಯಾಂತರ್ಗತವಾಯಿತು. ಮಹಾನುಭಾವನಾದ ಪರಮೇಶ್ವರನ ಸ್ಪರ್ಶ ವಾಗುತ್ತಲೇ ಅರ್ಜುನನ ಶರೀರದ ವ್ರಣಗಳೆಲ್ಲವೂ ಮಾಯವಾಗಿ ಹೋದುವು. ಈಶ್ವರನೊಡನೆ ಯುದ್ಧಮಾಡಿದ ಆಯಾಸಲೇಶವಾದರೂ ಅರ್ಜುನನಿಗಿರಲಿಲ್ಲ. ಪಾಶುಪತಾಸ್ತ್ರಮಹಾಮಂತ್ರವನ್ನು ಉಪದೇಶಿಸಿದ ನಂತರ ಪರಮೇಶ್ವರನು ಅರ್ಜುನನನ್ನು ಕುರಿತು ಹೇಳಿದನು :

"ಅರ್ಜುನ! ನೀನಿನ್ನು ಸ್ವರ್ಗಕ್ಕೆ ಹೋಗಿಬಾ."

ಅರ್ಜುನನು ಮಹಾದೇವನ ಮಾತನ್ನು ಕೇಳಿ ಆ ಮಹಾನುಭಾವನನ್ನು ಯಥಾವಿಧಿಯಾಗಿ, ಭಕ್ತಿಪುರಸ್ಸರವಾಗಿ ಪೂಜಿಸಿ, ತಲೆಬಾಗಿ ನಮಸ್ಕರಿಸಿ ಅವನನ್ನೇ ದಿಟ್ಟಿಸಿ ನೋಡುತ್ತಾ ಬದ್ಧಾಂಜಲಿಯಾಗಿ ನಿಂತಿದ್ದನು.

ದೇವದೇವನಾದ, ಮಹಾಮತಿಯಾದ, ಜಿತೇಂದ್ರಿಯನಾದ, ಉಮಾ ಪತಿಯಾದ, ಗಿರೀಶನಾದ ಪರಶಿವನು ದಾನವ-ರಾಕ್ಷಸರನ್ನೂ ಸಂಹಾರ ಮಾಡಲು ಸಮರ್ಥವಾದ ಗಾಂಡೀವಧನುಸ್ಸನ್ನೂ ಅರ್ಜುನನಿಗೆ ಹಿಂದಿರು ಗಿಸಿಕೊಟ್ಟು, ಹಿಮಾಚ್ಛಾದಿತವಾದ ಗುಹೆಗಳಿಂದಲೂ–ಕಂದರಗಳಿಂದಲೂ ಶೋಭಾಯಮಾನವಾಗಿದ್ದ, ಮಹರ್ಷಿಸೇವ್ಯವಾದ, ಶುಭಸ್ವರೂಪವಾದ, ಗಿರಿಶ್ರೇಷ್ಠವಾದ ಹಿಮವತ್ಪರ್ವತವನ್ನು ಬಿಟ್ಟು ತನ್ನ ಪತ್ನಿಯಾದ ಉಮಾ ದೇವಿಯೊಡನೆಯೂ, ಭೂತಗಣಗಳೊಡನೆಯೂ, ಪುರುಷಶ್ರೇಷ್ಠನಾದ ಅರ್ಜುನನು ನೋಡುತ್ತಿದ್ದಂತೆಯೇ–ಅಂತರಿಕ್ಷಾಭಿಮುಖವಾಗಿ ಹೊರಟು ಹೋದನು."

೪೦ನೆಯ ಅಧ್ಯಾಯವು ಮುಗಿಯಿತು.

೪೧ನೆಯ ಅಧ್ಯಾಯ ಕೈರಾತಪರ್ವ (ಮುಂದುವರಿದಿದೆ.)

## ಅರ್ಜುನನ ಸಮೀಪಕ್ಕೆ ದಿಕ್ಪಾಲಕರ ಆಗಮನ: ಮಹಾಸ್ತ್ರಗಳ ಪ್ರದಾನ : ಅಮರಾವತಿಗೆ ಬರಲು ಇಂದ್ರನ ಆದೇಶ

ವೈಶಂಪಾಯನರು ಹೇಳುತ್ತಾರೆ :

**ತಸ್ಯ ಸಮ್ಪಶ್ಯತಸ್ತ್ವೇವ ಪಿನಾಕೀ ವೃಷಭಧ್ವಜಃ ।**
**ಜಗಾಮಾದರ್ಶನಂ ಭಾನುರ್ಲೋಕಸ್ಯೇವಾಸ್ತಮೀಯಿವಾನ್ ॥೧॥**

"ಜನಮೇಜಯ! ಪ್ರಪಂಚದ ಜನರು ನೋಡುತ್ತಿರುವಂತೆಯೇ ಸೂರ್ಯನು ಅಸ್ತಮಿಸುವಂತೆ–ಅರ್ಜುನನು ದಿಟ್ಟಿಸಿ ನೋಡುತ್ತಿದ್ದಂತೆಯೇ ಪರಮೇಶ್ವರನು ಉಮೆಯೊಡನೆ ಕಣ್ಮರೆಯಾದನು. ಅರ್ಜುನನಿಗುಂಟಾದ ಆನಂದಕ್ಕೆ ಪಾರವೇ ಇರಲಿಲ್ಲ. ಸಂತೋಷಾಧಿಕ್ಯದಿಂದ ತನ್ನಲ್ಲಿಯೇ ಮಾತನಾಡಿಕೊಂಡನು :

**ಧನ್ಯೋಽಸ್ಮ್ಯನುಗೃಹೀತೋಽಸ್ಮಿ ಯನ್ಮಯಾ ತ್ರ್ಯಮ್ಬಕೋ ಹರಃ ।**
**ಪಿನಾಕೀ ವರದೋ ರೂಪೀ ದೃಷ್ಟಃ ಸ್ಪೃಷ್ಟಶ್ಚ ಪಾಣಿನಾ ॥೩॥**

**ಕೃತಾರ್ಥಂ ಚಾವಗಚ್ಛಾಮಿ ಪರಮಾತ್ಮಾನಮಾಹವೇ ।**
**ಶತ್ರೂಂಶ್ಚ ವಿಜಿತಾನ್ಸರ್ವಾನ್ನಿರ್ವೃತ್ತಂ ಚ ಪ್ರಯೋಜನಮ್ ॥೪॥**

"ನಾನೇ ಧನ್ಯನು! ಅನುಗೃಹೀತನಾದೆನು. ದೇವದೇವನಾದ ಪರಮೇಶ್ವರನನ್ನು ಪ್ರತ್ಯಕ್ಷವಾಗಿ ನೋಡಿದೆನು. ಪ್ರತ್ಯಕ್ಷವಾಗಿ ನೋಡಿದುದು ಮಾತ್ರವಲ್ಲ. ಅವನು ನನಗೆ ಮಹಾಮಂತ್ರವನ್ನು ಉಪದೇಶಿಸಲು ಬಂದಾಗ ಈ ಎರಡು ಹಸ್ತಗಳಿಂದಲೂ ಅವನ ಕೋಮಲವಾದ ಪಾದಾರವಿಂದಗಳನ್ನು ಸ್ಪರ್ಶಮಾಡಿದೆನು. ನಾನೆಂತಹ ಅದೃಷ್ಟಶಾಲಿಯು! ನಾನು ದೇವದೇವನಿಂದ ಬಹುಮಾನಿತನಾದೆನು. ನನ್ನ ಸಮಾನರಾರುಂಟು? ಜಯವೆಂಬುದು ನನಗೆ ಸಿದ್ಧವಾದಂತೆಯೇ. ನಾನು ನಿಶ್ಚಯವಾಗಿಯೂ ಪರಮಪುರುಷನ ಸಂಸ್ಪರ್ಶದಿಂದ ಸುಸಂಸ್ಕೃತವಾದ ಆತ್ಮವುಳ್ಳವನಾಗಿರುತ್ತೇನೆ. ನಾನಿಂದು ಕೃತಕೃತ್ಯನಾದೆನು. ಇಂದೇ ನನ್ನ ಶತ್ರುಗಳೆಲ್ಲರೂ ನನ್ನಿಂದ ಪರಾಜಿತರಾದರೆಂದೇ

ಭಾವಿಸಬಹುದಾಗಿದೆ. ನಿಶ್ಚಯವಾಗಿಯೂ ನಾನೇ ಪರಮಧನ್ಯನು"–ಹೀಗೆ ಮಾತನಾಡಿಕೊಳ್ಳುತ್ತಾ ಆನಂದಭರಿತನಾಗಿ ಆ ಕಾಡಿನಲ್ಲಿ ಅತ್ತಲಿತ್ತ ತಿರುಗಾಡುತ್ತಿದ್ದನು. ಆ ಸಮಯಕ್ಕೆ ಸರಿಯಾಗಿ ಜಲಾಧಿಪತಿಯಾದ, ವೈಡೂರ್ಯದಂತೆ ಉಜ್ಜ್ವಲವಾದ ಕಾಂತಿಯಿಂದ ಕೂಡಿದ್ದ ವರುಣದೇವನು ಜಲಚರಪ್ರಾಣಿಗಳಿಂದ ಕೂಡಿದವನಾಗಿ, ತನ್ನ ಪ್ರಭೆಯಿಂದ ನಾಲ್ಕು ದಿಕ್ಕುಗಳನ್ನೂ ಪ್ರಕಾಶಿಸುತ್ತಾ ನದ-ನದಿಗಳಿಂದಲೂ, ನಾಗ-ದೈತ್ಯ-ಸಾಧ್ಯರಿಂದಲೂ ಸಮೇತನಾಗಿ ಬಂದು ಪಶ್ಚಿಮದಿಕ್ಕನ್ನು ಅಲಂಕರಿಸಿದನು.

ಪುಟಕ್ಕೆ ಹಾಕಿದ ಚಿನ್ನದಂತೆ ಶರೀರಕಾಂತಿಯಿಂದ ಪ್ರಕಾಶಿಸುತ್ತಿದ್ದ, ದಿವ್ಯವಿಮಾನಾರೂಢನಾಗಿದ್ದ, ಅಷ್ಟೈಶ್ವರ್ಯಗಳಿಗೂ ಅಧಿಪತಿಯಾದ ಕುಬೇರನು ಯಕ್ಷ-ಕಿನ್ನರಸಮೇತನಾಗಿ ಬಂದು ಅರ್ಜುನನನ್ನು ನೋಡುವ ಸಲುವಾಗಿ ಉತ್ತರದಿಕ್ಕನ್ನು ಅಲಂಕರಿಸಿದನು.

ಲೋಕದ ಅಂತ್ಯಕ್ಕೆ ಕಾರಣನಾದ, ಶ್ರೀಮಂತನಾದ, ಮಹಾಪರಾಕ್ರಮಿಯಾದ, ಅಚಿಂತ್ಯಾತ್ಮನಾದ, ಅಪ್ರಮೇಯನಾದ, ಸರ್ವಭೂತವಿನಾಶಕನಾದ, 'ವೈವಸ್ವತ', 'ಧರ್ಮರಾಜ'–ಮುಂತಾದ ಅನೇಕನಾಮಗಳಿಂದ ಕರೆಯಲ್ಪಡುವ ಯಮದೇವನು–ಯುಗಾಂತ್ಯದಲ್ಲಿ ಉದಯಿಸುವ ದ್ವಿತೀಯ ಸೂರ್ಯನಂತೆ ಮೂರು ಲೋಕಗಳನ್ನೂ ಸ್ವಯಂಪ್ರಭೆಯಿಂದ ಪ್ರಕಾಶಗೊಳಿಸುತ್ತಾ ಗುಹ್ಯಕ-ಗಂಧರ್ವ-ಪನ್ನಗರಿಂದಲೂ, ಮೃತ್ಯುದೇವತೆಗಳಿಂದಲೂ, ಪಿತೃದೇವತೆಗಳಿಂದಲೂ ಕೂಡಿದವನಾಗಿ ವಿಮಾನಾರೂಢನಾಗಿ ಬಂದು ದಕ್ಷಿಣದಿಕ್ಕನ್ನು ಅಲಂಕರಿಸಿದನು.

ಮೂವರು ದಿಕ್ಪಾಲಕರೂ ತಮ್ಮ-ತಮ್ಮ ದಿಕ್ಕುಗಳಲ್ಲಿ ವಿಮಾನಾರೂಢರಾಗಿ ನಿಂತು, ತೇಜೋರೂಪವಾದ ಮತ್ತು ಚಿತ್ರ-ವಿಚಿತ್ರವಾದ ಹಿಮವತ್ಪರ್ವತದ ಶಿಖರಗಳನ್ನೂ, ಆ ಶಿಖರಗಳ ಮಧ್ಯದಲ್ಲಿದ್ದ ಅರ್ಜುನನನ್ನೂ ಕಂಡರು. ಯಮ-ವರುಣ-ಕುಬೇರರು ಬಂದ ಸ್ವಲ್ಪಹೊತ್ತಿನೊಳಗಾಗಿಯೇ ಇಂದ್ರಾಣೀಸಮೇತನಾಗಿ ಐರಾವತವನ್ನೇರಿದ ದೇವೇಂದ್ರನು ಸಕಲದೇವತೆಗಳಿಂದಲೂ ಅನುಸೃತನಾಗಿ ಪೂರ್ವದಿಕ್ಕನ್ನು ಅಲಂಕರಿಸಿದನು. ಶ್ವೇತಚ್ಛತ್ರಿಯಿಂದ ಆಚ್ಛಾದಿತನಾಗಿದ್ದ ಇಂದ್ರನು ಬಿಳಿಯ ಮೋಡದಿಂದ ಆಚ್ಛಾದಿತನಾದ

ಚಂದ್ರನಂತೆಯೇ ಪ್ರಕಾಶಿಸುತ್ತಿದ್ದನು. ಗಂಧರ್ವರೂ, ತಪಸ್ವಿಗಳೂ ದೇವೇಂದ್ರನನ್ನು ನಾನಾವಿಧವಾಗಿ ಸ್ತೋತ್ರಮಾಡುತ್ತಿದ್ದರು. ಅವರೆಲ್ಲರಿಂದಲೂ ಕೂಡಿ ಇಂದ್ರನು ಎರಡನೆಯ ಸೂರ್ಯನಂತೆಯೇ ಪ್ರಕಾಶಿಸುತ್ತಿದ್ದನು.

ಅರ್ಜುನನನ್ನು ನೋಡುವ ಆಶಯದಿಂದ ಇಂದ್ರನೂ ಬಂದನಂತರ ಪರಮಧರ್ಮಜ್ಞನಾದ, ಧೀಮಂತನಾದ, ದಕ್ಷಿಣದಿಕ್ಕಿನಲ್ಲಿ ಉಪಸ್ಥಿತನಾಗಿದ್ದ ಯಮದೇವನು ಮೇಘಶಬ್ದದಂತೆ ಗಂಭೀರವಾದ ಶಬ್ದದಿಂದ ಅರ್ಜುನನನ್ನು ಕುರಿತು ಮಂಗಳಕರವಾದ ಈ ಮಾತುಗಳನ್ನು ಹೇಳಿದನು :

“ಭೋಃ ಪಾರ್ಥ! ನಮ್ಮನ್ನು ನೋಡು. ಲೋಕರಕ್ಷಕರಾದ ನಾವು, ನಿನ್ನನ್ನು ನೋಡುವ ಸಲುವಾಗಿಯೇ ಬಂದಿರುತ್ತೇವೆ. ನಿನಗೆ ದಿವ್ಯದೃಷ್ಟಿಯನ್ನು ಕೊಡುತ್ತೇವೆ. ಏಕೆಂದರೆ : ನೀನು ನಮ್ಮನ್ನು ದರ್ಶನಮಾಡುವ ಆತ್ಮಶಕ್ತಿಯುಳ್ಳವನಾಗಿರುವೆ. ನೀನು ನಿನ್ನ ಹಿಂದಿನ ಜನ್ಮದಲ್ಲಿ ಮಹಾತ್ಮನಾದ, ಮಹಾಬಲನಾದ ನರನೆಂಬ ಋಷಿಯಾಗಿದ್ದೆ. ಬ್ರಹ್ಮನ ನಿರ್ದೇಶಾನುಸಾರವಾಗಿ ಈಗ ನೀನು ಮನುಷ್ಯಲೋಕದಲ್ಲಿ ಮಾನವನಾಗಿ ಜನ್ಮತಾಳಿರುವೆ. ಮಹಾತ್ಮನಾದ, ಪಿತಾಮಹನಾದ, ವಸ್ವಂಶಸಂಭೂತನಾದ ಭೀಷ್ಮನು ನಿನ್ನಿಂದಲೇ ಪರಾಜಿತನಾಗಬೇಕಾಗಿದೆ. ಮುಂದೆ ನಡೆಯಲಿರುವ ಯುದ್ಧದಲ್ಲಿ ದ್ರೋಣನಿಂದ ರಕ್ಷಿತವಾದ ಅಗ್ನಿಸದೃಶವಾದ ಕ್ಷತ್ರಿಯಕುಲವನ್ನೂ, ಮನುಷ್ಯರಾಗಿ ಅವತರಿಸಿರುವ ಅನೇಕ ರಾಕ್ಷಸರನ್ನೂ, ನಿವಾತಕವಚರೆಂಬ ದಾನವರನ್ನೂ, ನನ್ನ ತಂದೆಯಾದ ಸೂರ್ಯದೇವನ ಅಂಶಸಮುದ್ಭೂತನಾದ ಮಹಾಪರಾಕ್ರಮಿಯಾದ ಕರ್ಣನನ್ನೂ, ದೇವ-ದಾನವ-ರಾಕ್ಷಸಾಂಶ ಸಂಭೂತರಾಗಿರುವ ಅನೇಕಮಾನವರನ್ನೂ ನೀನು ಸಂಹಾರಮಾಡುವೆ. ನಿನ್ನಿಂದ ಸಂಹೃತರಾದ ಅವರೆಲ್ಲರೂ ತಮ್ಮ-ತಮ್ಮ ಕರ್ಮಫಲಾನುಸಾರವಾದ ಗತಿಯನ್ನು ಪಡೆಯುತ್ತಾರೆ. ನಿನ್ನ ಕೀರ್ತಿಯೂ ಅಕ್ಷಯವಾಗಿ ಲೋಕದಲ್ಲುಳಿಯುತ್ತದೆ. ನಿನ್ನೊಡನೆ ಮಾಡಿದ ಯುದ್ಧದಿಂದ ಮಹಾದೇವನೇ ಪ್ರೀತನಾಗಿರುತ್ತಾನೆ. ನೀನು ವಿಷ್ಣುವಿನೊಡನೆ (ಶ್ರೀಕೃಷ್ಣನೊಡನೆ) ಸೇರಿ ಭೂಭಾರವನ್ನು ಕಡಿಮೆಮಾಡಬೇಕಾಗಿದೆ. ಆದುದರಿಂದ ನೀನು, ನಾನೀಗ ಕೊಡಲಿರುವ ದಂಡವನ್ನು ಪ್ರತಿಗ್ರಹಿಸು. ಈ ದಂಡದ ಪ್ರಹಾರವನ್ನು ಯಾರಿಂದಲೂ ತಡೆಯುವ ಸಾಧ್ಯತೆಯಿಲ್ಲ. ಇದು ಅಪ್ರತಿಹತವಾದುದು.

ಈ ಆಯುಧದಿಂದ ಅನೇಕ ಮಹಾಕಾರ್ಯಗಳನ್ನು ಸಾಧಿಸಬಹುದಾಗಿದೆ.”

ಯಮಧರ್ಮನ ಮಾತುಗಳನ್ನು ಕೇಳಿ ಅರ್ಜುನನು ನತಶಿರನಾಗಿ, ಭಕ್ತಿಪುರಸ್ಸರವಾಗಿ ಯಮಧರ್ಮನಿಂದ ಯಮದಂಡವನ್ನು ಸ್ವೀಕರಿಸಿದನು. ಅದರ ಪುನಶ್ಚರಣಮಂತ್ರವನ್ನೂ, ಮೋಕ್ಷ ಮತ್ತು ಉಪಸಂಹಾರ ರಹಸ್ಯವನ್ನೂ ಅವನಿಂದಲೇ ತಿಳಿದುಕೊಂಡನು.

ಅನಂತರದಲ್ಲಿ ನೀಲಮೇಘಶ್ಯಾಮನಾದ, ಸಕಲಜಲಚರಗಳಿಗೂ ಒಡೆಯನಾದ, ಪಶ್ಚಿಮದಿಕ್ಕನ್ನು ಅಲಂಕರಿಸಿದ್ದ ವರುಣನು ಅರ್ಜುನನನ್ನು ಕುರಿತು ಹೇಳಿದನು :

“ಭೋ ಅರ್ಜುನ! ನೀನು ಕ್ಷತ್ರಿಯಶ್ರೇಷ್ಠನು. ಕ್ಷತ್ರಿಯಧರ್ಮಕ್ಕೆ ಅನುಸಾರವಾಗಿ ನಡೆಯುತ್ತಿರುವೆ. ವಿಶಾಲವಾಗಿಯೂ, ಕೆಂಪಾಗಿಯೂ ಇರುವ ಕಣ್ಣುಗಳುಳ್ಳ ಪಾರ್ಥನೇ! ನಾವು ದಯಪಾಲಿಸಿರುವ ದಿವ್ಯದೃಷ್ಟಿಯಿಂದ ನನ್ನನ್ನು ನೋಡು. ನಾನೇ ಜಲಾಧಿಪತಿಯಾದ ವರುಣನು. ನನ್ನಿಂದ ಪ್ರಯೋಗಿಸಲ್ಪಡುವ ವರುಣಪಾಶಗಳು ಯಾರಿಂದಲೂ ತಡೆಯಲ್ಪಡತಕ್ಕುವುಗಳಲ್ಲ. ಕುಂತೀಪುತ್ರ! ನಾನು ನಿನ್ನ ಪರಾಕ್ರಮಕ್ಕೂ ತಪಸ್ಸಿಗೂ ಮೆಚ್ಚಿರುತ್ತೇನೆ. ನನ್ನ ವಾರುಣಾಸ್ತ್ರವನ್ನು ಮಂತ್ರಪೂರ್ವಕವಾಗಿ ಉಪದೇಶಿಸುತ್ತೇನೆ. ಹಿಂದೆ ಬೃಹಸ್ಪತಿಯ ಪತ್ನಿಯಾದ ತಾರೆಯ ಕಾರಣದಿಂದಾಗಿ ದೇವ-ದಾನವರಲ್ಲಿ ಮಹಾಯುದ್ಧವು ನಡೆದಾಗ ಈ ನನ್ನ ವಾರುಣಾಸ್ತ್ರವು ಅನೇಕ ದೈತ್ಯರನ್ನು ಬಂಧಿಸಿತು. ಯಮಧರ್ಮನೇ ನಿನ್ನ ಶತ್ರುವಾಗಿ ಯುದ್ಧಮಾಡಲು ಎದುರಾಗಿ ಬಂದರೂ ಈ ನನ್ನ ವಾರುಣಾಸ್ತ್ರವು ಅವನನ್ನೂ ಬಂಧಿಸಿಯೇ ತೀರುವುದು. ನೀನು ಈ ನನ್ನ ವರುಣಪಾಶಗಳನ್ನು ಪಡೆದು ಯುದ್ಧಭೂಮಿಯಲ್ಲಿ ಸಂಚರಿಸಿದೆಯಾದರೆ ಕ್ಷತ್ರಿಯಕುಲವು ಪೂರ್ಣವಾಗಿ ವಿನಾಶಹೊಂದುವುದರಲ್ಲಿ (ಭೂಭಾರವು ಹರಣವಾಗುವುದರಲ್ಲಿ) ಯಾವ ಸಂಶಯವೂ ಇಲ್ಲ.”

ವರುಣದೇವನ ಮಾತುಗಳನ್ನು ಕೇಳಿ ಅರ್ಜುನನು ಬದ್ಧಾಂಜಲಿಯಾಗಿ ನಿಂತನು. ವಾರುಣಾಸ್ತ್ರವು ಮೂರ್ತಿಮತ್ತಾಗಿ ಅರ್ಜುನನನ್ನು ಸೇರಿತು.

ಅನಂತರದಲ್ಲಿ ಧನಾಧ್ಯಕ್ಷನಾದ, ಕೈಲಾಸವಾಸಿಯಾದ ಕುಬೇರನು ಪಾಂಡುಪುತ್ರನಿಗೆ ಹೇಳಿದನು :

"ಮಹಾಬಲಶಾಲಿಯಾದ ಪಾಂಡುಪುತ್ರನೇ! ನಾನು ನಿನ್ನ ವಿಷಯದಲ್ಲಿ ಸುಪ್ರೀತನಾಗಿದ್ದೇನೆ. ನನಗೆ ಶ್ರೀಕೃಷ್ಣನ ಸಮಾಗಮದಿಂದ ಎಷ್ಟು ಸಂತೋಷವಾಗುವುದೋ ಅಷ್ಟೇ ಸಂತೋಷವು ನಿನ್ನೊಡನೆ ಪ್ರಾಪ್ತವಾಗಿರುವ ಈ ಸಮಾಗಮದಿಂದಲೂ ಉಂಟಾಗಿರುವುದು. ಸವ್ಯಸಾಚಿಯೇ! ನೀನು ಹಿಂದೆ ನಮ್ಮಂತೆಯೇ ಸನಾತನನೂ, ಚಿರಂತನನೂ ಆದ ದೇವನೇ ಆಗಿದ್ದೆ. ಹಿಂದಿನ ಕಲ್ಪದಲ್ಲಿ ನೀನೂ ನಮ್ಮೊಡನೆ ಅನುದಿನವೂ ತಪಶ್ಚರಣೆಯಲ್ಲಿ ನಿರತನಾಗಿರುತ್ತಿದ್ದೆ. ಅವೆಲ್ಲವನ್ನೂ ನೆನೆದು ನಿನ್ನ ವಿಷಯದಲ್ಲಿ ನನಗೆ ಹೆಚ್ಚಿನ ವಾತ್ಸಲ್ಯವುಂಟಾಗಿದೆ. ಇಂದು ನಿನಗೆ ನಾನು ಅಂತರ್ಧಾನವೆಂಬ ಮಹಾಸ್ತ್ರವನ್ನೂ ಕೊಡುತ್ತೇನೆ. ಮನುಷ್ಯರನ್ನೇ ಅಲ್ಲದೇ, ದುರ್ಜಯರಾದ ದೈತ್ಯ-ರಾಕ್ಷಸರನ್ನೂ ನೀನು ಈ ಮಹಾಸ್ತ್ರದಿಂದ ಜಯಿಸಬಹುದಾಗಿದೆ. ಆದುದರಿಂದ ಈ ಉತ್ತಮೋತ್ತಮವಾದ ಮಹಾಸ್ತ್ರವನ್ನು ಶೀಘ್ರವಾಗಿ ಪರಿಗ್ರಹಿಸುವವನಾಗು. ಈ ಮಹಾಸ್ತ್ರವನ್ನು ಪಡೆಯುವುದರಿಂದ ನೀನು ಅಖಂಡವಾದ ಧಾರ್ತರಾಷ್ಟ್ರಸೇನೆಯನ್ನೂ ನಾಶಮಾಡಲು ಸಮರ್ಥನಾಗುವೆ. ಓಜಸ್ತೇಜೋದ್ಯುತಿಕರವಾದ, ಯುದ್ಧದಲ್ಲಿ ಶತ್ರುಗಳಿಗೆ ನಿದ್ದೆಬರುವಂತೆ ಮಾಡುವ, ನನಗೆ ಪ್ರಿಯತಮವಾದ ಈ ಅಂತರ್ಧಾನಾಸ್ತ್ರವನ್ನು ಒಡನೆಯೇ ಸ್ವೀಕರಿಸು. ತ್ರಿಪುರಸಂಹಾರಕಾಲದಲ್ಲಿ ಮಹಾತ್ಮನಾದ ಶಂಕರನು ಇದೇ ಅಸ್ತ್ರವನ್ನೇ ಉಪಯೋಗಿಸಿ, ಅನೇಕಸಹಸ್ರರಾಕ್ಷಸರನ್ನು ಸಂಹಾರಮಾಡಿದನು. ಶಿವನು ಅಂದು ಪ್ರಯೋಗಿಸಿದ ಈ ಮಹಾಸ್ತ್ರವನ್ನು ನಿನಗೆ ಕೊಡುವ ಸಲುವಾಗಿಯೇ ನಾನು ಪರಿಗ್ರಹಿಸಿದ್ದೆನು. ಮೇರುಪರ್ವತಕ್ಕೆ ಸಮಾನವಾದ ಸ್ಥೈರ್ಯವುಳ್ಳ ನೀನು ಈ ಮಹಾಸ್ತ್ರವನ್ನು ಧಾರಣೆಮಾಡಲು ಸಮರ್ಥನಾಗಿರುವೆ."

ಕುಬೇರನು ಹೀಗೆ ಹೇಳಿದನಂತರ ಅರ್ಜುನನು ವಿನಯಾನ್ವಿತನಾಗಿ ಕುಬೇರನಿಗೆ ಸಾಷ್ಟಾಂಗಪ್ರಣಾಮಮಾಡಿ, ಅಂತರ್ಧಾನಾಸ್ತ್ರವನ್ನು ಮಂತ್ರ ಪೂರ್ವಕವಾಗಿಯೂ, ಮೋಕ್ಷೋಪಸಂಹಾರಗಳ ರಹಸ್ಯದೊಡನೆಯೂ ಕುಬೇರನಿಂದ ಪಡೆದುಕೊಂಡನು.

ಅನಂತರದಲ್ಲಿ ದೇವೇಂದ್ರನು ಅರ್ಜುನನನ್ನು ಒಳ್ಳೆಯ ಮಾತುಗಳಿಂದ ಸಂತೈಸುತ್ತಾ, ಮೇಘನಾದದಂತಿದ್ದ ಅಥವಾ ದುಂದುಭಿಯ ಧ್ವನಿಯಂತಿದ್ದ ಕಂಠನಾದದಿಂದ ಹೇಳಿದನು :

"ಕುಂತೀಪುತ್ರ! ಮಹಾಬಾಹೋ! ನೀನು ಪೂರ್ವದಲ್ಲಿ ದೇವನಾಗಿದ್ದೆ. ಈಗಲೂ ನೀನು ಸಕಲಸಿದ್ಧಿಗಳನ್ನೂ ಪಡೆದು ದೇವತೆಗಳಿಗೆ ಸಮಾನನಾಗಿರುವೆ. ನೀನು ಮಹತ್ತಾದ ದೇವತಾಕಾರ್ಯವನ್ನು ನಿರ್ವಹಿಸ ಬೇಕಾಗಿದೆ. ಆದುದರಿಂದ ನೀನೀಗಲೇ ಸ್ವರ್ಗಕ್ಕೆ ಬರುವ ಸಿದ್ಧತೆಯನ್ನು ಮಾಡು. ಮಾತಲಿಯಿಂದ ನಡೆಸಲ್ಪಡುವ ನನ್ನ ರಥವು ಸ್ವಲ್ಪ ಹೊತ್ತಿನೊಳ ಗಾಗಿಯೇ ನಿನ್ನ ಸಮೀಪಕ್ಕೆ ಬರುವುದು. ನಾನು ನಿನ್ನನ್ನು ಸ್ವರ್ಗಕ್ಕೆ ಕರೆಸಿಕೊಂಡು, ಅಲ್ಲಿ ನಿನಗೆ ನನ್ನ ದಿವ್ಯಾಸ್ತ್ರಗಳೆಲ್ಲವನ್ನೂ ಕೊಡುವೆನು."

ಮಹಾತ್ಮನಾದರೂ ಮಾನವನಾಗಿದ್ದ ಧನಂಜಯನಿಗೆ ಇವೆಲ್ಲವೂ ಬಹಳ ಅಚ್ಚರಿಯಾಗಿ ಕಂಡಿತು. "ನನ್ನನ್ನು ಹರಸಲು ನನಗೆ ದಿವ್ಯಾಸ್ತ್ರಗಳನ್ನು ದಯಪಾಲಿಸಲು ದಿಕ್ಪಾಲಕರೆಲ್ಲರೂ ಬಂದಿರುತ್ತಾರೆ. ನಾನು ನಿಶ್ಚಯ ವಾಗಿಯೂ ಧನ್ಯನು"–ಹೀಗೆಂದು ಮನಸ್ಸಿನಲ್ಲಿಯೇ ಸಂತೋಷಿಸುತ್ತಾ ದಿಕ್ಪಾಲಕರನ್ನು ಅರ್ಘ್ಯ-ಪಾದ್ಯಾಚಮನೀಯಗಳಿಂದಲೂ, ಸ್ತೋತ್ರ-ನಮಸ್ಕಾರಾದಿಗಳಿಂದಲೂ ಯಥಾವಿಧಿಯಾಗಿ ಪೂಜಿಸಿದನು. ಧನಂಜಯ ನನ್ನು ಪುನಃ ಹರಸಿ ದೇವತೆಗಳೆಲ್ಲರೂ ಹೊರಟುಹೋದರು. ಸ್ವೇಚ್ಛಾಸಂಚಾರಿಗಳಾದ, ಮನೋಜವರಾದ ದಿಕ್ಪಾಲಕರು ಕೂಡ ತಮ್ಮ ತಮ್ಮ ನಿವಾಸಗಳಿಗೆ ತೆರಳಿದರು.

ಈ ರೀತಿಯಾಗಿ ಅರ್ಜುನನು ದಿವ್ಯಾಸ್ತ್ರವನ್ನು ಪಡೆದು ಆನಂದ ಭರಿತನಾದನು. ತಾನು ಕೃತಾರ್ಥನಾದೆನೆಂದೂ ತನ್ನ ಮನಸ್ಸಂಕಲ್ಪವು ಪೂರ್ಣವಾಯಿತೆಂದೂ ಭಾವಿಸಿದನು."

೪೧ನೆಯ ಅಧ್ಯಾಯವು ಮುಗಿಯಿತು.

೪೨ನೆಯ ಅಧ್ಯಾಯ ಇಂದ್ರಲೋಕಾಭಿಗಮನಪರ್ವ

## ಅರ್ಜುನನು ಹಿಮವಂತನ ಅನುಮತಿಯನ್ನು ಪಡೆದು ಮಾತಲಿಯೊಡನೆ ಸ್ವರ್ಗಲೋಕಕ್ಕೆ ಪ್ರಯಾಣಮಾಡಿದುದು

ವೈಶಂಪಾಯನರು ಪ್ರಣವಪೂರ್ವಕವಾಗಿ ಪ್ರವಚನವನ್ನು ಪ್ರಾರಂಭಿಸಿದರು :

"ಜನಮೇಜಯ! ಲೋಕಪಾಲಕರೂ ಮತ್ತು ಅವರನ್ನನುಸರಿಸಿ ಬಂದಿದ್ದ ದೇವತೆಗಳೂ ಹೊರಟುಹೋದನಂತರ ಅರ್ಜುನನು ಇಂದ್ರನ ರಥದ ಆಗಮನವನ್ನೇ ನಿರೀಕ್ಷಿಸುತ್ತಿದ್ದನು. ಧೀಮಂತನಾದ ಗುಡಾಕೇಶನು ಇಂದ್ರರಥದ ವಿಷಯವಾಗಿಯೇ ಯೋಚಿಸುತ್ತಿರುವಾಗ, ಮಾತಲಿಯುಕ್ತವಾದ ಮಹಾರಥವು ಆಕಾಶದ ಕತ್ತಲೆಯನ್ನು ತನ್ನ ಪ್ರಭೆಯಿಂದ ಹೋಗಲಾಡಿಸುತ್ತಾ, ಮೋಡಗಳನ್ನು ಅತ್ತಲಿತ್ತ ಚದುರಿಸುತ್ತಾ, ಗುಡುಗಿನ ಮತ್ತು ಸಿಡಿಲಿನ ಶಬ್ದಗಳಿಗೆ ಸಮಾನವಾದ ನಿನಾದವುಳ್ಳ ರಥಚಕ್ರಗಳ ಘೋಷದಿಂದ ಆಕಾಶವೆಲ್ಲವನ್ನೂ ತುಂಬುತ್ತಾ ಬರುತ್ತಿದ್ದಿತು. ಝಳಪಿಸುತ್ತಿದ್ದ ಕತ್ತಿಗಳೂ, ದಿವ್ಯಪ್ರಭಾವದಿಂದ ಕೂಡಿದ್ದ ಪ್ರಾಸವೆಂಬ ಆಯುಧಗಳೂ, ಮಹಾಪ್ರಭೆಯುಳ್ಳ ವಿದ್ಯುತ್ತುಗಳೂ, ಸಿಡಿಲುಗಳೂ, ವಾಯುವಿನಲ್ಲಿ ಸ್ಫೋಟವಾಗುವ–ಗುಡುಗಿನ ಶಬ್ದವುಳ್ಳ ಚಕ್ರಯುಕ್ತವಾದ ಫಿರಂಗಿಗಳೂ ಆ ದಿವ್ಯರಥದಲ್ಲಿದ್ದುವು. ಮಹಾಭಯಂಕರವಾದ, ಅಗಲವಾದ ಉರಿಯುವ ಬಾಯ್ಗಳಿಂದ ಕೂಡಿದ್ದ ಮಹಾಸರ್ಪಗಳೂ, ಬಿಳಿಯ ಮೋಡದಂತೆ ಸ್ವಚ್ಛವಾದ ಮತ್ತು ಹೆಚ್ಚು ಬಿಳುಪಾದ ಕಲ್ಲಿನ ರಾಶಿಗಳೂ ಆ ರಥದಲ್ಲಿದ್ದುವು. ಆ ರಥಕ್ಕೆ ಚಿನ್ನದ ಬಣ್ಣದ ಕಾಂತಿಯಿಂದ ಕೂಡಿದ್ದ ಹತ್ತು ಸಾವಿರ ಕುದುರೆಗಳು ಕಟ್ಟಲ್ಪಟ್ಟಿದ್ದುವು ಮತ್ತು ಅದು ಗಾಳಿಯ ವೇಗವನ್ನೂ ಮೀರಿ ಸಂಚರಿಸುವ ಸಾಮರ್ಥ್ಯವುಳ್ಳದ್ದಾಗಿದ್ದಿತು. ಆ ಮಾಯಾಮಯವಾದ ಮಹಾರಥದ ವೇಗವನ್ನು ಕಣ್ಣಿನಿಂದ ನೋಡಿ ಅಳೆಯುವ ಸಾಧ್ಯತೆಯಿರಲಿಲ್ಲ. (ಆ ರಥವು ನೋಡುವವರ ಕಣ್ಣುಗಳನ್ನು ತನ್ನೊಡನೆಯೇ ಒಯ್ಯುವಷ್ಟು ಸುಂದರವಾಗಿದ್ದಿತು.) ಆ ರಥದ ಮೇಲಿದ್ದ, ಬಿದುರಿನಂತೆ ನೀಳವಾದ, ಕಾಂತಿಯುಕ್ತ

ವಾಗಿದ್ದ, ವೈಡೂರ್ಯದಂತೆ ಅಥವಾ ಕನ್ನೈದಿಲೆಯಂತೆ ನೀಲವಾದ ಬಣ್ಣದಿಂದ ಕೂಡಿದ್ದ, ಸ್ವರ್ಣಾಭರಣಗಳಿಂದ ಅಲಂಕೃತವಾಗಿದ್ದ ವೈಜಯಂತವೆಂಬ ಧ್ವಜವನ್ನು ಆ ರಥದ ತುದಿಯಲ್ಲಿ ಅರ್ಜುನನು ಕಂಡನು.

ಸ್ವರ್ಣಖಚಿತವಾದ ಕವಚವನ್ನೂ, ಕರ್ಣಕುಂಡಲಗಳನ್ನೂ ಧರಿಸಿ ರಥದ ಮೇಲೆ ಕುಳಿತಿದ್ದ ಸಾರಥಿಯನ್ನು ದೇವತೆಗಳಲ್ಲೊಬ್ಬನೆಂದೇ ಅರ್ಜುನನು ಭಾವಿಸಿದನು. ರಥದ ಸ್ವರೂಪಶೋಭೆಯನ್ನು ನೋಡಿ ಆನಂದಿಸುತ್ತಿದ್ದ ಅರ್ಜುನನ ಸಮೀಪದಲ್ಲಿ ರಥದಿಂದಿಳಿದುಬಂದ ಮಾತಲಿಯು ಹೇಳಿದನು : "ಅದೃಷ್ಟಶಾಲಿಯಾದ ಶಕ್ರತನೂಜನೇ! ನಿನ್ನನ್ನು ದೇವೇಂದ್ರನೇ ನೋಡಲು ಇಚ್ಛಿಸಿದ್ದಾನೆ. ಸ್ವಲ್ಪವಾದರೂ ತಡಮಾಡದೇ ಇಂದ್ರನು ಕಳುಹಿಸಿರುವ ಈ ರಥವನ್ನು ಹತ್ತಿ ಕುಳಿತುಕೋ. ದೇವತೆಗಳ ಅಧಿಪತಿಯಾದ, ನಿನ್ನ ತಂದೆಯಾದ ಶತಕ್ರತುವು ನನಗೆ–'ಕುಂತಿಯ ಮಗನನ್ನು ಇಲ್ಲಿಗೆ ಕರೆದುಕೊಂಡು ಬಾ. ದೇವತೆಗಳೆಲ್ಲರೂ ಅವನನ್ನು ಸಂದರ್ಶಿಸಲಿ'–ಎಂದು ಆಜ್ಞಾಪಿಸಿರುವನು. ಶಕ್ರನೇ ಸ್ವತಃ ದ್ರಷ್ಟುಕಾಮನಾಗಿ ದೇವತೆಗಳಿಂದಲೂ, ಋಷಿ-ಮಹರ್ಷಿಗಳಿಂದಲೂ, ಗಂಧರ್ವರಿಂದಲೂ, ಅಪ್ಸರೆಯರಿಂದಲೂ ನಿನ್ನ ಆಗಮನದ ನಿರೀಕ್ಷೆಯಲ್ಲಿದ್ದಾನೆ. ಆದುದರಿಂದ ಇಂದ್ರನ ಆಜ್ಞಾನುಸಾರವಾಗಿ ನನ್ನೊಡನೆ ರಥವನ್ನೇರಿ ದೇವಲೋಕಕ್ಕೆ ಬಾ. ಅಲ್ಲಿ ಇಂದ್ರನಿಂದ ಮಹಾಸ್ತ್ರಗಳನ್ನು ಪಡೆದು ಪುನಃ ಭೂಲೋಕಕ್ಕೆ ಹಿಂದಿರುಗಬಹುದು." ಮಾತಲಿಯ ಮಾತುಗಳನ್ನು ಕೇಳಿದನಂತರ ಅರ್ಜುನನು ಹೇಳಿದನು :

"ಮಾತಲೇ! ತಡಮಾಡದೇ ಮೊದಲು ನೀನು ದಿವ್ಯರಥವನ್ನೇರಿ ಕುಳಿತುಕೋ. ಈ ರಥವು ಅಸಾಧಾರಣವಾದುದು. ನೂರಾರು ರಾಜಸೂಯ ಯಾಗಗಳನ್ನು ಮಾಡುವುದರಿಂದಾಗಲೀ, ನೂರಾರು ಅಶ್ವಮೇಧಯಾಗಗಳನ್ನು ಮಾಡುವುದರಿಂದಾಗಲೀ ಈ ರಥವು ಪ್ರಾಪ್ತವಾಗುವುದಿಲ್ಲ. ಅನೇಕ ಮಹಾಯಜ್ಞಗಳನ್ನು ಮಾಡಿ ಯಥೇಚ್ಛವಾದ ದಾನ-ದಕ್ಷಿಣೆಗಳನ್ನು ಕೊಟ್ಟ ರಾಜರಿಗಾಗಲೀ, ದೇವ-ದಾನವರಿಗಾಗಲೀ ಈ ರಥದಲ್ಲಿ ಕುಳಿತುಕೊಳ್ಳುವ ಸಾಧ್ಯತೆಯಿರುವುದಿಲ್ಲ. ತಪೋನಿಷ್ಠನಲ್ಲದವನಿಗೆ ಈ ರಥವನ್ನು ನೋಡುವ

ಅಥವಾ ಸ್ಪರ್ಶಮಾಡುವ ಸಾಧ್ಯತೆಯೂ ಇರುವುದಿಲ್ಲ. ಇನ್ನು ಕುಳಿತುಕೊಳ್ಳುವ ಸಾಧ್ಯತೆಯೆಲ್ಲಿಯದು?

ಇಂತಹ ದಿವ್ಯರಥವನ್ನು ನೀನು ಆರೋಹಣಮಾಡಿ, ಕಡಿವಾಣಗಳನ್ನು ಬಿಗಿಯಾಗಿ ಹಿಡಿದುಕೊಂಡನಂತರ–ಸುಕೃತಿಯಾದವನು ಸ್ವರ್ಗಮಾರ್ಗವನ್ನು ಕುರಿತು ಹೋಗುವಂತೆ–ನಾನು ರಥಾರೋಹಣಮಾಡುತ್ತೇನೆ."

ಅರ್ಜುನನ ಮಾತುಗಳನ್ನು ಕೇಳಿ ಮಾತಲಿಯು ಒಡನೆಯೇ ರಥವನ್ನೇರಿ ಕುದುರೆಗಳ ಕಡಿವಾಣವಿಡಿದು ಉಪಸ್ಥಿತನಾದನು.

ಅನಂತರದಲ್ಲಿ ಅರ್ಜುನನು ಪವಿತ್ರತಮವಾದ ಗಂಗಾನದಿಯಲ್ಲಿ ಮಿಂದು ಮಹಾಮಂತ್ರಗಳನ್ನು ಜಪಮಾಡಿ, ಪಿತೃಗಳಿಗೆ ತರ್ಪಣವನ್ನೂ ಯಥಾವಿಧಿಯಾಗಿ ಕೊಟ್ಟನಂತರ ತನಗೆ ಅದುವರೆಗೂ ಆಶ್ರಯವನ್ನಿತ್ತಿದ್ದ ಹಿಮವತ್ಪರ್ವತವನ್ನು ಸಂಬೋಧಿಸಿ ಹೇಳಿದನು :

ಸಾಧೂನಾಂ ಪುಣ್ಯಶೀಲಾನಾಂ ಮುನೀನಾಂ ಪುಣ್ಯಕರ್ಮಣಾಮ್ ।
ತ್ವಂ ಸದಾ ಸಂಶ್ರಯಃ ಶೈಲ ಸ್ವರ್ಗಮಾರ್ಗಾಭಿಕಾಂಕ್ಷಿಣಾಮ್ ॥೨೨॥

ತ್ವತ್ಪ್ರಸಾದಾತ್ಸದಾ ಶೈಲ ಬ್ರಾಹ್ಮಣಾಃ ಕ್ಷತ್ರಿಯಾ ವಿಶಃ ।
ಸ್ವರ್ಗಂ ಪ್ರಾಪ್ತಾಶ್ಚರನ್ತಿ ಸ್ಮ ದೇವೈಃ ಸಹ ಗತವ್ಯಥಾಃ ॥೨೩॥

ಅದ್ರಿರಾಜ ಮಹಾಶೈಲ ಮುನಿಸಂಶ್ರಯ ತೀರ್ಥವನ್ ।
ಗಚ್ಛಾಮ್ಯಾಮನ್ತ್ರಯಾಮಿ ತ್ವಾಂ ಸುಖಮಸ್ಮ್ಯುಷಿತಿಸ್ತ್ವಯಿ ॥೨೪॥

ತವ ಸಾನೂನಿ ಕುಞ್ಜಾಶ್ಚ ನದ್ಯಃ ಪ್ರಸ್ರವಣಾನಿ ಚ ।
ತೀರ್ಥಾನಿ ಚ ಸುಪುಣ್ಯಾನಿ ಮಯಾ ದೃಷ್ಟಾನ್ಯನೇಕಶಃ ॥೨೫॥

ಫಲಾನಿ ಚ ಸುಗನ್ಧೀನಿ ಭಕ್ಷಿತಾನಿ ತತಸ್ತತಃ ।
ಸುಸುಗನ್ಧಾಶ್ಚ ವಾರ್ಯೋಘಾಸ್ತ್ವಚ್ಛರೀರವಿನಿಃಸೃತಾಃ ॥೨೬॥

ಅಮೃತಾಸ್ವಾದನೀಯಾ ಮೇ ಪೀತಾಃ ಪ್ರಸ್ರವಣೋದಕಾಃ।
ಶಿಶುರ್ಯಥಾ ಪಿತುರಙ್ಕೇ ಸುಸುಖಂ ವರ್ತತೇ ನಗ ॥೨೭॥

ತಥಾ ತವಾಙ್ಕೇ ಲಲಿತಂ ಶೈಲರಾಜ ಮಯಾ ಪ್ರಭೋ ।
ಅಪ್ಸರೋಗಣಸಂಕೀರ್ಣೇ ಬ್ರಹ್ಮಘೋಷಾನುನಾದಿತೇ ।
ಸುಖಮಸ್ಮ್ಯುಷಿತಃ ಶೈಲ ತವ ಸಾನುಷು ನಿತ್ಯದಾ ॥೨೮॥

"ಪರ್ವತರಾಜನೇ! ಧರ್ಮಾತ್ಮರಾದ, ಸ್ವರ್ಗಮಾರ್ಗಾಭಿಕಾಂಕ್ಷಿಗಳಾದ ಸಾಧುಗಳಿಗೂ–ಪುಣ್ಯವಂತರಾದ ಮುನಿಗಳಿಗೂ ನೀನು ಸರ್ವದಾ ಆಶ್ರಯಭೂತನಾಗಿರುವೆ. ನಿನ್ನ ದಿವ್ಯಾನುಗ್ರಹದಿಂದಾಗಿ ಬ್ರಹ್ಮ-ಕ್ಷತ್ರಿಯ-ವೈಶ್ಯರು ಸ್ವರ್ಗವನ್ನು ಪಡೆದು ಗತವ್ಯಥರಾಗಿ ದೇವತೆಗಳೊಡನೆ ಆನಂದ ದಿಂದಿರುತ್ತಾರೆ. ನೀನು ಋಷಿ-ಮಹರ್ಷಿಗಳಿಗೆ ಆಶ್ರಯಸ್ಥಾನನಾಗಿರುವೆ ಮತ್ತು ನೀನು ಅನೇಕತೀರ್ಥಗಳನ್ನೂ ಧಾರಣೆಮಾಡಿರುವೆ. ನಾನು ನಿನ್ನ ಶುಭಾಶಯಗಳೊಡನೆ ಹೋಗಿಬರುತ್ತೇನೆ. ಮಹಾನುಭಾವನೇ! ನಿನ್ನಲ್ಲಿರುವ ತಪ್ಪಲುಪ್ರದೇಶಗಳು, ಸರೋವರಗಳು, ನದಿಗಳು, ಚಿಲುಮೆಗಳು, ಲತಾಕುಂಜಗಳು, ಪುಣ್ಯತೀರ್ಥಗಳು–ಇವೆಲ್ಲವನ್ನೂ ನಾನು ಅನೇಕಬಾರಿ ಸಂದರ್ಶಿಸಿದ್ದೇನೆ. ನಾನು ನಿನ್ನಲ್ಲಿರುವ ವೃಕ್ಷಗಳ ಮಧುರವಾದ ಹಣ್ಣುಗಳನ್ನು ತಿಂದಿರುತ್ತೇನೆ ಮತ್ತು ನಿನ್ನ ಶರೀರದಿಂದ ಉದ್ಭೂತವಾದ ಚಿಲುಮೆಗಳ ರುಚಿಕರವಾದ, ಸುಗಂಧಮಯವಾದ ನೀರನ್ನು ಕುಡಿದು ನನ್ನ ಪಿಪಾಸೆಯನ್ನೂ ತೀರಿಸಿಕೊಂಡಿರುತ್ತೇನೆ. ನಿನ್ನಲ್ಲಿ ಉದ್ಭವವಾಗುವ ಅಮೃತೋಪಮವಾದ ನಿರ್ಝರಗಳ ತೀರ್ಥವನ್ನೂ ಕುಡಿದಿರುತ್ತೇನೆ. ಪುಟ್ಟಮಗುವು ತನ್ನ ತಂದೆಯ ತೊಡೆಯ ಮೇಲೆ ಸುಖವಾಗಿ ಮಲಗಿ ನಿದ್ರಿಸುವಂತೆ–ನಾನೂ ನಿನ್ನ ತಪ್ಪಲೆಂಬ ತೊಡೆಯ ಮೇಲೆ ಕುಳಿತು ಅಪ್ಸರೆಯರ ದಿವ್ಯಗಾನವನ್ನೂ, ಮಹರ್ಷಿಗಳು ಹೇಳುತ್ತಿದ್ದ ಸುಶ್ರಾವ್ಯವಾದ ವೇದಮಂತ್ರಗಳನ್ನೂ ಕೇಳಿಕೊಂಡು ಸುಖವಾಗಿದ್ದೆನು." ಅರ್ಜುನನು ಈ ರೀತಿಯಲ್ಲಿ ಪರ್ವತರಾಜನನ್ನು ಸ್ತೋತ್ರಮಾಡಿ ನಮಸ್ಕರಿಸಿ, ಸೂರ್ಯನಂತೆ ಪ್ರಕಾಶಿಸುತ್ತಾ ದಿವ್ಯರಥವನ್ನು ಆರೋಹಣಮಾಡಿದನು.

ಸೂರ್ಯನಿಗೆ ಸಮಾನವಾದ ತೇಜಸ್ಸಿನಿಂದ ಕೂಡಿದ್ದ ದಿವ್ಯವಾದ ರಥದಲ್ಲಿ ಕುಳಿತು ಧೀಮಂತನಾದ, ಕುರುವಂಶಪ್ರದೀಪನಾದ ಅರ್ಜುನನು ಮೇಲೇರಿದನು. ಭೂಲೋಕವು ಅವನ ದೃಷ್ಟಿಪಥದಿಂದ ದೂರವಾದನಂತರ ಅರ್ಜುನನು ಸಾವಿರಾರು ವಿಮಾನಗಳನ್ನು ದೇವಲೋಕದ ಮಾರ್ಗದಲ್ಲಿ ಕಂಡನು. ಆ ಪ್ರದೇಶದಲ್ಲಿ ಬೆಳಕುಕೊಡಲು ಸೂರ್ಯನಾಗಲೀ, ಚಂದ್ರ ನಾಗಲೀ, ಅಗ್ನಿಯಾಗಲೀ ಇರಲಿಲ್ಲ. ಧರ್ಮದ ಫಲದಿಂದಲೂ ಮತ್ತು ತಪಸ್ಸಿನ ಫಲದಿಂದಲೂ ಕೂಡಿದುದಾಗಿ ಆ ಪ್ರದೇಶವೇ ಸ್ವಯಂಪ್ರಭೆಯುಳ್ಳ

ದ್ದಾಗಿದ್ದಿತು. ಪೃಥ್ವಿಯಲ್ಲಿ ನಿಂತು ನೋಡುವವರಿಗೆ ಅತಿದೂರದ ಕಾರಣ ದಿಂದ ದೀಪದಂತೆ ಪುಟ್ಟದಾಗಿ ಕಾಣುವ ನಕ್ಷತ್ರಗಳೇ ಅಲ್ಲಿ ಒಂದೊಂದೂ ಸ್ವಯಂಪ್ರಭೆಯುಳ್ಳ ವಿಶಾಲಪ್ರದೇಶಗಳಾಗಿದ್ದುವು. ಅವು ಎಲ್ಲಿಯೂ ಚಲಿಸದೇ ತಮ್ಮ-ತಮ್ಮ ಸ್ಥಾನಗಳಲ್ಲಿಯೇ ಸ್ವಯಂಪ್ರಕಾಶದಿಂದ ಕೂಡಿ ನಿಂತಿರುವುದನ್ನು ಪಾರ್ಥನು ಕಂಡನು. ರಥವು ಸ್ವಲ್ಪ ಮುಂದೆ ಹೋದನಂತರ



ಮತ್ತೊಂದು ಪ್ರದೇಶದಲ್ಲಿ ತಪಸ್ಸಿನ ಫಲವನ್ನು ಅನುಭವಿಸುತ್ತಿರುವ ಸ್ವಯಂಪ್ರಕಾಶರಾದ ನೂರಾರು ರಾಜರ್ಷಿಗಳನ್ನೂ, ಯುದ್ಧಮಾಡುವಾಗ ಪ್ರಾಣತೊರೆದ ನೂರಾರು ಕ್ಷತ್ರಿಯಯೋಧರನ್ನೂ ಅರ್ಜುನನು ಕಂಡನು. ಅವರೆಲ್ಲರೂ ಸ್ವರ್ಗದ ಸುಖವನ್ನನುಭವಿಸುತ್ತಾ ಆನಂದದಿಂದ ಕಾಲಕಳೆಯು

ತ್ತಿದ್ದರು. ಅಲ್ಲಿಂದ ಮುಂದೆ ಸ್ವಲ್ಪದೂರ ಪ್ರಯಾಣಮಾಡಿದನಂತರ ಅರ್ಜುನನು ಸೂರ್ಯನಿಗೆ ಸಮಾನವಾದ ತೇಜಸ್ಸಿನಿಂದ ಕೂಡಿದ್ದ ಸಾವಿರಾರು ಗಂಧರ್ವರನ್ನೂ, ಗುಹ್ಯಕರನ್ನೂ, ಋಷಿಗಳನ್ನೂ, ಅನೇಕಾನೇಕ ಅಪ್ಸರೆಯರನ್ನೂ ಕಂಡನು. ಸ್ವಯಂಪ್ರಭೆಯಿಂದ ಕೂಡಿದ ಆ ಪ್ರದೇಶಗಳನ್ನು ಕಂಡು ಅರ್ಜುನನು ಆಶ್ಚರ್ಯಭರಿತನಾಗಿ ಮಾತಲಿಯನ್ನು ಕುರಿತು ಹೇಳಿದನು :

"ಮಾತಲೇ! ಇವರೆಲ್ಲರೂ ಯಾರು?"

"ಪಾರ್ಥ! ಇವರೆಲ್ಲರೂ ಪುಣ್ಯಕರ್ಮಗಳನ್ನು ಮಾಡಿ ಸುಕೃತಿಗಳಾಗಿ, ಸ್ವಯಂಪ್ರಕಾಶವನ್ನು ಪಡೆದು, ತಮ್ಮ-ತಮ್ಮ ಸ್ಥಾನಗಳಲ್ಲಿ ಪ್ರತಿಷ್ಠಿತರಾಗಿದ್ದಾರೆ. ಭೂಮಿಯಲ್ಲಿ ನಿಂತು ನೋಡಿದಾಗ ನಕ್ಷತ್ರಗಳಂತೆ ಕಾಣುವವರೂ ಇವರೇ ಆಗಿರುತ್ತಾರೆ."

ರಥವು ಮುಂದೆ ಸ್ವಲ್ಪದೂರ ಹೋಗುತ್ತಲೇ ದೇವಲೋಕದ ಮಹಾದ್ವಾರವು ಸಮೀಪಿಸಿತು. ಸುಂದರವಾದ, ಸರ್ವದಾ ವಿಜಯಿಯಾದ, ಕೈಲಾಸೋಪಮವಾದ, ನಾಲ್ಕು ದಂತಗಳಿಂದ ಕೂಡಿದ್ದ, ಇಂದ್ರನ ಪಟ್ಟದಾನೆಯಾದ ಐರಾವತವನ್ನು ದೇವಲೋಕದ ಮಹಾದ್ವಾರದಲ್ಲಿ ಅರ್ಜುನನು ಕಂಡನು. ಮಹಾದ್ವಾರದೊಳಗೆ ಪ್ರವೇಶಿಸಿ, ಸಿದ್ಧರು ಸಂಚರಿಸುವ ಮಾರ್ಗದಲ್ಲಿ ಅರ್ಜುನನು ರಥಾರೂಢನಾಗಿ ಹೋಗುತ್ತಿದ್ದುದನ್ನು ನೋಡಿದರೆ–ಹಿಂದೆ ಚಕ್ರವರ್ತಿಯಾದ ಮಾಂಧಾತನು ಅದೇ ಮಾರ್ಗವಾಗಿ ದೇವಲೋಕಕ್ಕೆ ಹೋದ ಸ್ಮರಣೆಯುಂಟಾಗುತ್ತಿದ್ದಿತು. ಕಮಲನೇತ್ರನಾದ ಅರ್ಜುನನು, ಧಾರ್ಮಿಕರಾದ ರಾಜರಿಗಾಗಿಯೇ ಮೀಸಲಾಗಿದ್ದ ಮಾರ್ಗದಲ್ಲಿ ಬಹಳ ದೂರ ಪ್ರವಾಸಮಾಡಿದನಂತರ ಕಟ್ಟಕಡೆಗೆ ಇಂದ್ರನ ಪಟ್ಟಣವಾದ, ಅತಿಸುಂದರವಾದ ಅಮರಾವತಿಯನ್ನು ಸಂದರ್ಶಿಸಿದನು.

೪೨ನೆಯ ಅಧ್ಯಾಯವು ಮುಗಿಯಿತು.

೪೩ನೆಯ ಅಧ್ಯಾಯ ಇಂದ್ರಲೋಕಾಭಿಗಮನಪರ್ವ (ಮುಂದುವರಿದಿದೆ.)

## ಅರ್ಜುನನಿಗೆ ಇಂದ್ರನ ದರ್ಶನ : ಇಂದ್ರಸಭೆಯಲ್ಲಿ ಸ್ವಾಗತ

ಪಾರಿಕ್ಷಿತ! ಅರ್ಜುನನು ಸಿದ್ಧ-ಚಾರಣರಿಂದ ಸಂಸೇವ್ಯಮಾನವಾದ ರಮ್ಯವಾಗಿದ್ದ ಅಮರಾವತಿಯನ್ನು ನೋಡಿದನು. ಅಲ್ಲಿ ಎಲ್ಲ ಋತುಗಳ

ಫಲ-ಪುಷ್ಪಗಳೂ ಇದ್ದುವು. ಅನೇಕವಿಧವಾದ, ಪುಣ್ಯತಮವಾದ ವೃಕ್ಷಗಳಿದ್ದುವು. ಅಲ್ಲಿಯೇ ಸುಂದರವನವಾದ ನಂದನವನವನ್ನೂ ಅರ್ಜುನನು ಕಂಡನು. ಆ ನಂದನವನವು ಅಪ್ಸರೆಯರಿಗೆ ಅತಿಪ್ರಿಯವಾದ ಕ್ರೀಡೋದ್ಯಾನವಾಗಿದ್ದಿತು. ಅಲ್ಲಿದ್ದ ಸೌಗಂಧಿಕಾದಿ ಅನೇಕಪುಷ್ಪಗಳ ಸುವಾಸನೆಯನ್ನು ಧರಿಸಿ ವಾಯುದೇವನು ಮಂದ-ಮಂದವಾಗಿ ಬೀಸುತ್ತಿದ್ದನು. ಪುಷ್ಪಭರಿತವಾದ ಮತ್ತು ಎತ್ತರವಾದ ಅಲ್ಲಿದ್ದ ವೃಕ್ಷಗಳನ್ನು ನೋಡಿದರೆ ಹೂವಿನ ತಟ್ಟೆಯನ್ನಿಟ್ಟುಕೊಂಡು ಅವುಗಳು ಅರ್ಜುನನನ್ನು ತಮ್ಮ ವನಕ್ಕೆ ಆಹ್ವಾನಿಸುತ್ತಿವೆಯೋ ಎಂಬಂತೆ ಕಾಣುತ್ತಿದ್ದುವು.

**ನಾತಪ್ತತಪಸಾ ಶಕ್ಯೋ ದ್ರಷ್ಟುಂ ನಾನಾಹಿತಾಗ್ನಿನಾ ।**
**ಸ ಲೋಕಃ ಪುಣ್ಯಕರ್ತ್ಯಾಣಾಂ ನಾಪಿ ಯುದ್ಧೇ ಪರಾಙ್ಮುಖೈಃ ॥೪॥**

**ನಾಯಜ್ವಭಿರ್ನಾವ್ರತಿಕೈರ್ನ ವೇದಶ್ರುತಿವರ್ಜಿತೈಃ ।**
**ನಾನಾಪ್ಲುತಾಙ್ಗೈಸ್ತೀರ್ಥೇಷು ಯಜ್ಞದಾನಬಹಿಷ್ಕೃತೈಃ ॥೫॥**

**ನಾಪಿ ಯಜ್ಞಹನೈಃ ಕ್ಷುದ್ರೈರ್ದ್ರಷ್ಟುಂ ಶಕ್ಯಃ ಕಥಂಚನ ।**
**ಪಾನಪೈರ್ಗುರುತಲ್ಪೈಶ್ಚ ಮಾಂಸಾದೈರ್ವಾ ದುರಾತ್ಮಭಿಃ ॥೬॥**

ಸುಂದರವಾದ, ಅನುಪಮವಾದ ನಂದನವನವನ್ನು–ತಪಸ್ಸಿದ್ಧಿಯನ್ನು ಪಡೆಯದವನಾಗಲೀ, ಯಜ್ಞ-ಯಾಗಾದಿಗಳನ್ನು ಮಾಡದವನಾಗಲೀ ಸಂದರ್ಶಿಸುವ ಸಾಧ್ಯತೆಯಿರಲಿಲ್ಲ. ಧಾರ್ಮಿಕರಿಗೆ ಮಾತ್ರವೇ ಆ ನಂದನವನವು ಆಶ್ರಯವನ್ನು ಕೊಡುತ್ತಿದ್ದಿತು. ಯುದ್ಧದಲ್ಲಿ ಪರಾಙ್ಮುಖನಾದವನಿಗೆ, ವ್ರತನಿಷ್ಠನಾಗಿರದವನಿಗೆ, ವೇದಾಧ್ಯಯನಮಾಡದವನಿಗೆ, ಪುಣ್ಯತಮವಾದ ತೀರ್ಥಗಳಲ್ಲಿ ಸ್ನಾನಮಾಡದವನಿಗೆ, ಯಜ್ಞಮಾಡಿ ಯಥೇಚ್ಛವಾಗಿ ದಾನ-ದಕ್ಷಿಣೆಗಳನ್ನು ಕೊಡದವನಿಗೆ, ಯಜ್ಞಘಾತಕನಿಗೆ, ನೀಚನಾದವನಿಗೆ, ಮದ್ಯಪಾಯಿಗೆ, ಗುರುತಲ್ಪಗನಿಗೆ, ಅಸಂಸ್ಕೃತವಾದ ಮಾಂಸವನ್ನು ತಿನ್ನುವವನಿಗೆ, ದುರುಳನಿಗೆ ಅಲ್ಲಿ ಸ್ಥಾನವಿರಲಿಲ್ಲ. ಆ ನಂದನವನದ ಸೌಂದರ್ಯವನ್ನು ವೀಕ್ಷಿಸಲೂ ಅಂತಹವರಿಗೆ ಅವಕಾಶವಿರಲಿಲ್ಲ. ದೇವಗಾಯನದಿಂದ ಪ್ರತಿಧ್ವನಿತವಾಗುತ್ತಿದ್ದ ನಂದನವನವನ್ನು ಸಂದರ್ಶಿಸಿದ ಅರ್ಜುನನು ಅಮರಾವತಿಯನ್ನು ಪ್ರವೇಶಿಸಿದನು.

ಅಲ್ಲಿ ಯಥೇಚ್ಛವಾಗಿ ಸಂಚರಿಸಲು ಸಮರ್ಥವಾದ ಸಾವಿರಾರು ವಿಮಾನಗಳು ಸಿದ್ಧವಾಗಿ ನಿಂತಿರುವುದನ್ನು ಅರ್ಜುನನು ಕಂಡನು. ಅಂತಹ ನೂರಾರು ವಿಮಾನಗಳು ಎಲ್ಲ ದಿಕ್ಕುಗಳಲ್ಲೂ ಸಂಚರಿಸುತ್ತಿರುವುದನ್ನೂ ಅವನು ನೋಡಿದನು. ವಾಯುದೇವನು ಅನೇಕ ಸುಗಂಧಕುಸುಮಗಳಿಂದ ಸುಗಂಧವನ್ನು ತಂದು ಅರ್ಜುನನ ಮೇಲೆ ಬೀಸಿದನು. ಅಪ್ಸರೆಯರೂ, ಗಂಧರ್ವರೂ ಅರ್ಜುನನ ಗುಣಗಾನಗಳನ್ನು ಮಾಡುತ್ತಿದ್ದರು. ದೇವತೆಗಳು ಗಂಧರ್ವರಿಂದಲೂ, ಋಷಿ-ಮಹರ್ಷಿಗಳಿಂದಲೂ ಕೂಡಿದವರಾಗಿ ಅರ್ಜುನನಿಗೆ ಅಭಿಮುಖವಾಗಿ ಬಂದು, ಆದರದಿಂದ ಪೂಜಿಸಿ ಸ್ವಾಗತಿಸಿದರು. ಮಹರ್ಷಿಗಳು ಅರ್ಜುನನನ್ನು ಆಶೀರ್ವದಿಸಿದರು. ಅಪ್ಸರೆಯರು ಸುಮಧುರ ಕಂಠಗಳಿಂದ ಶುಭಾಶಯಗಳ ಗೀತಗಳನ್ನು ಹಾಡಿದರು. ಅವನ ಸುತ್ತಲೂ ವೀಣಾ-ತಾಲ-ಮೃದಂಗಾದಿಗಳು ನುಡಿಸಲ್ಪಡುತ್ತಿದ್ದುವು. ಅರ್ಜುನನು ಎಲ್ಲರಿಂದಲೂ ಗೌರವಿಸಲ್ಪಟ್ಟವನಾಗಿ, ಇಂದ್ರನ ಆದೇಶದಂತೆ ಅತ್ಯಂತ ವಿಶಾಲವಾಗಿಯೂ, ಮನೋಹರವಾಗಿಯೂ ಇದ್ದ ಸುರವೀಥಿಯನ್ನು ಪ್ರವೇಶಿಸಿದನು. ಅಲ್ಲವನು ಸಾಧ್ಯರನ್ನೂ, ವಿಶ್ವೇದೇವತೆಗಳನ್ನೂ, ಸಪ್ತಮರುತ್ತುಗಳನ್ನೂ, ಅಶ್ವಿನೀದೇವತೆಗಳನ್ನೂ, ಅಷ್ಟವಸುಗಳನ್ನೂ, ಬ್ರಹ್ಮರ್ಷಿಗಳನ್ನೂ, ದಿಲೀಪನೇ ಮೊದಲಾದ ರಾಜರ್ಷಿಗಳನ್ನೂ, ತುಂಬುರು-ನಾರದರನ್ನೂ, ಹಾಹಾ-ಹೂಹೂ ಎಂಬ ಪ್ರಸಿದ್ಧರಾದ ಗಂಧರ್ವರನ್ನೂ ಸಂದರ್ಶಿಸಿದನು. ಅವರೆಲ್ಲರನ್ನೂ ಸಂದರ್ಶಿಸಿ ಅವರಿಗೆ ಪ್ರಣಾಮಮಾಡಿ, ಅವರಿಂದ ಸ್ವಸ್ತಿವಾಚನವನ್ನು ಪಡೆದನಂತರ ಅರ್ಜುನನು ಶತಕ್ರತುವಾದ, ದೇವಾಧಿದೇವನಾದ ಮಹೇಂದ್ರನನ್ನು ಸಂದರ್ಶಿಸಿದನು. ಸ್ವರ್ಣದ ಹಿಡಿಯಿಂದ ಕೂಡಿದ್ದ ಸುಂದರವಾದ ಶ್ವೇತಚ್ಛತ್ರಿಯು ದೇವೇಂದ್ರನ ತಲೆಯ ಮೇಲೆ ಕಂಗೊಳಿಸುತ್ತಿದ್ದಿತು. ದೇವದೂತರು ದೇವೇಂದ್ರನ ಎರಡು ಪಕ್ಕಗಳಲ್ಲಿಯೂ ನಿಂತು ದಿವ್ಯಗಂಧವನ್ನು ಸೂಸುತ್ತಿದ್ದ ಬೀಸಣಿಗೆಗಳಿಂದ ಗಾಳಿಯನ್ನು ಬೀಸುತ್ತಿದ್ದರು. ವಿಶ್ವಾವಸುವೇ ಮೊದಲಾದ ಗಂಧರ್ವರು ಸುಶ್ರಾವ್ಯವಾಗಿ ದೇವೇಂದ್ರನ ಗುಣಗಾನವನ್ನು ಮಾಡುತ್ತಿದ್ದರು. ಬ್ರಾಹ್ಮಣಶ್ರೇಷ್ಠರು ಋಗ್ಯಜುಸ್ಸಾಮವೇದಗಳ ಮಂತ್ರಗಳಿಂದ ಸ್ತುತಿಸುತ್ತಿದ್ದರು. ಅಂತಹ ಅನುಪಮವಾದ, ದಿವ್ಯವಾದ ಇಂದ್ರಸಭೆಗೆ ಅರ್ಜುನನು ಬಂದು ಸಿಂಹಾಸನಾರೂಢನಾಗಿದ್ದ

ಇಂದ್ರನಿಗೆ ಸಾಷ್ಟಾಂಗಪ್ರಣಾಮವನ್ನು ಮಾಡಿದನು. ಇಂದ್ರನು ವಾತ್ಸಲ್ಯಾತಿಶಯದಿಂದ ಒಡನೆಯೇ ಸಿಂಹಾಸನದಿಂದೆದ್ದು ಅರ್ಜುನನನ್ನು ಹಿಡಿದೆತ್ತಿ ತನ್ನ ನೀಳವಾದ ಬಾಹುಲತೆಗಳಿಂದ ಬಾಚಿ ತಬ್ಬಿಕೊಂಡನು. ದೇವತೆಗಳಿಂದಲೂ, ಋಷಿ-ಮಹರ್ಷಿಗಳಿಂದಲೂ ಪೂಜಿಸಲ್ಪಡುತ್ತಿದ್ದ, ಪರಮಪವಿತ್ರವಾದ



ಸಿಂಹಾಸನದ ಅರ್ಧಭಾಗದಲ್ಲಿ ತನ್ನ ಮಗನಾದ ಅರ್ಜುನನನ್ನೂ ಕುಳ್ಳಿರಿಸಿಕೊಂಡು ತಾನೂ ಕುಳಿತನು. ಸಿಂಹಾಸನದ ಮೇಲೆ ವಿನಯದಿಂದ ನತಶಿರನಾಗಿ ಕುಳಿತಿದ್ದ ಅರ್ಜುನನ ನೆತ್ತಿಯನ್ನು ಇಂದ್ರನು ಆಘ್ರಾಣಿಸಿ, ಅವನನ್ನೆತ್ತಿ ತನ್ನ ತೊಡೆಯ ಮೇಲೆಯೇ ಕುಳ್ಳಿರಿಸಿಕೊಂಡನು. ಇಂದ್ರನ ನಿರ್ದೇಶದಂತೆ ಶತಕ್ರತುವಿನ ಪರಮಪೂಜ್ಯವಾದ ದಿವ್ಯಾಸನದಲ್ಲಿ ಕುಳಿತಿದ್ದ, ಮಹಾಪರಾ

ಕ್ರಮಿಯಾದ ಅರ್ಜುನನು ಸಾಕ್ಷಾತ್ ಎರಡನೆಯ ದೇವೇಂದ್ರನಂತೆಯೇ ಪ್ರಕಾಶಿಸಿದನು. ಪುತ್ರವಾತ್ಸಲ್ಯದಿಂದ ಪ್ರಚೋದಿತನಾದ ಇಂದ್ರನು ಅರ್ಜುನನನ್ನು ಬಾರಿ-ಬಾರಿಗೂ ಸಂತೈಸುತ್ತಾ ಕೋಮಲವಾದ, ಸುಗಂಧಯುಕ್ತವಾದ ಕೈಯಿಂದ ಅರ್ಜುನನ ಮುಖಾರವಿಂದವನ್ನು ನಾಲ್ಕಾರು ಬಾರಿ ಸ್ಪರ್ಶಿಸಿದನು. ಸುಂದರಾಂಗನಾದ ತನ್ನ ಮಗನ ನೀಳವಾದ, ಸ್ವರ್ಣಸ್ತಂಭದಂತಿದ್ದ, ಮೌರ್ವೀ-ಬಾಣಗಳ ಆಕರ್ಷಣೆ ಮತ್ತು ಪ್ರಯೋಗಗಳಿಂದ ಅತಿ ಕಠಿನವಾಗಿದ್ದ ಬಾಹುಗಳನ್ನು, ವಜ್ರಾಯುಧದ ಚಿಹ್ನೆಗಳಿಂದ ಕೂಡಿದ್ದ ತನ್ನ ಕೈಗಳಿಂದ ತಟ್ಟಿ ಸವರಿದನು. ಬಾರಿ-ಬಾರಿಗೂ ತನ್ನ ಮಗನ ಮುಖಾರವಿಂದವನ್ನು ದಿಟ್ಟಿಸಿ ನೋಡುತ್ತಿದ್ದನು. ಗುಂಗುರುಕೂದಲುಗಳಿಂದ ಕೂಡಿದ್ದ ಸುಂದರಾಂಗನಾದ ಅರ್ಜುನನನ್ನು ಎಷ್ಟು ನೋಡಿದರೂ ಇಂದ್ರನ ಮನಸ್ಸು ತಣಿಯಲಿಲ್ಲ. ತನ್ನ ವಿಶಾಲವಾದ ಕಣ್ಣುಗಳಿಂದ ಅರ್ಜುನನನ್ನು ನೋಡುತ್ತಿದ್ದಂತೆಲ್ಲಾ ಇನ್ನೂ ದಿಟ್ಟಿಸಿ ನೋಡಬೇಕೆಂಬ ಆಶೆಯು ಇಂದ್ರನಿಗೆ ಉಂಟಾಗುತ್ತಿದ್ದಿತು. ಕೃಷ್ಣಪಕ್ಷದ ಚತುರ್ದಶಿಯ ದಿವಸ ಸೂರ್ಯ-ಚಂದ್ರರಿಬ್ಬರೂ ಆಕಾಶದಲ್ಲಿ ಉದಯಿಸಿ ಪ್ರಕಾಶಿಸುವಂತೆ–ಒಂದೇ ಸಿಂಹಾಸನದಲ್ಲಿ ಕುಳಿತಿದ್ದ ಪಾರ್ಥ-ಮಹೇಂದ್ರರು ಪ್ರಕಾಶಿಸಿದರು. ಆ ಸಮಯದಲ್ಲಿ ಹಾಡುವುದರಲ್ಲಿಯೂ, ಸಾಮಗಾನದಲ್ಲಿಯೂ ಕುಶಲರಾದ ತುಂಬುರುವೇ ಮೊದಲಾದ ಗಂಧರ್ವಶ್ರೇಷ್ಠರು ಸುಮನೋಹರವಾದ ಗೀತೆಗಳನ್ನೂ, ಸಾಮಗಳನ್ನೂ ಇಂಪಾಗಿ ಹಾಡುತ್ತಿದ್ದರು. ಘೃತಾಚೀ, ಮೇನಕಾ, ರಂಭಾ, ಪೂರ್ವಚಿತ್ತಿ, ಸ್ವಯಂಪ್ರಭಾ, ಊರ್ವಶೀ, ಮಿತ್ರಕೇಶೀ, ದಂಡಗೌರೀ, ವರೂಥಿನೀ, ಗೋಪಾಲೀ, ಸಹಜನ್ಯಾ, ಕುಂಭಯೋನಿ, ಪ್ರಜಾಗರಾ, ಚಿತ್ರಸೇನಾ, ಚಿತ್ರಲೇಖಾ, ಸಹಾ, ಮಧುರಸ್ವರಾ–ಇವರೇ ಮುಂತಾದ ಪದ್ಮಲೋಚನೆಯರಾದ ಸಾವಿರಾರು ಸ್ತ್ರೀಯರು ನೃತ್ಯಮಾಡುತ್ತಿದ್ದರು. ಅವರು ತಮ್ಮ ರೂಪ-ಲಾವಣ್ಯಗಳಿಂದಲೂ, ಅಭಿನಯಗಳಿಂದಲೂ ಸಿದ್ಧರ ಮನಸ್ಸುಗಳನ್ನೂ ಚಂಚಲಗೊಳಿಸುವವರಾಗಿದ್ದರು. ಅವರ ಸೊಂಟಗಳು ಸಿಂಹದ ಸೊಂಟದಂತೆ ಬಹಳ ಕೃಶವಾಗಿದ್ದುವು. ಶ್ರೋಣಿಪ್ರದೇಶಗಳು ಸ್ಥೂಲವಾಗಿಯೂ ವಿಶಾಲವಾಗಿಯೂ ಇದ್ದುವು. ಅವರು ನೃತ್ಯಮಾಡುವಾಗ ಅವರ ಸುಂದರಸ್ತನಗಳು ಸ್ವಾಭಾವಿಕವಾಗಿಯೇ ಕಂಪಿಸುತ್ತಿದ್ದುವು. ಅವರ

ಅತಿಮಧುರವಾದ ಕಟಾಕ್ಷವೀಕ್ಷಣಗಳು ಪ್ರೇಕ್ಷಕರ ಬುದ್ಧಿ-ಮನಸ್ಸುಗಳೆರಡನ್ನೂ ಏಕಕಾಲದಲ್ಲಿ ಸೆಳೆಯುವ ಸಾಮರ್ಥ್ಯವುಳ್ಳವುಗಳಾಗಿದ್ದುವು.

೪೩ನೆಯ ಅಧ್ಯಾಯವು ಮುಗಿಯಿತು.

೪೪ನೆಯ ಅಧ್ಯಾಯ ಇಂದ್ರಲೋಕಾಭಿಗಮನಪರ್ವ (ಮುಂದುವರಿದಿದೆ.)

## ಇಂದ್ರಲೋಕದಲ್ಲಿ ಅರ್ಜುನನ ವಿದ್ಯಾಭ್ಯಾಸ

ಜನಮೇಜಯ! ಗೀತ, ನೃತ್ಯ ಮತ್ತು ಅಭಿನಯಾದಿಗಳೆಲ್ಲವೂ ಮುಗಿದನಂತರ, ಇಂದ್ರನ ಮುಖಭಾವದಿಂದಲೇ ಅವನ ಇಂಗಿತವೇನೆಂಬುದನ್ನು ತಿಳಿದ ದೇವತೆಗಳು ಅರ್ಜುನನಿಗಾಗಿ ಅರ್ಘ್ಯ-ಪಾದ್ಯಾಚಮನೀಯಾದಿಗಳನ್ನು ಸಿದ್ಧಪಡಿಸಿ, ಇಂದ್ರಸುತನನ್ನು ಯಥಾವಿಧಿಯಾಗಿ ಅರ್ಚಿಸಿದರು. ಅರ್ಜುನನು ದೇವತೆಗಳ ಸತ್ಕಾರವನ್ನು ಸ್ವೀಕರಿಸಿದನಂತರ ಅವನನ್ನು ಇಂದ್ರನ ಅರಮನೆಗೆ ಕರೆದೊಯ್ಯಲಾಯಿತು. ಅರ್ಜುನನು ಇಂದ್ರನ ಅರಮನೆಯಲ್ಲಿಯೇ ಬಹಳ ಕಾಲವಿದ್ದನು. ಆ ಸಮಯದಲ್ಲಿ ಅರ್ಜುನನು ಇಂದ್ರನಿಂದ ನಾನಾವಿಧವಾದ ದಿವ್ಯಾಯುಧಗಳ ಧಾರಣ-ಪ್ರಯೋಗೋಪಸಂಹಾರಗಳನ್ನೂ ತಿಳಿದುಕೊಂಡನು. ಸಕಲಾಸ್ತ್ರಗಳಿಗೂ ಮಿಗಿಲಾದ, ಅಪ್ರತಿಹತವಾದ, ಇಂದ್ರನಿಗೆ ಪರಮಪ್ರಿಯವಾದ ವಜ್ರಾಸ್ತ್ರದ ಧಾರಣ-ಪ್ರಯೋಗೋಪಸಂಹಾರಗಳನ್ನೂ ಅರ್ಜುನನು ಇಂದ್ರನಿಂದ ಪಡೆದುದು ಮಾತ್ರವಲ್ಲದೆ–ಅಕಾಲದಲ್ಲಿಯೂ ಮಹಾನಾದವನ್ನುಂಟುಮಾಡುವ ಸಿಡಿಲುಗಳನ್ನೂ, ನವಿಲುಗಳನ್ನು ನೃತ್ಯವಾಡಲು ಪ್ರಚೋದಿಸುವ ಮೇಘಗಳ ನಿರ್ಮಾಣ ಮತ್ತು ನಿವಾರಣವಿದ್ಯೆಗಳನ್ನೂ ಕಲಿತನು. ತಾನು ಉದ್ದೇಶಿಸಿ ಬಂದ ಮಹಾಸ್ತ್ರಗಳ ಪ್ರಾಪ್ತಿಯಾದನಂತರ ಅರ್ಜುನನಿಗೆ ತನ್ನ ಸಹೋದರರಿದ್ದಲ್ಲಿಗೆ ಪ್ರಯಾಣಮಾಡಬೇಕೆಂಬ ತವಕವುಂಟಾಯಿತು. ಆದರೆ ಇಂದ್ರನು ಮಾತ್ರ ಅರ್ಜುನನನ್ನು ಒಡನೆಯೇ ಕಳುಹಿಸಿಕೊಡಲು ಒಪ್ಪಲಿಲ್ಲ. ಇಂದ್ರನ ನಿರ್ದೇಶದಂತೆ ಐದು ವರ್ಷಗಳ ಕಾಲ ಅರ್ಜುನನು ಸಕಲವಿಧವಾದ ಸ್ವರ್ಗೀಯ ಸುಖೋಪಭೋಗಗಳನ್ನೂ ಅನುಭವಿಸುತ್ತಾ ಕಾಲಕಳೆದನು.

ಅರ್ಜುನನು ಶಸ್ತ್ರಾಸ್ತ್ರಗಳೆಲ್ಲವನ್ನೂ ತನ್ನಿಂದ ಪಡೆದನಂತರ ಇಂದ್ರ

ನಿಗೆ ತನ್ನ ಮಗನು ನೃತ್ಯ-ಗೀತಗಳಲ್ಲಿಯೂ ಪ್ರವೀಣನಾಗಬೇಕೆಂಬ ಆಶಯ ವುಂಟಾಯಿತು. ತನ್ನ ಆಶಯವನ್ನು ಅರ್ಜುನನೊಡನೆ ಹೇಳಿದನು :

"ಕುಂತೀಪುತ್ರನೇ! ನೀನೀಗ ನನ್ನಿಂದ ಸಕಲವಿಧವಾದ ಶಸ್ತ್ರಾಸ್ತ್ರಗಳನ್ನೂ ಯಥಾವಿಧಿಯಾಗಿ ಪಡೆದಿರುವೆ. ಗಂಧರ್ವಾಧಿಪತಿಯಾದ ಚಿತ್ರಸೇನನಿಂದ ಗೀತ-ನೃತ್ಯಗಳನ್ನೂ ಅಭ್ಯಾಸಮಾಡು. ಇದರ ಜೊತೆಗೆ ಸ್ವರ್ಗೀಯವಾದ ವಾದ್ಯಸಂಗೀತದ ಅಭ್ಯಾಸವನ್ನೂ ಮಾಡು. ಇದು ಭೂಲೋಕದಲ್ಲಿ ಪ್ರಚಲಿತವಾಗಿರುವುದಿಲ್ಲ. ಸ್ವರ್ಗೀಯಸಂಗೀತವನ್ನೂ ನೃತ್ಯವನ್ನೂ ಅಭ್ಯಾಸ ಮಾಡುವುದು ಮುಂದೆ ನಿನ್ನ ಶ್ರೇಯಸ್ಸಿಗೆ ಸಾಧಕವಾಗುತ್ತದೆ."

ಇಂದ್ರನ ಮಾತಿಗೆ ಅರ್ಜುನನೂ ಒಪ್ಪಿದನು. ಒಡನೆಯೇ ಇಂದ್ರನು ಗೀತ-ನೃತ್ಯಗಳಲ್ಲಿ ಕುಶಲನಾದ ಚಿತ್ರಸೇನನನ್ನು ಕರೆಯಿಸಿ, ಅವನನ್ನು ಅರ್ಜುನನಿಗೆ ಪರಿಚಯಮಾಡಿಕೊಟ್ಟನು. ಮುಂದೆ ಅರ್ಜುನನು ಚಿತ್ರಸೇನ ನೊಡನೆಯೇ ಇದ್ದು ಅವನಿಂದ ಹಾಡುಗಾರಿಕೆ, ವಾದ್ಯವಾದನ ಮತ್ತು ನೃತ್ಯಾಭಿನಯಗಳನ್ನು ಹೇಳಿಸಿಕೊಂಡು ಅಭ್ಯಾಸಮಾಡಿದನು.

ಅರ್ಜುನನು ಎಷ್ಟೇ ಸುಖೋಪಭೋಗಗಳಲ್ಲಿ ಮುಳುಗಿದ್ದರೂ ಅವನಿಗೆ ತನ್ನ ಸಹೋದರರ ಚಿಂತೆಯಾಗಲೀ, ದುರುಳನಾದ ಶಕುನಿಯು ಆಡಿದ ಮೋಸದ ಪಗಡೆಯಾಟವಾಗಲೀ ಮನದಿಂದ ಮರೆಯಾಗಲಿಲ್ಲ. ಸಂಗೀತದ ಅಭ್ಯಾಸದಲ್ಲಿ ನಿರತನಾಗಿದ್ದಾಗಲೂ ಹಲವು ಬಾರಿ ಆ ಸನ್ನಿವೇಶ ಗಳೆಲ್ಲವೂ ಅರ್ಜುನನ ಮನದಲ್ಲಿ ಸುಳಿದಾಡುತ್ತಿದ್ದುವು. ದುಃಶಾಸನನ ಘೋರಕೃತ್ಯವನ್ನು ನೆನೆದೊಡನೆಯೇ ಅರ್ಜುನನ ಹೃದಯದಲ್ಲಿ ಕೋಪಾಗ್ನಿಯು ಪ್ರಜ್ವಲಿಸಿ–'ಎಂದವನ ಸಾವು?'–ಎಂಬ ನುಡಿಯು ಅರ್ಜುನನ ಮುಖದಿಂದ ಹೊರಬರುತ್ತಿತ್ತು. ಇಷ್ಟಾದರೂ ಇಂದ್ರನ ಆಜ್ಞೆ ಯನ್ನು ಮೀರಿ ಒಡನೆಯೇ ಹೊರಟುಬಿಡುವ ಸಾಧ್ಯತೆಯೂ ಇರಲಿಲ್ಲ. ಅರ್ಜುನ-ಚಿತ್ರಸೇನರ ಸ್ನೇಹವು ದಿನ-ದಿನಕ್ಕೂ ವೃದ್ಧಿಹೊಂದಿತು. ಅದರ ಫಲವಾಗಿ ಚಿತ್ರಸೇನನು ಸಂಗೀತ-ನೃತ್ಯಗಳ ರಹಸ್ಯಗಳೆಲ್ಲವನ್ನೂ ಅರ್ಜುನ ನಿಗೆ ಉಪದೇಶಿಸಿದನು. ಅನೇಕವಿಧವಾದ ನೃತ್ಯಾಭಿನಯಗಳನ್ನೂ, ಗೀತ

ಗಳನ್ನೂ, ವಾದ್ಯಗಳನ್ನೂ ಕಲಿತು, ಅರ್ಜುನನು ಆ ವಿದ್ಯೆಗಳಲ್ಲಿ ಪ್ರಾವೀಣ್ಯ ಹೊಂದಿದನು. ಇಷ್ಟಾದರೂ ಸಹೋದರರನ್ನೂ ತಾಯಿಯಾದ ಕುಂತಿಯನ್ನೂ ಪದೇ-ಪದೇ ನೆನೆಯುತ್ತಿದ್ದ ಅರ್ಜುನನಿಗೆ ಮನಶ್ಶಾಂತಿಯೆಂಬುದೇ ಇರಲಿಲ್ಲ.

ಳಳನೆಯ ಅಧ್ಯಾಯವು ಮುಗಿಯಿತು.

ಳ೫ನೆಯ ಅಧ್ಯಾಯ ಇಂದ್ರಲೋಕಾಭಿಗಮನಪರ್ವ (ಮುಂದುವರಿದಿದೆ.)

## ಚಿತ್ರಸೇನ ಮತ್ತು ಊರ್ವಶಿಯರ ವಾರ್ತಾಲಾಪ



ಜನಮೇಜಯ! ಹಿಂದೆ ಅರ್ಜುನನು ಇಂದ್ರಸಭೆಯಲ್ಲಿ ಇಂದ್ರನ

ಅರ್ಧಾಸನದಲ್ಲಿ ಕುಳಿತಿದ್ದಾಗ ರಂಭೆ, ಊರ್ವಶಿ, ಪೂರ್ವಚಿತ್ತಿ–ಮೊದಲಾದ ಅಪ್ಸರೆಯರು ನೃತ್ಯವಾಡಿದ್ದರು. ಆ ಸಮಯದಲ್ಲಿ ಅರ್ಜುನನು ಊರ್ವಶಿ ಯನ್ನು ಕ್ಷಣಕಾಲ ಎವೆಯಿಕ್ಕದೇ ನೋಡಿದ್ದನು. ಪಕ್ಕದಲ್ಲಿಯೇ ಕುಳಿತಿದ್ದ ಇಂದ್ರನೂ ಅವರಿಬ್ಬರ ಕಣ್ಣುಗಳು ಒಂದಾದುದನ್ನು ಗಮನಿಸಿದ್ದನು. ಅರ್ಜುನನ ದೃಷ್ಟಿಯು ಊರ್ವಶಿಯ ಮೇಲೆ ಏಕೆ ಬಿತ್ತೆಂದಾಗಲೀ, ಅದಕ್ಕೆ ಕಾರಣವೇನಿರಬಹುದೆಂದಾಗಲೀ–ಇಂದ್ರನು ಒಡನೆಯೇ ನಿರ್ಧರಿಸಲು ಹೋಗಲಿಲ್ಲ. ಅರ್ಜುನನಿಗೆ ಅಸ್ತ್ರೋಪದೇಶವಾಗಿ ಅವನು ಗಾಯನ, ನೃತ್ತ, ನೃತ್ಯ, ಅಭಿನಯ–ಮುಂತಾದುವನ್ನು ಪೂರ್ಣವಾಗಿ ಚಿತ್ರಸೇನನಿಂದ ಕಲಿತ ನಂತರ ಒಂದು ದಿನ ಇಂದ್ರನು ಚಿತ್ರಸೇನನನ್ನು ಕರೆಯಿಸಿ ಹೇಳಿದನು :

"ಗಂಧರ್ವರಾಜ! ಇಂದು ನೀನು ನನ್ನ ವಾರ್ತಾವಾಹಕನಾಗಿ, ಊರ್ವಶಿಯಲ್ಲಿಗೆ ಹೋಗಿ ನಾನೀಗ ಹೇಳುವ ಈ ಮಾತುಗಳನ್ನು ಅವಳೊಡನೆ ಹೇಳು : 'ಇಂದ್ರನ ನಿರ್ದೇಶದಂತೆ ಅರ್ಜುನನು ದೇವತೆಗಳಿಂದ ಪುರಸ್ಕೃತನಾಗಿ, ಸಕಲಾಸ್ತ್ರಗಳಲ್ಲಿಯೂ, ಗಾಯನ-ವಾದ್ಯವಾದನ ವಿದ್ಯೆಗಳಲ್ಲಿಯೂ ಪ್ರಾವೀಣ್ಯವನ್ನು ಪಡೆದಿರುತ್ತಾನೆ. ನೀನು ಅವನಲ್ಲಿಗೆ ಹೋಗಿ ಪುರುಷವ್ಯಾಘ್ರನಾದ ಅರ್ಜುನನ ಸೇವೆಯನ್ನು ಮಾಡುತ್ತಾ ಅವನನ್ನು ಸ್ತ್ರೀಸಂಗದಲ್ಲಿಯೂ ವಿಶಾರದನಾಗುವಂತೆ ಮಾಡು'–ಹೀಗೆಂದು ಹೇಳಿ ಬಾ."

ಇಂದ್ರನ ಆಜ್ಞೆಯನ್ನು ಶಿರಸಾವಹಿಸಿ ಚಿತ್ರಸೇನನು ಒಡನೆಯೇ ಅಪ್ಸರೆಯರಲ್ಲಿ ಶ್ರೇಷ್ಠಳಾದ ಊರ್ವಶಿಯ ಭವನಕ್ಕೆ ಹೋದನು. ಚಿತ್ರಸೇನನು ದೂರದಲ್ಲಿ ಬರುತ್ತಿದ್ದಾಗಲೇ ಅವನಾರೆಂಬುದನ್ನು ತಿಳಿದಿದ್ದ ಊರ್ವಶಿಯು ಪ್ರಸನ್ನವದನೆಯಾಗಿ ಚಿತ್ರಸೇನನನ್ನು ಆದರದಿಂದ ಸ್ವಾಗತಿಸಿ, ಯಥೋಚಿತವಾಗಿ ಸತ್ಕರಿಸಿದಳು. ಕುಶಲಪ್ರಶ್ನೆಗಳಾದನಂತರ ಚಿತ್ರಸೇನ ಮತ್ತು ಊರ್ವಶಿಯರು ಸುಖಾಸನಗಳಲ್ಲಿ ಕುಳಿತರು. ಚಿತ್ರಸೇನನು ಊರ್ವಶಿಯನ್ನು ಕುರಿತು ತನ್ನ ಆಗಮನದ ಕಾರಣವನ್ನು ಹೇಳ ಲುಪಕ್ರಮಿಸಿದನು :

"ಊರ್ವಶಿ! ಸ್ವರ್ಗಾಧಿಪತಿಯಾದ ಇಂದ್ರನಿಂದ ಕಳುಹಿಸಲ್ಪಟ್ಟು ನಾನಿಲ್ಲಿಗೆ ಬಂದಿರುತ್ತೇನೆ. ನಮ್ಮ ಅಧಿಪತಿಯಾದ ದೇವೇಂದ್ರನು ಇಂದು

ನಿನ್ನ ಸೌಜನ್ಯವನ್ನು ಅಭಿಲಾಷಿಸಿ ನನ್ನನ್ನು ನಿನ್ನಲ್ಲಿಗೆ ಕಳುಹಿಸಿರುತ್ತಾನೆ. ಇಂದ್ರನ ಆಹ್ವಾನದಂತೆ ಅಮರಾವತಿಗೆ ಬಂದಿರುವ ಅರ್ಜುನನನ್ನು ನೋಡಿರುವೆಯಲ್ಲವೇ?

**ಯಸ್ತು ದೇವಮನುಷ್ಯೇಷು ಪ್ರಖ್ಯಾತಃ ಸಹಜೈರ್ಗುಣೈಃ ।**
**ಶ್ರಿಯಾ ಶೀಲೇನ ರೂಪೇಣ ವ್ರತೇನ ಚ ದಮೇನ ಚ ।**
**ಪ್ರಖ್ಯಾತೋ ಬಲವೀರ್ಯೇಣ ಸಮ್ಮತಃ ಪ್ರತಿಭಾನವಾನ್ ॥೭॥**

**ವರ್ಚಸ್ವೀ ತೇಜಸಾ ಯುಕ್ತಃ ಕ್ಷಮಾವಾನ್ವೀತಮತ್ಸರಃ ।**
**ಸಾಙ್ಗೋಪನಿಷದಾನ್ವೇದಾಂಶ್ಚತುರಾಖ್ಯಾನಪಞ್ಚಮಾನ್ ॥೮॥**

**ಯೋಽಧೀತೇ ಗುರುಶುಶ್ರೂಷಾಂ ಮೇಧಾಂ ಚಾಷ್ಟಗುಣಾಶ್ರಯಾಮ್ ।**
**ಬ್ರಹ್ಮಚರ್ಯೇಣ ದಾಕ್ಷ್ಯೇಣ ಪ್ರಸವೈರ್ವಯಸಾಪಿ ಚ ॥೯॥**

**ಏಕೋ ವೈ ರಕ್ಷಿತಾ ಚೈವ ತ್ರಿದಿವಂ ಮಘವಾನಿವ ।**
**ಅಕತ್ಥನೋ ಮಾನಯಿತಾ ಸ್ಥೂಲಲಕ್ಷ್ಯಃ ಪ್ರಿಯಂವದಃ ॥೧೦॥**

**ಸುಹೃದಶ್ಚಾನ್ನಪಾನೇನ ವಿವಿಧೇನಾಭಿವರ್ಷತಿ ।**
**ಸತ್ಯವಾಕ್ಪೂಜಿತೋ ವಕ್ತಾ ರೂಪವಾನನಹಂಕೃತಃ ॥೧೧॥**

**ಭಕ್ತಾನುಕಮ್ಪೀ ಕಾನ್ತಶ್ಚ ಪ್ರಿಯಶ್ಚ ಸ್ಥಿರಸಂಗರಃ ।**
**ಪ್ರಾರ್ಥನೀಯೈರ್ಗುಣಗಣೈರ್ಮಹೇನ್ದ್ರವರುಣೋಪಮಃ ॥೧೨॥**

**ವಿದಿತಸ್ತೇಽರ್ಜುನೋ ವೀರಃ ಸ ಸ್ವರ್ಗಫಲಮಾಪ್ನುಯಾತ್ ।**
**ತ್ವಂ ತು ಶಕ್ರಾಭ್ಯನುಜ್ಞಾತಾ ತಸ್ಯ ಪಾದಾನ್ತಿಕಂ ವ್ರಜ ।**
**ತದೇವಂ ಕುರು ಕಲ್ಯಾಣಿ ಪ್ರಸನ್ನಸ್ತ್ವಾಂ ಧನಂಜಯಃ ॥೧೩॥**

ತನ್ನ ಸ್ವಭಾವಜನ್ಯವಾದ ಸುಗುಣಗಳಿಂದ ಅರ್ಜುನನಿಂದು ದೇವ-ಮನುಷ್ಯಲೋಕಗಳೆರಡರಲ್ಲಿಯೂ ಪ್ರಖ್ಯಾತನಾಗಿರುತ್ತಾನೆ. ಅವನು ಕಾಂತಿ ಯುಕ್ತನಾಗಿರುತ್ತಾನೆ. ಶೀಲಸಂಪನ್ನನು. ಅವನಿಗೆ ಅನುಪಮವಾದ ರೂಪ ವಿದೆ. ವ್ರತಾನುಷ್ಠಾನಗಳಲ್ಲಿ ದೃಢನಾಗಿದ್ದಾನೆ. ಶಮ-ದಮಾದಿ ಗುಣಗಳಿಂದಲೂ ಕೂಡಿರುತ್ತಾನೆ. ಮಹಾಬಲಶಾಲಿಯೆಂದೂ, ವೀರ್ಯ

ವಂತನೆಂದೂ ಪ್ರಖ್ಯಾತನಾಗಿರುತ್ತಾನೆ. ಪ್ರತಿಭಾವಂತನೂ, ವರ್ಚಸ್ವಿಯೂ ತೇಜಸ್ವಿಯೂ ಆಗಿರುತ್ತಾನೆ. ಅವನು ಕ್ಷಮಾವಂತನು. ಅವನಿಗೆ ಅಸೂಯೆ ಯೆಂಬುದೇ ಇಲ್ಲ. ಸಾಂಗವಾಗಿ ನಾಲ್ಕು ವೇದಗಳನ್ನೂ ಅಧ್ಯಯನಮಾಡಿ ರುತ್ತಾನೆ. ಉಪನಿಷತ್ತುಗಳನ್ನೂ ಅಧ್ಯಯನಮಾಡಿರುತ್ತಾನೆ. ಪುರಾಣಗಳನ್ನೂ ತಿಳಿದವನಾಗಿರುತ್ತಾನೆ. ಗುರುಶುಶ್ರೂಷೆಯಲ್ಲಿ ನಿರತನಾಗಿರುತ್ತಾನೆ. ಅವನು ಶುಶ್ರೂಷಾ, ಶ್ರವಣ, ಗ್ರಹಣ, ಧಾರಣ, ಊಹ, ಅಪೋಹ, ಅರ್ಥವಿಜ್ಞಾನ ಮತ್ತು ತತ್ತ್ವಜ್ಞಾನ–ಎಂಬ ಅಷ್ಟಗುಣಪರಿಪೂರ್ಣವಾದ ಬುದ್ಧಿ ಯುಳ್ಳವನಾಗಿರುತ್ತಾನೆ. ಬ್ರಹ್ಮಚರ್ಯ, ಅನಾಲಸ್ಯ, ಸದ್ವಂಶ, ಪ್ರಾಯದ ವಯಸ್ಸು–ಇವುಗಳಿಂದ ಕೂಡಿರುವ ಈ ಅರ್ಜುನನೊಬ್ಬನೇ ಸ್ವರ್ಗಲೋಕ ವನ್ನು ಇಂದ್ರನು ರಕ್ಷಿಸುವಂತೆ–ನಮ್ಮನ್ನೂ ರಕ್ಷಿಸುವ ಸಾಮರ್ಥ್ಯವುಳ್ಳವ ನಾಗಿದ್ದಾನೆ. ಊರ್ವಶಿ! ಇಂತಹ ಸಾಮರ್ಥ್ಯವಿದ್ದರೂ ಅವನು ತನ್ನ ಪೌರುಷದ ವಿಷಯವಾಗಿ ಯಾರೊಡನೆಯೂ ಆತ್ಮಪ್ರಶಂಸೆಯನ್ನು ಮಾಡಿಕೊಳ್ಳುವುದಿಲ್ಲ. ಮಿತಭಾಷೀ. ಎಲ್ಲರನ್ನೂ ಗೌರವಿಸುತ್ತಾನೆ. ಅತಿಸೂಕ್ಷ್ಮ ವಿಷಯಗಳನ್ನೂ ಬಹಳ ಬೇಗ ಗ್ರಹಿಸುತ್ತಾನೆ. ಅರ್ಜುನನು ಪ್ರಿಯಭಾಷಿಯು. ಯಾರೊಡನೆಯೂ ನಿಷ್ಠುರವಾಗಿ ಮಾತುಗಳನ್ನಾಡುವುದಿಲ್ಲ. ತನ್ನ ಬಳಿಗೆ ಬರುವ ಸುಹೃದರನ್ನು ಸತ್ಕರಿಸುತ್ತಾನೆ. ಸತ್ಯವಂತನು. ಸಕಲರಿಂದಲೂ ಪೂಜಿಸಲ್ಪಡತಕ್ಕವನು. ಅಸ್ಖಲಿತವಾಕ್ಪ್ರವಾಹವುಳ್ಳವನು. ರೂಪಸಂಪನ್ನನು. ಅಹಂಕಾರರಹಿತನು. ತನ್ನ ಭಕ್ತರ ವಿಷಯದಲ್ಲಿ ಹೆಚ್ಚಿನ ಕರುಣೆ ತೋರುತ್ತಾನೆ. ಪ್ರಿಯದರ್ಶಿಯು. ಎಲ್ಲರಿಗೂ ಬೇಕಾದವನು. ಸ್ಥಿರಪ್ರತಿಜ್ಞನು. ಎಲ್ಲ ಗುಣಗಳಲ್ಲಿಯೂ ಮಹೇಂದ್ರನಿಗೂ–ವರುಣನಿಗೂ ಸಮಾನನೆನಿಸಿದ್ದಾನೆ. ಇಂತಹ ಸಕಲಗುಣಪರಿಪೂರ್ಣನಾದ ಅರ್ಜುನನನ್ನು ನೀನು ನೋಡಿರುವೆಯಲ್ಲವೇ? ಆ ನರಶ್ರೇಷ್ಠನು ಸಕಲವಿಧವಾದ ಸ್ವರ್ಗೀಯ ಸುಖಗಳನ್ನೂ ಅನುಭವಿಸಬೇಕೆಂಬುದು ಇಂದ್ರನ ಅಭಿಲಾಷೆಯಾಗಿದೆ. ಇಂದ್ರನ ಆಜ್ಞಾನುಸಾರವಾಗಿ ನೀನು ಅರ್ಜುನನ ಚರಣಾರವಿಂದಗಳ ಬಳಿಗೆ ಧಾವಿಸು. (ಅವನ ಅರಮನೆಗೆ ಹೋಗು.) ಧನಂಜಯನೂ ನಿನ್ನ ವಿಷಯದಲ್ಲಿ ಪ್ರಸನ್ನನಾಗಿರುವುದರಿಂದ ಒಡನೆಯೇ ಅವನಲ್ಲಿಗೆ ಹೋಗು."

ಚಿತ್ರಸೇನನ ಆ ಮಾತುಗಳನ್ನು ಕೇಳಿದೊಡನೆಯೇ ಊರ್ವಶಿಯ ಮುಖಾರವಿಂದವು ಮಂದಹಾಸದಿಂದ ಅರಳಿತು. ಇಂದ್ರನು ಚಿತ್ರಸೇನನ ಮೂಲಕ ಹೇಳಿಕಳುಹಿಸಿದ್ದ ಆಜ್ಞೆಯನ್ನು ಬಹಳ ಸಂತೋಷದಿಂದ ಸ್ವೀಕರಿಸಿದಳು. ಇಂದ್ರನ ಆಜ್ಞೆಯಿಂದ ತನಗುಂಟಾದ ಸಂತೋಷಾಧಿಕ್ಯವನ್ನೂ ಚಿತ್ರಸೇನನೊಡನೆ ಹೇಳಿದಳು :

"ಗಂಧರ್ವರಾಜನೇ! ನೀನು ಹೇಳಿರುವ ಅರ್ಜುನನ ಈ ಗುಣಗಳ ವಿವರಣೆಯು ಪರಮಸತ್ಯವಾದುದು. ನಾನು ಇತರರಿಂದಲೂ ಅರ್ಜುನನ ಪ್ರಶಂಸೆಯನ್ನು ಕೇಳಿ ಅವನನ್ನು ಹೇಗೆ ಪಡೆಯಬೇಕೆಂದು ವ್ಯಥಿತಳಾಗಿದ್ದೇನೆ. ಹೀಗಿರುವಾಗ ಅರ್ಜುನನಿಗಿಂತಲೂ ಅಧಿಕನಾದ ಬೇರೆ ಯಾರನ್ನು ತಾನೇ ವರಿಸಲಿ? (ಸರ್ವಶ್ರೇಷ್ಠನಾದ ಅರ್ಜುನನನ್ನೇ ವರಿಸುತ್ತೇನೆ.) ಇಂದ್ರನ ಆಜ್ಞೆಯಿಂದ ಮಾತ್ರವೇ ಅಲ್ಲ. ನಿನಗೆ ನನ್ನಲ್ಲಿರುವ ಮೈತ್ರಿಯ ಕಾರಣದಿಂದಲೂ, ಅರ್ಜುನನಲ್ಲಿರುವ ಅನೇಕವಾದ ಒಳ್ಳೆಯ ಗುಣಗಳ ಕಾರಣದಿಂದಲೂ ನಾನೀಗಲೇ ಅವನ ವಿಷಯದಲ್ಲಿ ಮೋಹಪರವಶಳಾಗಿದ್ದೇನೆ. ಆದುದರಿಂದ ಇಂದ್ರನ ಆಜ್ಞೆಯನ್ನು ಶಿರಸಾವಹಿಸಿ ಅವನು ಹೇಳಿದಂತೆ ಮಾಡುವೆನು. ನೀನು ನಿಶ್ಚಿಂತನಾಗಿ ತೆರಳಬಹುದು. ನಾನು ಹೆಚ್ಚಿನ ಸಂತೋಷದಿಂದ ಅರ್ಜುನನ ಬಳಿಗೆ ಈಗಲೇ ಹೋಗುತ್ತೇನೆ."

ಳ೫ನೆಯ ಅಧ್ಯಾಯವು ಮುಗಿಯಿತು.

೪೬ನೆಯ ಅಧ್ಯಾಯ ಇಂದ್ರಲೋಕಾಭಿಗಮನಪರ್ವ (ಮುಂದುವರಿದಿದೆ.)

## ಕಾಮಾತುರೆಯಾದ ಊರ್ವಶಿಯು ಅರ್ಜುನನ ಬಳಿಗೆ ಹೋದುದು : ಅರ್ಜುನನ ತಿರಸ್ಕಾರ : ಊರ್ವಶಿಯ ಕೋಪ ಮತ್ತು ಶಾಪಪ್ರದಾನ

"ಜನಮೇಜಯ! ಕೃತಕೃತ್ಯನಾದ ಚಿತ್ರಸೇನನು ಊರ್ವಶಿಯ ಭವನದಿಂದ ಹೊರಬಿದ್ದನು. ಚಿತ್ರಸೇನನನ್ನು ಕಳುಹಿಸಿಕೊಟ್ಟನಂತರ ಶುಚಿಸ್ಮಿತೆಯಾದ ಊರ್ವಶಿಯು ಅರ್ಜುನನ ಸಮಾಗಮದ ನಿರೀಕ್ಷೆಯ

ಆನಂದದಿಂದ ಪುಳಕಿತಳಾದಳು. ಚಿತ್ರಸೇನನು ಅರ್ಜುನನ ಗುಣಾತಿಶಯಗಳನ್ನು ಚಿತ್ರಿಸಿದ ಹೊತ್ತಿನಿಂದ ಊರ್ವಶಿಯು ಅರ್ಜುನನ ಸುಂದರಾಕೃತಿಯನ್ನೇ ಸ್ಮರಿಸುತ್ತಿದ್ದಳು. ಕಾಮದೇವನು ತನ್ನ ಪುಷ್ಪಬಾಣಗಳನ್ನು ಊರ್ವಶಿಯ ಮೇಲೆ ಕ್ಷಣ-ಕ್ಷಣಕ್ಕೂ ಪ್ರಯೋಗಿಸುತ್ತಿದ್ದನು. ಊರ್ವಶಿಯು, ಅರ್ಜುನನು ತನ್ನೆದುರಿನಲ್ಲಿಯೇ ನಿಂತಿರುವನೋ ಎಂದು ಕ್ಷಣ-ಕ್ಷಣಕ್ಕೂ ಭ್ರಾಂತಳಾಗುವಳು. ಅರ್ಜುನನ ಮನಸ್ಸನ್ನು ತಣಿಸಲು ತನ್ನಲ್ಲಿದ್ದ ಅನೇಕ ವಿಧವಾದ ವಸ್ತ್ರಾಭರಣಗಳನ್ನು ಹೊರತೆಗೆದು ಆರಿಸಿಕೊಂಡಳು. ಗಂಧಮಿಶ್ರವಾದ ನೀರಿನಲ್ಲಿ ಮಿಂದು ಶರೀರಾದ್ಯಂತವಾಗಿ ನಾನಾವಿಧವಾದ ಪರಿಮಳ ದ್ರವ್ಯಗಳನ್ನು ಲೇಪಿಸಿಕೊಂಡಳು. ದೇವಸುಮನಿರ್ಮಿತವಾದ ಮಾಲೆಗಳನ್ನು ಧರಿಸಿಕೊಂಡಳು. ಅವಳ ಮನಸ್ಸು ಅರ್ಜುನನಲ್ಲಿಯೇ ಲೀನವಾಗಿ ಹೋಯಿತು. ಊರ್ವಶಿಯು ತನ್ನ ಮನೆಯಲ್ಲಿ ಅಲಂಕರಿಸಿಕೊಳ್ಳುತ್ತಿದ್ದರೂ ಅವಳ ಮನಸ್ಸು ಅರ್ಜುನನೊಡಗೂಡಿ ಅವನೊಡನೆ ವಿಸ್ತಾರವಾದ ಹಂಸ ತೂಲಿಕಾತಲ್ಪದಲ್ಲಿ ವಿಹರಿಸುತ್ತಿದ್ದಿತು. ಊರ್ವಶಿಯು ತನ್ನಲ್ಲಿದ್ದ ಅಸಂಖ್ಯಾತವಾದ ಆಭರಣಗಳಲ್ಲಿ, ಸಾವಿರಾರು ಪೀತಾಂಬರಗಳಲ್ಲಿ–ಅತ್ಯಂತ ಸುಂದರವಾದ ರತ್ನಮಾಲೆಗಳನ್ನೂ, ಒಡ್ಯಾಣಗಳನ್ನೂ, ಕಂಠಾಭರಣಸೂತ್ರಗಳನ್ನೂ–ಅತ್ಯಂತ ನವುರಾಗಿಯೂ, ಸುಂದರವಾಗಿಯೂ ಇದ್ದ ಪೀತಾಂಬರವನ್ನೂ ಆರಿಸಿಕೊಂಡು ಅಲಂಕರಿಸಿಕೊಂಡಳು. ಪೃಥುಶ್ರೋಣಿಯಾದ ಊರ್ವಶಿಯು ರಾತ್ರಿಯಲ್ಲಿ ಚಂದ್ರೋದಯವಾಗುವವರೆಗೂ ಬಹಳ ಕಷ್ಟದಿಂದ ಕಳೆದು, ಚಂದ್ರೋದಯವಾಗುತ್ತಲೇ ಅರ್ಜುನನ ಭವನಾಭಿಮುಖವಾಗಿ ಹೊರಟಳು. ತಲೆಯನ್ನು ಬಾಚಿಕೊಂಡಿದ್ದಳು. ಗುಂಗುರುಕೂದಲುಗಳಿಂದ ಅವಳ ಮುಂದಲೆಯು ಶೋಭಿಸುತ್ತಿದ್ದಿತು. ಕೇಶರಾಶಿಯು ಮೃದುವಾಗಿಯೂ, ಆನೆಯ ಸೊಂಡಿಲಿನಂತೆ ನೀಳವಾಗಿಯೂ ಇದ್ದಿತು. ದೇವಸುಮಗಳಿಂದ ತಲೆಯನ್ನು ಅಲಂಕರಿಸಿದ್ದಳು. ಚಂದ್ರನಲ್ಲಿರುವ ಲಾಂಛನದಂತೆ ಅವಳ ಭ್ರುಕುಟಿಗಳಿದ್ದುವು. ಲಾಂಛನದಂತಹ ಹುಬ್ಬುಗಳಿಂದ ಕೂಡಿದ್ದ, ಮಧುರಾಲಾಪ, ಮನೋಹರತೆ, ಕಾಂತಿ ಮತ್ತು ಸೌಮ್ಯತೆಗಳಿಂದ ಪೂರ್ಣನಾಗಿದ್ದ ಊರ್ವಶಿಯ ಮುಖಚಂದ್ರನು–ಯಾರು ಹೆಚ್ಚೆಂದು ನಿರ್ಧರಿಸುವ ಅಭಿಲಾಷೆಯಿಂದ ಅಂತರಿಕ್ಷದ ಚಂದ್ರನನ್ನು ಸ್ಪರ್ಧೆಗೆ ಕರೆಯುತ್ತಿರುವಂತೆಯೇ

ಕಾಣುತ್ತಿದ್ದಿತು. ಹಿಂದೆಯೇ ಹೇಳಿದಂತೆ ಊರ್ವಶಿಯು ಥಳ-ಥಳಿಸುತ್ತಿದ್ದ ರತ್ನಹಾರಗಳನ್ನು ಧರಿಸಿದ್ದಳು. ತನ್ನ ಶರೀರವನ್ನು ದಿವ್ಯಚಂದನದಿಂದ ಲೇಪಿಸಿಕೊಂಡಿದ್ದಳು. ರತ್ನಹಾರಗಳಿಂದಲೂ, ದಿವ್ಯಗಂಧಾನುಲೇಪ ದಿಂದಲೂ ಶೋಭಿಸುತ್ತಿದ್ದ, ಕಮಲದ ಮೊಗ್ಗಿನಂತಿದ್ದ ಅವಳ ಸ್ತನಯುಗ್ಮವು ಅವಳು ನಡೆಯುತ್ತಿದ್ದಂತೆಲ್ಲಾ–ಅರ್ಜುನನ ಹಸ್ತಸ್ಪರ್ಶಸುಖವು ತಮಗೂ ಲಭಿಸುವುದೆಂಬ ಉತ್ಸಾಹದಿಂದಲೋ ಎಂಬಂತೆ–ಕುಣಿದಾಡುತ್ತಿದ್ದಿತು. ಅವಳು ನಡೆಯುತ್ತಿದ್ದಾಗ ಸ್ತನಗಳ ಭಾರದ ಕಾರಣದಿಂದಾಗಿ ಸ್ವಲ್ಪ ಬಾಗಿಯೇ ನಡೆಯುತ್ತಿದ್ದಳು. ಅದರಿಂದಾಗಿ ಅವಳ ಮಧ್ಯಭಾಗವು ತ್ರಿವಳಿ ಗಳಿಂದ ಪರಿಶೋಭಿಸುತ್ತಿದ್ದಿತು. ಉನ್ನತವಾಗಿಯೂ, ದುಂಡಾಗಿಯೂ, ಪರ್ವತೋಪಮವಾಗಿಯೂ ಇದ್ದ ನಿತಂಬಗಳಿಂದ ಕೂಡಿದ್ದ, ಅತಿನವುರಾದ ಪೀತಾಂಬರದಿಂದಲೂ, ರತ್ನಖಚಿತವಾದ ಮೇಖಲೆಯಿಂದಲೂ ಅಲಂಕೃತ ವಾಗಿದ್ದ, ಮನ್ಮಥನ ನಿವಾಸಸ್ಥಾನವಾದ, ದೋಷರಹಿತವಾದ ಅಪ್ಸರೆಯ ಕಟಿಪುರೋಭಾಗವು–ಋಷಿ-ಮಹರ್ಷಿಗಳ ಮನಸ್ಸಿಗೂ ವ್ಯಾಮೋಹ ವನ್ನುಂಟುಮಾಡುವುದಾಗಿದ್ದಿತು. ಅವಳ ಕಾಲಿನ ಹರಡುಗಳು ಕಾಣುತ್ತಿರ ಲಿಲ್ಲ. ಗೂಢವಾಗಿದ್ದುವು. ಪಾದಗಳು, ಆಮೆಯ ಮೇಲ್ಭಾಗದಂತೆ ಉಬ್ಬಿದ್ದು, ಉದ್ದವಾಗಿದ್ದ ಬೆರಳುಗಳಿಂದಲೂ, ತಾಮ್ರದಂತೆ ಕೆಂಪಾಗಿದ್ದ ಅಂಗಾಲು ಗಳಿಂದಲೂ ಕೂಡಿದ್ದು, ಪುಟ್ಟ-ಪುಟ್ಟ ಗೆಜ್ಜೆಗಳಿಂದ ಅಲಂಕರಿಸಲ್ಪಟ್ಟು ಚೆಲುವಾಗಿ ಕಾಣುತ್ತಿದ್ದುವು. ಸ್ವಲ್ಪ ಮಧುಪಾನಮಾಡಿದ್ದ ಊರ್ವಶಿಯು ಮದನನಿಂದ ಉತ್ತೇಜಿತಳಾಗಿ, ತನ್ನ ಮನದ ಇಚ್ಛೆಯನ್ನು ಪೂರೈಸಿ ಕೊಳ್ಳುವ ಆಶೆಯಿಂದ ಪ್ರಫುಲ್ಲವದನೆಯಾಗಿ ಹೋಗುತ್ತಿದ್ದಾಗ ಅವಳಲ್ಲಿದ್ದ ಸ್ವಾಭಾವಿಕವಾದ ಸೌಂದರ್ಯಕ್ಕಿಂತಲೂ ಹೆಚ್ಚಿನ ಸೌಂದರ್ಯದಿಂದ ಪ್ರಕಾಶಿ ಸಿದಳು. ಸ್ವರ್ಗದಲ್ಲಿ ಅನೇಕಾನೇಕ ಪ್ರೇಕ್ಷಣೀಯವಸ್ತುಗಳಿದ್ದರೂ ಸಿದ್ಧ-ಚಾರಣ-ಗಂಧರ್ವರು ಅಂದಿನ ಊರ್ವಶಿಯ ಅನುಪಮವಾದ ಸೌಂದರ್ಯಾಕೃತಿಯನ್ನು ಪ್ರೇಕ್ಷಣೀಯತಮವೆಂಬುದಾಗಿ ಭಾವಿಸಿದರು. ಬಿಳುಪಾದ ಮೇಘದಿಂದ ಆಚ್ಛಾದಿತವಾದ ಚಂದ್ರಲೇಖೆಯು ಆಕಾಶದಲ್ಲಿ ಹೋಗುವಂತೆ–ಅತಿನವುರಾದ ಮೇಘವರ್ಣವುಳ್ಳ ಉತ್ತರೀಯವನ್ನು ಧರಿ ಸಿದ್ದ ಊರ್ವಶಿಯು ಅರ್ಜುನನ ಭವನಾಭಿಮುಖವಾಗಿ ಧಾವಿಸುತ್ತಿದ್ದಳು.

ವಾಯುವೇಗ-ಮನೋವೇಗಗಳಿಂದ ಧಾವಿಸುತ್ತಿದ್ದ, ಶುಚಿಸ್ಮಿತೆಯಾದ ಊರ್ವಶಿಯು ಕೆಲವು ನಿಮಿಷಗಳಲ್ಲಿಯೇ ಪಾಂಡುಪುತ್ರನಾದ ಅರ್ಜುನನ ಅರಮನೆಯನ್ನು ಸೇರಿದಳು. ಅರಮನೆಯ ಮಹಾದ್ವಾರದಲ್ಲಿ ನಿಂತಿದ್ದ ದ್ವಾರಪಾಲಕರೊಡನೆ ತಾನು ಬಂದಿರುವ ವಾರ್ತೆಯನ್ನು ಅರ್ಜುನನಿಗೆ ತಿಳಿಸುವಂತೆ ಹೇಳಿಕಳುಹಿಸಿದಳು. ಒಳಗೆ ಪ್ರವೇಶಿಸಲು ಅರ್ಜುನನ ಅನುಜ್ಞೆ ಯಾದನಂತರ ಊರ್ವಶಿಯು ಅತಿಸುಂದರವಾಗಿದ್ದ ಅರ್ಜುನನ ಅರಮನೆ ಯೊಳಗೆ ಪ್ರವೇಶಿಸಿದಳು.

ಕಾಣಲು ಬಂದವರಿಗೆ ಒಳಬರಲು ಅನುಮತಿಯನ್ನು ಕೊಡುವುದು ಸಂಪ್ರದಾಯ. ಆದರೂ ಅಪ್ಸರೆಯೊಬ್ಬಳು ಆ ಹೊತ್ತಿನಲ್ಲಿ ತನ್ನನ್ನರಸಿ ಬಂದಿರುವ ಕಾರಣವೇನಿರಬಹುದೆಂದು ಅರ್ಜುನನು ಕ್ಷಣಕಾಲ ತರ್ಕಿಸಿ ದನು. ಮನಸ್ಸಿನಲ್ಲಿ ಶಂಕೆಯುಂಟಾಯಿತು. ಆದರೂ ಯಾವುದನ್ನೂ ಬಹಿರಂಗಪಡಿಸದೇ ಸಂಪ್ರದಾಯಾನುಸಾರವಾಗಿ ಅರ್ಜುನನು ನಾಲ್ಕು ಹೆಜ್ಜೆಗಳನ್ನು ಮುಂದಿಟ್ಟು, ಊರ್ವಶಿಯನ್ನು ಆದರದಿಂದ ಸ್ವಾಗತಿಸಿದನು. ಆ ಹೊತ್ತಿನಲ್ಲಿ ಸರ್ವಾಲಂಕಾರಭೂಷಿತೆಯಾಗಿ ಬಂದಿದ್ದ ಊರ್ವಶಿಯನ್ನು ನೋಡಿದೊಡನೆಯೇ ಅರ್ಜುನನು ನಾಚಿ ತಲೆತಗ್ಗಿಸಿದನು. ಅಪ್ಸರೆಯ ಮುಖವನ್ನೂ ಅವಲೋಕಿಸದೇ ನತಶಿರನಾಗಿಯೇ ಇದ್ದು, ಊರ್ವಶಿಗೆ ನಮಸ್ಕರಿಸಿ, ಪೂಜ್ಯರಿಗೆ ಯೋಗ್ಯವೆನಿಸಿದ ಸತ್ಕಾರಗಳನ್ನು ಊರ್ವಶಿಗೂ ಮಾಡಿ, ಬದ್ಧಾಂಜಲಿಯಾಗಿ ನಿಂತು ಅವಳನ್ನು ಕುರಿತು ಹೇಳಿದನು :

"ಅಪ್ಸರಶ್ರೇಷ್ಠಳೇ! ನಿನಗೆ ನಾನು ಸಾಷ್ಟಾಂಗಪ್ರಣಾಮಮಾಡುತ್ತೇನೆ. ನಿನ್ನ ಆಜ್ಞೆಯೇನೆಂಬುದನ್ನು ಒಡನೆಯೇ ತಿಳಿಸು. ಸೇವಕನಂತೆ ನಿನ್ನ ಆಜ್ಞೆಯನ್ನು ನಿರ್ವಹಿಸುತ್ತೇನೆ."

ಊರ್ವಶಿಯು ಅಂತಹ ಸತ್ಕಾರವನ್ನು ಅಭಿಲಾಷಿಸಿ ಬಂದವಳಲ್ಲ. ಕಾಮರೂಪಿಯಾದ ಅರ್ಜುನನನ್ನು ಆರಾಧಿಸಲು ಬಂದವಳಲ್ಲವೇ? ಅತ್ಯು ತ್ಸಾಹದಿಂದ ಕುಣಿಯುತ್ತಿದ್ದ ಊರ್ವಶಿಯ ಮನಸ್ಸು ಅರ್ಜುನನ ಚರ್ಯೆ ಯಿಂದಾಗಿ ಬೇಸರಗೊಂಡಿತು. ಕ್ಷಣಕಾಲ ಊರ್ವಶಿಗೆ ಏನು ಹೇಳ ಬೇಕೆಂಬುದೇ ತಿಳಿಯಲಿಲ್ಲ. ಗತಪ್ರಜ್ಞಳಂತೆ ಕ್ಷಣಕಾಲ ಸ್ತಂಭೀಭೂತಳಾಗಿ

ನಿಂತಿದ್ದು, ಅನಂತರದಲ್ಲಿ ಅಸ್ಥಿರವಾಗಿದ್ದ ಮನಸ್ಸನ್ನು ಸ್ವಾಧೀನಕ್ಕೆ ತೆಗೆದುಕೊಂಡು ಹೇಳಿದಳು :

“ವೀರವರನೇ! ನಾನು ನಿನ್ನ ಸತ್ಕಾರವನ್ನು ಅಭಿಲಾಷಿಸಿ ಬಂದವಳಲ್ಲ. ನನ್ನ ರೂಪ-ಲಾವಣ್ಯಗಳ ಸಾಧನಗಳಿಂದ ನಿನ್ನನ್ನು ಸತ್ಕರಿಸಲು ಬಂದಿರುವೆನು. ಸ್ವೇಚ್ಛೆಯಿಂದ ಕಾಮುಕಿಯಾಗಿ ನಿನ್ನಲ್ಲಿಗೆ ಬಂದಿರುವೆನೆಂದೂ ತಿಳಿಯಬೇಡ. ನಿನ್ನಲ್ಲಿಗೆ ನಾನು ಬರಲು ಕಾರಣವನ್ನು ವಿವರವಾಗಿಯೇ ಹೇಳುವೆನು, ಕೇಳು. ಹಿಂದೊಂದು ದಿನ ನಿನ್ನನ್ನು ಪುರಸ್ಕರಿಸುವ ಸಲುವಾಗಿ ದೇವೇಂದ್ರನು ಮಹಾಸಭೆಯನ್ನು ಕರೆದಿದ್ದನಲ್ಲವೇ? ಆ ಮಹಾಸಭೆಗೆ ರುದ್ರರು, ಆದಿತ್ಯರು, ಅಶ್ವಿನೀದೇವತೆಗಳು, ಅಷ್ಟವಸುಗಳು, ಋಷಿಗಳು, ರಾಜರ್ಷಿಗಳು, ಸಿದ್ಧರು, ಚಾರಣರು, ಯಕ್ಷರು, ನಾಗರು–ಮುಂತಾದವರೆಲ್ಲರೂ ಆಗಮಿಸಿ, ಸೋಮ-ಸೂರ್ಯಾಗ್ನಿಗಳಂತೆ ತೇಜಸ್ಸಿನಿಂದ ಪ್ರಜ್ವಲಿಸುತ್ತಾ ತಮ-ತಮಗೆ ಸಿದ್ಧಪಡಿಸಿದ ಆಸನಗಳಲ್ಲಿ ಕುಳಿತಿದ್ದರು. ಗಂಧರ್ವರು ಇಂಪಾದ ಧ್ವನಿಯಿಂದ ದೇವಗಾನವನ್ನು ಮಾಡುತ್ತಿದ್ದರು. ವೀಣೆಗಳನ್ನು ನುಡಿಸುತ್ತಿದ್ದರು. ಇವೆಲ್ಲವೂ ನಿನ್ನ ಸ್ಮರಣೆಯಲ್ಲಿರಬಹುದಲ್ಲವೇ? ಅರ್ಜುನ! ಅಪ್ಸರೆಯರಲ್ಲಿ ಮುಖ್ಯರೆನಿಸಿದ ನಾವು ನಿನ್ನನ್ನು ಪುರಸ್ಕರಿಸುವ ಸಲುವಾಗಿ ಅಂದು ಗಂಧರ್ವರು ಹಾಡುತ್ತಿದ್ದ ಗಾಯನಕ್ಕೆ ಅನುಗುಣವಾಗಿ ನಾಟ್ಯವನ್ನೂ ಮಾಡಿದೆವು. ಆ ಸಮಯದಲ್ಲಿ ನೀನು ನನ್ನನ್ನು ಬಹಳ ಹೊತ್ತಿನವರೆಗೂ ಎವೆಯಿಕ್ಕದೇ ನೋಡುತ್ತಿದ್ದೆ. ಇದು ನಿಜವಲ್ಲವೇ?”

ಅರ್ಜುನನೇನೂ ಉತ್ತರಿಸಲಿಲ್ಲ. ಊರ್ವಶಿಯೇ ಮುಂದುವರಿದು ಹೇಳಿದಳು :

“ಅಂದಿನ ಸತ್ಕಾರಸಮಾರಂಭವು ಮುಗಿಯಿತು. ದೇವತೆಗಳೂ, ಋಷಿಗಳೂ, ಗಂಧರ್ವರೂ ನಿನ್ನ ತಂದೆಯಾದ ಇಂದ್ರನ ಅನುಮತಿಯನ್ನು ಪಡೆದು ತಮ್ಮ-ತಮ್ಮ ನಿವಾಸಗಳಿಗೆ ತೆರಳಿದರು. ನೀನು ನನ್ನನ್ನು ಎವೆಯಿಕ್ಕದೇ ನೋಡಿದುದನ್ನು ಇಂದ್ರನೂ ಗಮನಿಸಿದ್ದನು. ಅರ್ಜುನ! ನೀವಿಬ್ಬರೂ ಒಂದೇ ಆಸನದಲ್ಲಿ ಕುಳಿತಿದ್ದಿರಲ್ಲವೇ? ನಾನೂ ನಿನ್ನನ್ನು ಕಂಡು ವಿಮೋಹಿತಳಾದೆನು. ನಿನ್ನ ವಿದ್ಯಾಭ್ಯಾಸವೆಲ್ಲವೂ ಮುಗಿಯಿತು. ಅನಂತರದಲ್ಲಿ

ಇಂದ್ರನು ಚಿತ್ರಸೇನನನ್ನು ನನ್ನಲ್ಲಿಗೆ ಕಳುಹಿಸಿಕೊಟ್ಟನು. ನಾನು ನಿನ್ನಲ್ಲಿಗೆ ಹೋಗಿ, ಇಂದ್ರನಿಗೆ ಸಮನಾದ ಪರಾಕ್ರಮವುಳ್ಳ ನಿನ್ನನ್ನು ಕಾಮಕೇಳಿರಿಯಿಂದ ತಣಿಸಬೇಕೆಂಬುದೇ ಇಂದ್ರನ ನಿರ್ದೇಶವಾಗಿದ್ದಿತು. ಚಿತ್ರಸೇನನ ಅಭಿಪ್ರಾಯವೂ ಅದೇ ಆಗಿದ್ದಿತು. ನನ್ನ ಇಚ್ಛೆಯೂ ಅದಕ್ಕೆ ಅನುಗುಣ ವಾಗಿಯೇ ಇದ್ದಿತು. ಚಿತ್ರಸೇನನಿಂದಲೂ, ಅವನ ಮೂಲಕವಾಗಿ ಇಂದ್ರ ನಿಂದಲೂ ಪ್ರೇಷಿತಳಾದ ನಾನು ನಿನ್ನ ಸೇವೆಯನ್ನು ಮಾಡುವ ಸಲುವಾಗಿ ಇಲ್ಲಿಗೆ ಬಂದಿರುತ್ತೇನೆ. ನಿನ್ನ ಮನ್ಮಥಾಕಾರದ ರೂಪಕಾಂತಿಯನ್ನು ನೋಡುತ್ತಿರುವ ಮತ್ತು ನಿನ್ನ ಅನೇಕ ಸದ್ಗುಣಗಳನ್ನೂ, ಪರಾಕ್ರಮಗಳನ್ನೂ ಕೇಳಿರುವ ನಾನು ನಿನ್ನಲ್ಲಿ ಪೂರ್ಣವಾಗಿ ವ್ಯಾಮೋಹಗೊಂಡಿರುತ್ತೇನೆ. ನಿನ್ನೊಡನೆ ಸ್ವಲ್ಪಕಾಲವಾದರೂ ಕಾಮೋಪಭೋಗವನ್ನು ಅನುಭವಿಸ ಬೇಕೆಂಬುದೇ ನನ್ನ ಇಚ್ಛೆಯಾಗಿದೆ. ಬಹಳ ಹಿಂದಿನಿಂದಲೂ ಈ ಅಭಿಲಾಷೆಯು ನನಗಿರುವುದು."

(ಅರ್ಜುನನು ರೂಪಸಂಪನ್ನನು. ಮಹಾಪರಾಕ್ರಮಿಯು. ತ್ರಿಲೋಕ ಸುಂದರಿಯಾದ ಊರ್ವಶಿಯು ಒಲಿದು ಬಂದಿರುತ್ತಾಳೆ. ಮೇಲಾಗಿ ಇಂದ್ರನೇ ಊರ್ವಶಿಯನ್ನು ಕಳುಹಿಸಿದ್ದಾನೆ. ಊರ್ವಶಿಯೂ ತನ್ನ ಹೃದಯದ ಅಭಿಲಾಷೆಯನ್ನು ವ್ಯಕ್ತಪಡಿಸಿರುತ್ತಾಳೆ. ಅಂತಹ ಸಂದರ್ಭದಲ್ಲಿ ಮಾನವಸಾಮಾನ್ಯನು ಉಪಭೋಗಿಸದೇ ಇರಬಲ್ಲನೇ? ಆದರೆ ಅರ್ಜುನನು ಸಾಮಾನ್ಯಮಾನವನಲ್ಲ ; ಮಾನವಶ್ರೇಷ್ಠನು. ನರನೆಂಬ ಮಹರ್ಷಿಯಾಗಿದ್ದವನು ಅರ್ಜುನನಾಗಿ ಅವತರಿಸಿದ್ದಾನಲ್ಲವೇ?)

ಊರ್ವಶಿಯ ಮಾತುಗಳನ್ನು ಕೇಳಿ ಅರ್ಜುನನಿಗೆ ಬಹಳ ನಾಚಿಕೆ ಯಾಯಿತು. ಬಹಳ ಸಂಕಟವೂ ಆಯಿತು. 'ಶಾನ್ತಂ ಪಾಪಂ' 'ಶಾನ್ತಂ ಪಾಪಂ'–ಎಂದು ಹೇಳುತ್ತಾ ತನ್ನೆರಡು ಕಿವಿಗಳನ್ನೂ ಎರಡು ಕೈಗಳಿಂದ ಮುಚ್ಚಿಕೊಂಡನು. ಕ್ಷಣಕಾಲ ಸುಮ್ಮನಿದ್ದು ಅನಂತರದಲ್ಲಿ ಅಪ್ಸರೆಯನ್ನು ಕುರಿತು ಹೇಳಿದನು :

"ದೇವಿ! ಶುಭಾಂಗಿ! ನನ್ನ ಕಿವಿಗಳಿಗೆ ಧಿಕ್ಕಾರವಿರಲಿ. ಏಕೆಂದರೆ : ನೀನು ಹೇಳುತ್ತಿರುವ, ಕಿವಿಯಿಂದ ಕೇಳಲಾಗದ ಮಾತುಗಳನ್ನು ಈ ಕಿವಿ

ಯಿಂದ ಕೇಳುತ್ತಿರುವೆನಲ್ಲವೇ? ನಿಶ್ಚಯವಾಗಿ ಹೇಳುವುದಾದರೆ ನೀನು ನನಗೆ ಗುರುಪತ್ನಿಗೆ ಸಮಾನಳಾಗಿರುವೆ. ಮಹಾನುಭಾವಳಾದ ಕುಂತೀದೇವಿಗೆ ಅಥವಾ ಶಚೀದೇವಿಗೆ ನೀನು ಸಮಾನಳೆಂದು ನಾನು ಭಾವಿಸಿರುತ್ತೇನೆ. ಇದರಲ್ಲಿ ಯಾವ ಸಂಶಯವೂ ಇಲ್ಲ. ನೀನು ಹೇಳಿದಂತೆ, ಇಂದ್ರಸಭೆಯಲ್ಲಿ ನಾನು ಇಂದ್ರನೊಡನೆ ಕುಳಿತಿದ್ದಾಗ ನಿನ್ನನ್ನು ಎವೆಯಿಕ್ಕದೇ ನೋಡಿದುದು ನಿಶ್ಚಯ. ಅದನ್ನು ಇಲ್ಲವೆನ್ನುವುದಿಲ್ಲ. ನಿನ್ನನ್ನಂದು ನೋಡಿದ ಕಾರಣವೇನೆಂಬುದನ್ನು ಹೇಳುವೆನು : ಶುಚಿಸ್ಮಿತೆಯೇ! ನಿನ್ನನ್ನಂದು ಎವೆಯಿಕ್ಕದೇ ನೋಡಿದೆನು. ನೋಡಿ ಸಂತೋಷಪಟ್ಟೆನು. ನಮ್ಮ ಪುರು ವಂಶಕ್ಕೆ ಮಹಾಮಾತೆಯಾದ ಊರ್ವಶೀದೇವಿಯನ್ನು ನಾನಂದು ನೋಡಿ ಆನಂದಭರಿತನಾದೆನು. ನಮ್ಮ ವಂಶದ ಜನನಿಯು ನೀನೇ ಅಲ್ಲವೇ? ದೇವಿ! ನೀನು ನಮ್ಮ ವಂಶಕ್ಕೆ ಮಹಾಮಾತೆಯಾಗಿರುವೆ. ನನ್ನ ಪಿತೃ- ಪಿತಾಮಹರಿಗೂ ನೀನು ಪಿತಾಮಹಿಯಾಗಿರುವೆ. ಪರಮಪೂಜ್ಯಳಾಗಿರುವೆ. ಇದನ್ನೇ ನಾನು ಮನದಲ್ಲಿ ನೆನೆದು ಅಂದು ನಿನ್ನನ್ನು ನೋಡಿ ಆನಂದಿಸಿದೆನು. ಈ ಭಾವನೆಯಿಂದ ನೋಡಿದುದನ್ನು ಬೇರೆಯ ರೀತಿಯಲ್ಲಿ ಪರಿಗಣಿಸಬೇಕಾದ ಕಾರಣವಿಲ್ಲ ; ಕಲ್ಯಾಣಿ!"

ಅರ್ಜುನನ ಮಾತುಗಳನ್ನು ಕೇಳಿ ಊರ್ವಶಿಯು ಒಮ್ಮೆ ಗಹ-ಗಹಿಸಿ ನಕ್ಕು ಹೇಳಿದಳು :

"ಅರ್ಜುನ! ಅಪ್ಸರೆಯರು ಯಾರಿಂದಲೂ ವರಿಸಲ್ಪಡತಕ್ಕವರಲ್ಲ. ಕಾಲ-ಕರ್ಮಸಂಯೋಗದಿಂದಾಗಿ ಕೆಲವು ಸಮಯದಲ್ಲಿ ಮಾನವಶ್ರೇಷ್ಠ ರನ್ನೂ ಋಷಿ-ಮಹರ್ಷಿಗಳನ್ನೂ ಮೋಹಿಸಿ ರಮಿಸುತ್ತೇವೆ. ಅದರ ಫಲ ವಾಗಿ ನಮಗೆ ಪುತ್ರರೂ ಜನಿಸಬಹುದು. ಆದರೆ ನಾವು ದೀರ್ಘಕಾಲ ಅವರೊಡನೆ ಇರುವುದಿಲ್ಲ. ನಾವು ಕೃತಕೃತ್ಯರಾದೊಡನೆಯೇ ನಮಗೆ ಪೂರ್ವಸ್ಥಿತಿಯೇ ಉಂಟಾಗುವುದು. ಪೊರೆಯನ್ನು ಬಿಟ್ಟ ಹಾವಿನಂತೆ– ನಿರ್ಮಲರಾಗಿ ನಾವು ನಮ್ಮ ಲೋಕಕ್ಕೆ ತೆರಳುವೆವು. ಕಾಲ-ಕರ್ಮ ಸಂಯೋಗದಿಂದ ನಾನು ಪುರುವಂಶದ ಉತ್ಪತ್ತಿಗೆ ಕಾರಣಳಾದೆನೆಂಬ ಕಾರಣದಿಂದಾಗಿ ನೀನು ನನ್ನನ್ನು ತಾಯಿಯಂತೆ ಭಾವಿಸುವ ಕಾರಣವಿಲ್ಲ.

ಭಾವಿಸಲೂಬಾರದು. ಪುರುವಂಶೀಯರ ಮಕ್ಕಳು-ಮೊಮ್ಮಕ್ಕಳೆಲ್ಲರೂ ಅವಸಾನಾನಂತರದಲ್ಲಿ ತಾವು ಭೂಮಿಯಲ್ಲಿ ಮಾಡಿದ ಸತ್ಕರ್ಮಗಳ ಫಲ ವಾಗಿ ಸ್ವರ್ಗವನ್ನು ಸೇರಿ ನನ್ನೊಡನೆ ರಮಿಸುತ್ತಿರುತ್ತಾರೆ. ಅವರಿಗೆ ಯಾವ ವಿಧವಾದ ಪಾಪದ ಸೋಂಕೂ ಇರುವುದಿಲ್ಲ. ನಮ್ಮ ಧರ್ಮವೇ ಈ ರೀತಿಯಾಗಿರುತ್ತದೆ. ಈ ಕಾರಣಗಳಿಂದಾಗಿ ಸ್ವೇಚ್ಛೆಯಿಂದ ಬಂದಿರುವ ನನ್ನನ್ನು ತಿರಸ್ಕರಿಸುವುದು ನಿನಗೆ ಉಚಿತವಲ್ಲ. ನಾನು ಕಾಮಪೀಡಿತಳೂ ಮತ್ತು ನಿನ್ನ ವಿಷಯದಲ್ಲಿ ಹೆಚ್ಚಿನ ಅನುರಾಗವುಳ್ಳವಳೂ ಆಗಿರುತ್ತೇನೆ. ಭಕ್ತಳಾಗಿ ಬಂದಿರುವ ನನ್ನ ಸೇವೆಯನ್ನು ಸ್ವೀಕರಿಸುವವನಾಗು."

ಊರ್ವಶಿಯು ತಾರ್ಕಿಕವಾಗಿ ಸಮಂಜಸವಾದ ಉತ್ತರವನ್ನಿತ್ತರೂ ಅರ್ಜುನನ ದೃಢಮನಸ್ಸು ಬದಲಾಗಲಿಲ್ಲ. ತನ್ನ ಹಿಂದಿನ ನಿರ್ಧಾರವನ್ನೇ ದೃಢೀಕರಿಸಿ ಪುನಃ ಹೇಳಿದನು :

"ದೇವಿ! ಅನಿಂದಿತೇ! ನಾನು ಹೇಳಲಿರುವ ಈ ಸತ್ಯವಾಕ್ಯವನ್ನು ಕೇಳು. ಈ ನಾಲ್ಕು ದಿಕ್ಕುಗಳೂ ಮತ್ತು ಉಪದಿಕ್ಕುಗಳೂ ನಾನಾಡಲಿರುವ ಈ ಸತ್ಯವಚನವನ್ನು ಕೇಳಲಿ! ದೇವತೆಗಳೂ ನಾನಾಡಲಿರುವ ಈ ಸತ್ಯವಚನಕ್ಕೆ ಸಾಕ್ಷಿಗಳಾಗಿರಲಿ!

**ಯಥಾ ಕುನ್ತೀ ಚ ಮಾದ್ರೀ ಚ ಶಚೀ ಚೈವ ಮಮಾನಘೇ ।**
**ತಥಾ ಚ ವಂಶಜನನೀ ತ್ವಂ ಹಿ ಮೇಽದ್ಯ ಗರೀಯಸೀ ॥೪೬॥**

**ಗಚ್ಛ ಮೂರ್ಧ್ನಾ ಪ್ರಪನ್ನೋಽಸ್ಮಿ ಪಾದೌ ತೇ ವರವರ್ಣಿನಿ ।**
**ತ್ವಂ ಹಿ ಮೇ ಮಾತೃವತ್ಪೂಜ್ಯಾ ರಕ್ಷ್ಯೋಽಹಂ ಪುತ್ರವತ್ತ್ವಯಾ ॥೪೭॥**

ಅನಘಳೇ! ಕುಂತೀ, ಮಾದ್ರೀ ಮತ್ತು ಶಚೀದೇವಿಯರಂತೆ ನಮ್ಮ ವಂಶಜನನಿಯಾದ ನೀನಾದರೂ ನನಗೆ ಜನನಿಯಂತೆಯೇ ಪೂಜಾರ್ಹಳಾಗಿ ರುವೆ. ನಾನು ನಿನಗೆ ತಲೆಬಾಗಿ ಸಾಷ್ಟಾಂಗಪ್ರಣಾಮಮಾಡುತ್ತೇನೆ. ನನ್ನ ತಾಯಿಯಾದ ಕುಂತಿಯು ಪೂಜಾರ್ಹಳಾಗಿರುವಂತೆ ನೀನೂ ಪೂಜಾರ್ಹ ಳಾಗಿರುವೆ. ನನ್ನನ್ನು ನಿನ್ನ ಮಗನೆಂದು ಭಾವಿಸಿ ರಕ್ಷಿಸುವುದು ನಿನಗೆ ಸೂಕ್ತ ವಾಗಿದೆ. ಮಗನೆಂದು ಭಾವಿಸಿ ನನ್ನನ್ನು ಹರಸುವ ಕೃಪೆಮಾಡು, ತಾಯೇ!"

(ಕಾಮೋದ್ದೀಪಿತರಾದ ಸ್ತ್ರೀಯರಿಗೆ ತಾವು ಕಾಮಿಸಿದ ಪುರುಷರು

ಹೀಗೆ ಮಾತನಾಡಿದರೆ ಎಷ್ಟು ಸಂಕಟವಾಗುವುದೆಂದು ವರ್ಣಿಸಲೇ ಸಾಧ್ಯವಿಲ್ಲ. ಕಾಮಕ್ಕೆ ತಡೆಯುಂಟಾದೊಡನೆಯೇ ಅದು ಕೋಪವಾಗಿ ಪರಿವರ್ತಿತವಾಗುತ್ತದೆ. ಆ ಸಮಯದಲ್ಲಿ ಅವರಿಗೆ ಬೋಧಿಸುವ ನ್ಯಾಯ-ನೀತಿ-ವೇದಾಂತಗಳೊಂದೂ ಪ್ರಯೋಜನಕಾರಿಯಾಗುವುದಿಲ್ಲ. ನಾರಿಯು ಒಡನೆಯೇ ಮಾರಿಯಾಗುತ್ತಾಳೆ.)



ಮೇಲೆ ಹೇಳಿದ ಪಾರ್ಥನ ಮಾತುಗಳನ್ನು ಕೇಳಿದೊಡನೆಯೇ ಊರ್ವಶಿಯು ಕುಪಿತಳಾದಳು. ಕಾರ್ಯಾಕಾರ್ಯವಿವೇಚನೆಯೇ ಹೊರಟು ಹೋಯಿತು. ಕಣ್ಣುಗಳು ಕೆಂಪಾದುವು. ತುಟಿಗಳು ಅದುರತೊಡಗಿದುವು.

ಹುಬ್ಬುಗಳನ್ನು ಗಂಟಿಕ್ಕಿ ಕಟ-ಕಟನೆ ಹಲ್ಲುಗಳನ್ನು ಕಡಿಯುತ್ತಾ ಅರ್ಜುನನನ್ನು ಕುರಿತು ಹೇಳಿದಳು :

"ಅರ್ಜುನ! ನೀನಿಂದು ನಿನ್ನ ಭವನಕ್ಕೆ ಬಂದಿರುವ ಕಾಮಿನಿಯನ್ನು ತಿರಸ್ಕರಿಸಿರುವೆಯಲ್ಲವೇ? ನಿನ್ನ ತಂದೆಯ ಮತ್ತು ಚಿತ್ರಸೇನನ ಮಾತನ್ನು ಪುರಸ್ಕರಿಸಿ ಬಂದವಳು ನಾನು. ಕಾಮಪೀಡಿತಳಾಗಿ ಸ್ವೇಚ್ಛೆಯಿಂದಲೂ ನಿನ್ನಲ್ಲಿಗೆ ಬಂದೆನು. ಇಂತಹ ನನ್ನನ್ನು ನೀನು ಇಲ್ಲ-ಸಲ್ಲದ ವ್ಯಾಜಾಂತರದಿಂದ ತಿರಸ್ಕರಿಸಿರುವೆಯಲ್ಲವೇ? ಇದರ ಫಲವನ್ನು ನೀನು ಅನುಭವಿಸಿಯೇ ತೀರಬೇಕು.

**ತಸ್ಮಾತ್ತ್ವಂ ನರ್ತಕಃ ಪಾರ್ಥ ಸ್ತ್ರೀಮಧ್ಯೇ ಮಾನವರ್ಜಿತಃ ।**
**ಅಪುಮಾನಿತಿ ವಿಖ್ಯಾತಃ ಷಣ್ಡವದ್ವಿಚರಿಷ್ಯಸಿ ॥೫೦॥**

ನೀನು ಮಾನವರ್ಜಿತನಾಗಿ, ಹೆಂಗಸರ ಮಧ್ಯದಲ್ಲಿ ನಟವೃತ್ತಿಯಿಂದ ಕಾಲಕಳೆಯುವಂತಾಗಲಿ! ನೀನು ನಪುಂಸಕನೆಂದು ವಿಖ್ಯಾತನಾಗಿ ಷಂಡ ನಂತೆಯೇ ಕಾಲಕಳೆಯುವೆ!"–ಹೀಗೆ ಶಾಪವಿತ್ತನಂತರವೂ ಊರ್ವಶಿಯ ಕೋಪವು ಶಾಂತವಾಗಲಿಲ್ಲ. ತುಟಿಗಳು ಯಥಾಪೂರ್ವವಾಗಿಯೇ ಕೋಪಾ ವೇಶದಿಂದ ಅದುರುತ್ತಿದ್ದುವು. ಸುದೀರ್ಘವಾಗಿ ನಿಟ್ಟುಸಿರುಬಿಡುತ್ತಾ ಆ ದೇವಿಯು ತನ್ನ ಭವನಾಭಿಮುಖವಾಗಿ ಹೊರಟುಹೋದಳು.

ಊರ್ವಶಿಯಿತ್ತ ಶಾಪವು ಸಾಧಾರಣವಾದುದಲ್ಲ. ಅತಿಜುಗುಪ್ಸಿತ ವಾದುದು. ಮಹಾಪರಾಕ್ರಮಿಯಾದ ಅರ್ಜುನನನ್ನು ನಪುಂಸಕನಾಗು ವಂತೆ ಶಪಿಸಿರುವಳು. ಅಪ್ಸರೆಯ ಶಾಪವು ಫಲಿತವಾಗುವುದರಲ್ಲಿ ಅರ್ಜುನನಿಗೂ ಸಂಶಯವಿರಲಿಲ್ಲ. ಭ್ರಾಂತನಾದ ಅರ್ಜುನನು ಒಡನೆಯೇ ತನ್ನ ಸಖನಾದ ಚಿತ್ರಸೇನನ ಬಳಿಗೆ ಧಾವಿಸಿದನು. ಅವನೊಡನೆ ನಡೆದ ಸಮಾಚಾರಗಳೆಲ್ಲವನ್ನೂ ವಿಶದವಾಗಿ ಹೇಳಿ ಊರ್ವಶಿಯಿತ್ತ ಶಾಪದ ವಿಷಯವನ್ನೂ ಒತ್ತಿಯೊತ್ತಿ ಹೇಳಿದನು. 'ತಾನುದ್ದೇಶಿಸಿದುದು ಒಂದಾದರೆ ಪರಿಣಾಮವು ಬೇರೆಯಾಯಿತಲ್ಲಾ!'–ಎಂದು ಯೋಚಿಸುತ್ತಾ ಚಿತ್ರಸೇನನು ಖಿನ್ನಮನಸ್ಕನಾಗಿ, ಇಂದ್ರನ ಬಳಿಗೆ ಒಡನೆಯೇ ಹೋಗಿ ಇಂದ್ರನಿಗೆ ಎಲ್ಲ ವಿಷಯಗಳನ್ನೂ ತಿಳಿಸಿದನು. ಇಂದ್ರನಿಗೆ ಅದರಿಂದ ಯಾವ

ಖೇದವೂ ಉಂಟಾಗಲಿಲ್ಲ. ಚಿತ್ರಸೇನನಿಗೆ ಹೋಗಲು ಅನುಮತಿಯನ್ನಿತ್ತು ತನ್ನ ಮಗನಾದ ಅರ್ಜುನನನ್ನು ಏಕಾಂತದಲ್ಲಿ ಸಂಧಿಸಿ ಸಂತೈಸುತ್ತಾ ನಸುನಗುತ್ತಾ ಹೇಳಿದನು :

**ಸುಪುತ್ರಾದ್ಯ ಪೃಥಾ ತಾತ ತ್ವಯಾ ಪುತ್ರೇಣ ಸತ್ತಮ ।**
**ಋಷಯೋಽಪಿ ಹಿ ಧೈರ್ಯೇಣ ಜಿತಾ ವೈ ತೇ ಮಹಾಭುಜ ॥೫೬॥**

**ಯತ್ತು ದತ್ತವತೀ ಶಾಪಮುರ್ವಶೀ ತವ ಮಾನದ ।**
**ಸ ಚಾಪಿ ತೇಽರ್ಥಕೃತ್ತಾತ ಸಾಧಕಶ್ಚ ಭವಿಷ್ಯತಿ ॥೫೭॥**

**ಅಜ್ಞಾತವಾಸೋ ವಸ್ತವ್ಯೋ ಭವದ್ಭಿರ್ಭೂತಲೇಽನಘ ।**
**ವರ್ಷೇ ತ್ರಯೋದಶೇ ವೀರ ತತ್ರ ತ್ವಂ ಕ್ಷಪಯಿಷ್ಯಸಿ ॥೫೮॥**

**ತೇನ ನರ್ತನವೇಷೇಣ ಅಪುಂಸ್ತ್ವೇನ ತಥೈವ ಚ ।**
**ವರ್ಷಮೇಕಂ ವಿಹೃತ್ಯೈವ ತತಃ ಪುಂಸ್ತ್ವಮವಾಪ್ಸ್ಯಸಿ ॥೫೯॥**

"ಪುರುಷಸತ್ತಮನೇ! ಇಂದು ನಿಶ್ಚಯವಾಗಿಯೂ ಕುಂತಿಯು ಸುಪುತ್ರವತಿಯಾದಳು. ಜಿತೇಂದ್ರಿಯತ್ವದಲ್ಲಿಯೂ, ಕ್ಷಮಾಗುಣದಲ್ಲಿಯೂ ನೀನು ಋಷಿ-ಮಹರ್ಷಿಗಳನ್ನೂ ಜಯಿಸಿರುವೆ. ಊರ್ವಶಿಯು ನಿನಗಿತ್ತ ಶಾಪಕ್ಕಾಗಿ ವ್ಯಥೆಪಡಬೇಕಾಗಿಲ್ಲ. ಅದು ನಿನ್ನ ಒಳ್ಳೆಯದಕ್ಕಾಗಿಯೇ ಕೊಡಲ್ಪಟ್ಟಿದೆಯೆಂದು ಭಾವಿಸಿ ಸಂತುಷ್ಟನಾಗು. ಧೈರ್ಯಗೆಡಬೇಡ. ನೀನು ಸಹೋದರರೊಡನೆ ಹನ್ನೆರಡು ವರ್ಷಗಳ ಕಾಲ ವನವಾಸಮಾಡಿದನಂತರ ಒಂದು ವರ್ಷಕಾಲ ಅಜ್ಞಾತವಾಸವನ್ನು ಮಾಡಬೇಕಾಗಿದೆಯಲ್ಲವೇ? ಅಜ್ಞಾತವಾಸವನ್ನು ಮಾಡುವ ಆ ಒಂದು ವರ್ಷಕಾಲ ನೀನು ಊರ್ವಶಿಯ ಶಾಪವನ್ನು ಅನುಭವಿಸಬಹುದಾಗಿದೆ. ಆ ಸಮಯದಲ್ಲಿ ನಿನ್ನ ನಿಜಸ್ವರೂಪವು ಯಾರಿಗೂ ತಿಳಿಯದಂತೆ ನಿನಗೆ ನಪುಂಸಕತ್ವವುಂಟಾಗುವುದು. ಸ್ತ್ರೀಯರ ಜೊತೆಯಲ್ಲಿದ್ದು ರಾಜಕುಮಾರಿಯರಿಗೆ ನರ್ತನವಿದ್ಯೆಯನ್ನು ಕಲಿಸುತ್ತಾ ಯಾರಿಂದಲೂ ಗುರುತಿಸಲ್ಪಡದೇ ಆ ಒಂದು ವರ್ಷವನ್ನು ಕಳೆಯಬಹುದು. ಒಂದು ವರ್ಷವು ಕಳೆದೊಡನೆಯೇ ಶಾಪವಿಮೋಚನೆಯಾಗಿ ನಿನಗೆ ಪುನಃ ಪುರುಷತ್ವವು ಪ್ರಾಪ್ತವಾಗುವುದು."

ಇಂದ್ರನ ಮಾತುಗಳನ್ನು ಕೇಳಿದೊಡನೆಯೇ ಅರ್ಜುನನಿಗೆ ಅಮಿತಾ ನಂದವಾಯಿತು. ಕೆಲವು ದಿನಗಳನಂತರ ಅವನಿಗೆ ಶಾಪದ ಸ್ಮರಣೆಯೇ ಉಳಿಯಲಿಲ್ಲ. ಮಹಾತ್ಮನಾದ ಚಿತ್ರಸೇನನೊಡನೆ ಉಳಿದ ದಿನಗಳನ್ನು ಅರ್ಜುನನು ಸುಖವಾಗಿ ಕಳೆದನು.

**ಇದಂ ಯಃ ಶೃಣುಯಾದ್ವೃತ್ತಂ ನಿತ್ಯಂ ಪಾಣ್ಡುಸುತಸ್ಯ ವೈ ।**
**ನ ತಸ್ಯ ಕಾಮಃ ಕಾಮೇಷು ಪಾಪಕೇಷು ಪ್ರವರ್ತತೇ ॥೬೨॥**

**ಇದಮಮರವರಾತ್ಮಜಸ್ಯ ಘೋರಂ**
**ಶುಚಿ ಚರಿತಂ ವಿನಿಶಮ್ಯ ಫಾಲ್ಗುನಸ್ಯ ।**
**ವ್ಯಪಗತಮದದಮ್ಭರಾಗದೋಷಾ-**
**ಸ್ತ್ರಿದಿವಗತಾ ವಿರಮನ್ತಿ ಮಾನವೇನ್ದ್ರಾಃ ॥೬೩॥**

ದುಷ್ಕರವೂ ಮತ್ತು ಮಂಗಳಕರವೂ ಆದ ಅರ್ಜುನನ ಸುಚರಿತವನ್ನು ಅನುದಿನವೂ ಯಾರು ಕೇಳುವರೋ ಅಥವಾ ಯಾರು ಹೇಳುವರೋ– ಅವರಿಗೆ ಪಾಪಭೂಯಿಷ್ಠವಾದ ಕಾಮಲಾಲಸೆಯುಂಟಾಗುವುದಿಲ್ಲ. ಇಂದ್ರನ ಮಗನಾದ ಪೂತಾತ್ಮನಾದ ಫಾಲ್ಗುನನ ಶುಭಚರಿತವನ್ನು ಕೇಳುವ ಮನುಜ ಶ್ರೇಷ್ಠರೆಲ್ಲರೂ ಮದ-ದಂಭ-ರಾಗದೋಷಗಳಿಂದ ವಿವರ್ಜಿತರಾಗಿ ಅವಸಾನಾನಂತರದಲ್ಲಿ ಸ್ವರ್ಗಸುಖವನ್ನೇ ಅನುಭವಿಸುವರು.

೪೬ನೆಯ ಅಧ್ಯಾಯವು ಮುಗಿಯಿತು.

೪೭ನೆಯ ಅಧ್ಯಾಯ ಇಂದ್ರಲೋಕಾಭಿಗಮನಪರ್ವ (ಮುಂದುವರಿದಿದೆ.)

## ಲೋಮಶರು ಇಂದ್ರನನ್ನೂ, ಅರ್ಜುನನನ್ನೂ ಸ್ವರ್ಗದಲ್ಲಿ ಸಂದರ್ಶಿಸಿದುದು : ಇಂದ್ರನ ಸಂದೇಶವನ್ನು ಹೊತ್ತು ಕಾಮ್ಯಕವನಕ್ಕೆ ಲೋಮಶರ ಆಗಮನ

ಜನಮೇಜಯ! ಹೀಗಿರುವಾಗ ಒಂದು ದಿನ ತ್ರಿಲೋಕಗಳಲ್ಲಿಯೂ ಸ್ವೇಚ್ಛೆಯಿಂದ ಸಂಚರಿಸುತ್ತಿದ್ದ ಮಹರ್ಷಿಗಳಾದ ಲೋಮಶರು

ಮಹೇಂದ್ರನ ದರ್ಶನಕ್ಕಾಗಿ ಇಂದ್ರನ ಅರಮನೆಗೆ ತೆರಳಿ ದಿವ್ಯಸಿಂಹಾಸನಾಧಿ ರೂಢನಾಗಿದ್ದ ಮಹೇಂದ್ರನನ್ನು ಗೌರವಿಸಿ ನಮಸ್ಕರಿಸಿದರು. ಆಗ ಇಂದ್ರನ ಸಿಂಹಾಸನದಲ್ಲಿ ಇಂದ್ರನೊಬ್ಬನೇ ಕುಳಿತಿರಲಿಲ್ಲ. ಪಾರ್ಥನೂ ಇಂದ್ರನ ಅರ್ಧಾಸನದಲ್ಲಿ ಕುಳಿತಿದ್ದನು. ಅದನ್ನು ಕಂಡು ಲೋಮಶರು ಆಶ್ಚರ್ಯಭರಿತರಾದರು. ಇಂದ್ರನ ಇಚ್ಛೆಯಂತೆ ಸಭಾಮಂದಿರದಲ್ಲಿದ್ದ ಋಷಿಗಳು ಒಡನೆಯೇ ಲೋಮಶರಿಗೆ ಅರ್ಘ್ಯ-ಪಾದ್ಯಾದಿಗಳನ್ನಿತ್ತು ಸತ್ಕರಿಸಿ ದಿವ್ಯಾಸನದಲ್ಲಿ ಕುಳ್ಳಿರಿಸಿದರು. ಲೋಮಶರಿಗೆ ಅರ್ಜುನನು ಅರ್ಧಾಸನದಲ್ಲಿ ಕುಳಿತಿರುವುದು ಒಂದು ಸಮಸ್ಯೆಯಾಗಿಬಿಟ್ಟಿತು. ಅವರು ಹೀಗೆಂದು ತರ್ಕಿಸತೊಡಗಿದರು :

"ಇಂದ್ರನ ಸಿಂಹಾಸನವು ದೇವಾಧಿದೇವತೆಗಳಿಂದಲೂ ಪೂಜಿಸಲ್ಪಡ ತಕ್ಕುದಾಗಿದೆ. ಇಂತಹ ದಿವ್ಯಾಸನದಲ್ಲಿ ಕ್ಷತ್ರಿಯನೊಬ್ಬನು ಕುಳಿತುಕೊಳ್ಳಲು ಹೇಗೆ ಸಾಧ್ಯವಾಯಿತು? ಇಂದ್ರನ ಅರ್ಧಾಸನವನ್ನು ಪಡೆಯಲು ಈ ಅರ್ಜುನನು ಮಾಡಿರುವ ತಪಸ್ಸು ಎಷ್ಟಿರಬಹುದು? ಇವನು ತನ್ನ ತಪಸ್ಸಿನಿಂದ ಎಷ್ಟೊಂದು ಲೋಕಗಳನ್ನು ಜಯಿಸಿ ಈ ದೇವವಂದ್ಯವಾದ ದಿವ್ಯಾಸನವನ್ನು ಪಡೆದಿದ್ದಾನೆ?"

ಇತ್ಯಾದಿ ಅನೇಕ ಸಮಸ್ಯೆಗಳು ಲೋಮಶರ ಮನಸ್ಸಿನಲ್ಲಿ ಅಂಕುರಿಸಿ ದುವು. ಕಠಿನವಾದ ತಪಶ್ಚರಣೆಯಿಂದ ಅನೇಕ ದಿವ್ಯಲೋಕಗಳನ್ನು ಪಡೆಯ ಬಹುದೆಂಬುದನ್ನು ಲೋಮಶರು ತಿಳಿದವರಾಗಿದ್ದರೂ–ಯಾವ ತಪಶ್ಚರಣೆ ಯಿಂದ ಇಂದ್ರನ ಅರ್ಧಾಸನವನ್ನು ಪಡೆಯಲು ಸಾಧ್ಯವಾಗುವುದೆಂಬ ವಿಷಯವು ಲೋಮಶರಿಗೆ ವೇದ್ಯವಾಗಲಿಲ್ಲ. ಅದನ್ನೇ ಮನಸ್ಸಿನಲ್ಲಿ ಚಿಂತಿಸುತ್ತಾ ಮಹರ್ಷಿಗಳು ಕ್ಷಣಕಾಲ ಮೌನದಿಂದ ಕುಳಿತಿದ್ದರು. ದೇವದೇವನಾದ ಮಹೇಂದ್ರನಿಗೆ ಲೋಮಶರ ಮಾನಸಿಕಚಿಂತೆ ಯೇನೆಂಬುದು ತಿಳಿಯಿತು. ಅವರು ಚಿಂತಿಸುತ್ತಿದ್ದುದಕ್ಕಾಗಿ ಇಂದ್ರನು ನಸುನಕ್ಕು ಮಹರ್ಷಿಗಳೊಡನೆ ಹೇಳಿದನು :

"ಮಹರ್ಷಿಗಳೇ! ತಮ್ಮ ಮನಸ್ಸಿನಲ್ಲಿ ಅಂಕುರಿಸಿರುವ ವಿಷಯ ವೇನೆಂಬುದು ನನಗೆ ವೇದ್ಯವಾಗಿದೆ. ಅರ್ಜುನನು ನನ್ನ ಅರ್ಧಾಸನದಲ್ಲಿ ಹೇಗೆ ಕುಳಿತನೆಂಬುದು ತಮ್ಮ ಜಿಜ್ಞಾಸೆಯಾಗಿದೆಯಲ್ಲವೇ? ಇದಕ್ಕೆ ಕಾರಣವನ್ನು

ವಿವರಿಸಿ ಹೇಳುವೆನು, ಕೇಳಿರಿ : ಈ ಅರ್ಜುನನು ಮಾನವನಾಗಿ ಜನ್ಮತಾಳಿದ್ದರೂ ಮರ್ತ್ಯನೆಂದು ಭಾವಿಸಬೇಡಿರಿ. ಭೂಲೋಕದಲ್ಲಿಯೂ ನನ್ನ ಪುತ್ರನಾಗಿಯೇ ಜನ್ಮತಾಳಿದ್ದಾನೆ. ಕುಂತೀ ಮತ್ತು ನನ್ನ ಸಮಾಗಮದಿಂದ ಹುಟ್ಟಿದವನೇ ಈ ಪಾರ್ಥನು. ಪುತ್ರನಾದವನು ತಂದೆಯ ಅರ್ಧಾಸನದಲ್ಲಿ ಕುಳಿತುಕೊಳ್ಳಲು ಆತಂಕವೇನಿದೆ? ಇವನು ನನ್ನಲ್ಲಿಗೆ ಮಹಾಸ್ತ್ರಗಳ ಉಪದೇಶವನ್ನು ಪಡೆಯಲು ಬಂದಿರುತ್ತಾನೆ. ಮೇಲಾಗಿ, ಇವನು ಪೂರ್ವ ಜನ್ಮದಲ್ಲಿ ಯಾರಾಗಿದ್ದನೆಂಬ ಅರಿವು ತಮಗಿನ್ನೂ ಉಂಟಾಗಲಿಲ್ಲವೇ? ಇವನು ಹಿಂದಿನ ಜನ್ಮದಲ್ಲಿ ಮಹರ್ಷಿಯಾಗಿದ್ದನು.

**ನರನಾರಾಯಣೌ ಯೌ ತೌ ಪುರಾಣಾವೃಷಿಸತ್ತಮೌ ।**
**ತಾವಿಮಾವನುಜಾನೀಹಿ ಹೃಷೀಕೇಶಧನಂಜಯೌ ॥೧೦॥**

ನರ ಮತ್ತು ನಾರಾಯಣರೆಂಬ ಇಬ್ಬರು ಪುರಾತನಮಹರ್ಷಿಗಳ ಹೆಸರುಗಳನ್ನು ಕೇಳಿರುವಿರಲ್ಲವೇ? ಇಂದು ಭೂಮಿಯಲ್ಲಿ ಜನ್ಮತಾಳಿರುವ ಧನಂಜಯ-ಹೃಷೀಕೇಶರೇ ಆ ನರ-ನಾರಾಯಣರೆಂಬುದಾಗಿ ತಿಳಿಯಿರಿ. ಆ ನರ-ನಾರಾಯಣರೇ ಭೂಮಿಯಲ್ಲಿ ದೇವಕಾರ್ಯದ ಪೂರಣಕ್ಕಾಗಿ ಅವತರಿಸಿದ್ದಾರೆ.

**ಯನ್ನ ಶಕ್ಯಂ ಸುರೈರ್ದ್ರಷ್ಟುಮೃಷಿಭಿರ್ವಾ ಮಹಾತ್ಮಭಿಃ ।**
**ತದಾಶ್ರಮಪದಂ ಪುಣ್ಯಂ ಬದರೀನಾಮ ವಿಶ್ರುತಮ್ ॥೧೨॥**

**ಸ ನಿವಾಸೋಽಭವದ್ವಿಪ್ರ ವಿಷ್ಣೋರ್ಜಿಷ್ಣೋಸ್ತಥೈವ ಚ ।**
**ಯತಃ ಪ್ರವವೃತೇ ಗಙ್ಗಾ ಸಿದ್ಧಚಾರಣಸೇವಿತಾ ॥೧೩॥**

ಯಾವ ಪವಿತ್ರಾಶ್ರಮವನ್ನು ದೇವತೆಗಳಾಗಲೀ, ಋಷಿಗಳಾಗಲೀ ಸಂದರ್ಶಿಸಲು ಕೂಡ ಸಮರ್ಥರಲ್ಲವೋ, ಯಾವ ಪುಣ್ಯತಮವಾದ ಆಶ್ರಮವು ಗಂಗಾನದಿಯ ಮೂಲಸ್ಥಾನದಲ್ಲಿದೆಯೋ–ಅಂತಹ ವಿಖ್ಯಾತವಾದ ಬದರಿಕಾಶ್ರಮವೇ ನರ-ನಾರಾಯಣರ ಪುಣ್ಯತಮವಾದ ಆಶ್ರಮಭೂಮಿಯಾಗಿರುತ್ತದೆ. ಆ ಇಬ್ಬರು ಮಹರ್ಷಿಗಳೂ ನನ್ನ ಪ್ರಾರ್ಥನೆಯಂತೆ ಭೂಮಿಯಲ್ಲಿ ಅವತರಿಸಿರುತ್ತಾರೆ. ಭೂಮಿಯ ಭಾರವನ್ನು ಕಡಿಮೆಮಾಡುವುದು ಅವರ ಇಂದಿನ ಕರ್ತವ್ಯವಾಗಿರುತ್ತದೆ. ನಿವಾತಕವಚರೆಂಬ ರಾಕ್ಷಸಗಣಗಳ

ಉಪಟಳವು ನಮಗೆ ಹೆಚ್ಚಾಗುತ್ತಿದೆ. ಅವರಿಗೆ ಲಭಿಸಿರುವ ವರದಿಂದಾಗಿ ಅವರು ನಮ್ಮನ್ನು ಲೆಕ್ಕಿಸದೇ ಸದಾ ಉಪಟಳಕೊಡುತ್ತಲೇ ಇರುತ್ತಾರೆ ಮತ್ತು ದೇವತೆಗಳೆಲ್ಲರನ್ನೂ ನಿರ್ಮೂಲಮಾಡುವ ಸಂಕಲ್ಪವನ್ನು ಮಾಡಿರುತ್ತಾರೆ. ಆ ದುಷ್ಟರಾಕ್ಷಸರು ಪಾತಾಳಲೋಕದಲ್ಲಿ ಸೇರಿಕೊಂಡಿರುತ್ತಾರೆ. ದೇವತೆಗಳೆಲ್ಲರೂ ಸೇರಿ ಯುದ್ಧಮಾಡಿದರೂ ಅವರನ್ನು ಧ್ವಂಸಮಾಡುವ ಸಾಧ್ಯತೆಯಿಲ್ಲ. ಅಂತಹ ಬಲಿಷ್ಠರಾದ ರಾಕ್ಷಸರನ್ನು ಸಂಹರಿಸಲು ಕೇವಲ ಇಬ್ಬರು ಮಾತ್ರ ಸಮರ್ಥರಾಗಿದ್ದಾರೆ. ಕಪಿಲನಾಗಿ ಭೂಮಿಯಲ್ಲಿ ಅವತರಿಸಿ ಭೂಮಿಯನ್ನು ಖನನಮಾಡುತ್ತಿದ್ದ ಸಗರನ ಅರುವತ್ತು ಸಾವಿರ ಮಕ್ಕಳನ್ನೂ ವೀಕ್ಷಣಮಾತ್ರದಿಂದಲೇ ಭಸ್ಮೀಭೂತರನ್ನಾಗಿ ಮಾಡಿದ ಮಧುಸೂದನ ಮತ್ತು ಪಾರ್ಥ–ಈ ಇಬ್ಬರೇ ನಿವಾತಕವಚರನ್ನು ಸಂಹರಿಸಬಲ್ಲರು. ಇವರಿಬ್ಬರೂ ಪ್ರತ್ಯೇಕವಾಗಿಯೇ ಆಗಲೀ, ಕೂಡಿಯೇ ಆಗಲೀ–ದೇವತೆಗಳ ಕಾರ್ಯವನ್ನು ನಿರ್ವಹಿಸಲು ಸಮರ್ಥರಾಗಿರುತ್ತಾರೆ. ಇದರಲ್ಲಾವ ಸಂಶಯವೂ ಇಲ್ಲ. ದೊಡ್ಡ ಮಡುವಿನಲ್ಲಿರುವ ಸರ್ಪಗಳೆಲ್ಲವನ್ನೂ ಅನಾಯಾಸವಾಗಿ ಕೊಲ್ಲಲು ಸಾಧ್ಯವಾಗುವಂತೆ–ನಿವಾತಕವಚರನ್ನು ಅವರ ಪರಿವಾರದೊಡನೆ ಕೇವಲ ವೀಕ್ಷಣಮಾತ್ರದಿಂದಲೇ ಶ್ರೀಕೃಷ್ಣನು (ಕಪಿಲನು) ಸಂಹರಿಸಬಲ್ಲನು. ಆದರೆ ಕೇವಲ ಕ್ಷುಲ್ಲಕರಾದ ನಿವಾತಕವಚರ ಸಂಹಾರಕ್ಕಾಗಿ ಮಹಾಮಹಿಮನನ್ನು ಜಾಗ್ರತಗೊಳಿಸುವುದು ಸೂಕ್ತವಲ್ಲ.

**ಕಿಂ ತು ನಾಲ್ಪೇನ ಕಾರ್ಯೇಣ ಪ್ರಚೋದ್ಯೋ ಮಧುಸೂದನಃ ।**
**ತೇಜಸಃ ಸುಮಹಾರಾಶಿಃ ಪ್ರಬುದ್ಧಃ ಪ್ರದಹೇಜ್ಜಗತ್ ॥೨೨॥**

ಮಹಾಮಹಿಮನಾದ ಮಧುಸೂದನನನ್ನು ಈ ಸಣ್ಣ ಕಾರ್ಯಕ್ಕೆ ಪ್ರಚೋದಿಸಿದ್ದೇ ಆದರೆ ಅವನ ಮಹಾತೇಜಸ್ಸು ಈ ಪ್ರಪಂಚವನ್ನೇ ದಹಿಸಿಬಿಡಬಹುದು. ಈ ಅರ್ಜುನನೇ ಅವರೆಲ್ಲರನ್ನೂ ಸಂಹರಿಸಲು ಸಮರ್ಥನಾಗಿರುವನು. ಅವರನ್ನು ಸಂಹರಿಸಿದನಂತರ ಇವನು ಭೂಲೋಕಕ್ಕೆ ಪ್ರಯಾಣಮಾಡುತ್ತಾನೆ. ಮಹರ್ಷಿಗಳೇ! ಈಗಲಾದರೂ ತಮಗೆ 'ಅರ್ಜುನನಾರು? ಇವನ ಸಾಮರ್ಥ್ಯ ಮತ್ತು ತಪಸ್ಸುಗಳೇನು'–ಎಂಬುದರ ಅರಿವಾಯಿತಲ್ಲವೇ? ದಯೆಯಿಟ್ಟು ತಾವು ನನಗಾಗಿ ಒಂದು ಕಾರ್ಯ

ವನ್ನು ಮಾಡಬೇಕಾಗಿದೆ. ನೀವೀಗಲೇ ಭೂಲೋಕಕ್ಕೆ ತೆರಳಿರಿ. ಕಾಮ್ಯಕ ವನದಲ್ಲಿ ಅರ್ಜುನನ ಸಹೋದರರು ವಾಸಿಸುತ್ತಿದ್ದಾರೆ. ಅಲ್ಲಿಗೆ ಹೋಗಿ ಧರ್ಮಾತ್ಮನಾದ ಯುಧಿಷ್ಠಿರನನ್ನು ಸಂದರ್ಶಿಸಿ–ಅರ್ಜುನನ ವಿಷಯವಾಗಿ ಸ್ವಲ್ಪವೂ ಚಿಂತೆಮಾಡುವುದು ಬೇಡವೆಂದು ಹೇಳಿರಿ. ಇವನು ಭೂಲೋಕಕ್ಕೆ ಸಕಲಾಸ್ತ್ರಪಾರಂಗತನಾಗಿ ಬರುವನೆಂದೂ ತಿಳಿಸಿರಿ. ಪಳಗಿದ (ಧನುರ್ವಿದ್ಯೆಯನ್ನು ಚೆನ್ನಾಗಿ ಅಭ್ಯಸಿಸಿದ) ಬಾಹುಗಳಿಲ್ಲದಿದ್ದರೆ, ಮಹಾಸ್ತ್ರಗಳ ಪರಿಚಯವಿಲ್ಲದಿದ್ದರೆ ಯುದ್ಧಭೂಮಿಯಲ್ಲಿ ಭೀಷ್ಮ-ದ್ರೋಣಾದಿಗಳನ್ನು ಎದುರಿಸುವ ಸಾಧ್ಯತೆಯಿಲ್ಲ. ಗುಡಾಕೇಶನು ಮಹಾಸ್ತ್ರಗಳಲ್ಲಿ ಪ್ರಾವೀಣ್ಯವನ್ನು ಪಡೆದಿರುವನೆಂದೂ ಕೇವಲ ಅಸ್ತ್ರವಿದ್ಯೆಯಲ್ಲಿಯೇ ಅಲ್ಲದೇ ಗಾಯನ-ವೀಣಾವಾದನ-ನೃತ್ತ-ನೃತ್ಯ-ಅಭಿನಯಗಳಲ್ಲಿಯೂ ವಿಶಾರದನಾಗಿರುವನೆಂದೂ ಯುಧಿಷ್ಠಿರನಿಗೆ ಹೇಳಿರಿ. ನನ್ನ ಆದೇಶದಂತೆ ಯುಧಿಷ್ಠಿರನು ತನ್ನ ಅನುಜರೊಡನೆ ಪವಿತ್ರಪುಣ್ಯತೀರ್ಥಗಳನ್ನೂ, ಪಾಪಹಾರಕಗಳಾದ ಪುಣ್ಯಕ್ಷೇತ್ರಗಳನ್ನೂ ಸಂದರ್ಶಿಸಲಿ. ಪುಣ್ಯತೀರ್ಥಗಳಲ್ಲಿ ಸ್ನಾನಮಾಡುವುದರಿಂದ ಪಾಪಗಳ ಪರಿಹಾರವಾಗುವುದು ಮಾತ್ರವಲ್ಲದೇ ಯುಧಿಷ್ಠಿರನಿಗಿರುವ ಹೃದಯದ ಆತಂಕವೂ ಕಡಿಮೆಯಾಗಿ ಮನಃಶಾಂತಿಯುಂಟಾಗುವುದೆಂಬುದನ್ನೂ ತಿಳಿಸಿರಿ. ಪಾಪಗಳೆಲ್ಲವೂ ಕಳೆದುಹೋದನಂತರ ಯುಧಿಷ್ಠಿರನು ತನ್ನ ಸಾಮ್ರಾಜ್ಯವನ್ನು ಪುನಃ ಪಡೆದು ಆನಂದಭರಿತನಾಗಿ ಸಾಮ್ರಾಜ್ಯಸುಖವನ್ನು ಅನುಭವಿಸಬಹುದಾಗಿದೆ.

ಲೋಮಶರೇ! ತಮ್ಮಲ್ಲಿ ನನ್ನ ಮತ್ತೊಂದು ಪ್ರಾರ್ಥನೆಯೇನೆಂದರೆ : ಸರ್ವಜ್ಞರಾದ ತಾವು ತೀರ್ಥಯಾತ್ರೆಯ ಕಾಲದಲ್ಲಿ ಯುಧಿಷ್ಠಿರನ ಜೊತೆಯಲ್ಲಿಯೇ ಇದ್ದು ಅವನನ್ನು ಸಂರಕ್ಷಿಸಬೇಕು. ಪರ್ವತ-ಗಿರಿ-ದುರ್ಗಗಳಲ್ಲಿ ರಾಕ್ಷಸರು ತಿರುಗುತ್ತಿರುತ್ತಾರೆ. ನರಭಕ್ಷಕರಾದ ಆ ರಾಕ್ಷಸರಿಂದ ಯುಧಿಷ್ಠಿರನನ್ನು ರಕ್ಷಿಸುವುದು ತಮಗೆ ಸೇರಿದ್ದಾಗಿರುತ್ತದೆ.” ಹೀಗೆಂದು ಇಂದ್ರನು ಲೋಮಶರಿಗೆ ಹೇಳಿದನಂತರ, ಅರ್ಜುನನೂ ಲೋಮಶರಿಗೆ ನಮಸ್ಕರಿಸಿ ಹೇಳಿದನು :

“ಮಹರ್ಷಿಗಳೇ! ತಾವು ಕೃಪೆಯಿಟ್ಟು ನನ್ನ ಸಹೋದರರನ್ನು ಸಂರಕ್ಷಿಸಿರಿ. ತಮ್ಮಿಂದ ರಕ್ಷಿತರಾದ ಅವರು ಪೃಥ್ವಿಯಲ್ಲಿರುವ ಪುಣ್ಯಕ್ಷೇತ್ರ

ಗಳೆಲ್ಲವನ್ನೂ ಸಂದರ್ಶಿಸಿ, ಬ್ರಾಹ್ಮಣರಿಗೆ ಯಥೇಚ್ಛವಾಗಿ ದಾನ-ದಕ್ಷಿಣೆ ಗಳನ್ನೀಯಲಿ.”

ಲೋಮಶರು ದೇವೇಂದ್ರನ ಮತ್ತು ಇಂದ್ರಸುತನ ಪ್ರಾರ್ಥನೆಗಳಿಗೆ ‘ತಥಾಸ್ತು’ ಎಂದರು. ಇಂದ್ರನ ಅನುಮತಿಯನ್ನು ಪಡೆದು ಭೂಲೋಕಾಭಿ ಮುಖವಾಗಿ ಧಾವಿಸಿದರು.

ವಾಯುವೇಗ ಅಥವಾ ಮನೋವೇಗದ ಗತಿಯುಳ್ಳ ತಪಸ್ವಿಗಳಾದ ಲೋಮಶರು ಸ್ವಲ್ಪಹೊತ್ತಿನಲ್ಲಿಯೇ ಭೂಲೋಕದಲ್ಲಿದ್ದ ಕಾಮ್ಯಕವನಕ್ಕೆ ಆಗಮಿಸಿ, ಅಲ್ಲಿ ಋಷಿಗಳಿಂದಲೂ, ಅನುಜರಿಂದಲೂ ಪರಿವೃತನಾಗಿದ್ದ ಧರ್ಮಾತ್ಮನಾದ ಯುಧಿಷ್ಠಿರನನ್ನು ನೋಡಿದರು.”

೪೭ನೆಯ ಅಧ್ಯಾಯವು ಮುಗಿಯಿತು.

೪೮ನೆಯ ಅಧ್ಯಾಯ ಇಂದ್ರಲೋಕಾಭಿಗಮನಪರ್ವ (ಮುಂದುವರಿದಿದೆ.)

## ದುಃಖಿತನಾದ ಧೃತರಾಷ್ಟ್ರನು ಸಂಜಯನ ಸಮ್ಮುಖದಲ್ಲಿ ತನ್ನ ದುಷ್ಟಪುತ್ರನ ವಿಷಯವಾಗಿ ಚಿಂತಿಸಿದುದು

ಜನಮೇಜಯನು ವೈಶಂಪಾಯನರನ್ನು ಕೇಳುತ್ತಾನೆ :

“ಬ್ರಾಹ್ಮಣೋತ್ತಮರೇ! ಮಹಾತೇಜಸ್ವಿಯಾದ ಅರ್ಜುನನು ಸಾಧಿಸಿದ ಕಾರ್ಯಗಳು ನಿಶ್ಚಯವಾಗಿಯೂ ಅದ್ಭುತವಾಗಿವೆ. ಆ ಅದ್ಭುತ ಚರಿತವನ್ನು ಕೇಳಿದ ಧೃತರಾಷ್ಟ್ರನ ಮನದಲ್ಲುಂಟಾದ ಪರಿಣಾಮವನ್ನು ದಯೆಯಿಟ್ಟು ತಿಳಿಯಪಡಿಸಿರಿ.”

“ಮಹಾರಾಜ! ಅಂಬಿಕಾಸುತನಾದ ಧೃತರಾಷ್ಟ್ರನು ಕೃಷ್ಣದ್ವೈಪಾ ಯನರಿಂದ ಅರ್ಜುನನ ಇಂದ್ರಲೋಕಗಮನ, ಮಹಾಸ್ತ್ರಗಳ ಪ್ರಾಪ್ತಿ– ಮುಂತಾದುವನ್ನು ಸವಿಸ್ತರವಾಗಿ ಕೇಳಿ ತಿಳಿದುಕೊಂಡನು. ವ್ಯಾಸರು ಹೊರಟುಹೋದನಂತರ ಸಂಜಯನೊಡನೆ ಧೃತರಾಷ್ಟ್ರನು ಏನು ಹೇಳಿದ ನೆಂಬುದನ್ನೂ ನಿನಗೆ ತಿಳಿಯಪಡಿಸುವೆನು. ಧೃತರಾಷ್ಟ್ರನು ಸಂಜಯ ನೊಡನೆ ಹೇಳಿದುದನ್ನು ತಿಳಿಯುವುದರಿಂದ ಅರ್ಜುನನ ಅದ್ಭುತಕಾರ್ಯ

ಸಾಧನೆಯಿಂದ ಧೃತರಾಷ್ಟ್ರನ ಮನಸ್ಸಿನ ಮೇಲುಂಟಾದ ಪರಿಣಾಮವನ್ನು ನೀನು ಊಹಿಸಬಹುದಾಗಿದೆ.”

ಧೃತರಾಷ್ಟ್ರನು ಸಂಜಯನನ್ನು ಕುರಿತು ಹೇಳಿದನು :

“ಸೂತ! ಮೇಧಾವಿಯಾದ ಅರ್ಜುನನು ಸಾಧಿಸಿದ ಕಾರ್ಯಗಳನ್ನು ಆಮೂಲಾಗ್ರವಾಗಿ ನಾನು ವ್ಯಾಸರಿಂದ ಕೇಳಿ ತಿಳಿದುಕೊಂಡಿರುವಂತೆ ನೀನೂ ತಿಳಿದುಕೊಂಡಿರುವೆಯಾ? ಅರ್ಜುನನ ಮಹಾಸಾಧನೆಗಳನ್ನು ಕೇಳಿ ನನ್ನ ಮನಸ್ಸು ಹೆಚ್ಚು ಆತಂಕಗೊಂಡಿರುವುದು. ನನ್ನ ದುಷ್ಟಪುತ್ರನು ಈಗಲೂ ಪ್ರಮತ್ತನಾಗಿ ಅತಿನೀಚವಾದ ಕಾರ್ಯದಲ್ಲಿಯೇ ಪ್ರವೃತ್ತನಾಗಿದ್ದಾನೆ. ಈ ಪಾಪಾತ್ಮನು ತಾನು ಮಾಡುತ್ತಿರುವ ನೀಚಕಾರ್ಯದಿಂದ ನಿಶ್ಚಯವಾಗಿಯೂ ಪೃಥ್ವಿಯನ್ನೇ ಜನರಹಿತವನ್ನಾಗಿ ಮಾಡುವನೆಂಬುದರಲ್ಲಿ ಸಂಶಯವಿಲ್ಲ.

**ಯಸ್ಯ ನಿತ್ಯಮೃತಾ ವಾಚಃ ಸ್ವೈರೇಷ್ವಪಿ ಮಹಾತ್ಮನಃ ।**
**ತ್ರೈಲೋಕ್ಯಮಪಿ ತಸ್ಯ ಸ್ಯಾದ್ಯೋದ್ಧಾ ಯಸ್ಯ ಧನಂಜಯಃ ॥೫॥**

ಯಾವನು ಧರ್ಮಾತ್ಮನಾಗಿರುವನೋ, ಯಾವನ ಮಾತುಗಳು ಹಾಸ್ಯದಲ್ಲಿಯೂ ಸತ್ಯವಾಕ್ಯಗಳೇ ಆಗಿರುವುವೋ ಮತ್ತು ಯಾವನು ಧನಂಜಯನನ್ನು ತನ್ನ ಯೋಧನನ್ನಾಗಿ ಪಡೆದಿರುವನೋ–ಅಂತಹ ಮಹಾನುಭಾವನಾದ ಯುಧಿಷ್ಠಿರನು ತ್ರೈಲೋಕ್ಯವನ್ನೂ ಜಯಿಸಲು ಸಮರ್ಥನಾಗಿರುವನು. ಧನುರ್ಬಾಣಾದಿಗಳನ್ನು ಹಿಡಿದು ನಿಂತು, ಧನುಷ್ಟೇಂಕಾರಮಾಡಿ ಧನುಸ್ಸಿಗೆ ಹೆದೆಯೇರಿಸಿ, ಮಸೆಗಲ್ಲಿನ ಮೇಲೆ ಮಸೆದು ತೀಕ್ಷ್ಣತಮವಾಗಿ ಮಾಡಿರುವ ಬಾಣಗಳ ಜಾಲವನ್ನು ಪ್ರವಾಹ ದೋಪಾದಿಯಲ್ಲಿ ಧನುಸ್ಸಿನ ಮೂಲಕ ಪ್ರಯೋಗಿಸುವ ಅರ್ಜುನನ ಎದುರಾಗಿ ಮೃತ್ಯು ಮತ್ತು ಮುಪ್ಪುಗಳಿಂದ ಅತೀತನಾದವನೂ (ಅರ್ಥಾತ್ ದೇವತೆಯೂ) ನಿಲ್ಲಲು ಸಾಧ್ಯವಾದೀತೇ? ಅಂತಹ ದುರಾಧರ್ಷರಾದ ಪಾಂಡವರ ವಿರುದ್ಧ ಯುದ್ಧಮಾಡಲು ಸಿದ್ಧರಾಗುತ್ತಿರುವ ನನ್ನ ದುಷ್ಟಪುತ್ರರೆಲ್ಲರೂ ಮೃತ್ಯುವಶರಾದಂತೆಯೇ ಸರಿ. ಸಂಜಯ! ನಾನು ಹಗಲಿರುಳೂ ಚಿಂತಿಸುತ್ತಿದ್ದೇನೆ. ನಮ್ಮ ಪಕ್ಷದಲ್ಲಿ ಯಾವನೊಬ್ಬನೂ ಧನಂಜಯನ ಎದುರಾಗಿ ನಿಂತು ಯುದಮಾಡುವ ಸಾಮರ್ಥ್ಯವನ್ನು ಪಡೆದಿರುವುದಿಲ್ಲ. ದ್ರೋಣ-

ಕರ್ಣ-ಭೀಷ್ಮರು ಅರ್ಜುನನ ಎದುರಾಗಿ ನಿಂತು ಹೋರಾಡಬಹುದು. ಪರಸ್ಪರ ಯುದ್ಧದಿಂದಾಗಿ ಉಭಯ ಪಕ್ಷಗಳಲ್ಲಿಯೂ ಸಾವಿರಾರು ಸೈನಿಕರು ಹತರಾಗಬಹುದು. ಆದರೂ ಜಯವು ನಮಗೇ ಲಭಿಸುವುದೆಂಬ ವಿಶ್ವಾಸವು ನನಗಿಲ್ಲ.



**ಘೃಣೀ ಕರ್ಣಃ ಪ್ರಮಾದೀ ಚ ಆಚಾರ್ಯಃ ಸ್ಥವಿರೋ ಗುರುಃ ।**
**ಅಮರ್ಷೀ ಬಲವಾನ್ಪಾರ್ಥಃ ಸಂರಮ್ಭೀ ದೃಢವಿಕ್ರಮಃ ॥೧೦॥**

ಕರ್ಣನು ಕರುಣಾಶಾಲಿಯು (ಯುದ್ಧದಲ್ಲಿ ಕರುಣೆಯಿರಕೂಡದು.) ಮೇಲಾಗಿ ವಿಸ್ಮರಣೆಯುಳ್ಳವನು ( ಜ್ಞಾಪಕಶಕ್ತಿಯಿಲ್ಲದವನು. ) ಆಚಾರ್ಯ

ರಾದ ದ್ರೋಣರು ವೃದ್ಧರು ; ಮೇಲಾಗಿ ಅರ್ಜುನನ ಗುರುಗಳು. ಅವರು ಎದುರಿಸಬೇಕಾದ ವ್ಯಕ್ತಿಯಾದರೋ ಮಹಾಕೋಪಿಷ್ಠನಾದ, ಮಹಾಬಲ ಶಾಲಿಯಾದ ಅರ್ಜುನನು. ಭೀಷ್ಮ-ದ್ರೋಣ-ಕರ್ಣ-ಕೃಪ-ಭೀಮಾರ್ಜುನ ರೆಲ್ಲರೂ ಮಹಾಯೋಧರು. ಅಪ್ರತಿಮಸಾಹಸಿಗಳು. ಅವರ ನಡುವೆ ಮಹಾ ಯುದ್ಧವು ಸಂಭವಿಸುವುದು ನಿಶ್ಚಯ. ಅವರೆಲ್ಲರೂ ಮಹಾವೀರರೂ, ಅಸ್ತ್ರವಿಶಾರದರೂ ಮತ್ತು ಕೀರ್ತಿವಂತರೂ ಆಗಿರುತ್ತಾರೆ. ಸರ್ವೇಶ್ವರತ್ವವನ್ನಾ ದರೂ ಪಾಂಡವರು ಜಯಶಾಲಿಗಳಾಗಿಯೇ ಪಡೆಯಲು ಇಚ್ಛಿಸುವರೇ ಹೊರತು-ಪರಾಜಿತರಾಗಿ ಬಾಳಲು ಇಚ್ಛಿಸುವುದಿಲ್ಲ. ಈ ಕಾರಣದಿಂದಾಗಿ ಪ್ರಪಂಚದಲ್ಲಿ ಶಾಂತಿಯು ನೆಲೆಸಬೇಕಾದರೆ ನನ್ನ ಮಕ್ಕಳಾದರೂ ಸಾಯಬೇಕು; ಅಥವಾ ಅರ್ಜುನನಾದರೂ ಮೃತ್ಯುವಶನಾಗಬೇಕು. ಆದರೆ ಸಂಜಯ ; ನನ್ನ ಬುದ್ಧಿಯ ಪರಿಮಿತಿಯಲ್ಲಿ ಆಲೋಚಿಸಿ ಹೇಳುವುದಾದರೆ–ಅರ್ಜುನನನ್ನು ಕೊಲ್ಲುವ ಯೋಧನೇ ಹುಟ್ಟಿರುವುದಿಲ್ಲ. ಅಷ್ಟೇಕೆ? ಅವನನ್ನು ಪರಾಜಯಗೊಳಿಸಲು ಸಮರ್ಥನಾದವನೂ ಹುಟ್ಟಿರುವುದಿಲ್ಲ."

ಧೃತರಾಷ್ಟ್ರನು ಕ್ಷಣಕಾಲ ಯೋಚಿಸುತ್ತಾ ಕುಳಿತನು. ಅವನ ಮನಸ್ಸು ಬಹಳ ಉದ್ವೇಗದಿಂದ ಕೂಡಿದ್ದಿತು.

"ಅಯ್ಯೋ, ಸಂಜಯ! ನನ್ನ ಮತ್ತು ನನ್ನ ಮಕ್ಕಳ ದುಷ್ಕಾರ್ಯ ದಿಂದಾಗಿ ಸಮುದ್ಭೂತವಾಗಿರುವ ಅರ್ಜುನನ ಕೋಪಾಗ್ನಿಯನ್ನು ಶಮನ ಮಾಡುವುದೆಂತು? ಅರ್ಜುನನ ಪರಾಕ್ರಮವನ್ನು ನೆನೆದಂತೆಲ್ಲಾ ನನ್ನ ಹೃದಯದ ದುಃಖವು ಇಮ್ಮಡಿಯಾಗುತ್ತದೆ. ದೇವೇಶನಾದ ಇಂದ್ರನಿಗೆ ಸಮಾನನಾಗಿ ಇಂದ್ರನೊಡನೆಯೇ ಹೋರಾಡಿ–ಖಾಂಡವವನದಲ್ಲಿ ಅಗ್ನಿ ದೇವನನ್ನು ತೃಪ್ತಿಗೊಳಿಸಿದ ಮಹಾವೀರನಾದ ಅರ್ಜುನನು, ರಾಜಸೂಯ ಯಾಗದ ಸಮಯದಲ್ಲಿ ಪೃಥ್ವಿಯ ಎಲ್ಲ ರಾಜರನ್ನೂ ಸದೆಬಡಿದು ಆಶ್ರಿತರ ನ್ನಾಗಿ ಮಾಡಿಕೊಂಡನು. ನಿಜವಾಗಿ ಹೇಳುವುದಾದರೆ :

**ಶೇಷಂ ಕುರ್ಯಾದ್ಗಿರೇರ್ವಜ್ರೋ ನಿಪತನ್ಮೂರ್ಧ್ನಿ ಸಂಜಯ ।**
**ನ ತು ಕುರ್ಯುಃ ಶರಾಃ ಶೇಷಂ ಕ್ಷಿಪ್ತಾಸ್ತಾತ ಕಿರೀಟಿನಾ ॥೧೫॥**

ಪರ್ವತದ ಮೇಲೆ ಪ್ರಯೋಗಿಸಲ್ಪಟ್ಟ ಇಂದ್ರನ ವಜ್ರಾಯುಧ

ವಾದರೂ ಪರ್ವತಶಿಖರದಲ್ಲಿ ಒಂದು ಭಾಗವನ್ನಾದರೂ ವಿನಾಶಮಾಡದೇ ಉಳಿಸಬಹುದು ; ಆದರೆ ಅರ್ಜುನನಿಂದ ಪ್ರಯೋಗಿಸಲ್ಪಡುವ ನಿಶಿತವಾದ ಬಾಣಗಳು ಶತ್ರುಗಳಲ್ಲಿ ಒಬ್ಬನನ್ನೂ ಉಳಿಸಲಾರವು. ಸೂರ್ಯನ ತೀಕ್ಷ್ಣವಾದ ಕಿರಣಗಳು ಪ್ರಪಂಚದ ಚರಾಚರವಸ್ತುಗಳೆಲ್ಲವನ್ನೂ ಸುಡುವಂತೆ–ಅರ್ಜುನನಿಂದ ಪ್ರಯೋಗಿಸಲ್ಪಟ್ಟ ನಿಶಿತಾಸ್ತ್ರಗಳು ನನ್ನ ಮಕ್ಕಳನ್ನು ದಹಿಸಿಬಿಡುವುವು. ಮಹಾವೀರನಾದ ಅರ್ಜುನನ ರಥಚಕ್ರಗಳ ಧ್ವನಿಯನ್ನು ಕೇಳಿ ಸೈನ್ಯಸಮೂಹಗಳು ದಿಕ್ಕಾಪಾಲಾಗಿ ಓಡುತ್ತವೆಯೆಂದು ನನ್ನ ಮನಸ್ಸಿಗೆ ಗೋಚರವಾಗುತ್ತಿದೆ.

**ಯದೋದ್ವಹನ್ಪ್ರವಪಂಶ್ಚೈವ ಬಾಣಾನ್**
**ಸ್ಥಾತಾತತಾಯೀ ಸಮರೇ ಕಿರೀಟೀ ।**
**ಸೃಷ್ಟೋಽನ್ತಕಃ ಸರ್ವಹರೋ ವಿಧಾತ್ರಾ**
**ಭವೇದ್ಯಥಾ ತದ್ವದಪಾರಣೀಯಃ ॥೧೮॥**

ಸಂಜಯ! ಯಾವಾಗ ಅರ್ಜುನನು ಯುದ್ಧಭೂಮಿಯಲ್ಲಿ ಶಸ್ತ್ರಪಾಣಿಯಾಗಿ ನಿಂತು ನಿಶಿತಾಸ್ತ್ರಗಳನ್ನು ಪ್ರವಾಹದಂತೆ ಪ್ರಯೋಗಿಸುವನೋ ಆಗ ಅವನಿಂದ ಪಾರಾಗಲು ಯಾರಿಗೂ ಸಾಧ್ಯವಾಗುವುದಿಲ್ಲ. ನಿಶ್ಚಯವಾಗಿಯೂ ಬ್ರಹ್ಮನು ಅರ್ಜುನನನ್ನು ಪೃಥ್ವಿಯ ಸರ್ವಹರನಾದ ಅಂತಕನನ್ನಾಗಿ ಸೃಷ್ಟಿ ಮಾಡಿದ್ದಾನೆ."*

ಳ೮ನೆಯ ಅಧ್ಯಾಯವು ಮುಗಿಯಿತು.

---

* ಇಲ್ಲಿ ಧೃತರಾಷ್ಟ್ರನು ಅರ್ಜುನನನ್ನು 'ಆತತಾಯೀ' ಎಂದು ಕರೆದಿದ್ದಾನೆ. ಈ ಶಬ್ದವು ಆರು ವಿಧವಾದ ಅರ್ಥವನ್ನು ಕೊಡುವುದಾಗಿದೆ.

**ಅಗ್ನಿದೋ ಗರದಶ್ಚೈವ ಶಸ್ತ್ರಪಾಣಿರ್ಧನಾಪಹಃ ।**
**ಕ್ಷೇತ್ರದಾರಾಪಹಾರೀ ಚ ಷಡೇತೇ ಆತತಾಯಿನಃ ॥**

ಬೆಂಕಿಹಚ್ಚುವವನು, ವಿಷಹಾಕುವವನು, ಶಸ್ತ್ರಪಾಣಿಯು, ಧನಾಪಹಾರಿಯು, ಭೂಮಿಯನ್ನು ಅಪಹರಿಸುವವನು, ಹೆಂಡತಿಯನ್ನು ಅಪಹರಿಸುವವನು–ಈ ಆರು ಮಂದಿಗೆ ಆತತಾಯಿಗಳೆಂದು ಹೆಸರು.

ಯುದ್ಧಪರ್ಯಾಯದಲ್ಲಿ ಹೇಳಿರುವುದರಿಂದ 'ಆತತಾಯೀ' ಎಂಬ ಶಬ್ದಕ್ಕೆ 'ಶಸ್ತ್ರಪಾಣಿಯು' ಎಂ ದು ಅರ್ಥಮಾಡುವುದು ಸಾಧುವಾಗಿದೆ.

## ಧೃತರಾಷ್ಟ್ರನ ಮಾತುಗಳಿಗೆ ಸಂಜಯನ ಅನುಮೋದನೆ : ಧೃತರಾಷ್ಟ್ರನ ಸಂತಾಪ

ಸಂಜಯನು ಧೃತರಾಷ್ಟ್ರನಿಗೆ ಹೇಳುತ್ತಾನೆ :

"ಮಹಾರಾಜ! ನೀನು ದುರ್ಯೋಧನನ ವಿಷಯವಾಗಿ ಹೇಳಿರುವುದೆಲ್ಲವೂ ಶತಾಂಶ ಸತ್ಯವಾಗಿದೆ. ನಿನ್ನ ಮಾತುಗಳಲ್ಲಿ ಮಿಥ್ಯಾಂಶವಿರಲು ಅವಕಾಶವೇ ಇಲ್ಲ. ಧರ್ಮಪತ್ನಿಯಾದ, ಯಶಸ್ವಿನಿಯಾದ ಕೃಷ್ಣೆಯನ್ನು ಸಭಾಮಂಟಪಕ್ಕೆ ಸೆಳೆದುತಂದುದನ್ನು ಕಂಡು ಮಹಾಪರಾಕ್ರಮಿಗಳಾದ ಪಾಂಡವರು ಕುಪಿತರಾದರು. ದ್ರೌಪದಿಯನ್ನು ಸೆಳೆದುತಂದುದು ಮಾತ್ರವಲ್ಲದೇ ಕರ್ಣ-ದುಃಶಾಸನರಾಡಿದ ಕರ್ಣಕಠೋರವಾದ ಮಾತುಗಳನ್ನು ಕೇಳಿ ಅವರ ಕೋಪವು ಮತ್ತಷ್ಟು ಉಲ್ಬಣಿಸಿತು. ಅಂದು ನಿನ್ನ ಮಕ್ಕಳೆಸಗಿದ ಮಹಾಪರಾಧವನ್ನು ಪಾಂಡವರು ಯಾವ ಕಾರಣದಿಂದಲೂ ಕ್ಷಮಿಸುವುದಿಲ್ಲವೆಂಬುದೇ ನನ್ನ ನಿಶ್ಚಯವಾಗಿದೆ. ದೇವದೇವನಾದ, ಹನ್ನೊಂದು ರೂಪಗಳಿರುವ ಸ್ಥಾಣುವನ್ನು ಮಹಾವೀರನಾದ ಅರ್ಜುನನು ಯುದ್ಧದಲ್ಲಿ ಬಾಣ ಪ್ರಯೋಗದಿಂದ ಹೇಗೆ ತಣಿಸಿದನೆಂಬುದನ್ನು ನಾನು ಕೇಳಿರುವೆನು. ಕಪರ್ದಿಯು ಅರ್ಜುನನನ್ನು ಪರೀಕ್ಷಿಸುವ ಸಲುವಾಗಿ ಕಿರಾತನ ವೇಷವನ್ನು ಧರಿಸಿ, ವ್ಯಾಜಾಂತರದಿಂದ ಅರ್ಜುನನೊಡನೆ ಯುದ್ಧಮಾಡಿದನು. ಪರಮೇಶ್ವರನು ಸುಪ್ರೀತನಾಗಿ ಅರ್ಜುನನಿಗೆ ಪಾಶುಪತಾಸ್ತ್ರವನ್ನು ಪ್ರದಾನ ಮಾಡಿದನಂತರ, ಲೋಕಪಾಲಕರೂ ತಮ್ಮಲ್ಲಿದ್ದ ದಿವ್ಯಾಸ್ತ್ರಗಳನ್ನು ಕೊಡುವ ಸಲುವಾಗಿ ತಮ್ಮ ದಿವ್ಯರೂಪಗಳಿಂದ ಅರ್ಜುನನಿಗೆ ಪ್ರತ್ಯಕ್ಷರಾದರು. ಈ ಭೂಮಿಯಲ್ಲಿ ಅರ್ಜುನನನ್ನುಳಿದು ಮತ್ತಾರುತಾನೇ ಆ ಲೋಕಪಾಲರ ದಿವ್ಯರೂಪಗಳನ್ನು ದರ್ಶನಮಾಡುವ ಸಾಮರ್ಥ್ಯವುಳ್ಳವರಾಗಿರುತ್ತಾರೆ?

ಅಷ್ಟಮೂರ್ತಿಯಾದ* ಮಹೇಶ್ವರನಿಂದಲೇ ಕುಗ್ಗಿಸಲಾಗದ ಅರ್ಜುನನ ಬಲವನ್ನು ಯುದ್ಧದಲ್ಲಿ ಮತ್ತಾರು ತಾನೇ ಕುಗ್ಗಿಸಲು ಸಮರ್ಥ

---

* ಪಂಚಭೂತಗಳು, ಸೂರ್ಯ-ಚಂದ್ರರು ಮತ್ತು ದೀಕ್ಷಿತನಾದ ಬ್ರಾಹ್ಮಣ–ಈ ರೂಪನಾಗಿರುವ ಪರಮೇಶ್ವರನಿಗೆ ಅಷ್ಟಮೂರ್ತಿಯೆಂದು ಹೆಸರು.

ರಾಗುತ್ತಾರೆ? ಧೃತರಾಷ್ಟ್ರ! ನಿನ್ನ ಮಕ್ಕಳು ದ್ರೌಪದಿಯನ್ನು ಸಭಾಭವನಕ್ಕೆ ಸೆಳೆದುತಂದು ಪಾಂಡವರ ಕೋಪವನ್ನು ಕೆರಳಿಸಿ, ಭಯಂಕರ ವಿಪತ್ತನ್ನು ತಾವಾಗಿಯೇ ತಂದುಕೊಂಡರು. ಅಭಾಗಿನಿಯಾದ ದ್ರೌಪದಿಗೆ ದುಷ್ಟನಾದ ದುರ್ಯೋಧನನು ತೊಡೆಯನ್ನು ತೋರಿಸಿ ಪರಿಹಾಸ್ಯಮಾಡಿದಾಗ ಭೀಮಸೇನನಾಡಿದ ಮಾತುಗಳು ನಿನ್ನ ಸ್ಮರಣೆಯಲ್ಲಿವೆಯೇ? ಮಹಾರಾಜ!

**ಊರೂ ಭೇತ್ಸ್ಯಾಮಿ ತೇ ಪಾಪ ಗದಯಾ ಭೀಮವೇಗಯಾ ।**
**ತ್ರಯೋದಶಾನಾಂ ವರ್ಷಾಣಾಮನ್ತೇ ದುರ್ದ್ಯೂತದೇವಿನಃ ॥೧೧॥**

"ಮೋಸದ ಪಗಡೆಯಾಟದಲ್ಲಿ ನಮ್ಮನ್ನು ಸೋಲಿಸಿರುವ ನಿನ್ನ ಈ ತೊಡೆಗಳನ್ನು ಹದಿಮೂರು ವರ್ಷಗಳು ಕಳೆದೊಡನೆಯೇ ರಭಸದಿಂದ ಕೂಡಿದ ಗದಾಪ್ರಹಾರದಿಂದ ಭೇದಿಸುವೆನು"–ಎಂದು ಪ್ರತಿಜ್ಞೆಮಾಡಿರುವನು. ಅಂದು ಆ ಮಾತುಗಳನ್ನು ಹೇಳುವಾಗ ಭೀಮನ ತುಟಿಗಳು ಅದುರುತ್ತಿದ್ದುವು. ಕಣ್ಣುಗಳು ಕೆಂಪಾಗಿದ್ದುವು. ಹಲ್ಲುಗಳು ಒಂದಕ್ಕೊಂದು ಮಸೆದಾಡುತ್ತಿದ್ದುವು. ಭೀಮನ ಆಕೃತಿಯೇ ನೋಡಲು ಬಲುಭಯಂಕರವಾಗಿದ್ದಿತು.

ಮಹಾರಾಜ! ಪಾಂಡುವಿನ ಮಕ್ಕಳೆಲ್ಲರೂ ಯುದ್ಧವಿಶಾರದರು. ಮಹಾಪರಾಕ್ರಮವುಳ್ಳವರು. ಸಕಲವಿಧವಾದ ಶಸ್ತ್ರಾಸ್ತ್ರಗಳನ್ನೂ ತಿಳಿದವರಾಗಿರುವರು. ಈ ಕಾರಣದಿಂದಲೇ ಅವರು ದೇವತೆಗಳೇ ಯುದ್ಧದಲ್ಲಿ ಎದುರಾಗಿ ಬಂದರೂ ಪರಾಜಯವನ್ನು ಹೊಂದುವುದಿಲ್ಲ. ಧೃತರಾಷ್ಟ್ರ! ದ್ರೌಪದಿಗೆ ನಿನ್ನ ಮಕ್ಕಳು ಮಾಡಿದ ಅಪಮಾನದಿಂದ ಕುಪಿತರಾಗಿರುವ ಪಾಂಡವರು ಯುದ್ಧದಲ್ಲಿ ದುರ್ಯೋಧನಾದಿಗಳೆಲ್ಲರನ್ನೂ ನಿರ್ಮೂಲ ಮಾಡಿಬಿಡುವರೆಂದು ನಾನು ನಿಶ್ಚಯಿಸಿದ್ದೇನೆ."

"ನಿಜ, ಸಂಜಯ! ಹಾಗೆಯೇ ನಾನೂ ತಿಳಿದಿದ್ದೇನೆ. ಅಂದು ಸಭಾಮಂದಿರದಲ್ಲಿ ನಡೆದುದನ್ನು ನೆನೆದರೆ ಇಂದೂ ನನಗೆ ಬಹಳ ಪರಿತಾಪವುಂಟಾಗುತ್ತದೆ. ದ್ರೌಪದಿಯನ್ನು ಸಭಾಮಂದಿರಕ್ಕೆ ಸೆಳೆದುತಂದುದೇ ಕೌರವ-ಪಾಂಡವರಲ್ಲಿ ವೈರದ ಪ್ರತಿಷ್ಠಾಪನೆಗೆ ಸಾಕಷ್ಟು ಕಾರಣವಾಗಿದ್ದಿತು. ಅವರ ಜೊತೆಗೆ ಕರ್ಣನೂ ಕರ್ಣಕಠೋರವಾದ, ಕುತ್ಸಿತವಾದ ಮಾತುಗಳನ್ನಾಡಿ ವೈರವೆಂಬ ಅಗ್ನಿಗೆ ಮತ್ತಷ್ಟು ಆಜ್ಯಾಹುತಿಯನ್ನೂ ಹಾಕಿದನು."

ಧೃತರಾಷ್ಟ್ರನೊಮ್ಮೆ ನಿಟ್ಟುಸಿರುಬಿಟ್ಟು ಹೇಳಿದನು :

**ಅಪೀದಾನೀಂ ಮಮ ಸುತಾಸ್ತಿಷ್ಠೇರನ್ಮನ್ದಚೇತಸಃ ।**
**ಯೇಷಾಂ ಭ್ರಾತಾ ಗುರುರ್ಜ್ಯೇಷ್ಠೋ ವಿನಯೇ ನಾವತಿಷ್ಠತೇ ॥**

"ಸಂಜಯ! ಯಾವನಿಗೆ ವಿನಯವೆಂಬುದೇ ತಿಳಿಯದೋ ಅಂತಹವನು ಹಿರಿಯಣ್ಣನಾಗಿರುವಾಗ ಮಂದಬುದ್ಧಿಗಳಾದ ಉಳಿದ ನನ್ನ ಮಕ್ಕಳು ಈಗಲಾದರೂ ಸುಮ್ಮನಿರುವರೇ? (ಅಣ್ಣನಾದ ದುರ್ಯೋಧನನಂತೆಯೇ ಪಾಂಡವರನ್ನು ದ್ವೇಷಿಸುತ್ತಾರೆ.)

**ಮಮಾಪಿ ವಚನಂ ಸೂತ ನ ಶುಶ್ರೂಷತಿ ಮನ್ದಭಾಕ್ ।**
**ದೃಷ್ಟ್ವಾ ಮಾಂ ಚಕ್ಷುಷಾ ಹೀನಂ ನಿರ್ವಿಚೇಷ್ಟಮಚೇತಸಮ್ ॥**

ದೃಷ್ಟಿಹೀನನಾಗಿರುವ ನಾನಾದರೋ ನನ್ನ ಮಗನ ಮೇಲೆ ಹೆಚ್ಚಿನ ಪ್ರಭಾವವನ್ನು ಬೀರಿ ಅವನನ್ನು ಸನ್ಮಾರ್ಗಕ್ಕೆ ಸೆಳೆಯುವ ಸಾಮರ್ಥ್ಯವನ್ನು ಹೊಂದಿರುವುದಿಲ್ಲ. ನನ್ನನ್ನು ಜೀವಚ್ಛವವೆಂದೂ, ಕಣ್ಣಿಲ್ಲದವನೆಂದೂ, ಕ್ರಿಯಾಹೀನನೆಂದೂ ಭಾವಿಸಿರುವ ಮಂದಭಾಗ್ಯನಾದ ನನ್ನ ಮಗನು ನನ್ನ ಒಳ್ಳೆಯ ಮಾತುಗಳೊಂದನ್ನೂ ಕೇಳುವುದಿಲ್ಲ.

**ಯೇ ಚಾಸ್ಯ ಸಚಿವಾ ಮನ್ದಾಃ ಕರ್ಣಸೌಬಲಕಾದಯಃ ।**
**ತೇ ತಸ್ಯ ಭೂಯಸೋ ದೋಷಾನ್ವರ್ಧಯನ್ತಿ ವಿಚೇತಸಃ ॥೧೭॥**

ಇದರ ಜೊತೆಗೆ ದುರ್ಯೋಧನನ ಸಚಿವರಾದರೋ–ಮಂದಾತ್ಮರಾದ, ದುಷ್ಟರಾದ, ಅಧರ್ಮಿಗಳಾದ ಕರ್ಣ-ಸೌಬಲಾದಿಗಳು. ಅವರು ದುರ್ಯೋಧನನಲ್ಲಿರುವ ದೋಷಗಳನ್ನು ತಿಳಿಯಹೇಳಿ, ಆ ದೋಷಗಳ ಪರಿಹಾರಕ್ಕೆ ಯತ್ನಿಸುವ ಬದಲಾಗಿ–ಅವನಲ್ಲಿರುವ ದೋಷಗಳನ್ನೇ ಅಭಿವೃದ್ಧಿಪಡಿಸಲು ಬಾರಿ-ಬಾರಿಗೂ ಯತ್ನಿಸುತ್ತಿರುತ್ತಾರೆ. ಅರ್ಜುನನ ಪರಾಕ್ರಮದ ವಿಷಯವಾಗಿ ಹೇಳುವುದಾದರೆ–ಅರ್ಜುನನು ಇಚ್ಛೆಬಂದಂತೆ ಉದಾಸೀನನಾಗಿ ಬಾಣಪ್ರಯೋಗಮಾಡಿದರೂ ನನ್ನ ಮಕ್ಕಳೆಲ್ಲರನ್ನೂ ಸಂಹಾರಮಾಡಲು ಸಮರ್ಥನಾಗಿರುವನು. ಹೀಗಿರುವಾಗ ಕೋಪಾವಿಷ್ಟನಾಗಿ ಬಾಣಪ್ರಯೋಗ ಮಾಡುವುದರಿಂದುಂಟಾಗುವ ಫಲಿತಾಂಶವನ್ನು ಯೋಚಿಸಬೇಕಾಗಿಯೇ ಇಲ್ಲ.

ಸರ್ವನಾಶವೆಂಬುದು ಸಿದ್ಧವಾಗಿಯೇ ಇರುವುದು. ದೀರ್ಘವಾದ ಗಾಂಡೀವ ಧನುಸ್ಸಿಗೆ ಹೆದೆಯೇರಿಸಿ ಅಕ್ಷಯವಾದ ಬತ್ತಳಿಕೆಗಳಿಂದ ಬಾಣಗಳನ್ನು ತೆಗೆದು ಧನುಸ್ಸಿಗೆ ಯೋಜಿಸಿ, ಮಹಾಮಂತ್ರಪುನಶ್ಚರಣೆಮಾಡಿ, ಸೆಳೆದು ಬಿಡುವ ದಿವ್ಯಾಸ್ತ್ರಗಳು ದೇವತೆಗಳನ್ನೂ ಪರಾಜಯಗೊಳಿಸಬಲ್ಲುವು. ಮೇಲಾಗಿ :

**ಯಸ್ಯ ಮನ್ತ್ರೀ ಚ ಗೋಪ್ತಾ ಚ ಸುಹೃಚ್ಚೈವ ಜನಾರ್ದನಃ ।**
**ಹರಿಸ್ತ್ರೈಲೋಕ್ಯನಾಥಃ ಸ ಕಿಂ ನು ತಸ್ಯ ನ ನಿರ್ಜಿತಮ್ ॥೨೦॥**

ಯಾವಾತನಿಗೆ ಮಂತ್ರಿಯೂ, ರಕ್ಷಕನೂ, ಸ್ನೇಹಿತನೂ ಸಾಕ್ಷಾತ್ ತ್ರೈಲೋಕ್ಯನಾಥನಾದ ಶ್ರೀಹರಿಯೇ ಆಗಿರುವನೋ–ಅಂತಹವನಿಗೆ ಜಯಿಸ ಲಾಗದುದು ಪ್ರಪಂಚದಲ್ಲಿ ಯಾವುದು ತಾನೇ ಇರುವುದು? ಅರ್ಜುನನನ್ನು ಪರಶಿವನು ತನ್ನ ದೀರ್ಘವಾದ ಬಾಹುಲತೆಗಳಿಂದ ತಬ್ಬಿಕೊಂಡು ಗಾಢಾಲಿಂಗನಮಾಡಿಕೊಂಡನೆಂದೂ ನಾವು ಕೇಳಿದೆವು. ನಿಶ್ಚಯವಾಗಿಯೂ ಈ ವಿಷಯವು ಪರಮಾದ್ಭುತವೂ ಮತ್ತು ಆಶ್ಚರ್ಯಕರವೂ ಅಲ್ಲವೇ? ಅರ್ಜುನನು ಕೃಷ್ಣನೊಡನೆ ಖಾಂಡವವನವನ್ನು ದಹಿಸಲು ಅಗ್ನಿಗೆ ನೆರವಾದ ವಿಷಯವು ಸರ್ವವಿದಿತವಾಗಿಯೇ ಇರುವುದು. ಈ ಕಾರಣಗಳಿಂದಾಗಿ ಭೀಮ-ಪಾರ್ಥ-ಕೃಷ್ಣರು ಕುಪಿತರಾಗಿ ಯುದ್ಧಕ್ಕಿಳಿದರೆಂದರೆ ಬಂಧು-ಮಿತ್ರ ಸಮೇತರಾದ ನನ್ನ ಮಕ್ಕಳು ಖಂಡಿತವಾಗಿಯೂ ಜೀವದಿಂದುಳಿಯು ವುದಿಲ್ಲ ; ಸಂಜಯ!"

ಳ೯ನೆಯ ಅಧ್ಯಾಯವು ಮುಗಿಯಿತು.

೫೦ನೆಯ ಅಧ್ಯಾಯ ಇಂದ್ರಲೋಕಾಭಿಗಮನಪರ್ವ (ಮುಂದುವರಿದಿದೆ.)

## ಅರಣ್ಯದಲ್ಲಿದ್ದಾಗ ಪಾಂಡವರ ಆಹಾರ

ಜನಮೇಜಯನು ವೈಶಂಪಾಯನರನ್ನು ಕೇಳುತ್ತಾನೆ :

"ಮಹರ್ಷಿಗಳೇ! ಮಹಾಪರಾಕ್ರಮಿಗಳಾದ ಪಾಂಡುಸುತರನ್ನು ಕಪಟದ್ಯೂತದ ನೆಪಮಾಡಿಕೊಂಡು ಅರಣ್ಯವಾಸಕ್ಕೆ ಕಳುಹಿಸಿದನಂತರ ಧೃತರಾಷ್ಟ್ರನು–ತಾವು ಈ ಹಿಂದೆ ಹೇಳಿದಂತೆ–ಎಷ್ಟೇ ಶೋಕಿಸಿದರೂ ಪ್ರಯೋಜನವಾದರೂ ಏನು? ಮಗನಾದ ದುಷ್ಟದುರ್ಯೋಧನನು

ಪಾಂಡವರಿಗೆ ಅಪಚಾರಮಾಡಿ ಅವರ ಕೋಪವನ್ನು ಕೆರಳಿಸುತ್ತಿದ್ದಾಗ ಧೃತರಾಷ್ಟ್ರನು ಉಪೇಕ್ಷೆಯಿಂದಿದ್ದುದೇಕೆ? ಅಂದವನು ಉಪೇಕ್ಷಿಸಿದುದಕ್ಕೆ ಯಾವಾಗಲೂ ಶೋಕಮಗ್ನನಾಗಿರುವಂತಾಯಿತಲ್ಲವೇ? ಪೂಜ್ಯರೇ! ನಮ್ಮ ತಾತಂದಿರು ವನವಾಸಮಾಡುತ್ತಿದ್ದಾಗ ಯಾವ ವಿಧವಾದ ಆಹಾರವನ್ನು ಸೇವಿಸುತ್ತಿದ್ದರೆಂಬುದನ್ನು ಕೇಳುವ ಅಪೇಕ್ಷೆಯಿಂದಿರುತ್ತೇನೆ. ಅವರು ಕಾಡಿನಲ್ಲಿ ಸಿಕ್ಕುವ ವನ್ಯಪದಾರ್ಥಗಳನ್ನೇ ಆಹಾರವನ್ನಾಗಿ ಉಪಯೋಗಿಸುತ್ತಿದ್ದರೇ? ಅಥವಾ ಕೃಷಿಯ ಮೂಲಕವಾಗಿ ಲಭ್ಯವಾಗುವ ಧಾನ್ಯಗಳನ್ನು ಆಹಾರಕ್ಕಾಗಿ ಉಪಯೋಗಿಸುತ್ತಿದ್ದರೇ?–ಎಂಬುದನ್ನು ದಯೆಯಿಟ್ಟು ತಿಳಿಸಿರಿ."

"ಜನಮೇಜಯ! ಪುರುಷರ್ಷಭರಾದ ಪಾಂಡವರು ವನ್ಯಪದಾರ್ಥಗಳನ್ನೇ ಆಹಾರಕ್ಕಾಗಿ ಉಪಯೋಗಿಸುತ್ತಿದ್ದರು. ವಿಷದಿಂದ ಲೇಪಿತವಾಗದ ಶುದ್ಧ ಬಾಣಗಳನ್ನು ಪ್ರಯೋಗಿಸಿ ಜಿಂಕೆಗಳನ್ನು ಕೊಂದು ತರುತ್ತಿದ್ದರು. ಅದರಿಂದ ಪಕ್ವಮಾಡಿದ ಆಹಾರವನ್ನು ಮೊದಲು ಬ್ರಾಹ್ಮಣರಿಗೆ ನಿವೇದನ ಮಾಡಿ ಅನಂತರ ಉಳಿದುದನ್ನು ತಾವು ಭುಂಜಿಸುವರು. ಹಿಂದೆಯೇ ಹೇಳಿದಂತೆ ಅಹಿತಾಗ್ನಿಗಳೂ ಮತ್ತು ಪರಿವ್ರಾಜಕರೂ, ದೀರ್ಘಧನುರ್ಧಾರಿಗಳಾದ ಪಾಂಡವರನ್ನನುಸರಿಸಿ ಬಂದಿದ್ದರು. ಮೋಕ್ಷಮಾರ್ಗವನ್ನು ತಿಳಿದಿದ್ದ ಮತ್ತು ಮೋಕ್ಷಮಾರ್ಗದ ಸಾಧಕರಾಗಿದ್ದ ಹತ್ತು ಸಾವಿರ ಸ್ನಾತಕಬ್ರಾಹ್ಮಣರೂ ಅಲ್ಲಿದ್ದರು. ರುರು ಎಂಬ ಜಾತಿಯ ಜಿಂಕೆಗಳನ್ನೂ ಕೃಷ್ಣಮೃಗಗಳನ್ನೂ ಮತ್ತು ಬ್ರಾಹ್ಮಣರ ಭೋಜನಕ್ಕೆ ಯೋಗ್ಯವಾದ ಇತರ ಪದಾರ್ಥಗಳನ್ನೂ ಆಹಾರಕ್ಕಾಗಿ ಯುಧಿಷ್ಠಿರನು ತರುತ್ತಿದ್ದನು.

**ನ ತತ್ರ ಕಶ್ಚಿದ್ದುರ್ವರ್ಣೋ ವ್ಯಾಧಿತೋ ವಾಪಿ ದೃಶ್ಯತೇ ।**
**ಕೃಶೋ ವಾ ದುರ್ಬಲೋ ವಾಪಿ ದೀನೋ ಭೀತೋಽಪಿ ವಾ ಪುನಃ ॥**

ಯುಧಿಷ್ಠಿರನ ಆಶ್ರಯವನ್ನು ಪಡೆದು ಜೀವಿಸುತ್ತಿದ್ದವರಲ್ಲಿ ಯಾವನೊಬ್ಬನೂ ಆಹಾರಾಭಾವದಿಂದಾಗಲೀ, ಮತ್ತಾವುದರ ಕೊರತೆಯಿಂದಾಗಲೀ ಕಾಂತಿಹೀನನಾಗಿರಲಿಲ್ಲ. ರೋಗಿಯಿರಲಿಲ್ಲ. ಕೃಶಾಂಗನಿರಲಿಲ್ಲ. ದುರ್ಬಲನೂ ಇರಲಿಲ್ಲ. ಯಾವನೂ ದೀನನಾಗಿರಲಿಲ್ಲ. ಭೀತನಾಗಿಯೂ ಇರಲಿಲ್ಲ.

ಎಲ್ಲರೂ ನೀರೋಗದೃಢಕಾಯರಾಗಿ ನಿರ್ಭೀತರಾಗಿ ತಮ್ಮ-ತಮ್ಮ ಕರ್ಮಾನುಷ್ಠಾನಗಳಲ್ಲಿ ನಿರತರಾಗಿದ್ದರು.

**ಪುತ್ರಾನಿವ ಪ್ರಿಯಾನ್ಭ್ರಾತ್ನ್ಜ್ಞಾತೀನಿವ ಸಹೋದರಾನ್ ।**
**ಪುಪೋಷ ಕೌರವಶ್ರೇಷ್ಠೋ ಧರ್ಮರಾಜೋ ಯುಧಿಷ್ಠಿರಃ ॥೯॥**

ಯುಧಿಷ್ಠಿರನು ತಮ್ಮಂದಿರನ್ನು ತನ್ನ ಮಕ್ಕಳೆಂದೇ ಭಾವಿಸಿ ಪೋಷಣೆ ಮಾಡುತ್ತಿದ್ದನು. ಜ್ಞಾತಿ-ಬಾಂಧವರನ್ನು ಸಹೋದರರೆಂದೇ ಭಾವಿಸಿ ರಕ್ಷಿಸುತ್ತಿದ್ದನು.

**ಪತೀಂಶ್ಚ ದ್ರೌಪದೀ ಸರ್ವಾನ್ದ್ವಿಜಾತೀಂಶ್ಚ ಯಶಸ್ವಿನೀ ।**
**ಮಾತೃವದ್ಭೋಜಯಿತ್ವಾಗ್ರೇ ಶಿಷ್ಟಮಾಹಾರಯತ್ತದಾ ॥೧೦॥**

ಸಾಧ್ವಿಯಾದ ದ್ರೌಪದಿಯು ತನ್ನ ಪತಿಗಳನ್ನೂ, ಬ್ರಾಹ್ಮಣರನ್ನೂ ತಾಯಿಯಂತೆಯೇ ಉಪಚರಿಸಿ, ಅವರೆಲ್ಲರೂ ಭೋಜನವನ್ನು ಮಾಡಿದ ನಂತರದಲ್ಲಿ ಉಳಿದ ಅನ್ನವನ್ನು ತಾನು ಊಟಮಾಡುವಳು. ಆಹಾರವನ್ನು ತರುವ ಸಲುವಾಗಿ ಯುಧಿಷ್ಠಿರನು ಪೂರ್ವದಿಕ್ಕಿಗೂ, ಭೀಮನು ದಕ್ಷಿಣ ದಿಕ್ಕಿಗೂ, ನಕುಲ-ಸಹದೇವರು ಪಶ್ಚಿಮ ಮತ್ತು ಉತ್ತರದಿಕ್ಕುಗಳಿಗೂ ಹೋಗುತ್ತಿದ್ದರು. ಪ್ರತಿನಿತ್ಯವೂ ಆಹಾರಕ್ಕಾಗಿ ಮೃಗಗಳನ್ನು ಬೇಟೆಯಾಡಿಕೊಂಡು ಬರುತ್ತಿದ್ದುದರಿಂದ ಕಾಮ್ಯಕವನದಲ್ಲಿ ಜಿಂಕೆಗಳ ಸಂಖ್ಯೆಯು ಕ್ರಮ-ಕ್ರಮವಾಗಿ ಕ್ಷೀಣಿಸುತ್ತಿದ್ದಿತು. ಈ ರೀತಿಯಲ್ಲಿ ಯುಧಿಷ್ಠಿರಾದಿಗಳು ಕಾಮ್ಯಕವನದಲ್ಲಿ ಅರ್ಜುನನ ಆಗಮನವನ್ನು ಕಾತರತೆಯಿಂದ ನಿರೀಕ್ಷಿಸುತ್ತಾ ಅಧ್ಯಯನ-ಜಪ-ಹೋಮಾದಿಗಳನ್ನು ಕಾಲ-ಕಾಲಕ್ಕೆ ಯಥೋಕ್ತವಾಗಿ ಮಾಡುತ್ತಾ ಐದು ವರ್ಷಗಳನ್ನು ಕಳೆದರು."

೫೦ನೆಯ ಅಧ್ಯಾಯವು ಮುಗಿಯಿತು.

## ಶ್ರೀಕೃಷ್ಣಾದಿಗಳು ದುರ್ಯೋಧನಾದಿಗಳನ್ನು ಸಂಹರಿಸಲು ಪಾಂಡವರ ಸಮ್ಮುಖದಲ್ಲಿ ಮಾಡಿದ ಪ್ರತಿಜ್ಞೆಯನ್ನು ಸಂಜಯನು ಧೃತರಾಷ್ಟ್ರನಿಗೆ ಹೇಳಿದುದು

ವೈಶಂಪಾಯನರು ಮುಂದುವರಿದು ಹೇಳುತ್ತಾರೆ :

"ಜನಮೇಜಯ! ಪಾಂಡವರು ಅರಣ್ಯದಲ್ಲಿ ಹೇಗೆ ಜೀವಿಸುತ್ತಿರುವರೆಂಬುದನ್ನು ನಾನು ಮೇಲೆ ಹೇಳಿದ ರೀತಿಯಲ್ಲಿ ಸಂಜಯನಿಂದ ಕೇಳಿ ತಿಳಿದುಕೊಂಡನಂತರ ಧೃತರಾಷ್ಟ್ರನು ಯುಧಿಷ್ಠಿರಾದಿಗಳ ಅತ್ಯದ್ಭುತವಾದ ದಿನಚರಿಯನ್ನು ಕೇಳಿ ಚಿಂತಾ-ಶೋಕಗಳಿಂದ ಪೀಡಿತವಾದ ಆತ್ಮವುಳ್ಳವನಾದನು. ತನ್ನ ಮಗನ ವಿಷಯವಾಗಿ ಧೃತರಾಷ್ಟ್ರನಿಗೆ ಕೋಪವುಂಟಾಯಿತು. ಸುದೀರ್ಘವಾದ ಮತ್ತು ಬಿಸಿಯಾದ ನಿಟ್ಟುಸಿರನ್ನು ಬಿಡುತ್ತಾ ಸಂಜಯನನ್ನು ಕುರಿತು ಹೇಳಿದನು :

"ಸೂತ! ಹಗಲಿನಲ್ಲಿಯೇ ಆಗಲೀ ; ರಾತ್ರಿಯಲ್ಲಿಯೇ ಆಗಲೀ– ನನಗೆ ಒಂದು ನಿಮಿಷವಾದರೂ 'ಮನಶ್ಶಾಂತಿ' ಎಂಬುದೇ ಇಲ್ಲವಾಗಿದೆ. ಒಮ್ಮೆ ನನ್ನ ಮಕ್ಕಳು ಪಾಂಡವರ ವಿಷಯದಲ್ಲಿ ಮಾಡಿದ ಅಪಚಾರಗಳೆಲ್ಲವೂ ಮನಸ್ಸೆಂಬ ತೆರೆಯ ಮೇಲೆ ಚಿತ್ರಪಟದ ರೀತಿಯಲ್ಲಿ ಒಂದಾದಮೇಲೊಂದರಂತೆ ಸುಳಿದಾಡುತ್ತವೆ. ನಿಶ್ಚಯವಾಗಿಯೂ ಜೂಜಾಟದಲ್ಲಿ ನನ್ನ ಮಕ್ಕಳು ಮಾಡಿದ ಅಪಚಾರವು ಅಕ್ಷಮ್ಯವಾದುದು, ಸಂಜಯ! ಮತ್ತೊಮ್ಮೆ ಪಾಂಡವರ ಚಿತ್ರವನ್ನು ನೆನೆಯುತ್ತೇನೆ. ಅವರ ಶೌರ್ಯ, ಪರಾಕ್ರಮ, ಸ್ಥೈರಣೆ, ಮೇಧಾಶಕ್ತಿ, ಎಲ್ಲಕ್ಕಿಂತಲೂ ಮಿಗಿಲಾಗಿ ಆ ಐವರಲ್ಲಿ ಪರಸ್ಪರವಾಗಿರುವ ಸಹೋದರಪ್ರೇಮ–ಇವುಗಳನ್ನು ಜ್ಞಾಪಿಸಿಕೊಂಡಂತೆಲ್ಲಾ ನನ್ನ ದುಃಖವು ಇಮ್ಮಡಿಯಾಗುತ್ತದೆ. ಆ ಪಾಂಡವರಲ್ಲಿ ಯಮಳರಾದ ನಕುಲ- ಸಹದೇವರು ಸಾಮಾನ್ಯರಲ್ಲ. ಅವರು ಅಶ್ವಿನೀದೇವತೆಗಳ ಅನುಗ್ರಹದಿಂದ ಜನ್ಮತಾಳಿರುವರು. ದೇವೇಂದ್ರನಿಗೆ ಸದೃಶವಾದ ತೇಜಸ್ಸಿನಿಂದ ಕೂಡಿದವರಾಗಿದ್ದಾರೆ. ಯುದ್ಧದಲ್ಲಿ ಅಪರಾಜಿತರು. ಆಯುಧಗಳನ್ನು ದೃಢವಾಗಿ ಹಿಡಿಯುವ ಅವರು ಲಕ್ಷ್ಯವು ಎಷ್ಟೇ ದೂರವಿದ್ದರೂ ಗುರಿಯಿಟ್ಟು

ಹೊಡೆಯುವವರು. ಶತ್ರುವನ್ನು ಜಯಿಸಬೇಕು ಅಥವಾ ಯುದ್ಧದಲ್ಲಿ ಮಡಿದು ವೀರಸ್ವರ್ಗವನ್ನು ಪಡೆಯಬೇಕು–ಎಂಬ ನಿಶ್ಚಯಬುದ್ಧಿಯಿಂದ ಯುದ್ಧದಲ್ಲಿ ಹೋರಾಡುವವರು. ಬಾಣಪ್ರಯೋಗದಲ್ಲಿ ಅವರ ಕೈಚಳಕವು ಅತ್ಯದ್ಭುತವಾದುದು. ಅವರ ಕೋಪವೂ ಸುಲಭವಾಗಿ ಶಾಂತವಾಗುವುದಿಲ್ಲ. ಅವರು ಯಾವಾಗಲೂ ಬಹಳ ಚಟುವಟಿಕೆಯಿಂದಿರುತ್ತಾರೆ. ಅಶ್ವಿನೀದೇವತೆಗಳಂತೆಯೇ ಅಪ್ರತಿಹತವಾದ ಪರಾಕ್ರಮವುಳ್ಳ ಆ ನಕುಲ-ಸಹದೇವರು ಭೀಮಾರ್ಜುನರನ್ನು ಮುಂದೆಮಾಡಿಕೊಂಡು ರಣಾಂಗಣಕ್ಕೆ ಬಂದರೆಂದರೆ ನನ್ನ ಸೈನ್ಯದಲ್ಲಿ ಯಾವನೊಬ್ಬನೂ ಜೀವದಿಂದ ಉಳಿಯಲಾರನು. ಯುದ್ಧದಲ್ಲಿ ಅಪ್ರತಿಹತರಾಗಿರುವ, ದೇವಾಂಶಸಂಭೂತರಾಗಿರುವ ಅವರು–ದ್ರೌಪದಿಗೆ ನನ್ನ ಮಕ್ಕಳೆಸಗಿರುವ ಅಪಚಾರವನ್ನು ನೆನೆದು ಕುಪಿತರಾಗಿರುವರು. ಆದುದರಿಂದ ಅವರು ಯುದ್ಧಮಾಡುವಾಗ ನನ್ನ ಮಕ್ಕಳ ವಿಷಯದಲ್ಲಾಗಲೀ, ನನ್ನ ಸೈನಿಕರ ವಿಷಯದಲ್ಲಾಗಲೀ ದಯೆತೋರುವರೆಂದು ಹೇಳುವ ಸಾಧ್ಯತೆಯೇ ಇಲ್ಲ. ವೃಷ್ಣಿಕುಲದ ಯೋಧರು, ಅತುಲಪರಾಕ್ರಮಿಗಳಾದ ಪಾಂಚಾಲರು, ಸತ್ಯವ್ರತನಾದ ವಾಸುದೇವನಿಂದ ರಕ್ಷಿತರಾಗಿ ಯುದ್ಧಭೂಮಿಗೆ ಬರುವ ಪಂಚಪಾಂಡವರು–ಇವರೆಲ್ಲರೂ ಸೇರಿ ನನ್ನ ಅಪಾರಸೇನೆಯನ್ನು ಕ್ಷಣಮಾತ್ರದಲ್ಲಿ ಧ್ವಂಸಮಾಡಿಬಿಡುವರು. ಸಂಜಯ! ನನ್ನ ಪಕ್ಷದಲ್ಲಿರುವ ಅತಿರಥರಾರೂ ಬಲರಾಮ-ಕೃಷ್ಣರಿಂದ ನಿಯಂತ್ರಿಸಲ್ಪಡುವ ಯಾದವಸೈನ್ಯವನ್ನೇ ಎದುರಿಸಲಾರರು. ಅವರ ಮಧ್ಯದಲ್ಲಿ ಅತುಲ ಪರಾಕ್ರಮಿಯಾದ ಭೀಮಸೇನನು ಗದಾಧರನಾಗಿ ಮುಂದೆ ಬರುತ್ತಿರುವಾಗ ನನ್ನ ಸೈನಿಕರು ಅವನಿಗೆದುರಾಗಿ ನಿಲ್ಲುವ ಸಾಧ್ಯತೆಯಿದೆಯೇ? ಸಂಜಯ! ಭೀಮಸೇನನು ಎಂತಹ ವೀರನನ್ನಾದರೂ ಸಂಹಾರಮಾಡುವ ಸಾಹಸವುಳ್ಳವನಾಗಿದ್ದಾನೆ. ಇಷ್ಟು ಮಾತ್ರವಲ್ಲ. ಇವೆಲ್ಲಕ್ಕೂ ಮಿಗಿಲಾಗಿ ಸಿಡಿಲಿಗೆ ಸಮಾನವಾದ ಶಬ್ದವುಳ್ಳ ಗಾಂಡೀವದ ಧ್ವನಿಯು ಕೇಳುತ್ತಿರುತ್ತದೆ. ಭೀಮನ ಗದಾಪ್ರಹಾರವನ್ನೇ ಆಗಲೀ, ಅರ್ಜುನನ ಗಾಂಡೀವ ಧನುಸ್ಸಿನಿಂದ ಚ್ಯುತವಾಗುವ ದಿವ್ಯಬಾಣಗಳನ್ನೇ ಆಗಲೀ–ಎದುರಿಸಿ ನಿಲ್ಲಲು ನನ್ನ ಕಡೆಯ ರಾಜರಿಗೆ ಸಾಧ್ಯವೇ ಇಲ್ಲ. ನಿಜ, ಸಂಜಯ! ದುರ್ಯೋಧನನ ದುರಾಲೋಚನೆಗೆ ಒತ್ತಾಸೆನೀಡಿದ ನಾನು ಇವೆಲ್ಲವನ್ನೂ ಅನುಭವಿಸಿಯೇ

ತೀರಬೇಕಾಗಿದೆ. ಹಿಂದೆ ನನಗೆ ತಿಳಿಯಹೇಳಿದ ವಿದುರಾದಿಗಳ ಹಿತೋಕ್ತಿಗಳನ್ನು ಇಂದು ಸ್ಮರಿಸಬೇಕಾಗಿದೆ. ಆದರೆ ಇಂದು ಅದರ ಸ್ಮರಣೆಯಿಂದ ಯಾವ ಪ್ರಯೋಜನವೂ ಇಲ್ಲ. ಆಗಲೇ ಅವರ ಹಿತೋಕ್ತಿಗಳಂತೆ ನಡೆಯಬೇಕಾಗಿದ್ದಿತು."

"ನಿಜ, ಮಹಾರಾಜ! ಅದೇ ನೀನು ಮಾಡಿದ ಮಹಾಪರಾಧ. ಅಂದು ನಿನ್ನ ಮಗನು ಮಾಡಿದ ಕಾರ್ಯವನ್ನು ತಡೆಯುವ ಸಾಮರ್ಥ್ಯವು ನಿನಗಿದ್ದಿತು. ಆದರೆ ಕೇವಲ ಪುತ್ರಪ್ರೇಮಪರವಶನಾಗಿ ಅವನ ದುಷ್ಕಾರ್ಯವನ್ನು ತಡೆಯಲು ಯತ್ನಿಸಲಿಲ್ಲ. ಕಾಮ್ಯಕವನದಲ್ಲಿ ನಡೆದ ವಿಷಯಗಳೆಲ್ಲವನ್ನೂ ವಿಸ್ತರಿಸಿ ಹೇಳುವೆನು ಕೇಳು ; ಮಹಾರಾಜ! ಪಾಂಡವರು ಪಗಡೆಯಾಟದಲ್ಲಿ ಸೋತು ವನವಾಸಕ್ಕೆ ತೆರಳಿದರೆಂಬ ವಾರ್ತೆಯನ್ನು ಕೇಳಿದೊಡನೆಯೇ ಮಧುಸೂದನನಾದ ಶ್ರೀಕೃಷ್ಣನು, ಪರಿವಾರಸಮೇತನಾಗಿ ಕಾಮ್ಯಕವನಕ್ಕೆ ಬಂದು ಪಾಂಡವರನ್ನು ಸಂತೈಸಿದನು. ಧೃಷ್ಟದ್ಯುಮ್ನನೇ ಮೊದಲಾದ ದ್ರುಪದರಾಜಪುತ್ರರು, ವಿರಾಟರಾಜ, ಧೃಷ್ಟಕೇತು, ಕೇಕಯರಾಜ–ಇವರೇ ಮೊದಲಾದ ರಾಜರೂ ದುಃಖದಲ್ಲಿದ್ದ ಪಾಂಡವರನ್ನು ಸಂತೈಸಲು ಕಾಮ್ಯಕವನಕ್ಕೆ ತೆರಳಿದರು. ಅವರೆಲ್ಲರೂ ಯುಧಿಷ್ಠಿರನನ್ನು ಸಂಧಿಸಿದ ಕಾಲದಲ್ಲಿ ಏನು ಹೇಳಿದರೆಂಬುದನ್ನೂ, ಅವರ ಮಾತಿಗೆ ಪ್ರತ್ಯುತ್ತರವಾಗಿ ಯುಧಿಷ್ಠಿರನು ಹೇಳಿದುದನ್ನೂ ನಾನು ಗೂಢಚಾರರ ಮೂಲಕ ತಿಳಿದುಕೊಂಡಿರುವೆನು. ಆ ವಿಷಯವನ್ನೇ ನಾನು ನಿನಗೂ ಪುನಃ ಹೇಳುವೆನು. ಪಾಂಡವರು ಶ್ರೀಕೃಷ್ಣನನ್ನು ಸಂಧಿಸಿದಾಗ ಯುದ್ಧಸಮಯದಲ್ಲಿ ಅರ್ಜುನನಿಗೆ ಸಾರಥಿಯಾಗುವಂತೆ ಶ್ರೀಕೃಷ್ಣನನ್ನು ಕೇಳಿಕೊಂಡರು. ಶ್ರೀಕೃಷ್ಣನು ಅವರ ಪ್ರಾರ್ಥನೆಗೆ ಉತ್ತರವಾಗಿ 'ತಥಾಸ್ತು' ಎಂದನು. ಪಾಂಡವರ ಅಂದಿನ ಉಡುಗೆ-ತೊಡುಗೆಗಳನ್ನು (ಚೀರ-ಕೃಷ್ಣಾಜಿನಗಳನ್ನು) ನೋಡಿ ಶ್ರೀಕೃಷ್ಣನಿಗೆ ಸ್ವಾಭಾವಿಕವಾಗಿಯೇ ಕೋಪವು ಉಲ್ಬಣಿಸಿತು. ಯುಧಿಷ್ಠಿರನನ್ನು ಕುರಿತು ಶ್ರೀಕೃಷ್ಣನು ಹೀಗೆಂದು ಹೇಳಿದನು :

"ಕುಂತಿಯ ಮಕ್ಕಳ ಯಾವ ಸಂಪತ್ಸಮೃದ್ಧಿಯನ್ನು ನಾನು ರಾಜಸೂಯಯಾಗದ ಕಾಲದಲ್ಲಿ ಇಂದ್ರಪ್ರಸ್ಥದಲ್ಲಿ ಕಂಡೆನೋ–ಆ ಸಂಪ

ತ್ಸಮೃದ್ಧಿಯು ಪ್ರಪಂಚದ ಯಾವ ರಾಜರಿಗೂ ದುರ್ಲಭವಾದುದು. ನಿನ್ನ ಆಜ್ಞೆಗೆ ತಲೆಬಾಗಿ ಅಸಂಖ್ಯಾತರಾದ ರಾಜರು ಆಗಮಿಸಿದ್ದರು. ವಂಗ, ಅಂಗ, ಪೌಂಡ್ರ, ಓಡ್ರ, ಚೋಳ, ದ್ರಾವಿಡ, ಆಂಧ್ರ–ಈ ದೇಶಗಳ ರಾಜರೆಲ್ಲರೂ ಬಂದಿದ್ದರು. ಚಿಕ್ಕ-ಪುಟ್ಟ ದ್ವೀಪಗಳ ಅಧಿಪತಿಗಳನೇಕರು ನಿನ್ನ ಆಹ್ವಾನವನ್ನು ಪುರಸ್ಕರಿಸಿ ಬಂದಿದ್ದರು. ಸಿಂಹಳದ ಅರಸರು, ಬರ್ಬರರು, ಮ್ಲೇಚ್ಛರು ಮತ್ತು ತೀರಪ್ರದೇಶದ ರಾಜ್ಯಗಳ ಅರಸರೂ ಬಂದಿದ್ದರು. ಪಶ್ಚಿಮದಿಕ್ಕಿನ ಸಮುದ್ರತೀರದ ದೇಶಗಳ ಅರಸರು ನೂರಾರು ಸಂಖ್ಯೆಯಲ್ಲಿ ನಿನ್ನ ರಾಜಸೂಯಯಾಗಕ್ಕೆ ಆಗಮಿಸಿದ್ದರು. ಪಹ್ಲವರು, ದರದರು, ಕಿರಾತರು, ಯವನರು, ಶಕರು, ಹಾರಹೂಣರು, ಚೀನೀಯರು, ತುಷಾರರು, ಸೈಂಧವರು, ಜಾಗೂಡರು, ರಾಮಠರು, ಮುಂಡರು, ಸ್ತ್ರೀರಾಜ್ಯದ ಅಧಿಪತಿಗಳು, ತಂಗಣರು, ಕೇಕಯರು, ಮಾಲವರು, ಕಾಶ್ಮೀರಿಗಳು–ಇವರೆಲ್ಲರನ್ನೂ ನಾನು ರಾಜಸೂಯಯಾಗದ ಸಮಯದಲ್ಲಿ ಇಂದ್ರಪ್ರಸ್ಥದಲ್ಲಿ ಕಂಡೆನು. ಅವರೆಲ್ಲರೂ ನಿನ್ನ ಅತುಲಪರಾಕ್ರಮಕ್ಕೆ ಹೆದರಿ ನಿನ್ನ ಅಡಿಯಾಳುಗಳಾಗಿ ಯಾಗಕ್ಕೆ ಬಂದು, ನೀನು ಅವರಿಗೆ ವಹಿಸಿಕೊಟ್ಟಿದ್ದ–ಅತಿಥಿಗಳಿಗೆ ಊಟಕ್ಕೆ ಬಡಿಸುವುದೇ ಮೊದಲಾದ ಸೇವಾಕಾರ್ಯಗಳನ್ನು ವಿನಮ್ರರಾಗಿ ಮಾಡುತ್ತಿದ್ದರು. ಅಂತಹ ಅಪಾರವೈಭವವು ಇಂದು ನಿನಗೆ ಇಲ್ಲವಾಗಿದೆ. ಆ ವೈಭವವು ನಿನ್ನ ವಿಷಯದಲ್ಲಿ ಕ್ಷಣಿಕವಾಗಿ ಹೋಯಿತು. ಆ ವೈಭವವೇ ಇಂದು ನಿನ್ನ ಶತ್ರುಗಳ ಪಾಲಾಗಿದೆ, ಯುಧಿಷ್ಠಿರ! ಇದನ್ನು ನಾನು ಹೇಗೆ ತಾನೇ ಸಹಿಸಲಿ? ಆ ಅಪಾರವೈಭವವನ್ನೂ ಕ್ಷಣಮಾತ್ರದಲ್ಲಿ ನಿನ್ನ ಶತ್ರುವಿನಿಂದ ಅವನ ಪ್ರಾಣಗಳೊಡನೆ ಅಪಹರಿಸಿ ತಂದು ನಿನಗೊಪ್ಪಿಸುತ್ತೇನೆ. ಕುರುಕುಲಾವತಂಸನೇ! ಬಲರಾಮನಿಂದಲೂ, ಭೀಮಸೇನನಿಂದಲೂ, ಅರ್ಜುನ-ನಕುಲ-ಸಹದೇವರಿಂದಲೂ, ಧೃಷ್ಟದ್ಯುಮ್ನ, ಶಿಶುಪಾಲಸುತ, ಅಕ್ರೂರ, ಗದ, ಸಾಂಬ, ಪ್ರದ್ಯುಮ್ನ, ಆಹುಕ–ಇವರಿಂದಲೂ ಕೂಡಿದವನಾಗಿ ನಾನು ಯುದ್ಧಮಾಡಿ ದುರ್ಯೋಧನ-ಕರ್ಣ-ಶಕುನಿ-ದುಃಶಾಸನರನ್ನೂ ಮತ್ತು ಅವರ ಅನುಯಾಯಿಗಳನ್ನೂ ಒಂದೇ ದಿನದಲ್ಲಿ ಧ್ವಂಸಮಾಡಿಬಿಡುವೆನು, ಧರ್ಮಜ! ನೀನೂ ಗತವೈಭವವನ್ನು ಪುನಃ ಶತ್ರುಗಳಿಂದ ಹಿಂದಿರುಗಿ ಪಡೆದು ಹಸ್ತಿನಾಪುರದಲ್ಲಿ ನಿನ್ನ ಅನುಜರೊಡನೆ ಅಬಾಧಿತನಾಗಿ ರಾಜ್ಯವಾಳು."

ಇವೇ ಶ್ರೀಕೃಷ್ಣನಾಡಿದ ಮಾತುಗಳು, ಧೃತರಾಷ್ಟ್ರ! ಆದರೆ ಧರ್ಮಮೂರ್ತಿಯಾದ ಯುಧಿಷ್ಠಿರನು ಸಾಕ್ಷಾತ್ ಶ್ರೀಕೃಷ್ಣನಾಡಿದ ಆ ಮಾತು ಗಳಿಗೂ ಒಡನೆಯೇ ತನ್ನ ಒಪ್ಪಿಗೆಯನ್ನು ಕೊಡಲಿಲ್ಲ. ಧರ್ಮಜನು ತನ್ನ ಸುತ್ತಲೂ ಕುಳಿತಿದ್ದ ರಾಜರ ಮಧ್ಯದಲ್ಲಿ ಶ್ರೀಕೃಷ್ಣನೊಡನೆ ಏನು ಹೇಳಿದನೆಂಬುದನ್ನು ಹೇಳುವೆನು ; ಕೇಳು :

**ಪ್ರತಿಗೃಹ್ಣಾಮಿ ತೇ ವಾಚಮಿಮಾಂ ಸತ್ಯಾಂ ಜನಾರ್ದನ ।**
**ಅಮಿತ್ರಾನ್ಮೇ ಮಹಾಬಾಹೋ ಸಾನುಬನ್ಧಾನ್ಹನಿಷ್ಯಸಿ ॥೩೨॥**

**ವರ್ಷಾತ್ತ್ರಯೋದಶಾದೂರ್ಧ್ವಂ ಸತ್ಯಂ ಮಾಂ ಕುರು ಕೇಶವ ।**
**ಪ್ರತಿಜ್ಞಾತೋ ವನೇ ವಾಸೋ ರಾಜಮಧ್ಯೇ ಮಯಾ ಹ್ಯಯಮ್॥೩೩॥**

"ಜನಾರ್ದನ! ನೀನಾಡಿದ ವಚನವನ್ನು ಸತ್ಯವಚನವೆಂದು ಪರಿಗ್ರಹಿಸುತ್ತೇನೆ. ಆದರೆ, ಆಜಾನುಬಾಹುವೇ! ಹದಿಮೂರು ವರ್ಷಗಳು ಕಳೆದನಂತರ ನಿನ್ನ ಸತ್ಯವಚನವು ಕಾರ್ಯರೂಪಕ್ಕೆ ಬರಲಿ. ನನ್ನ ಶತ್ರುಗಳನ್ನೂ ಮತ್ತು ಅವರ ಅನುಯಾಯಿಗಳನ್ನೂ ಹದಿಮೂರು ವರ್ಷಗಳು ಕಳೆದೊಡನೆಯೇ ಧ್ವಂಸಮಾಡಿ ನನ್ನನ್ನುದ್ಧರಿಸು. ಏಕೆಂದರೆ : ನಾನು ತುಂಬಿದ ಸಭೆಯಲ್ಲಿ, ಪಗಡೆಯಾಟದಲ್ಲಿ ಸೋತೆನಾದರೆ ಹನ್ನೆರಡು ವರ್ಷಗಳು ವನವಾಸವನ್ನೂ, ಒಂದು ವರ್ಷ ಅಜ್ಞಾತವಾಸವನ್ನೂ ಮಾಡುವೆನೆಂದು ಪ್ರತಿಜ್ಞೆಮಾಡಿರುವೆನು. ನನ್ನ ಪ್ರತಿಜ್ಞೆಯು ಸತ್ಯವಾಗುವಂತೆ ಮಾಡು."

ಯುಧಿಷ್ಠಿರನ ಧರ್ಮಯುಕ್ತವಾದ ಮಾತುಗಳನ್ನು ಕೇಳಿ ಧೃಷ್ಟದ್ಯುಮ್ನಾದಿಗಳು ಕುಪಿತನಾಗಿದ್ದ ಕೇಶವನನ್ನು ಸಮಾಧಾನಗೊಳಿಸಿದರು. ಬಹಳ ದುಃಖಿತೆಯಾಗಿದ್ದ ದ್ರೌಪದಿಗೂ ಶ್ರೀಕೃಷ್ಣನ ಸಮ್ಮುಖದಲ್ಲಿ ಹೀಗೆಂದು ಹೇಳಿದರು : "ಶುಭಾಂಗಿ! ನೀನು ಕೋಪಗೊಂಡಿರುವ ಕಾರಣದಿಂದಲೇ ದುರ್ಯೋಧನನು ಹತನಾಗುವುದು ನಿಶ್ಚಯ. ಇದರಲ್ಲಾವ ಸಂಶಯವೂ ಇಲ್ಲ. ನೀನಿನ್ನು ದುಃಖಿಸಬೇಡ. ಮೋಸದ ಪಗಡೆಯಾಟದಲ್ಲಿ

ನಿನ್ನನ್ನೂ ಗೆದ್ದುಕೊಂಡೆವೆಂದು ಯಾರು ನಿನ್ನನ್ನು ಅಪಹಾಸ್ಯ ಮಾಡಿರುವರೋ–ಅವರೆಲ್ಲರೂ ಅದಕ್ಕೆ ತಕ್ಕ ಫಲವನ್ನು ಅನುಭವಿಸಿಯೇ ತೀರುತ್ತಾರೆ. ಭೀಮಾರ್ಜುನರಿಂದ ಹತರಾಗಿ ಬೀಳುವ ಆ ನೀಚರ ಮಾಂಸ ವನ್ನು ಮೃಗ-ಪಕ್ಷಿಗಳು ಕಿತ್ತುತಿನ್ನುವುದನ್ನು ನೀನೇ ನೋಡಲಿರುವೆ. ದ್ರೌಪದಿ! ಈ ವಿಷಯವನ್ನು ನಾವೆಲ್ಲರೂ ಪ್ರತಿಜ್ಞೆಮಾಡಿ ಹೇಳುವೆವು. ನರಿಗಳೂ, ರಣಹದ್ದುಗಳೂ ಆ ನೀಚರ ರಕ್ತವನ್ನು ಪಾನಮಾಡುತ್ತವೆ. ಕೃಷ್ಣೇ! ಅಂದು ನಿನ್ನ ತಲೆಗೂದಲನ್ನು ಹಿಡಿದೆಳೆಯುವುದಕ್ಕೆ ಕಾರಣರಾದ ನೀಚರ ತಲೆಗಳನ್ನು ಎಳೆದಾಡುತ್ತಾ, ಹದ್ದು, ನರಿ ಮೊದಲಾದುವುಗಳು ಅವರ ರಕ್ತವನ್ನು ಕುಡಿಯುತ್ತವೆ. ಮಾಂಸಾಶಿಗಳಾದ ಮೃಗಗಳು ಅವರ ಶರೀರವನ್ನು ಎಳೆದಾಡುತ್ತಾ ಮತ್ತೆ-ಮತ್ತೆ ಕಿತ್ತು ತಿನ್ನುತ್ತವೆ. ಈ ದೃಶ್ಯಗಳನ್ನು ನೀನು ನೋಡಲಿರುವೆ. ನಿನ್ನ ಮನಸ್ಸನ್ನು ಯಾರು ಕಠೋರವಾದ ಮಾತುಗಳಿಂದ ನೋಯಿಸಿರುವರೋ ಮತ್ತು ನಿನ್ನ ಸಂಕಟವನ್ನು ಕಂಡೂ ಕಾಣದಂತೆ ತಲೆ ತಗ್ಗಿಸಿ ಯಾರು ಆ ಸಭಾಮಂಟಪದಲ್ಲಿ ಕುಳಿತಿದ್ದರೋ–ಭೀಷ್ಮ-ದ್ರೋಣಾದಿಗಳೇ ಮೊದಲಾದ ಅವರೆಲ್ಲರೂ ರುಂಡರಹಿತರಾಗಿ ಭೂಮಿಯ ಮೇಲೆ ಬಿದ್ದಾಗ ಅವರ ರಕ್ತವನ್ನು ಭೂದೇವಿಯು ಪಾನ ಮಾಡುವ ಘೋರದೃಶ್ಯವನ್ನೂ ನೀನು ಕಾಣಲಿರುವೆ, ದ್ರೌಪದಿ!”

ಸಂಜಯನು ಮುಂದುವರಿದು ಹೇಳಿದನು :

“ಧೃತರಾಷ್ಟ್ರ! ಇವೇ ಮುಂತಾದ ಅನೇಕ ವಚನಗಳನ್ನು ಹೇಳಿ ಧೃಷ್ಟದ್ಯುಮ್ನಾದಿಗಳು ದ್ರೌಪದಿಯನ್ನು ಸಂತೈಸಿದರು. ಮಹಾರಾಜ! ಅವ ರೆಲ್ಲರೂ ಅಮಿತಪರಾಕ್ರಮಿಗಳೂ, ಧೈರ್ಯಶಾಲಿಗಳೂ ಮತ್ತು ಯುದ್ಧೋ ತ್ಸಾಹಿಗಳೂ ಆಗಿರುವರು. ಹದಿಮೂರನೆಯ ವರ್ಷವು ಕಳೆದೊಡನೆಯೇ ಧರ್ಮಜನಿಂದ ಆಹೂತರಾದ ಅವರೆಲ್ಲರೂ ವಾಸುದೇವನ ನಾಯಕತ್ವದಲ್ಲಿ ಯುದ್ಧಭೂಮಿಗೆ ಬರುವುದಂತೂ ನಿಶ್ಚಯ. ಬಲರಾಮ, ಶ್ರೀಕೃಷ್ಣ, ಧನಂಜಯ, ಪ್ರದ್ಯುಮ್ನ, ಸಾಂಬ, ಯುಯುಧಾನ, ಭೀಮ, ನಕುಲ-ಸಹದೇವರು, ಕೇಕಯರಾಜಪುತ್ರರು, ಪಾಂಚಾಲದರಸರು, ಮತ್ಸ್ಯರಾಜ-

ಇವರೆಲ್ಲರೂ ತಮ್ಮ ಅಪಾರವಾದ ಸೇನೆಗಳೊಡನೆ ರಣಾಂಗಣಕ್ಕೆ ಬಿಜಯ ಮಾಡುವರು. ಬದುಕಿರಲು ಆಶಿಸುವ ಯಾವನು ತಾನೇ–ಕೋಪಗೊಂಡು ತಲೆಯೆತ್ತಿ ನಿಂತಿರುವ ಸಿಂಹಗಳೋಪಾದಿಯಲ್ಲಿರುವ–ಆ ಮಹಾಯೋಧರನ್ನು ಎದುರಿಸಲು ಧೈರ್ಯಮಾಡುವನು?"

"ಸಂಜಯ! ನೀನು ಹೇಳಿದುದೆಲ್ಲವೂ ಶತಾಂಶಸತ್ಯವಾದುದು. ಸಿಂಹಪ್ರಾಯರಾದ ಮತ್ತು ಶ್ರೀಕೃಷ್ಣನೇ ರಕ್ಷಕನಾಗಿ ಉಳ್ಳ ಪಾಂಡವರನ್ನು ಎದುರಿಸುವ ಸಾಮರ್ಥ್ಯವು ಯಾರಿಗೂ ಇಲ್ಲ. ಅಂದು ವಿದುರನು ಹೇಳಿದುದನ್ನು ಇಂದು ಜ್ಞಾಪಿಸಿಕೊಳ್ಳಬೇಕಾಗಿದೆ. 'ದ್ಯೂತದಿಂದ ನೀನು ಪಾಂಡವರನ್ನು ಜಯಿಸಿದರೆ–ಮುಂದೆ ಇದೇ ಕಾರಣದಿಂದಾಗಿ ಮಹಾರಕ್ತಪಾತವಾಗುತ್ತದೆ ಮತ್ತು ತತ್ಫಲವಾಗಿ ಕುರುರಾಜಪುತ್ರರೆಲ್ಲರೂ ವಿನಾಶಹೊಂದುತ್ತಾರೆ'–ಈ ಮಾತುಗಳನ್ನೇ ವಿದುರನು ಬಾರಿ-ಬಾರಿಗೂ ಹೇಳುತ್ತಿದ್ದನು. ದ್ಯೂತವು ನಡೆದುಹೋಯಿತು. ಅವನು ಹೇಳಿರುವ ಫಲಿತಾಂಶಕ್ಕೆ ಕಾಯಬೇಕಾಗಿದೆ. ಪರಿಣಾಮವು ವಿದುರನು ಹೇಳಿದಂತೆಯೇ ನಡೆಯುವುದೆಂಬುದರಲ್ಲಿ ಸಂಶಯವೇ ಇಲ್ಲ. ಪಾಂಡವರ ವನವಾಸದ ಅವಧಿಯು ಕಳೆದೊಡನೆಯೇ ಮಹಾಸಮರವು ಪ್ರಾಪ್ತವಾಗುತ್ತದೆ."

ಧೃತರಾಷ್ಟ್ರನು ಸುದೀರ್ಘವಾಗಿ ನಿಟ್ಟುಸಿರುಬಿಟ್ಟನು. ಧೃತರಾಷ್ಟ್ರನ ಅವಸ್ಥೆಯನ್ನು ಕಂಡು ಸಂಜಯನೂ ಮರುಗುತ್ತಾ ತನ್ನ ಮನೆಗೆ ತೆರಳಿದನು."

೫೧ನೆಯ ಅಧ್ಯಾಯವು ಮುಗಿಯಿತು.

೫೨ನೆಯ ಅಧ್ಯಾಯ — ನಲೋಪಾಖ್ಯಾನಪರ್ವ

## ಭೀಮಸೇನ–ಯುಧಿಷ್ಠಿರರ ಸಂವಾದ : ಬೃಹದಶ್ವರ ಆಗಮನ : ಬೃಹದಶ್ವರಿಂದ ನಲೋಪಾಖ್ಯಾನದ ಪ್ರಸ್ತಾಪ

ಜನಮೇಜಯನು ವೈಶಂಪಾಯನರನ್ನು ಕೇಳುತ್ತಾನೆ :

**ಅಸ್ತ್ರಹೇತೋರ್ಗತೇ ಪಾರ್ಥೇ ಶಕ್ರಲೋಕಂ ಮಹಾತ್ಮನಿ ।**
**ಯುಧಿಷ್ಠಿರಪ್ರಭೃತಯಃ ಕಿಮಕುರ್ವತ ಪಾಣ್ಡವಾಃ ॥೧॥**

"ವೈಶಂಪಾಯನರೇ! ಮಹಾತ್ಮನಾದ ಅರ್ಜುನನು ಮಹಾಸ್ತ್ರಗಳನ್ನು

ಪಡೆಯುವ ಸಲುವಾಗಿ ಇಂದ್ರಲೋಕಕ್ಕೆ ತೆರಳಿದನಂತರ ಯುಧಿಷ್ಠಿರನೂ, ಭೀಮ-ನಕುಲ-ಸಹದೇವರೂ, ದ್ರೌಪದಿಯೂ ಏನು ಮಾಡುತ್ತಿದ್ದರು? ಅರ್ಜುನನು ಅವರೊಡನೆ ಇಲ್ಲದಿರುವಾಗ ಅವರು ಮಾಡಿದ ಕೆಲಸಗಳೆಲ್ಲವನ್ನೂ ದಯೆಯಿಟ್ಟು ತಿಳಿಸಿರಿ."

"ಮಹಾರಾಜ! ಅರ್ಜುನನು ಅಸ್ತ್ರಗಳ ಪ್ರಾಪ್ತಿಗಾಗಿ ಯುಧಿಷ್ಠಿರನ ಅನುಮತಿಯನ್ನು ಪಡೆದು ಇಂದ್ರಲೋಕಕ್ಕೆ ತೆರಳಿದನಂತರ ಯುಧಿಷ್ಠಿರ-ಭೀಮ-ನಕುಲ-ಸಹದೇವರು ದ್ರೌಪದಿಯೊಡನೆ ಕಾಮ್ಯಕವನದಲ್ಲಿಯೇ ವಾಸಮಾಡುತ್ತಿದ್ದರು. ಒಂದಾನೊಂದು ದಿನ ಪಾಂಡವರು ದ್ರೌಪದೀಸಮೇತರಾಗಿ ಆಶ್ರಮದ ಒಂದೆಡೆಯಲ್ಲಿ ಕುಳಿತಿರುವಾಗ, ಅರ್ಜುನನ ನೆನಪು ಬಂದು ಎಲ್ಲರ ಕಣ್ಣುಗಳಲ್ಲಿಯೂ ನೀರೂರಿತು. ಎಲ್ಲರೂ ಅರ್ಜುನನನ್ನು ನೆನೆದು ಬಾರಿ-ಬಾರಿಗೂ ಅವನ ಗುಣಗಾನಮಾಡುತ್ತಾ ಗದ್ಗದಸ್ವರದಿಂದ ದುಃಖಿಸುತ್ತಿದ್ದರು. ರಾಜ್ಯ-ಕೋಶಗಳ ಅಪಹರಣವಾದುದು ಮಾತ್ರವಲ್ಲದೇ ಪ್ರಾಣಸಮನಾದ ಧನಂಜಯನೂ ತಮ್ಮನ್ನಗಲಿ ಬಹಳ ದಿವಸಗಳವರೆಗೆ ಹೊರಟುಹೋದುದರಿಂದ ಅವರು ಅತಿದುಃಖಿತರಾಗಿದ್ದರು. ಆಗ ಭೀಮಸೇನನು ಯುಧಿಷ್ಠಿರನನ್ನು ಕುರಿತು ಹೇಳಿದನು : "ಭರತಕುಲಾವತಂಸನೇ! ಯಾರನ್ನು ಆಶ್ರಯಿಸಿ ನಮ್ಮ ಜೀವಗಳು ಉಳಿದಿವೆಯೋ ಮತ್ತು ಯಾರ ಅವಸಾನವಾಯಿತೆಂದು ತಿಳಿದೊಡನೆಯೇ ಪಾಂಚಾಲರೂ, ಸಾತ್ಯಕಿ-ವಾಸುದೇವಾದಿಗಳೂ ಮತ್ತು ನಾವೂ ಪ್ರಾಣಬಿಡುವೆವೋ–ಅಂತಹ ಅರ್ಜುನನು ನಿನ್ನ ಆಜ್ಞೆಯನ್ನು ಶಿರಸಾವಹಿಸಿ ನಮ್ಮನ್ನಗಲಿ ಹೊರಟುಹೋಗಿರುವನು. ಅವನಿಗೆ ಪ್ರವಾಸದ ಅನೇಕ ಕ್ಲೇಶಗಳ ಚಿಂತೆಯಿದ್ದರೂ ನೀನು ಆಜ್ಞೆಮಾಡಿದೊಡನೆಯೇ ಮಹಾತ್ಮನಾದ ಅರ್ಜುನನು ಮರುಮಾತನಾಡದೇ ಹೊರಟುಹೋದನು. ಇದಕ್ಕಿಂತಲೂ (ಅವನ ಅಗಲಿಕೆಗಿಂತಲೂ) ದುಃಖಕರವಾದ ವಿಷಯವು ಬೇರಾವುದಿದೆ? ಅರ್ಜುನನ ಪರಾಕ್ರಮದ ಅವಲಂಬನೆಯಿಂದಲೇ ನಾವು ನಮ್ಮ ಶತ್ರುಗಳನ್ನು ಯುದ್ಧದಲ್ಲಿ ಪರಾಜಯಗೊಳಿಸಿಬಿಟ್ಟಿರುವೆವೆಂದೂ ಮತ್ತು ಈ ಅಖಂಡಸಾಮ್ರಾಜ್ಯವೂ ನಮ್ಮ ಹಸ್ತಗತವಾಗಿರುವುದೆಂದೂ ಭಾವಿಸಿರುತ್ತೇವೆ. ಮಹಾತ್ಮನಾದ ಅರ್ಜುನನು ನನ್ನನ್ನು ಆಗಾಗ

ತಡೆಯುತ್ತಿದ್ದುದರಿಂದಲೇ ನಾನು ಅಂದು ಸಭಾಮಂದಿರದಲ್ಲಿ ನಮ್ಮನ್ನೂ ಮತ್ತು ದ್ರೌಪದಿಯನ್ನೂ ಕಠಿನವಾದ ಮಾತುಗಳಿಂದ ಬಹಳವಾಗಿ ಹಿಂಸಿಸಿದ ದುರ್ಯೋಧನಾದಿ ದುರುಳರನ್ನು ಪರಲೋಕಕ್ಕೆ ಕಳುಹಿಸದೇ ಸುಮ್ಮನೆ ಕುಳಿತಿದ್ದೆನು. ನಾವು ಬಾಹುಬಲವುಳ್ಳವರಾಗಿದ್ದೇವೆ. ಮೇಲಾಗಿ ವಾಸುದೇವನಿಂದ ರಕ್ಷಿತರಾಗಿದ್ದೇವೆ. ಹೀಗಿದ್ದರೂ ನಮ್ಮ ಹೃದಯಾಂತರಾಳದಲ್ಲಿ ಉತ್ಪನ್ನವಾಗಿರುವ ಕೋಪಾಗ್ನಿಯನ್ನು ಹೃದಯದಲ್ಲಿಯೇ ಅಡಗಿಸಿಕೊಂಡು ಅದರ ತಾಪವನ್ನು ಅನುಭವಿಸುತ್ತಿದ್ದೇವೆ. ಇದಕ್ಕೆ ಕಾರಣನು ನೀನೇ ಆಗಿರುವೆ, ಧರ್ಮಜ! ಶ್ರೀಕೃಷ್ಣನ ಸಹಾಯವನ್ನು ಪಡೆದು ನಾವು ಕರ್ಣಾದಿಗಳನ್ನು ನಮ್ಮ ಬಾಹುಬಲದಿಂದಲೇ ಧ್ವಂಸಮಾಡಿ ನಮ್ಮ ರಾಜ್ಯವನ್ನು ಪುನಃ ಪಡೆದು ಆಳೋಣ. ನಾವು ಮಹಾಪರಾಕ್ರಮಿಗಳಾಗಿದ್ದರೂ ನೀನಾಡಿದ, ದೋಷಯುಕ್ತವಾದ ದ್ಯೂತದ ಕಾರಣದಿಂದಾಗಿ ಮಹಾವಿಪತ್ತಿಗೆ ಗುರಿಯಾದೆವು. ಮೂರ್ಖರಾದ ದುರ್ಯೋಧನಾದಿಗಳು ಸಾಮಂತರಾಜರಿಂದ ಕಪ್ಪ-ಕಾಣಿಕೆಗಳನ್ನು ತೆಗೆದುಕೊಂಡು ಹೆಚ್ಚು ಬಲಿಷ್ಠರಾದರು. ಮಹಾರಾಜ! ನಾನು ಹಿಂದೊಮ್ಮೆ ಹೇಳಿದಂತೆ :

**ಕ್ಷಾತ್ರಂ ಧರ್ಮಂ ಮಹಾರಾಜ ತ್ವಮವೇಕ್ಷಿತುಮರ್ಹಸಿ ।**
**ನ ಹಿ ಧರ್ಮೋ ಮಹಾರಾಜ ಕ್ಷತ್ರಿಯಸ್ಯ ವನಾಶ್ರಯಃ ॥೧೪॥**

ನೀನು ಕ್ಷಾತ್ರಧರ್ಮಾನುಸಾರವಾಗಿ ವರ್ತಿಸುವುದು ಯುಕ್ತವಾಗಿದೆ. ತಪಸ್ವಿಗಳಂತೆ ಅರಣ್ಯದಲ್ಲಿ ಕಾಲಕಳೆಯುವುದು ಕ್ಷತ್ರಿಯರಿಗೆ ಹೇಳಿರುವ ಧರ್ಮವಲ್ಲ.

**ರಾಜ್ಯಮೇವ ಪರಂ ಧರ್ಮಂ ಕ್ಷತ್ರಿಯಸ್ಯ ವಿದುರ್ಬುಧಾಃ ।**
**ಸ ಕ್ಷತ್ರಧರ್ಮವಿದ್ರಾಜಾ ಮಾ ಧರ್ಮಾನ್ನೀನಶಃ ಪಥಃ ॥೧೫॥**

ಕ್ಷತ್ರಿಯರಿಗೆ ರಾಜ್ಯಪರಿಪಾಲನೆಯೇ ಮುಖ್ಯಧರ್ಮವೆಂದು ಹಿರಿಯರು ಹೇಳುತ್ತಾರೆ. ಅಣ್ಣ! ನಿನಗೆ ಕ್ಷತ್ರಿಯಧರ್ಮವು ತಿಳಿಯದೇ ಇಲ್ಲ. ನೀನು ಕ್ಷಾತ್ರಧರ್ಮವನ್ನು ಸಂಪೂರ್ಣವಾಗಿ ತಿಳಿದವನಾಗಿರುವೆ. ಆದುದರಿಂದ ಕ್ಷಾತ್ರಧರ್ಮಕ್ಕೆ ವಿರುದ್ಧವಾಗಿ ಖಂಡಿತವಾಗಿಯೂ ವರ್ತಿಸಬೇಡ. ಧರ್ಮ

ಬಾಹಿರನಾಗಬೇಡ. ತಪಸ್ಸುಮಾಡಲು ಕಾಡಿಗೆ ಹೋಗಿರುವ ಅರ್ಜುನನನ್ನು ಕರೆಯಿಸಿ, ಶ್ರೀಕೃಷ್ಣನನ್ನೂ ಕರೆತರಿಸಿ ಅವರ ಸಹಾಯದಿಂದ ಅಧರ್ಮಿಗಳಾದ ದುಷ್ಟರಾದ ಧೃತರಾಷ್ಟ್ರನ ಮಕ್ಕಳನ್ನು ಹನ್ನೆರಡು ವರ್ಷಗಳು ಕಳೆಯುವ ಮೊದಲೇ ಧ್ವಂಸಮಾಡೋಣ. ದುರ್ಯೋಧನನು ಸೈನ್ಯಸಮೇತನಾಗಿ ಬಂದರೇನು ಮಾಡುವುದೆಂದು ನೀನು ಶಂಕಿಸಬಹುದು. ದುರ್ಯೋಧನನ ಅಪಾರಸೈನ್ಯವೇ ಎದುರಾಗಿ ಬಂದರೂ ಕ್ಷಣಮಾತ್ರದಲ್ಲಿ ನನ್ನೀ ಬಾಹುಬಲ ದಿಂದಲೇ ಅವರೆಲ್ಲರನ್ನೂ ಧ್ವಂಸಮಾಡಿಬಿಡುವೆನು. ಧೃತರಾಷ್ಟ್ರನ ನೂರು ಮಕ್ಕಳನ್ನೂ ಕರ್ಣ-ಸೌಬಲರ ಸಮೇತವಾಗಿ ಕೊಂದುಬಿಡುತ್ತೇನೆ. ಅವನಿವ ನೆಂಬ ತಾರತಮ್ಯವೇ ಇಲ್ಲ, ಧರ್ಮಜ! ಯುದ್ಧದಲ್ಲಿ ನನ್ನೆದುರಾಗಿ ಯಾರೇ ಬರಲಿ ; ಅವರೆಲ್ಲರನ್ನೂ ಯಮಾಲಯಕ್ಕೆ ಕಳುಹಿಸುವುದು ನಿಶ್ಚಯ. ದ್ಯೂತದ ನಿಯಮದಂತೆ ವನವಾಸಮಾಡಬೇಕೆಂಬುದೇ ನಿನ್ನ ಇಚ್ಛೆಯಾದ ಪಕ್ಷದಲ್ಲಿ ನಮ್ಮ ಶತ್ರುಗಳ ಸಂಹಾರವಾದನಂತರ ನೀನು ಪುನಃ ಕಾಡಿಗೆ ಹೋಗಿ ಪ್ರತಿಜ್ಞಾತವಾಗಿರುವ ಹದಿಮೂರು ವರ್ಷಗಳನ್ನು ಅಲ್ಲಿಯೇ ಕಳೆದು ಅನಂತರ ಕಾಡಿನಿಂದ ಹಸ್ತಿನೆಗೆ ಬರಬಹುದಾಗಿದೆ. ಹೀಗೆ ಮಾಡುವುದರಿಂದ ನಿನಗೆ ಯಾವ ವಿಧವಾದ ದೋಷವೂ ಉಂಟಾಗುವುದಿಲ್ಲ. ಒಂದು ವೇಳೆ ಹೀಗೆ ಮಾಡುವುದರಿಂದಲೂ ಪ್ರತಿಜ್ಞಾಭಂಗವೆಂಬ ದೋಷ ವುಂಟಾಗುವುದೆಂದು ನೀನು ಭ್ರಾಂತಿಪಡುವುದಾದರೆ ಅನೇಕಾನೇಕ ಯಜ್ಞ-ಯಾಗಾದಿಗಳನ್ನು ಮಾಡಿ ಪಾಪವನ್ನು ಪರಿಹಾರಮಾಡಿಕೊಂಡು ಸ್ವರ್ಗವನ್ನು ಸೇರೋಣ.

**ಏವಮೇತದ್ಭವೇದ್ರಾಜನ್ಯದಿ ರಾಜಾ ನ ಬಾಲಿಶಃ ।**
**ಅಸ್ಮಾಕಂ ದೀರ್ಘಸೂತ್ರಃ ಸ್ಯಾದ್ಭವಾನ್ಧರ್ಮಪರಾಯಣಃ ॥೨೦॥**

ಮಹಾರಾಜ! ನಮ್ಮ ರಾಜನಾದ, ಧರ್ಮಪರಾಯಣನಾದ ನೀನು ಮೂರ್ಖನಾಗಿರದಿದ್ದರೆ ಅಥವಾ ವಿಳಂಬಮಾಡದೆ ಕಾರ್ಯಮಾಡುವವನಾಗಿ ದ್ದರೆ ಇದು ಹೀಗೆಯೇ ಆಗುವುದು. ಇದರಲ್ಲಿ ಸಂಶಯವಿಲ್ಲ.

ಮೇಲಾಗಿ, ಅಣ್ಣ!

**ನಿಕೃತ್ಯಾ ನಿಕೃತಿಪ್ರಜ್ಞಾ ಹನ್ತವ್ಯಾ ಇತಿ ನಿಶ್ಚಯಃ ।**
**ನ ಹಿ ನೈಕೃತಿಕಂ ಹತ್ವಾ ನಿಕೃತ್ಯಾ ಪಾಪಮುಚ್ಯತೇ ॥೨೨॥**

ಮೋಸದ ಬುದ್ಧಿಯವನನ್ನು ಮೋಸದ ಮಾರ್ಗದಿಂದಲೇ ಧ್ವಂಸ ಮಾಡಬೇಕೆಂಬುದೇ ರಾಜನೀತಿಜ್ಞರ ಸಿದ್ಧಾಂತ. ಮೋಸಗಾರನನ್ನು ಮೋಸದಿಂದಲೇ ಕೊಲ್ಲಬೇಕು. ಮೋಸಗಾರನನ್ನು ಮೋಸದಿಂದ ಕೊಲ್ಲುವುದು ಪಾಪಹೇತುವಾಗುವುದಿಲ್ಲ.

**ತಥಾ ಭಾರತ ಧರ್ಮೇಷು ಧರ್ಮಜ್ಞೈರಿಹ ದೃಶ್ಯತೇ ।**
**ಅಹೋರಾತ್ರಂ ಮಹಾರಾಜ ತುಲ್ಯಂ ಸಂವತ್ಸರೇಣ ಹ ॥೨೩॥**

**ತಥೈವ ವೇದವಚನಂ ಶ್ರೂಯತೇ ನಿತ್ಯದಾ ವಿಭೋ ।**
**ಸಂವತ್ಸರೋ ಮಹಾರಾಜ ಪೂರ್ಣೋ ಭವತಿ ಕೃಚ್ಛ್ರತಃ ॥೨೪॥**

ಆಪತ್ಕಾಲಗಳಲ್ಲಿ ಒಂದು ದಿನವು ಒಂದು ವರ್ಷಕ್ಕೆ ಸಮಾನವಾಗುವುದೆಂದು ಧರ್ಮಜ್ಞರು ಹೇಳುತ್ತಾರೆ. ಅದಕ್ಕೆ ಅನುಸಾರವಾಗಿ ವೇದವಚನವೂ ಇದೆ. ('ವಿಶ್ವಸೃಜಾಗ್ಂ ಸಹಸ್ರಸಂವತ್ಸರಂ' ಎಂಬಲ್ಲಿ ಸಂವತ್ಸರ ಶಬ್ದವು ದಿನಪರ್ಯಾಯವಾಗಿದೆ. ಮೂವತ್ತು ಪ್ರಾಜಾಪತ್ಯಕೃಚ್ಛ್ರಗಳನ್ನು ಮಾಡಿದರೆ ಒಂದು ವರ್ಷ ಪೂರ್ಣವಾದಂತಾಗುತ್ತದೆ. ಮಿತ್ರವಿಂದೇಷ್ಟಿ, ಪವಿತ್ರೇಷ್ಟಿ, ಮೃಗಾರೇಷ್ಟಿ–ಮುಂತಾದ ಇಷ್ಟಿಗಳಲ್ಲಿ ಒಂದು ಇಷ್ಟಿಯನ್ನು ಹತ್ತು ಪ್ರಾಜಾಪತ್ಯಕೃಚ್ಛ್ರಗಳ ಪ್ರತ್ಯಾಮ್ನಾಯವಾಗಿ ಮಾಡಬಹುದೆಂದು ಪೂರ್ವ ಮೀಮಾಂಸಾಶಾಸ್ತ್ರವು ಸಾರುತ್ತದೆ. ಅರ್ಥಾತ್ ಇಂತಹ ಮೂರು ಇಷ್ಟಿಗಳನ್ನು ಮಾಡಿದರೆ ಒಂದು ವರ್ಷ ಕಳೆದಂತಾಗುತ್ತದೆ. ಮೂವತ್ತೊಂಬತ್ತು ಇಷ್ಟಿಗಳನ್ನು ಪೂರ್ಣಮಾಡಿದರೆ ಹದಿಮೂರು ವರ್ಷಗಳನ್ನೂ ಪೂರ್ಣ ಮಾಡಿದಂತಾಗುತ್ತದೆ.)

ನೀನು ವೇದಪ್ರಾಮಾಣ್ಯವನ್ನು ಒಪ್ಪಿಕೊಳ್ಳುವುದಾದರೆ ನಾನು ಹಿಂದೆ ಹೇಳಿದ ರೀತಿಯಲ್ಲಿ ದಿನಗಳನ್ನು ಸಂವತ್ಸರಗಳನ್ನಾಗಿ ಭಾವಿಸು. ಅಥವಾ ಹದಿಮೂರು ವರ್ಷಗಳ ಅವಧಿಯಲ್ಲಿ ಮಾಡಬೇಕಾದ ಇಷ್ಟಿಗಳೆಲ್ಲವನ್ನೂ ಕೆಲವು ದಿನಗಳಲ್ಲಿಯೇ ಮುಗಿಸಿ ಪ್ರತಿಜ್ಞಾತವಾದ ಅವಧಿಯು ಮುಗಿಯಿತೆಂದಾದರೂ ನಿರ್ಧರಿಸು. ನನ್ನ ಅಭಿಪ್ರಾಯದಲ್ಲಿ ದುರ್ಯೋಧನನ ಮತ್ತು ಅವನ ಅನುಯಾಯಿಗಳ ಸಂಹಾರಕ್ಕೆ ಇದು ಸಕಾಲವಾಗಿರುವುದು. ಹಾಗಲ್ಲದೆ ನೀನು ಹೇಳುವಂತೆಯೇ ನಾವು ಹದಿಮೂರು ವರ್ಷಗಳನ್ನೂ

ಕಾಡಿನಲ್ಲಿಯೇ ಕಳೆಯುತ್ತಾ ಕುಳಿತರೆ–ಆ ವೇಳೆಗೆ ದುರ್ಯೋಧನನು ಅಖಂಡ ಸಾಮ್ರಾಜ್ಯವನ್ನೂ ತನ್ನ ಸ್ವಾಧೀನಕ್ಕೆ ತೆಗೆದುಕೊಂಡು ಮಹಾಬಲಿಷ್ಠನಾಗಿ ಬಿಡುವನು, ಯುಧಿಷ್ಠಿರ! ಈ ಉಪದ್ರವಗಳೆಲ್ಲವೂ ನಿನ್ನ ಜೂಜು ಕೋರತನದಿಂದಲೇ ಉಂಟಾದುವಲ್ಲವೇ? ಹನ್ನೆರಡು ವರ್ಷಗಳ ವನವಾಸದ ಜೊತೆಗೆ ಒಂದು ವರ್ಷ ಅಜ್ಞಾತವಾಸಕ್ಕೂ ನೀನು ಒಪ್ಪಿರುವುದರಿಂದ ನಾವೀಗ ಪೂರ್ಣವಾಗಿ ವಿನಾಶದ ಹಾದಿಯಲ್ಲಿಯೇ ಇರುತ್ತೇವೆ. ಈ ಪ್ರಪಂಚದಲ್ಲಿ ದುರ್ಯೋಧನನು ಗೂಢಚಾರರ ಮೂಲಕವಾಗಿ ನಮ್ಮ ಇರುವಿಕೆಯನ್ನು ತಿಳಿಯಲು ಸಾಧ್ಯವಾಗದಿರುವ, ಸುರಕ್ಷಿತವಾಗಿ ನಾವು ವಾಸಮಾಡಬಹುದಾದ ಯಾವ ದೇಶವನ್ನೂ ನಾನು ಕಾಣೆನು.

ನಮ್ಮನ್ನು ಕಂಡುಹಿಡಿಯುವ ಸಲುವಾಗಿಯೇ ಅವನು ಅನೇಕಾನೇಕ ಗೂಢಚಾರರನ್ನು ಎಲ್ಲ ದೇಶಗಳಿಗೂ ಕಳುಹಿಸುತ್ತಾನೆ. ಗೂಢಚಾರರ ಮೂಲಕ ಅಜ್ಞಾತವಾಸದಲ್ಲಿರುವ ನಮ್ಮನ್ನು ಕಂಡುಹಿಡಿದು ಪ್ರತಿಜ್ಞಾಭಂಗವಾಯಿತೆಂಬ ನೆಪದಿಂದ ಪುನಃ ನಮ್ಮನ್ನು ಕಾಡಿಗಟ್ಟುತ್ತಾನೆ. ಒಂದು ವೇಳೆ ನಾವು ಉಪಾಯಾಂತರಗಳಿಂದ ಅವನ ಗೂಢಚಾರರಿಗೆ ಸಿಕ್ಕದೇ ಕ್ಲಿಷ್ಟತರವಾದ ಆ ಒಂದು ವರ್ಷವನ್ನೂ ಕಳೆಯುವೆವೆಂದೇ ಭಾವಿಸೋಣ. ಅನಂತರವಾದರೂ ರಾಜ್ಯವು ಸಿಕ್ಕುವುದೆಂದು ಭಾವಿಸಿರುವೆಯಾ? ಆ ದುಷ್ಟ ದುರ್ಯೋಧನನು ಪುನಃ ನಿನ್ನನ್ನು ದ್ಯೂತಕ್ಕೆ ಆಹ್ವಾನಿಸುತ್ತಾನೆ. ಜೂಜಾಟಕ್ಕೆ ಆಹ್ವಾನಿಸಿದರೆ ನೀನು ಖಂಡಿತವಾಗಿಯೂ ಆಹ್ವಾನವನ್ನು ತಿರಸ್ಕರಿಸುವವನಲ್ಲ. ಅವನೊಡನೆ ಆಟಕ್ಕೆ ಹೋಗಿಯೇ ಹೋಗುವೆ. ಅವನು (ಶಕುನಿಯು) ಪಗಡೆಯಾಟದಲ್ಲಿ ನಿಷ್ಣಾತನು. ಆದುದರಿಂದ ನೀನು ಪೂರ್ವಾಪರವಿವೇಚನೆಯೇ ಇಲ್ಲದೇ ಪುನಃ ಎಲ್ಲವನ್ನೂ ಸೋಲುವುದೂ ನಿಶ್ಚಯ. ಪುನಃ ನಮಗೆ ಈ ವನವಾಸವೂ ತಪ್ಪಿದ್ದಲ್ಲ.

**ಯದ್ಯಸ್ಮಾನ್ಸು ಮಹಾರಾಜ ಕೃಪಣಾನ್ಕರ್ತುಮರ್ಹಸಿ ।**
**ಯಾವಜ್ಜೀವಮವೇಕ್ಷಸ್ವ ವೇದಧರ್ಮಾಂಶ್ಚ ಕೃತ್ಸ್ನಶಃ ॥೩೩॥**

**ನಿಕೃತ್ಯಾ ನಿಕೃತಿಪ್ರಜ್ಞೋ ಹನ್ತವ್ಯ ಇತಿ ನಿಶ್ಚಯಃ ।**
**ಅನುಜ್ಞಾತಸ್ತ್ವಯಾ ಗತ್ವಾ ಯಾವಚ್ಛಕ್ತಿ ಸುಯೋಧನಮ್ ॥೩೪॥**

**ಯಥೈವ ಕಕ್ಷಮುತ್ಸೃಷ್ಟೋ ದಹೇದನಿಲಸಾರಥಿಃ ।**
**ಹನಿಷ್ಯಾಮಿ ತಥಾ ಮನ್ದಮನುಜಾನಾತು ಮೇ ಭವಾನ್ ॥೩೫॥**

ಮಹಾರಾಜ! ಒಂದು ವೇಳೆ ನಿನಗೆ ವಿಧೇಯರಾಗಿರುವ ನಮ್ಮನ್ನು ಆಜೀವಪರ್ಯಂತವಾಗಿ ದೈನ್ಯಾವಸ್ಥೆಯಲ್ಲಿಯೇ ಇಡುವುದು ತಕ್ಕುದಾದರೆ ಹಾಗೆಯೇ ಮಾಡು. ನೀನೂ ವೇದವಿಹಿತವಾದ ಧರ್ಮಾಚರಣೆಯನ್ನೇ ಮಾಡು. ಆದರೆ ಪ್ರಾಜ್ಞನಾದವನು ಮೋಸಗಾರನನ್ನು ಮೋಸದಿಂದಲೇ ಕೊಲ್ಲಬೇಕೆಂಬುದು–ನೀತಿಶಾಸ್ತ್ರದ ವಚನವಾಗಿದೆ. ಒಂದು ವೇಳೆ ನೀನು ಬಾರದಿದ್ದರೂ ಚಿಂತೆಯಿಲ್ಲ. ನನಗೊಬ್ಬನಿಗಾದರೂ ಹಸ್ತಿನಾಪುರಕ್ಕೆ ಹೋಗಲು ಅನುಮತಿಯನ್ನಿತ್ತಲ್ಲಿ, ಈ ಕೂಡಲೇ ಅಲ್ಲಿಗೆ ಹೋಗಿ–ಅಗ್ನಿಯು ಹುಲ್ಲಿನ ರಾಶಿಯನ್ನು ದಹಿಸಿಬಿಡುವಂತೆ–ದುರ್ಯೋಧನನನ್ನೂ ಮತ್ತು ಅವನ ಅನುಯಾಯಿಗಳನ್ನೂ ಸಂಪೂರ್ಣಬಲಪ್ರಯೋಗಮಾಡಿ ಸಂಹರಿಸಿ ಬಿಡುತ್ತೇನೆ. ಆದುದರಿಂದ ನನಗೊಬ್ಬನಿಗಾದರೂ ಶತ್ರುಸಂಹಾರಕ್ಕೆ ಅನುಮತಿಯನ್ನು ನೀಡುವುದು ಯುಕ್ತವಾಗಿದೆ.”

ಕುಪಿತನಾಗಿದ್ದ ಭೀಮಸೇನನನ್ನು ಯುಧಿಷ್ಠಿರನು ಬಾಚಿ ತಬ್ಬಿಕೊಂಡು ನೆತ್ತಿಯನ್ನು ಆಘ್ರಾಣಿಸಿ ಸಂತೈಸುತ್ತಾ ಹೇಳಿದನು :

**ಅಸಂಶಯಂ ಮಹಾಬಾಹೋ ಹನಿಷ್ಯಸಿ ಸುಯೋಧನಮ್ ।**
**ವರ್ಷಾತ್ತ್ರಯೋದಶಾದೂರ್ಧ್ವಂ ಸಹ ಗಾಣ್ಡೀವಧನ್ವನಾ ॥೩೭॥**

**ಯತ್ತ್ವಮಾಭಾಷಸೇ ಪಾರ್ಥ ಪ್ರಾಪ್ತಃ ಕಾಲ ಇತಿ ಪ್ರಭೋ ।**
**ಅನೃತಂ ನೋತ್ಸಹೇ ವಕ್ತುಂ ನ ಹ್ಯೇತನ್ಮಮ ವಿದ್ಯತೇ ॥೩೮॥**

**ಅನ್ತರೇಣಾಪಿ ಕೌನ್ತೇಯ ನಿಕೃತಿಂ ಪಾಪನಿಶ್ಚಯಮ್ ।**
**ಹನ್ತಾ ತ್ವಮಸಿ ದುರ್ಧರ್ಷ ಸಾನುಬನ್ಧಂ ಸುಯೋಧನಮ್ ॥೩೯॥**

“ಅನುಮತಿಯನ್ನು ಕೊಡುವೆನು, ಭೀಮಸೇನ! ಹದಿಮೂರು ವರ್ಷಗಳು ಕಳೆದೊಡನೆಯೇ ನೀನು ಗಾಂಡೀವಧನುರ್ಧರನಾದ ಅರ್ಜುನನ ಸಹಾಯವನ್ನು ಪಡೆದು ದುರ್ಯೋಧನನನ್ನು ಸಂಹರಿಸುವೆಯಂತೆ. ಸುಯೋಧನನ ವಧೆಗೆ ಕಾಲವು ಸನ್ನಿಹಿತವಾಗಿದೆಯೆಂದು ನೀನು ಹೇಳುವ ಮಾತನ್ನು ನಾನು ಒಪ್ಪಲಾರೆನು. ನಾನು ಸುಳ್ಳುಹೇಳಲಾರೆನು. ಭೀಮಸೇನ!

ಸುಳ್ಳೆಂಬುದು ನನ್ನಲಿಲ್ಲ. ಮೋಸಕ್ಕೆ ಆಶ್ರಯವನ್ನೇ ಕೊಡದೆ ಮೋಸಗಾರನನ್ನೂ ನ್ಯಾಯರೀತಿಯಲ್ಲಿಯೇ ಸಂಹರಿಸುವ ಕಾಲವು ಕೂಡ ಸನ್ನಿಹಿತವಾಗುವುದು. ಆ ಸಮಯದಲ್ಲಿ ಪರಿವಾರಸಮೇತನಾದ ದುರ್ಯೋಧನನನ್ನು ನೀನೇ ಕೊಲ್ಲುವೆಯಂತೆ. ಅವಸರಪಡಬೇಡ."

ಯುಧಿಷ್ಠಿರನು ಭೀಮಸೇನನಿಗೆ ಹೀಗೆ ಹೇಳುತ್ತಿರುವಾಗ–ಮಹರ್ಷಿಗಳಾದ ಬೃಹದಶ್ವರು ಯುಧಿಷ್ಠಿರನ ಆಶ್ರಮಕ್ಕೆ ಆಗಮಿಸಿದರು. ಮಹರ್ಷಿಗಳು ಬಂದೊಡನೆಯೇ ಯುಧಿಷ್ಠಿರನು ಮುಂದೆ ಹೋಗಿ, ಸ್ವಾಗತಿಸಿ, ಅರ್ಘ್ಯ-ಪಾದ್ಯ-ಮಧುಪರ್ಕಾದಿಗಳನ್ನಿತ್ತು ಸತ್ಕರಿಸಿದನು. ಬೃಹದಶ್ವರು ಯುಧಿಷ್ಠಿರನ ಸತ್ಕಾರವನ್ನು ಸ್ವೀಕರಿಸಿ, ಸ್ವಲ್ಪಕಾಲ ವಿಶ್ರಮಿಸಿಕೊಂಡು ಸುಖಾಸೀನರಾಗಿರಲಾಗಿ, ಯುಧಿಷ್ಠಿರನು ಅವರ ಸಮೀಪದಲ್ಲಿ ಕುಳಿತು ಅವರನ್ನೇ ದಿಟ್ಟಿಸಿ ನೋಡುತ್ತಾ ದೈನ್ಯಪೂರಿತವಾದ ಧ್ವನಿಯಿಂದ ಕೂಡಿದವನಾಗಿ ಹೇಳಿದನು :

"ಮಹರ್ಷಿಗಳೇ! ಜೂಜಾಟದಲ್ಲಿ ಕುಶಲರಾದವರಿಂದ ಜೂಜಾಟಕ್ಕೆ ಆಹೂತನಾದ ನಾನು ಆಟದಲ್ಲಿ ನನ್ನ ಯಾವದ್ವಿಶಿಷ್ಟವಾದ ಸಂಪತ್ತನ್ನೂ ಕಳೆದುಕೊಂಡೆನು. ನನಗೆ ಪಗಡೆಯಾಟದಲ್ಲಿ ಪರಿಶ್ರಮವಿರಲಿಲ್ಲ ಮತ್ತು ಮೋಸವೆಂದರೆ ಏನೆಂಬುದೂ ನನಗೆ ತಿಳಿಯದು. ಇಂತಹ ನನ್ನನ್ನು ಪಾಪಿಷ್ಠರಾದ ಕೌರವರು ಮೋಸದ ಮಾರ್ಗವನ್ನವಲಂಬಿಸಿ ಸೋಲಿಸಿದರು. ಇಷ್ಟು ಮಾತ್ರವಲ್ಲ. ಅವರು ನನಗೆ ಪ್ರಾಣಗಳಿಗಿಂತಲೂ ಹೆಚ್ಚು ಪ್ರಿಯಳಾದ ನನ್ನ ಭಾರ್ಯೆಯಾದ ದ್ರೌಪದಿಯನ್ನು ಸಭಾಂಗಣಕ್ಕೆ ಸೆಳೆದು ತಂದರು. ಎರಡನೆಯ ಬಾರಿಯೂ ನನ್ನನ್ನು ಸೋಲಿಸಿ ದುಸ್ಸಹವಾದ ಈ ಅರಣ್ಯವಾಸಕ್ಕೆ ಚೀರ-ಕೃಷ್ಣಾಜಿನಗಳೊಡನೆ ಕಳುಹಿಸಿರುವರು. ಈ ಸಮಯದಲ್ಲಿ ನಾನು ನಿಶ್ಚಯವಾಗಿಯೂ ಬಹುಸಂಕಟದಿಂದ ಜೀವನವನ್ನು ನಿರ್ವಹಿಸುತ್ತಿದ್ದೇನೆ. ಆ ದುರುಳರು ಸಭಾಮಧ್ಯದಲ್ಲಿ ಆಡಿದ ಕರ್ಣಕಠೋರವಾದ ಮಾತುಗಳನ್ನೂ, ನಮ್ಮ ಕಷ್ಟಗಳನ್ನೂ ಕಂಡು ದುಃಖಿತರಾದ ಸತ್ಪುರುಷರು ನಮ್ಮ ವಿಷಯವಾಗಿ ಆಡುವ ಮಾತುಗಳೆಲ್ಲವನ್ನೂ ಸ್ಮರಿಸುತ್ತಿರುತ್ತೇನೆ. ಇವೆಲ್ಲವನ್ನೂ ಸ್ಮರಿಸುತ್ತಾ ಅನೇಕ ರಾತ್ರಿಗಳನ್ನು ನಿದ್ದೆಯಿಲ್ಲದೆಯೇ ಕಳೆಯುತ್ತಿದ್ದೇನೆ.

ನಮ್ಮೆಲ್ಲರ ಪ್ರಾಣಗಳು ಯಾವನ ಆಶ್ರಯವನ್ನೇ ಅವಲಂಬಿಸಿ ಉಳಿದಿವೆಯೋ–ಅಂತಹ ಅರ್ಜುನನ ದೀರ್ಘಕಾಲದ ವಿಯೋಗದಿಂದಾಗಿ ನಾನು ಪ್ರಾಣರಹಿತನಂತೆಯೇ ಆಗಿರುತ್ತೇನೆ. ಮಹಾನುಭಾವರೇ! ಮಧುರಭಾಷಿಯಾದ, ದಯಾಳುವಾದ, ಜಾಗರೂಕನಾದ ಅರ್ಜುನನು ಸಕಲಾಸ್ತ್ರಗಳನ್ನೂ ಪಡೆದು ಬರುವುದನ್ನು ನಾನೆಂದು ನೋಡುವೆನು? ಮಹರ್ಷಿಗಳೇ! ನಿಶ್ಚಯವಾಗಿ ಹೇಳಿರಿ. ತಾವು ತ್ರಿಕಾಲಜ್ಞರಾಗಿರುವಿರಿ. ಈ ವಿಶ್ವದಲ್ಲಿ ನನ್ನಂತಹ ದುರದೃಷ್ಟಶಾಲಿಯಾದ ರಾಜನ ವಿಷಯವಾಗಿ ನೀವು ಯಾವುದಾದರೂ ಇತಿಹಾಸಗಳನ್ನು ಕೇಳಿರುವಿರಾ? ನನ್ನಷ್ಟು ದುಃಖಿತನಾದ ಮನುಷ್ಯನು ಬೇರೊಬ್ಬನಿಲ್ಲವೆಂದೇ ನನ್ನ ನಿಶ್ಚಯವಾಗಿದೆ.”

“ಯುಧಿಷ್ಠಿರ! ನಿನಗಿಂತಲೂ ಹೆಚ್ಚು ಸಂಕಟಕ್ಕೊಳಗಾಗಿರುವ ಮನುಷ್ಯರೇ ಇಲ್ಲವೆಂದು ಹೇಳಿದೆಯಲ್ಲವೇ? ನಾನು ಹೇಳಲಿರುವ ಇತಿಹಾಸವನ್ನು ನೀನು ಕೇಳಿದೆಯಾದರೆ ನಿನಗಿಂತಲೂ ಹೆಚ್ಚು ಕಷ್ಟಗಳನ್ನು ಅನುಭವಿಸಿದ ರಾಜರೂ ಇದ್ದಾರೆಂಬ ಅರಿವು ನಿನಗುಂಟಾಗುವುದು.”

“ಮಹರ್ಷಿಗಳೇ! ದಯೆಯಿಟ್ಟು ಹೇಳಿರಿ. ನನಗಿಂತಲೂ ಹೆಚ್ಚು ಕಷ್ಟಗಳನ್ನು ಅನುಭವಿಸಿದ ರಾಜನ ಇತಿಹಾಸವನ್ನು ಕೇಳಬೇಕೆಂಬ ಕುತೂಹಲವು ನನಗೂ ಇದೆ.”

“ಯುಧಿಷ್ಠಿರ! ನಾನು ಹೇಳಲಿರುವ ಈ ಕಥೆಯನ್ನು ನಿನ್ನ ಅನುಜರಿಂದೊಡಗೂಡಿ ಕೇಳುವವನಾಗು. ನಿನಗಿಂತಲೂ ಹೆಚ್ಚು ಸಂಕಟಕ್ಕೀಡಾದ ರಾಜನೊಬ್ಬನ ಇತಿಹಾಸವನ್ನು ಹೇಳುತ್ತೇನೆ”–ಎಂದು ಹೇಳಿ ಬೃಹದಶ್ವರು ನಲೋಪಾಖ್ಯಾನವನ್ನು ಹೇಳಲು ಪ್ರಾರಂಭಿಸಿದರು.

“ನಿಷಧದೇಶದಲ್ಲಿ ಸುಪ್ರಸಿದ್ಧನಾದ ವೀರಸೇನನೆಂಬ ರಾಜನಿದ್ದನು. ಅವನಿಗೆ ನಲನೆಂಬ ಮಗನೊಬ್ಬನಿದ್ದನು. ಅವನು ಧರ್ಮಿಷ್ಠನಾಗಿಯೂ, ಅರ್ಥತತ್ತ್ವಜ್ಞನಾಗಿಯೂ ಇದ್ದನು. ಒಮ್ಮೆ ಅವನು ಪುಷ್ಕರನೆಂಬ ತನ್ನ ದಾಯಾದನಿಂದ ಪಗಡೆಯಾಟದಲ್ಲಿ ಪರಾಜಿತನಾಗಿ ಹೆಂಡತಿಯೊಡನೆ ಕಾಡಿನಲ್ಲಿ ವಾಸಮಾಡುತ್ತಿದ್ದಾಗ ಅವನಿಗೆ ಸೇವಕರಾಗಲೀ, ರಥವಾಗಲೀ,

ಅಣ್ಣ-ತಮ್ಮಂದಿರಾಗಲೀ ಯಾರೂ ಇರಲಿಲ್ಲ. ಆದರೆ ನೀನು ದೇವತೆಗಳಿಗೆ ಅನುರೂಪರಾದ, ವೀರರಾದ ಸಹೋದರರನ್ನು ನಿನ್ನ ಜೊತೆಯಲ್ಲಿಯೇ ಇಟ್ಟುಕೊಂಡಿರುವೆಯಲ್ಲವೇ? ಸಾಕ್ಷಾತ್ ಬ್ರಹ್ಮನಿಗೆ ಸಮಾನವಾದ ತೇಜಸ್ಸುಳ್ಳ ಅನೇಕ ಬ್ರಾಹ್ಮಣರು ನಿನ್ನ ಜೊತೆಯಲ್ಲಿಯೇ ಇರುವರಲ್ಲವೇ? ಇಷ್ಟುಮಾತ್ರದಿಂದಲೇ ನಲನಿಗಿಂತಲೂ ಈಗಿನ ನಿನ್ನ ಸ್ಥಿತಿಯು ನೂರು ಪಾಲು ಉತ್ತಮವಾದುದೆಂದು ಹೇಳಬಹುದು. ಆದುದರಿಂದ ನೀನು ನಿನ್ನ ದುಃಖವೇ ಹೆಚ್ಚೆಂಬ ಭ್ರಾಂತಿಯಿಂದ ಮತ್ತೂ ದುಃಖಿಸಬೇಡ, ಯುಧಿಷ್ಠಿರ!

"ಮಹರ್ಷಿಗಳೇ! ತಾವು ಇಷ್ಟು ಮಾತ್ರ ಹೇಳಿದ್ದರಿಂದ ನನಗೆ ತೃಪ್ತಿಯಾಗಲಿಲ್ಲ. ನಲಮಹಾರಾಜನ ಕಥೆಯನ್ನು ವಿಸ್ತಾರವಾಗಿ, ಹೇಗೆ ನಡೆ ಯಿತೋ ಹಾಗೆಯೇ ಕೇಳಬೇಕೆಂಬ ಆಶಯದಿಂದಿರುತ್ತೇನೆ. ದಯೆಯಿಟ್ಟು ಹೇಳಿರಿ."

ತಿಮೆರ ಅಧ್ಯಾಯವು ಮುಗಿಯಿತು.

೫೩ನೆಯ ಅಧ್ಯಾಯ ನಲೋಪಾಖ್ಯಾನಪರ್ವ (ಮುಂದುವರಿದಿದೆ.)

## ನಲ-ದಮಯಂತಿಯರ ಗುಣವರ್ಣನೆ : ಹಂಸಸಂದೇಶ

ಬೃಹದಶ್ವರು ನಲೋಪಾಖ್ಯಾನವನ್ನು ವಿಸ್ತಾರವಾಗಿಯೇ ಹೇಳಲು ಉಪಕ್ರಮಿಸಿದರು :

**ಆಸೀದ್ರಾಜಾ ನಲೋ ನಾಮ ವೀರಸೇನಸುತೋ ಬಲೀ ।**
**ಉಪಪನ್ನೋ ಗುಣೈರಿಷ್ಟೈ ರೂಪವಾನಶ್ವಕೋವಿದಃ ॥೧॥**

"ಯುಧಿಷ್ಠಿರ! ನಿಷಧದೇಶದಲ್ಲಿ ನಲನೆಂಬ ಮಹಾಬಲಶಾಲಿಯಾದ ರಾಜಕುಮಾರನಿದ್ದನು. ಅವನು ವೀರಸೇನನ ಮಗನು. ನಲನು ಸಕಲ ಗುಣಸಂಪನ್ನನು. ಅಶ್ವಪರೀಕ್ಷೆಯಲ್ಲಿ ನಿಷ್ಣಾತನಾಗಿದ್ದನು. ಸ್ವರ್ಗಾಧಿಪತಿ ಯಾದ ದೇವೇಂದ್ರನಂತೆ ಅವನು ಭೂಲೋಕದಲ್ಲಿ ಅನೇಕ ರಾಜರಿಗೆ ರಾಜನಾಗಿದ್ದನು. ಅರ್ಥಾತ್ ಚಕ್ರವರ್ತಿಯಾಗಿದ್ದನು. ಅವನು ಸೂರ್ಯನ ತೇಜಸ್ಸಿಗೆ ಸಮಾನವಾದ ತೇಜಸ್ಸಿನಿಂದ ಕೂಡಿದ್ದನು. ಬ್ರಹ್ಮನಿಷ್ಠ ನಾಗಿಯೂ, ವೇದಾಧ್ಯಯನಸಂಪನ್ನನಾಗಿಯೂ ಇದ್ದನು. ಅವನಿಗೆ

ಪಗಡೆಯಾಟವು ಹೆಚ್ಚು ಪ್ರಿಯವಾಗಿದ್ದಿತು. ಆತನು ಸತ್ಯವ್ರತನಾಗಿದ್ದನು. ಅಕ್ಷೌಹಿಣೀಸೇನೆಗೆ* ಅಧಿಪತಿಯಾಗಿದ್ದನು. ಅವನ ಸುಂದರರೂಪವನ್ನು ಕಂಡು ಮೋಹಿಸದಿದ್ದ ಸ್ತ್ರೀಯರೇ ಇರಲಿಲ್ಲ. ಅಷ್ಟು ಚೆಲುವನಾಗಿದ್ದನು. ನವಯೌವನ, ರೂಪು, ರಾಜ್ಯ ಮತ್ತು ಸಂಪತ್ತುಗಳಿದ್ದರೂ ಜಿತೇಂದ್ರಿಯನಾಗಿದ್ದನು. ನಲನು ಉದಾರಿಯು. ಧನುರ್ಧಾರಿಗಳಲ್ಲಿ ಶ್ರೇಷ್ಠನೆನಿಸಿದ್ದನು. ಲೋಕರಕ್ಷಕನಾದ ಮನುಚಕ್ರವರ್ತಿಯಂತೆ ತನ್ನ ನಿಷಧಚಕ್ರಾಧಿಪತ್ಯವನ್ನು ಯಾವ ವಿಧವಾದ ಉಪದ್ರವವೂ ಇಲ್ಲದಂತೆ ಸಂರಕ್ಷಿಸುತ್ತಿದ್ದನು.

ಅದೇ ಕಾಲದಲ್ಲಿ ವಿದರ್ಭದೇಶದಲ್ಲಿ ಭೀಮನೆಂಬ ರಾಜನು ರಾಜ್ಯವಾಳುತ್ತಿದ್ದನು. ಅವನು ಕೂಡ ಮಹಾಪರಾಕ್ರಮಿಯಾಗಿಯೂ, ಸರ್ವಗುಣಸಂಪನ್ನನಾಗಿಯೂ, ಪ್ರಜೆಗಳ ಪ್ರೀತಿಗೆ ಪಾತ್ರನಾಗಿಯೂ ಇದ್ದನು. ಆದರೆ ಅವನಿಗೆ ಮಕ್ಕಳಿರಲಿಲ್ಲ. ಪುತ್ರರನ್ನು ಪಡೆಯಲು ಅನೇಕವಿಧವಾದ ವ್ರತಾನುಷ್ಠಾನಗಳನ್ನು ಮಾಡಿದನು. ಅವನು ಮಾಡಿದ ತಪಸ್ಸಿನ ಫಲವೋ ಎಂಬಂತೆ ಒಂದಾನೊಂದು ದಿನ ದಮರೆಂಬ ಬ್ರಹ್ಮರ್ಷಿಗಳು ಭೀಮರಾಜನ ಅರಮನೆಗೆ ಬಂದರು. ಬಂದ ಮಹರ್ಷಿಗಳಿಗೆ ಪ್ರಜಾಕಾಮನಾದ ಭೀಮರಾಜನು ಅರ್ಘ್ಯ-ಪಾದ್ಯ-ಆಚಮನೀಯ-ಮಧುಪರ್ಕಾದಿಗಳನ್ನು ಯಥಾವಿಧಿಯಾಗಿ ಸಮರ್ಪಿಸಿ, ತನ್ನ ಪತ್ನಿಯಿಂದೊಡಗೂಡಿ ಆದರದಿಂದ ಅವರನ್ನು ಸತ್ಕರಿಸಿದನು. ರಾಜದಂಪತಿಗಳ ಸತ್ಕಾರದಿಂದ ಸುಪ್ರೀತರಾದ ಮಹರ್ಷಿಗಳು ತ್ರಿಲೋಕಸುಂದರಿಯಾದ ಕನ್ಯಾರತ್ನವನ್ನೂ ಮತ್ತು ಮೂವರು ಗಂಡುಮಕ್ಕಳನ್ನೂ ಪಡೆಯುವಂತೆ ದಂಪತಿಗಳಿಗೆ ಅನುಗ್ರಹಿಸಿದರು. ಮಹರ್ಷಿಗಳ ಅನುಗ್ರಹದಂತೆ ಭೀಮರಾಜನಿಗೆ ಅನುಪಮರೂಪ-ಸೌಂದರ್ಯವುಳ್ಳ ಒಂದು ಹೆಣ್ಣುಮಗುವೂ, ರಾಜಲಕ್ಷಣಸಂಪನ್ನರಾದ ಮೂವರು ಗಂಡುಮಕ್ಕಳೂ ಅನುಕ್ರಮವಾಗಿ ಜನಿಸಿದರು. ಮಕ್ಕಳಾಗುವಂತೆ ಅನುಗ್ರಹಮಾಡಿದ ದಮಮಹರ್ಷಿಗಳಿಗೆ ಕೃತಜ್ಞತೆಯನ್ನು ವ್ಯಕ್ತಪಡಿಸುವ ಸಲುವಾಗಿ ಭೀಮರಾಜನು ಆ ಮಕ್ಕಳೆಲ್ಲರಿಗೂ ದಮಯಂತೀ, ದಮ, ದಾಂತ, ದಮನ–ಎಂದೇ ನಾಮಕರಣಮಾಡಿದನು. ಕಾಲಾನಂತರದಲ್ಲಿ ಆ

*೨೧,೮೭೦ ರಥಗಳೂ, ೨೧,೮೭೦ ಆನೆಗಳೂ, ೧,೦೯,೩೫೦ ಕಾಲಾಳುಗಳೂ, ೬೫,೬೧೦ ಕುದುರೆಗಳೂ ಇರುವ ಸೇನಾವಿಭಾಗಕ್ಕೆ ಅಕ್ಷೌಹಿಣೀ ಎಂದು ಹೆಸರು.

ಮೂವರು ರಾಜಕುಮಾರರೂ ಮಹಾಪರಾಕ್ರಮಿಗಳೂ, ನೀತಿಶಾಸ್ತ್ರವಿಶಾರದರೂ ಆದರು.

ಕೃಶವಾದ ನಡುಭಾಗದಿಂದ ಕೂಡಿದ್ದ ದಮಯಂತಿಯು ರೂಪದಲ್ಲಿಯೂ, ತೇಜಸ್ಸಿನಲ್ಲಿಯೂ, ಯಶಸ್ಸಿನಲ್ಲಿಯೂ, ಕಾಂತಿಯಲ್ಲಿಯೂ, ಸೌಭಾಗ್ಯದಲ್ಲಿಯೂ ಅನನ್ಯಸಾಧಾರಣೀ–ಎಂಬ ಕೀರ್ತಿಯನ್ನು ಪಡೆದಳು. ಪ್ರೌಢೆಯಾದ ಅವಳನ್ನು ನೂರಾರು ಮಂದಿ ಅಲಂಕೃತರಾದ ದಾಸಿಯರು–ಸ್ವರ್ಗದಲ್ಲಿ ಶಚೀದೇವಿಯನ್ನು ದೇವತೆಗಳು ಸೇವಿಸುವಂತೆ–ಸೇವಿಸುತ್ತಿದ್ದರು. ಸಾಲಂಕೃತರಾದ ಆ ದಾಸಿಯರ ಮಧ್ಯದಲ್ಲಿ ಕೇವಲ ರೂಪದಿಂದಲೇ ಎಲ್ಲರನ್ನೂ ಮುಗ್ಧಗೊಳಿಸುವ ದಮಯಂತಿಯು ಅತ್ಯಮೋಘವಾದ, ರಾಜಯೋಗ್ಯವಾದ ವಸ್ತ್ರಾಭರಣಗಳನ್ನು ಧರಿಸಿ–ಮೋಡದ ಮಧ್ಯದಿಂದ ಕ್ಷಣ-ಕ್ಷಣಕ್ಕೂ ಹೊರಬೀಳುವ ಮಿಂಚಿನಂತೆ–ಪ್ರಕಾಶಿಸುತ್ತಿದ್ದಳು. ವಿಶಾಲಾಕ್ಷಿಯಾದ ದಮಯಂತಿಯ ರೂಪವು ನಿಶ್ಚಯವಾಗಿಯೂ ಮಹಾಲಕ್ಷ್ಮಿಗೆ ಅನುರೂಪವಾಗಿದ್ದಿತು. ಯುಧಿಷ್ಠಿರ! ದೇವತೆಗಳಲ್ಲಿಯೇ ಆಗಲೀ, ಯಕ್ಷರಲ್ಲಿಯೇ ಆಗಲೀ ಅಥವಾ ಮನುಷ್ಯರಲ್ಲಿಯೇ ಆಗಲೀ–ದಮಯಂತಿಗೆ ಸಮಾನವಾದ ರೂಪಲಾವಣ್ಯಗಳುಳ್ಳ ಮತ್ತೊಬ್ಬ ಸ್ತ್ರೀಯು ಹಿಂದೆ ಇದ್ದಳೆಂಬುದನ್ನು ಯಾರೂ ಕೇಳಿಯೂ ಇರಲಿಲ್ಲ ; ನೋಡಿಯೂ ಇರಲಿಲ್ಲ. ಅವಳ ದರ್ಶನಮಾತ್ರದಿಂದ ದೇವತೆಗಳ ಅಂತಃಕರಣವೂ ಆನಂದಪರವಶವಾಗುತ್ತಿತ್ತೆಂದರೆ ಅವಳ ರೂಪಾತಿಶಯವೆಷ್ಟಿದ್ದಿರಬಹುದೆಂಬುದನ್ನು ನೀನೇ ಯೋಚಿಸಬಹುದಾಗಿದೆ.

ಯುಧಿಷ್ಠಿರ! ಈ ಹಿಂದೆ ಹೇಳಿದಂತೆ ನಲನೂ ಅನುಪಮರೂಪಸಂಪತ್ತಿನಿಂದ ಕೂಡಿದವನಾಗಿದ್ದನು. ಅವನಿಗೆ ಸದೃಶವಾದ ರೂಪವುಳ್ಳವರು ತ್ರಿಭುವನಗಳಲ್ಲಿಯೇ ಯಾರೂ ಇರಲಿಲ್ಲ. ಅವನ ರೂಪದ ವಿಷಯವಾಗಿ ಹೆಚ್ಚೇನು ಹೇಳಲಿ! ಸಾಕ್ಷಾತ್ ಮನ್ಮಥನೇ ಭೂಮಿಯಲ್ಲಿ ಅವತರಿಸಿರುವನೋ ಎಂಬ ಭ್ರಾಂತಿಯು ಅವನನ್ನು ನೋಡಿದವರಿಗೆ ಉಂಟಾಗುತ್ತಿದ್ದಿತು. ನಲ-ದಮಯಂತಿಯರ ಅನುಪಮಸೌಂದರ್ಯವು ಲೋಕವಿಖ್ಯಾತವಾಯಿತು. ನಿಷಧದೇಶದ ಗುಪ್ತಚಾರರು ದಮಯಂತಿಯ ಸೌಂದರ್ಯಾತಿಶಯವನ್ನು ನಲನ ಮುಂದೆ ವರ್ಣನೆಮಾಡುತ್ತಿದ್ದರು.

ಅಂತೆಯೇ ವಿದರ್ಭದೇಶದ ರಾಜದೂತರು ನಲನ ಮೋಹನರೂಪವನ್ನು ದಮಯಂತಿಯ ಮುಂದೆ ವರ್ಣನೆಮಾಡುತ್ತಿದ್ದರು. ಪರಸ್ಪರ ರೂಪ-ಲಾವಣ್ಯಗಳ ವರ್ಣನೆಯನ್ನು ಅನೇಕ ಬಾರಿ ತಮ್ಮ ಸೇವಕರಿಂದಲೂ, ಗೂಢಚಾರರಿಂದಲೂ ಕೇಳಿದ ನಲ-ದಮಯಂತಿಯರ ಹೃದಯಗಳಲ್ಲಿ ಪರಸ್ಪರಪ್ರೇಮವು ಅಂಕುರಿಸಿತು. ಪ್ರತ್ಯಕ್ಷದರ್ಶನವಿಲ್ಲದಿದ್ದರೂ ಪರಸ್ಪರ ರೂಪ-ಲಾವಣ್ಯಗಳ ಶ್ರವಣಮಾತ್ರದಿಂದಲೇ ಹೃದಯದಲ್ಲಿ ಅಂಕುರಿಸಿದ್ದ ಪ್ರೇಮವು ಕಾಲಕ್ರಮದಲ್ಲಿ ಬೇರೂರಿ ಬೆಳೆಯತೊಡಗಿತು.

(ಮಾನವನಿಗೆ ಕಾಮವನ್ನೇ ಆಗಲೀ, ಕ್ರೋಧವನ್ನೇ ಆಗಲೀ– ಹೃದಯದಲ್ಲೇ ಹೆಚ್ಚುಕಾಲ ಹುದುಗಿಸಿಟ್ಟುಕೊಳ್ಳಲು ಸಾಧ್ಯವಾಗುವುದಿಲ್ಲ. ಆದುದರಿಂದಲೇ ಅವುಗಳನ್ನು ಕಾಮಾಗ್ನಿ-ಕೋಪಾಗ್ನಿ ಎಂದೂ ಕರೆಯುತ್ತಾರೆ. ಕಾಮ-ಕ್ರೋಧಗಳು ಅಗ್ನಿಗೆ ಸಮಾನವಾದುವು. ಇವುಗಳ ವ್ಯಾಪ್ತಿಯು ಹೆಚ್ಚಿದಂತೆಲ್ಲಾ ಸಾಕ್ಷಾತ್ ಅಗ್ನಿಯಂತೆಯೇ ಮಾನವನನ್ನು ದಹಿಸಿಬಿಡುತ್ತವೆ.)

ನಲನಿಗೂ ಕಾಮಾಗ್ನಿಯ ಬಾಧೆಯು ಹೆಚ್ಚಿತು. ಹೃದಯದಲ್ಲಿಯೇ ಅಡಗಿದ್ದ ಕಾಮಾಗ್ನಿಯನ್ನು ಉಡುಗಿಸಲು ಅಸಮರ್ಥನಾದನು. ದಮಯಂತಿಯ ರೂಪ-ಲಾವಣ್ಯಗಳನ್ನೇ ನೆನೆಯುತ್ತಾ ತನ್ನ ಅರಮನೆಯ ಪಕ್ಕದಲ್ಲಿದ್ದ ಸುಂದರವಾದ ಉದ್ಯಾನವನದಲ್ಲಿ ಏಕಾಕಿಯಾಗಿ ಅಲೆದಾಡುತ್ತಿದ್ದನು.

ಆ ಸಮಯಕ್ಕೆ ಸರಿಯಾಗಿ ಸ್ವರ್ಣಮಯವಾದ ರೆಕ್ಕೆಗಳಿದ್ದ, ಸುಂದರವಾದ ರಾಜಹಂಸಗಳು ಎಲ್ಲಿಂದಲೋ ಹಾರುತ್ತಾ ಬಂದು ನಲನಿದ್ದ ಉದ್ಯಾನವನಕ್ಕೆ ಬಂದು ವಿಹರಿಸುತ್ತಿದ್ದುವು. ಹಂಸಪಕ್ಷಿಗಳ ಸಮೂಹದಲ್ಲಿದ್ದ ಒಂದು ರಾಜಹಂಸವು ಸಾಧಾರಣವಾದ ಹಂಸವಾಗಿರಲಿಲ್ಲ. ಅದಕ್ಕೆ ಮನುಷ್ಯರಂತೆಯೇ ಮಾತನಾಡುವ ಸಾಮರ್ಥ್ಯವಿದ್ದಿತು. ನಲನು ರಾಜಹಂಸವನ್ನು ಹಿಡಿದೊಡನೆಯೇ ಆ ಪಕ್ಷಿಯು ರಾಜನನ್ನು ಕುರಿತು ಮೆಲುದನಿಯಿಂದ ಹೇಳಿತು : “ನಲಮಹಾರಾಜ! ನನ್ನನ್ನು ನೀನು ಕೊಂದುಬಿಡಬೇಡ. ನನ್ನನ್ನು

ಪ್ರಾಣಸಹಿತವಾಗಿ ಬಿಟ್ಟೆಯಾದರೆ ನಿನಗೆ ಇಷ್ಟವಾದ ಕಾರ್ಯವೊಂದನ್ನು ಮಾಡಿಕೊಡುವೆನು."

ನಲನು ಮಂದಸ್ಮಿತನಾಗಿ ಮತ್ತು ಆಶ್ಚರ್ಯಭರಿತನಾಗಿ ಕುತೂಹಲ ದಿಂದ ರಾಜಹಂಸವನ್ನು ಎಡಗೈಯಲ್ಲಿ ಹಿಡಿದು ಬಲಗೈಯಿಂದ ಅದನ್ನು ಸವರುತ್ತಾ ಅದರ ಬಾಯನ್ನೇ ದಿಟ್ಟಿಸಿ ನೋಡುತ್ತಿದ್ದನು. ರಾಜಹಂಸವು ಮುಂದುವರಿದು ಹೇಳಿತು :



"ನಿಷಧರಾಜ! ನೀನು ನನ್ನನ್ನು ಈಗಲೇ ಬಿಟ್ಟುಬಿಟ್ಟರೆ ನಿನ್ನ ಹೃನ್ಮಂದಿರವನ್ನು ಆಕ್ರಮಿಸಿರುವ ದಮಯಂತಿಯ ಬಳಿಗೆ ಕೂಡಲೇ ಹೋಗಿ ನಿನ್ನ ವಿಷಯಗಳೆಲ್ಲವನ್ನೂ ಹೇಳಿ, ಅವಳು ನಿನ್ನನ್ನಲ್ಲದೇ ಬೇರೆ ಯಾರನ್ನೂ ಮದುವೆಯಾಗದಂತೆ ಮಾಡುವೆನು."

ನಲನು ರಾಜಹಂಸವನ್ನು ಕೊಲ್ಲುವ ಸಲುವಾಗಿ ಹಿಡಿದವನಲ್ಲ. ವಿರಹಿಯಾಗಿದ್ದ ಅವನಿಗೆ ಸುಂದರವಾದ, ಸ್ವರ್ಣದ ಕಾಂತಿಯಿಂದ ಕೂಡಿದ್ದ ಹಂಸವನ್ನು ಹಿಡಿದುಕೊಳ್ಳಬೇಕೆನಿಸಿತು. ಹೀಗಿರುವಾಗ ದಮಯಂತಿಗೆ ತನ್ನ ವಿಷಯವನ್ನು ಹೇಳುವೆನೆಂದೂ, ದಮಯಂತಿಯು ತನ್ನನ್ನು ಬಿಟ್ಟು ಮತ್ತೊಬ್ಬರನ್ನು ಮದುವೆಯಾಗದಂತೆ ಮಾಡುವೆನೆಂದೂ ಹೇಳಿದ ಮೇಲೆ ರಾಜಹಂಸವನ್ನು ಕೊಲ್ಲುವನೇ? ಅತ್ಯಾನಂದದಿಂದ ರಾಜಹಂಸವನ್ನು ಅಂತರಿಕ್ಷದ ಕಡೆಗೆ ಹಾರಿಬಿಟ್ಟನು. ಅದರೊಡನೆಯೇ ಇತರ ರಾಜಹಂಸಗಳೂ ಹಾರಿಹೋದುವು.

ಕೆಲವು ದಿನಗಳಲ್ಲಿಯೇ ವಿದರ್ಭದೇಶಕ್ಕೆ ಹಾರಿಬಂದ ಆ ರಾಜಹಂಸಗಳು ದಮಯಂತಿಯು ಸಖಿಯರೊಡನೆ ವಿಹರಿಸುತ್ತಿದ್ದ ಉದ್ಯಾನವನದ ವೃಕ್ಷಗಳ ಮೇಲೆ ಕುಳಿತುಕೊಂಡುವು. ಚಿನ್ನದ ರೆಕ್ಕೆಗಳಿದ್ದ ಆ ಸುಂದರವಾದ ರಾಜಹಂಸಗಳನ್ನು ನೋಡಿದೊಡನೆಯೇ ದಮಯಂತಿಗೆ ಅವುಗಳನ್ನು ಹಿಡಿದುಕೊಳ್ಳಬೇಕೆಂಬ ಆಶೆಯುಂಟಾಯಿತು. ಸಖಿಯರಿಂದೊಡಗೂಡಿ ದಮಯಂತಿಯು ರಾಜಹಂಸಗಳನ್ನು ಹಿಡಿಯಲು ಅವಸರದಿಂದ ಬರುತ್ತಿದ್ದುದನ್ನು ಕಂಡು ಪಕ್ಷಿಗಳೆಲ್ಲವೂ ಆ ಪ್ರಮದಾವನದ ನಾಲ್ಕು ದಿಕ್ಕುಗಳಿಗೂ ಹಾರಿಬಿಟ್ಟುವು. ಒಂದು ಪಕ್ಷಿಯೂ ಅವರ ಕೈಗೆ ಸಿಕ್ಕಲಿಲ್ಲ. ಆದರೆ ಸಿಕ್ಕದೆ ದೂರಕ್ಕೂ ಹೋಗಲಿಲ್ಲ. ಸಿಕ್ಕಿಯೂ ಸಿಕ್ಕದ ರೀತಿಯಲ್ಲಿ ಮೆಲ್ಲ-ಮೆಲ್ಲನೆ ಹಾರಿಹೋಗುತ್ತಿದ್ದುವು. ದಮಯಂತಿಯೂ ಒಂದು ರಾಜಹಂಸವನ್ನು ಅನುಸರಿಸಿ ನಡೆದಳು. ಆ ರಾಜಹಂಸವು ಒಂದು ಗಿಡದ ಮೇಲೆ ಕ್ಷಣಕಾಲ ಕುಳಿತುಕೊಂಡು ದಮಯಂತಿಯು ಹತ್ತಿರಕ್ಕೆ ಬಂದೊಡನೆಯೇ ಮತ್ತೊಂದು ಗಿಡಕ್ಕೆ ಹಾರಿಹೋಗುತ್ತಾ ದಮಯಂತಿಯನ್ನು ಬಹಳ ದೂರದವರೆಗೆ ಕರೆದೊಯ್ದಿತು.

ಅವಳ ಸಖಿಯರಲ್ಲಿ ಒಬ್ಬೊಬ್ಬರೂ ಒಂದೊಂದು ಪಕ್ಷಿಯನ್ನು ಅನುಸರಿಸಿ ಹೋಗಿದ್ದುದರಿಂದ ದಮಯಂತಿಯು ಏಕಾಕಿನಿಯಾದಳು. ನಿರ್ಜನವಾದ ಪ್ರದೇಶಕ್ಕೆ ದಮಯಂತಿಯನ್ನು ಒಯ್ದನಂತರ ರಾಜಹಂಸವು ದಮಯಂತಿಯ ಕೈಗೆ ಸಿಕ್ಕಿ ತನ್ನನ್ನು ಆದರದಿಂದ ಮುದ್ದಾಡುತ್ತಿದ್ದ ದಮಯಂತಿಯನ್ನು ಕುರಿತು ಹೇಳಿತು :

"ರಾಜಪುತ್ರಿಯೇ! ನಿಷಧದೇಶದಲ್ಲಿ ನಲನೆಂಬ ರಾಜನೊಬ್ಬನಿದ್ದಾನೆ. ಅವನು ಅಶ್ವಿನೀದೇವತೆಗಳ ರೂಪಕ್ಕೆ ಸಮಾನವಾದ ರೂಪವುಳ್ಳವನಾಗಿರುವನು. ಅವನಿಗೆ ಸಮಾನವಾದ ರೂಪ-ಲಾವಣ್ಯವುಳ್ಳವನು ಭೂವಲಯದಲ್ಲಿಯೇ ಮತ್ತಾರೂ ಇರುವುದಿಲ್ಲ. ನಾನು ಹೆಚ್ಚೇನು ಹೇಳಲಿ, ರಾಜ



ಕುಮಾರಿ! ನಲನು ಭೂಮಿಯಲ್ಲಿ ಮೂರ್ತಿಮತ್ತಾಗಿ ಅವತರಿಸಿರುವ ಮನ್ಮಥನಂತೆಯೇ ಇದ್ದಾನೆ. ನೀನೂ ಅನುಪಮವಾದ ರೂಪ-ಲಾವಣ್ಯಗಳುಳ್ಳವಳಾಗಿರುವೆ. ನಿನ್ನ ರೂಪವು ರತೀದೇವಿಯ ರೂಪಕ್ಕೆ ಅನುರೂಪವಾಗಿಯೇ ಇದೆ. ನೀನೇನಾದರೂ ನಲನ ಅರ್ಧಾಂಗಿಯಾದಲ್ಲಿ ಆಗ ನಿನ್ನ

ಜನ್ಮವೂ ನಿನ್ನ ರೂಪವೂ ಸಾರ್ಥಕವಾದಂತಾಗುವುದು. ನಾವು ಅನೇಕ ದೇಶಗಳಲ್ಲಿ ಸಂಚರಿಸುತ್ತಿರುತ್ತೇವೆ. ನಾವು ಗಂಧರ್ವರನ್ನೂ, ಯಕ್ಷರನ್ನೂ, ನಾಗದೇವತೆಗಳನ್ನೂ, ರಾಕ್ಷಸರನ್ನೂ, ಮಾನವರನ್ನೂ ಸಾವಿರಾರು ಸಂಖ್ಯೆ ಯಲ್ಲಿ ನೋಡಿದ್ದೇವೆ. ಆದರೆ ಅನುಪಮವಾದ ರೂಪಸಂಪತ್ತಿನಿಂದ ಕೂಡಿ ರುವ ನಲನಿಗೆ ಸದೃಶನಾದವನನ್ನು ನಾವಿದುವರೆಗೂ ಕಂಡಿರುವುದಿಲ್ಲ. ನಲನು ಹೇಗೆ ಮಾನವರಲ್ಲಿ ತನ್ನ ರೂಪದಿಂದಲೂ, ಗುಣಾತಿಶಯಗಳಿಂದಲೂ ರತ್ನಪ್ರಾಯನಾಗಿ ವಿಜೃಂಭಿಸುತ್ತಿರುವನೋ–ಹಾಗೆಯೇ ನೀನೂ ಪ್ರಪಂಚದಲ್ಲಿರುವ ಸ್ತ್ರೀಯರಲ್ಲಿಯೇ ರತ್ನಪ್ರಾಯಳಾಗಿರುವೆ.

**ವಿಶಿಷ್ಟಾಯಾ ವಿಶಿಷ್ಟೇನ ಸಂಗಮೋ ಗುಣವಾನ್ಭವೇತ್ ॥೩೧॥**

"ವಿಶಿಷ್ಟರೂಪ-ಲಾವಣ್ಯವುಳ್ಳವಳಿಗೆ ವಿಶಿಷ್ಟರೂಪ-ಲಾವಣ್ಯವುಳ್ಳವ ನೊಡನೆ ಪ್ರಾಪ್ತವಾಗುವ ಸಮಾಗಮವು ಉತ್ತಮಫಲದಾಯಕವು'–ಎಂದು ಹಿರಿಯರು ಹೇಳುತ್ತಾರೆ. ಆದುದರಿಂದ ನೀನು ನಲನನ್ನು ಸೇರುವುದು ಯುಕ್ತವಾಗಿದೆ."

ದಮಯಂತಿಗೆ ಆ ಪಕ್ಷಿಯ ಮಾತುಗಳನ್ನು ಕೇಳಿ ಮಹಾನಂದ ವಾಯಿತು. ಪಕ್ಷಿಯನ್ನು ಪದೇ-ಪದೇ ಚುಂಬಿಸುತ್ತಾ ಹೇಳಿದಳು :

"ನೀನು ನನ್ನೊಡನೆ ನಲನ ವಿಷಯವಾಗಿ ಹೇಳಿ ನನ್ನ ಮನಸ್ಸನ್ನು ನಲನಲ್ಲಿ ವಿಲೀನಗೊಳಿಸಿದಂತೆಯೇ–ನನ್ನ ವಿಷಯವನ್ನೂ ನಲನೊಡನೆ ಹೇಳಿ ಅವನಿಗೆ ನನ್ನ ಮೇಲೆ ಅನುರಾಗವುಂಟಾಗುವಂತೆ ಮಾಡಲಾರೆಯಾ?"

"ಆಗಲಿ! ನೀನು ಹೇಳಿದಂತೆಯೇ ಮಾಡುವೆನು, ರಾಜಕುಮಾರಿ!"

ದಮಯಂತಿಯು ಮತ್ತೊಮ್ಮೆ ಪಕ್ಷಿಯನ್ನು ಚುಂಬಿಸಿ ಆಕಾಶಕ್ಕೆ ಹಾರಿಸಿದಳು. ರಾಜಹಂಸವು ನಿಷಧರಾಜ್ಯದ ಕಡೆಗೆ ಹಾರಿಹೋಯಿತು.

ಹಂಸವು ನಿಷಧರಾಜ್ಯಕ್ಕೆ ಮತ್ತೆ ಬಂದು ನಲನಿಗೆ ಎಲ್ಲವನ್ನೂ ಹೇಳಿತು."

೫೩ನೆಯ ಅಧ್ಯಾಯವು ಮುಗಿಯಿತು.

೫೪ನೆಯ ಅಧ್ಯಾಯ ನಲೋಪಾಖ್ಯಾನಪರ್ವ (ಮುಂದುವರಿದಿದೆ.)

## ಸ್ವರ್ಗದಲ್ಲಿ ಇಂದ್ರ-ನಾರದರ ಸಂಭಾಷಣೆ : ದಮಯಂತಿಯ ಸ್ವಯಂವರಕ್ಕೆ ಲೋಕಪಾಲರ ಆಗಮನ

ಬೃಹದಶ್ವರು ನಲೋಪಾಖ್ಯಾನವನ್ನು ಮುಂದುವರಿಸುತ್ತಾ ಹೇಳುತ್ತಾರೆ:

**ದಮಯನ್ತೀ ತು ತಚ್ಛ್ರುತ್ವಾ ವಚೋ ಹಂಸಸ್ಯ ಭಾರತ ।**
**ತತಃ ಪ್ರಭೃತಿ ನ ಸ್ವಸ್ಥಾ ನಲಂ ಪ್ರತಿ ಬಭೂವ ಸಾ ॥೧॥**

"ಧರ್ಮಜ! ದಮಯಂತಿಯು ರಾಜಹಂಸದಿಂದ ನಲರಾಜನ ರೂಪ-ಲಾವಣ್ಯಗಳನ್ನು ಕೇಳಿದಂದಿನಿಂದ ಸರ್ವದಾ ನಲನನ್ನೇ ಚಿಂತಿಸ ತೊಡಗಿದಳು. ಅವಳ ಮನಸ್ಸಿಗೆ ಶಾಂತಿಯೆಂಬುದೇ ಇಲ್ಲವಾಯಿತು. ಯಾರ ಸಹವಾಸವೂ ಬೇಡವಾಯಿತು. ಏಕಾಂಗಿಯಾಗಿ ಕುಳಿತು–'ನಲನನ್ನು ಎಂದು ನೋಡಿಯೇನು? ಅವನನ್ನು ಸೇರುವುದೆಂತು? ಅವನೂ ನನ್ನನ್ನು ಪ್ರೀತಿಸು ವನೇ?' ಮುಂತಾಗಿ ಅನೇಕ ವಿಧವಾಗಿ ಚಿಂತಿಸತೊಡಗಿದಳು. ಅವಳಿಗೆ ಅನ್ನಾಹಾರಗಳೂ ಬೇಡವಾದುವು. ಅದರಿಂದಾಗಿ ಅವಳ ಮುಖವು ಕಳೆ ಗುಂದಿತು. ಶರೀರವು ಕೃಶವಾಯಿತು. ಕಾಮಾಗ್ನಿಯ ತಾಪದಿಂದ ಬಹುವಾಗಿ ಪರಿತಪಿಸುತ್ತಿದ್ದಳು. ಒಮ್ಮೆ ಆಕಾಶದ ಕಡೆಗೆ ದಿಟ್ಟಿಸಿ ನೋಡುವಳು. ಒಮ್ಮೆ ನಲನನ್ನೇ ಧ್ಯಾನಮಾಡುತ್ತಾ ಕಣ್ಮುಚ್ಚಿ ಕುಳಿತುಕೊಳ್ಳುವಳು. ಮತ್ತೊಮ್ಮೆ ಉನ್ಮತ್ತೆಯಂತೆ ಗಹ-ಗಹಿಸಿ ನಗುವಳು. ಮರುಕ್ಷಣದಲ್ಲಿಯೇ ಗಳ-ಗಳನೆ ಅತ್ತುಬಿಡುವಳು. ದಿನ-ದಿನಕ್ಕೂ ಅವಳ ಕಣ್ಣುಗಳು ಕಾಂತಿಹೀನವಾದುವು. ಯಾವ ವಿಧವಾದ ಅಲಂಕಾರವೂ ಅವಳಿಗೆ ಬೇಕಾಗಲಿಲ್ಲ. ಹಂಸತೂಲಿಕಾ ತಲ್ಪವೂ ಬೇಡವಾಯಿತು. ಊಟ-ಉಪಚಾರಗಳ ಕಡೆಗೆ ಗಮನವೇ ಇರಲಿಲ್ಲ. ಯಾವಾಗಲಾದರೊಮ್ಮೆ ಸಖಿಯರು ಬಲಾತ್ಕರಿಸಿದರೆ ಒಂದು ತುತ್ತು ಊಟಮಾಡುವಳು. ಕೆಲವೊಮ್ಮೆ ಆ ಒಂದು ತುತ್ತು ಅನ್ನವೂ ಅವಳಿಗೆ ನಲನಂತೆಯೇ ಕಂಡುಬಿಡುವುದು. ಒಡನೆಯೇ ಎದ್ದೋಡುವಳು. ನೀರಿನಲ್ಲಿಯೂ ನಲನನ್ನು ಕಾಣುವಳು. ಎಲ್ಲೆಡೆಗಳಲ್ಲೂ ನಲನನ್ನೇ ಕಾಣುವಳು. ನಲನೆಂದು ಸಖಿಯರನ್ನೇ ಬಾಚಿತಬ್ಬುವಳು. ಸಖಿಯೆಂದು ತಿಳಿದೊಡನೆಯೇ ನಾಚಿ ತಲೆತಗ್ಗಿಸುವಳು.

ಅವಳ ಆ ರೀತಿಯ ಉನ್ಮಾದಾವಸ್ಥೆಯನ್ನೂ ಮತ್ತು ಅವಳು ದಿನ-ದಿನಕ್ಕೂ ಕೃಶಳಾಗುತ್ತಿರುವುದನ್ನೂ ಕಂಡು ಇಂಗಿತಜ್ಞೆಯರಾದ ಸಖಿಯರು ಆ ವಿಷಯವನ್ನು ಪ್ರಕಾರಾಂತರಗಳಿಂದ ರಾಜನಿಗೆ ತಿಳಿಯಪಡಿಸಿದರು.

ಭೀಮರಾಜನು, ಮಗಳು ಕೃಶಳಾಗಿರುವ ಕಾರಣವೇನೆಂಬ ವಿಷಯ ವಾಗಿ ಕೆಲವು ದಿನಗಳು ಆಲೋಚಿಸುತ್ತಿದ್ದನು. ರೋಗ-ರುಜಿನಗಳಾವುವೂ ದಮಯಂತಿಗಿರಲಿಲ್ಲ. ಆದುದರಿಂದ ಪ್ರಕೃತದಲ್ಲಿ ಪ್ರಾಪ್ತವಾಗಿರುವ ರೋಗವು ಮನೋರೋಗವೆಂದೇ ನಿರ್ಧರಿಸಿ, ಪ್ರೌಢೆಯಾಗಿರುವ ಅವಳಿಗೆ ಮದುವೆಯಾಗದಿರುವುದೇ ಮನೋರೋಗಕ್ಕೆ ಕಾರಣವೆಂಬುದನ್ನೂ ಮನ ಗಂಡು, ರಾಜಪದ್ಧತಿಯಂತೆ ಸ್ವಯಂವರಸಮಾರಂಭವನ್ನು ಏರ್ಪಡಿಸಲು ನಿಶ್ಚಯಿಸಿದನು. ಒಡನೆಯೇ ಭೀಮರಾಜನು ಮಂತ್ರಿಗಳನ್ನೂ, ಪುರೋಹಿತ ರನ್ನೂ ಕರೆಯಿಸಿ, ಸ್ವಯಂವರದ ವಿಷಯವನ್ನು ಸಮಾಲೋಚಿಸಿ, ಪ್ರಪಂಚದ ರಾಜರೆಲ್ಲರಿಗೂ–'ದಮಯಂತಿಯ ಸ್ವಯಂವರವು ನಡೆಯಲಿದೆ. ವೀರರಾದ ರಾಜಕುಮಾರರು ಒಡನೆಯೇ ಆಗಮಿಸಿ ಸ್ವಯಂವರದಲ್ಲಿ ಭಾಗವಹಿಸಿರಿ'– ಎಂಬ ಕರೆಯೋಲೆಯನ್ನು ದೂತರ ಮೂಲಕ ಕಳುಹಿಸಿಕೊಟ್ಟನು.

ದಮಯಂತಿಯ ಸ್ವಯಂವರವು ನಡೆಯಲಿದೆಯೆಂಬ ವಾರ್ತೆಯನ್ನು ಕೇಳುತ್ತಲೇ ನೂರಾರು ಮಂದಿ ರಾಜರು ಸಾಲಂಕೃತರಾಗಿ, ರಥ-ಗಜ-ತುರಗ-ಪದಾತಿಗಳಿಂದ ಸಮೇತರಾಗಿ, ಸೈನ್ಯಘೋಷದಿಂದ ಭೂಮಿಯನ್ನು ತುಂಬುತ್ತಾ ಭೀಮರಾಜನ ಪಟ್ಟಣಕ್ಕೆ ಆಗಮಿಸತೊಡಗಿದರು. ಸಾಲು-ಸಾಲಾಗಿ ಬರುತ್ತಿದ್ದ ರಾಜರನ್ನೂ ಮತ್ತು ಅವರ ಪರಿವಾರವನ್ನೂ ಭೀಮರಾಜನು ಆದರದಿಂದ ಸ್ವಾಗತಿಸಿ ಸತ್ಕರಿಸುತ್ತಿದ್ದನು. ಭೀಮರಾಜನಿಂದ ಸತ್ಕೃತರಾದ ಆ ರಾಜರೆಲ್ಲರೂ ತಮ-ತಮಗೆ ಸಿದ್ಧಪಡಿಸಿದ್ದ ರಾಜಭವನ ಗಳಲ್ಲಿ ತಂಗಿದರು.

ಅದೇ ಸಮಯಕ್ಕೆ ಸರಿಯಾಗಿ ದೇವರ್ಷಿಗಳಾದ, ಮಹಾತ್ಮರಾದ, ತೇಜಸ್ವಿಗಳಾದ ಪರ್ವತ ಮತ್ತು ನಾರದರು ಲೋಕಗಳೆಲ್ಲವನ್ನೂ ಸಂಚಾರ ಮಾಡಿಕೊಂಡು–ವಿಷಯಗಳನ್ನು ಸಂಗ್ರಹಿಸಿ, ಇಂದ್ರನ ಅಮರಾವತಿಗೆ ಬಂದು, ನಾರಾಯಣನಾಮಸ್ಮರಣೆಮಾಡುತ್ತಾ ಇಂದ್ರಸಭೆಯನ್ನು ಪ್ರವೇ

ಶಿಸಿದರು. ದೇವೇಂದ್ರನು ನಾರದ-ಪರ್ವತರನ್ನು ಕಂಡೊಡನೆಯೇ ಅವರಿಗೆ ಅರ್ಘ್ಯ-ಪಾದ್ಯಾದಿಗಳನ್ನಿತ್ತು ಯಥೋಚಿತವಾಗಿ ಸತ್ಕರಿಸಿದನು. ಮಹರ್ಷಿಗಳಿಬ್ಬರೂ ಆತಿಥ್ಯವನ್ನು ಸ್ವೀಕರಿಸಿ ಸುಖಾಸನದಲ್ಲಿ ಕುಳಿತನಂತರ ಇಂದ್ರನು ಮಹರ್ಷಿಗಳ ಕುಶಲವನ್ನೂ, ಅವರು ಸಂಚರಿಸಿದ ಪ್ರದೇಶಗಳ ಯೋಗಕ್ಷೇಮವನ್ನೂ ವಿಚಾರಿಸಿದನು. ಅದಕ್ಕೆ ಉತ್ತರವಾಗಿ ನಾರದರು ಹೇಳಿದರು :

“ಮಹೇಂದ್ರ! ನಾವು ಕ್ಷೇಮದಿಂದಿದ್ದೇವೆ. ಭೂಲೋಕದಲ್ಲಿರುವ ರಾಜರೆಲ್ಲರೂ ಕ್ಷೇಮದಿಂದಿದ್ದಾರೆ.”

“ನಾರದರೇ! ಭೂಮಿಯಲ್ಲಿರುವ ಯಾವ ರಾಜನು ಶತ್ರುಗಳೊಡನೆ ಹೋರಾಡುವಾಗ ಪ್ರಾಣದಾಸೆಯನ್ನೇ ತೊರೆದು, ಯುದ್ಧದಿಂದ ಹಿಮ್ಮೆಟ್ಟದೇ ಕಟ್ಟಕಡೆಯವರೆಗೂ ಹೋರಾಡಿ, ಆಯುಧಾಘಾತದಿಂದ ಪ್ರಾಣ ಬಿಡುವನೋ ಅಂತಹವನಿಗೆ ಸಕಲವಿಧವಾದ ಸುಖೋಪಭೋಗಗಳಿಗೂ ನಿವಾಸಸ್ಥಾನವಾಗಿರುವ ಈ ನನ್ನ ಸ್ವರ್ಗವು ಸಿದ್ಧವಾಗಿರುತ್ತದೆ. ನಾನು ಸ್ವರ್ಗಸುಖವನ್ನು ಅನುಭವಿಸುತ್ತಿರುವಂತೆಯೇ ಅವರೂ ಸ್ವರ್ಗಸುಖವನ್ನು ಅನುಭವಿಸಲು ಯೋಗ್ಯರಾಗುತ್ತಾರೆ. ಆದರೆ ಮಹರ್ಷಿಗಳೇ! ಇತ್ತೀಚೆಗೆ ಅಂತಹ ಕ್ಷತ್ರಿಯರನ್ನೇ ನಾನು ಕಾಣೆನಾಗಿದ್ದೇನೆ. ಭೂಮಿಯಲ್ಲಿ ಯುದ್ಧಗಳೇ ನಡೆಯುತ್ತಿಲ್ಲವೇ? ಎಲ್ಲೆಡೆಗಳಲ್ಲಿಯೂ ಶಾಂತಿಯೇ ನೆಲೆಸಿರುವುದೇ? ದಯೆಯಿಟ್ಟು ಹೇಳಿರಿ. ಏಕೆಂದರೆ : ನಾನು ಹಿಂದೆ ಹೇಳಿದಂತೆ ಯುದ್ಧದಲ್ಲಿ ಹಿಮ್ಮೆಟ್ಟದೇ ಪ್ರಾಣ ತೊರೆದ ವೀರಯೋಧರು ನನ್ನ ಆತಿಥ್ಯವನ್ನು ಸ್ವೀಕರಿಸಲು ಇತ್ತೀಚೆಗೆ ಯಾರೂ ಬಂದಿರುವುದಿಲ್ಲ. ಇದಕ್ಕೆ ಕಾರಣವಾದರೂ ಏನಿರಬಹುದು ನಾರದರೇ?”

“ಮಹೇಂದ್ರ! ಇದಕ್ಕೊಂದು ಕಾರಣವಿದೆ. ಹೇಳುವೆನು ; ಕೇಳು : ಪೃಥ್ವಿಯಲ್ಲಿರುವ ರಾಜರು ಒಬ್ಬರೊಡನೊಬ್ಬರು ಕಾದಾಡಿ ಯುದ್ಧದಲ್ಲಿ ಮಡಿದು ನಿನ್ನ ಆತಿಥ್ಯವನ್ನು ಸ್ವೀಕರಿಸುವ ಆಸಕ್ತಿಯುಳ್ಳವರಾಗಿಲ್ಲ. ಅವರ ಆಸಕ್ತಿಯು ಬೇರೊಂದು ಕಡೆಗೆ ಸೆಳೆಯಲ್ಪಟ್ಟಿರುವುದು. ವಿದರ್ಭದೇಶದ ಅರಸನಾದ ಭೀಮರಾಜನು ತನ್ನ ಮಗಳಾದ ದಮಯಂತಿಗೆ ಸ್ವಯಂವರ ಮಾಡಲು ನಿಶ್ಚಯಿಸಿ, ಎಲ್ಲ ರಾಜರಿಗೂ ಆಹ್ವಾನವನ್ನು ಕಳುಹಿಸಿರುವನು.

ದಮಯಂತಿಯನ್ನು ಸಾಧಾರಣಸ್ತ್ರೀಯೆಂದು ಭಾವಿಸಬೇಡ. ಸೌಂದರ್ಯಾಧಿ ದೇವತೆಯೇ ದಮಯಂತಿಯಾಗಿ ಅವತರಿಸಿರುವಳು. ಅವಳಿಗೆ ಸಮಾನವಾದ ರೂಪ-ಲಾವಣ್ಯಗಳು ಪ್ರಪಂಚದಲ್ಲಿ ಮತ್ತಾರಿಗೂ ಇರುವುದಿಲ್ಲ. ಅವಳ ಸ್ವಯಂವರವು ಕೆಲವು ದಿನಗಳೊಳಗಾಗಿಯೇ ನಡೆಯಲಿದೆ. ಅಂತಹ ಲೋಕೋತ್ತರವಾದ ಲಾವಣ್ಯವುಳ್ಳ, ಕಡುಚೆಲುವೆಯಾದ ದಮಯಂತಿಯ ಕೈಹಿಡಿಯುವ ಆಶಯದಿಂದ ಪ್ರಪಂಚದ ರಾಜರೆಲ್ಲರೂ ವಿದರ್ಭದೇಶಕ್ಕೆ ತೆರಳಿದ್ದಾರೆ. ಆ ಕನ್ಯಾರತ್ನವನ್ನು ಹೇಗಾದರೂ ಮಾಡಿ ಪಡೆಯಬೇಕೆಂಬ ಆಶಯವು ಎಲ್ಲ ರಾಜರಿಗೂ ಇದೆ."

ನಾರದರು ಇಂದ್ರನೊಡನೆ ಮೇಲೆ ಹೇಳಿದ ರೀತಿಯಲ್ಲಿ ದಮಯಂತಿಯ ವೃತ್ತಾಂತವನ್ನು ಹೇಳುತ್ತಿರುವ ವೇಳೆಗೆ ಸರಿಯಾಗಿ ಅಗ್ನಿಮುಖರಾದ ಲೋಕಪಾಲರು ಇಂದ್ರದರ್ಶನಾರ್ಥವಾಗಿ ಇಂದ್ರಸಭೆಗೆ ಆಗಮಿಸಿದರು.

ಲೋಕಪಾಲರೂ ನಾರದರಿಂದ ದಮಯಂತಿಯ ರೂಪ-ಲಾವಣ್ಯಾತಿಶಯವನ್ನು ಕೇಳಿ ಸಂತುಷ್ಟರಾಗಿ (ವಿಸ್ಮಿತರಾಗಿ) ತಾವೂ ಸ್ವಯಂವರಕ್ಕೆ ಹೋಗುವ ಆಶಯವನ್ನು ಇಂದ್ರನಿಗೆ ತಿಳಿಯಪಡಿಸಿದರು. ಇಂದ್ರನೂ ಸಮ್ಮತಿಸಿದನು. ಒಡನೆಯೇ ಇಂದ್ರಪ್ರಮುಖರಾದ ಲೋಕಪಾಲರೆಲ್ಲರೂ ತಮ್ಮ-ತಮ್ಮ ವಾಹನಗಳಲ್ಲಿ ಕುಳಿತು ಸೇವಕರಿಂದೊಡಗೂಡಿ ವಿದರ್ಭದೇಶದ ಕಡೆಗೆ ಧಾವಿಸಿದರು.

ಇತ್ತಲಾಗಿ ನಲನೂ ದಮಯಂತಿಯ ಸ್ವಯಂವರವಾರ್ತೆಯನ್ನು ರಾಜಭಟರಿಂದ ಕೇಳಿ ಅಮಿತಾನಂದವನ್ನು ಹೊಂದಿದನು. ದಮಯಂತಿಯ ವಿಷಯದಲ್ಲಿ ಮೋಹವಶನಾಗಿದ್ದ ನಲನು ಒಡನೆಯೇ ತನ್ನ ಮಿತಪರಿವಾರದೊಡನೆ ವಿದರ್ಭದೇಶಕ್ಕೆ ಹೊರಟನು.

ವ್ಯೋಮಯಾನದಲ್ಲಿ ಬರುತ್ತಿದ್ದ ಲೋಕಪಾಲರು ಭೂಮಿಯಲ್ಲಿ ವಿದರ್ಭದೇಶಾಭಿಮುಖವಾಗಿ ಹೋಗುತ್ತಿದ್ದ, ಸಾಕ್ಷಾತ್ ಮನ್ಮಥನಂತೆಯೇ ಕಾಣುತ್ತಿದ್ದ ನಲರಾಜನನ್ನು ಕಂಡರು. ಅವನನ್ನು ನೋಡಿದೊಡನೆಯೇ ಲೋಕಪಾಲರು ಕೂಡ ವಿಸ್ಮಿತರಾದರು. "ಮನ್ಮಥಾಕಾರನಾದ ನಲರಾಜನು ಸ್ವಯಂವರಕ್ಕೆ ಹೋಗುತ್ತಿರುವಾಗ ನಮ್ಮನ್ನು ದಮಯಂತಿಯು ವರಿಸು

ವಳೇ?''–ಎಂಬ ಸಂಶಯವು ಲೋಕಪಾಲರಿಗೂ ಉಂಟಾಯಿತು. ಸೂರ್ಯನಿಗೆ ಸಮಾನವಾದ ತೇಜಸ್ಸನ್ನೂ, ಅನುಪಮವಾದ ರೂಪಸಂಪತ್ತಿಯನ್ನೂ ನಲನಲ್ಲಿ ಕಂಡ ಲೋಕಪಾಲರು ದಮಯಂತಿಯನ್ನು ಸ್ವಯಂವರದ ಮೂಲಕವಾಗಿ ಪಡೆಯುವ ಇಚ್ಛೆಯನ್ನೇ ತೊರೆದರು. ಬೇರಾವುದಾದರೂ ಉಪಾಯದಿಂದ ದಮಯಂತಿಯನ್ನು ಪಡೆಯಬೇಕೆನ್ನುವ ಇಚ್ಛೆಯು ಅವರಿಗುಂಟಾಯಿತು. ಒಡನೆಯೇ ಲೋಕಪಾಲರು ವಿಮಾನಗಳನ್ನು ಆಕಾಶದಲ್ಲಿಯೇ ನಿಲ್ಲಿಸಿ ಕೆಳಗಿಳಿದು ನಲನ ಸಮೀಪದಲ್ಲಿ ನಿಂತು ನಲನೊಡನೆ ಹೇಳಿದರು :

"ನಿಷಧರಾಜೇಂದ್ರನೇ! ನೀನು ಸತ್ಯವ್ರತನಾಗಿರುವೆ. ನೀನು ನಮ್ಮ ದೂತನಾಗಿ, ಒಂದು ಕಾರ್ಯವನ್ನು ಮಾಡಿಕೊಡಬೇಕಾಗಿದೆ."

೫೪ನೆಯ ಅಧ್ಯಾಯವು ಮುಗಿಯಿತು.

೫೫ನೆಯ ಅಧ್ಯಾಯ ನಲೋಪಾಖ್ಯಾನಪರ್ವ (ಮುಂದುವರಿದಿದೆ.)

## ನಲನು ದೇವದೂತನಾಗಿ ದಮಯಂತಿಯ ಅಂತಃಪುರವನ್ನು ಪ್ರವೇಶಿಸಿ ದೇವತೆಗಳ ಸಂದೇಶವನ್ನು ದಮಯಂತಿಗೆ ತಿಳಿಸಿದುದು

**ತೇಭ್ಯಃ ಪ್ರತಿಜ್ಞಾಯ ನಲಃ ಕರಿಷ್ಯ ಇತಿ ಭಾರತ ।**
**ಅಥೈತಾನ್ಪರಿಪಪ್ರಚ್ಛ ಕೃತಾಞ್ಜಲಿರುಪಸ್ಥಿತಃ ॥೧॥**

ನಲನು ಒಡನೆಯೇ 'ತಥಾಸ್ತು' ಎಂದು ದೇವತೆಗಳಿಗೆ ಮಾತುಕೊಟ್ಟು ರಥದಿಂದಿಳಿದು ದೇವತೆಗಳ ಸಮೀಪಕ್ಕೆ ಹೋಗಿ ಕೈಜೋಡಿಸಿ ನಿಂತು ಹೇಳಿದನು :

"ನೀವುಗಳಾರು? ನಿಮ್ಮಲ್ಲಿ ನಾನು ಯಾರ ದೌತ್ಯವನ್ನು ಮಾಡಬೇಕಾಗಿದೆ? ನನ್ನಿಂದ ತಮಗೆ ಆಗಬೇಕಾಗಿರುವ ಕಾರ್ಯವು ಯಾವುದು? ಎಲ್ಲವನ್ನೂ ವಿಶದವಾಗಿ ಆಜ್ಞಾಪಿಸಿರಿ."

ನಲನ ವಿನಯಪೂರ್ವಕವಾದ ಮಾತುಗಳನ್ನು ಕೇಳಿ ಸಂತುಷ್ಟನಾದ ದೇವೇಂದ್ರನು ಹೇಳಿದನು :

"ನಿಷಧರಾಜ! ನಾವೆಲ್ಲರೂ ಲೋಕಪಾಲರು. ವಿದರ್ಭರಾಜಕುಮಾರಿ

ಯಾದ ದಮಯಂತಿಯನ್ನು ಸ್ವಯಂವರದಲ್ಲಿ ಪಡೆಯುವ ಅಭಿಲಾಷೆಯಿಂದ ವಿದರ್ಭದೇಶಕ್ಕೆ ಪ್ರಯಾಣಮಾಡುತ್ತಿದ್ದೇವೆ. ನಾನು ದೇವತೆಗಳ ಅಧಿಪತಿ ಯಾದ ಇಂದ್ರನಾಗಿದ್ದೇನೆ. ನನ್ನ ಪಕ್ಕದಲ್ಲಿರುವ ಇವನು ದೇವತೆಗಳಿಗೆ ಮುಖಪ್ರಾಯನಾಗಿರುವ ಅಗ್ನಿಯು. ಇತ್ತಕಡೆಯಲ್ಲಿ ನಿಂತಿರುವವನೇ ಜಲಕ್ಕೆ ಒಡೆಯನಾದ ವರುಣನು. ವರುಣನನ್ನನುಸರಿಸಿ ನಿಂತಿರುವವನು ಸಕಲಪ್ರಾಣಿಗಳ ವಿನಾಶಕನಾದ ಮತ್ತು ಮನುಷ್ಯರಿಗೆ ಮೃತ್ಯುರೂಪನಾದ ಯಮಧರ್ಮನು. ನೀನೀಗಲೇ ದಮಯಂತಿಯ ಸಮೀಪಕ್ಕೆ ಹೋಗಿ ನಾವು ಬರುತ್ತಿರುವ ವಾರ್ತೆಯನ್ನು ಅವಳಿಗೆ ತಿಳಿಸಬೇಕು. ಸ್ವಯಂವರದಲ್ಲಿ ನಿನ್ನ ಪಾಣಿಗ್ರಹಣಮಾಡುವ ಇಚ್ಛೆಯಿಂದ ಇಂದ್ರ, ಅಗ್ನಿ, ವರುಣ, ಯಮ–ಈ ನಾಲ್ವರು ದಿಕ್ಪಾಲಕರೂ ಬಂದಿರುವರೆಂದೂ, ಅವರಲ್ಲಿ ಯಾರೊಬ್ಬರಿ ಗಾದರೂ ನೀನು ಸ್ವಯಂವರಮಾಲೆಯನ್ನು ಹಾಕಬೇಕೆಂದೂ–ದಮಯಂತಿಗೆ ನೀನು ಸಲಹೆಮಾಡಬೇಕು. ನಲರಾಜ! ಈ ದೇವಕಾರ್ಯವು ನಿನ್ನಿಂದಲೇ ಆಗಬೇಕಾಗಿದೆ."

(ನಿಶ್ಚಯವಾಗಿಯೂ ಇಂದ್ರನು ಎಂತಹ ಕಷ್ಟತಮವಾದ ಕಾರ್ಯವನ್ನು ನಲನಿಗೆ ಹೇಳಿದನು! ನಲನೂ ದಮಯಂತಿಯ ಪಾಣಿಗ್ರಹಣಕ್ಕಾಗಿಯೇ ಬಂದಿರುತ್ತಾನೆ. ತಾನು ಬಹುವಾಗಿ ಪ್ರೀತಿಸಿದ್ದ ಕನ್ಯಾರತ್ನವನ್ನು ಬೇರೆಯವರೂ ಅಭಿಲಾಷಿಸಿದ್ದಾರೆಂದು ತಿಳಿದರೇನೇ ಕಾಮಿಯಾದವನ ಮನಸ್ಸು ಸಂಕಟಕ್ಕೀಡಾಗುವುದು. ಹೀಗಿರುವಾಗ ತಾನು ಪ್ರೀತಿಸಿದ ಕನ್ಯೆಯ ಬಳಿಗೇ ಹೋಗಿ ತನ್ನನ್ನು ಬಿಟ್ಟು ಅನ್ಯರನ್ನು ವರಿಸುವಂತೆ ಹೇಳಲು ಯಾರು ತಾನೇ ಧೈರ್ಯಮಾಡಿಯಾರು? ಯಾರಿಂದ ತಾನೇ ಸಾಧ್ಯವಾದೀತು? )

ನಲನೂ ಇದೇ ಅಭಿಪ್ರಾಯವನ್ನೇ ದೇವತೆಗಳ ಮುಂದಿಡುತ್ತಾನೆ.

"ದೇವತೆಗಳೇ! ನಾನೂ ದಮಯಂತಿಯನ್ನು ಪಡೆಯುವ ಅಭಿಲಾಷೆ ಯಿಂದಲೇ ವಿದರ್ಭದೇಶಕ್ಕೆ ಪ್ರಯಾಣಮಾಡುತ್ತಿದ್ದೇನೆ. ಆದುದರಿಂದ ನನ್ನನ್ನು ಈ ಕಾರ್ಯಕ್ಕೆ ನಿಯೋಜಿಸುವುದು ಸಾಧುವಲ್ಲ. ದಯೆಯಿಟ್ಟು ನೀವು ನನ್ನನ್ನು ಈ ದೌತ್ಯಕ್ಕೆ ನಿಯೋಜಿಸಬೇಡಿರಿ. ಯಾವ ಮನುಷ್ಯನು

ತಾನೇ ತಾನು ಪ್ರೀತಿಸಿದ ಸ್ತ್ರೀಯ ಸಮೀಪಕ್ಕೆ ಹೋಗಿ ತನ್ನನ್ನು ಬಿಟ್ಟು ಬೇರೆ ಯವರನ್ನು ವರಿಸುವ ಸಲಹೆಯನ್ನು ಮಾಡಿಯಾನು? ದಮಯಂತಿಯ ರೂಪ-ಲಾವಣ್ಯಗಳನ್ನೇ ಹಗಲಿರುಳೂ ನೆನೆದು ಪರಿತಪಿಸುತ್ತಿರುವ ನನ್ನಿಂದ ಈ ಕಾರ್ಯವು ಹೇಗೆ ತಾನೇ ಸಾಧ್ಯವಾದೀತು? ಆದುದರಿಂದ ದಯೆಯಿಟ್ಟು ನೀವು ನನ್ನನ್ನು ಈ ಕಾರ್ಯಕ್ಕೆ ನಿಯೋಜಿಸಬೇಡಿರಿ."

"ನಿಷಧರಾಜ! ಕಾರ್ಯವನ್ನು ಮಾಡಿಕೊಡುವೆನೆಂದು ಪ್ರತಿಜ್ಞೆಮಾಡಿ ಈಗ ಅದರಂತೆ ನಡೆದುಕೊಳ್ಳುವುದಿಲ್ಲವೇಕೆ? ಕಾರ್ಯವನ್ನು ಮಾಡಿ ಕೊಡುತ್ತೇನೆಂದು ಹೇಳಿದನಂತರ ಸತ್ಯಪ್ರತಿಜ್ಞನಾದವನು ಎಂತಹ ಕಷ್ಟತಮ ವಾದ ಕಾರ್ಯವನ್ನೂ ಮಾಡಿಯೇ ತೀರಬೇಕಾಗುವುದು. ನಮಗೆ ಈ ಕಾರ್ಯವನ್ನು ಬಿಟ್ಟು ಮತ್ತಾವ ಕಾರ್ಯವೂ ನಿನ್ನಿಂದ ಆಗಬೇಕಾಗಿರುವು ದಿಲ್ಲ. ಆದುದರಿಂದ ತಡಮಾಡದೇ ದಮಯಂತಿಯ ಬಳಿಗೆ ಹೋಗಿಬಾ."

ದೇವತೆಗಳು ಹೀಗೆ ಆಜ್ಞೆಮಾಡಿದನಂತರ ಅನ್ಯಮಾರ್ಗವಿಲ್ಲದೆ ನಲನು ಇಂದ್ರಾದಿಗಳನ್ನು ಕುರಿತು ಹೇಳಿದನು :

"ಲೋಕಪಾಲರೇ! ತಮ್ಮ ಮಾತಿನಂತೆ ತಮ್ಮ ದೂತನಾಗಿ ನಾನು ವಿದರ್ಭರಾಜಕುಮಾರಿಯ ಬಳಿಗೆ ಹೋಗಲು ಸಿದ್ಧನಾಗಿರುವೆನು. ಆದರೆ ಅವಳ ಅಂತಃಪುರವು ನೂರಾರು ರಾಜಭಟರಿಂದ ಸುರಕ್ಷಿತವಾಗಿರುವುದು. ಅಂತಹ ಸುರಕ್ಷಿತಸ್ಥಳಕ್ಕೆ ನಾನು ಹೋಗುವ ಸಾಧ್ಯತೆಯು ಹೇಗೆಂಬುದನ್ನು ದಯೆಯಿಟ್ಟು ತಿಳಿಸಿರಿ."

ನಲನ ಪ್ರಶ್ನೆಗೆ ಅಘಟಿತಘಟನಾಸಮರ್ಥನಾದ ಇಂದ್ರನು ಒಡನೆಯೇ ಉತ್ತರಿಸಿದನು :

"ನಿಷಧರಾಜ! ನೀನು ರಾಜಭಟರಿಗೆ ಅಗೋಚರನಾಗಿ ಅಂತಃಪುರ ಪ್ರವೇಶಮಾಡಲು ಸಮರ್ಥನಾಗುವೆ."

ಇಂದ್ರನಿಂದ ಅನುಗೃಹೀತನಾದ ನಲನು ಹಾಗೆಯೇ ಆಗಲೆಂದು ದೇವತೆ ಗಳಿಗೆ ಹೇಳಿ, ದಮಯಂತಿಯ ಅಂತಃಪುರಕ್ಕೆ ಹೋದನು. ಇಂದ್ರನ ಅನುಗ್ರಹ ದಿಂದಾಗಿ ರಾಜಭಟರಲ್ಲಿ ಯಾರೂ ಅವನನ್ನು ಮಾರ್ಗದಲ್ಲಿ ತಡೆಯಲಿಲ್ಲ. ನಲನು ರಾಜಭಟರಿಗೆ ಕಾಣಲೇ ಇಲ್ಲ. ಯಾವ ವಿಧವಾದ ತಡೆಯೂ ಇಲ್ಲದೇ ನಲನು ನೇರವಾಗಿ ದಮಯಂತಿಯ ಅಂತಃಪುರದೊಳಕ್ಕೇ ಹೋದನು. ಅಲ್ಲಿ

ನೂರಾರು ಸಖೀಜನರಿಂದ ಪರಿವೃತಳಾಗಿದ್ದ, ಶರೀರಕಾಂತಿಯಿಂದ ದೇದೀಪ್ಯ ಮಾನಳಾಗಿ ವಿರಾಜಿಸುತ್ತಿದ್ದ, ಸೊಬಗಿನ ರಾಣಿಯಾಗಿದ್ದ, ಕೋಮಲವಾದ ಶರೀರದಿಂದ ಕೂಡಿದ್ದ, ಕೃಶವಾದ ನಡುವಿನಿಂದ ಪರಿಶೋಭಿಸುತ್ತಿದ್ದ, ಕಾಂತಿ ಯುಕ್ತವಾದ ಕಣ್ಣುಗಳಿಂದ ಕೂಡಿದ್ದ, ಕಡುಚೆಲುವೆಯಾದ ದಮಯಂತಿಯನ್ನು ಕಂಡನು. ಪ್ರೇಕ್ಷಕರಿಗೆ ಅದರಲ್ಲಿಯೂ ತನ್ನನ್ನು ಕಾಮಿಸಿದ್ದವರಿಗೆ ನೇತ್ರಾನಂದದಾಯಕವಾದ ತನ್ನ ಶಾಂತವಾದ ತೇಜೋರಾಶಿಯಿಂದ–ಶೀತಳ ಕಾಂತಿಯುಕ್ತನಾದ ಚಂದ್ರನ ಪ್ರಭೆಯನ್ನು ಅಪಹಾಸ್ಯಮಾಡುತ್ತಿರುವಳೋ– ಎಂಬಂತೆ ಅವಳು ವಿಜೃಂಭಿಸುತ್ತಿದ್ದಳು. ಮಂದಸ್ಮಿತೆಯಾದ ತನ್ನ ಮನದ ರಾಣಿಯನ್ನು ನಲರಾಜನು ಎವೆಯಿಕ್ಕದೇ ಕ್ಷಣಕಾಲ ನಿಂತು ಮುಗ್ಧನಾಗಿ ವೀಕ್ಷಿಸಿದನು. ನಲನ ಹೃದಯಾಂತರಾಳದಲ್ಲಿದ್ದ ಕಾಮಾಗ್ನಿಯು ಚಾರು ಹಾಸಿನಿಯಾದ ದಮಯಂತಿಯನ್ನು ನೋಡಿದೊಡನೆಯೇ 'ಭುಗ್' ಎಂದು ಹೊತ್ತಿಕೊಂಡಿತು. ಮರುಕ್ಷಣದಲ್ಲಿಯೇ ಜಿತೇಂದ್ರಿಯನಾದ ನಲನು ತಾನು ಬಂದ ಕಾರ್ಯವನ್ನು ನೆನೆದು ಕಾಮಾಗ್ನಿಯನ್ನು ಬಹಳ ಕಷ್ಟದಿಂದ ಸುಪ್ತ ಗೊಳಿಸಿದನು. ಮಹಾತೇಜಸ್ವಿಯಾದ ಕಾಮರೂಪನಾದ ನಲನನ್ನು ನೋಡಿ ದೊಡನೆಯೇ ದಮಯಂತಿಯ ಸಖಿಯರು ತಮ್ಮ ತಮ್ಮ ಆಸನಗಳನ್ನು ಬಿಟ್ಟು ಆಶ್ಚರ್ಯಚಕಿತರಾಗಿ ಮೇಲೆದ್ದರು. ತಮ್ಮೆದುರಿನಲ್ಲಿ ಪುರುಷನೊಬ್ಬನು ನಿಂತಿರುವನೆಂದು ಭಯಪಡುವುದಕ್ಕೆ ಬದಲಾಗಿ ಆ ಯುವತಿಯರು ನಲನ ಅಸಾಧಾರಣವಾದ ರೂಪವನ್ನು ಕಂಡು ಆಶ್ಚರ್ಯಭರಿತರಾಗಿ ಅವನನ್ನು ಮನದಲ್ಲಿಯೇ ಶ್ಲಾಘಿಸಿದರು.

"ಎಂತಹ ಅನುಪಮವಾದ ರೂಪವಿದು? ಎಂತಹ ಶರೀರ ಕಾಂತಿಯು? ಅಂತಃಪುರದೊಳಗೆ ಪ್ರವೇಶಿಸಿರುವ ಈ ಮಹಾತ್ಮನ ಧೈರ್ಯವು ತಾನೇ ಎಷ್ಟಿರಬಹುದು? ಇವನು ಯಾರಾಗಿರಬಹುದು? ಇವನೊಬ್ಬ ದೇವತೆಯಿರಬಹುದೇ? ಅಥವಾ ಯಕ್ಷ-ಗಂಧರ್ವರಲ್ಲಿ ಯಾರಾದರೂ ಒಬ್ಬನಾಗಿರಬಹುದೋ?"

ಇವೇ ಮುಂತಾಗಿ ಮನದಲ್ಲಿ ತರ್ಕಿಸುತ್ತಾ ನಲನನ್ನು ಮನದಣಿಯು ವಂತೆ ನೋಡುತ್ತಿದ್ದ ಸಖಿಯರಿಗೆ ಬಂದವನನ್ನು ಆದರಿಸಿ ಸತ್ಕರಿಸಬೇಕೆಂಬ ವಿವೇಚನೆಯಾಗಲೀ, ವ್ಯವಧಾನವಾಗಲೀ ಇಲ್ಲವಾಯಿತು. ಅವರ ಬಾಯಿಂದ

ಮಾತುಗಳೇ ಹೊರಡದಾದುವು. ಸಖಿಯರಂತೆಯೇ ದಮಯಂತಿಯೂ ಆಶ್ಚರ್ಯಚಕಿತಳಾದಳು. ಆದರೂ ಮೌನವನ್ನು ಬಿಟ್ಟು ಮಂದಸ್ಮಿತೆಯಾಗಿ, ತನ್ನನ್ನು ನೋಡಿ ನಸುನಗುತ್ತಿದ್ದ, ಧೀರನಾದ ನಲನನ್ನು ಕುರಿತು ಹೇಳಿದಳು :

"ಕಳಂಕರಹಿತವಾದ ಶರೀರಲಾವಣ್ಯವುಳ್ಳ, ನನ್ನ ಹೃದ್ಗತವಾಗಿರುವ ಕಾಮವನ್ನು ಸುಂದರವಾದ ಶರೀರಕಾಂತಿಯಿಂದ ಪ್ರಚೋದಿಸುತ್ತಿರುವ ನೀನು ಯಾರು? ಪಾಪರಹಿತನೇ! ದೇವತೆಗಳಿಗೆ ಸಮಾನವಾದ ಕಾಂತಿಯುಳ್ಳ ವೀರನೇ! ನೀನೇಕಿಲ್ಲಿಗೆ ಬಂದಿರುವೆ? ಎಲ್ಲವನ್ನೂ ತಿಳಿಯಲು ನನ್ನ ಹೃದಯವು ತವಕಿಸುತ್ತಿರುವುದು. ಅದೂ ಅಲ್ಲದೇ ವೀರಯೋಧರಿಂದ ಸುರಕ್ಷಿತವಾಗಿರುವ ಅಂತಃಪುರಕ್ಕೆ ನೀನು ಹೇಗೆ ಬಂದೆಯೆಂಬುದೂ ನನಗೊಂದು ಸಮಸ್ಯೆಯಾಗಿದೆ. ಏಕೆಂದರೆ : ಆಲಸರಾಗಿರುವ ಸೇವಕರನ್ನು ನಮ್ಮ ತಂದೆಯಾದ ಭೀಮರಾಜನು ಕಠಿನವಾಗಿ ಶಿಕ್ಷಿಸುವನೆಂಬುದು ಸರ್ವತ್ರವಿದಿತವಾಗಿದೆ. ಹೀಗಿರುವಾಗ ನಿನಗೆ ಒಳಗೆ ಬರಲು ಹೇಗೆ ಸಾಧ್ಯವಾಯಿತು? ಶುಭಾಂಗನೇ! ಎಲ್ಲವನ್ನೂ ವಿವರಿಸಿ ಹೇಳು."

"ರಾಜಕುಮಾರಿ! ನನ್ನನ್ನು ನಲನೆಂದು ಕರೆಯುವರು. ನಾನಿಲ್ಲಿಗೆ ದೇವದೂತನಾಗಿ ಬಂದಿರುವೆನು. ಸುಂದರಾಂಗಿಯೇ! ಇಂದ್ರ-ಅಗ್ನಿ-ಯಮ-ವರುಣರು ನಿನ್ನನ್ನು ಅಭಿಲಾಷಿಸಿ ಬಂದಿರುತ್ತಾರೆ. ಆ ಲೋಕಪಾಲರಲ್ಲಿ ಯಾರೊಬ್ಬರನ್ನಾದರೂ ನೀನು ಪತಿಯನ್ನಾಗಿ ಪರಿಗ್ರಹಿಸುವವಳಾಗು. ಅವರ ಅನುಗ್ರಹಬಲದಿಂದಲೇ ನಾನು ರಾಜಭಟರಿಂದ ಸುರಕ್ಷಿತವಾಗಿದ್ದ ಈ ಅಂತಃಪುರದೊಳಕ್ಕೆ ಯಾರ ಕಣ್ಣಿಗೂ ಗೋಚರನಾಗದೇ ಪ್ರವೇಶಿಸಿದೆನು. ಈ ಕಾರಣದಿಂದಲೇ ನಾನು ಒಳಗೆ ಬರುತ್ತಿರುವಾಗ ರಾಜಭಟರು ನನ್ನನ್ನು ನೋಡಲೂ ಇಲ್ಲ ; ತಡೆಯಲೂ ಇಲ್ಲ. ಲೋಕಪಾಲರ ಆಶಯವನ್ನು ನಿನಗೆ ತಿಳಿಸುವ ಸಲುವಾಗಿಯೇ ನಾನು ಅವರಿಂದ ಕಳುಹಿಸಲ್ಪಟ್ಟಿರುವೆನು. ಶುಭಾಂಗಿಯೇ! ಅವರ ಆಶಯವೇನೆಂಬುದನ್ನೂ ನಾನು ತಿಳಿಸಿರುವೆನು. ನೀನು ಇದನ್ನು ಕೂಡಲೇ ಆಲೋಚಿಸಿ ನಿನ್ನ ಇಚ್ಛೆಯಿದ್ದಂತೆ ಮಾಡಬಹುದಾಗಿದೆ."

೫೫ನೆಯ ಅಧ್ಯಾಯವು ಮುಗಿಯಿತು.

## ದಮಯಂತಿಯೊಡನೆ ನಲನ ಮಾತುಕತೆ : ದಮಯಂತಿಯ ಸಂದೇಶವನ್ನು ನಲನು ದೇವತೆಗಳಿಗೆ ತಿಳಿಸಿದುದು

ಬೃಹದಶ್ವರು ಹೇಳುತ್ತಾರೆ :

**ಸಾ ನಮಸ್ಕೃತ್ಯ ದೇವೇಭ್ಯಃ ಪ್ರಹಸ್ಯ ನಲಮಬ್ರವೀತ್ ।**
**ಪ್ರಣಯಶ್ಚ ಯಥಾಶ್ರದ್ಧಂ ರಾಜನ್ಕಿಂ ಕರವಾಣಿ ತೇ ॥೧॥**

ನ`ಲರಾಜನ ಮಾತುಗಳನ್ನು ಕೇಳಿದನಂತರ ದಮಯಂತಿಯು ಇಂದ್ರಾದಿದೇವತೆಗಳನ್ನು ಮನಸಾ ಸ್ಮರಿಸಿ ಅವರಿಗೆ ನಮಸ್ಕರಿಸಿ, ನಲನನ್ನು ಕುರಿತು ಮಂದಸ್ಮಿತೆಯಾಗಿ ಹೇಳಿದಳು :

"ನಲರಾಜ! ವಿಶ್ವಾಸಪೂರ್ವಕವಾಗಿ ನನ್ನನ್ನು ಪ್ರೀತಿಸು. ನಾನು ನಿನ್ನ ಪ್ರಣಯಪಾತ್ರಳಾಗಿರುವೆನು. ನಾನು ನಿನಗಾಗಿ ಏನು ಮಾಡಬೇಕೆಂಬುದನ್ನು ಆಜ್ಞಾಪಿಸು ನಿನ್ನ ದಾಸಿಯಂತೆ ನಿನ್ನ ಯಾವುದೊಂದು ಕಾರ್ಯವನ್ನೂ ಮಾಡಲು ಸಿದ್ಧಳಾಗಿರುವೆನು. ನನ್ನೀ ಶರೀರವೂ ಮತ್ತು ನನ್ನದೆನಿಸಿರುವ ವಿಶಿಷ್ಟಸಂಪತ್ತೂ ನಿನ್ನ ಪಾದಗಳಲ್ಲಿ ಅರ್ಪಿತವಾಗಿದೆ. ಇದಕ್ಕೆ ಪ್ರತಿಯಾಗಿ ನಿನ್ನ ಪ್ರೇಮವನ್ನು ನನಗೆ ದಯಪಾಲಿಸು. ಪ್ರಭೋ! ಪಾರ್ಥಿವೇಶ್ವರ! ಅಂದು ನಿನ್ನ ವಿಷಯವಾಗಿ ಹಂಸಪಕ್ಷಿಯಾಡಿದ ಮಾತುಗಳು ನನ್ನ ಕಿವಿಯಲ್ಲಿ ಇಂದೂ ಪ್ರತಿಧ್ವನಿಸುತ್ತಿವೆ. ಆ ಮಾತುಗಳೇ ನನ್ನ ಹೃದಯಾಂತರಾಳದಲ್ಲಿರುವ ನಿನ್ನ ಮೇಲಿನ ವ್ಯಾಮೋಹವನ್ನು ಕ್ಷಣ-ಕ್ಷಣಕ್ಕೂ ಹೆಚ್ಚಿಸುತ್ತಿವೆ.

ನಾನು ಇಷ್ಟಬಂದವರನ್ನು ವರಿಸುವ ಸಲುವಾಗಿಯೇ ಸ್ವಯಂವರವು ಏರ್ಪಟ್ಟಿರುವುದು. ರಾಜರೂ ನೂರಾರು ಸಂಖ್ಯೆಯಲ್ಲಿ ಉಪಸ್ಥಿತರಾಗಿರುವರು. ನಿನ್ನಲ್ಲಿಯೇ ಲೀನಮನಸ್ಕಳಾಗಿರುವ ನನ್ನನ್ನೇನಾದರೂ ನೀನು ವ್ಯಾಜಾಂತರಗಳಿಂದ ತಿರಸ್ಕರಿಸಿದೆಯಾದರೆ–ನಾನು ನಿಶ್ಚಯವಾಗಿ ಹೇಳುವೆನು, ನಲರಾಜ! ವಿಷಕುಡಿದೋ, ಬೆಂಕಿಗೆ ಬಿದ್ದೋ, ನೀರಿನಲ್ಲಿ ಧುಮುಕಿಯೋ, ನೇಣುಹಾಕಿಕೊಂಡೋ–ಈ ದೇಹವನ್ನೇ ಪರಿತ್ಯಾಗಮಾಡಿಬಿಡುವೆನು. ಮಹಾರಾಜ! ಇದಕ್ಕೆ ಅವಕಾಶವಾಗದಂತೆ ನಿನ್ನನ್ನೇ ಪ್ರತಿಕ್ಷಣದಲ್ಲಿಯೂ ಚಿಂತಿಸುತ್ತಿರುವ ನನ್ನನ್ನು ಪರಿಗ್ರಹಿಸು."

"ದಮಯಂತಿ! ನೀನು ಹೇಳುತ್ತಿರುವುದು ನನಗೆ ಆಶ್ಚರ್ಯವೆನಿಸಿದೆ. ಏಕೆಂದರೆ : ತ್ರೈಲೋಕ್ಯಾಧಿಪತಿಯಾದ ಇಂದ್ರ, ಸಕಲಚರಾಚರಗಳ ದೇಹಗಳಲ್ಲಿಯೂ ಅಡಗಿರುವ ಅಗ್ನಿ, ಮಹಾಸಮುದ್ರಕ್ಕೂ ಜಲಚರಗಳಿಗೂ ಒಡೆಯನಾದ ವರುಣ, ಸಕಲಪ್ರಾಣಿಗಳಿಗೂ ಮೃತ್ಯುಸ್ವರೂಪನಾದ, ಧರ್ಮಿಷ್ಠನಾದ ಯಮಧರ್ಮ–ಈ ನಾಲ್ವರೂ ನಿನ್ನ ಪಾಣಿಗ್ರಹಣಮಾಡುವ ಆಶಯದಿಂದ ಬಂದಿರುವಾಗ ಕೇವಲ ಮಾನವನೊಬ್ಬನನ್ನು ನೀನು ಪ್ರೀತಿಸಹೋಗುವೆಯಾ? ಶುಭಾಂಗಿ! ನಿನ್ನ ಮನಸ್ಸನ್ನು ಪ್ರಪಂಚದ ಸೃಷ್ಟಿ-ಸ್ಥಿತಿ-ಲಯಗಳಿಗೆ ಕಾರಣಭೂತರಾದ ಆ ಲೋಕಪಾಲರ ಕಡೆಗೆ ತಿರುಗಿಸಿ ಅವರಲ್ಲಿ ಶ್ರೇಷ್ಠರಾದವರನ್ನು ಆರಿಸಿ ವರಿಸು. ನಾನು ಅವರ ಪಾದಧೂಳಿಗೂ ಸಮಾನನಲ್ಲ. ದಮಯಂತಿ! ನನ್ನಂತಹ ಕ್ಷುದ್ರಮಾನವನನ್ನೇಕೆ ಮೋಹಿಸುವೆ? ಮೇಲಾಗಿ :

**ವಿಪ್ರಿಯಂ ಹ್ಯಾಚರನ್ಮರ್ತ್ಯೋ ದೇವಾನಾಂ ಮೃತ್ಯುಮೃಚ್ಛತಿ ।**
**ತ್ರಾಹಿ ಮಾಮನವದ್ಯಾಙ್ಗಿ ವರಯಸ್ವ ಸುರೋತ್ತಮಾನ್ ॥೭॥**

ದೇವತೆಗಳಿಗೆ ಅಪ್ರಿಯವಾದ ಕಾರ್ಯವನ್ನು ಮಾಡುವ ಮಾನವನಿಗೆ ವಿನಾಶವು ಒಡನೆಯೇ ಸಿದ್ಧವಾಗುವುದು. ದೇವತೆಗಳನ್ನು ಅತೃಪ್ತಿಗೊಳಿಸುವುದರಿಂದುಂಟಾಗುವ ಆಪತ್ತಿನಿಂದ ನನ್ನನ್ನು ಪಾರುಮಾಡು. ಇಂದ್ರಾಗ್ನಿ-ವರುಣ-ಯಮರಲ್ಲಿ ಯಾರೊಬ್ಬರನ್ನಾದರೂ ವರಿಸುವವಳಾಗು. ಇದರಿಂದ ನಿನಗಾಗುವ ಪ್ರಯೋಜನವೂ ಅಪಾರವಾದುದು. ದೇವಯೋಗ್ಯವಾದ ವಸ್ತ್ರಾಭರಣಗಳು, ನಾನಾವರ್ಣಗಳ ದಿವ್ಯಮಾಲೆಗಳು–ಎಲ್ಲವೂ ಲಭ್ಯವಾಗುವುವು. ದಮಯಂತಿ! ಲೋಕದಲ್ಲಿ ಯಾವ ಸ್ತ್ರೀಯು ತಾನೇ ಮಹಾನುಭಾವನಾದ, ದೇವತೆಗಳಿಗೆ ಮುಖಪ್ರಾಯನಾದ ಅಗ್ನಿದೇವನನ್ನು ಪರಿಗ್ರಹಿಸಲು ಒಪ್ಪುವುದಿಲ್ಲ? ಅಗ್ನಿದೇವನ ಸಾಮರ್ಥ್ಯವು ಅನ್ಯಾದೃಶವಾದುದು.

**ಯ ಇಮಾಂ ಪೃಥಿವೀಂ ಕೃತ್ಸ್ನಾಂ ಸಂಕ್ಷಿಪ್ಯ ಗ್ರಸತೇ ಪುನಃ ।**
**ಹುತಾಶಮೀಶಂ ದೇವಾನಾಂ ಕಾ ತಂ ನ ವರಯೇತ್ಪತಿಮ್ ॥೯॥**

ಅಗ್ನಿಯು ಈ ಪ್ರಪಂಚವೆಲ್ಲವನ್ನೂ ಸಂಕ್ಷೇಪಿಸಿ ನುಂಗುವ ಸಾಮರ್ಥ್ಯವುಳ್ಳವನಾಗಿದ್ದಾನೆ. ಅಂತಹವನು ನಿಶ್ಚಯವಾಗಿಯೂ ನಿನಗೆ ಅನುರೂಪ

ನಾಗಿದ್ದಾನೆ. ಶುಭಾಂಗಿ! ಸಾಕ್ಷಾತ್ ದೇವೇಶನಾದ ಅಗ್ನಿದೇವನೇ ಒಲಿದು ಬಂದಿರುವಾಗ ಯಾವಳು ತಾನೇ ಅಂತಹವನನ್ನು ಪತಿಯನ್ನಾಗಿ ವರಿಸುವುದಿಲ್ಲ?

**ಯಸ್ಯ ದಣ್ಡಭಯಾತ್ಸರ್ವೇ ಭೂತಗ್ರಾಮಾಃ ಸಮಾಗತಾಃ ।**
**ಧರ್ಮಮೇವಾನುರುಧ್ಯನ್ತಿ ಕಾ ತಂ ನ ವರಯೇತ್ಪತಿಮ್ ॥೧೦॥**

ಮಹಾನುಭಾವನಾದ ಯಮನು ತನ್ನ ದಂಡದ ಪ್ರಭಾವದಿಂದ ಸಕಲ ಚರಾಚರಪ್ರಾಣಿಗಳನ್ನೂ ಧರ್ಮಮಾರ್ಗದಲ್ಲಿ ಕರೆದೊಯ್ಯುವ ಸಾಮರ್ಥ್ಯ ವುಳ್ಳವನಾಗಿದ್ದಾನೆ. ಯಾವಳು ತಾನೇ ಅಂತಹವನನ್ನು ಪತಿಯನ್ನಾಗಿ ವರಿಸುವುದಿಲ್ಲ? ಅವನನ್ನಾದರೂ ನೀನು ಪರಿಗ್ರಹಿಸಬಹುದಾಗಿದೆ.

**ಧರ್ಮಾತ್ಮಾನಂ ಮಹಾತ್ಮಾನಂ ದೈತ್ಯದಾನವಮರ್ದನಮ್ ।**
**ಮಹೇನ್ದ್ರಂ ಸರ್ವದೇವಾನಾಂ ಕಾ ತಂ ನ ವರಯೇತ್ಪತಿಮ್ ॥೧೧॥**

ಧರ್ಮಾತ್ಮನಾದ, ಮಹಾತ್ಮನಾದ, ದೈತ್ಯ-ದಾನವಧ್ವಂಸಕನಾದ, ತ್ರೈಲೋಕ್ಯಾಧಿಪತಿಯಾದ, ಸರ್ವಾಂಗಸುಂದರನಾದ, ಸರ್ವದೇವಾಧಿಪತಿ ಯಾದ ಇಂದ್ರನನ್ನು ಯಾವ ಸ್ತ್ರೀಯು ತಾನೇ ಪತಿಯನ್ನಾಗಿ ವರಿಸುವುದಿಲ್ಲ? ನಿಶ್ಚಯವಾಗಿಯೂ ನೀನು ಹೇಳುತ್ತಿರುವುದನ್ನು ನೋಡಿ ನನಗೆ ಆಶ್ಚರ್ಯವೆನಿಸಿದೆ. ದಮಯಂತಿ! ಅವರ ಗುಣಕಥನಗಳನ್ನು ಕೇಳಿದ ಮೇಲಾದರೂ ನಿನ್ನ ಮನಸ್ಸನ್ನು ಅವರ ಕಡೆಗೆ ತಿರುಗಿಸು.

**ಕ್ರಿಯತಾಮವಿಶಙ್ಕೇನ ಮನಸಾ ಯದಿ ಮನ್ಯಸೇ ।**
**ವರುಣಂ ಲೋಕಪಾಲಾನಾಂ ಸುಹೃದ್ವಾಕ್ಯಮಿದಂ ಶೃಣು ॥೧೨॥**

ದಮಯಂತಿ! ಇಂದ್ರಾಗ್ನಿ-ಯಮರು ನಿನಗೆ ಬೇಡವಾದರೆ ವರುಣ ನನ್ನಾದರೂ ವರಿಸುವವಳಾಗು. ಈ ವಿಷಯದಲ್ಲಿ ನೀನು ಸ್ವಲ್ಪವಾದರೂ ಸಂಕೋಚಪಡುವ ಕಾರಣವಿಲ್ಲ. ಒಡನೆಯೇ ನಾನು ಹೇಳಿದಂತೆ ಮಾಡು. ನಾನು ಹೇಳುತ್ತಿರುವ ಸುಹೃದ್ವಾಕ್ಯವನ್ನು ಕೇಳು. ನಿನಗೆ ಯುಕ್ತವೆನಿಸಿದರೆ ವರುಣನನ್ನಾದರೂ ವರಿಸು."

ದಮಯಂತಿಗೆ ದೇವತೆಗಳ ವರ್ಣನೆಯಾಗಲೀ, ಅವರ ಪ್ರಭಾವವಾ

ಗಲೀ ಮನಸ್ಸಿಗೆ ಹಿಡಿಸಲಿಲ್ಲ. ಅವರ ವರ್ಣನೆಯನ್ನು ಕೇಳುತ್ತಿದ್ದಂತೆಲ್ಲಾ ದಮಯಂತಿಗೆ ಅತಿದುಃಖವಾಗುತ್ತಿತ್ತು. ಕಣ್ಣುಗಳಿಂದ ಅಶ್ರುಬಿಂದುಗಳು ಮುತ್ತಿನ ಮಣಿಗಳಂತೆ ಕೆಳಗುದುರುತ್ತಿದ್ದುವು. ನಲನು ಮಾತನಾಡಿ ವಿರಮಿಸಿದನಂತರ ದಮಯಂತಿಯು ಹೇಳಿದಳು :

**ದೇವೇಭ್ಯೋऽಹಂ ನಮಸ್ಕೃತ್ಯ ಸರ್ವೇಭ್ಯಃ ಪೃಥಿವೀಪತೇ ।**
**ವೃಣೇ ತ್ವಾಮೇವ ಭರ್ತಾರಂ ಸತ್ಯಮೇತದ್ಬ್ರವೀಮಿ ತೇ ॥೧೪॥**

"ಲೋಕೇಶ್ವರ! ನಾನು ಆ ದೇವತೆಗಳೆಲ್ಲರಿಗೂ ಮನಸಾರ ನಮಸ್ಕರಿಸಿ ನಿನ್ನನ್ನೇ ಪತಿಯನ್ನಾಗಿ ವರಿಸುತ್ತೇನೆ. ಈ ಮಾತನ್ನು ನಾನು ಸತ್ಯವಾಗಿ ಹೇಳುತ್ತಿದ್ದೇನೆ."

ದಮಯಂತಿಯು ಬಹುದುಃಖಿತೆಯಾಗಿ, ಬದ್ಧಾಂಜಲಿಯಾಗಿ ನಿಂತು ಗದ್ಗದಸ್ವರದಿಂದ ಹೇಳಿದ ಮಾತುಗಳನ್ನು ಕೇಳಿ ದೇವದೂತನಾದ ನಲರಾಜನು ಹೇಳಿದನು :

"ರಾಜಕುಮಾರಿ! ನಿನ್ನ ಇಚ್ಛಾನುಸಾರವಾಗಿ ನೀನು ನಡೆದುಕೊಳ್ಳಬಹುದು. ಆದರೆ ನಾನು ದೇವತೆಗಳ ಕಾರ್ಯವನ್ನು ಸಾಧನೆಮಾಡಿಕೊಡುವೆನೆಂದು ಪ್ರತಿಜ್ಞೆಮಾಡಿ ಬಂದಿರುವಾಗ–ಅದರಲ್ಲಿಯೂ ದೇವತೆಗಳಿಗೆ ಮಾತುಕೊಟ್ಟು ಅವರ ದೂತನಾಗಿ ಬಂದಿರುವಾಗ–ಬೇರೆಯವರ ಕಾರ್ಯಕ್ಕೆಂದು ಬಂದಿರುವ ನಾನು, ಸ್ವಾರ್ಥವನ್ನು ಹೇಗೆತಾನೇ ಸಾಧಿಸಿಕೊಳ್ಳಲಿ? ಸ್ವಾರ್ಥದ ವಿಷಯವಾಗಿ ಮಾತನಾಡಲು ಕೂಡ ನನಗೆ ಧೈರ್ಯವಿಲ್ಲ. ನಿನ್ನ ಇಚ್ಛೆಯೂ ಪೂರ್ಣವಾಗಬೇಕು. ನನ್ನ ಕಾರ್ಯಸಾಧನೆಯೂ ಆಗಬೇಕು. ಆದರೆ ಧರ್ಮಕ್ಕೆ ಮಾತ್ರ ಚ್ಯುತಿಯುಂಟಾಗಬಾರದು. ಎಂದರೆ : ಇತರರ ದೌತ್ಯವನ್ನು ವಹಿಸಿ ಬಂದಿರುವ ನಾನು ಸ್ವಾರ್ಥಸಾಧನೆಯನ್ನು ಮಾಡಿಕೊಂಡೆನೆಂಬ ಅಪವಾದವೂ ಬರಕೂಡದು. ಈ ರೀತಿಯಲ್ಲಿ ಯಾವುದಾದರೂ ಸಲಹೆಯಿದ್ದರೆ ಹೇಳುವುದು ನಿನಗೆ ಯುಕ್ತವಾಗಿದೆ."

ಸಾಧ್ವಿಯಾದ ದಮಯಂತಿಗೆ ಒಡನೆಯೇ ಒಂದು ಉಪಾಯವು ಹೊಳೆಯಿತು. ಕಣ್ಣುಗಳಲ್ಲಿ ನೀರು ಹರಿಯುತ್ತಿದ್ದರೂ ಮುಗುಳ್ನಗೆಯನ್ನು ಬೀರುತ್ತಾ ಹೇಳಿದಳು :

“ರಾಜೇಶ್ವರ! ನಾನೀಗ ದೋಷರಹಿತವಾದ ಮಾರ್ಗವೊಂದನ್ನು ಸೂಚಿಸುವೆನು. ಮಹಾನುಭಾವನೇ! ನಾಲ್ವರು ದೇವತೆಗಳೊಡನೆ ನೀನೂ ಸ್ವಯಂವರಕ್ಕೆ ಆಗಮಿಸು. ಅವರೆಲ್ಲರ ಸಮ್ಮುಖದಲ್ಲಿಯೇ ನಾನು ನಿನ್ನ ಕೊರಳಿಗೇ ಸ್ವಯಂವರಮಾಲಿಕೆಯನ್ನು ಹಾಕುವೆನು. ಆಗ ನೀನು ದೋಷಭಾಗಿಯಾಗುವುದಿಲ್ಲ, ಅಲ್ಲವೇ?”

ದಮಯಂತಿಯು ಹೇಳಿದುದು ನಲನಿಗೂ ‘ಸರಿ’ ಎನಿಸಿತು. ಒಡನೆಯೇ ಅಂತಃಪುರವನ್ನು ಬಿಟ್ಟು ದೇವತೆಗಳಿದ್ದೆಡೆಗೆ ತೆರಳಿದನು.

ಲೋಕಪಾಲಕರೂ ನಲನ ಬರುವಿಕೆಯನ್ನೇ ಕಾತರತೆಯಿಂದ ನಿರೀಕ್ಷಿಸುತ್ತಿದ್ದರು. ನಲನನ್ನು ಕಂಡೊಡನೆಯೇ ದೇವಪ್ರಮುಖನಾದ ಇಂದ್ರನು ಕೇಳಿದನು :

“ನಲರಾಜ! ಶುಚಿಸ್ಮಿತೆಯಾದ ದಮಯಂತಿಯನ್ನು ನೀನು ಕಂಡೆಯಾ? ನಮ್ಮ ವಿಷಯವನ್ನು ಅವಳೊಡನೆ ಹೇಳಿದೆಯಾ? ಅವಳು ನಮ್ಮ ವಿಷಯವಾಗಿ ಏನೆಂದು ಹೇಳಿದಳು? ಎಲ್ಲವನ್ನೂ ವಿಶದವಾಗಿ ತಿಳಿಸು.”

“ದೇವತೆಗಳೇ! ನಿಮ್ಮಿಂದ ಆಜ್ಞಪ್ತನಾದ ನಾನು ದಮಯಂತಿಯಿದ್ದ ಅರಮನೆಗೆ ತೆರಳಿದೆನು. ವಿಶಾಲವಾದ ಮತ್ತು ಸುಂದರವಾದ ಅರಮನೆಯ ಮಹಾದ್ವಾರದಲ್ಲಿ ದಂಡಾಯುಧವನ್ನು ಹಿಡಿದಿದ್ದ, ವೃದ್ಧರಾದ ಪ್ರಹರಿಗಳಿದ್ದರು. ಆದರೆ ನಿಮ್ಮ ಅನುಗ್ರಹದಿಂದಾಗಿ ನಾನು ಅರಮನೆಯನ್ನು ಪ್ರವೇಶಿಸುವ ವೇಳೆಯಲ್ಲಿ ಯಾರೂ ನನ್ನನ್ನು ನೋಡಲಿಲ್ಲ. ಪ್ರಹರಿಗಳಿಗೆ ಕಾಣದಂತೆಯೇ ಅಂತಪುರವನ್ನು ಪ್ರವೇಶಿಸಿದೆನು. ಅಲ್ಲಿ ರಾಜಕುಮಾರಿಯಾದ ದಮಯಂತಿಗೂ ಮತ್ತು ಅವಳನ್ನು ಸುತ್ತುವರಿದು ಕುಳಿತಿದ್ದ ಅವಳ ಸಖಿಯರಿಗೂ ನಾನು ಗೋಚರನಾದೆನು. ಯಾವ ತಡೆಯೂ ಇಲ್ಲದೇ ಅಂತಃಪುರದೊಳಗೆ ಪ್ರವೇಶಿಸಿದ ನನ್ನನ್ನು ಕಂಡೊಡನೆಯೇ ಅವರೆಲ್ಲರೂ ಆಶ್ಚರ್ಯಭರಿತೆಯರಾದರು. ದಮಯಂತಿಯೇ ಮೊದಲು ನನ್ನನ್ನು ನೀನಾರೆಂದು ಪ್ರಶ್ನಿಸಿದಳು. ನಾನು ನಲನೆಂದೂ, ದೇವದೂತನಾಗಿ ಬಂದಿರುವೆನೆಂದೂ ಹೇಳಿ ನಿಮ್ಮ ಆಶಯವನ್ನೂ ಮತ್ತು ನಿಮ್ಮ ಪ್ರಭಾವವನ್ನೂ ದಮಯಂತಿಗೆ ಯಥಾವತ್ತಾಗಿ ವಿವರಿಸಿ ಹೇಳಿದೆನು.

ಆದರೆ ದಮಯಂತಿಯು ನನ್ನ ಸಲಹೆಗೆ ಒಪ್ಪಲಿಲ್ಲ. ಅವಳು ನನ್ನಲ್ಲಿಯೇ ನೆಟ್ಟಮನಸ್ಸುಳ್ಳವಳಾಗಿರುವಂತೆ ತೋರಿತು. ದೇವದೂತನಾಗಿ ಹೋಗಿದ್ದ ನಾನು ಸ್ವಾರ್ಥದ ವಿಷಯವನ್ನು ಪ್ರಸ್ತಾಪಿಸಲಿಲ್ಲ. ದೇವತೆಗಳಿಗೆ ಏನು ಹೇಳಲೆಂದು ದಮಯಂತಿಯನ್ನು ಕೇಳಿದೆನು. ಅವಳು ಅದಕ್ಕುತ್ತರವಾಗಿ ಹೀಗೆ ಹೇಳಿದಳು :

**ಅಬ್ರುವೀಚ್ಚೈವ ಮಾಂ ಬಾಲಾ ಆಯಾನ್ತು ಸಹಿತಾಃ ಸುರಾಃ ।**
**ತ್ವಯಾ ಸಹ ನರವ್ಯಾಘ್ರ ಮಮ ಯತ್ರ ಸ್ವಯಂವರಃ ॥೨೯॥**

**ತೇಷಾಮಹಂ ಸನ್ನಿಧೌ ತ್ವಾಂ ವರಯಿಷ್ಯಾಮಿ ನೈಷಧ ।**
**ಏವಂ ತವ ಮಹಾಬಾಹೋ ದೋಷೋ ನ ಭವಿತೇತಿ ಹ ॥೩೦॥**

"ನಾಲ್ವರು ಲೋಕಪಾಲಕರೂ ನಿನ್ನೊಡನೆ ಸ್ವಯಂವರಮಂಟಪಕ್ಕೆ ಬರಲಿ. ಅವರ ಸಮ್ಮುಖದಲ್ಲಿಯೇ ನಾನು ನಿನ್ನನ್ನು ನನ್ನ ಪತಿಯನ್ನಾಗಿ ವರಿಸುವೆನು. ಹೀಗೆ ಮಾಡುವುದರಿಂದ–'ದೇವತೆಗಳ ದೂತನಾಗಿ ಬಂದ ನಲನು ಸ್ವಾರ್ಥವನ್ನು ಸಾಧಿಸಿಕೊಂಡನು'–ಎಂಬ ದೋಷವಾಗಲೀ, ಅಪವಾದವಾಗಲೀ–ನಿನಗೆ ಬರುವುದಿಲ್ಲ." ದೇವತೆಗಳೇ! ಇದಿಷ್ಟೂ ದಮಯಂತಿಯ ಅರಮನೆಯಲ್ಲಿ ನಡೆದ ಮಾತುಕತೆಗಳಾಗಿವೆ. ಮುಂದೇನು ಮಾಡಬೇಕೆಂಬ ವಿಷಯವು ತಮ್ಮ ನಿರ್ಧಾರಕ್ಕೆ ಸೇರಿದುದಾಗಿರುತ್ತದೆ." ಎಂದು ಹೇಳಿ ನಲರಾಜನು ವಿರಮಿಸಿದನು.

೫೬ನೆಯ ಅಧ್ಯಾಯವು ಮುಗಿಯಿತು.

೫೭ನೆಯ ಅಧ್ಯಾಯ ನಲೋಪಾಖ್ಯಾನಪರ್ವ (ಮುಂದುವರಿದಿದೆ.)

## ಸ್ವಯಂವರದಲ್ಲಿ ದಮಯಂತಿಯು ನಲನನ್ನು ವರಿಸಿದುದು : ದೇವತೆಗಳಿಂದ ನಲನಿಗೆ ವರಪ್ರದಾನ : ನಲ-ದಮಯಂತಿಯರ ವಿವಾಹ : ನಲನಿಂದ ಯಜ್ಞಾನುಷ್ಠಾನ : ಸಂತಾನಪ್ರಾಪ್ತಿ

ಶುಭತಿಥಿ - ಶುಭವಾರ - ಶುಭನಕ್ಷತ್ರ - ಶುಭಯೋಗ - ಶುಭಕರಣ ಗಳಿಂದ ಯುಕ್ತವಾಗಿದ್ದ ಶುಭದಿವಸದಲ್ಲಿ ಭೀಮರಾಜನು ಸ್ವಯಂವರವನ್ನು

ಏರ್ಪಡಿಸಿ ತನ್ನ ಪಟ್ಟಣಕ್ಕೆ ಆಗಮಿಸಿದ್ದ ರಾಜ-ಮಹಾರಾಜರೆಲ್ಲರನ್ನೂ ಸ್ವಯಂವರಮಂಟಪಕ್ಕೆ ಆಹ್ವಾನಿಸಿದನು. ಲಾವಣ್ಯಮಯಿಯಾದ ದಮಯಂತಿಯನ್ನು ಪಡೆಯಬೇಕೆಂಬ ಕಾಮನೆಯಿಂದ ಅನವರತವೂ ಚಿಂತಿಸುತ್ತಿದ್ದ ರಾಜರೆಲ್ಲರೂ ಭೀಮರಾಜನಿಂದ ಆಹ್ವಾನವು ಬಂದೊಡ ನೆಯೇ ಸಾಲಂಕೃತರಾಗಿ ಸ್ವಯಂವರಮಂಟಪಕ್ಕೆ ಧಾವಿಸಿದರು. ಸ್ವರ್ಣಮಯ ವಾದ ಕಂಬಗಳಿಂದಲೂ, ತಳಿರು-ತೋರಣಗಳಿಂದಲೂ ಅಲಂಕರಿಸಲ್ಪಟ್ಟಿದ್ದ ಆ ಸ್ವಯಂವರಸಭಾಮಂದಿರವನ್ನು–ಮಹಾಸಿಂಹಗಳು ಪರ್ವತದಲ್ಲಿರುವ ಗುಹೆಯನ್ನು ಪ್ರವೇಶಿಸುವಂತೆ–ರಾಜರು ದರ್ಪದಿಂದ ಕೂಡಿದವರಾಗಿ ಅಟ್ಟಹಾಸದಿಂದ ಪ್ರವೇಶಿಸಿದರು. ಸ್ವಯಂವರಮಂಟಪವನ್ನು ಪ್ರವೇಶಿಸು ತ್ತಲೇ ಮಂತ್ರಿ-ಪುರೋಹಿತರು ಅವರನ್ನು ಸ್ವಾಗತಿಸಿದರು. ರಾಜಭಟರು ಯಥಾಯೋಗ್ಯವಾದ ಆಸನಗಳಲ್ಲಿ ಕುಳ್ಳಿರಿಸಿದರು. ಘಮ-ಘಮಿಸುತ್ತಿದ್ದ ಪುಷ್ಪಮಾಲಿಕೆಗಳನ್ನೂ, ಥಳ-ಥಳಿಸುತ್ತಿದ್ದ ಕರ್ಣಾಭರಣಗಳನ್ನೂ, ರತ್ನ ಮಾಲೆಗಳನ್ನೂ, ಕನಕಾಂಗದ-ಕೇಯೂರಗಳನ್ನೂ ಧರಿಸಿದ್ದ ಆ ರಾಜರು– ಭೋಗವತೀಪಟ್ಟಣಕ್ಕೆ ಅಲಂಕಾರಪ್ರಾಯರಾಗಿರುವ ನಾಗರಾಜರಂತೆ–ಆ ಸ್ವಯಂವರಮಂಟಪವನ್ನು ಶೋಭಾಯಮಾನವನ್ನಾಗಿ ಮಾಡಿದರು. ವ್ಯಾಘ್ರಗಳಿಂದ ಗುಹೆಯು ಶೋಭಿಸುವಂತೆ–ಪುರುಷವ್ಯಾಘ್ರರಿಂದ ಆ ಸ್ವಯಂವರ ಸಭಾಮಂಟಪವು ಪರಿಶೋಭಿಸುತ್ತಿದ್ದಿತು. ಅವರ ತೋಳುಗಳು ಕಬ್ಬಿಣದ ಪರಿಘಗಳಂತೆ ಪುಷ್ಟವಾಗಿಯೂ, ನೀಳವಾಗಿಯೂ ಇದ್ದು, ಸುಂದರವಾದ ಅಂಗುಲ್ಯಾಭರಣಗಳಿಂದ ಪರಿಶೋಭಿತವಾದ ಐದು ಬೆರಳು ಗಳಿಂದ ಕೂಡಿದುವುಗಳಾಗಿ, ಐದು ಹೆಡೆಗಳುಳ್ಳ ಸರ್ಪಗಳಂತೆ ಕಾಣುತ್ತಿ ದ್ದುವು. ಸುಂದರವಾದ ಕೇಶಗಳಿಂದಲೂ, ಅಂದವಾದ ಮೂಗುಗಳಿಂದಲೂ ಮತ್ತು ಅಂದವಾದ ಕಣ್ಣುಗಳು ಮತ್ತು ಹುಬ್ಬುಗಳಿಂದಲೂ ಕೂಡಿದ್ದ ಅವರ ಮುಖಾರವಿಂದಗಳು ಆಕಾಶದಲ್ಲಿ ಥಳಥಳಿಸುವ ನಕ್ಷತ್ರಗಳಂತೆ ಆ ಸಭೆ ಯಲ್ಲಿ ಪರಿಶೋಭಿಸುತ್ತಿದ್ದುವು. ಸ್ವಯಂವರಮುಹೂರ್ತವು ಸನ್ನಿಹಿತ ವಾಗಲಾಗಿ ಶುಭಾನನೆಯಾದ ದಮಯಂತಿಯು ಅಲ್ಲಿ ನೆರೆದಿದ್ದ ರಾಜ ಕುಮಾರರ ಮನೋನೇತ್ರಗಳನ್ನು ತನ್ನ ಶರೀರದ ಶೋಭೆಯಿಂದ ಅಪಹರಣ ಮಾಡುತ್ತಾ ಸ್ವಯಂವರಮಂಟಪಕ್ಕೆ ಮೆಲ್ಲ-ಮೆಲ್ಲನೆ ಆಗಮಿಸಿದಳು.

ಸ್ವಯಂವರಮಂಟಪದ ಸುತ್ತಲೂ ಮಂಡಿಸಿದ್ದ ರಾಜಕುಮಾರರ ದೃಷ್ಟಿಗಳು ದಮಯಂತಿಯ ಒಂದೊಂದು ಅವಯವದ ಮೇಲೆ ಬಿದ್ದು ಅಲ್ಲಿಯೇ ಆಸಕ್ತವಾದುವು. ಮತ್ತೊಂದೆಡೆಗೆ ಚಲಿಸಲಿಲ್ಲ.

ದಮಯಂತಿಯ ಅವಯವಗಳೆಲ್ಲವೂ ಅತಿಸುಂದರವಾಗಿದ್ದುವು. ಒಂದೇ ಅವಯವದ ಸೊಬಗನ್ನು ಎಷ್ಟು ಹೊತ್ತು ನೋಡಿದರೂ ಅವರ ಮನಸ್ಸು ತಣಿಯುತ್ತಿರಲಿಲ್ಲ.

ದಮಯಂತಿಯು ಸ್ವಯಂವರಮಾಲೆಯನ್ನು ಹಿಡಿದು ಮೆಲ್ಲ-ಮೆಲ್ಲನೆ ಹೆಜ್ಜೆಯಿಟ್ಟು ನಡೆಯುತ್ತಿದ್ದಂತೆ ವಂದಿ-ಮಾಗಧರು ಅವಳ ಸಮೀಪ ದಲ್ಲಿರುತ್ತಿದ್ದ ರಾಜಕುಮಾರರ ದೇಶ, ಕೋಶ, ವಂಶಾವಳಿ ಮತ್ತು ಬಿರುದಾವಳಿಗಳನ್ನು ಹೇಳುತ್ತಿದ್ದರು. ಅನೇಕ ರಾಜಕುಮಾರರಿಗೆ ನಿರಾಶೆ ಯನ್ನುಂಟುಮಾಡಿ ದಮಯಂತಿಯು ಮುಂದೆ ನಡೆದಳು. ನಿಷಧಾಧಿಪತಿ ಯಾದ ನಲನ ಪರಾಕನ್ನೂ ರಾಜಭಟರು ಹೇಳಿದರು. ರಾಜಪುತ್ರಿಯ ಹೃದಯಕಮಲವೂ-ಮುಖಕಮಲವೂ ಒಮ್ಮೆಗೆ ಅರಳಿದುವು. ಘಮಘಮಿ ಸುತ್ತಿದ್ದ ಜಾಜಿ, ಸಂಪಿಗೆ, ಕಲ್ಹಾರಾದಿ ಹೂಗಳಿಂದ ಕಟ್ಟಲ್ಪಟ್ಟಿದ್ದ ಸ್ವಯಂವರಮಾಲಿಕೆಯನ್ನು ನಲನ ಕುತ್ತಿಗೆಗೆ ಹಾಕುವ ಸಲುವಾಗಿ ಕೈಗಳನ್ನು ಮೇಲೆತ್ತಿ ತನ್ನ ಕಣ್ಣುಗಳೆರಡನ್ನೂ ನಲನ ಕಡೆಗೆ ತಿರುಗಿಸಿದಳು. ಆದರೆ ಸ್ವಯಂವರಮಾಲೆಯನ್ನು ಕಂಬುಕಂಠದಲ್ಲಿ ಧಾರಣೆಮಾಡಲು ಅಲ್ಲಿ ಒಬ್ಬನೇ ನಲನಿರಲಿಲ್ಲ. ಐವರು ನಲರಿದ್ದರು. ಹಾರವನ್ನು ಹಾಕಲು ಮೇಲೆತ್ತಿದ್ದ ಕೈಗಳನ್ನು ದಮಯಂತಿಯು ಕೆಳಗಿಳಿಸಿದಳು. ಅನಂತರದಲ್ಲಿ ಸ್ತಬ್ಧಳಾಗಿ ನಿಂತು ಯೋಚಿಸತೊಡಗಿದಳು.

ಆ ಐವರಲ್ಲಿ ನಿಜವಾದ ನಲನು ಯಾರೆಂಬುದನ್ನು ತಿಳಿಯಲು ದಮಯಂತಿಗೆ ಸಾಧ್ಯವಾಗಲಿಲ್ಲ. ಆ ಐವರಲ್ಲಿ ಯಾರೊಬ್ಬನನ್ನು ನೋಡಿ ದರೂ ಅವನು ನಲನಂತೆಯೇ ಅವಳಿಗೆ ಕಾಣುತ್ತಿದ್ದನು. ದಮಯಂತಿಯು ತನ್ನಲ್ಲಿಯೇ ತರ್ಕಿಸತೊಡಗಿದಳು. ಐವರಲ್ಲಿ ನಾಲ್ವರು ಇಂದ್ರಾದಿ ಲೋಕ ಪಾಲಕರೆಂದೇ ನಿರ್ಧರಿಸಿದಳು. 'ನಾನು ಈ ಐವರಲ್ಲಿ ನಿಜವಾದ ನಲನು ಯಾರೆಂಬುದನ್ನು ಹೇಗೆ ನಿರ್ಧರಿಸಲಿ? ದೇವತೆಗಳಿಗೆ ರೆಪ್ಪೆಯಾಡುವುದಿಲ್ಲ ವೆಂದು ಕೇಳಿದ್ದೇನೆ. ಆದರೆ ಇವರೆಲ್ಲರ ರೆಪ್ಪೆಗಳೂ ಆಡುತ್ತಿವೆ. ಭೂಮಿಯ

ಮೇಲೆಯೇ ಕಾಲೂರಿ ಸಿಂಹಾಸನಗಳಲ್ಲಿ ಕುಳಿತಿದ್ದಾರೆ. ದೇವತೆಗಳಿಗೆ ಬೆವರೇ ಇಲ್ಲವೆಂದು ಕೇಳಿದ್ದೆನು. ಆದರೆ ಈ ಐವರಿಗೂ ಮುಖದಲ್ಲಿ ಬೆವರಿದೆ. ಯಾವ ರೀತಿಯಲ್ಲಿಯೂ ಈ ಐವರಲ್ಲಿ ದೇವತೆಗಳಾರು ? ನಲನಾರು ?– ಎಂಬುದನ್ನು ತಿಳಿಯಲು ನಾನು ಅಸಮರ್ಥಳಾಗಿದ್ದೇನೆ. ಈಗೇನು



ಮಾಡಲಿ ?'–ಎಂದು ದಮಯಂತಿಯು ಕ್ಷಣಕಾಲ ಯೋಚಿಸಿದಳು. ಯಾವ ಉಪಾಯವೂ ಹೊಳೆಯಲಿಲ್ಲ. ಕಟ್ಟಕಡೆಗೆ ದೇವತೆಗಳನ್ನೇ ಶರಣುಹೊಗಲು ನಿಶ್ಚಯಿಸಿದಳು. ಮನಸ್ಸಿನಿಂದಲೂ, ಮಾತಿನಿಂದಲೂ ದೇವತೆಗಳನ್ನು ಪೂಜಿಸಿ, ಸ್ತೋತ್ರಮಾಡಿ ನಮಸ್ಕರಿಸಿ, ಬದ್ಧಾಂಜಲಿಯಾಗಿ ನಿಂತು ಭೀತ-ಭೀತಳಾಗಿ ದೇವತೆಗಳನ್ನು ಪ್ರಾರ್ಥಿಸಿದಳು :

ಹಂಸಾನಾಂ ವಚನಂ ಶ್ರುತ್ವಾ ಯಥಾ ಮೇ ನೈಷಧೋ ವೃತಃ ।
ಪತಿತ್ವೇ ತೇನ ಸತ್ಯೇನ ದೇವಾಸ್ತಂ ಪ್ರದಿಶಂತು ಮೇ ॥೧೭॥

ಮನಸಾ ವಚಸಾ ಚೈವ ಯಥಾ ನಾಭಿಚರಾಮ್ಯಹಮ್ ।
ತೇನ ಸತ್ಯೇನ ವಿಬುಧಾಸ್ತಮೇವ ಪ್ರದಿಶಂತು ಮೇ ॥೧೮॥

ಯಥಾ ದೇವೈಃ ಸ ಮೇ ಭರ್ತಾ ವಿಹಿತೋ ನಿಷಧಾಧಿಪಃ ।
ತೇನ ಸತ್ಯೇನ ಮೇ ದೇವಾಸ್ತಮೇವ ಪ್ರದಿಶಂತು ಮೇ ॥೧೯॥

ಯಥೇದಂ ವ್ರತಮಾರಬ್ಧಂ ನಲಸ್ಯಾರಾಧನೇ ಮಯಾ ।
ತೇನ ಸತ್ಯೇನ ಮೇ ದೇವಾಸ್ತಮೇವ ಪ್ರದಿಶಂತು ಮೇ ॥೨೦॥

ಸ್ವಂ ಚೈವ ರೂಪಂ ಕುರ್ವಂತು ಲೋಕಪಾಲಾ ಮಹೇಶ್ವರಾಃ ।
ಯಥಾಹಮಭಿಜಾನೀಯಾಂ ಪುಣ್ಯಶ್ಲೋಕಂ ನರಾಧಿಪಮ್ ॥೨೧॥

"ಎಲೈ ದೇವತೆಗಳಿರಾ! ಪರಮಪೂಜ್ಯರಾದ ಲೋಕಪಾಲಕರುಗಳಿರಾ! ನಾನು ರಾಜಹಂಸದ ಬಾಯಿಂದ ನಲರಾಜನ ಗುಣಕಥನವನ್ನು ಎಂದು ಕೇಳಿದೆನೋ–ಅಂದೇ ನಲನನ್ನು ನನ್ನ ಪತಿಯನ್ನಾಗಿ ವರಿಸಿಬಿಟ್ಟಿರುವೆನು. ಈ ಒಂದು ಸತ್ಯದ ನಿರ್ಧಾರದಿಂದ ನೀವಿಂದು ನನಗೆ ನಲನಾರೆಂಬುದನ್ನು ದಯೆಯಿಟ್ಟು ತೋರಿಸಿರಿ. ಮನಸಾ-ವಾಚಾ ನಲನೇ ನನ್ನ ಪತಿಯೆಂದು ನಾನು ನಿರ್ಧರಿಸಿದ್ದೇನೆ. ಈ ಒಂದು ಸತ್ಯದ ನಿರ್ಧಾರದಿಂದ ನೀವಿಂದು ನನಗೆ ನಲನಾರೆಂಬುದನ್ನು ದಯೆಯಿಟ್ಟು ತೋರಿಸಿರಿ. ನಲನೇ ನನ್ನ ಪತಿಯೆಂಬುದಾಗಿ ದೇವತೆಗಳಿಂದಲೇ ನಿರ್ಧರಿಸಲ್ಪಟ್ಟಿರುವುದು. ಈ ದೈವನಿಯಮದ ಸತ್ಯಪರಿಪಾಲನೆಗಾದರೂ ನೀವಿಂದು ನನಗೆ ನಿಮ್ಮೈವರಲ್ಲಿ ನಲನಾರೆಂಬುದನ್ನು ದಯೆಯಿಟ್ಟು ತೋರಿಸಿರಿ. ನಲನನ್ನು ನಾನು ಪತಿಯೆಂದು ಭಾವಿಸಿದಂದಿನಿಂದಲೂ ಅವನನ್ನು ಅನುದಿನವೂ ಆರಾಧಿಸುವ ವ್ರತವನ್ನು ಕೈಗೊಂಡಿದ್ದೇನೆ. ಈ ಒಂದು ಸತ್ಯದ ನಿರ್ಧಾರದಿಂದ ನೀವು ನನಗೆ ನಿಮ್ಮೈವರಲ್ಲಿ ನಲನಾರೆಂಬುದನ್ನು ದಯೆಯಿಟ್ಟು ತೋರಿಸಿರಿ. ಲೋಕಪಾಲಕರುಗಳಿರಾ! ನೀವು ನಿಮ್ಮ ನಿಜವಾದ ರೂಪವನ್ನು ಧರಿಸಿದರೆ ನಾನೇ ಧರ್ಮಾತ್ಮನಾದ ನಲನಾರೆಂಬುದನ್ನು ತಿಳಿಯಲು ಸಮರ್ಥಳಾಗುತ್ತೇನೆ. ದಯೆಯಿಟ್ಟು ನೀವು ನಿಮ್ಮ ನಿಜಸ್ವರೂಪವನ್ನು ತಾಳಿರಿ."

ದಮಯಂತಿಯ ಕರುಣಾಜನಕವಾದ ಮಾತುಗಳನ್ನು ಕೇಳಿ, ಅವಳ ನಿರ್ಧಾರವನ್ನೂ ಮತ್ತು ನಲನ ಮೇಲೆ ಅವಳಿಗಿರುವ ಗಾಢಪ್ರೇಮವನ್ನೂ, ಅವಳ ಹೃದಯದ ಪರಿಶುದ್ಧತೆಯನ್ನೂ, ನಲನಲ್ಲಿ ಅವಳಿಗಿರುವ ಭಕ್ತಿಯನ್ನೂ ಮನಗಂಡ ಲೋಕಪಾಲಕರು ತಮ್ಮ-ತಮ್ಮ ನಿಜಸ್ವರೂಪಗಳನ್ನು ತಾಳಿದರು. ಮುಖಗಳು ಬೆವರದೇ ಇರುವುದು ; ರೆಪ್ಪೆಯಾಡದ ಕಣ್ಣುಗಳು ; ಬಾಡದಿರುವ ದೇವಸುಮಗಳಿಂದ ಕಟ್ಟಿದ ಮಾಲೆಗಳು ; ಶರೀರದ ಮೇಲೆ ಯಾವೆಡೆಯಲ್ಲಿಯೂ ಧೂಳಿಲ್ಲದೇ ಇರುವುದು ಮತ್ತು ಭೂಮಿಯ ಸ್ಪರ್ಶವಿಲ್ಲದಿರುವುದು–ಇವೇ ಮುಂತಾದ ದೇವತೆಗಳಿಗಿರುವ ಗುಣಗಳನ್ನು ಒಡನೆಯೇ ಗುರುತಿಸಲು ದಮಯಂತಿಗೆ ಸಾಧ್ಯವಾಯಿತು. ದೇವತೆಗಳ ಆ ಗುಣಗಳಿಗೆ ವ್ಯತಿರಿಕ್ತವಾದ, ನಿಷಧರಾಜನಲ್ಲಿದ್ದ ಮಾನುಷಗುಣಗಳು ಅವಳಿಗೆ ಗೋಚರವಾದುವು. ನೆಳಲಿನಿಂದ ಕೂಡಿರುವುದು ; ಬಾಡಿದ ಹೂಮಾಲೆಯನ್ನು ಧರಿಸಿರುವುದು ; ಬೆವರಿನಿಂದಲೂ, ಧೂಳಿನಿಂದಲೂ ವ್ಯಾಪ್ತವಾಗಿರುವ ಶರೀರ ; ಭೂಸ್ಪರ್ಶಮಾಡಿಕೊಂಡು ಕುಳಿತಿರುವುದು ಮತ್ತು ರೆಪ್ಪೆಗಳ ಸ್ಪಂದನ–ಇವೇ ಮುಂತಾದ ಮಾನುಷಗುಣಗಳನ್ನು ದೇವತೆಗಳ ಪಕ್ಕದಲ್ಲಿಯೇ ಕುಳಿತಿದ್ದ ನಲನಲ್ಲಿ ಕಾಣಲು ದಮಯಂತಿಗೆ ಸಾಧ್ಯವಾಯಿತು. ದೇವ-ಮಾನವರ ಸಹಜಗುಣಗಳಿಂದ ದಮಯಂತಿಗೆ ನಲನಾರೆಂದು ತಿಳಿದೊಡನೆಯೇ ಅವನಿಗೇ ಸ್ವಯಂವರಮಾಲೆಯನ್ನು ಹಾಕಲು ನಿರ್ಧರಿಸಿದಳು. ಒಡನೆಯೇ ನಲನ ಸಮೀಪಕ್ಕೆ ಹೋಗಿ ಅವನ ಅಂಗವಸ್ತ್ರದ ತುದಿಯನ್ನು ಸಂತೋಷಾಧಿಕ್ಯದಿಂದ ಹಿಡಿದು ಅತ್ಯಂತ ಶೋಭಾಯಮಾನವಾದ ಪುಷ್ಪಮಾಲಿಕೆಯಿಂದ ನಲಮಹಾರಾಜನ ಕುತ್ತಿಗೆಯನ್ನು ಅಲಂಕರಿಸಿದಳು.

(ದಮಯಂತಿಗೆ ನಲನ ಮೇಲೆ ಎಷ್ಟೊಂದು ಪ್ರೀತಿಯಿತ್ತೆಂಬುದನ್ನು ಇಲ್ಲಿ ವ್ಯಾಸರು ಬಹಳ ಸ್ವಾರಸ್ಯವಾಗಿ ಹೇಳಿದ್ದಾರೆ. ದೇವತೆಗಳು ಮಾನವರಿಗಿಂತಲೂ ಮಿಗಿಲಾದವರೆಂಬುದೂ ದಮಯಂತಿಗೆ ತಿಳಿದಿತ್ತು. ಆದರೆ ಪ್ರತ್ಯಕ್ಷವಾಗಿ ನೋಡಿರಲಿಲ್ಲ. ಪ್ರಸಕ್ತಸಂದರ್ಭದಲ್ಲಿ ದೇವತೆಗಳಿಗೂ–ಮನುಷ್ಯರಿಗೂ ಇರುವ ಅಂತರವನ್ನು ದಮಯಂತಿಯು ಪ್ರತ್ಯಕ್ಷವಾಗಿ ನೋಡಿದಳು. ಮನುಷ್ಯರು ಧೂಳಿನಿಂದ ಕೂಡಿರುತ್ತಾರೆ. ಅವರ ಮುಖದ ಮೇಲೆ ಮತ್ತು

ಶರೀರಾದ್ಯಂತ ಯಾವಾಗಲೂ ಬೆವರುತ್ತಿರುತ್ತದೆ. ಅವರು ಧರಿಸುವ ಪುಷ್ಪ ಮಾಲೆಗಳು ಸ್ವಾಭಾವಿಕವಾಗಿಯೇ ಬಾಡುತ್ತವೆ. ಈ ಗುಣಗಳಿಂದ ಮಾನವರು ದೇವತೆಗಳಿಗಿಂತಲೂ ಹೀನರೆಂಬುದು ಸ್ಪಷ್ಟವಾಯಿತು. ಅದನ್ನು ದಮಯಂತಿಯು ಪ್ರತ್ಯಕ್ಷವಾಗಿ ಕಂಡರೂ ದೇವತೆಗಳನ್ನು ವರಿಸಲು ಇಷ್ಟಪಡಲಿಲ್ಲ. ಕಷ್ಟಪಟ್ಟು ಬಹಳ ದಿನಗಳವರೆಗೂ ಹುಡುಕಿದನಂತರ ಸಿಕ್ಕಿರುವ ಇನಿಯನನ್ನು ಬಟ್ಟೆಹಿಡಿದು ಸೆಳೆಯುವಂತೆ–ದಮಯಂತಿಯು ದೇವತೆಗಳ ಮಧ್ಯದಲ್ಲಿ ಮಾನವಸಹಜಗುಣಗಳಿಂದ ಕೂಡಿದ ನಲನನ್ನು ನೋಡಿದೊಡನೆಯೇ ತನ್ನ ಪ್ರಿಯನು ಸಿಕ್ಕಿದನೆಂದು ಓಡಿಹೋಗಿ ಅವನ ವಸ್ತ್ರವನ್ನು ಹಿಡಿದುಕೊಂಡು ಹಾರಹಾಕಿದಳು. ದಮಯಂತಿಗೆ ನಲನಲ್ಲಿದ್ದ ಪ್ರೇಮವು ಅನ್ಯಾದೃಶವಾದುದು ಮತ್ತು ಅಸಾಧಾರಣವಾದುದೆಂದು ಇದರಿಂದ ತಿಳಿಯಬಹುದಾಗಿದೆ.)

ನಲನ ಕಂಬುಕಂಠವು ಸ್ವಯಂವರಮಾಲಿಕೆಯಿಂದ ಅಲಂಕೃತವಾದೊಡನೆಯೇ ತಮ್ಮ ಕುತ್ತಿಗೆಗಳಿಗೂ ಸ್ವಯಂವರಮಾಲಿಕೆಯು ಬೀಳಬಹುದೆಂಬ ಆಶಯದಿಂದ ಕತ್ತುಗಳನ್ನೆತ್ತಿಕೊಂಡು ಕುಳಿತಿದ್ದ ರಾಜಕುಮಾರರೆಲ್ಲರೂ ಹತಾಶರಾಗಿ–'ಅಯ್ಯೋ! ನಾವು ವಂಚಿತರಾದೆವು. ಸ್ತ್ರೀರತ್ನವು ನಮಗಿಲ್ಲವಾಯಿತು'–ಮುಂತಾಗಿ ಹೇಳಿಕೊಂಡು ಹಾಹಾಕಾರಮಾಡಿದರು. ಅಲ್ಲಿ ನೆರೆದಿದ್ದ ದೇವತೆಗಳೂ ಮತ್ತು ಮಹರ್ಷಿಗಳೂ 'ಸಾಧು ಸಾಧು' ಎಂದು ಹೇಳಿ ದಮಯಂತಿಯನ್ನೂ–ನಲನನ್ನೂ ಶ್ಲಾಘಿಸಿದರು.

ಧರ್ಮಜ! ನಲರಾಜನಿಗುಂಟಾದ ಆನಂದಕ್ಕೆ ಪಾರವಿಲ್ಲವಾಯಿತು. ಪ್ರತ್ಯಕ್ಷವಾಗಿ ಬಂದಿದ್ದ ದೇವತೆಗಳನ್ನೂ ತಿರಸ್ಕರಿಸಿ ತನ್ನ ಕೊರಳಿಗೆ ಸ್ವಯಂವರಮಾಲಿಕೆಯನ್ನು ದಮಯಂತಿಯು ಹಾಕಿದೊಡನೆಯೇ ನಲನು ಆಸನದಿಂದ ಮೇಲೆದ್ದು ದಮಯಂತಿಯ ಎರಡು ಭುಜಗಳನ್ನು ತನ್ನೆರಡು ಕೈಗಳಿಂದಲೂ ಹಿಡಿದು ಆನಂದಬಾಷ್ಪಗಳನ್ನು ಸುರಿಸುತ್ತಾ ರಾಜಕುಮಾರಿಯನ್ನು ಕುರಿತು ಹೇಳಿದನು :

**ಯತ್ತ್ವಂ ಭಜಸಿ ಕಲ್ಯಾಣಿ ಪುಮಾಂಸಂ ದೇವಸಂನಿಧೌ ।**
**ತಸ್ಮಾನ್ಮಾಂ ವಿದ್ಧಿ ಭರ್ತಾರಮೇವಂ ತೇ ವಚನೇ ರತಮ್ ॥೩೧॥**

**ಯಾವಚ್ಚ ಮೇ ಧರಿಷ್ಯನ್ತಿ ಪ್ರಾಣಾ ದೇಹೇ ಶುಚಿಸ್ಮಿತೇ ।**
**ತಾವತ್ತ್ವಯಿ ಭವಿಷ್ಯಾಮಿ ಸತ್ಯಮೇತದ್ಬ್ರವೀಮಿ ತೇ ॥೩೨॥**

"ಶುಭಾಂಗಿ! ಕಲ್ಯಾಣಿ! ದೇವತೆಗಳ ಸಮಕ್ಷದಲ್ಲಿ ಮರ್ತ್ಯನಾದ ನನ್ನನ್ನು ನೀನು ವರಿಸಿರುವೆಯಾದ ಕಾರಣ ನಾನು ನಿನ್ನ ಜೀವಮಾನಪರ್ಯಂತವೂ ನಿನ್ನ ಆಜ್ಞಾಧಾರಕನಾಗಿರುವೆನು ಮತ್ತು ನನ್ನ ಜೀವನಪರ್ಯಂತವೂ ನಾನು ನಿನ್ನವನು ಮಾತ್ರವೇ ಆಗಿರುವೆನು."

(ರಾಜರು ಸಾಮಾನ್ಯವಾಗಿ ಬಹುಪತ್ನಿಯರನ್ನು ಹೊಂದಿರುವರೆಂಬುದು ಪ್ರಸಿದ್ಧವಾಗಿದೆ. 'ರಾಜಾನೋ ಬಹುವಲ್ಲಭಾಃ' ಈ ಕಾರಣದಿಂದ ನಲನಿಲ್ಲಿ ದಮಯಂತಿಯೊಡನೆ ಏಕಪತ್ನೀವ್ರತಸ್ಥನಾಗಿರುವೆನೆಂದು ಪ್ರತಿಜ್ಞೆಮಾಡುವನು.)

ನಲನ ಮಾತುಗಳನ್ನು ಕೇಳಿ ಬದ್ಧಾಂಜಲಿಯಾಗಿ ನಿಂತಿದ್ದ ದಮಯಂತಿಗೂ ಅತಿಯಾದ ಸಂತೋಷವುಂಟಾಯಿತು. ಅವಳೂ ಯಥೋಚಿತವಾಗಿ ಉತ್ತರಿಸಿದಳು.

ಪರಸ್ಪರವಾದ ಪ್ರೀತಿಯಿಂದ ನಲ-ದಮಯಂತಿಯರು ಹಿಂದೆ ಹೇಳಿದಂತೆ ಮಾತನಾಡಿದನಂತರ ಅಗ್ನಿಮುಖರಾದ ದೇವತೆಗಳನ್ನು ಇಬ್ಬರೂ ನಮಿಸಿ ಸ್ತೋತ್ರಮಾಡಿ, ಅವರ ರಕ್ಷಣೆಯನ್ನು ಯಾಚಿಸಿದರು.

ದಮಯಂತಿಯು ತಮ್ಮನ್ನು ತಿರಸ್ಕರಿಸಿ ನಲನನ್ನು ವರಿಸಿದಳೆಂದು ಲೋಕಪಾಲಕರಿಗೆ ಕೋಪವುಂಟಾಗಲಿಲ್ಲ. ಅವಳ ನಿರ್ಧಾರವನ್ನು ಬಹುವಾಗಿ ಶ್ಲಾಘಿಸಿದರು. ನೂತನವಧೂ-ವರರು ಭಕ್ತಿ-ವಿನಯಗಳಿಂದ ಮಾಡಿದ ಸ್ತೋತ್ರಕ್ಕೆ ಮೆಚ್ಚಿದ ಕಾಂತಿಯುಕ್ತರಾದ ಲೋಕಪಾಲಕರು ಒಬ್ಬೊಬ್ಬರು ಎರಡೆರಡು ವರಗಳಂತೆ ಒಟ್ಟು ಎಂಟು ವರಗಳನ್ನು ನಲರಾಜನಿಗೆ ದಯಪಾಲಿಸಿದರು.

**ಪ್ರತ್ಯಕ್ಷದರ್ಶನಂ ಯಜ್ಞೇ ಗತಿಂ ಚಾನುತ್ತಮಾಂ ಶುಭಾಮ್ ।**
**ನೈಷಧಾಯ ದದೌ ಶಕ್ರಃ ಪ್ರೀಯಮಾಣಃ ಶಚೀಪತಿಃ ॥೩೫॥**

ನಲರಾಜನು ಮಾಡಲಿರುವ ಯಜ್ಞ-ಯಾಗಾದಿಗಳಲ್ಲಿ ಪ್ರತ್ಯಕ್ಷ

ವಾಗಿಯೇ ಬಂದು ಹವಿಸ್ಸನ್ನು ಸ್ವೀಕರಿಸುವೆನೆಂದೂ ಮತ್ತು ಅದರ ಫಲವಾಗಿ ನಲನಿಗೆ ಕಾಲಾಂತರದಲ್ಲಿ ಉತ್ತಮಲೋಕಗಳನ್ನೂ ದಯಪಾಲಿಸುವೆನೆಂದೂ–ಇಂದ್ರನು ವರಗಳನ್ನಿತ್ತನು.

**ಅಗ್ನಿರಾತ್ಮಭವಂ ಪ್ರಾದಾದ್ಯತ್ರ ವಾಞ್ಛತಿ ನೈಷಧಃ ।**
**ಲೋಕಾನಾತ್ಮಪ್ರಭಾಂಶ್ಚೈವ ದದೌ ತಸ್ಮೈ ಹುತಾಶನಃ ॥೩೬॥**



ನಲನು ಪ್ರಾರ್ಥಿಸಿದಾಗ ಪ್ರತ್ಯಕ್ಷನಾಗುವೆನೆಂದೂ, ಕಾಲಾಂತರದಲ್ಲಿ ತನಗೆ ಸಂಬಂಧಿಸಿದ ಮತ್ತು ತನ್ನಂತೆಯೇ ತೇಜಸ್ಸಿನಿಂದ ಕೂಡಿರುವ ಉತ್ತಮಲೋಕಗಳನ್ನು ದಯಪಾಲಿಸುವೆನೆಂದೂ–ಅಗ್ನಿದೇವನು ನಲನಿಗೆ ವರಗಳನ್ನಿತ್ತನು.

**ಯಮಸ್ತ್ವನ್ನರಸಂ ಪ್ರಾದಾದ್ಧರ್ಮೇ ಚ ಪರಮಾಂ ಸ್ಥಿತಿಮ್ ॥೩೭॥**

ಯಮಧರ್ಮನು ನಲನಿಗೆ ಪಾಕಶಾಸ್ತ್ರದಲ್ಲಿ ನಿಷ್ಣಾತನಾಗುವಂತೆಯೂ, ಅವನಿಗೆ ಧರ್ಮದಲ್ಲಿಯೇ ಸ್ಥಿರವಾದ ಬುದ್ಧಿಯಿರುವಂತೆಯೂ ಅನುಗ್ರಹಿಸಿದನು.

**ಅಪಾಂ ಪತಿರಪಾಂ ಭಾವಂ ಯತ್ರ ವಾಞ್ಛತಿ ನೈಷಧಃ ।**
**ಸ್ರಜಶ್ಚೋತ್ತಮಗನ್ಧಾಢ್ಯಾಃ ಸರ್ವೇ ಚ ಮಿಥುನಂ ದದುಃ ॥೩೮॥**

ಅಗ್ನಿಯಂತೆಯೇ ವರುಣನೂ ತನ್ನನ್ನು ಪ್ರಾರ್ಥಿಸಿದಾಗ ನಲನಿಗೆ ನೀರಿನ ರೂಪದಲ್ಲಿ ಪ್ರತ್ಯಕ್ಷನಾಗುವೆನೆಂದೂ–ಉತ್ತಮೋತ್ತಮವಾದ, ಬಾಡದಿರುವ ದೇವಸುಮಗಳಿಂದ ಕಟ್ಟಲ್ಪಟ್ಟ ಪುಷ್ಪಹಾರಗಳನ್ನು ಪ್ರಾರ್ಥಿಸಿದಾಗ ಕೊಡುವೆನೆಂದೂ–ವರಗಳನ್ನಿತ್ತನು. ಈ ರೀತಿಯಲ್ಲಿ ನಾಲ್ವರು ದೇವತೆಗಳೂ ನಲನಿಗೆ ಎರಡೆರಡು ವರಗಳನ್ನು ದಯಪಾಲಿಸಿದರು.

ಎಂಟು ವರಗಳನ್ನಿತ್ತು ಇಂದ್ರಾಗ್ನಿ-ವರುಣ-ಯಮಧರ್ಮರು ತಮ್ಮ ತಮ್ಮ ಲೋಕಗಳಿಗೆ ಪ್ರಯಾಣಮಾಡಿದರು. ಹತಾಶರಾಗಿದ್ದ ರಾಜರೆಲ್ಲರೂ ದಮಯಂತಿಯ ನಿರ್ಧಾರವನ್ನೂ, ನಲನ ವಿಷಯದಲ್ಲಿ ಅವಳಿಗಿರುವ ಅಚಲ ಪ್ರೇಮವನ್ನೂ ಮತ್ತು ದೇವತೆಗಳ ಮಧ್ಯದಲ್ಲಿದ್ದ ನಲನನ್ನು ಅವಳು ಗುರುತಿಸಿದುದನ್ನೂ ತಿಳಿದುಕೊಂಡವರಾಗಿ ಸಂತಸದಿಂದ ತಮ್ಮ-ತಮ್ಮ ರಾಜ್ಯಗಳಿಗೆ ತೆರಳಿದರು. ಅವರೆಲ್ಲರೂ ಪ್ರಯಾಣಮಾಡಿದನಂತರ ಕನ್ಯಾಪಿತೃವಾದ ಭೀಮರಾಜನು ಸಂತೋಷಾಧಿಕ್ಯದಿಂದ ನಲ-ದಮಯಂತಿಯರ ವಿವಾಹವನ್ನು ಬಹಳ ವಿಜೃಂಭಣೆಯಿಂದ ನೆರವೇರಿಸಿದನು.

ನಲರಾಜನು ವಿದರ್ಭದೇಶದಲ್ಲಿ ದಮಯಂತಿಯೊಡನೆ ಕೆಲವು ದಿನಗಳಿದ್ದು ಅನಂತರದಲ್ಲಿ ಭೀಮರಾಜನ ಅನುಮತಿಯನ್ನು ಪಡೆದವನಾಗಿ ದಮಯಂತಿಯಿಂದೊಡಗೂಡಿ ತನ್ನ ದೇಶವಾದ ನಿಷಧಕ್ಕೆ ಚತುರಂಗಬಲ ಸಮೇತನಾಗಿ ಪ್ರಯಾಣಮಾಡಿದನು.

ಭೂಲೋಕದ ಸ್ತ್ರೀಯರಲ್ಲಿಯೇ ರತ್ನಪ್ರಾಯಳಾದ ದಮಯಂತಿಯನ್ನು ಪಡೆದು ನಲರಾಜನು ಸಂತೋಷಭರಿತನಾಗಿ–ವೃತ್ರಹಂತಕನಾದ ಇಂದ್ರನು ಶಚೀದೇವಿಯೊಡನೆ ಆನಂದದಿಂದ ಕಾಲಕಳೆಯುವಂತೆ–ಅನೇಕ

ವರ್ಷಗಳವರೆಗೆ ದಮಯಂತಿಯೊಡನೆ ಸುಖದಿಂದಿದ್ದನು. ಸೂರ್ಯನಿಗೆ ಸಮಾನವಾದ ತೇಜಸ್ಸಿನಿಂದ ಕೂಡಿದ್ದ ನಲಮಹಾರಾಜನು ಧರ್ಮದಿಂದ ರಾಜ್ಯವನ್ನಾಳುತ್ತಾ ಪ್ರಜೆಗಳಿಗೆ ಅಮಿತಾನಂದವನ್ನುಂಟುಮಾಡಿದನು. ನಹುಷನ ಮಗನಾದ ಯಯಾತಿಯಂತೆ–ನಲನೂ ಅನೇಕಾನೇಕ ಅಶ್ವಮೇಧ ಯಾಗಗಳನ್ನು ಮಾಡಿ, ಬ್ರಾಹ್ಮಣರಿಗೆ ಅಪಾರವಾದ ಸುವರ್ಣವನ್ನೂ ಗೋವುಗಳನ್ನೂ ಕೊಟ್ಟನು. ದೇವತೆಗಳು ತಮ್ಮ ಸ್ತ್ರೀಯರೊಡನೆ ನಂದನ ವನದಲ್ಲಿ ವಿಹರಿಸುವಂತೆ–ನಲನೂ ದಮಯಂತಿಯೊಡನೆ ಸುಂದರವಾದ ಅರಣ್ಯಗಳಲ್ಲಿಯೂ, ಉದ್ಯಾನವನಗಳಲ್ಲಿಯೂ ವಿಹರಿಸುತ್ತಿದ್ದನು. ಮಹಾತ್ಮನಾದ ನಲರಾಜನಿಗೆ ದಮಯಂತಿಯಲ್ಲಿ ಇಂದ್ರಸೇನನೆಂಬ ಪುತ್ರನೂ ಮತ್ತು ಇಂದ್ರಸೇನಾ ಎಂಬ ಪುತ್ರಿಯೂ ಜನಿಸಿದರು. ಧರ್ಮಜ! ನಾನು ಮೇಲೆ ಹೇಳಿದಂತೆ ನಲನು ಅನೇಕ ಯಜ್ಞ-ಯಾಗಾದಿಗಳನ್ನು ಮಾಡುತ್ತಲೂ, ಚೆಲುವೆಯಾದ ದಮಯಂತಿಯೊಡನೆ ಉದ್ಯಾನಗಳಲ್ಲಿ ವಿಹರಿಸುತ್ತಲೂ, ಸಂಪದ್ಯುಕ್ತವಾದ ರಾಜ್ಯವನ್ನು ಧರ್ಮದಿಂದ ಪರಿಪಾಲನೆಮಾಡುತ್ತಲೂ ಇದ್ದನು.”

೫೭ನೆಯ ಅಧ್ಯಾಯವು ಮುಗಿಯಿತು.

೫೮ನೆಯ ಅಧ್ಯಾಯ ನಲೋಪಾಖ್ಯಾನಪರ್ವ (ಮುಂದುವರಿದಿದೆ.)

## ದೇವತೆಗಳಿಂದ ನಲನ ಗುಣಗಾನ : ಕಲಿಯ ವಿರೋಧ

ಬೃಹದಶ್ವರು ಮುಂದುವರಿದು ಹೇಳುತ್ತಾರೆ :

**ವೃತೇ ತು ನೈಷಧೇ ಭೈಮ್ಯಾ ಲೋಕಪಾಲಾ ಮಹೌಜಸಃ ।**
**ಯಾನ್ತೋ ದದೃಶುರಾಯಾನ್ತಂ ದ್ವಾಪರಂ ಕಲಿನಾ ಸಹ ॥೧॥**

“ಧರ್ಮಜ! ಈ ಮಧ್ಯದಲ್ಲಿ ಇಂದ್ರಾದಿ ದೇವತೆಗಳು ಭೀಮನ ದೇಶವಾದ ವಿದರ್ಭದಿಂದ ಹೊರಟು ತಮ್ಮ-ತಮ್ಮ ಲೋಕಗಳಿಗೆ ಪ್ರಯಾಣ ಮಾಡುತ್ತಿದ್ದ ಸಮಯದಲ್ಲಿ ಒಂದು ಪ್ರಸಂಗವು ನಡೆಯಿತು. ಅವರಿಗೆ ಎದುರಾಗಿ ಎಂದರೆ ಭೂಲೋಕಾಭಿಮುಖವಾಗಿ ಕಲಿ ಮತ್ತು ದ್ವಾಪರರು ಬಹಳ ವೇಗವಾಗಿ ಬರುತ್ತಿದ್ದರು. ಅವರು ಅವಸರದಿಂದ ಬರುತ್ತಿರುವು

ದನ್ನು ಕಂಡು ವಿಷಯಸಂಗ್ರಹಣಾಕಾಂಕ್ಷಿಯಾದ ಇಂದ್ರನು ಕಲಿಯನ್ನು ಕೇಳಿದನು :

"ಕಲಿಪುರುಷನೇ! ದ್ವಾಪರನೊಡನೆ ಎಲ್ಲಿಗೆ ಪ್ರಯಾಣಮಾಡು ತ್ತಿರುವೆ?"

"ಮಹೇಂದ್ರ! ನಾನು ದಮಯಂತಿಯ ಸ್ವಯಂವರಕ್ಕೆ ಹೋಗುತ್ತಿದ್ದೇನೆ. ಹೋಗುತ್ತಿರುವುದು ಮಾತ್ರವೇ ಅಲ್ಲ. ನಾನು ಅವಳನ್ನೇ ಮದುವೆಯಾಗುತ್ತೇನೆ. ಏಕೆಂದರೆ : ನನ್ನ ಮನಸ್ಸು ಅವಳಲ್ಲಿಯೇ ಲೀನವಾಗಿ ಬಿಟ್ಟಿದೆ."

ಇಂದ್ರಾದಿದೇವತೆಗಳು ಕಲಿಯ ಮಾತನ್ನು ಕೇಳಿ ಗಹ-ಗಹಿಸಿ ನಕ್ಕರು. ಇಂದ್ರನು ಕಲಿಯನ್ನು ಕುರಿತು ಹೇಳಿದನು :

"ಕಲಿಪುರುಷನೇ! ಕಾಲವು ಮಿಂಚಿಹೋಯಿತು. ಸ್ವಯಂವರ ಸಮಾರಂಭವು ಮುಗಿದೇ ಹೋಯಿತಲ್ಲಾ! ನಮ್ಮ ಸಮಕ್ಷದಲ್ಲಿಯೇ ದಮಯಂತಿಯು ನಲನನ್ನು ತನ್ನ ಪತಿಯನ್ನಾಗಿ ವರಿಸಿದಳು."

ಕಲಿಗೆ ಇಂದ್ರನ ಮಾತನ್ನು ಕೇಳಿದೊಡನೆಯೇ ಅತಿಯಾದ ಕೋಪ ವುಂಟಾಯಿತು. ಕಟ-ಕಟನೆ ಹಲ್ಲುಗಳನ್ನು ಕಡಿಯುತ್ತಾ ಹೇಳಿದನು :

**ದೇವಾನಾಂ ಮಾನುಷಂ ಮಧ್ಯೇ ಯತ್ಸಾ ಪತಿಮವಿನ್ದತ ।**
**ತತಸ್ತಸ್ಯಾ ಭವೇನ್ನ್ಯಾಯ್ಯಂ ವಿಪುಲಂ ದಣ್ಡಧಾರಣಮ್ ॥೬॥**

"ಮಹಾಸತ್ತ್ವರಾದ ದೇವತೆಗಳ ಸನ್ನಿಧಾನದಲ್ಲಿಯೇ ಮಾನವನೊಬ್ಬ ನನ್ನು ವರಿಸಿದ ಅವಳಿಗೆ ಕಠಿನವಾದ ಶಿಕ್ಷೆಯನ್ನು ವಿಧಿಸುವುದು ನ್ಯಾಯ ವಾಗಿಯೇ ಇದೆ."

"ಹಾಗೆಂದಿಗೂ ಹೇಳಬೇಡ, ಕಲಿಪುರುಷ! ದಮಯಂತಿಯು ನಮ್ಮ ಅನುಮತಿಯನ್ನು ಪಡೆದೇ ನಲನನ್ನು ಮದುವೆಯಾದಳು. ಮೇಲಾಗಿ ಮಹಾಧರ್ಮಿಷ್ಠನಾದ, ಮನ್ಮಥಾಕಾರನಾದ, ಸರ್ವಗುಣಸಂಪನ್ನನಾದ ನಲರಾಜನನ್ನು ಮೋಹಿಸದ ಸ್ತ್ರೀಯರೂ ಇರುವರೇ?

**ಕಾ ಚ ಸರ್ವಗುಣೋಪೇತಂ ನಾಶ್ರಯೇತ ನಲಂ ನೃಪಮ್ ।**
**ಯೋ ವೇದ ಧರ್ಮಾನಖಿಲಾನ್ಯಥಾವಚ್ಚರಿತವ್ರತಃ ॥೮॥**

**ಯೋಽಧೀತೇ ಚತುರೋ ವೇದಾನ್ಸರ್ವಾನಾಖ್ಯಾನಪಞ್ಚಮಾನ್ ।**
**ನಿತ್ಯಂ ತೃಪ್ತಾ ಗೃಹೇ ಯಸ್ಯ ದೇವಾ ಯಜ್ಞೇಷು ಧರ್ಮತಃ ॥೯॥**

**ಅಹಿಂಸಾನಿರತೋ ಯಶ್ಚ ಸತ್ಯವಾದೀ ದೃಢವ್ರತಃ ।**
**ಯಸ್ಮಿನ್ನಾಕ್ಷ್ಯಂ ಧೃತಿರ್ಜ್ಞಾನಂ ತಪಃ ಶೌಚಂ ದಮಃ ಶಮಃ ॥೧೦॥**

**ಧ್ರುವಾಣಿ ಪುರುಷವ್ಯಾಘ್ರೇ ಲೋಕಪಾಲಸಮೇ ನೃಪೇ ।**
**ಏವಂರೂಪಂ ನಲಂ ಯೋ ವೈ ಕಾಮಯೇಚ್ಛಪಿತುಂ ಕಲೇ ।**
**ಆತ್ಮಾನಂ ಸ ಶಪೇನ್ಮೂಢೋ ಹನ್ಯಾದಾತ್ಮಾನಮಾತ್ಮನಾ ॥೧೧॥**

ಕಲಿಪುರುಷನೇ! ನಲರಾಜನು ಸಾಮಾನ್ಯನಲ್ಲ. ರಾಜಧರ್ಮವನ್ನು ಸಂಪೂರ್ಣವಾಗಿ ತಿಳಿದುಕೊಂಡಿರುತ್ತಾನೆ. ತಿಳಿದಿರುವುದು ಮಾತ್ರವೇ ಅಲ್ಲ. ರಾಜಧರ್ಮಕ್ಕನುಸಾರವಾಗಿಯೇ ನಡೆಯುತ್ತಿದ್ದಾನೆ. ವ್ರತನಿಷ್ಠನು. ನಾಲ್ಕು ವೇದಗಳನ್ನೂ, ಪುರಾಣೇತಿಹಾಸಗಳನ್ನೂ ಅಧ್ಯಯನಮಾಡಿರುತ್ತಾನೆ. ಯಾವುದೊಂದು ಪ್ರಾಣಿಗೂ ವೃಥಾ ಹಿಂಸೆಯನ್ನುಂಟುಮಾಡುವವನಲ್ಲ. ಸತ್ಯನಿಷ್ಠನಾಗಿರುತ್ತಾನೆ. ಸ್ಥಿರಪ್ರತಿಜ್ಞನು. ರಾಜನಾದವನಿಗೆ ಉಕ್ತವಾಗಿರುವ ಯಜ್ಞ-ಯಾಗಾದಿಗಳನ್ನು ವಿಧ್ಯುಕ್ತವಾಗಿ ಕಾಲ-ಕಾಲಕ್ಕೆ ಮಾಡುತ್ತಾ ದೇವತೆಗಳನ್ನು ತೃಪ್ತಿಪಡಿಸುತ್ತಿರುತ್ತಾನೆ. ಲೋಕಪಾಲಕರಿಗೆ ಸಮಾನನಾಗಿರುವ ಪುರುಷವ್ಯಾಘ್ರನಾದ ಆ ನಲನಲ್ಲಿ ಸತ್ಯ, ಕ್ಷಮೆ, ಜ್ಞಾನ, ತಪಸ್ಸು, ಪರಿಶುದ್ಧತೆ, ಜಿತೇಂದ್ರಿಯತೆ ಮತ್ತು ಶಾಂತಿ–ಇವು ಮೂರ್ತಿಮತ್ತಾಗಿ ನೆಲೆಸಿವೆ. ಇಂತಹ ಸರ್ವಗುಣಸಂಪನ್ನನಾದ ರಾಜನನ್ನು ಯಾವ ನಾರೀಮಣಿಯು ತಾನೇ ಆಶ್ರಯಿಸದೇ ಇರುವಳು? ಇಂತಹ ಸಕಲಗುಣಸಂಪನ್ನನಾದ ನಲನನ್ನು ಕೇವಲ ಮೂರ್ಖರಾದವರು ಮಾತ್ರವೇ ಶಪಿಸಲು ಉದ್ಯುಕ್ತರಾಗುತ್ತಾರೆ. ಆದರೆ ಅಂತಹ ಮಹಾನುಭಾವನನ್ನು ಶಪಿಸುವುದರಿಂದ ತಮಗೆ ತಾವೇ ಶಾಪಕೊಟ್ಟುಕೊಂಡಂತಾಗಿ ಅವರು ಭ್ರಷ್ಟರಾಗಿ ವಿನಾಶಹೊಂದುವುದೂ ನಿಶ್ಚಯ.

**ಏವಂಗುಣಂ ನಲಂ ಯೋ ವೈ ಕಾಮಯೇಚ್ಛಪಿತುಂ ಕಲೇ ।**
**ಕೃಚ್ಛ್ರೇ ಸ ನರಕೇ ಮಜ್ಜೇದಗಾಧೇ ವಿಪುಲೇ ಹ್ರದೇ ॥೧೨॥**

ಸಕಲಗುಣಸಂಪನ್ನನಾದ, ಮಹಾಧರ್ಮಿಷ್ಠನಾದ ನಲನಿಗೆ ಶಾಪ ಕೊಡಲು ಇಚ್ಛಿಸಿದ ಮಾತ್ರದಿಂದಲೇ–ಅಂತಹವನು ಅಗಾಧವಾದ, ಬಹಳ ವಿಶಾಲವಾದ, ಕಠಿನತಮವಾದ ನರಕದಲ್ಲಿ ಬೀಳುತ್ತಾನೆ."

ದೇವತೆಗಳು ಕಲಿಗೆ ಹೀಗೆ ಸಮಾಧಾನವನ್ನು ಹೇಳಿ ಸ್ವರ್ಗಾಭಿಮುಖವಾಗಿ ತೆರಳಿದರು.

ಕಾಮದ ತಡೆಯಿಂದ ಉದ್ಭೂತವಾದ ಕಲಿಯ ಕೋಪವು ಇಂದ್ರಾದಿಗಳ ಹಿತೋಕ್ತಿಯಿಂದಲೂ ಶಮನವಾಗಲಿಲ್ಲ.

ಇಂದ್ರನು ದೇವತೆಗಳೊಡನೆ ಪ್ರಯಾಣಮಾಡಿದನಂತರ, ಕಲಿಯು ದ್ವಾಪರನನ್ನು ಕುರಿತು ಹೇಳಿದನು :

"ದ್ವಾಪರ! ಇಂದ್ರನು ಹೇಳಿದ ಹಿತೋಕ್ತಿಯಿಂದಲೂ ನನಗೆ ನಲನ ಮೇಲೆ ಉಂಟಾಗಿರುವ ಕೋಪವನ್ನು ಶಮನಮಾಡಿಕೊಳ್ಳಲು ಸಾಧ್ಯವಾಗಲಿಲ್ಲ. ಅವನ ಮೇಲೆ ಸೇಡು ತೀರಿಸಿಕೊಳ್ಳುವವರೆಗೂ ನನ್ನೀ ಕೋಪವು ಉಪಶಮನವಾಗಲಾರದು. ಆದುದರಿಂದ ನಾನೀಗಲೇ ನಲನಲ್ಲಿ ಪ್ರವೇಶಿಸುತ್ತೇನೆ. ಅವನನ್ನು ರಾಜ್ಯಭ್ರಷ್ಟನನ್ನಾಗಿಯೂ ಮಾಡುತ್ತೇನೆ. ನನ್ನಿಂದ ಕಾಮಿಸಲ್ಪಟ್ಟ ದಮಯಂತಿಯೊಡನೆ ಸುಖಿಸದಂತೆಯೂ ಮಾಡಿಬಿಡುತ್ತೇನೆ. ಹೀಗೆ ಮಾಡುವುದರಿಂದ ಮಾತ್ರವೇ ನನ್ನ ಕೋಪವು ಉಪಶಮನವಾದೀತು. ಈ ನನ್ನ ಕಾರ್ಯದಲ್ಲಿ ನೀನೂ ನನಗೆ ಸಹಾಯಕನಾಗಬೇಕು. ಪಗಡೆಯಾಟದ ಕಾಯಿಗಳಲ್ಲಿ ನೀನು ಸೇರಿಕೊಂಡು, ನಲನು ಸೋಲುವಂತೆ ಮಾಡಿ–ನನಗೆ ನೆರವಾಗಬೇಕಾಗಿದೆ."

ಐವತ್ತೆಂಟನೆಯ ಅಧ್ಯಾಯವು ಮುಗಿಯಿತು.

೫೯ನೆಯ ಅಧ್ಯಾಯ ನಲೋಪಾಖ್ಯಾನಪರ್ವ (ಮುಂದುವರಿದಿದೆ.)

## ನಲನಲ್ಲಿ ಕಲಿಯ ಪ್ರವೇಶ : ಪುಷ್ಕರನೊಡನೆ ನಲನ ಪಗಡೆಯಾಟ : ಪ್ರಜೆಗಳೂ ಮತ್ತು ದಮಯಂತಿಯೂ ತಡೆದರೂ ನಲನು ಪಗಡೆಯಾಟವನ್ನು ಮುಂದುವರಿಸಿದುದು

ಬೃಹದಶ್ವರು ಧರ್ಮರಾಜನಿಗೆ ಹೇಳುತ್ತಾರೆ :

**ಏವಂ ಸ ಸಮಯಂ ಕೃತ್ವಾ ದ್ವಾಪರೇಣ ಕಲಿಃ ಸಹ ।**
**ಆಜಗಾಮ ತತಸ್ತತ್ರ ಯತ್ರ ರಾಜಾ ಸ ನೈಷಧಃ ॥೧॥**

“ಕಲಿಯು ನಲನನ್ನು ರಾಜ್ಯಭ್ರಷ್ಟನನ್ನಾಗಿ ಮಾಡಲು ದ್ವಾಪರನೊಡನೆ ಸಂಧಾನಮಾಡಿಕೊಂಡು ನಲನ ಅರಮನೆಗೆ ಬಂದನು.

ಕಲಿಯು ನಲನಲ್ಲಿ ದೋಷವನ್ನು ಕಂಡುಹಿಡಿಯಲು ಹನ್ನೆರಡು ವರ್ಷಗಳ ಕಾಲ ಕಾದು ಕುಳಿತನು. ನಲನ ನಿತ್ಯಚರ್ಯೆಗಳಲ್ಲಿ ಲೋಪ-ದೋಷಗಳನ್ನು ಕಾಣಲು ಕಲಿಗೆ ಅವಕಾಶವೇ ಸಿಗಲಿಲ್ಲ. ಆದರೆ ಹನ್ನೆರಡನೆಯ ವರ್ಷ ಕಲಿಗೂ ಒಂದು ಸಮಯವು ಸಿಕ್ಕಿತು.

ಒಂದು ದಿನ ನಲನು ಯಾವುದೋ ಮುಖ್ಯವಾದ ರಾಜಕಾರ್ಯದಲ್ಲಿದ್ದಾಗ ಮೂತ್ರವಿಸರ್ಜನೆ ಮಾಡಬೇಕಾಗಿ ಬಂದು ತದನಂತರದಲ್ಲಿ ಮಾಡಬೇಕಾಗಿದ್ದ ಬಾಯಿಮುಕ್ಕುಳಿಸುವುದು, ಪಾದಪ್ರಕ್ಷಾಲನ ಮತ್ತು ಆಚಮನಾದಿಗಳನ್ನು ಹಠಾತ್ತಾಗಿ ಮರೆತು–ಸಂಧ್ಯಾವಂದನೆಯನ್ನು ಮಾಡಿಬಿಟ್ಟನು. ಆ ಒಂದು ದೋಷವೇ ಕಲಿಗೆ ನಲನಲ್ಲಿ ಪ್ರವೇಶಿಸಲು ಅವಕಾಶ ಮಾಡಿಕೊಟ್ಟಿತು.

(ಇದೊಂದು ದೋಷವೇ? ಮೂತ್ರೋತ್ಸರ್ಜನಮಾಡಿದ ನಂತರ ಏನು ಮಾಡಬೇಕು?–ಎಂಬ ಕುತೂಹಲದ ಪ್ರಶ್ನೆಗಳನ್ನು ಇಂದು ಕೇಳುತ್ತಾರೆ. ಬೀದಿ-ಬೀದಿಗಳಲ್ಲಿ ನಾಚಿಕೆ-ಹೇಸಿಗೆಗಳಿಲ್ಲದೇ ತಿಷ್ಠನ್ಮೂತ್ರಮಾಡುವ ಕಾಲವಿದು. ಇಂತಹ ಕಾಲದಲ್ಲಿ ಮೂತ್ರವಿಸರ್ಜನೆ ಮಾಡಿದ ನಂತರ ಕಾಲು ತೊಳೆಯದೇ ಸಂಧ್ಯಾವಂದನೆ ಮಾಡಿದ್ದರಿಂದ ಕಲಿಯು ನಲನಲ್ಲಿ ಪ್ರವೇಶಿಸಿದನೆಂದರೆ ನಮ್ಮ ಯುವಕರು ಗಹ-ಗಹಿಸಿ ನಗಲೂಬಹುದು. ಆದರೆ

ನಮ್ಮ ಹಿಂದಿನ ಕಟ್ಟುಪಾಡುಗಳನ್ನು ಆಳವಾಗಿ ಅಧ್ಯಯನಮಾಡದಿದ್ದರೆ ಅವುಗಳಲ್ಲಿರುವ ಮಹತ್ತ್ವವು ಹೇಗೆ ತಾನೇ ತಿಳಿದೀತು?

ಪ್ರಕೃತದಲ್ಲಿ ಮೂತ್ರವಿಸರ್ಜನೆಯ ಪ್ರಕರಣವನ್ನೇ ತೆಗೆದುಕೊಳ್ಳೋಣ. ಮೂತ್ರವಿಸರ್ಜನೆಯಾದನಂತರ ಗುಹ್ಯಾಂಗವನ್ನು ತೊಳೆಯಬೇಕು. ಅನಂತರದಲ್ಲಿ ಕಾಲು ತೊಳೆದುಕೊಳ್ಳಬೇಕು. ಆರು ಬಾರಿ ಬಾಯಿ ಮುಕ್ಕಳಿಸಬೇಕು. ಅನಂತರದಲ್ಲಿ ಎರಡು ಬಾರಿ ಶುದ್ಧಾಚಮನಮಾಡಬೇಕು. ಈ ಪದ್ಧತಿಯು ಆರೋಗ್ಯಶಾಸ್ತ್ರದ ದೃಷ್ಟಿಯಿಂದ ನೋಡಿದರೂ ಎಷ್ಟು ಸಮಂಜಸವಾಗಿರುವುದು! ಶರೀರವನ್ನು ಸಮಧಾತುವನ್ನಾಗಿ ಮಾಡಲು ಬಾಯಿಮುಕ್ಕಳಿಸುವ ನಿಯಮವನ್ನು ಮಾಡಿರುತ್ತಾರೆ. ಇದು ಶಾರೀರಶಾಸ್ತ್ರದ ಬಹಳ ಸೂಕ್ಷ್ಮವಿಷಯ. ಧರ್ಮದ ಹಿನ್ನೆಲೆಯಲ್ಲಿ ಆರೋಗ್ಯಶಾಸ್ತ್ರದ ಆಧಾರದ ಮೇಲೆ ಮಾಡಿರುವ ಕಟ್ಟುಪಾಡುಗಳನ್ನು ನಾವು ಅಂಧಶ್ರದ್ಧೆಯಿಂದಲೇ ಅನುಸರಿಸುತ್ತಾ ಹೋದರೂ ನಮಗೆ ಅದರಿಂದಾಗುವ ಪ್ರಯೋಜನವು ಇದ್ದೇ ಇರುವುದು. ಇಂತಹ ಕೆಲವು ಪದ್ಧತಿಗಳನ್ನು ನಮ್ಮ ನಿತ್ಯಜೀವನದಲ್ಲಿ ಅನುಸರಿಸಿದರೆ ರೋಗ-ರುಜಿನಾದಿಗಳೂ ಹತ್ತಿರಕ್ಕೂ ಸುಳಿಯಲಾರವು.)

ಮೂತ್ರೋತ್ಸರ್ಜನೆಮಾಡಿ ಕಾಲು ತೊಳೆಯದಿದ್ದರೆ ದೋಷವುಂಟಾಗುವುದೆಂದು ಧರ್ಮಶಾಸ್ತ್ರಗಳು ಹೇಳುತ್ತವೆ. ಆ ಒಂದು ದೋಷವನ್ನು ನಲನಲ್ಲಿ ಕಂಡೊಡನೆಯೇ ಹನ್ನೆರಡು ವರ್ಷಗಳ ಕಾಲ ಕಾದು ಕುಳಿತಿದ್ದ ಕಲಿಯು ಮಹಾನಂದದಿಂದ ನಲನಲ್ಲಿ ನುಸುಳಿ ಕುಳಿತನು. ಅರ್ಥಾತ್ ನಲನಲ್ಲಿ ಆವಿರ್ಭೂತನಾದನು. ಒಡನೆಯೇ ಕಲಿಯು, ನಲನ ಸೋದರನಾದ ಪುಷ್ಕರನಲ್ಲಿಗೆ ಹೋಗಿ ಅವನೊಡನೆ ಹೇಳಿದನು : "ಪುಷ್ಕರ! ಈ ಕೂಡಲೇ ನೀನು ನಲನ ಸಮೀಪಕ್ಕೆ ಹೋಗಿ ಅವನನ್ನು ಪಗಡೆಯಾಡಲು ಆಹ್ವಾನಿಸು. ಅವನೂ ಸಿದ್ಧನಾಗಿ ಬರುವನು. ಆಟದಲ್ಲಿ ನಾನು ನಿನಗೆ ಸಹಾಯವನ್ನೆಸಗಿ ನೀನು ವಿಜಯಿಯಾಗುವಂತೆ ಮಾಡುವೆನು. ನಲನನ್ನು ನೀನು ಪಗಡೆಯಾಟದಲ್ಲಿ ಸೋಲಿಸಿ ಅವನ ರಾಜ್ಯ-ಕೋಶಗಳೆಲ್ಲವನ್ನೂ ಒಂದೊಂದನ್ನಾಗಿ ಗೆದ್ದುಕೊಂಡರೆ ಅಖಂಡವಾದ ನಿಷಧರಾಜ್ಯಕ್ಕೆ ನೀನೇ ರಾಜನಾಗಬಹುದು."

(ಸುಮ್ಮನೆ ಕುಳಿತಿದ್ದವನಿಗೆ ರಾಜನಾಗುವಂತೆ ಆಶೆತೋರಿಸಿ ರಾಜ ನಾಗುವ ಮಾರ್ಗವನ್ನೂ ತೋರಿಸಿಕೊಟ್ಟರೆ ಯಾರು ತಾನೇ ಬೇಡವೆನ್ನು ವರು? ) ಒಡನೆಯೇ ಪುಷ್ಕರನು ಕಲಿಯ ಮಾತಿಗೆ ಸಮ್ಮತಿಯನ್ನಿತ್ತು ನಲನ ಸಮೀಪಕ್ಕೆ ತೆರಳಿದನು. ದ್ವಾಪರನು ತನ್ನ ಗೆಳೆಯನ ಪ್ರಚೋದನೆ ಯಂತೆ ಪಗಡೆಕಾಯಿಗಳಲ್ಲಿ ಸೇರಿಕೊಂಡನು. ಕಲಿಯು ದಾಳಗಳಲ್ಲಿ ಸೇರಿ ಕೊಂಡನು. (ಇಲ್ಲಿ 'ಗವಾಂ ವೃಷೋ ಭೂತ್ವಾ' ಎಂದು ಶ್ಲೋಕದಲ್ಲಿ ಉಕ್ತವಾಗಿದೆ. ಗೋ–ಶಬ್ದಕ್ಕೆ ಹಸುವೆಂದೂ, ವೃಷ-ಶಬ್ದಕ್ಕೆ ಎತ್ತೆಂದೂ ಸ್ವಾಭಾವಿಕವಾದ ಅರ್ಥವಾದರೂ, ಪ್ರಕೃತದಲ್ಲಿ ಸಂದರ್ಭಾನುಸಾರವಾಗಿ 'ವೃಷ' ಶ'ಬ್ದಕ್ಕೆ ಅಕ್ಷಮುಖ್ಯವೆಂದೂ [ದಾಳಗಳು] 'ಗೋ'ಶಬ್ದಕ್ಕೆ ಅಕ್ಷ ಗಳೆಂದೂ [ಪಗಡೇಕಾಯಿಗಳು] ವ್ಯಾಖ್ಯಾನಕಾರರು ಹೇಳಿರುತ್ತಾರೆ.) ಪುಷ್ಕರನು, ಶತ್ರುಗಳ ದರ್ಪವನ್ನು ಮುರಿಯಲು ಸಮರ್ಥನಾದ ನಲನ ಸಮೀಪಕ್ಕೆ ಹೋಗಿ ನಲನನ್ನು ಪಗಡೆಯಾಟಕ್ಕೆ ಬರುವಂತೆ ಬಲಾತ್ಕರಿಸಿದನು. ಗೆಲುವಿನ ಭರವಸೆಯಿಂದ ಪುಷ್ಕರನು ನಲನನ್ನು ಮತ್ತೆ ಮತ್ತೆ ಜೂಜಿಗೆ ಆಹ್ವಾನಿಸಿದನು. ದಮಯಂತಿಯು ನೋಡುತ್ತಿರುವಾಗಲೇ ಪುಷ್ಕರನ ಒತ್ತಾಯದ ಆಹ್ವಾನವನ್ನು ಮನಸ್ವಿಯಾದ ನಲನು ಸಹಿಸಲಿಲ್ಲ. ಆಡುವ ಕಾಲವು ಒದಗಿಬಂದಿದೆಯೆಂದು ಭಾವಿಸಿದನು. ನಿಶ್ಚಯ ಮಾಡಿದ್ದ ವೇಳೆಗೆ ಸರಿಯಾಗಿ ಆಟವು ಪ್ರಾರಂಭವಾಯಿತು. ಧನ-ಕನಕ-ರಜತ-ರಥ-ತುರಗ-ವಸ್ತು-ವಾಹನಗಳು ಒಂದಾದ ಮೇಲೊಂದರಂತೆ ಆಟಕ್ಕೆ ಪಣವಾ ಗಿಡಲ್ಪಟ್ಟುವು. ಕಲಿಯ ಪ್ರಭಾವದಿಂದ ನಲನು ಪ್ರತಿಯೊಂದು ಆಟ ದಲ್ಲಿಯೂ ಸೋತು, ಇಟ್ಟ ಪಣಗಳೆಲ್ಲವನ್ನೂ ಪುಷ್ಕರನಿಗೊಪ್ಪಿಸುತ್ತಿದ್ದನು. ಆಟವು ಮುಂದುವರಿಯುತ್ತಲೇ ಇದ್ದಿತು. ನಲನ ಮಿತ್ರರಿಗೆ ಸರ್ವವಿನಾಶ ಕರವಾದ ಪಗಡೆಯಾಟವನ್ನು ತಪ್ಪಿಸಲು ಸಾಧ್ಯವಾಗಲಿಲ್ಲ. ತಮ್ಮ ರಾಜನು ಪುಷ್ಕರನೊಡನೆ ಪಗಡೆಯಾಡುತ್ತಿರುವನೆಂದೂ, ರಾಜ್ಯ-ಕೋಶಾದಿಗಳನ್ನೂ ಪಣವನ್ನಾಗಿಟ್ಟು ಸೋಲುತ್ತಿರುವನೆಂದೂ, ಪಟ್ಟಣದ ನಾಗರಿಕರಿಗೂ ತಿಳಿಯಿತು. ನಲರಾಜನಲ್ಲಿ ಹೆಚ್ಚಿನ ಅನುರಾಗದಿಂದಿದ್ದ ಪಟ್ಟಣಿಗರೂ ಮತ್ತು ರಾಜನ ಶ್ರೇಷ್ಠರಾದ ಸಲಹೆಗಾರರೂ ಆ ವಾರ್ತೆಯನ್ನು ಕೇಳಿ ಅತಿದುಃಖಿತ

ರಾಗಿ, ರಾಜನನ್ನು ಹೇಗಾದರೂ ಮಾಡಿ ಪಗಡೆಯಾಟದಿಂದ ವಿಮುಖನನ್ನಾಗಿ ಮಾಡಬೇಕೆಂಬ ಆಶಯದಿಂದ ಅರಮನೆಯ ಹೆಬ್ಬಾಗಿಲಿಗೆ ಬಂದರು.

ಸೂತನು ಒಡನೆಯೇ ದಮಯಂತಿಯ ಬಳಿಗೆ ಬಂದು ಹೇಳಿದನು :

"ಮಹಾರಾಣಿ! ನಾಗರಿಕರೂ ಮತ್ತು ರಾಜ್ಯದ ಮುಖ್ಯಾಧಿಕಾರಿಗಳೂ ರಾಜನನ್ನು ಕಾಣುವ ಆಕಾಂಕ್ಷೆಯಿಂದ ಮಹಾದ್ವಾರದಲ್ಲಿ ಕಾಯುತ್ತಿದ್ದಾರೆ. ಈಗೊದಗಿರುವ ಮತ್ತು ಮುಂದೆ ಒದಗಬಹುದಾದ ವಿಪತ್ತನ್ನು ನೆನೆದು ಬಹಳ ದುಃಖಿತರಾಗಿ, ರಾಜನನ್ನು ಹೇಗಾದರೂ ಮಾಡಿ ಈ ದ್ಯೂತದಿಂದ ಪರಾಙ್ಮುಖನನ್ನಾಗಿ ಮಾಡಬೇಕೆಂಬ ಆಶಯದಿಂದಿರುತ್ತಾರೆ. ಆದುದರಿಂದ ರಾಜನಿಗೆ ಈ  ವಿಷಯವನ್ನು ಕೂಡಲೇ ನಿವೇದಿಸುವುದು ಯುಕ್ತವಾಗಿದೆ."



ದಮಯಂತಿಯೂ ಅದೇ ವಿಧವಾದ ದುಃಖಕ್ಕೊಳಗಾಗಿದ್ದಳಲ್ಲವೇ? ಸಾರಥಿಯ ಮಾತನ್ನು ಕೇಳಿ ದಮಯಂತಿಯ ದುಃಖವು ಮತ್ತಷ್ಟು ಹೆಚ್ಚಿತು. ರಾಜನ ಬಳಿಗೆ ಹೋಗಿ ಗದ್ಗದಧ್ವನಿಯಿಂದ ಹೇಳಿದಳು : "ಮಹಾರಾಜ! ನಮ್ಮ ಪ್ರಜೆಗಳೂ ಮತ್ತು ಮಂತ್ರಿಗಳೂ ತಮಗಿರುವ ಸ್ವಾಮಿನಿಷ್ಠೆಯ ಕಾರಣದಿಂದಾಗಿ ನಿನ್ನನ್ನು ಸಂದರ್ಶಿಸಲು ಮಹಾದ್ವಾರದಲ್ಲಿ ಕಾದು ನಿಂತಿದ್ದಾರೆ. ಅವರಿಗೆ ನೀನೊಮ್ಮೆ ದರ್ಶನವನ್ನೀಯುವುದು ಸೂಕ್ತವಾಗಿದೆ."

ದಮಯಂತಿಯ ಮಾತಿಗೆ ಉತ್ತರವೇನೂ ಬರಲಿಲ್ಲ. ಮತ್ತೊಮ್ಮೆ ಕಣ್ಣೀರಿಡುತ್ತಾ ಹೇಳಿದಳು. ರಾಜನಿಗೆ ಅವಳ ಮಾತುಗಳು ಕೇಳುತ್ತಿವೆಯೋ–ಇಲ್ಲವೋ ಎಂಬ ಸಂಶಯವುಂಟಾಗುವ ರೀತಿಯಲ್ಲಿ ರಾಜನು ನಡೆದುಕೊಂಡನು. ನಲನು ದಮಯಂತಿಯನ್ನೊಮ್ಮೆ ತಲೆಯೆತ್ತಿ ಕೂಡ ನೋಡಲಿಲ್ಲ. ಅವನ ಮನಸ್ಸು ಮತ್ತು ದೃಷ್ಟಿಗಳೆಲ್ಲವೂ ದಾಳಗಳಲ್ಲಿಯೇ ಕೇಂದ್ರೀಕೃತವಾಗಿದ್ದುವು.

ಇದೆಲ್ಲವೂ ಕಲಿಪುರುಷನ ಪ್ರಭಾವದಿಂದಲೇ ನಡೆಯಿತೆಂದು ಪ್ರತ್ಯೇಕವಾಗಿ ಹೇಳಬೇಕಾಗಿಲ್ಲ. ಕಲಿಪುರುಷನು ನಲನಲ್ಲಿ ಕುಳಿತು ಕಾರ್ಯ ಮಾಡುತ್ತಿದ್ದುದರಿಂದ ನಲನ ಸ್ವಭಾವಜನ್ಯವಾದ ಸದ್ಗುಣಗಳೆಲ್ಲವೂ ಸುಪ್ತವಾಗಿದ್ದುವು.

ಮಹಾದ್ವಾರದಲ್ಲಿ ಕಾದುನಿಂತಿದ್ದ ಪಟ್ಟಣಿಗರಿಗೂ ನಲರಾಜನು ದಮಯಂತಿಗೆ ಉತ್ತರವನ್ನೇ ಕೊಡಲಿಲ್ಲವೆಂಬ ವಿಷಯವು ತಿಳಿಯಿತು. ಆದುದರಿಂದ ಅವರ ದುಃಖವು ಮತ್ತೂ ಹೆಚ್ಚಿತು. 'ನಾಯಮಸ್ತಿ' 'ಇವನಿನ್ನಿಲ್ಲ; ಇವನು ನಮಗಿನ್ನು ರಾಜನಾಗಿ ಉಳಿಯಲಾರನು'–ಎಂದುಕೊಂಡು ತಮ್ಮ-ತಮ್ಮ ಮನೆಗೆ ತೆರಳಿದರು.

ಯುಧಿಷ್ಠಿರ! ಈ ರೀತಿಯಲ್ಲಿ ನಲ-ಪುಷ್ಕರರು ಅನೇಕಮಾಸಗಳವರೆಗೆ ದ್ಯೂತವಾಡಿದರು. ಆದರೆ ಪ್ರತಿಯೊಂದು ಆಟದಲ್ಲಿಯೂ ನಲನೇ ಸೋಲುತ್ತಿದ್ದನು."

೫೯ನೆಯ ಅಧ್ಯಾಯವು ಮುಗಿಯಿತು.

## ದುಃಖಿತೆಯಾದ ದಮಯಂತಿಯು ವಾರ್ಷ್ಣೇಯನ ಮೂಲಕವಾಗಿ ಮಕ್ಕಳನ್ನು ಕುಂಡಿನಪುರಕ್ಕೆ ಕಳುಹಿಸಿದುದು

ಬೃಹದಶ್ವರು ಉಪಾಖ್ಯಾನವನ್ನು ಮುಂದುವರಿಸಿ ಹೇಳುತ್ತಾರೆ :

"ಯುಧಿಷ್ಠಿರ! ಪುಣ್ಯಶ್ಲೋಕನಾದ ನಲನು ಉನ್ಮತ್ತನಂತೆ ಪಗಡೆ ಯಾಟದಲ್ಲಿಯೇ ತಲ್ಲೀನನಾಗಿರುವುದನ್ನೂ, ಆ ಕಾಲದಲ್ಲಿ ಅವನಿಗೆ ರಾಜ ಕೀಯವ್ಯವಹಾರಗಳ ವಿವೇಚನೆಯೇ ಇಲ್ಲದಿದ್ದುದನ್ನೂ ಜಾಗರೂಕಳಾಗಿದ್ದ ದಮಯಂತಿಯು ಗಮನಿಸಿ ಭಯದಿಂದಲೂ, ದುಃಖದಿಂದಲೂ ಪೀಡಿತ ಳಾದಳು. ನಲರಾಜನಿಗೋಸ್ಕರ ಮಾಡಬೇಕಾದ ಮಹಾಕಾರ್ಯವನ್ನು ಕುರಿತು ಚಿಂತಿಸಿದಳು. ಮುಂದೆ ನಲನು ಸೋತರೆ ಒದಗಬಹುದಾದ ದುಷ್ಪರಿಣಾಮವನ್ನು ಶಂಕಿಸಿ ನಲನಿಗೆ ಪ್ರಿಯವನ್ನುಂಟುಮಾಡಬೇಕೆಂದು ಇಚ್ಛಿಸಿದಳು.

ನಲನು ತನ್ನ ಸರ್ವಸ್ವವನ್ನೂ ದ್ಯೂತದಲ್ಲಿ ಕಳೆದುಕೊಂಡನೆಂಬುದನ್ನು ದಮಯಂತಿಯು ಅರಿತಳು. ಬಳಿಕ ಅದರ ತಥ್ಯಾಂಶವನ್ನು ತಿಳಿಯುವ ಸಲುವಾಗಿ ತನ್ನ ಪ್ರಿಯಸೇವಕಿಯಾದ, ಅತಿಚತುರೆಯಾದ, ಮಧುರಭಾಷಿಣಿ ಯಾದ ಬೃಹತ್ಸೇನೆಯನ್ನು ಕರೆದು ಹೇಳಿದಳು :

"ಬೃಹತ್ಸೇನೆ! ಈಗಲೇ ನೀನು ನಮ್ಮ ರಾಜನ ಮಂತ್ರಿಗಳ ಬಳಿಗೆ ಹೋಗಿ ಅವರನ್ನು ರಾಜನು ಆಹ್ವಾನಿಸಿರುವನೆಂದು ತಿಳಿಸು ಮತ್ತು ಅವರು ರಾಜನನ್ನು ನೋಡಲು ಬರುವಾಗ–ಇದುವರೆಗೆ ನಲಮಹಾರಾಜನು ದ್ಯೂತ ದಲ್ಲಿ ಎಷ್ಟು ಸಂಪತ್ತನ್ನು ಕಳೆದಿರುತ್ತಾನೆ? ಮತ್ತು ಉಳಿದಿರುವ ಸಂಪ ತ್ತೆಷ್ಟು?–ಎಂಬ ಅಂಕಿ-ಅಂಶಗಳನ್ನೂ ತಿಳಿದು ರಾಜನಿಗೆ ನಿವೇದಿಸಲಿ."

ರಾಣಿಯ ಆಜ್ಞೆಯಂತೆ ಬೃಹತ್ಸೇನೆಯು ಅಮಾತ್ಯರ ಬಳಿಗೆ ಹೋಗಿ ದಮಯಂತಿಯು ಹೇಳಿದ ರಾಜಾಜ್ಞೆಯನ್ನು ತಿಳಿಯಪಡಿಸಿದಳು.

ಆ ಆಜ್ಞೆಯು ನಲನ ಸಮ್ಮುಖದಿಂದಲೇ ಹೊರಟಿರುವುದೆಂದು ಮಂತ್ರಿಗಳು ತಿಳಿದು ಸಂತುಷ್ಟರಾದರು. "ರಾಜನಿಗೆ ಈ ವಿಧವಾದ ವಿವೇಚನೆಯುಂಟಾಗಿರುವುದು ನಿಶ್ಚಯವಾಗಿಯೂ ನಮ್ಮ ಅದೃಷ್ಟವೇ

ಸರಿ"–ಎಂದು ಭಾವಿಸಿದವರಾಗಿ ಮಂತ್ರಿಗಳೆಲ್ಲರೂ ರಾಜನ ಸಮೀಪಕ್ಕೆ ಬಂದರು. ಅವರು ಎರಡನೆಯ ಬಾರಿ ಬಂದಿರುವ ವಿಷಯವನ್ನು ದಮಯಂತಿಯು ನಲನಿಗೆ ತಿಳಿಯಹೇಳಿದಳು. ಕಳೆದುಕೊಂಡಿರುವ ಮತ್ತು ಉಳಿದಿರುವ ಐಶ್ವರ್ಯವನ್ನು ರಾಜನಿಗೆ ನಿವೇದಿಸಲು ಬಂದಿರುವರೆಂದೂ ಹೇಳಿದಳು.

ಆದರೆ ಆಟದ ಅಮಲಿನಲ್ಲಿದ್ದ ನಲನಿಗೆ ಅದರ ವಿವೇಚನೆಯು ಹೇಗೆ ತಾನೇ ಉಂಟಾದೀತು? ನಲರಾಜನು ಯಥಾಪೂರ್ವವಾಗಿ ದಮಯಂತಿಯು ಸಂಬೋಧಿಸುತ್ತಿರುವಳೆಂಬುದನ್ನೂ ಗಮನಿಸದೇ–ಪಗಡೆಯಾಟದಲ್ಲಿಯೇ ನೆಟ್ಟದೃಷ್ಟಿಯುಳ್ಳವನಾಗಿದ್ದನು. ತನ್ನ ಕರೆಗೆ ಪ್ರತ್ಯುತ್ತರವೇ ಬಾರದಿದ್ದುದಕ್ಕಾಗಿ ದಮಯಂತಿಯು ಬಹಳ ನಾಚಿಕೆಗೊಂಡವಳಾಗಿ ತನ್ನ ಅಂತಃಪುರಾಭಿ ಮುಖವಾಗಿ ತೆರಳಿದಳು. ನಲ-ಪುಷ್ಕರರ ಆಟವು ಯಥಾಪೂರ್ವವಾಗಿ ಮುಂದೆ ಸಾಗಿತು. ನಲನು ಯಾವುದೊಂದು ಆಟದಲ್ಲಿಯೂ ಗೆಲ್ಲುತ್ತಿಲ್ಲ ವೆಂದೂ, ಸಕಲೈಶ್ವರ್ಯವನ್ನೂ ಸೋಲುತ್ತಿರುವನೆಂದೂ ದಾಸಿಯರು ಕ್ಷಣ-ಕ್ಷಣಕ್ಕೂ ದಮಯಂತಿಗೆ ಬಂದು ಹೇಳುತ್ತಿದ್ದರು. ಅದರಿಂದ ದಮಯಂತಿಯು ಮತ್ತಷ್ಟು ಯೋಚನೆಗೀಡಾದಳು. ಮುಂದೆ ಅನಿವಾರ್ಯ ವಾದ ಆಪತ್ತು ಕಾದಿದೆಯೆಂದು ದಮಯಂತಿಗೆ ಭಾಸವಾಯಿತು. ಮನಸ್ಸಿ ನಲ್ಲಿ ಏನನ್ನೋ ಯೋಚಿಸಿ ತನ್ನ ಪ್ರಿಯಸೇವಕಿಯಾದ ಬೃಹತ್ಸೇನೆಯನ್ನು ಪುನಃ ಕರೆದು ಹೇಳಿದಳು : "ಬೃಹತ್ಸೇನೆ! ನೀನೀಗಲೇ ನಮ್ಮ ಸಾರಥಿಯಾದ ವಾರ್ಷ್ಣೇಯನ ಬಳಿಗೆ ಹೋಗಿ ನಲರಾಜನು ಕರೆಯುತ್ತಿರುವನೆಂದು ಹೇಳಿ ಕರೆದುಕೊಂಡು ಬಾ. ಪರಿಸ್ಥಿತಿಯು ದಿನ-ದಿನಕ್ಕೂ ಹದಗೆಡುತ್ತಿರುವುದು. ಮುಂದೊದಗಬಹುದಾದ ಆಪತ್ತನ್ನು ನೆನೆದು ಕೆಲವು ಕಾರ್ಯಗಳನ್ನು ನಾನಿಂದೇ ಪೂರೈಸಬೇಕಾಗಿದೆ."

ಬೃಹತ್ಸೇನೆಯು ದಮಯಂತಿಯ ಆಜ್ಞಾನುಸಾರವಾಗಿ ವಿಧೇಯರಾದ ಸೇವಕರ ಮೂಲಕ ಸಾರಥಿಯಾದ ವಾರ್ಷ್ಣೇಯನನ್ನು ದಮಯಂತಿಯ ಸಮೀಪಕ್ಕೆ ಕರೆಯಿಸಿದಳು.

ಅನಿಂದಿತೆಯಾದ, ದೇಶ-ಕಾಲಜ್ಞಳಾದ, ಯಾವ ಕಾಲದಲ್ಲಿ ಏನು ಮಾಡಬೇಕೆಂಬುದರ ಪರಿಜ್ಞಾನವುಳ್ಳ ದಮಯಂತಿಯು–ರಾಜನ ಸ್ಥಿತಿಯನ್ನು

ಕಂಡು ದುಃಖಿತನಾಗಿದ್ದ ವಾರ್ಷ್ಣೇಯನನ್ನು ಸಂತೈಸುತ್ತಾ ಹೇಳಿದಳು. "ವಾರ್ಷ್ಣೇಯ! ರಾಜನು ನಿನ್ನ ವಿಷಯದಲ್ಲಿ ಎಷ್ಟೊಂದು ವಾತ್ಸಲ್ಯವುಳ್ಳವನಾಗಿರುವನೆಂಬ ವಿಷಯವನ್ನು ನಾನು ನಿನಗೆ ಹೇಳಬೇಕಾಗಿಯೇ ಇಲ್ಲ. ಆದರೆ ನಮ್ಮ ರಾಜನು ದುರದೃಷ್ಟವಶದಿಂದ ಸಂಕಟಕ್ಕೀಡಾಗಿರುವನು. ಈ ಸಮಯದಲ್ಲಿ ಅವನಿಗೆ ಸಹಕಾರ ನೀಡುವುದು ನಿನಗೆ ಯೋಗ್ಯವಾಗಿದೆ. ಆಟದಲ್ಲಿ ಸೋತು ಐಶ್ವರ್ಯವನ್ನು ಕಳೆದುಕೊಂಡಂತೆಲ್ಲಾ ನಲರಾಜನಿಗೆ ಮುಂದೆಯೂ ಆಟವಾಡಬೇಕೆಂಬ ಛಲವು ಮತ್ತಷ್ಟು ಹೆಚ್ಚುತ್ತಿದೆ. ದಾಳಗಳಾದರೋ ಪುಷ್ಕರನಿಗೆ ಅಡಿಯಾಳುಗಳಂತೆ ವರ್ತಿಸುತ್ತಿವೆ. ನಲರಾಜನಿಗೆ ಅತಿವಿರೋಧಿಗಳಂತೆ ವರ್ತಿಸುತ್ತಿವೆ. ಪುಷ್ಕರನು ಕೇಳಿದ ಗರಗಳೆಲ್ಲವೂ ಬೀಳುವುವು. ನಲರಾಜನಿಗೆ ಬೇಕಾದ ಗರಗಳೊಂದೂ ಬೀಳುತ್ತಿಲ್ಲ. ಆಟದ ಅಮಲಿನಲ್ಲಿ ಮಗ್ನನಾಗಿರುವ ನಮ್ಮ ನಲರಾಜನು ಬಂಧುಗಳ, ಅಮಾತ್ಯರ, ಮಿತ್ರರ, ಎಲ್ಲಕ್ಕಿಂತಲೂ ಮಿಗಿಲಾಗಿ ಧರ್ಮಪತ್ನಿಯಾದ ನನ್ನ ಮಾತುಗಳನ್ನೂ ಕೇಳುವವನಾಗಿಲ್ಲ. ಆದರೆ ನಮ್ಮ ಮಾತನ್ನು ಕೇಳದ ಮಾತ್ರಕ್ಕೆ ನಲರಾಜನು ದೋಷಿಯೆಂದು ನಾನು ಹೇಳುವುದಿಲ್ಲ. ಪಗಡೆಯಾಟದ ಪ್ರಭಾವವೇ ಅಂತಹುದು. ಪಗಡೆಯಾಟದಲ್ಲಿಯೇ ನೆಟ್ಟಮನಸ್ಸುಳ್ಳ ಮತ್ತು ನೆಟ್ಟದೃಷ್ಟಿಯುಳ್ಳ ಇವನಿಗೆ ನಮ್ಮ ಮಾತು ಕೇಳದೆಯೂ ಇರಬಹುದು. ಸಾರಥಿಯೇ! ಈ ಸಂದಿಗ್ಧಸಮಯದಲ್ಲಿ ನಾನು ನಿನ್ನ ರಕ್ಷಣೆಯನ್ನು ಕೇಳಿರುವೆನು. ನೀನು ನನ್ನ ಆಜ್ಞೆಯಂತೆಯೇ ನಡೆದುಕೊಳ್ಳಬೇಕು. ನನ್ನ ಚಿತ್ತವು ಕ್ಷಣ-ಕ್ಷಣಕ್ಕೂ ಪರಿಭ್ರಮಣಗೊಳ್ಳುತ್ತಿದೆ. ನಮ್ಮ ರಾಜನು ಮುಂದೆ ಇನ್ನೂ ಹೆಚ್ಚಿನ ಆಪತ್ತಿನಲ್ಲಿ ಬೀಳಬಹುದೆಂದೂ ನನಗನ್ನಿಸುತ್ತದೆ. ಆದುದರಿಂದ ನೀನೀಗಲೇ ರಾಜನ ದಿವ್ಯರಥಕ್ಕೆ ವಾಯುವೇಗ-ಮನೋವೇಗಗಳುಳ್ಳ ದಿವ್ಯಾಶ್ವಗಳನ್ನು ಹೂಡಿ, ಈ ನನ್ನ ಸುತ-ಸುತೆಯರನ್ನು ಕುಳ್ಳಿರಿಸಿಕೊಂಡು, ನನ್ನ ತಾಯಿ-ತಂದೆಗಳಿರುವ ಕುಂಡಿನಪಟ್ಟಣಕ್ಕೆ ಕರೆದುಕೊಂಡು ಹೋಗು. ಅಲ್ಲಿಯೇ ಇವರನ್ನೂ, ಈ ರಥ ಮತ್ತು ಅಶ್ವಗಳನ್ನೂ ಬಿಟ್ಟು ಬಿಡು. ಮುಂದೆ ನೀನು ವಿದರ್ಭದಲ್ಲಿಯಾದರೂ ಇರು ಅಥವಾ ನಿನ್ನ ಇಚ್ಛೆಯಂತೆ ಬೇರೆಯ ಪಟ್ಟಣಕ್ಕಾದರೂ ಹೋಗು."

ದಮಯಂತಿಯು ಹೇಳಿದ ಆ ಮಾತುಗಳನ್ನೇ ವಾರ್ಷ್ಣೇಯನು

ರಾಜನ ಅಮಾತ್ಯರಿಗೂ ತಿಳಿಸಿದನು. ಅವರೆಲ್ಲರೂ ಸಮಾಲೋಚಿಸಿ ದಮಯಂತಿಯ ಅಭಿಪ್ರಾಯವನ್ನು ಅನುಮೋದಿಸಿದರು. ರಾಜಕುಮಾರ ಮತ್ತು ರಾಜಕುಮಾರಿಯರನ್ನು ವಿದರ್ಭದೇಶಕ್ಕೆ ಕರೆದೊಯ್ಯಲು ಅನುಮತಿ ಯನ್ನಿತ್ತರು. ವಾರ್ಷ್ಣೇಯನು ಇಂದ್ರಸೇನ ಮತ್ತು ಇಂದ್ರಸೇನೆಯರನ್ನು ರಥದಲ್ಲಿ ಕುಳ್ಳಿರಿಸಿಕೊಂಡು ವಿದರ್ಭದೇಶಕ್ಕೆ ತೆರಳಿದನು. ಕೆಲವು ದಿನಗಳಲ್ಲಿಯೇ ವಾರ್ಷ್ಣೇಯನು ವಿದರ್ಭದೇಶವನ್ನು ಸೇರಿ ಕುಂಡಿನನಗರಿಗೆ ಹೋಗಿ ಅರಮನೆಯಲ್ಲಿ ದಮಯಂತಿಯ ತಂದೆಯಾದ ಭೀಮರಾಜನನ್ನು ಸಂಧಿಸಿ, ಅವನಿಗೆ ತಾನು ಕರೆತಂದಿದ್ದ ದಮಯಂತಿಯ ಮಕ್ಕಳನ್ನು ಒಪ್ಪಿಸಿದನು. ದಮಯಂತಿಯ ಆಜ್ಞಾನುಸಾರವಾಗಿ ರಥ-ತುರಗಗಳನ್ನು ಅಲ್ಲಿಯೇ ಬಿಟ್ಟು, ನಲನನ್ನು ನೆನೆಯುತ್ತಾ ಬಹಳ ದುಃಖಿತನಾಗಿ, ಭೀಮರಾಜನಿಗೆ ಹೋಗಿಬರುವೆನೆಂದು ಹೇಳಿ, ಅವನ ಅನುಮತಿಯನ್ನೂ ಪಡೆದವನಾಗಿ, ಕೆಲವು ದಿನಗಳು ಅನೇಕ ಸ್ಥಳಗಳಲ್ಲಿ ಅಲೆದಾಡುತ್ತಿದ್ದು ಕಟ್ಟಕಡೆಗೆ ಅಯೋಧ್ಯಾಪಟ್ಟಣಕ್ಕೆ ಬಂದು, ಅಲ್ಲಿ ರಾಜನಾಗಿದ್ದ ಋತುಪರ್ಣನನ್ನು ಸಂದರ್ಶಿಸಿ ಅವನ ಸಾರಥಿಯಾಗಿ ಸೇರಿಕೊಂಡನು.

೬೦ನೆಯ ಅಧ್ಯಾಯವು ಮುಗಿಯಿತು.

೬೧ನೆಯ ಅಧ್ಯಾಯ ನಲೋಪಾಖ್ಯಾನಪರ್ವ (ಮುಂದುವರಿದಿದೆ.)

## ನಲನು ದ್ಯೂತದಲ್ಲಿ ಸಂಪೂರ್ಣವಾಗಿ ಸೋತು ದಮಯಂತಿಯೊಡನೆ ಕಾಡಿಗೆ ಪ್ರಯಾಣಮಾಡಿದುದು : ಪಕ್ಷಿಗಳಿಂದ ನಲನ ವಸ್ತ್ರಾಪಹರಣ

ವಾರ್ಷ್ಣೇಯನು ನಲನ ಮಕ್ಕಳನ್ನು ಕರೆದುಕೊಂಡು ಹೊರಟು ಹೋದನಂತರ, ಪುಷ್ಕರನು ಪಗಡೆಯಾಟದಲ್ಲಿ ನಲನ ಸರ್ವಸ್ವವನ್ನೂ ಗೆದ್ದು ಕೊಂಡನು. ನಲನಿಗೆ ಮುಂದೆ ಪಣವಾಗಿಡಲು ವಸ್ತುಗಳೇ ಇಲ್ಲದಂತಾ ಯಿತು. ಆ ಸಮಯದಲ್ಲಿ ಪುಷ್ಕರನು ನಲನನ್ನು ಕುರಿತು ಹೇಳಿದನು : “ನಲ! ಆಟವನ್ನು ಮುಂದುವರಿಸೋಣವೇ? ಆದರೆ ಪಣವಿಡಲು ಈಗ ನಿನ್ನಲ್ಲಿ ಉಳಿದಿರುವ ವಸ್ತುವಾದರೂ ಏನಿದೆ? ರಾಜ್ಯ-ಕೋಶ-ವಸ್ತು-ವಾಹನ ಗಳೇ ಮೊದಲಾದ ನಿನ್ನ ಸರ್ವಸ್ವವನ್ನೂ ನಾನು ಗೆದ್ದಿರುವೆನು. ನೀನು

ಪಣವಾಗಿಡದ ವಸ್ತುವೆಂದರೆ ನಿನ್ನವಳಾದ, ಧರ್ಮಪತ್ನಿಯಾದ, ದಮಯಂತಿಯೊಬ್ಬಳು ಮಾತ್ರ ಉಳಿದಿರುವಳು. ನೀನು ಇಚ್ಛಿಸುವುದಾದರೆ ಈ ಮುಂದಿನ ಆಟಕ್ಕೆ ಅವಳನ್ನೇ ಪಣವನ್ನಾಗಿಡಬಹುದು."

ಪುಷ್ಕರನ ಆ ಮಾತುಗಳನ್ನು ಕೇಳಿ, ನಲನ ಹೃದಯಾಂತರಾಳದಲ್ಲಿದ್ದ ಕೋಪದಿಂದ ಅವನ ಹೃದಯವು ಸೀಳಿಹೋದಂತಾಯಿತು. ಆದರೆ ನಲನು ತಾಳ್ಮೆಹೊಂದಿದವನಾಗಿ ಯಾವುದೊಂದು ಮಾತನ್ನೂ ಆಡಲಿಲ್ಲ. ಶೂನ್ಯ ದೃಷ್ಟಿಯಿಂದ ಕೂಡಿದ್ದ ನಲನು ಪುಷ್ಕರನನ್ನು ದಿಟ್ಟಿಸಿ ನೋಡಿದನು. ಪುಣ್ಯಶ್ಲೋಕನಾದ ನಲನು ತನ್ನ ಮೈಮೇಲಿದ್ದ ಕನಕಾಂಗದ-ಕೇಯೂರಾದಿಗಳನ್ನು ಕಳಚಿ ಕೆಳಗಿಟ್ಟನು. ಧೋತ್ರವೊಂದನ್ನು ಮಾತ್ರವೇ ಉಟ್ಟುಕೊಂಡು, ಅಂಗವಸ್ತ್ರವೂ ಇಲ್ಲದವನಾಗಿ ತನ್ನ ಸಕಲೈಶ್ವರ್ಯವನ್ನೂ ತ್ಯಾಗಮಾಡಿ, ತನ್ನ ಮಿತ್ರರ ದುಃಖವನ್ನು ಹೆಚ್ಚಿಸುತ್ತಾ–ಅರಮನೆಯಿಂದ ಹೊರಬಿದ್ದನು. ದಮಯಂತಿಯೂ ತನ್ನ ಆಭರಣಗಳೆಲ್ಲವನ್ನೂ ಕಳಚಿಟ್ಟು, ನಲನನ್ನೇ ಅನುಸರಿಸಿ ನಡೆದಳು. ಪಟ್ಟಣದಿಂದ ಹೊರಗೆ ಬಂದ ನಲನು ದಮಯಂತಿಯೊಡನೆ ಮೂರು ರಾತ್ರಿಗಳನ್ನು ಅಲ್ಲಿಯೇ ಕಳೆದನು. ತಮ್ಮ ಪ್ರೀತಿಗೆ ಪಾತ್ರನಾಗಿದ್ದ ನಲನೊಡನೆಯೇ ಹೋಗಬೇಕೆಂದು ನಾಗರಿಕರ ಹೃದಯವು ಹಾತೊರೆಯುತ್ತಿದ್ದಿತು. ಪ್ರಜೆಗಳಿಗೆ ನಲನ ಮೇಲಿದ್ದ ಅನುರಾಗವೆಷ್ಟೆಂಬುದನ್ನು ತಿಳಿದಿದ್ದ ಪುಷ್ಕರನು ರಾಜಘೋಷಣೆಯೊಂದನ್ನು ಒಡನೆಯೇ ಹೊರಡಿಸಿದನು.

**ನಲೇ ಯಃ ಸಮ್ಯಗಾತಿಷ್ಠೇತ್ಸ ಗಚ್ಛೇದ್ವಧ್ಯತಾಂ ಮಮ ॥೮॥**

"ಈ ಪಟ್ಟಣದಲ್ಲಿರುವ ಪ್ರಜೆಗಳಲ್ಲಿ ಯಾರಾದರೂ ನಲನ ಸಂಗಡ ಹೋದರೆ ಅಥವಾ ಅವನಿಗೆ ಸತ್ಕಾರಮಾಡಿದರೆ ಅಂತಹವರು ನನ್ನ ಆಜ್ಞೆಯಂತೆ ಒಡನೆಯೇ ವಧಾರ್ಹರಾಗುತ್ತಾರೆ."

ಪುಷ್ಕರನಿಗೆ ನಲನ ಮೇಲಿದ್ದ ದ್ವೇಷವೆಷ್ಟೆಂಬುದನ್ನು ಅರಿತಿದ್ದ ಪ್ರಜೆಗಳು ಆ ಘೋಷಣೆಯನ್ನು ಕೇಳಿದನಂತರ ನಲನನ್ನು ಸತ್ಕರಿಸುವ ಸಾಹಸ ಮಾಡಲಿಲ್ಲ. ತಮ್ಮನ್ನು ಅನೇಕ ವರ್ಷಗಳ ಕಾಲ ಧರ್ಮದಿಂದ ಆಳಿದ, ಸಾಕ್ಷಾತ್ ತಂದೆಯಂತೆಯೇ ಇದ್ದ ನಲನ ವಿಷಯದಲ್ಲಿ ಸಹಾನುಭೂತಿಯನ್ನು

ತೋರಲೂ ಪ್ರಜೆಗಳು ಪುಷ್ಕರನ ಕ್ರೂರವಾದ ರಾಜಶಾಸನದಿಂದಾಗಿ ಧೈರ್ಯಮಾಡಲಿಲ್ಲ. ಒಂದು ದಿನದ ಹಿಂದೆ ಚಕ್ರವರ್ತಿಯಾಗಿದ್ದ ನಲನು ಇಂದು ಭಿಕಾರಿಯಂತೆ, ಹೇಳುವವರೂ ಕೇಳುವವರೂ ಇಲ್ಲದೇ ಅನ್ನಾಹಾರ ಗಳಿಲ್ಲದೇ ಕಾಲಕಳೆಯಬೇಕಾಯಿತು. ಕೇವಲ ಜಲಪಾನಮಾಡುತ್ತಾ ನಲನು ಪಟ್ಟಣದ ಗಡಿಯಲ್ಲಿ ಮೂರು ದಿನಗಳನ್ನು ಕಳೆದನು. ಹಸಿವನ್ನು ಸಹಿಸ ಲಾರದೇ ಕಂದಮೂಲ-ಫಲಗಳನ್ನು ಹುಡುಕಿಕೊಂಡು ಮುಂದೆ ನಡೆದನು. ದಮಯಂತಿಯೂ ಪತಿಯನ್ನು ಅನುಸರಿಸಿದಳು. ನಲನು ಹಸಿವಿನ ಸಂಕಟ ದಿಂದ ನರಳುತ್ತಾ ಕಂಗೆಟ್ಟು ಸ್ವಲ್ಪ ದೂರ ಹೋದನಂತರ ಸುವರ್ಣಸದೃಶವಾದ ರೆಕ್ಕೆಗಳಿದ್ದ ಪಕ್ಷಿಗಳ ಸಮೂಹವನ್ನು ಕಂಡನು. ಅವುಗಳನ್ನು ಕಂಡ ನಲನು ಮನದಲ್ಲಿಯೇ ಹಿಗ್ಗಿದನು. "ಹಕ್ಕಿಗಳ ಮಾಂಸವು ಆಹಾರವಾಗುತ್ತದೆ ; ಚಿನ್ನದ ರೆಕ್ಕೆಗಳು ಧನವಾಗುತ್ತವೆ"–ಎಂದು ನಲನು ಭಾವಿಸಿ ಅವುಗಳನ್ನು ಹಿಡಿಯುವುದು ಹೇಗೆಂದು ಕ್ಷಣಕಾಲ ಯೋಚಿಸಿದನು. ಪಕ್ಷಿಗಳನ್ನು ಹಿಡಿಯಲು ಬಲೆಯಿರಲಿಲ್ಲ. ಕೊಲ್ಲಲು ಧನುಸ್ಸಿರಲಿಲ್ಲ. ತಾನುಟ್ಟಿದ್ದ ಧೋತ್ರವನ್ನೇ ಬಲೆಯಂತೆ ಉಪಯೋಗಿಸಲು ನಿಶ್ಚಯಿಸಿದನು.

ನಲನು ಧೋತ್ರವನ್ನು ಬಿಚ್ಚಿ ಪಕ್ಷಿಗಳ ಮೇಲೆ ಬಲೆಯಂತೆ ಬೀಸಿ ಎಸೆದನು. ನಲನ ಧೋತ್ರವು ತಮ್ಮ ಮೇಲೆ ಬಿದ್ದೊಡನೆಯೇ ಆ ಧೋತ್ರ ವನ್ನೇ ಎತ್ತಿಕೊಂಡು ಸುವರ್ಣಸದೃಶವಾದ ರೆಕ್ಕೆಗಳಿದ್ದ ಆ ಪಕ್ಷಿಗಳು ಒಮ್ಮೆಲೇ ಅಂತರಿಕ್ಷಕ್ಕೆ ಹಾರಿದುವು. ದಿಗಂಬರನಾದ ನಲನನ್ನು ನೋಡಿ ಪಕ-ಪಕನೆ ನಗುತ್ತಾ ಪಕ್ಷಿಗಳು ನಲನನ್ನು ಕುರಿತು ಹೇಳಿದುವು :

**ವಯಮಕ್ಷಾಃ ಸುದುರ್ಬುದ್ಧೇ ತವ ವಾಸೋ ಜಿಹೀರ್ಷವಃ ।**
**ಆಗತಾ ನ ಹಿ ನಃ ಪ್ರೀತಿಃ ಸವಾಸಸಿ ಗತೇ ತ್ವಯಿ ॥೧೬॥**

"ಎಲೈ ಮಂದಬುದ್ಧಿಯವನೇ! ನಾವಾರೆಂಬುದನ್ನು ನೀನು ಅರಿಯದೇ ಹೋದೆ. ನಿನ್ನನ್ನು ಈ ಸ್ಥಿತಿಗೆ ಗುರಿಮಾಡಿರುವ ನಾವು ಪಗಡೆಕಾಯಿ-ದಾಳಗಳೇ ಆಗಿದ್ದೇವೆ. ನೀನುಟ್ಟಿರುವ ಈ ಒಂದು ವಸ್ತ್ರವನ್ನೂ ಅಪಹರಿಸಲೆಂದೇ ನಾವಿಲ್ಲಿಗೆ ಬಂದೆವು. ನೀನು ಅರಮನೆಯಿಂದ ಈ ಒಂದು ವಸ್ತ್ರವನ್ನುಟ್ಟು ಹೊರಟಿದ್ದೂ ನಮಗೆ ಸಹ್ಯವಾಗಲಿಲ್ಲ. ನಾವು ಬಂದ

ಕಾರ್ಯವಾಯಿತು. ನಾವಿನ್ನು ಹೋಗಿಬರುತ್ತೇವೆ"–ಎಂದು ಹೇಳಿ ಪಕ್ಷಿಗಳು ಅಂತರ್ಧಾನಹೊಂದಿದುವು



ಪಗಡೆಯ ಕಾಯಿ-ದಾಳಗಳು ಪಕ್ಷಿಗಳ ರೂಪದಲ್ಲಿ ಬಂದು ತಾನುಟ್ಟಿದ್ದ ಒಂದು ವಸ್ತ್ರವನ್ನೂ ಅಪಹರಿಸಿಕೊಂಡು ಹೋದುದನ್ನು ಕಂಡು ನಲನು ನಿಟ್ಟುಸಿರುಬಿಡುತ್ತಾ ದಮಯಂತಿಯನ್ನು ಕುರಿತು ಹೇಳಿದನು :

**ಯೇಷಾಂ ಪ್ರಕೋಪಾದೈಶ್ವರ್ಯಾತ್ಪ್ರಚ್ಯುತೋಽಹಮನಿನ್ದಿತೇ ।**
**ಪ್ರಾಣಯಾತ್ರಾಂ ನ ವಿನ್ದೇಯಂ ದುಃಖಿತಃ ಕ್ಷುಧಯಾನ್ವಿತಃ ॥೧೮॥**

**ಯೇಷಾಂ ಕೃತೇ ನ ಸತ್ಕಾರಮಕುರ್ವನ್ಮಯಿ ನೈಷಧಾಃ ।**
**ಇಮೇ ತೇ ಶಕುನಾ ಭೂತ್ವಾ ವಾಸೋ ಭೀರು ಹರನ್ತಿ ಮೇ ॥೧೯॥**

“ನಿರ್ದುಷ್ಟಳೇ! ಯಾವ ಕಾಯಿ-ದಾಳಗಳ ಪ್ರಕೋಪದಿಂದ ನಾನು ನನ್ನ ದೇಶ-ಕೋಶಗಳೆಲ್ಲವನ್ನೂ ಕಳೆದುಕೊಂಡೆನೋ, ಯಾವ ಕಾಯಿ-ದಾಳಗಳ ಪ್ರಭಾವದಿಂದ ನಾನಿಂದು ದುಃಖಿತನಾಗಿ ಹಸಿವಿನಿಂದ ಕೂಡಿ ನನ್ನ ಆಹಾರವನ್ನೂ ಸಂಪಾದಿಸಿಕೊಳ್ಳಲಾರದಷ್ಟು ಅಸಮರ್ಥನಾಗಿರುವೆನೋ ಮತ್ತು ಯಾವ ಪಗಡೆಕಾಯಿಗಳ ಪ್ರಭಾವದಿಂದಾಗಿ ನನ್ನ ಪ್ರಜೆಗಳೂ ನನ್ನನ್ನು ಆದರಿಸಲಿಲ್ಲವೋ–ಆ ಪಗಡೇಕಾಯಿ-ದಾಳಗಳೇ ಈಗ ಪಕ್ಷಿಗಳ ರೂಪದಲ್ಲಿ ಬಂದು ನಾನುಟ್ಟಿದ್ದ ಒಂದು ವಸ್ತ್ರವನ್ನೂ ಅಪಹರಿಸಿಬಿಟ್ಟುವು. ಇಂತಹ ದಾರುಣವಾದ ಕಷ್ಟಕ್ಕೆ ಸಿಕ್ಕಿರುವ ನಾನಿಂದು ನಿಶ್ಚಯವಾಗಿಯೂ ಬುದ್ಧಿ ಹೀನನಾಗಿರುವೆನು. ನಾನಿಷ್ಟು ದುರವಸ್ಥೆಯಲ್ಲಿದ್ದರೂ ನಾನು ನಿನ್ನ ಪತಿಯೇ ಆಗಿರುವೆನಲ್ಲವೇ? ದಮಯಂತಿ! ನಾನು ನಿನ್ನ ಸ್ವಾಮಿ. ಆದುದರಿಂದ ನಿನ್ನ ಹಿತಕ್ಕಾಗಿಯೇ ಹೇಳಲಿರುವ ನನ್ನೀ ಮಾತುಗಳನ್ನು ಕೇಳಿ ಅದರಂತೆ ನಡೆದುಕೋ.

ನೋಡು, ದಮಯಂತಿ! ಇಲ್ಲಿ ಅನೇಕ ಮಾರ್ಗಗಳಿವೆ. ಇವುಗಳಲ್ಲಿ ದಕ್ಷಿಣದ ಕಡೆಗೆ ಹೋಗುವ ಮಾರ್ಗವು ಋಕ್ಷವಂತಪರ್ವತಗಳ ಮೂಲಕ ಅವಂತಿದೇಶದ ಕಡೆಗೆ ಹೋಗುತ್ತದೆ. ನಮ್ಮೆದುರಾಗಿ ಕಾಣುತ್ತಿರುವ ಈ ಪರ್ವತವೇ ವಿಂಧ್ಯಪರ್ವತ. ಇಲ್ಲಿ ಕಾಣುತ್ತಿರುವ ಈ ಪಯೋಷ್ಣೀ ನದಿಯು ಸಮುದ್ರಾಭಿಮುಖವಾಗಿ ಹೋಗುತ್ತದೆ. ಈ ನದಿಯ ತೀರದಲ್ಲಿಯೇ ಅನೇಕ ಋಷ್ಯಾಶ್ರಮಗಳಿವೆ. ಆ ಆಶ್ರಮಗಳ ಪಕ್ಕದಲ್ಲಿ ಹಾದುಹೋಗುವ ಹಾದಿಯನ್ನೇ ಹಿಡಿದು ಹೋದಲ್ಲಿ ವಿದರ್ಭದೇಶಕ್ಕೆ ಹೋಗುತ್ತದೆ. ಈ ಮತ್ತೊಂದು ಮಾರ್ಗವು ಕೋಸಲದೇಶಕ್ಕೆ ಹೋಗುತ್ತದೆ. ಮೊದಲಿನ ಮಾರ್ಗದ ತುದಿಗೆ ದಕ್ಷಿಣದೇಶವು ಸಿಕ್ಕುತ್ತದೆ.”

ಈ ಮಾತುಗಳನ್ನು ನಲನು ದಮಯಂತಿಯೊಡನೆ ನಾಲ್ಕಾರು ಬಾರಿ ಹೇಳಿದನು. ಆದರೆ ದಮಯಂತಿಯನ್ನು ಕುರಿತು ‘ನೀನೀ ಮಾರ್ಗವನ್ನನುಸರಿಸಿ ವಿದರ್ಭಕ್ಕೆ ಹೋಗು’–ಎಂದು ಮಾತ್ರ ಹೇಳಲಿಲ್ಲ.

ಆದರೆ ನಲನ ಆ ಮಾತುಗಳನ್ನು ಕೇಳಿ ದಮಯಂತಿಯು ನಲನ ಆಶಯವೇನಿರಬಹುದೆಂಬುದನ್ನು ತಿಳಿದಳು. ಅವಳಿಗೆ ಬಹಳ ದುಃಖ ವಾಯಿತು. ಕಂಬನಿಗರೆಯುತ್ತಾ ಗದ್ಗದಕಂಠದಿಂದ ಹೇಳಿದಳು :

“ಮಹಾರಾಜ! ನೀನು ಹೇಳುತ್ತಿರುವ ಮಾರ್ಗಗಳ ವಿವರಣೆಯನ್ನು ಕೇಳಿ, ನಿನ್ನ ಹೃದಯದ ಆಶಯವನ್ನು ತಿಳಿದು ನನ್ನ ಹೃದಯವು ಕಂಪಿಸ ತೊಡಗಿದೆ. ನನ್ನ ಅವಯವಗಳೆಲ್ಲವೂ ಚೇತನಾರಹಿತವಾಗುತ್ತಿವೆ. ಸ್ವಾಮಿಯೇ! ರಾಜ್ಯ-ಕೋಶಾದಿಗಳಿಂದ ವಿಹೀನನಾದ, ದಿಗಂಬರನಾದ, ಅನ್ನಾಹಾರಗಳಿಲ್ಲದೇ ಅಲೆದಾಡುತ್ತಿರುವ ನಿನ್ನನ್ನಗಲಿ ನಾನು ಹೇಗೆತಾನೇ ಹೋಗಲಿ? ಘೋರಾರಣ್ಯದಲ್ಲಿ ಅನ್ನಾಹಾರಗಳಿಲ್ಲದೇ ಬಳಲಿಕೆಯಿಂದ ಕಂಗೆಟ್ಟು ಕುಳಿತಿರುವ ನೀನು ನಿನ್ನ ಹಿಂದಿನ ಸ್ಥಿತಿಗಳನ್ನು ನೆನೆದು ದುಃಖಿಸುತ್ತಿರುವಾಗ ನಾನು ನಿನ್ನನ್ನು ಸಮಯೋಚಿತವಾದ ಸವಿಮಾತು ಗಳಿಂದ ಸಂತೈಸಲು ಸಮರ್ಥಳಾಗಿರುವೆನು.

**ನ ಚ ಭಾರ್ಯಾಸಮಂ ಕಿಂಚಿದ್ವಿದ್ಯತೇ ಭಿಷಜಾಂ ಮತಮ್ ।**
**ಔಷಧಂ ಸರ್ವದುಃಖೇಷು ಸತ್ಯಮೇತದ್ಬ್ರವೀಮಿ ತೇ ॥೨೯॥**

ಮಾನವನಿಗೆ ಕಷ್ಟವೊದಗಿದಾಗ ಧರ್ಮಪತ್ನಿಯ ಸಮಯೋಚಿತವಾದ ವಚನಗಳಿಗೆ ಸಮಾನವಾದ ಔಷಧವೇ ಇಲ್ಲವೆಂದು ವೈದ್ಯರೇ ಹೇಳುತ್ತಾರೆ. ಆದುದರಿಂದ ನನ್ನನ್ನು ಕಳುಹಿಸಿಬಿಡುವ ಯೋಚನೆಯನ್ನೆಂದಿಗೂ ಮಾಡಬೇಡ. ನಾನು ನಿನ್ನೊಡನೆ ಸಖಿಯಂತೆಯೂ, ವೈದ್ಯನಂತೆಯೂ ಇರುತ್ತೇನೆ. ಇದು ಸತ್ಯವಾದ ಮಾತು.”

ದಮಯಂತಿಯ ಮಾತುಗಳನ್ನು ಕೇಳಿ ನಲನು ಉತ್ತರಿಸಿದನು :

“ದಮಯಂತಿ! ನೀನು ಹೇಳುವುದು ಅಕ್ಷರಶಃ ನಿಜ.

**ನಾಸ್ತಿ ಭಾರ್ಯಾಸಮಂ ಮಿತ್ರಂ ನರಸ್ಯಾರ್ತಸ್ಯ ಭೇಷಜಮ್ ॥**

ಕಷ್ಟದಲ್ಲಿರುವವರಿಗೆ ತನ್ನ ಕಷ್ಟಗಳನ್ನು ಪರಿಹರಿಸಿಕೊಳ್ಳಲು ಹೆಂಡತಿಗೆ ಸಮವಾದ ಮಿತ್ರನೂ–ಔಷಧವೂ ಮತ್ತೊಂದಿಲ್ಲ. ಇದನ್ನು ನಾನೂ ತಿಳಿದಿರುವೆನು. ನನ್ನೀ ದುರವಸ್ಥೆಯಲ್ಲಿ ಮಿತ್ರಪ್ರಾಯಳಾಗಿರುವ ನಿನ್ನನ್ನು

ಪರಿತ್ಯಾಗಮಾಡುವ ಆಶಯವೂ ನನಗಿಲ್ಲ. ಕೇವಲ ಮಾರ್ಗನಿರೂಪಣೆ ಮಾಡಿದುದಕ್ಕಾಗಿಯೇ ಭಯಪಟ್ಟೆಯಾ? ದಮಯಂತಿ! ಭಯಪಡಬೇಡ.

**ತ್ಯಜೇಯಮಹಮಾತ್ಮಾನಂ ನ ಚೈವ ತ್ವಾಮನಿನ್ದಿತೇ ॥೩೧॥**

ನಾನು ನನ್ನ ಆತ್ಮವನ್ನು ಬೇಕಾದರೂ ಪರಿತ್ಯಾಗಮಾಡಿಯೇನು. ಆದರೆ ನಿಷ್ಕಳಂಕಳಾದ ನಿನ್ನನ್ನು ಮಾತ್ರ ಖಂಡಿತವಾಗಿಯೂ ಪರಿತ್ಯಾಗಮಾಡುವುದಿಲ್ಲ."

"ಮಹಾರಾಜ! ನಿನಗೆ ನನ್ನನ್ನು ಪರಿತ್ಯಾಗಮಾಡುವ ಆಶಯವಿಲ್ಲದಿದ್ದರೆ ನನ್ನನ್ನು ಕಳುಹಿಸಿಬಿಡುವ ಆಶಯವಿಲ್ಲದಿದ್ದರೆ–ಪ್ರತಿಕ್ಷಣದಲ್ಲಿಯೂ ವಿದರ್ಭದ ಹಾದಿಯನ್ನು ಮತ್ತೆ ಮತ್ತೆ ತಿಳಿಸುತ್ತಿರುವುದೇಕೆ?

ನೀನು ನನ್ನನ್ನು ಪರಿತ್ಯಾಗಮಾಡಲಾರೆಯೆಂದು ನಾನೂ ತಿಳಿದಿರುತ್ತೇನೆ. ಪರಿತ್ಯಾಗಮಾಡುವುದು ನಿನಗೂ ಸರ್ವಥಾ ಯೋಗ್ಯವೆನಿಸುವುದಿಲ್ಲ. ಈ ದುಃಸಹವಾದ ಕಷ್ಟದಿಂದಾಗಿ ನಿನ್ನ ಬುದ್ಧಿಯು ವಿಕಲ್ಪಗೊಂಡಿರುವುದರಿಂದಲೂ, ನೀನು ಪದೇ-ಪದೇ ವಿದರ್ಭದೇಶಕ್ಕೆ ಮಾರ್ಗವನ್ನು ನಿರೂಪಣೆ ಮಾಡುತ್ತಿರುವುದರಿಂದಲೂ ನೀನು ನನ್ನನ್ನೂ ಪರಿತ್ಯಜಿಸಿ ಹೋಗಿಬಿಡಬಹುದೆಂಬ ಭಯವು ನನಗುಂಟಾಗಿರುವುದು. ಒಂದು ವೇಳೆ ನಾನು ನನ್ನ ತಂದೆಯ ಮನೆಗೆ ಹೋಗಬೇಕೆಂಬ ಆಶಯವು ನಿನಗಿರುವುದಾದರೆ ಇಬ್ಬರೂ ಜೊತೆಯಲ್ಲಿಯೇ ವಿದರ್ಭಕ್ಕೆ ಹೋಗೋಣ. ಅಲ್ಲಿ ನಮ್ಮ ತಂದೆಯು ನಿಶ್ಚಯವಾಗಿಯೂ ನಿನ್ನನ್ನು ಆದರದಿಂದ ಸ್ವಾಗತಿಸುವನು. ಅವನಿಂದ ಸತ್ಕೃತನಾಗಿ ನೀನಲ್ಲಿ ಸುಖವಾಗಿರಬಹುದಾಗಿದೆ."

ಅರನೆಯ ಅಧ್ಯಾಯವು ಮುಗಿಯಿತು.

## ನಲನ ಚಿಂತೆ : ನಲನು ದಮಯಂತಿಯನ್ನು ಕಾಡಿನಲ್ಲಿ ಏಕಾಕಿನಿಯನ್ನಾಗಿ ಬಿಟ್ಟುಹೋದುದು

ನಲನು ಹೇಳುತ್ತಾನೆ :

**ಯಥಾ ರಾಜ್ಯಂ ತವ ಪಿತುಸ್ತಥಾ ಮಮ ನ ಸಂಶಯಃ ।**
**ನ ತು ತತ್ರ ಗಮಿಷ್ಯಾಮಿ ವಿಷಮಸ್ಥಃ ಕಥಂಚನ ॥೧॥**

"ದಮಯಂತಿ! ನೀನು ಹೇಳುವುದು ನಿಜ. ನಾನು ನಿನ್ನ ತಂದೆಯ ಮನೆಯಲ್ಲಿ ಸುಖವಾಗಿಯೇ ಇರಬಹುದು. ನಿನ್ನ ತಂದೆಯ ರಾಜ್ಯವನ್ನೂ ನನ್ನ ರಾಜ್ಯವೆಂದೇ ಭಾವಿಸಲೂಬಹುದು. (ತಂದೆಯ ರಾಜ್ಯವು ನಿನಗೆ ಹೇಗೋ ನನಗೂ ಹಾಗೆಯೇ ಆಗಿದೆ. ಇದರಲ್ಲಿ ಸಂಶಯವಿಲ್ಲ.) ಆದರೆ ಈ ವಿಷಮಸ್ಥಿತಿಯಲ್ಲಿ ಮಾತ್ರ ನಾನಲ್ಲಿಗೆ ಹೋಗಲಾರೆನು. ಕಲ್ಯಾಣಿ! ಹಿಂದೆ ನಾನಲ್ಲಿಗೆ ಸಾರ್ವಭೌಮನಾಗಿ ಬಂದಿದ್ದೆನಲ್ಲವೇ? ನನ್ನ ಅಂದಿನ ವೈಭವವನ್ನು ಕಂಡು ನೀನು ಹಿರಿಹಿಗ್ಗಿದ್ದೆಯಲ್ಲವೇ? ಇಂದು ನಾನು ಭಿಕಾರಿಯಂತೆ ಅಲ್ಲಿಗೆ ಬರುವುದರಿಂದ ನಿನ್ನ ಹೃದಯದ ಸಂಕಟವು ಹೆಚ್ಚಾಗುವುದಿಲ್ಲವೇ? ಆದುದರಿಂದ ಈ ಸಮಯದಲ್ಲಿ ನಿಶ್ಚಯವಾಗಿಯೂ ನಾನು ನಿನ್ನ ತಂದೆಯ ಮನೆಗೆ ಬರುವುದಿಲ್ಲ."

(ನಲನು ಹೇಳಿದುದು ಅಕ್ಷರಶಃ ನಿಜ. ಸಕಲಸಂಪತ್ತುಗಳಿಂದ ಕೂಡಿರುವವನನ್ನು ಅತಿದೂರದ ಬಂಧುಗಳೂ ಆದರಿಸಿ ಪುರಸ್ಕರಿಸುತ್ತಾರೆ. ದರಿದ್ರನನ್ನು ಅವನ ಅತಿಸಮೀಪದ ಬಂಧುವೂ ಗುರುತಿಸಲಾರನು. ಪ್ರಕೃತ ಸಂದರ್ಭದಲ್ಲಿ ನಲನನ್ನು ಭೀಮರಾಜನು ಪುರಸ್ಕರಿಸುವುದಿಲ್ಲವೆಂದಲ್ಲ. ಹಿಂದೆ ಅವನಿಗೆ ದೊರೆತ ಪುರಸ್ಕಾರಕ್ಕೂ–ಈಗ ದೊರೆಯುವ ಪುರಸ್ಕಾರಕ್ಕೂ ಹೆಚ್ಚು ತಾರತಮ್ಯವಿರುವುದಂತೂ ನಿಶ್ಚಯ. ಮೇಲಾಗಿ, ಹುಟ್ಟಿದಾಗಿನಿಂದಲೂ ಬಡವನಾಗಿಯೇ ಇದ್ದರೆ ಅಂತಹವನ ವಿಷಯವೇ ಬೇರೆ. ಅತುಲೈಶ್ವರ್ಯವನ್ನು ಹೊಂದಿದ್ದವನು ಭಿಕಾರಿಯಾದರೆ ಅಂತಹವನಿಗೆ ಜೀವಿಸಿರುವುದಕ್ಕಿಂತಲೂ ಸಾವೇ ಲೇಸೆನಿಸುತ್ತದೆ.)

ನಲನು ಲೋಕಾನುಭವದ ಮಾತುಗಳನ್ನೇ ದಮಯಂತಿಯೊಡನೆ

ನಾಲ್ಕಾರು ಬಾರಿ ಹೇಳಿದನು. ದಮಯಂತಿಯನ್ನು ತಾನು ಬಿಟ್ಟುಹೋಗುವುದಿಲ್ಲವೆಂದು ಆಶ್ವಾಸನೆಯನ್ನೀಯುವ ಸಲುವಾಗಿ ಅವಳು ಧರಿಸಿದ್ದ ಸೀರೆಯ ಅರ್ಧವನ್ನೇ ಸುತ್ತಿಕೊಂಡು ಆ ಮೂಲಕ ಅವಳನ್ನು ಸಂತೈಸುತ್ತಾ ಅರಣ್ಯದಲ್ಲಿ ಸುತ್ತಾಡುತ್ತಿದ್ದನು. ಒಂದೇ ವಸ್ತ್ರವನ್ನು ಇಬ್ಬರೂ ಧರಿಸಿ, ಅನ್ನಾಹಾರಗಳಿಲ್ಲದೇ ಬಹಳ ದೂರ ಹಾದಿ ನಡೆದು ಬಳಲಿದವರಾಗಿ ಕಟ್ಟಕಡೆಗೆ ದಾರಿಹೋಕರು ತಂಗಲು ನಿರ್ಮಿಸಿದ್ದ ಕಲ್ಲಿನ ಮಂಟಪವನ್ನು ಪ್ರವೇಶಿಸಿದರು. ಪಡಸಾಲೆಗೆ ಬಂದ ಚಕ್ರವರ್ತಿ-ಚಕ್ರವರ್ತಿನಿಯರು ಬರಿಯ ನೆಲದ ಮೇಲೆ ಪವಡಿಸಿದರು. ಹಸಿವು-ಬಾಯಾರಿಕೆಗಳಿಂದಲೂ, ಮಾರ್ಗಾಯಾಸದಿಂದಲೂ ದಣಿದು ಕಂಗೆಟ್ಟಿದ್ದ ಅವರಿಗೆ ಆ ಪಡಸಾಲೆಯೇ ಅರಮನೆಯಂತಾಗಿದ್ದಿತು. ವಸ್ತ್ರಹೀನನಾದ ನಲನು ವಿಕಟಾಕಾರನಾಗಿ ಶರೀರಾದ್ಯಂತ ಧೂಳಿನಿಂದ ಮುಚ್ಚಲ್ಪಟ್ಟವನಾಗಿದ್ದನು.

ನಲನು ಮೊದಲಿನಂತೆಯೇ ದಮಯಂತಿಯ ಅರ್ಧವಸ್ತ್ರವನ್ನೇ ಹೊದ್ದು ಅವಳೊಡನೆ ತಾನೂ ಮಲಗಿಬಿಟ್ಟನು. ಮಾರ್ಗಾಯಾಸದಿಂದಲೂ ಹಸಿವು-ಬಾಯಾರಿಕೆಗಳಿಂದಲೂ ಬಳಲಿದ್ದ, ಸುಕುಮಾರಿಯಾದ, ತಪಸ್ವಿನಿಯಾದ ದಮಯಂತಿಯು ಒಡನೆಯೇ ನಿದ್ರಾಪರವಶಳಾದಳು. ಪ್ರತಿಕ್ಷಣದಲ್ಲಿಯೂ ಅನೇಕರೀತಿಯಲ್ಲಿ ಆಲೋಚನೆಮಾಡುತ್ತಿದ್ದ ನಲನಿಗೆ ಮಾತ್ರ ನಿದ್ರೆಯು ಬರಲಿಲ್ಲ. ಪಗಡೆಯಾಟದ ಮೂಲಕ ತನ್ನ ರಾಜ್ಯ-ಕೋಶಗಳ ಅಪಹರಣ, ಪುಷ್ಕರನ ಭೀತಿಯಿಂದಾಗಿ ತನ್ನ ಆಪ್ತಮಿತ್ರರೂ ತನ್ನನ್ನು ಕೈಬಿಟ್ಟುದು, ಪಕ್ಷಿಗಳಿಂದ ತನ್ನ ವಸ್ತ್ರಾಪಹರಣ, ಅನ್ನಾಹಾರಗಳಿಲ್ಲದೇ ತನ್ನ ಧರ್ಮಪತ್ನಿಯ ಜೊತೆಯಲ್ಲಿ ವನಸಂಚಾರ–ಇವೆಲ್ಲವೂ ಅವನ ಮನಸ್ಸಿನಲ್ಲಿ ಕ್ಷಣ-ಕ್ಷಣಕ್ಕೂ ಸುಳಿದಾಡತೊಡಗಿದುವು. ನಲನು ಅವೆಲ್ಲವನ್ನೂ ನೆನೆದು, ಹಂಸತೂಲಿಕಾತಲ್ಪದಲ್ಲಿ ಮಲಗಲು ಯೋಗ್ಯಳಾದ ದಮಯಂತಿಯಿಂದು ಕಠಿನವಾದ ಕಲ್ಲಿನ ಮೇಲೆ ಮಲಗಿ ನಿದ್ರಿಸುತ್ತಿರುವುದನ್ನು ದಿಟ್ಟಿಸಿ ನೋಡಿ, ತನ್ನಲ್ಲಿಯೇ ತಾನು ಯೋಚಿಸಿದನು : 'ನಾನು ಹೀಗೆ ಮಾಡುವುದರಿಂದ ಆಗುವ ಪ್ರಯೋಜನವಾದರೂ ಏನು? ಹೀಗೆ ಮಾಡದೇ ಇದ್ದರೂ ಏನಾಗಬಹುದು? ಈ ದುಃಸ್ಥಿತಿಯಲ್ಲಿರುವುದಕ್ಕಿಂತಲೂ ಈಗ ನನಗೆ ಮರಣವೇ ಲೇಸಲ್ಲವೇ? ಅಥವಾ ನನ್ನೀ ಧರ್ಮಪತ್ನಿಯನ್ನು ಬಿಟ್ಟು ಹೊರಟುಹೋಗಲೇ?

ಇವಳು ನಿಶ್ಚಯವಾಗಿಯೂ ನನ್ನ ವಿಷಯದಲ್ಲಿ ಹೆಚ್ಚು ಅನುರಾಗವುಳ್ಳವಳಾಗಿರುತ್ತಾಳೆ. ಆದುದರಿಂದಲೇ ನನ್ನನ್ನು ಬಿಟ್ಟು ಹೋಗಲು ಇಚ್ಛೆಪಡುವುದಿಲ್ಲ. ಪಡಬಾರದ ಕಷ್ಟಗಳನ್ನು ನನ್ನ ಜೊತೆಯಲ್ಲಿದ್ದು ಅನುಭವಿಸುತ್ತಿದ್ದಾಳೆ. ನನ್ನಿಂದ ಪರಿತ್ಯಕ್ತಳಾದರೆ ಎಂದಾದರೊಂದು ದಿನ ಇವಳು ತನ್ನ ತಂದೆಯ ಮನೆಗಾದರೂ ಹೋಗಿ ಸುಖವಾಗಿರಲು ಅವಕಾಶವಾಗುವುದು. ನನ್ನನ್ನು ಅನುಸರಿಸಿ ಬರುವುದರಲ್ಲಿಯೇ ಆಸಕ್ತಳಾದ ಇವಳು ನನ್ನ ಜೊತೆಯಲ್ಲಿಯೇ ಮುಂದೆಯೂ ಇರುವುದಾದರೆ ಇನ್ನೂ ಹೆಚ್ಚಿನ ಕಷ್ಟಗಳನ್ನೇ ಅನುಭವಿಸಬೇಕಾಗಬಹುದು. ನಾನು ಪರಿತ್ಯಜಿಸಿದೆನಾದರೆ ನಾನು ಹೊರಟುಹೋದ ಹಾದಿಯು ಯಾವುದೆಂಬುದನ್ನು ತಿಳಿಯದ ಇವಳು ತಂದೆಯ ಪಟ್ಟಣದ ಹಾದಿಯನ್ನಾದರೂ ಹಿಡಿದು ಹೋಗುವುದು ನಿಶ್ಚಯ. ಇದರಿಂದ ಮುಂದಾದರೂ ಇವಳಿಗೆ ಸುಖವು ಲಭಿಸಬಹುದಾಗಿದೆ."

ಯುಧಿಷ್ಠಿರ! ನಲನು ಆ ವಿಷಯವನ್ನೇ ಬಾರಿ-ಬಾರಿಗೂ ಯೋಚಿಸುತ್ತಾ ಕಟ್ಟಕಡೆಗೆ ಆ ಸಮಯದಲ್ಲಿ ದಮಯಂತಿಯ ಪರಿತ್ಯಾಗವೇ ಉಚಿತವೆಂದು ನಿರ್ಧಾರಮಾಡಿದನು. ಮರುಕ್ಷಣದಲ್ಲಿಯೇ ಅವನ ಹೃದಯದಲ್ಲಿ ಭಯವೂ ಉಂಟಾಯಿತು. 'ಕಡುಚೆಲುವೆಯಾದ ಏಕಾಕಿನಿಯಾದ ಇವಳು ಘೋರಾರಣ್ಯವನ್ನು ನಿರಪಾಯಳಾಗಿ ದಾಟಿಯಾಳೇ? ಯಾವ ತೊಂದರೆಯೂ ಇಲ್ಲದೇ ತಂದೆಯ ಮನೆಯನ್ನು ಸೇರಿಯಾಳೇ?'–ಇದಕ್ಕೆ ಸಮಾಧಾನವನ್ನೂ ಅವನ ಹೃದಯವೇ ಸೂಚಿಸಿತು. 'ಶುಭಲಕ್ಷಣಳಾದ, ಪತಿವ್ರತೆಯಾದ, ಯಶಸ್ವಿನಿಯಾದ, ಮಹಾಭಾಗೆಯಾದ ಇವಳನ್ನು ತೊಂದರೆಪಡಿಸಲು ಯಾರಿಂದಲೂ ಸಾಧ್ಯವಾಗಲಾರದು. ತನ್ನ ತೇಜೋಬಲದಿಂದಲೇ ಆತ್ಮರಕ್ಷಣೆಯನ್ನು ಮಾಡಿಕೊಳ್ಳಲು ಇವಳು ಸಮರ್ಥಳಾಗಿರುತ್ತಾಳೆ.'

ನಲನು ಹೀಗೆ ಆಲೋಚಿಸಿ ಹೆಗಲೇರಿದ ಕಲಿಪುರುಷನ ಮಹಿಮೆಯಿಂದಾಗಿ ದಮಯಂತಿಯನ್ನು ಬಿಟ್ಟುಹೋಗಲು ನಿಶ್ಚಯಿಸಿಬಿಟ್ಟನು.

ಆದರೆ ದಿಗಂಬರನಾಗಿಯೇ ಹೊರಟುಬಿಡುವುದು ನಲನಿಗೆ ಸಹ್ಯವಾಗಲಿಲ್ಲ. ದಮಯಂತಿಯು ಏಕವಸ್ತ್ರಧಾರಿಣಿಯಾಗಿದ್ದಳು. ಅದೇ ವಸ್ತ್ರದ

ಅರ್ಧಭಾಗವನ್ನು ಅವನೂ ಹೊದೆದುಕೊಂಡು ಮಲಗಿದ್ದನು. ಅವನಿಗೆ ಉಡಲು ವಸ್ತ್ರವು ಬೇಕಾದರೆ ತಾನು ಹೊದ್ದಿದ್ದ ದಮಯಂತಿಯ ಸೀರೆಯ ಅರ್ಧಭಾಗವನ್ನೇ ಕತ್ತರಿಸಬೇಕು. ಹಾಗಿಲ್ಲದಿದ್ದರೆ ದಿಗಂಬರನಾಗಿಯೇ ಹೋಗಬೇಕು. ಸೀರೆಯನ್ನು ಕತ್ತರಿಸುವಾಗ ದಮಯಂತಿಗೆ ಎಚ್ಚರವಾಗ



ಕೂಡದು. ಆ ವಿಷಯವನ್ನೇ ಯೋಚಿಸುತ್ತಾ ನಲನು ದಿಗಂಬರನಾಗಿಯೇ ಪಡಸಾಲೆಯ ಹೊರಕ್ಕೂ-ಒಳಕ್ಕೂ ಹತ್ತಾರು ಬಾರಿ ತಿರುಗಾಡಿದನು. ಕಲಿಯ ಮಹಿಮೆಯಿಂದಾಗಿ ಒರೆಯಿಂದ ಕಳಚಿಟ್ಟಿದ್ದ ಕತ್ತಿಯೊಂದು ಪಡಸಾಲೆಯ ಮೂಲೆಯಲ್ಲಿದ್ದುದು ಅವನ ಕಣ್ಣಿಗೆ ಬಿದ್ದಿತು. ಒಡನೆಯೇ ಆ ಖಡ್ಗ

ವನ್ನು ತೆಗೆದುಕೊಂಡು ಮೆಲ್ಲನೆ ಹೋಗಿ, ತಾನು ಹೊದೆಯುವ ಸಲುವಾಗಿ ಬಿಟ್ಟಿದ್ದ ಸೀರೆಯ ಅರ್ಧಭಾಗವನ್ನು ಕತ್ತರಿಸಿ ತೆಗೆದುಕೊಂಡು, ಖಡ್ಗವನ್ನೆಸೆದು ಅರ್ಧಸೀರೆಯಿಂದಲೇ ತನ್ನ ಶರೀರವನ್ನು ಮುಚ್ಚಿಕೊಂಡು ಪಡಸಾಲೆಯಿಂದ ಹೊರಬಿದ್ದನು. ಇಷ್ಟಾದರೂ ದಮಯಂತಿಗೆ ಎಚ್ಚರವಾಗಲೇ ಇಲ್ಲ. ನಲನು ಪಡಸಾಲೆಯಿಂದ ಹತ್ತಾರು ಹೆಜ್ಜೆಗಳನ್ನು ಮುಂದಿಟ್ಟರೂ ಅವನ ಮನಸ್ಸು ಅವನನ್ನು ದಮಯಂತಿಯ ಕಡೆಗೇ ಸೆಳೆಯಿತು. ಬಹಳ ಸಂಕಟದಿಂದ ಪುನಃ ಪಡಸಾಲೆಗೆ ಬಂದು ದಮಯಂತಿಯ ಪಕ್ಕದಲ್ಲಿ ಕುಳಿತು ಕಣ್ಣೀರಿಡುತ್ತಾ ತನ್ನ ಮನಸ್ಸಿನಲ್ಲಿಯೇ ಹೇಳಿಕೊಂಡನು : "ಅಯ್ಯೋ ದುರ್ವಿಧಿಯೇ!

**ಯಾಂ ನ ವಾಯುರ್ನ ಚಾದಿತ್ಯಃ ಪುರಾ ಪಶ್ಯತಿ ಮೇ ಪ್ರಿಯಾಮ್ ।**
**ಸೇಯಮದ್ಯ ಸಭಾಮಧ್ಯೇ ಶೇತೇ ಭೂಮಾವನಾಥವತ್ ॥೨೧॥**

**ಇಯಂ ವಸ್ತ್ರಾವಕರ್ತೇನ ಸಂವೀತಾ ಚಾರುಹಾಸಿನೀ ।**
**ಉನ್ಮತ್ತೇವ ವರಾರೋಹಾ ಕಥಂ ಬುದ್ಧ್ವಾ ಭವಿಷ್ಯತಿ ॥೨೨॥**

**ಕಥಮೇಕಾ ಸತೀ ಭೈಮೀ ಮಯಾ ವಿರಹಿತಾ ಶುಭಾ ।**
**ಚರಿಷ್ಯತಿ ವನೇ ಘೋರೇ ಮೃಗವ್ಯಾಲನಿಷೇವಿತೇ ॥೨೩॥**

ಯಾವ ನನ್ನೀ ಪ್ರೇಮಪತ್ನಿಯನ್ನು ವಾಯ್ವಾದಿತ್ಯರಿಗೂ ನೋಡಲು ಸಾಧ್ಯವಾಗುತ್ತಿರಲಿಲ್ಲವೋ ಅಂತಹವಳಿಂದು ಈ ಧರ್ಮಶಾಲೆಯಲ್ಲಿ ಬರಿಯ ನೆಲದ ಮೇಲೆ ನಿರ್ಗತಿಕಳಂತೆ ಮಲಗಿರುವಳಲ್ಲಾ? ಅರ್ಧಚ್ಛಿನ್ನವಾದ ಈ ವಸ್ತ್ರವನ್ನು ಧರಿಸಿರುವ, ಉನ್ಮತ್ತೆಯಂತೆ ಮಲಗಿರುವ, ಚಾರುಹಾಸಿನಿಯಾದ ಇವಳು ಎಚ್ಚರಗೊಂಡೊಡನೆಯೇ ನನ್ನನ್ನು ಕಾಣದೇ ಎಷ್ಟು ಪರಿತಪಿಸುವಳೋ ತಿಳಿಯೆನಲ್ಲಾ? ಅಯ್ಯೋ ದುರ್ವಿಧಿಯೇ! ನಾನಿವಳನ್ನು ಬಿಟ್ಟು ಹೋಗಲಾರೆ! ಬಿಟ್ಟು ಹೋಗದೆಯೂ ಇರಲಾರೆ. ಸುಂದರಾಂಗಿಯಾದ, ಭೀಮರಾಜನ ಮಗಳಾದ, ಸದಾ ನನ್ನ ಶುಶ್ರೂಷೆಯಲ್ಲಿಯೇ ನಿರತಳಾದ ದಮಯಂತಿಯು ನನ್ನಿಂದ ಪರಿತ್ಯಜಿಸಲ್ಪಟ್ಟು ಏಕಾಕಿನಿಯಾಗಿ ಸಿಂಹ-ವ್ಯಾಘ್ರ-ವರಾಹ-ಸರ್ಪಗಳೇ ಮೊದಲಾದ ಕ್ರೂರಜಂತುಗಳಿಂದ ನಿಬಿಡವಾದ ಈ ಘೋರಾರಣ್ಯದಲ್ಲಿ ಹೇಗೆತಾನೇ ಸಂಚರಿಸುವಳು?

**ಆದಿತ್ಯಾ ವಸವೋ ರುದ್ರಾ ಅಶ್ವಿನೌ ಸಮರುದ್ಗಣೌ ।**
**ರಕ್ಷನ್ತು ತ್ವಾಂ ಮಹಾಭಾಗೇ ಧರ್ಮೇಣಾಸಿ ಸಮಾವೃತಾ ॥೨೪॥**

ಶುಭಾಂಗಿ! ದ್ವಾದಶಾದಿತ್ಯರು, ಅಷ್ಟವಸುಗಳು, ಏಕಾದಶರುದ್ರರು, ಅಶ್ವಿನೀದೇವತೆಗಳು, ಸಪ್ತಮರುತ್ತುಗಳು–ಇವರುಗಳೇ ನಿನ್ನ ರಕ್ಷಕರಾಗಲಿ. ಎಲ್ಲಕ್ಕಿಂತಲೂ ಮಿಗಿಲಾಗಿ ನೀನು ಪತಿವ್ರತಾಧರ್ಮಪರಾಯಣೆಯಾಗಿರುವೆ. ಆ ಧರ್ಮವೂ ನಿನ್ನನ್ನಿಂದು ರಕ್ಷಿಸಲಿ.”

ಭೂಮಿಯಲ್ಲಿಯೇ ಅನುಪಮವಾದ ಸೌಂದರ್ಯವುಳ್ಳ ದಮಯಂತಿ ಯನ್ನು ಕುರಿತು ಈ ರೀತಿಯಲ್ಲಿ ಪ್ರಲಾಪಿಸಿ, ಕಲಿಯ ಪ್ರಭಾವದಿಂದ ಬುದ್ಧಿಹೀನನಾದ ನಲನು ದಮಯಂತಿಯನ್ನು ಬಿಟ್ಟು ಹೊರಟನು.

ಪಡಸಾಲೆಯನ್ನು ಬಿಟ್ಟು ಹತ್ತಾರು ಹೆಜ್ಜೆಗಳು ಮುಂದೆ ಹೋಗುವನು. ಕಾಲು ಮುಂದಾದರೂ ಮನಸ್ಸು ಹಿಂದಕ್ಕೇ ಸೆಳೆಯುವುದು. ಪುನಃ ಪಡಸಾಲೆಗೆ ಬಂದು ಮಲಗಿದ ದಮಯಂತಿಯ ಸುಂದರಮುಖಾರವಿಂದವನ್ನು ದಿಟ್ಟಿಸಿ ನೋಡಿ ಕಣ್ಣೀರಿಡುವನು. ಅವಳಿಗೆ ಎಚ್ಚರವಾಗದ ರೀತಿಯಲ್ಲಿ ಮುತ್ತಿಡುವನು, ಮೈಸವರುವನು, ಇನ್ನಿಲ್ಲಿ ಇರಬಾರದೆಂದೂ, ರಾತ್ರಿಯು ಕಳೆದುಹೋಗುವುದೆಂದೂ–ಭಾವಿಸಿ ಪುನಃ ಹೊರಡುವನು. ಬಾರಿ- ಬಾರಿಗೂ ಕಲಿಪುರುಷನು ನಲನನ್ನು ಹೊರದೂಡುವನು. ಆದರೆ ನಲನ ಪ್ರೇಮಾರ್ದ್ರಹೃದಯವು ಪುನಃ ನಲನನ್ನು ದಮಯಂತಿಯ ಸಮೀಪಕ್ಕೇ ಸೆಳೆಯುವುದು.

ನಿಶ್ಚಯವಾಗಿಯೂ ನಲನ ಆಗಿನ ಹೃದಯದ ಸ್ಥಿತಿಯನ್ನು ವರ್ಣಿ ಸಲು ಸಾಧ್ಯವೇ ಇಲ್ಲ. ಅವನ ಹೃದಯವು ಎರಡಾಗಿ ವಿಭಾಗಿಸಲ್ಪಟ್ಟಿದ್ದಿತು. ಒಂದು ಭಾಗವು ದಮಯಂತಿಯ ಸಮೀಪದಲ್ಲಿಯೇ ಇರಬೇಕೆಂದು ಪ್ರೇರಿಸುತ್ತಿದ್ದಿತು. ಮತ್ತೊಂದು ಭಾಗವು ದಮಯಂತಿಯ ಸುಖಕ್ಕಾಗಿಯೇ ಅವಳನ್ನು ತೊರೆಯಬೇಕೆಂದು ನಿಷ್ಠುರಮಾಡುತ್ತಿದ್ದಿತು. ಆ ಎರಡು ವಿಧವಾದ ಪ್ರೇರಣೆಗಳಿಂದಲೂ ಚೋದಿತನಾದ ನಲನು ತೂಗಾಡುವ ತೊಟ್ಟಿಲಿನಂತೆ ಬುದ್ಧಿಹೀನನಾಗಿ ಹತ್ತಾರು ಬಾರಿ ಪಡಸಾಲೆಯ ಒಳಕ್ಕೂ- ಹೊರಕ್ಕೂ ಓಡಾಡಿದನು. ಕಟ್ಟಕಡೆಗೆ ಕಲಿಯ ಪ್ರಭಾವವೇ ಹೆಚ್ಚಾಗಿ ನಲನು ಉಕ್ಕಿಬರುತ್ತಿದ್ದ ಪ್ರೇಮವನ್ನು ಅಂತಃಕರಣದಲ್ಲಿಯೇ ಹುದುಗಿಸಿ–

ಮಲಗಿದ್ದ ಧರ್ಮಪತ್ನಿಯನ್ನು ಆ ಘೋರಾರಣ್ಯದಲ್ಲಿ ಏಕಾಕಿನಿಯನ್ನಾಗಿ ಬಿಟ್ಟು ಅತಿದುಃಖದಿಂದ ಹೊರಟೇಹೋದನು.

೬೨ನೆಯ ಅಧ್ಯಾಯವು ಮುಗಿಯಿತು.

೬೩ನೆಯ ಅಧ್ಯಾಯ ನಲೋಪಾಖ್ಯಾನಪರ್ವ (ಮುಂದುವರಿದಿದೆ.)

## ದಮಯಂತಿಯ ವಿಲಾಪ : ಸರ್ಪದಿಂದ ಪೀಡಿತಳಾದ ದಮಯಂತಿಯನ್ನು ವ್ಯಾಧನು ರಕ್ಷಿಸಿದುದು : ಕಾಮುಕನಾದ ವ್ಯಾಧನಿಗೆ ದಮಯಂತಿಯ ಶಾಪ : ವ್ಯಾಧನ ವಿನಾಶ

ಬೃಹದಶ್ವರು ಕಥೆಯನ್ನು ಮುಂದುವರಿಸಿ ಹೇಳುತ್ತಾರೆ :

**ಅಪಕ್ರಾನ್ತೇ ನಲೇ ರಾಜನ್ದಮಯನ್ತೀ ಗತಕ್ಲಮಾ ।**
**ಅಬುಧ್ಯತ ವರಾರೋಹಾ ಸಂತ್ರಸ್ತಾ ವಿಜನೇ ವನೇ ॥೧॥**

"ಯುಧಿಷ್ಠಿರ! ನಲನು ದಮಯಂತಿಯನ್ನು ಬಿಟ್ಟು ಹೊರಟು ಹೋದನಂತರ ದಮಯಂತಿಯು ನಿದ್ರೆಯಿಂದ ಎಚ್ಚೆತ್ತಳು. ಕಾನನದ ಕಲ್ಲು-ಮುಳ್ಳುಗಳಲ್ಲಿ ತಿರುಗಿ ಆಯಾಸಗೊಂಡಿದ್ದ ಅವಳಿಗೆ ಗಾಢವಾದ ನಿದ್ರೆಯು ಬಂದು ಆಯಾಸಪರಿಹಾರವಾಗಿದ್ದಿತು. ನಿದ್ರೆಯಿಂದ ಎಚ್ಚರ ವಾದೊಡನೆಯೇ ದಮಯಂತಿಯು ಪಕ್ಕಕ್ಕೆ ತಿರುಗಿ ನೋಡಿದಳು. ನಲನಿರ ಲಿಲ್ಲ. ಒಡನೆಯೇ ಗಾಬರಿಗೊಂಡವಳಾಗಿ 'ಮಹಾರಾಜ!'–ಎಂದು ಕೂಗಿಕೊಳ್ಳುತ್ತಾ ಮೇಲೆದ್ದಳು. ನಿರ್ಜನವಾದ ಮಹಾರಣ್ಯ. ಅಬಲೆಯಾದ ದಮಯಂತಿಯೊಬ್ಬಳೇ ಆ ಮಹಾರಣ್ಯದಲ್ಲಿದ್ದಾಳೆ. ಅವಳ ಅಂದಿನ ದುಃಖ ವೆಷ್ಟೆಂಬುದನ್ನು ವರ್ಣಿಸಲು ಸಾಧ್ಯವೇ ಇಲ್ಲ. "ಮಹಾರಾಜ! ನಾಥ! ಸ್ವಾಮಿಯೇ! ಮರೆಯಲ್ಲಿ ನಿಂತು ನನ್ನನ್ನು ಹಾಸ್ಯಮಾಡುತ್ತಿರುವೆಯಾ? ನೀನು ನಿಶ್ಚಯವಾಗಿಯೂ ನನ್ನನ್ನು ತೊರೆದುಹೋದೆಯಾದರೆ ನಾನು ಖಂಡಿತವಾಗಿಯೂ ಉಳಿಯಲಾರೆನು. ನಾನು ನಿನ್ನನ್ನು ಕಾಣದೇ ಬಹಳ ಭೀತಳಾಗಿರುವೆನು. ಮಹಾರಾಜ! ನೀನು ಒಡನೆಯೇ ಬಾರದಿದ್ದರೆ ನಾನು ಕಾಡುಪಾಲಾಗಿಬಿಡುವೆನು"–ಎಂದು ಅಂಗಲಾಚಿಬೇಡಿದಳು.

ಯುಧಿಷ್ಠಿರ! ನಲನು ಹಾಸ್ಯ ಮಾಡುತ್ತಿರುವನೇ? ತನ್ನನ್ನು ಹಾಸ್ಯ

ಮಾಡುವ ಸಲುವಾಗಿ ಗಿಡಗಳ ಮರೆಯಲ್ಲಿ ನಿಂತು ನಲನು ನೋಡುತ್ತಿರುವನೆಂದು ದಮಯಂತಿಯು ಭ್ರಾಂತಳಾಗಿ ಕೂಗಿಕೊಳ್ಳುತ್ತಿದ್ದಳು. ಅತ್ತಲಿತ್ತ ಸುತ್ತಾಡುತ್ತಾ ಎಷ್ಟೇ ಕಿರುಚಿಕೊಂಡರೂ ನಲನಿಂದ ಉತ್ತರವು ಬರಲಿಲ್ಲ. ಅತಿದುಃಖಿತೆಯಾದ ದಮಯಂತಿಯು ಪುನಃ ಹೇಳತೊಡಗಿದಳು : "ಮಹಾರಾಜ! ನೀನು ಸತ್ಯಭಾಷಿಯಲ್ಲವೇ? ಒಂದು ಸುಳ್ಳಾಡಿದ್ದನ್ನೂ ನಾನು ಇದುವರೆಗೂ ಕೇಳಿಲ್ಲ. ಮೇಲಾಗಿ ನೀನು ಧರ್ಮಿಷ್ಠನು. ನನ್ನನ್ನು ಬಿಟ್ಟುಹೋಗುವುದಿಲ್ಲವೆಂದು ಪ್ರಮಾಣವಚನವನ್ನಿತ್ತಿದ್ದೆಯಲ್ಲವೇ? ಮಲಗಿ ನಿದ್ರಿಸುತ್ತಿದ್ದ ನನ್ನನ್ನು ನೀನಿಂದು ಹೇಗೆ ಬಿಟ್ಟುಹೋದೆ? ನಿನ್ನ ಮನಸ್ಸು ನನ್ನನ್ನಗಲಿ ಹೋಗಲು ಹೇಗೆ ಒಪ್ಪಿತು?

ಮಹಾರಾಜ! ಕಷ್ಟಕಾಲದಲ್ಲಿ ದಕ್ಷಳಾದ ಮಿತ್ರನಂತಿದ್ದ, ಯಾವಾಗಲೂ ನಿನ್ನನ್ನೇ ಅನುಸರಿಸುತ್ತಿದ್ದ, ಪತಿವ್ರತೆಯಾದ ನನ್ನನ್ನು ಬಿಟ್ಟು ಹೋಗಲು ನಿನಗೆ ಹೇಗೆ ಸಾಧ್ಯವಾಯಿತು? ಬೇರೆಯವರು ನಿನಗೆ ಅನೇಕ ವಿಧವಾದ ಅಪರಾಧಮಾಡಿರುವರಾದರೂ ನಾನು ನಿನಗೆ ಏನು ತಾನೇ ಅಪರಾಧವನ್ನು ಮಾಡಿರುವೆನು? ತಪ್ಪುಮಾಡದಿದ್ದರೂ ಏಕೆ ತ್ಯಜಿಸಿದೆ?

ನಿಷಧರಾಜ! ಲೋಕಪಾಲಕರ ಮುಂದೆ ಮಾಡಿದ ಪ್ರತಿಜ್ಞೆಯಂತೆ ನಡೆದುಕೊಳ್ಳುವುದು ಯುಕ್ತವಾಗಿದೆ. ನನ್ನನ್ನು ಎಂದಿಗೂ ಅಗಲಿ ಹೋಗುವುದಿಲ್ಲವೆಂದು ನೀನು ಹೇಳಿದ್ದೆಯಲ್ಲವೇ?

ನಲರಾಜ! ನೀನು ಪರಿತ್ಯಜಿಸಿ ಹೋದರೂ ನಿನ್ನ ಧರ್ಮಪತ್ನಿಯಿನ್ನೂ ಜೀವದಿಂದುಳಿದಿರುವ ಕಾರಣವನ್ನಾದರೂ ತಿಳಿದಿರುವೆಯಾ?

**ನಾಕಾಲೇ ವಿಹಿತೋ ಮೃತ್ಯುರ್ಮರ್ತ್ಯಾನಾಂ ಪುರುಷರ್ಷಭ ।**
**ತತ್ರ ಕಾನ್ತಾ ತ್ವಯೋತ್ಸೃಷ್ಟಾ ಮುಹೂರ್ತಮಪಿ ಜೀವತಿ ॥೭॥**

ಪುರುಷರ್ಷಭನೇ! ಮನುಷ್ಯರಿಗೆ ಅಕಾಲದಲ್ಲಿ ಮರಣವು ವಿಹಿತವಾಗಿಲ್ಲ. ಕಾಲನಿಂದ ಕರೆಯು ಬರುವವರೆಗೂ ಮಾನವನು ಬದುಕಿರಲೇಬೇಕು. ಈ ಕಾರಣದಿಂದಲೇ ನಿನ್ನಿಂದ ಪರಿತ್ಯಜಿಸಲ್ಪಟ್ಟಿರುವ ನಿನ್ನ ಪ್ರಿಯತಮೆಯು ಮುಹೂರ್ತಕಾಲ ಕಳೆದರೂ ಇನ್ನೂ ಜೀವಂತಳಾಗಿಯೇ ಇದ್ದಾಳೆ.

ಮಹಾನುಭಾವ! ಇನ್ನಾದರೂ ನಿನ್ನ ಹಾಸ್ಯವನ್ನು ಸಾಕುಮಾಡು. ನಾನು ಬಹಳ ಭಯಗೊಂಡಿರುತ್ತೇನೆ. ಬಚ್ಚಿಟ್ಟುಕೊಂಡಿರುವ ಸ್ಥಳದಿಂದ ಹೊರಬಂದು ನನ್ನನ್ನು ಸಂತೈಸು."

ಹೀಗೆ ಹೇಳುತ್ತಾ ದಮಯಂತಿಯು ಒಂದು ಪೊದೆಯ ಸಮೀಪದಿಂದ ಮತ್ತೊಂದು ಪೊದೆಯ ಸಮೀಪಕ್ಕೆ ಹೋಗುವಳು. ಅದರ ಹಿಂಬದಿಯಲ್ಲಿ ನಲನನ್ನು ಹುಡುಕುವಳು. ನಲನನ್ನು ಕಾಣದೇ ಪುನಃ ದುಃಖಿಸುವಳು.

"ಪತಿದೇವ! ದುರ್ಧರ್ಷನೇ! ನಾನು ನಿನ್ನನ್ನು ಕಾಣದೇ ಬಹಳ ಭೀತಳಾಗಿರುವೆನು. ಇನ್ನೂ ಬಚ್ಚಿಟ್ಟುಕೊಂಡಿರಬೇಡ. ಪೊದೆಯ ಮರೆಯಿಂದ ಹೊರಗೆ ಬಾ."

ಅತಿದುಃಖಿತೆಯಾದ ದಮಯಂತಿಗೆ ಭ್ರಾಂತಿಯು ಕ್ಷಣಕ್ಷಣಕ್ಕೂ ಉಲ್ಬಣಿಸಿ ನಲನೊಮ್ಮೆ ತನ್ನ ಹಿಂಬದಿಯಲ್ಲಿದ್ದಂತಾಗುವುದು. ಗಿಡವೇ ನಲನಂತೆ ಕಾಣುವುದು. ಕಾನನದಲ್ಲಿರುವ ಕಲ್ಲೂ ಕ್ಷಣಕಾಲ ನಲನ ಆಕಾರವನ್ನು ಧರಿಸಿರುವುದು. ದಮಯಂತಿಯು ಓಡಿಹೋಗಿ 'ನಿನ್ನನ್ನು ಕಂಡೆನು, ನಲರಾಜ! ನೀನು ಸಿಕ್ಕಿದೆ'–ಎಂದು ಹೇಳುತ್ತಾ ಬಾಚಿತಬ್ಬುವಳು. ಮರುಕ್ಷಣದಲ್ಲಿಯೇ ಅದು ಕಲ್ಲೋ ಗಿಡವೋ ಆಗಿರುತ್ತಿದ್ದಿತು.

"ಮಹಾರಾಜ! ಪೊದೆಯ ಹಿಂಬದಿಯಲ್ಲಿ ಕುಳಿತು ನಿನಗಾಗಿ ನಾನಿಷ್ಟು ದುಃಖಿಸುತ್ತಿದ್ದರೂ ಉತ್ತರಿಸದೇ ಕುಳಿತಿರುವೆಯೇಕೆ? ನಿಶ್ಚಯ ವಾಗಿಯೂ ನೀನು ಬಹಳ ಕ್ರೂರಿಯಾಗಿಬಿಟ್ಟಿರುವೆ. ನಾನಿಷ್ಟು ಅಳು ತ್ತಿದ್ದರೂ, ಕಲ್ಲು-ಮುಳ್ಳುಗಳಿವೆಯೆಂಬುದನ್ನೂ ಲೆಕ್ಕಿಸದೇ ನಿನಗಾಗಿ ಅಲೆ ದಾಡುತ್ತಿದ್ದರೂ–ನೀನು ಪೊದೆಯಿಂದ ಹೊರಗೆ ಬಂದು ನನ್ನನ್ನು ಸಂತೈಸ ಲಿಲ್ಲವಲ್ಲಾ? ಮಹಾರಾಜ! ನನಗಾಗಿ ನಾನು ಸಂಕಟಪಡುತ್ತಿಲ್ಲ. ನೀನೊಬ್ಬನೇ ಏಕಾಂಗಿಯಾಗಿ ಹೇಳಿ-ಕೇಳುವವರಿಲ್ಲದೇ ಈ ಮಹಾರಣ್ಯದಲ್ಲಿ ಕಾಲಕಳೆಯುತ್ತಿರುವೆಯೆಂಬುದನ್ನು ನೆನೆದು ನಾನು ಬಹಳವಾಗಿ ದುಃಖಿಸು ತ್ತಿದ್ದೇನೆ. ಸಾಯಂಕಾಲವಾಗುತ್ತಲೇ ಹಸಿವು-ಬಾಯಾರಿಕೆಗಳಿಂದ ನೀನು ದಣಿವಾರಿಸಿಕೊಳ್ಳಲು ಮರದ ಕೆಳಗೆ ಕುಳಿತಾಗ ನನ್ನನ್ನು ಕಾಣದಿದ್ದರೆ

ನೀನೆಷ್ಟು ಸಂಕಟಪಡುವೆಯೆಂಬುದನ್ನು ಯೋಚಿಸಿ ನಾನು ದುಃಖಿಸುತ್ತಿದ್ದೇನೆ."

ಯುಧಿಷ್ಠಿರ! ದಮಯಂತಿಯ ಆ ಮಾತುಗಳನ್ನು ವನದೇವತೆಗಳ ಹೊರತಾಗಿ ಮತ್ತಾರು ತಾನೇ ಕೇಳುವವರಿದ್ದರು? ನಲನು ಪರಿಹಾಸಕ್ಕಾಗಿ ಗಿಡದ ಹಿಂದೆ ಮರೆಮಾಚಿ ಕುಳಿತಿರಬಹುದೆಂದು ಭಾವಿಸಿ ದಮಯಂತಿಯು ಸ್ವಲ್ಪಹೊತ್ತು ಗೋಳಿಟ್ಟಳು. ಗೋಳಿನ ಪ್ರತಿಧ್ವನಿಯು ಎಲ್ಲ ದಿಕ್ಕುಗಳಿಂದಲೂ ಪುನರಾವರ್ತಿತವಾಯಿತೇ ಹೊರತು ಮತ್ತಾವ ಪ್ರಯೋಜನವೂ ಆಗಲಿಲ್ಲ.

ದಮಯಂತಿಗೆ ಅತಿಯಾದ ದುಃಖವುಂಟಾಯಿತು. ತನ್ನನ್ನೂ ಮತ್ತು ಮಹಾತ್ಮನಾದ ನಲರಾಜನನ್ನೂ ಅಂತಹ ದಾರುಣಕಷ್ಟಕ್ಕೆ ಗುರಿಪಡಿಸಿದವರ ಮೇಲೆ ದಮಯಂತಿಗೆ ಮಹಾಕೋಪವುಂಟಾಯಿತು. ಒಮ್ಮೆ 'ನಲ' 'ನಲ' 'ನಲ' ಎಂದು ಕೂಗಿಕೊಳ್ಳುತ್ತಾ ಓಡುವಳು. ನಲನಿಗಾಗಿ ಹಳ್ಳಕೊಳ್ಳಗಳನ್ನೂ ಲೆಕ್ಕಿಸದೇ ನಡೆಯುವಳು. ಮತ್ತೊಮ್ಮೆ 'ಅಯ್ಯೋ! ನಲನಿನ್ನಿಲ್ಲ. ನನ್ನ ಪ್ರಿಯತಮನನ್ನಿನ್ನು ಕಾಣಲಾರೆ'–ಎಂದು ಕುಸಿದು ಬೀಳುವಳು. ಬಿಕ್ಕಿ-ಬಿಕ್ಕಿ ಅಳುವಳು. ಒಮ್ಮೊಮ್ಮೆ ದುಷ್ಟಮೃಗಗಳನ್ನು ಕಂಡು ಭಯಪಡುವಳು. ದೀರ್ಘವಾಗಿ ನಿಟ್ಟುಸಿರುಬಿಡುವಳು.

ಯುಧಿಷ್ಠಿರ! ಪರಮದುಃಖಿತೆಯಾದ, ಭೀಮರಾಜನ ಪುತ್ರಿಯಾದ, ಪತಿವ್ರತೆಯಾದ ದಮಯಂತಿಯು ತನ್ನ ಹೃದಯಸಂಕಟವನ್ನು ಸಹಿಸಿಕೊಳ್ಳಲಾರದೇ ಕರ್ಕಶಧ್ವನಿಯಿಂದ ಹೇಳಿದಳು :

**ಯಸ್ಯಾಭಿಶಾಪಾದ್ದುಃಖಾರ್ತೋ ದುಃಖಂ ವಿನ್ದತಿ ನೈಷಧಃ ।**
**ಭೂತಸ್ಯ ತಸ್ಯ ನೋ ದುಃಖಾದ್ದುಃಖಮಪ್ಯಧಿಕಂ ಭವೇತ್ ॥೧೬॥**

**ಅಪಾಪಚೇತಸಂ ಪಾಪೋ ಯ ಏವಂ ಕೃತವಾನ್ನಲಮ್ ।**
**ತಸ್ಮಾದ್ದುಃಖತರಂ ಪ್ರಾಪ್ಯ ಜೀವತ್ವಸುಖಜೀವಿಕಾಮ್ ॥೧೭॥**

"ಯಾವನು ಧರ್ಮಾತ್ಮನಾದ ನನ್ನ ಪತಿಯನ್ನು ವೃಥಾ ದ್ವೇಷಿಸಿ, ಈ ವಿಧವಾದ ದಾರುಣಕಷ್ಟಕ್ಕೆ ಗುರಿಮಾಡಿರುವನೋ–ಅವನು ನಮ್ಮ ಈಗಿನ ಕಷ್ಟಗಳಿಗಿಂತಲೂ ಹೆಚ್ಚಾದ ಕಷ್ಟಗಳನ್ನನುಭವಿಸಲಿ. ನಿಷ್ಕಳಂಕನಾದ, ಪಾಪರಹಿತನಾದ ನಲನನ್ನು ಈ ದಾರುಣಾವಸ್ಥೆಗೆ ತಂದ ಆ ಪಾಪಿಷ್ಠ

ನಾದ ನೀಚನು ಇದಕ್ಕಿಂತಲೂ ಅಧಿಕವಾದ ದುಃಖದಲ್ಲಿ ಮುಳುಗಿ ದುಸ್ತರವಾದ ಕಷ್ಟಜೀವನವನ್ನು ಸಾಗಿಸುವಂತಾಗಲಿ.'

ಯುಧಿಷ್ಠಿರ! ಧರ್ಮಾತ್ಮನಾದ ನಲನ ಪಟ್ಟಮಹಿಷಿಯಾದ ದಮಯಂತಿಯು ಹೀಗೆ ಹಲವು ಬಗೆಗಳಲ್ಲಿ ರೋದನಮಾಡುತ್ತಾ ಸಿಂಹ-ವ್ಯಾಘ್ರ-ವರಾಹಗಳೇ ಮುಂತಾದ ದುಷ್ಟಪ್ರಾಣಿಗಳಿಂದ ನಿಬಿಡವಾಗಿದ್ದ ಆ ಮಹಾರಣ್ಯದಲ್ಲಿ ಗಂಡನನ್ನು ಅರಸಿಕೊಂಡು ಹೊರಟಳು. ಭೀಮರಾಜನ ಮಗಳಾದ ದಮಯಂತಿಯು ಹುಚ್ಚಿಯಂತೆ 'ಅಯ್ಯೋ ಪತಿದೇವ! ಮಹಾರಾಜ! ಎಲ್ಲಿ ಹೋದೆ? ಎಲ್ಲಿರುವೆ? ಮಾತನಾಡುವುದಿಲ್ಲವೇ? ನಾನಿನ್ನೇನು ಮಾಡಲಿ? ಅಯ್ಯೋ!'–ಎಂದು ಕೂಗಿಕೊಳ್ಳುತ್ತಾ, ಅರಣ್ಯದ ಒಂದು ಭಾಗದಿಂದ ಮತ್ತೊಂದು ಭಾಗಕ್ಕೆ ಓಡುವಳು. ಹೆಣ್ಣುಜಿಂಕೆಯಂತೆ ಪತಿಯ ವಿರಹದಿಂದ ದುಃಖಪಡುತ್ತಾ, ಉನ್ಮತ್ತಳಂತೆ ಕಾಡಿನಲ್ಲಿ ಹೋಗುತ್ತಿದ್ದ ದಮಯಂತಿಯು ವೃಕ್ಷಾಕಾರದಲ್ಲಿದ್ದ ಒಂದು ಹೆಬ್ಬಾವಿನ ಸಮೀಪಕ್ಕೆ ಹೋದಳು. ತನ್ನ ಸಮೀಪಕ್ಕೆ ಬಂದ ದಮಯಂತಿಯನ್ನು ಕಂಡೊಡನೆಯೇ ಹಸಿದಿದ್ದ ಹೆಬ್ಬಾವು ದಮಯಂತಿಯನ್ನು ಬಲವಾಗಿ ಸುತ್ತಿಕೊಂಡಿತು. ಹೆಬ್ಬಾವು ತನ್ನನ್ನು ಸುತ್ತಿಕೊಂಡಿರುವ ಪ್ರಾಣಾಂತಿಕವಾದ ಆ ವೇಳೆಯಲ್ಲಿಯೂ "ನಲರಾಜ! ಎಲ್ಲಿ ಹೋದೆ? ಏನು ಮಾಡುತ್ತಿರುವೆ? ನನಗಾಗಿ ಪರಿತಪಿಸುತ್ತಿರುವೆಯಾ? ಈ ಕಷ್ಟಕಾಲದಲ್ಲಿ ನಿನ್ನನ್ನು ಸಂತೈಸುವವರಾರು? ಅಯ್ಯೋ! ಮಹಾತ್ಮನಾದ ನಿನಗೆ ಈ ದುರ್ಗತಿಯೊದಗಿತೇ?"– ಮುಂತಾಗಿ ನಲನ ವಿಷಯವನ್ನು ಕುರಿತು ಗೋಳಿಡುತ್ತಿದ್ದಳೇ ಹೊರತು ಹೆಬ್ಬಾವಿನ ದವಡೆಗೆ ಸಿಕ್ಕಿರುವ ತಾನು ಕ್ಷಣಮಾತ್ರದಲ್ಲಿ ಅಸುವನ್ನು ನೀಗಬೇಕಾಗುವುದೆಂಬ ಪರಿವೆಯೇ ದಮಯಂತಿಗಿರಲಿಲ್ಲ. ಸರ್ಪವು ಸುತ್ತಿಕೊಂಡು ಬಿಗಿದಾಗ ನಲನನ್ನೇ ಕುರಿತು ಹೇಳಿದಳು : "ಪತಿದೇವ! ಈ ಕ್ರೂರಸರ್ಪದಿಂದ ನನ್ನನ್ನು ಬಿಡುಗಡೆ ಮಾಡಲು ಓಡಿ ಬಾ. ಒಂದು ವೇಳೆ ಈಗ ನೀನು ಬರದಿದ್ದರೆ ನಾನುಳಿಯಲಾರೆನು. ಬುದ್ಧಿಹೀನನಾಗಿ ನನ್ನನ್ನಗಲಿ ಹೊರಟುಹೋಗಿರುವ ನಿನಗೆ ಪುನಃ ಸುಬುದ್ಧಿಯು ಬಂದು ನನ್ನನ್ನರಸಲು ನಿಶ್ಚಯಿಸಿದರೆ ನಾನು ನಿನಗೆ ಸಿಕ್ಕುವೆನೇ? ದಾರುಣವಾದ ಕಾನನದಲ್ಲಿ ಅಬಲೆಯಾದ ನನ್ನನ್ನೇಕೆ ಬಿಟ್ಟುಹೋದೆ?

ನಲರಾಜ! ಕಲಿಪುರುಷನ ಆಗ್ರಹದಿಂದಾಗಿ ನೀನಿಂದು ನನ್ನನ್ನಗಲಿರುವೆ. ಅವನ ಪ್ರಭಾವದಿಂದಲೇ ನಿನ್ನ ಬುದ್ಧಿಯು ಪರಿಭ್ರಮಿಸಿರುವುದು. ಆದರೆ ಮಹಾತ್ಮನಾದ ನಿನ್ನಲ್ಲಿ ಕಲಿಯು ಹೆಚ್ಚುಕಾಲ ಉಳಿಯಲಾರನು. ಅವನು ನಿನ್ನನ್ನು ಬಿಟ್ಟು ತೊಲಗಲೇಬೇಕು. ಅನಂತರದಲ್ಲಿ ನಿನಗೆ ನನ್ನ ಸ್ಮರಣೆಯುಂಟಾಗುವುದೂ ನಿಶ್ಚಯ. ಆದರೆ ಪ್ರಯೋಜನವೇನು? ನಾನೀಗ ಮೃತ್ಯುವಿನ ದವಡೆಯಲ್ಲಿರುವೆನಲ್ಲಾ!

ಅಯ್ಯೋ! ಹಸಿವು-ಬಾಯಾರಿಕೆಗಳಿಂದ ಬಳಲಿ ಬರುವ ನಿನ್ನನ್ನು ಸಂತೈಸುವವರಾರಿದ್ದಾರೆ? ನಿನ್ನ ಶುಶ್ರೂಷೆಯನ್ನು ಮಾಡುವವರಾರಿದ್ದಾರೆ? ಪತಿದೇವ! ನಿನ್ನನ್ನು ಕೇಳುವವರೇ ಇಲ್ಲದಂತಾಗುವುದಲ್ಲಾ! ಅಯ್ಯೋ! ನಾನೇನು ಮಾಡಲಿ?"

ಯುಧಿಷ್ಠಿರ! ದಮಯಂತಿಯು ತನ್ನ ಪ್ರಾಣವು ಹೋಗುವುದಕ್ಕಾಗಿ ದುಃಖಿಸದೇ ತಾನು ಸತ್ತುಹೋದರೆ ತನ್ನ ಗಂಡನು ನಿರ್ಗತಿಕನಾಗುವನೆಂದೇ ಪರಿತಪಿಸುತ್ತಿದ್ದಳು. ಅವಳ ರೋದನವು ಭೀಕರವಾಗಿದ್ದು ಆ ಕಾಡಿನಲ್ಲಿ ಪ್ರತಿಧ್ವನಿಕೊಡುತ್ತಿದ್ದಿತು. ಅರಣ್ಯದ ಪೊದೆಗಳಲ್ಲಿ ಬೇಟೆಗಾಗಿ ಬಂದಿದ್ದ ವ್ಯಾಧನೊಬ್ಬನಿಗೆ ಅವಳ ರೋದನವು ಕೇಳಿಸಿತು. ಒಡನೆಯೇ ವ್ಯಾಧನು ರೋದನವು ಕೇಳಿಬರುತ್ತಿದ್ದ ಮಾರ್ಗವನ್ನೇ ಅನುಸರಿಸಿ ದಮಯಂತಿಯಿದ್ದೆಡೆಗೆ ಬಂದು–ದಮಯಂತಿಯು ಸರ್ಪಕ್ಕೆ ಬಲಿಯಾಗಲಿರುವುದನ್ನು ಕಂಡು–ಒಡನೆಯೇ ತನ್ನಲ್ಲಿದ್ದ ಹರಿತವಾದ ಕತ್ತಿಯಿಂದ ಹೆಬ್ಬಾವನ್ನು ಮುಖದ ಕಡೆಯಿಂದ ಕತ್ತರಿಸಿಹಾಕಿದನು. ಒಡನೆಯೇ ಹೆಬ್ಬಾವು ನಿಶ್ಚೇಷ್ಟಿತವಾಗಿ ಕೆಳಗುರುಳಿತು. ದಮಯಂತಿಯು ಬಂಧಮುಕ್ತಳಾದಳು. ಸರ್ಪದ ಬಿಗಿತದಿಂದ ಬಳಲಿ ಬೆಂಡಾಗಿ ಕುಸಿದು ಬಿದ್ದ ದಮಯಂತಿಯ ಮೇಲೆ ವ್ಯಾಧನು ನೀರು ಚುಮುಕಿಸಿದನು. ಆಕೆಯು ಚೇತರಿಸಿಕೊಂಡನಂತರ ವ್ಯಾಧನು ತನ್ನ ಬಳಿಯಿದ್ದ ಕಾಡಿನ ಹಣ್ಣುಗಳನ್ನೇ ದಮಯಂತಿಗೆ ತಿನ್ನಲುಕೊಟ್ಟು ಉಪಚರಿಸಿ ಅವಳನ್ನು ಸಂತೈಸಿದನು.

ತನ್ನ ಪ್ರಾಣವು ಹೋಗುವುದು ನಿಶ್ಚಯವೆಂದೂ–ನಲನನ್ನು ಉಪಚರಿಸಲು ಮುಂದೆ ಯಾರೂ ಇಲ್ಲವೆಂದೂ ಸಂಕಟಪಡುತ್ತಿದ್ದ ದಮಯಂತಿಯು ಪ್ರಾಣಾಪಾಯದಿಂದ ತನ್ನನ್ನು ರಕ್ಷಿಸಿದ ಬೇಡನನ್ನು ಕೃತಜ್ಞತಾದೃಷ್ಟಿಯಿಂದ

ನೋಡಿದಳು. ಬೇಡನು ದಮಯಂತಿಯ ಸುಂದರಮುಖಾರವಿಂದವನ್ನು ಕಂಡು ಮನದಲ್ಲಿಯೇ ಹಿಗ್ಗುತ್ತಾ ಭೀಮರಾಜಕುಮಾರಿಯನ್ನು ಪ್ರಶ್ನಿಸಿದನು:

"ಹರಿಣಾಕ್ಷಿಯೇ! ನೀನು ಯಾರು? ಸುಕೋಮಲೆಯಾದ ನೀನು ಕಾಡಿಗೆ ಬಂದ ಕಾರಣವೇನು? ಸುಂದರಾಂಗಿಯೇ! ನೀನು ಈ ಘೋರ ಕಷ್ಟದಲ್ಲಿ ಸಿಲುಕಿದ ಕಾರಣವಾದರೂ ಏನು?"



ಅದಕ್ಕುತ್ತರವಾಗಿ ನಿಷ್ಕಳಂಕಳಾದ, ಪತಿವ್ರತೆಯಾದ ದಮಯಂತಿಯು ಅದುವರೆಗೆ ನಡೆದುದೆಲ್ಲವನ್ನೂ ಯಥಾವತ್ತಾಗಿ ವ್ಯಾಧನಿಗೆ ತಿಳಿಸಿದಳು.

ಆ ವಿಷಯಗಳೆಲ್ಲವನ್ನೂ ಕೇಳಿದನಂತರ–ಈಗಿನ ಪರಿಸ್ಥಿತಿಯಲ್ಲಿ

ದಮಯಂತಿಗೆ ಹೇಳುವವರು-ಕೇಳುವವರು ಯಾರೂ ಇಲ್ಲವೆಂಬುದು–ವ್ಯಾಧನಿಗೆ ದೃಢವಾಯಿತು. ಅವಳನ್ನು ಅತಿಸುಲಭವಾಗಿ ತನ್ನವಳನ್ನಾಗಿ ಮಾಡಿಕೊಳ್ಳುವುದೂ ಸಾಧ್ಯವೆಂಬ ದುಷ್ಟಬುದ್ಧಿಯು ಅವನಿಗುಂಟಾಯಿತು.

ಸುಂದರಾಂಗಿಯಾದ, ಅರ್ಧವಸ್ತ್ರವನ್ನು ಧರಿಸಿದ್ದ, ಪೃಥುಶ್ರೋಣಿಯಾದ, ಸುಂದರವಾದ ಕುಚದ್ವಯವನ್ನು ಹೊಂದಿರುವ, ಸುಕುಮಾರಿಯಾದ, ದೋಷರಹಿತವಾದ ಶರೀರಾವಯವಗಳಿಂದ ಕೂಡಿದ್ದ, ಪೂರ್ಣಚಂದ್ರನಿಗೆ ಸದೃಶವಾದ ಮುಖಾರವಿಂದವುಳ್ಳ, ವಕ್ರವಾದ ಹುಬ್ಬುಗಳುಳ್ಳ ಕಣ್ಣುಗಳಿಂದ ಕೂಡಿದ್ದ, ಮಧುರಭಾಷಿಣಿಯಾದ ದಮಯಂತಿಯನ್ನು ನೋಡಿ ವ್ಯಾಧನ ಹೃದಯಾಂತರಾಳದಲ್ಲಿದ್ದ ಕಾಮಾಗ್ನಿಯು ಉದ್ದೀಪನಗೊಂಡಿತು. ಮನ್ಮಥನ ಕ್ರೂರವಾದ ಬಾಣಗಳಿಂದ ಪ್ರತ್ಯಾಹತನಾದ ವ್ಯಾಧನು ತನ್ನ ಅಭಿಲಾಷೆಯನ್ನು ಈಡೇರಿಸಿಕೊಳ್ಳಲು ದಮಯಂತಿಯನ್ನು ಕುರಿತು ಅತಿಮಧುರವಾದ ಮಾತುಗಳನ್ನಾಡಿದನು. ಅವನ ಮಾತುಗಳನ್ನು ಕೇಳಿ, ಅವನ ಇಂಗಿತವೇನೆಂಬುದು ತಿಳಿದೊಡನೆಯೇ ಕೋಮಲಾಂಗಿಯಾದ ದಮಯಂತಿಯು ವ್ಯಾಘ್ರಿಯಾದಳು. ಕೋಪಾವೇಶದಿಂದ ಕೂಡಿದವಳಾಗಿ ಧಗ-ಧಗನೆ ಉರಿಯುತ್ತಿರುವ ಯಜ್ಞೇಶ್ವರನಂತೆಯೇ ಪ್ರಜ್ವಲಿಸಿದಳು. ಆದರೆ ದಮಯಂತಿಯ ಕೋಪಾಗ್ನಿಯು ವ್ಯಾಧನ ಕಾಮವನ್ನು ದಹಿಸಲು ಸಮರ್ಥವಾಗಲಿಲ್ಲ. ಅವನು ದಮಯಂತಿಯನ್ನು ಬಲಾತ್ಕಾರದಿಂದಲಾದರೂ ತನ್ನವಳನ್ನಾಗಿ ಮಾಡಿಕೊಳ್ಳಬೇಕೆಂದು ಯತ್ನಿಸಿದನು. ಪ್ರಜ್ವಲಿಸುತ್ತಿರುವ ಯಜ್ಞೇಶ್ವರನಿಗೆ ಸಮಾನವಾದ ತೇಜಸ್ಸಿನಿಂದ ಕೂಡಿದ್ದ ದಮಯಂತಿಯನ್ನು ಮುಟ್ಟಲೂ ಅಸಾಧ್ಯವೆಂಬುದನ್ನು ಕ್ಷುದ್ರನಾದ ವ್ಯಾಧನು ಮನಗಾಣಲಿಲ್ಲ. ದಮಯಂತಿಯನ್ನು ಬಲಾತ್ಕಾರವಾಗಿ ಹಿಡಿದೆಳೆದುಕೊಳ್ಳಲು ನಿಶ್ಚಯಿಸಿ ಮುಂದೆ ನುಗ್ಗಿದೊಡನೆಯೇ–ರಾಜ್ಯಭ್ರಷ್ಟಳಾಗಿ ಪತಿಯನ್ನೂ ಅಗಲಿ ಅತಿ ದುಃಖಿತೆಯಾಗಿದ್ದ ದಮಯಂತಿಯು ಸಿಂಹಿಣಿಯಾಗಿ–ಒಂದೆರಡು ಹೆಜ್ಜೆಗಳು ಹಿಂದಕ್ಕೆ ಸರಿದು ನಿಂತು ಕಟ-ಕಟನೆ ಹಲ್ಲುಗಳನ್ನು ಕಡಿಯುತ್ತಾ ಕರ್ಕಶ ಧ್ವನಿಯಿಂದ ಹೇಳಿದಳು :

**ಯದ್ಯಹಂ ನೈಷಧಾದನ್ಯಂ ಮನಸಾಪಿ ನ ಚಿನ್ತಯೇ ।**
**ತಥಾಯಂ ಪತತಾಂ ಕ್ಷುದ್ರೋಃ ಪರಾಸುರ್ಮೃಗಜೀವನಃ ॥೩೮॥**

"ನಲನೊಬ್ಬನನ್ನು ಬಿಟ್ಟು ಬೇರೆಯವರನ್ನು ನಾನು ಮನಸ್ಸಿನಿಂದ ಲಾದರೂ ಚಿಂತಿಸದಿರುವುದು ನಿಶ್ಚಯವಾದರೆ–ದುಷ್ಟಬುದ್ಧಿಯುಳ್ಳ, ಮೃಗ ಗಳ ಬೇಟೆಯಿಂದಲೇ ಜೀವಿಸುವ ಈ ನೀಚನು ಒಡನೆಯೇ ಮೃತನಾಗಲಿ."



ದಮಯಂತಿಯ ಮುಖಾರವಿಂದದಿಂದ ಆ ವಾಕ್ಯಗಳು ಹೊರಟೊಡ ನೆಯೇ–ಒಣಗಿದ ವೃಕ್ಷವು ಯಜ್ಞೇಶ್ವರನಿಂದ ಸುಡಲ್ಪಟ್ಟು ಭಸ್ಮವಾಗು ವಂತೆ–ಬೇಡನು ದಮಯಂತಿಯ ಕೋಪಾಗ್ನಿಗೆ ಸಿಕ್ಕಿ ಪ್ರಾಣತೊರೆದು ಕೆಳಗುರುಳಿದನು."

೬೩ನೆಯ ಅಧ್ಯಾಯ ಮುಗಿಯಿತು.

೬೪ನೆಯ ಅಧ್ಯಾಯ ನಲೋಪಾಖ್ಯಾನಪರ್ವ (ಮುಂದುವರಿದಿದೆ.)

## ದಮಯಂತಿಯ ವಿಲಾಪ : ತಪಸ್ವಿಗಳಿಂದ ಆಶ್ವಾಸನೆ : ವ್ಯಾಪಾರಿಗಳೊಡನೆ ಸಮಾಗಮ

ಬೃಹದಶ್ವರು ಹೇಳುತ್ತಾರೆ :

**ಸಾ ನಿಹತ್ಯ ಮೃಗವ್ಯಾಧಂ ಪ್ರತಸ್ಥೇ ಕಮಲೇಕ್ಷಣಾ ।**
**ವನಂ ಪ್ರತಿಭಯಂ ಶೂನ್ಯಂ ಝಿಲ್ಲಿಕಾಗಣನಾದಿತಮ್ ॥೧॥**

"ಯುಧಿಷ್ಠಿರ! ದಮಯಂತಿಯು ತನಗೆ ಉಪದ್ರವವನ್ನು ಕೊಡಲು ಬಂದ ಬೇಡನನ್ನು ತನ್ನ ಪಾತಿವ್ರತ್ಯದ ಪ್ರಭಾವದಿಂದ ಧ್ವಂಸಮಾಡಿ, ಭಯಂಕರವಾದ ಮಿಡತೆಗಳ ಸಮೂಹದ ಶಬ್ದದಿಂದ ಕೂಡಿದ್ದ ಅರಣ್ಯದಲ್ಲಿ ಮುಂದೆ ನಡೆದುಹೋದಳು. ಕೋಮಲಾಂಗಿಯಾದ ದಮಯಂತಿಯು ನಡೆದುಹೋಗುತ್ತಿದ್ದ ಅರಣ್ಯವು ಅತಿಭಯಂಕರವಾಗಿದ್ದಿತು. ಸಿಂಹಗಳಿಂದಲೂ, ಆನೆಗಳಿಂದಲೂ, ಜಿಂಕೆಗಳಿಂದಲೂ, ಕಾಡುಕೋಣಗಳಿಂದಲೂ ಮತ್ತು ಕರಡಿಗಳಿಂದಲೂ ನಿಬಿಡವಾಗಿದ್ದಿತು. ಆ ಅರಣ್ಯದಲ್ಲಿ ಅನೇಕ ಜಾತಿಯ ಪಕ್ಷಿಗಳಿದ್ದುವು. ಕಳ್ಳರಿಗೂ, ಮ್ಲೇಚ್ಛಜಾತಿಯ ಕಾಡು ಜನರಿಗೂ ಅದು ನಿವಾಸಸ್ಥಾನವಾಗಿದ್ದಿತು. ಆ ಅರಣ್ಯವು ಶಾಲವೃಕ್ಷಗಳು, ಬಿದಿರು ಮೆಳೆಗಳು, ಧವ, ಅಶ್ವತ್ಥ, ತಿಂದುಕ, ಇಂಗುದ, ಕಿಂಶುಕ, ಅರ್ಜುನ, ಅರಿಷ್ಟ, ಬೇವು, ಶಾಲ್ಮಲಿ, ನೇರಳೆ, ಮಾವು, ಲೋಧ್ರ, ಖದಿರ, ಸಾಲ, ವೇತ್ರ, ಪದ್ಮಕ, ಸ್ಯಂದನ, ಆಮಲಕ, ಪ್ಲಕ್ಷ, ಕದಂಬ, ಉದುಂಬರ, ಬದರಿ, ಬಿಲ್ವ, ಆಲ, ಪ್ರಿಯಾಲ, ತಾಲ, ಖರ್ಜೂರ, ಹರೀತಕ ಮತ್ತು ಬಿಭೀತಕ–ಮುಂತಾದ ವೃಕ್ಷಗಳಿಂದಲೂ ನಿಬಿಡವಾಗಿದ್ದಿತು.

ಕಾಡಿನ ಅಂಚಿನಲ್ಲಿ ಪರ್ವತಗಳೂ ಇದ್ದುವು. ದಮಯಂತಿಯು ಆ ಪರ್ವತಗಳಲ್ಲಿದ್ದ ಅನೇಕವಿಧವಾದ ಗೈರಿಕಾದಿ ಧಾತುಗಳನ್ನೂ, ಲೋಹಗಳ ಅದಿರನ್ನೂ ಕಂಡಳು. ಅಲ್ಲಲ್ಲಿಯೇ ಸುಂದರವಾದ ಲತಾಕುಂಜಗಳಿದ್ದುವು. ಅವುಗಳಲ್ಲಿ ಪಕ್ಷಿಗಳು ನಿನಾದಮಾಡುತ್ತಿದ್ದುವು. ಪರ್ವತದ ತಪ್ಪಲಿನಲ್ಲಿ ಅನೇಕ ಗುಹೆಗಳಿದ್ದುವು. ಅವೆಲ್ಲವನ್ನೂ ದಾಟಿ ದಮಯಂತಿಯು ಮುಂದೆ ನಡೆದುಹೋಗುತ್ತಿದ್ದಾಗ–ಅನೇಕ ನದಿಗಳನ್ನೂ, ಸರೋವರಗಳನ್ನೂ, ಬಾವಿ

ಗಳನ್ನೂ ಕಂಡಳು. ಅವಳಿಗೆದುರಾಗಿ ಅನೇಕಾನೇಕ ಪಕ್ಷಿಗಳ ಗುಂಪೂ-ಕಾಡುಮೃಗಗಳೂ ಹಾದುಹೋಗುತ್ತಿದ್ದುವು. ಅನೇಕ ಜಾತಿಯ ಭಯಂಕರವಾದ ಸರ್ಪಗಳನ್ನೂ, ಪಿಶಾಚಗಳನ್ನೂ, ರಾಕ್ಷಸರನ್ನೂ ದಮಯಂತಿಯು ಕಂಡಳು. ಅನೇಕಾನೇಕ ಚಿಲುಮೆಗಳೂ, ತಟಾಕಗಳೂ, ಬೆಟ್ಟಗಳ ಶಿಖರಗಳೂ ದಮಯಂತಿಯು ಹೋಗುತ್ತಿದ್ದ ಹಾದಿಯಲ್ಲಿ ಸಿಕ್ಕಿದುವು. ನದಿಗಳು ಮತ್ತು ಅವುಗಳ ಅದ್ಭುತಪ್ರವಾಹಗಳು, ಪರ್ವತದ ಮೇಲಿನಿಂದ ಹರಿಯುತ್ತಿರುವ ನಿರ್ಝರಗಳು–ಇವುಗಳೆಲ್ಲವನ್ನೂ ದಮಯಂತಿಯು ಕಂಡಳು. ಭಯಂಕರವಾದ ಕಾಡುಕೋಣಗಳು, ಕಾಡುಹಂದಿಗಳು, ಕರಡಿಗಳು ಮತ್ತು ಕಪಿಗಳು–ಇವುಗಳ ಹಿಂಡುಗಳನ್ನೂ ಕಂಡಳು. ಅಂತಹ ಭಯಂಕರವಾದ ಕಾಡನ್ನು ಕಂಡು ದಮಯಂತಿಯು ಭಯಪಡಲಿಲ್ಲ. ಧರ್ಮಿಷ್ಠೆಯಾದ, ತೇಜಸ್ವಿನಿಯಾದ, ಕ್ಷಮಾನ್ವಿತೆಯಾದ ದಮಯಂತಿಗೆ ಕಾಡಿನ ರಮಣೀಯವಾದ ದೃಶ್ಯಗಳ ಮೇಲಾಗಲೀ, ಭಯಂಕರ ಪ್ರಾಣಿಗಳ ಮೇಲಾಗಲೀ ಗಮನವೇ ಇರಲಿಲ್ಲ. 'ನಲರಾಜ! ಪತಿದೇವ!'–ಎಂದು ಪದೇ-ಪದೇ ಕೂಗುತ್ತಾ ಏಕಾಕಿನಿಯಾಗಿ ನಲನನ್ನು ಹುಡುಕುತ್ತಾ ಮುಂದೆ ನಡೆದಳು.

ಪತಿಯ ಅಗಲುವಿಕೆಯ ವೇದನೆಯಿಂದ ಪರಿತಪಿಸುತ್ತಿದ್ದ ಅವಳಿಗೆ ಕಾಡಿನ ಯಾವ ದೃಶ್ಯವೂ ಮನಸ್ಸಿಗೆ ಭಯವನ್ನಾಗಲೀ, ಸಂತೋಷವನ್ನಾಗಲೀ ಉಂಟುಮಾಡುತ್ತಿರಲಿಲ್ಲ. ಸಿಂಹ-ವ್ಯಾಘ್ರ-ವರಾಹಗಳು ಎದುರಾಗಿ ಬಂದರೂ ಸ್ವಲ್ಪವಾದರೂ ಭಯಪಡದೇ 'ನಲರಾಜ! ನಲರಾಜ!' ಎಂದು ಕೂಗುತ್ತಾ ತನ್ನ ಪಾಡಿಗೆ ತಾನು ಮುಂದೆ ನಡೆಯುತ್ತಿದ್ದಳು.

ವಿದರ್ಭ ರಾಜಕುಮಾರಿಯು ಬಹಳ ದೂರ ನಡೆದು ಬಳಲಿ ಬೆಂಡಾದಳು. ಕಾಲುಗಳು ತತ್ತರಿಸುತ್ತಿದ್ದುವು. ಮುಂದೆ ನಡೆಯಲಾಗದೇ ಅಲ್ಲಿಯೇ ಇದ್ದ ಒಂದು ಕಲ್ಲಿನ ಮೇಲೆ ಕುಳಿತು ಕಂಬನಿಗರೆಯುತ್ತಾ ಗೋಳಿಟ್ಟಳು.

'ವಿಶಾಲವಕ್ಷನಾದ, ದೀರ್ಘಬಾಹುವಾದ ನಿಷಧಾಧಿಪನೇ! ಈ ಭಯಂಕರವಾದ ಕಾಡಿನಲ್ಲಿ ನನ್ನೊಬ್ಬಳನ್ನೇ ಬಿಟ್ಟು ನೀನೆಲ್ಲಿಗೆ ಹೋದೆ? ಅಶ್ವಮೇಧಾದಿ ಯಾಗಗಳನ್ನು ಮಾಡಿ, ದೇವತೆಗಳನ್ನು ಹವಿಸ್ಸಿನಿಂದಲೂ–ಬ್ರಾಹ್ಮಣರನ್ನು ಯಥೇಚ್ಛವಾದ ದಕ್ಷಿಣೆಗಳಿಂದಲೂ ತಣಿಸಿರುವೆ. ಅಂತಹ ನೀನು ನನ್ನೊಡನೆ ಸುಳ್ಳುಹೇಳಬಹುದೇ?

ನರಶ್ರೇಷ್ಠನೇ! ಮಹಾದ್ಯುತಿಯೇ! ರಾಜಾಧಿರಾಜನೇ! ನೀನು ನನ್ನೊಡನೆ ಏನೆಂದು ಹೇಳಿದ್ದೆಯೆಂಬುದನ್ನಾದರೂ ಸ್ಮರಿಸುವವನಾಗು.

ರಾಜಹಂಸಗಳು ನಿನ್ನೊಡನೆಯೂ ಮತ್ತು ನನ್ನೊಡನೆಯೂ ಏನು ಹೇಳಿದ್ದುವೆಂಬುದೂ ನಿನ್ನ ಸ್ಮರಣೆಗೆ ಬಾರದೇ? ಹಂಸವಾಣಿಯನ್ನು ಸ್ಮರಿಸು.

ಪುರುಷವ್ಯಾಘ್ರನೇ!

**ಚತ್ವಾರ ಏಕತೋ ವೇದಾಃ ಸಾಙ್ಗೋಪಾಙ್ಗಾ ಸವಿಸ್ತರಾಃ ।**
**ಸ್ವಧೀತಾ ಮನುಜವ್ಯಾಘ್ರ ಸತ್ಯಮೇಕಂ ಕಿಲೈಕತಃ ॥೧೭॥**

ಋಗ್ಯಜುಸ್ಸಾಮಾಥರ್ವಣವೇದಗಳ ಮತ್ತು ಅವುಗಳ ಅಂಗೋಪಾಂಗಗಳ ಅಧ್ಯಯನ, ಸತ್ಯನಿಷ್ಠೆ–ಇವುಗಳೆರಡೂ ಒಂದೇ ವಿಧವಾದ ಫಲಗಳನ್ನು ಕೊಡುವುವೆಂದು ಹಿರಿಯರು ಹೇಳುತ್ತಾರೆ. ಸತ್ಯನಿಷ್ಠೆಯೇ ಮಿಗಿಲಾದುದೆಂದೂ ಭಾವಿಸಬಹುದು. ಆದುದರಿಂದ ನೀನು ಈ ಹಿಂದೆ ನನಗಿತ್ತ ಸತ್ಯವಚನವನ್ನು ಸ್ಮರಿಸಿ ಅದರಂತೆ ನಡೆಯುವುದು ನಿನಗೆ ಯುಕ್ತವಾಗಿದೆ.

ವೀರನೇ! ನಲರಾಜ! ನಾನು ನಿನ್ನವಳು. ವೀರಪತ್ನಿಯು. ಇಂತಹ ನಾನಿಂದು ನಿರ್ಗತಿಕಳಂತೆ ಸಾಯುವ ಸ್ಥಿತಿಯಲ್ಲಿದ್ದೇನೆ. ಇಂತಹ ದುರ್ಗಮವಾದ ಅರಣ್ಯದಲ್ಲಿ ನಿನಗಾಗಿಯೇ ಹಂಬಲಿಸುತ್ತಾ ಅಲೆಯುತ್ತಿರುವ ನನ್ನೊಡನೆ ನೀನು ಮಾತನಾಡುವುದಿಲ್ಲವೇ?

ಪತಿದೇವ! ಮೃತ್ಯುದೇವತೆಯಂತೆ ಘೋರವಾದ ಆಕಾರವುಳ್ಳ, ವಿಶಾಲವಾದ ತೆರೆದ ಮುಖವುಳ್ಳ, ಹಸಿವಿನಿಂದ ಕೂಡಿರುವ ಈ ವನರಾಜನಾದ ಸಿಂಹವು ನನ್ನನ್ನು ಸೆಳೆದುಕೊಳ್ಳುತ್ತಿದೆ. (ನುಂಗಿಬಿಡುವುದರಲ್ಲಿದೆ.) ಇಂತಹ ವಿಪತ್ತಿನಲ್ಲಿಯೂ ನೀನು ನನ್ನನ್ನು ರಕ್ಷಿಸಬೇಡವೇ?

**'ನ ಮೇ ತ್ವದನ್ಯಾ ಕಾಚಿದ್ಧಿ ಪ್ರಿಯಾಸ್ತಿ'** 'ನನಗೆ ನಿನಗಿಂತಲೂ ಪ್ರಿಯತಮಳಾದವಳು ಬೇರೆಯವಳಿರುವುದಿಲ್ಲ'–ಎಂದು ನೀನು ನನ್ನ ಮುಂದೆ ಪದೇ ಪದೇ ಹೇಳುತ್ತಿದ್ದೆಯಲ್ಲವೇ? ರಾಜೇಂದ್ರ! ಆ ವಚನವನ್ನು ನೀನಿಂದು ಸತ್ಯವಚನವನ್ನಾಗಿ ಮಾಡು.

ನಲರಾಜ! ನೀನು ನನ್ನನ್ನು ವಿಶೇಷವಾಗಿ ಪ್ರೀತಿಸುವೆ. ನನಗಿಂತಲೂ

ಪ್ರಿಯವಾದ ಬೇರೆ ವಸ್ತುವೇ ಪ್ರಪಂಚದಲ್ಲಿಲ್ಲವೆಂದೂ ತಿಳಿದಿರುವೆ. ಅಂತೆಯೇ ನಾನೂ ಅನನ್ಯಶರಣೆಯಾಗಿರುವೆನು. ನೈಷಧ! ಹೀಗಿದ್ದರೂ ನಾನು ನಿನಗಾಗಿ ಪರಿತಪಿಸುತ್ತಿರುವಾಗ, ನಿನ್ನನ್ನೇ ನೆನೆದು-ನೆನೆದು ಗೋಳಾಡುತ್ತಿರುವಾಗ, ಉನ್ಮತ್ತೆಯಂತೆ ನಿನ್ನನ್ನೇ ಅರಸುತ್ತಾ ಈ ದಾರುಣವಾದ ಕಾಡಿನಲ್ಲಿ ಅಲೆದಾಡುತ್ತಿರುವಾಗ–ನನ್ನ ಕೂಗಿಗೆ ಒಮ್ಮೆಯಾದರೂ ಉತ್ತರವನ್ನೇಕೆ ಕೊಡುವುದಿಲ್ಲ?

ಭೂಪಾಲ! ವಿಶಾಲಾಕ್ಷ! ಆರ್ಯ! ನನ್ನ ಇಂದಿನ ಅವಸ್ಥೆಯು ಹೇಗಿದೆಯೆಂಬುದನ್ನಾದರೂ ತಿಳಿದಿರುವೆಯಾ? ನಾನಿಂದು ಕೃಶಳಾಗಿದ್ದೇನೆ ; ದೀನಳಾಗಿದ್ದೇನೆ ; ವಿವರ್ಣಳಾಗಿದ್ದೇನೆ. ನನ್ನ ಅಂಗಾಂಗಗಳೆಲ್ಲವೂ ಧೂಳಿನಿಂದ ಮುಚ್ಚಿಹೋಗಿವೆ. ಅರ್ಧ ಕತ್ತರಿಸಿದ ಸೀರೆಯನ್ನು ಉಟ್ಟಿದ್ದೇನೆ. ಏಕಾಂಗಿಯಾಗಿದ್ದೇನೆ. ಅನಾಥಳಂತೆ ಪ್ರಲಾಪಿಸುತ್ತಿದ್ದೇನೆ. ನನ್ನ ಸ್ಥಿತಿಯಿಂದು ಗುಂಪನ್ನು ಬಿಟ್ಟುಬಂದ ಹೆಣ್ಣುಜಿಂಕೆಯಂತೆಯೇ ಆಗಿದೆ. ಇಂತಹ ದಾರುಣಾವಸ್ಥೆಯಲ್ಲಿರುವ ನನ್ನನ್ನು ನೀನು ರಕ್ಷಿಸುವುದಿಲ್ಲವೇಕೆ? ರಕ್ಷಣೆಗೆ ಯೋಗ್ಯಳೆಂದು ಭಾವಿಸಲಾರೆಯಾ?

(ಪರಮದುಃಖಿತೆಯಾಗಿದ್ದ ದಮಯಂತಿಯು ಉಚ್ಚಧ್ವನಿಯಿಂದ ಹೇಳಿದಳು.)

ಮಹಾರಾಜ! ಮಹಾರಾಜ! ನಿನ್ನ ಪ್ರಿಯತಮೆಯಾದ ಈ ದಮಯಂತಿಯು ಏಕಾಂಗಿಯಾಗಿ ಕೂಗಿಕೊಳ್ಳುತ್ತಿದ್ದಾಳೆ. ಅವಳ ಸಂಗಡ ಒಮ್ಮೆಯಾದರೂ ಮಾತನಾಡುವುದಿಲ್ಲವೇಕೆ?

(ಪುನಃ ಕುಗ್ಗಿದ ಧ್ವನಿಯಿಂದ ಹೇಳಿದಳು.)

ಕುಲ-ಶೀಲಸಂಪನ್ನನೇ! ಸರ್ವಾಂಗಸುಂದರನೇ! ನರೋತ್ತಮನೇ! ಪರ್ವತದ ಸುತ್ತಲೂ ತಿರುಗಿದೆನು. ಎಲ್ಲಿಯೂ ನಿನ್ನನ್ನು ಕಾಣಲಿಲ್ಲ. ನಿಷಧಾಧಿಪನೇ! ಸಿಂಹ-ವ್ಯಾಘ್ರ-ವರಾಹಗಳಿಂದ ನಿಬಿಡವಾಗಿರುವ ಈ ಘೋರಾರಣ್ಯದಲ್ಲಿ ನಿನ್ನ ಸ್ಥಿತಿ-ಗತಿಗಳನ್ನು ತಿಳಿಯುವ ಸಲುವಾಗಿ ಮಲಗಿರುವ ಪ್ರಾಣಿಯನ್ನು ಕೇಳಲೇ? ನಿಂತಿರುವುದನ್ನು ಕೇಳಲೇ? ಓಡುತ್ತಿರು

ವುದನ್ನು ಕೇಳಲೇ? ಯಾರನ್ನು ಕೇಳಲಿ? ಯಾರು ತಾನೇ ನಿನ್ನ ಸಮಾಚಾರವನ್ನು ತಿಳಿಸುವರು?

'ಈ ಘೋರಾರಣ್ಯದಲ್ಲಿ ನಲಮಹಾರಾಜನನ್ನು ಕಂಡೆಯಾ?'– ಎಂದು ನಾನು ಯಾರನ್ನು ಕೇಳಲಿ? ಜನರಹಿತವಾದ ಈ ಘೋರಾರಣ್ಯದಲ್ಲಿ ನನ್ನನ್ನಗಲಿ ಹೋದ, ಮಹಾತ್ಮನಾದ, ಸುಂದರಾಂಗನಾದ, ಅರಿಂದಮನಾದ ನಲನ ವಿಷಯವನ್ನು ನನಗೆ ಯಾರು ತಿಳಿಯಹೇಳುವರು?

'ನೀನು ಹುಡುಕುತ್ತಿರುವ ಕಮಲದಳನೇತ್ರನಾದ ನಲಮಹಾರಾಜನು ಇಲ್ಲಿಯೇ ಇದ್ದಾನೆ'–ಎಂಬ ಶುಭವಾರ್ತೆಯನ್ನು ಯಾರು ನನಗೆ ಹೇಳುವರು? ನಾನಿನ್ನು ಅಂತಹ ಶುಭವಾರ್ತೆಯನ್ನು ಕೇಳುವೆನೇ? ಆ ಸೌಭಾಗ್ಯವು ನನಗಿದೆಯೇ?

ಅದೋ! ಅಲ್ಲಿ ಅರಣ್ಯಾಧಿಪತಿಯಾದ, ನಾಲ್ಕು ಕೋರೆದಾಡೆಗಳಿಂದ ಕೂಡಿರುವ, ಮಹಾಕಾಯನಾದ ಶಾರ್ದೂಲರಾಜನು ಇತ್ತಕಡೆಗೇ ಬರುತ್ತಲಿದ್ದಾನೆ. ಅವನ ಸಮೀಪಕ್ಕೆ ನಾನು ನಿರ್ಭಯಳಾಗಿ ಹೋಗಿ ಅವನನ್ನು ಪ್ರಶ್ನಿಸುತ್ತೇನೆ'–ಎಂದೆನ್ನುತ್ತಾ ದಮಯಂತಿಯು ಶಾರ್ದೂಲನನ್ನು ಕುರಿತು ಹೇಳಿದಳು :

**ವಿದರ್ಭರಾಜತನಯಾಂ ದಮಯನ್ತೀತಿ ವಿದ್ಧಿ ಮಾಮ್ ।**
**ನಿಷಧಾಧಿಪತೇರ್ಭಾರ್ಯಾಂ ನಲಸ್ಯಾಮಿತ್ರಘಾತಿನಃ ॥೩೩॥**

**ಪತಿಮನ್ವೇಷತೀಮೇಕಾಂ ಕೃಪಣಾಂ ಶೋಕಕರ್ಷಿತಾಮ್ ।**
**ಆಶ್ವಾಸಯ ಮೃಗೇನ್ದ್ರೇಹ ಯದಿ ದೃಷ್ಟಸ್ತ್ವಯಾ ನಲಃ ॥೩೪॥**

**ಅಥವಾ ತ್ವಂ ವನಪತೇ ನಲಂ ಯದಿ ನ ಶಂಸಸಿ ।**
**ಮಾಂ ಖಾದಯ ಮೃಗಶ್ರೇಷ್ಠ ದುಃಖಾದಸ್ಮಾದ್ವಿಮೋಚಯ ॥೩೫॥**

"ನೀನು ಮೃಗರಾಜನಾಗಿರುವುದು ಮಾತ್ರವಲ್ಲದೇ, ಈ ಮಹಾ ಅರಣ್ಯಕ್ಕೂ ನೀನೇ ರಾಜನಾಗಿರುವೆ. ನನ್ನನ್ನು ದಮಯಂತೀ–ಎಂದು ಕರೆಯುತ್ತಾರೆ. ನಾನು ವಿದರ್ಭರಾಜನ ಮಗಳು ಮತ್ತು ಶತ್ರುವಿಧ್ವಂಸಕನಾದ ನಿಷಧರಾಜನಾದ ನಲನ ಭಾರ್ಯೆ. ಪತಿಯ ವಿರಹದಿಂದಾಗಿ ಅತಿ

ದುಃಖಿತೆಯಾಗಿರುವ ನಾನು ಏಕಾಕಿನಿಯಾಗಿ ಈ ಮಹಾರಣ್ಯದಲ್ಲಿ ನಲನನ್ನು ಹುಡುಕುತ್ತಿದ್ದೇನೆ. ನೀನೇನಾದರೂ ಅವನನ್ನು ಕಂಡಿದ್ದರೆ ನಲನು ಎಲ್ಲಿರುವನೆಂಬ ಶುಭವಾರ್ತೆಯನ್ನು ತಿಳಿಸಿ ನನ್ನನ್ನು ಸಂತೈಸು. ಒಂದು ವೇಳೆ ಆ ಶುಭವಾರ್ತೆಯನ್ನು ನೀನು ತಿಳಿಸಲಾರೆಯಾದರೆ ನನಗೆ ಮತ್ತೊಂದು ಉಪಕಾರವನ್ನಾದರೂ ಮಾಡು. ಅತಿದುಃಖಿತೆಯಾಗಿರುವ ನನ್ನನ್ನು ನೀನು ಭಕ್ಷಿಸಿಯಾದರೂ ಈ ದುಃಖದಿಂದ ನನ್ನನ್ನು ಪಾರುಮಾಡು."

ಶಾರ್ದೂಲವು ತನ್ನಷ್ಟಕ್ಕೆ ತಾನು ಹೊರಟುಹೋಯಿತು. ದಮಯಂತಿಯು ಪುನಃ ನಲನನ್ನು ಕುರಿತು ಶೋಕಿಸತೊಡಗಿದಳು :

"ನಲರಾಜ! ನನ್ನೀ ಕರುಣಾಜನಕವಾದ ಮಾತುಗಳನ್ನು ಕೇಳಿಯೂ ಮೃಗರಾಜನು ಕೇಳದಂತೆಯೇ ಹೊರಟುಹೋಗುತ್ತಿದ್ದಾನೆ. ನನ್ನನ್ನು ಭಕ್ಷಿಸೆಂಬ ಎರಡನೆಯ ಪ್ರಾರ್ಥನೆಯನ್ನೂ ಇವನು ನಡೆಸಿಕೊಡಲಿಲ್ಲ.

ಅಯ್ಯೋ! ಈ ವ್ಯಾಘ್ರರಾಜನು ನನ್ನ ಮಾತನ್ನು ಕೇಳದೇ ಸಮುದ್ರ ಗಾಮಿನಿಯಾದ ನದಿಯ ಸಮೀಪಕ್ಕೆ ಧಾವಿಸುತ್ತಿದ್ದಾನೆ. ವ್ಯಾಘ್ರರಾಜನು ನನ್ನ ಮಾತನ್ನು ಕೇಳದೇ ಹೊರಟುಹೋದನಂತರ ನಾನಿನ್ನೇನು ಮಾಡಲಿ? ನಲನೆಲ್ಲಿರುವನೆಂಬುದನ್ನು ಹೇಳೆಂದು ಈ ಪರ್ವತವನ್ನೇ ಕೇಳುತ್ತೇನೆ. ಈ ಪರ್ವತರಾಜನೇನೂ ಸಾಮಾನ್ಯನಲ್ಲ. ಪರಮಪುಣ್ಯತಮನಾದ ಈ ಪರ್ವತ ರಾಜನಲ್ಲಿ ಗಗನಚುಂಬಿಗಳಾದ ಸುಂದರವಾದ ಅನೇಕಾನೇಕಶಿಖರಗಳಿವೆ. ಇದರ ತಪ್ಪಲಿನಲ್ಲಿ ಗೈರಿಕಾದಿ ಧಾತುಗಳೂ, ಅನೇಕ ಲೋಹಗಳ ಮತ್ತು ರತ್ನಗಳ ಖನಿಗಳೂ ಇವೆ. ಈ ಪರ್ವತವು ನಿಶ್ಚಯವಾಗಿಯೂ ಈ ಕಾಡಿನ ಧ್ವಜಸ್ತಂಭದಂತೆಯೇ ಪ್ರಕಾಶಿಸುತ್ತಿದೆ. ಸಿಂಹ-ವ್ಯಾಘ್ರ-ವರಾಹ-ಭಲ್ಲೂಕಗಳೇ ಮೊದಲಾದ ಪ್ರಾಣಿಗಳು ಈ ಪರ್ವತದ ಗುಹೆಗಳಲ್ಲಿವೆ. ಮದಿಸಿದ ಆನೆಗಳೂ ಈ ಪರ್ವತದ ಕೆಳಭಾಗದಲ್ಲಿ ಸಂಚರಿಸುತ್ತಿರುತ್ತವೆ. ಅನೇಕ ವಿಧವಾದ ಪಕ್ಷಿಗಳು ನಿನಾದಮಾಡುತ್ತಿರುತ್ತವೆ. ಕಿಂಶುಕ, ಅಶೋಕ, ಬಕುಲ, ಪುನ್ನಾಗ, ಕರ್ಣಿಕಾರ, ಧವ, ಪ್ಲಕ್ಷ–ಮುಂತಾದ ವೃಕ್ಷಗಳಿಂದ ಈ ಪರ್ವತವು ನಿಬಿಡವಾಗಿದೆ.

ಈ ಪರ್ವತವು ಜಲಪಕ್ಷಿಗಳಿಂದ ಕೂಡಿದ ನದಿಗಳಿಂದ ಶೋಭಾಯ

ಮಾನವಾಗಿದೆ. ಈ ಪರ್ವತದಲ್ಲಿ ಹಲವು ಶಿಖರಗಳಿವೆ. ಇಂತಹ ನಯನ ಮನೋಹರವಾದ ಪರ್ವತರಾಜನನ್ನು ನನ್ನ ಪತಿಯಾದ ನಲರಾಜನ ವಿಷಯವಾಗಿ ಕೇಳುತ್ತೇನೆ."

ದಮಯಂತಿಯು ಪರ್ವತಕ್ಕೆ ಕೈಮುಗಿದು ಹೇಳತೊಡಗಿದಳು :

**ಭಗವನ್ನಚಲಶ್ರೇಷ್ಠ ದಿವ್ಯದರ್ಶನ ವಿಶ್ರುತ ।**
**ಶರಣ್ಯ ಬಹುಕಲ್ಯಾಣ ನಮಸ್ತೇಽಸ್ತು ಮಹೀಧರ ॥೪೨॥**

**ಪ್ರಣಮಾಮ್ಯಭಿಗಮ್ಯಾಹಂ ರಾಜಪುತ್ರೀಂ ನಿಬೋಧ ಮಾಮ್ ।**
**ರಾಜ್ಞಃ ಸ್ನುಷಾಂ ರಾಜಭಾರ್ಯಾಂ ದಮಯನ್ತೀತಿ ವಿಶ್ರುತಾಮ್ ॥೪೩॥**

"ಪರ್ವತರಾಜನೇ! ಪೂಜ್ಯನೇ! ದಿವ್ಯದರ್ಶನನೇ! ಪ್ರಸಿದ್ಧನಾದವನೇ! ಶರಣಾಗತರಕ್ಷಕನೇ! ಬಹುಮಂಗಳಸ್ವರೂಪನೇ! ಮಹೀಧರನೇ! ನಿನಗೆ ಪ್ರಣಾಮಮಾಡುತ್ತೇನೆ. ನಾನೊಬ್ಬಳು ರಾಜಪುತ್ರಿಯು ; ರಾಜನ ಸೊಸೆ ; ಮೇಲಾಗಿ ರಾಜಭಾರ್ಯೆಯೂ ಆಗಿರುತ್ತೇನೆ. ನಾನು ಲೋಕದಲ್ಲಿ ದಮಯಂತಿಯೆಂಬ ಹೆಸರಿನಿಂದ ಪ್ರಸಿದ್ಧಳಾಗಿದ್ದೇನೆ. ರಾಜಾಧಿರಾಜನಾದ, ಮಹಾರಥನಾದ, ವಿದರ್ಭಾಧಿಪತಿಯಾದ, ಬ್ರಹ್ಮ-ಕ್ಷತ್ರಿಯ-ವೈಶ್ಯ-ಶೂದ್ರ ರೆಂಬ ನಾಲ್ಕು ವರ್ಣದವರನ್ನೂ ಧರ್ಮದಿಂದ ಪರಿಪಾಲನೆಮಾಡುತ್ತಿರುವ ಭೀಮರಾಜನೇ ನನ್ನ ತಂದೆ. ಆ ಮಹಾನುಭಾವನು ಬಹುದಕ್ಷಿಣಾಕವಾದ, ರಾಜಸೂಯಾಶ್ವಮೇಧಾದಿ ಯಾಗಗಳನ್ನು ಮಾಡಿ ಬ್ರಾಹ್ಮಣರಿಗೆ ಯಥೇಚ್ಛ ವಾಗಿ ದಕ್ಷಿಣೆಗಳನ್ನು ಕೊಟ್ಟಿರುತ್ತಾನೆ. ಆ ನನ್ನ ತಂದೆಯು ಸುಂದರವಾಗಿರುವ ಕಣ್ಣುಗಳುಳ್ಳವನು ; ವೇದಾಧ್ಯಯನಸಂಪನ್ನನು ; ಸಾಧುವೃತ್ತಿಯುಳ್ಳವನು ; ಸತ್ಯವಾದಿಯು ; ಅಸೂಯಾರಹಿತನು ; ಸದ್ಗುಣಶೀಲನು ; ವೀರ್ಯಸಂಪನ್ನನು ; ಮಹೈಶ್ವರ್ಯವುಳ್ಳವನು ; ಧರ್ಮಾತ್ಮನು ಮತ್ತು ಪೂತಾತ್ಮನು. ವಿದರ್ಭದೇಶದ ಪ್ರಜೆಗಳನ್ನು ತನ್ನ ಮಕ್ಕಳಂತೆಯೇ ಕಾಪಾಡುತ್ತಿರುವನು. ಶತ್ರುಗಳೆಲ್ಲರನ್ನೂ ಪೂರ್ಣವಾಗಿ ಜಯಿಸಿರುವನು. ಪರ್ವತಶ್ರೇಷ್ಠನೇ! ನಿನ್ನ ಬಳಿಗೆ ಬಂದಿರುವ ನಾನು ಅಂತಹ ಸಕಲಗುಣ ಸಂಪನ್ನನಾದ ಭೀಮರಾಜನ ಮಗಳಾಗಿರುವೆನು.

ಪರ್ವತರಾಜ! ನಾನು ಸೇರಿರುವ ಮನೆಯ ಖ್ಯಾತಿಯನ್ನೂ ಹೇಳುವೆನು ; ಕೇಳು. ನಿಷಧರಾಜ್ಯದಲ್ಲಿ ಸತ್ಯ-ಧರ್ಮಗಳಿಂದ ರಾಜ್ಯವನ್ನಾಳುತ್ತಿದ್ದ, ನರೋತ್ತಮನಾದ, ವಿಖ್ಯಾತನಾದ, ವೀರಸೇನನೆಂಬ ಹೆಸರಿನಿಂದ ಪ್ರಸಿದ್ಧನಾದ ಮಹಾನುಭಾವನೇ ನನ್ನ ಮಾವನು. ವೀರನಾದ, ಸತ್ಯಪರಾಕ್ರಮನಾದ, ವೀರಸೇನನ ಪುತ್ರನು ವಂಶಾನುಕ್ರಮವಾಗಿ ಪ್ರಾಪ್ತವಾದ ನಿಷಧರಾಜ್ಯವನ್ನು ಪರಿಪಾಲಿಸುತ್ತಿದ್ದನು. ಅವನು ಶತ್ರುನಿಷೂದನನು ; ಶ್ಯಾಮಲವರ್ಣನು ; ಪುಣ್ಯಶ್ಲೋಕನೆಂದು ಸರ್ವತ್ರಪ್ರಸಿದ್ಧನಾದವನು ; ಬ್ರಾಹ್ಮಣಪ್ರಿಯನು ; ವೇದ-ವೇದಾಂಗಗಳನ್ನು ತಿಳಿದವನು ; ಮಹಾವಾಗ್ಮಿಯು ; ಪುಣ್ಯಕಾರ್ಯಗಳನ್ನು ಮಾಡುವುದರಲ್ಲಿಯೇ ಹೆಚ್ಚು ಉತ್ಸಾಹವುಳ್ಳವನು. ಅವನು ಅನೇಕ ಯಜ್ಞ-ಯಾಗಾದಿಗಳನ್ನು ಮಾಡಿ ಸೋಮರಸವನ್ನು ಪಾನಮಾಡಿದ್ದನು. ಅಗ್ನಿಹೋತ್ರಪರಾಯಣನಾಗಿಯೂ ಕಾಲ-ಕಾಲಕ್ಕೆ ಕ್ರತುಗಳನ್ನು ಮಾಡುತ್ತಲೂ ಇದ್ದನು. ಸಮಯಗಳಲ್ಲಿ ಯುದ್ಧಮಾಡಿ ಶತ್ರುಗಳನ್ನು ಸದೆಬಡಿಯುತ್ತಲೂ ಇದ್ದನು. ತನ್ನ ಪ್ರಜೆಗಳನ್ನು ಅಕ್ಕರೆಯಿಂದ ಕಾಪಾಡುತ್ತಿದ್ದನು. ನಲನೆಂದು ಪ್ರಸಿದ್ಧನಾದ ಅಂತಹ ಮಹಾನುಭಾವನ ಅರ್ಧಾಂಗಿಯಾದ ನಾನು ನಿನ್ನ ಮುಂದೆ ಕೈಜೋಡಿಸಿ ನಿಂತಿದ್ದೇನೆ.

ಪರ್ವತರಾಜನೇ! ಆದರೆ ನಾನಿಂದು ಸೌಭಾಗ್ಯದಿಂದ ವಂಚಿತಳಾಗಿದ್ದೇನೆ. ಪತಿಯಿಂದ ವಿರಹಿತಳಾಗಿದ್ದೇನೆ. ನನ್ನ ಪತಿಯನ್ನು ಹುಡುಕಿಕೊಂಡು ಈ ಘೋರಾರಣ್ಯದಲ್ಲಿ ಅಲೆದಾಡುತ್ತಿದ್ದೇನೆ. ನಾನು ಹೇಳಿದ ಆ ನಲಮಹಾರಾಜನು ಉನ್ನತವಾಗಿರುವ ನಿನ್ನ ನೂರಾರು ಶೃಂಗಗಳಿಗೇನಾದರೂ ಗೋಚರವಾದನೇ? ಗಜೇಂದ್ರನಿಗೆ ಸಮಾನವಾದ ಪರಾಕ್ರಮವುಳ್ಳ ಅಥವಾ ನಡಿಗೆಯುಳ್ಳ ನನ್ನ ನಲನನ್ನು ನಿನ್ನ ಶಿಖರಗಳ ಮೂಲಕವಾಗಿ ಕಂಡೆಯಾ? ದೀರ್ಘಬಾಹುವಾದ, ಅಪರಾಜಿತನಾದ, ಧೀಮಂತನಾದ, ವೀರವಿಕ್ರಮನಾದ, ವೀರಾಗ್ರಣಿಯಾದ, ಕ್ಷಮಾಗುಣವಿಶಿಷ್ಟನಾದ, ಶತ್ರುಕೋಪನನಾದ, ಯಶಸ್ವಿಯಾದ, ನನ್ನ ನಲನನ್ನು ಕಂಡೆಯಾ? ನಿನ್ನ ಮುಂದೆ ಅಳುತ್ತಾ ನಿಲ್ಲುವ ನಿನ್ನ ಮಗಳನ್ನು ಸಮಾಧಾನಮಾಡುವಂತೆ–

ಏಕಾಕಿನಿಯಾಗಿ ಪ್ರಲಾಪಿಸುತ್ತಾ ನಿನ್ನ ಮುಂದೆ ಕೈಜೋಡಿಸಿ ನಿಂತಿರುವ ನನ್ನನ್ನೂ ನೀನು ಸಂತೈಸಲಾರೆಯಾ?"

ಪರ್ವತರಾಜನು ಏನು ತಾನೇ ಉತ್ತರಕೊಟ್ಟಾನು? ಅಧೀರಳಾದ ದಮಯಂತಿಯು ಪುನಃ ತನ್ನ ನಲನನ್ನು ಉದ್ದೇಶಿಸಿ ಹೇಳತೊಡಗಿದಳು :

"ವೀರನೇ! ವಿಕ್ರಮಶಾಲಿಯೇ! ಧರ್ಮಜ್ಞನೇ! ಸತ್ಯಸಂಧನೇ! ಮಹೀಪಾಲನೇ! ನೀನು ಈ ಕಾಡಿನಲ್ಲಿಯೇ ಇರುವುದಾದರೆ ನನಗೆ ಈ ಕ್ಷಣದಲ್ಲಿಯೇ ದರ್ಶನವನ್ನೀಯುವವನಾಗು."

ಅವಳ ಪ್ರಲಾಪಗಳಿಗೆ ಪ್ರತಿಧ್ವನಿಗಳ ಹೊರತಾಗಿ ಮತ್ತಾವ ಪ್ರತಿ ಕ್ರಿಯೆಯೂ ಎಲ್ಲಿಂದಲೂ ಬರಲಿಲ್ಲ. ದಮಯಂತಿಯು ಪುನಃ ರೋದನ ಮಾಡತೊಡಗಿದಳು :

"ಅಯ್ಯೋ! ಕರ್ಣಾನಂದಕರವಾದ, ಅಮೃತಸ್ವರೂಪವಾದ, ಗಂಭೀರ ವಾದ ನನ್ನ ಇನಿಯನ ಧ್ವನಿಯನ್ನು ನಾನು ಪುನಃ ಎಂದು ಕೇಳುವೆನು? ಸುಶ್ರಾವ್ಯವಾದ ವೇದಪಾಠಕ್ಕೆ ಸಮಾನವಾದ ತನ್ನ ಧ್ವನಿಯಿಂದ ನನ್ನನ್ನು 'ವಿದರ್ಭಸುತೇ!' 'ದಮಯಂತಿ!' ಎಂದು ಕೂಗಿ ನನ್ನೀ ವಿರಹಶೋಕವನ್ನು ನಲಮಹಾರಾಜನು ಯಾವಾಗ ದೂರಮಾಡುವನು? ಮಹಾರಾಜ! ನಾನು ನಿಶ್ಚಯವಾಗಿಯೂ ಬಹು ಭೀತಳಾಗಿದ್ದೇನೆ. ನನ್ನನ್ನು ದಯೆಯಿಟ್ಟು ಸಂತೈಸು."

ಎಷ್ಟೇ ಕೂಗಿದರೂ ಎಷ್ಟೇ ಪ್ರಲಾಪಮಾಡಿದರೂ ಪ್ರಯೋಜನವಾಗ ಲಿಲ್ಲ. ಪರ್ವತರಾಜನು ಉತ್ತರಿಸದಿರುವುದಕ್ಕೆ ದಮಯಂತಿಯು ಸಂಕಟ ಪಡುತ್ತಾ ಉತ್ತರದಿಕ್ಕಿನ ಮಾರ್ಗವನ್ನು ಹಿಡಿದು ನಡೆದಳು. ಮೂರು ಹಗಲು ಮತ್ತು ಮೂರು ರಾತ್ರಿಗಳು ಅನ್ನಾಹಾರಗಳಿಲ್ಲದೇ ಪತಿಯನ್ನರಸುತ್ತಾ ನಡೆದನಂತರ ಅಸದೃಶವಾದ ಕಾಂತಿಯಿಂದ ಕೂಡಿದ್ದ ಒಂದು ಋಷ್ಯಾಶ್ರಮಕ್ಕೆ ಬಂದಳು. ಆ ಆಶ್ರಮವು ನಿಶ್ಚಯವಾಗಿಯೂ ಸ್ವರ್ಗದ ನಂದನವನದಂತೆ ಕಂಗೊಳಿಸುತ್ತಿದ್ದಿತು. ದಮಯಂತಿಯು ನೋಡಿದ ಆ ಆಶ್ರಮವು ನಿಶ್ಚಯವಾಗಿಯೂ ವಸಿಷ್ಠ, ಭೃಗು, ಅತ್ರಿ–ಮೊದಲಾದ ಬ್ರಹ್ಮರ್ಷಿಗಳಿಗೆ ಸಮಾನರಾದ ಮಹರ್ಷಿಗಳಿಂದ ಸಂಸೇವ್ಯಮಾನವಾಗಿ ಕಂಗೊಳಿಸುತ್ತಿದ್ದಿತು.

ನಿಯತೇಂದ್ರಿಯರಾದ, ನಿಯತಾಹಾರಿಗಳಾದ, ಶಮ-ದಮಾದಿಗುಣಾನ್ವಿತರಾದ, ಶುಚೀಭೂತರಾದ ಮಹರ್ಷಿಗಳಿಂದ ತುಂಬಿದ್ದ ಆ ಆಶ್ರಮವನ್ನು ದಮಯಂತಿಯು ಕಂಡಳು. ಜಲಭಕ್ಷಕರಾದ ಋಷಿಗಳು, ವಾಯುಭಕ್ಷಕರಾದ ಋಷಿಗಳು, ಪರ್ಣಾಶರು, ಜಿತೇಂದ್ರಿಯರು, ಮಹಾಭಾಗರು, ಸ್ವರ್ಗಮಾರ್ಗವನ್ನು ಕಾಣುವ ಸಾಮರ್ಥ್ಯವುಳ್ಳವರು–ಮುಂತಾದವರಿಂದ ಕೂಡಿದ ಆ ಆಶ್ರಮವು ಅನ್ಯಾದೃಶವಾದ ಕಾಂತಿಯಿಂದ ಕೂಡಿದ್ದಿತು. ವಲ್ಕಲಾಜಿನಧಾರಿಗಳಾದ, ಜಿತೇಂದ್ರಿಯರಾದ, ತಪಃಸ್ವಾಧ್ಯಾಯನಿರತರಾದ ಋಷಿ-ಮಹರ್ಷಿಗಳಿಂದ ನಿಬಿಡವಾಗಿದ್ದ ಆ ಆಶ್ರಮಮಂಡಲವನ್ನು ದಮಯಂತಿಯು ಕಂಡಳು. ಅಂತಹ ಋಷಿ-ಮಹರ್ಷಿಗಳಿಂದಲೂ, ಗುಂಪು-ಗುಂಪಾಗಿದ್ದ ಜಿಂಕೆಗಳಿಂದಲೂ ಮತ್ತು ಶಾಖಾಮೃಗಗಳಿಂದಲೂ ಕೂಡಿದ್ದ ಆಶ್ರಮವನ್ನು ಕಂಡೊಡನೆಯೇ ದಮಯಂತಿಯು ಸಮಾಧಾನಹೊಂದಿದಳು.

ಶೋಭಾಯಮಾನವಾದ ಹುಬ್ಬುಗಳಿಂದಲೂ, ನೀಳವಾದ ಕೇಶರಾಶಿಯಿಂದಲೂ, ಸುಂದರವಾದ ನಿತಂಬಗಳಿಂದಲೂ–ಕುಚಗಳಿಂದಲೂ ಪರಿಶೋಭಿಸುತ್ತಿದ್ದ, ಚಂದ್ರಕಿರಣಗಳ ಕಾಂತಿಗೆ ಸಮಾನವಾದ ಕಾಂತಿಯನ್ನು ಬೀರುವ ದಂತಪಂಕ್ತಿಗಳಿಂದ ಕೂಡಿದ್ದ, ವಿಶಾಲನೇತ್ರೆಯಾದ, ವರ್ಚಸ್ವಿನಿಯಾದ, ವೀರಸೇನನ ಮಗನಿಗೆ ಪ್ರಿಯತಮಳಾದ ದಮಯಂತಿಯು ಆ ಆಶ್ರಮಭೂಮಿಯನ್ನು ಪ್ರವೇಶಿಸಿದಳು.

ಧರ್ಮಜ! ಸ್ತ್ರೀರತ್ನಳಾದ, ಮಹಾಭಾಗೆಯಾದ, ತಪಸ್ವಿನಿಯಾದ ದಮಯಂತಿಯು ಆಶ್ರಮದೊಳಗೆ ಪ್ರವೇಶಿಸಿ, ವೃದ್ಧರಾದ ತಪೋಧನರಿಗೆ ನಮಸ್ಕರಿಸಿ, ನತಶಿರಳಾಗಿ ಅವರ ಮುಂದೆ ನಿಂತಳು. ಅಭಾಗಿನಿಯಾದ ದಮಯಂತಿಯನ್ನು ಆಶ್ರಮವಾಸಿಗಳು ಸ್ವಾಗತಿಸಿ, ಯಥೋಚಿತವಾಗಿ ಸತ್ಕರಿಸಿದನಂತರ ಅವಳನ್ನು ಕುರಿತು ಹೇಳಿದರು :

"ಮಂಗಳಾಂಗಿಯೇ! ನೀನಿಲ್ಲಿ ಕುಳಿತುಕೋ. ನಿನಗಾಗಿ ನಾವೇನು ಮಾಡಬೇಕೆಂಬುದನ್ನು ಹೇಳು."

ಅದಕ್ಕುತ್ತರವಾಗಿ ದಮಯಂತಿಯು ಹೇಳಿದಳು :

"ಪವಿತ್ರಾತ್ಮರಾದ ಮಹರ್ಷಿಗಳೇ! ತಮ್ಮ ಅಗ್ನಿಹೋತ್ರ-ಚಾಂದ್ರಾ

ಯಣಾದಿಗಳು, ತಪಸ್ಸು, ಯಜ್ಞ-ಯಾಗಾದಿಗಳು–ಇವುಗಳೆಲ್ಲವೂ ನಿರ್ವಿಘ್ನ ವಾಗಿ ನಡೆಯುತ್ತಿವೆಯೇ? ಈ ಆಶ್ರಮದಲ್ಲಿರುವ ಮೃಗ-ಪಕ್ಷಿಗಳು ಕ್ಷೇಮ ದಿಂದಿರುವುವೇ? ತಮ್ಮ ಧಾರ್ಮಿಕಕ್ರಿಯೆಗಳು ಯಾವ ವಿಧವಾದ ತೊಂದರೆಯೂ ಇಲ್ಲದೇ ನಡೆಯುತ್ತಿವೆಯೇ?"

ಋಷಿಗಳು ಪ್ರತ್ಯುತ್ತರವನ್ನಿತ್ತರು :

"ಭದ್ರೇ! ಸರ್ವವೂ ಕುಶಲದಿಂದಿರುವುದು. ಆದರೆ, ಕಳಂಕರಹಿ ತಳೇ! ನೀನು ಯಾರು? ಯಾವ ಕಾರಣದಿಂದ ಈ ಘೋರಾರಣ್ಯದಲ್ಲಿ ಸುತ್ತಾಡುತ್ತಿರುವೆ? ನೀನು ಇಲ್ಲಿಗೆ ಬಂದಿರುವ ಕಾರಣವಾದರೂ ಏನು? ನಿನ್ನ ಅನ್ಯಾದೃಶವಾದ ರೂಪವನ್ನೂ, ಕಾಂತಿಯನ್ನೂ ಕಂಡು ನಾವು ವಿಸ್ಮಯಗೊಂಡಿದ್ದೇವೆ. ನೀನಿನ್ನು ದುಃಖಿಸುವ ಕಾರಣವಿಲ್ಲ. ಸಂತುಷ್ಟಳಾಗು. ಮಂಗಳಾಂಗಿ! ನೀನೇನು ಈ ಅರಣ್ಯದ ಅಧಿದೇವತೆಯೇ ಅಥವಾ ಈ ಪರ್ವತದ ಅಧಿದೇವತೆಯೇ? ಅಥವಾ ನದಿಯಾಗಿ ಇಲ್ಲಿ ಹರಿಯುತ್ತಿರುವ ನೀನು ಶರೀರವನ್ನು ಧಾರಣೆಮಾಡಿ ನಮ್ಮಲ್ಲಿಗೆ ಬಂದಿರುವೆಯಾ? ನಿನ್ನ ನಿಜಸ್ವರೂಪವೇನೆಂಬುದನ್ನು ಹೇಳುವವಳಾಗು."

"ಬ್ರಾಹ್ಮಣೋತ್ತಮರೇ! ತಾವು ಭಾವಿಸಿರುವಂತೆ ನಾನು ಈ ವನದ ಅಧಿದೇವತೆಯೂ ಅಲ್ಲ ; ಪರ್ವತದ ಅಧಿದೇವತೆಯೂ ಅಲ್ಲ. ನದಿಯ ಅಧಿದೇವತೆಯೂ ಅಲ್ಲ. ತಪೋಧನರೇ! ನನ್ನನ್ನು ಮನುಷ್ಯಮಾತ್ರಳೆಂದೇ ತಿಳಿಯಿರಿ. ನಾನು ನನ್ನ ಸಂಬಂಧವಾದ ಕಥೆಯನ್ನು ವಿವರಿಸಿ ಹೇಳುತ್ತೇನೆ ; ಕೇಳಿರಿ :

ತಪೋಧನರೇ! ವಿದರ್ಭದೇಶದಲ್ಲಿ ಮಹಾಪರಾಕ್ರಮಶಾಲಿಯಾದ ಭೀಮನೆಂಬ ರಾಜನಿದ್ದಾನೆ. ನಾನು ಆ ಭೀಮರಾಜನ ಮಗಳು. ನಿಷಧ ದೇಶದ ರಾಜನಾದ, ಮಹಾತೇಜಸ್ವಿಯಾದ, ಮಹಾಬಲನಾದ, ಸತ್ಯವಂತ ನಾದ, ಧರ್ಮಜ್ಞನಾದ, ಪ್ರಾಜ್ಞನಾದ, ಶತ್ರುನಿಷೂದನನಾದ, ದೇವ-ಬ್ರಾಹ್ಮಣಪ್ರಿಯನಾದ, ಶ್ರೀಮಂತನಾದ, ದೇವರಾಜನಿಗೆ ಸಮಾನವಾದ ಕಾಂತಿಯಿಂದ ಕೂಡಿರುವ, ವಿಶಾಲನೇತ್ರನಾದ, ಚಂದ್ರಮುಖನಾದ 'ನಲ' ಎಂಬ ಹೆಸರಿನಿಂದ ವಿಖ್ಯಾತನಾಗಿರುವ ರಾಜಶ್ರೇಷ್ಠನೇ ನನ್ನ ಪತಿಯು. ಆ ನನ್ನ ನಲರಾಜನು ಅನೇಕಾನೇಕ ಯಜ್ಞ-ಯಾಗಾದಿಗಳನ್ನು

ಮಾಡಿರುವವನು. ವೇದಾಧ್ಯಯನಸಂಪನ್ನನು. ಶಿಕ್ಷಾ-ವ್ಯಾಕರಣಾದಿ ವೇದಾಂಗಗಳನ್ನು ತಿಳಿದಿರುವವನು. ಯುದ್ಧದಲ್ಲಿ ಅಪರಾಜಿತನು. ಸೂರ್ಯ- ಚಂದ್ರರಿಗೆ ಸಮಾನವಾದ ಕಾಂತಿಯುಳ್ಳವನು.

ಧರ್ಮಾತ್ಮನಾದ, ಸತ್ಯವ್ರತನಾದ ಆ ನಲಮಹಾರಾಜನೊಮ್ಮೆ-ದ್ಯೂತವಿದ್ಯೆಯಲ್ಲಿ ಧುರೀಣರೂ, ಅನಾರ್ಯರೂ, ಕುಬುದ್ಧಿಯುಳ್ಳವರೂ, ಅಸಂಸ್ಕೃತರೂ ಆದ ಜೂಜುಕೋರರಿಂದ ಪಗಡೆಯಾಟಕ್ಕೆ ಆಹ್ವಾನಿಸಲ್ಪಟ್ಟನು. ಅವರ ಮೋಸದ ಆಟದಲ್ಲಿ ಮಹಾತ್ಮನಾದ ನಲರಾಜನು ಪರಾಜಿತನಾಗಿ ರಾಜ್ಯ-ಕೋಶಗಳೆಲ್ಲವನ್ನೂ ಕಳೆದುಕೊಂಡನು. ನಾನು ಅಂತಹ ಪುರುಷರ್ಷಭನಾದ ನಲರಾಜನ ಭಾರ್ಯೆಯಾಗಿದ್ದೇನೆ. ನನ್ನನ್ನು 'ದಮಯಂತಿ' ಎಂದು ಕರೆಯುತ್ತಾರೆ. ನನ್ನನ್ನು ಬಿಟ್ಟು ಹೊರಟುಹೋಗಿರುವ, ಯುದ್ಧದಲ್ಲಿ ಅಪ್ರತಿಮನಾದ, ಮಹಾತ್ಮನಾದ, ಶಸ್ತ್ರಾಸ್ತ್ರಪ್ರಹರಣದಲ್ಲಿ ವಿಶೇಷವಾದ ಪ್ರಾವೀಣ್ಯವುಳ್ಳ ಆ ನನ್ನ ಪತಿಯನ್ನು ಅನ್ವೇಷಣೆಮಾಡುತ್ತಾ ನಾನು ಈ ಕಾಡಿನಲ್ಲಿ ಅಲೆಯುತ್ತಿದ್ದೇನೆ. ನಾನು ನನ್ನ ಪತಿಯನ್ನಗಲಿ ಪರಮದುಃಖಿತೆಯಾಗಿ ಅವನನ್ನರಸಲು ಅನೇಕಾನೇಕ ಕಾನನಗಳನ್ನೂ, ಗಿರಿ-ದುರ್ಗಗಳನ್ನೂ, ಪರ್ವತಗಳನ್ನೂ, ನದೀ-ನದ-ತಟಾಕಗಳನ್ನೂ ದಾಟಿ ಇಲ್ಲಿಗೆ ಬಂದಿರುವೆನು. ನಿಷಧರಾಜನಾದ, ಮಹಾತ್ಮನಾದ ಆ ನಲನು ಈ ದಿವ್ಯಾಶ್ರಮಕ್ಕೇನಾದರೂ ಆಗಮಿಸಿದ್ದನೇ? ಅವನನ್ನು ಹುಡುಕುವ ಕಾರಣದಿಂದಲೇ ನಾನು ಭಯಂಕರವಾದ, ಸಿಂಹ-ವ್ಯಾಘ್ರ-ವರಾಹಾದಿ ದುಷ್ಟಜಂತುಗಳಿಂದ ವ್ಯಾಪ್ತವಾಗಿರುವ ಈ ಘೋರಾರಣ್ಯದಲ್ಲಿ ಅಲೆದಾಡುತ್ತಿರುವೆನು. ಕೆಲವು ದಿನಗಳೊಳಗಾಗಿ ನನ್ನ ಪ್ರಿಯತಮನನ್ನು ನಾನು ಕಾಣದಿದ್ದರೆ ನಿಶ್ಚಯವಾಗಿಯೂ ನಾನೀ ಶರೀರವನ್ನು ಪರಿತ್ಯಾಗಮಾಡಿ ನನ್ನ ಆತ್ಮಕ್ಕೆ ಶಾಂತಿಯನ್ನುಂಟುಮಾಡಿಕೊಳ್ಳುವೆನು. ಪುರುಷರ್ಷಭನಾದ ನಲನಿಲ್ಲದ ಮೇಲೆ ನಾನು ಜೀವಿಸಿರುವುದರಿಂದ ಪ್ರಯೋಜನವೇನು? ನನ್ನ ಪ್ರಿಯತಮನನ್ನು ಕಾಣದೇ ಆಮರಣಾಂತವಾಗಿ ಸಂಕಟಪಡುತ್ತಾ ಹೇಗೆ ಕಾಲಕಳೆಯಲಿ?"

ಈ ರೀತಿಯಾಗಿ ವಿಲಾಪಮಾಡುತ್ತಿದ್ದ ಭೀಮರಾಜನಂದಿನಿಯಾದ ದಮಯಂತಿಯನ್ನು ಕುರಿತು ಸತ್ಯದರ್ಶಿಗಳಾದ ಮಹರ್ಷಿಗಳು ಹೇಳಿದರು :

"ಕಲ್ಯಾಣಿ! ನಿನಗೆ ಅತಿಶೀಘ್ರದಲ್ಲಿಯೇ ಶುಭೋದಯವಾಗುವುದನ್ನು ನಮ್ಮ ದಿವ್ಯದೃಷ್ಟಿಯಿಂದ ನಾವು ಕಾಣುತ್ತಿದ್ದೇವೆ. ನಿನ್ನ ಮುಂದಿನ ದಿನಗಳು ಬಹಳ ಸುಖದಾಯಕವಾಗಿರುವುವು. ಕೆಲವು ದಿನಗಳಲ್ಲಿಯೇ ನೀನು ನಿನ್ನ ಪ್ರಿಯತಮನಾದ ನಲನನ್ನೂ ಕಾಣಲಿರುವೆ. ನಿಷಧರಾಜನಾದ, ಶತ್ರುನಿಷೂದನನಾದ, ಧರ್ಮಾತ್ಮನಾದ ನಲನು ಸಕಲಕಷ್ಟಗಳಿಂದಲೂ ವಿಮುಕ್ತನಾಗುವುದನ್ನೂ ನೀನು ನೋಡುವೆ. ಭದ್ರೇ! ನಲನು ಸರ್ವ ಕಷ್ಟಗಳಿಂದಲೂ ವಿಮುಕ್ತನಾಗಿ, ಕನಕಾಂಗದ-ಕೇಯೂರಗಳನ್ನೂ, ರತ್ನಾ ಭರಣಗಳನ್ನೂ ಧರಿಸಿ, ನಿಷಧರಾಜ್ಯವನ್ನೇ ಪುನಃ ಶಾಸನಮಾಡುತ್ತಾನೆ. ಶತ್ರುಹಂತಕನಾದ, ಶತ್ರುಗಳಿಗೆ ಭಯೋತ್ಪಾದಕನಾದ, ಮಿತ್ರರ ಶೋಕ ವಿನಾಶಕನಾದ, ಮಂಗಳಮೂರ್ತಿಯಾದ ನಿನ್ನ ಪತಿಯನ್ನು ನೀನು ನಿಶ್ಚಯ ವಾಗಿಯೂ ಕಾಣುವೆ, ದಮಯಂತಿ! ಇದರಲ್ಲಾವ ಸಂಶಯವೂ ಇಲ್ಲ."

ನಲರಾಜನ ಪಟ್ಟಮಹಿಷಿಯಾದ ದಮಯಂತಿಗೆ ತಪಸ್ವಿಗಳು ಹೀಗೆಂದು ಹೇಳಿ–ಮರುಕ್ಷಣದಲ್ಲಿಯೇ ಆಶ್ರಮ, ಅಗ್ನಿ ಮತ್ತು ಜಿಂಕೆಗಳ ಸಮೇತರಾಗಿ ಮಾಯವಾದರು.

ಯಥಾಪೂರ್ವವಾಗಿ ಭೀಮರಾಜನಂದಿನಿಯು ಘೋರಾರಣ್ಯದ ಮಧ್ಯದಲ್ಲಿಯೇ ನಿಂತಿದ್ದಳು. ಅವಳಿಗೆ ಆ ಆಶ್ರಮದ ದರ್ಶನವು ಸ್ವಪ್ನ ಪ್ರಾಯವಾಯಿತು. ಆಶ್ಚರ್ಯಭರಿತಳಾದಳು. ತನಗೆ ತಾನೇ ಮಾತನಾಡಿ ಕೊಂಡಳು :

"ಅಯ್ಯೋ ವಿಧಿಯೇ! ಇದುವರೆಗೂ ನಾನು ಕಂಡ ದಿವ್ಯಾಶ್ರಮ, ಮಹರ್ಷಿಗಳೊಡನೆ ಮಾತನಾಡಿದುದು–ಎಲ್ಲವೂ ಕನಸೇ? ಎಂತಹ ವಿಚಿತ್ರವು ನಡೆದು ಹೋಯಿತು! ಆ ಋಷಿ-ಮಹರ್ಷಿಗಳೆಲ್ಲರೂ ಈಗೆಲ್ಲಿಗೆ ಹೋಗಿಬಿಟ್ಟರು? ಆ ದಿವ್ಯಾಶ್ರಮವೆಲ್ಲಿ? ನಯನಾನಂದಕರವಾದ, ದಿವ್ಯ ತೀರ್ಥದಿಂದ ಕೂಡಿದ್ದ ಆ ನದಿಯಾದರೂ ಎಲ್ಲಿ? ಫಲ-ಪುಷ್ಪಭರಿತವಾಗಿ ಕಂಗೊಳಿಸುತ್ತಿದ್ದ ವೃಕ್ಷಗಳೂ ಕಾಣುವುದಿಲ್ಲವಲ್ಲಾ!"

ಇದೇ ವಿಷಯವನ್ನು ಮನಸ್ಸಿನಲ್ಲಿ ಕ್ಷಣ-ಕ್ಷಣಕ್ಕೂ ಯೋಚಿಸುತ್ತಿದ್ದ, ಶುಚಿಸ್ಮಿತೆಯಾದ ದಮಯಂತಿಯು ವಿವರ್ಣಳಾದಳು. ತನ್ನ ಪತಿಯನ್ನೇ

ಪುನಃ ಪುನಃ ನೆನೆಯುತ್ತಾ ರೋದಿಸತೊಡಗಿದಳು. ಕಂಬನಿಗರೆಯುತ್ತಲೇ ಮುಂದೆ ಧಾವಿಸಿದಳು. ಹಾದಿಯ ಒಂದೆಡೆಯಲ್ಲಿ, ಪುಷ್ಪಭರಿತವಾಗಿದ್ದ, ಅನೇಕ ಪಕ್ಷಿಗಳಿಗೆ ನಿವಾಸಸ್ಥಾನವಾಗಿದ್ದ ಮತ್ತು ಪಕ್ಷಿಗಳ ಸತತನಿನಾದಗಳಿಂದ ಕೂಡಿದ್ದ ಅಶೋಕವೃಕ್ಷವನ್ನು ಕಂಡಳು. ಆ ಅಶೋಕವೃಕ್ಷವನ್ನು ಕಂಡೊಡನೆಯೇ ದಮಯಂತಿಯ ಶೋಕವು ಮತ್ತಷ್ಟು ಹೆಚ್ಚಿತು. ತನ್ನಲ್ಲಿಯೇ ತಾನು ಹೀಗೆಂದು ಹೇಳಿಕೊಂಡಳು :

**ಅಹೋ ಬತಾಯಮಗಮಃ ಶ್ರೀಮಾನಸ್ಮಿನ್ವನಾನ್ತರೇ ।**
**ಆಪೀಡೈರ್ಬಹುಭಿರ್ಭಾತಿ ಶ್ರೀಮಾನ್ಪರ್ವತರಾಡಿವ ॥೧೦೬॥**

**ವಿಶೋಕಾಂ ಕುರು ಮಾಂ ಕ್ಷಿಪ್ರಮಶೋಕ ಪ್ರಿಯದರ್ಶನ ।**
**ವೀತಶೋಕಭಯಾಬಾಧಂ ಕಚ್ಚಿತ್ತ್ವಂ ದೃಷ್ಟವಾನ್ನೃಪಮ್ ॥೧೦೭॥**

“ಈ ಅಶೋಕವೃಕ್ಷವು ಈ ಅರಣ್ಯಕ್ಕೇ ಅಲಂಕಾರಪ್ರಾಯವಾಗಿರುವುದು. ಹೂವುಗಳಿಂದಲೂ, ಮೊಗ್ಗುಗಳಿಂದಲೂ ಕೂಡಿ ಪರ್ವತರಾಜನಂತೆಯೇ ಪರಿಶೋಭಿಸುತ್ತಿರುವುದು.”

ಗದ್ಗದಸ್ವರದಿಂದ ಬಿಕ್ಕಿ-ಬಿಕ್ಕಿ ಅಳುತ್ತಾ ಆ ವೃಕ್ಷರಾಜನನ್ನು ಕುರಿತು ದಮಯಂತಿಯು ಹೇಳಿದಳು :

“ಎಲೈ ಅಶೋಕನೇ! ಪ್ರಿಯದರ್ಶನನೇ! ನೀನಾದರೂ ನಿನ್ನ ಹೆಸರಿಗೆ ಅನುಗುಣವಾಗಿ ನನ್ನನ್ನು ಶೋಕವಿಹೀನೆಯನ್ನಾಗಿ ಮಾಡು. ಭಯರಹಿತಳನ್ನಾಗಿಯೂ ಮಾಡು. ಅಶೋಕನೇ! ನೀನು ನಲನನ್ನು ಕಂಡೆಯಾ? ದಮಯಂತಿಯ ಪ್ರಿಯತಮನನ್ನು ಕಂಡೆಯಾ? ಶತ್ರುನಿಷೂದನನನ್ನು ಕಂಡೆಯಾ? ಭಯ-ದುಃಖ-ಬಾಧಾರಹಿತನಾದ ನಲರಾಜನನ್ನು ಕಂಡೆಯಾ? ಅಶೋಕನೇ! ಮಾತನಾಡು. ನನ್ನ ಪ್ರಾಣಪ್ರಿಯನಾದ ಪತಿದೇವನನ್ನು ಕಂಡೆಯಾ? ಅರ್ಧವಸ್ತ್ರಧಾರಿಯಾಗಿದ್ದ ನಿಷಧರಾಜನನ್ನು ಕಂಡೆಯಾ? ಕೋಮಲಾಂಗನಾದ ನನ್ನ ಪ್ರಿಯತಮನು ದುಃಖದಿಂದ ಪರಿತಪ್ತನಾಗಿ ನಿನ್ನ ಕಡೆಗೇನಾದರೂ ಬಂದಿದ್ದನೇ? ಅಶೋಕ! ಈ ಒಂದು ವಾರ್ತೆಯನ್ನು–ಅಮೃತಧಾರೆಗೆ ಸಮಾನವಾದ ಸುವಾರ್ತೆಯನ್ನು–ಅರುಹಿ ನನ್ನನ್ನು ವಿಶೋಕಳನ್ನಾಗಿ ಮಾಡು. ನೀನೂ ಅನ್ವರ್ಥನಾಮನಾಗು. ಇತರರ

ಶೋಕವನ್ನು ಹೋಗಲಾಡಿಸುವುದರಿಂದಲೇ ನಿನ್ನನ್ನು ಅಶೋಕನೆಂದು ಕರೆಯುವರಲ್ಲವೇ?”

ಆದರೆ, ಅಶೋಕವೃಕ್ಷವು ಮಾತನಾಡುವುದೇ?

ಭ್ರಾಂತಳಾದ, ಅತಿದುಃಖಿತೆಯಾದ ದಮಯಂತಿಯು ಆ ಅಶೋಕ ವೃಕ್ಷವನ್ನೇ ಪ್ರದಕ್ಷಿಣೆಮಾಡಿ, ಅಲ್ಲಿಂದ ಮುಂದೆ ಘೋರತರವಾದ ಮಹಾ ಅರಣ್ಯವನ್ನು ಪ್ರವೇಶಿಸಿದಳು.

ಭೀಮರಾಜಕುಮಾರಿಯು ನಿಬಿಡವಾದ ಘೋರಾರಣ್ಯದಲ್ಲಿ ನಲನನ್ನು ಅರಸಿಕೊಂಡು ನಡೆದು ಹೋಗುತ್ತಿದ್ದಾಗ–ಅನೇಕಾನೇಕ ವೃಕ್ಷಗಳನ್ನೂ, ನದೀ-ನದ-ಸರೋವರಗಳನ್ನೂ, ಪರ್ವತ-ಗಿರಿ-ದುರ್ಗಗಳನ್ನೂ, ಸಿಂಹ-ವ್ಯಾಘ್ರ-ವರಾಹಗಳನ್ನೂ, ಸಾರಂಗಾದಿ ಸಾಧುಪ್ರಾಣಿಗಳನ್ನೂ, ಕೋಕಿಲ-ಚಾತಕಾದಿ ಪಕ್ಷಿಗಳನ್ನೂ ಕಂಡಳು. ಹೀಗೆಯೇ ನಡೆದುಹೋಗುತ್ತಿದ್ದಾಗ ದಮಯಂತಿಗೆ ಒಂದು ಮಾರ್ಗವು ಸಿಕ್ಕಿತು. ಆ ಮಾರ್ಗದಲ್ಲಿಯೇ ಆನೆ-ಕುದುರೆಗಳಿಂದ ಕೂಡಿದ್ದ ವರ್ತಕರ ತಂಡವೊಂದು ಒಂದು ನದಿಯನ್ನು ದಾಟುತ್ತಿರುವುದನ್ನು ಕಂಡಳು. ಆ ನದಿಯಾದರೋ ರಮ್ಯವಾಗಿಯೂ, ನಿರ್ಮಲವಾದ ಮತ್ತು ಸಮೃದ್ಧವಾದ ನೀರುಳ್ಳದ್ದಾಗಿಯೂ ಇದ್ದಿತು. ಅದರ ಪಾತ್ರವು ಬಹಳ ವಿಸ್ತಾರವಾಗಿದ್ದಿತು. ದಂಡೆಯಲ್ಲಿ ಅನೇಕ ಲತಾ ಗುಲ್ಮಗಳಿದ್ದುವು. ಆ ಲತಾಗುಲ್ಮಗಳಲ್ಲಿ ಕ್ರೌಂಚ-ಕುರರ-ಚಕ್ರವಾಕಪಕ್ಷಿಗಳಿದ್ದು ಕ್ಷಣ-ಕ್ಷಣಕ್ಕೂ ಇಂಪಾಗಿ ಧ್ವನಿಮಾಡುತ್ತಿದ್ದುವು. ಆ ನದಿಯಲ್ಲಿ ಅನೇಕಾನೇಕ ಆಮೆಗಳೂ, ಮೊಸಳೆಗಳೂ, ನಾನಾಜಾತಿಯ ಮೀನುಗಳೂ ಇದ್ದುವು. ಅದರ ಮಧ್ಯದಲ್ಲಿ ಸಣ್ಣ-ಸಣ್ಣ ದ್ವೀಪಗಳಿದ್ದುವು. ಅಂತಹ ನಯನ ಮನೋಹರವಾದ ನದಿಯ ತೀರದಲ್ಲಿ ತಂಗಿದ್ದ ವರ್ತಕರ ಸಮೂಹವನ್ನು ಕಂಡೊಡನೆಯೇ ನಲನ ಪತ್ನಿಯಾದ, ಸುಂದರಾಂಗಿಯಾದ ದಮಯಂತಿಯು ವರ್ತಕರ ಬಳಿಗೆ ಧಾವಿಸಿದಳು. ಶೋಕಾರ್ತಳಾಗಿದ್ದ, ನಖ-ಶಿಖಾಂತವಾಗಿ ಧೂಳಿನಿಂದ ಆಚ್ಛಾದಿತೆಯಾಗಿದ್ದ ದಮಯಂತಿಯು ನಿಶ್ಚಯವಾಗಿಯೂ ಹುಚ್ಚಿಯಂತೆಯೇ ಕಾಣುತ್ತಿದ್ದಳು. ಅವಳನ್ನು ನೋಡಿದೊಡನೆಯೇ ಆ ವರ್ತಕರಲ್ಲಿ ಕೆಲವರು ಭಯಪಟ್ಟು ಓಡಿಬಿಟ್ಟರು. ಮತ್ತೆ ಕೆಲವರು ಗಟ್ಟಿಯಾಗಿ ಕಿರುಚಿಕೊಂಡರು. ಕೆಲವರು ಅವಳನ್ನು

ಹೊಡೆಯಲೂ ಹೋದರು. ಸಭ್ಯರಾದ ಕೆಲವು ವರ್ತಕರು ಅವಳ ಅವಸ್ಥೆ ಯನ್ನು ಕಂಡು ಕನಿಕರದಿಂದ ಹತ್ತಿರ ಕರೆದು ಕೇಳಿದರು :

"ಕಲ್ಯಾಣಿ! ನೀನಾರು? ಮತ್ತು ಯಾರವಳು? ಈ ಘೋರಾರಣ್ಯದಲ್ಲಿ ಏನನ್ನು ಹುಡುಕುತ್ತಿರುವೆ? ನಿನ್ನ ಅವಸ್ಥೆಯನ್ನು ಕಂಡು ನಾವು ಬಹಳ ದುಃಖಿತರಾಗಿದ್ದೇವೆ. ನೀನು ಮನುಷ್ಯಳೇ? ನಿಶ್ಚಯವಾಗಿ ಹೇಳು. ವನದೇವತೆಯೇ? ಅಥವಾ ದಿಕ್ಕಿನ ಅಧಿದೇವತೆಯೇ? ರಾಕ್ಷಸಿಯೇ? ಅಥವಾ ಅಪ್ಸರಸ್ತ್ರೀಯೇ? ಯಾರೆಂಬುದನ್ನು ಮರೆಮಾಚದೇ ಹೇಳುವವಳಾಗು. ಅಕಳಂಕಳೇ! ನೀನು ಯಾರೇ ಆಗಿದ್ದರೂ ನಮಗೆ ಕಲ್ಯಾಣವನ್ನುಂಟುಮಾಡು. ನಮ್ಮನ್ನು ರಕ್ಷಿಸು. ನಾವು ಇಲ್ಲಿಂದ ಹೊರಟು ಕ್ಷೇಮವಾಗಿ ನಮ್ಮ ದೇಶವನ್ನು ತಲುಪುವಂತೆ ಅನುಗ್ರಹಿಸು. ನಮಗೆ ಶ್ರೇಯಸ್ಸು ಲಭಿಸುವಂತೆ ಮಾಡು."

ವರ್ತಕರು ಹೇಳಿದ ಮಾತುಗಳನ್ನು ಕೇಳಿ ಭೀಮರಾಜನಂದಿನಿಯಾದ, ಸಾಧ್ವಿಯಾದ, ಪತಿವಿರಹಪೀಡಿತಳಾದ ದಮಯಂತಿಯು ವರ್ತಕಪ್ರಮುಖ ನನ್ನೂ, ವರ್ತಕರನ್ನೂ, ಅವರ ಪರಿವಾರದಲ್ಲಿದ್ದ ಬಾಲಕರನ್ನೂ ಮತ್ತು ವೃದ್ಧರನ್ನೂ ಸಂಬೋಧಿಸಿ ಹೇಳಿದಳು :

"ಇಲ್ಲಿ ಉಪಸ್ಥಿತರಾಗಿರುವ ನೀವೆಲ್ಲರೂ ನನ್ನ ಮಾತನ್ನು ಕೇಳಿರಿ. ನಾನು ಯಕ್ಷಿಯೂ ಅಲ್ಲ; ರಾಕ್ಷಸಿಯೂ ಅಲ್ಲ; ದೇವತೆಯೂ ಅಲ್ಲ. ನಾನೂ ನಿಮ್ಮಂತೆಯೇ ಮನುಷ್ಯಮಾತ್ರಳು. ನಾನೊಬ್ಬ ರಾಜನ ಮಗಳು. ರಾಜನ ಸೊಸೆಯು ಮತ್ತು ರಾಜನೊಬ್ಬನ ಧರ್ಮಪತ್ನಿಯೂ ಆಗಿದ್ದೇನೆ. ನಿಮಗೆ ನಾನಾರೆಂಬ ವಿಷಯವನ್ನು ಇನ್ನೂ ಸ್ಪಷ್ಟವಾಗಿಯೇ ಹೇಳುವೆನು; ಕೇಳಿರಿ. ವಿದರ್ಭದೇಶಕ್ಕೊಡೆಯನಾದ ಭೀಮರಾಜನ ಮಗಳು ನಾನು. ನಿಷಧಾಧಿಪತಿಯಾಗಿದ್ದ ವೀರಸೇನನ ಸೊಸೆ. ವೀರಸೇನನ ವೀರಕುಮಾರ ನಾದ ನಿಷಧಾಧಿಪತಿಯಾದ ನಲನೇ ನನ್ನ ಪತಿ. ಅಪರಾಜಿತನಾದ ಆ ನಲ ರಾಜನನ್ನು ಹುಡುಕುತ್ತಾ ಈ ಅರಣ್ಯದಲ್ಲಿ ಸುತ್ತಾಡುತ್ತಿದ್ದೇನೆ. ನೀವೇನಾ ದರೂ ಆ ನಲರಾಜನನ್ನು ಕಂಡಿರುವಿರಾದರೆ, ದಯೆಯಿಟ್ಟು ಅವನನ್ನು ಎಲ್ಲಿ ಕಂಡಿರಿ? ಯಾವಾಗ ಕಂಡಿರಿ?–ಎಂಬುದನ್ನು ಒಡನೆಯೇ ಹೇಳಿರಿ.

ಪುರುಷವ್ಯಾಘ್ರನಾದ, ಶತ್ರುಸಂಹಾರಕನಾದ ಆ ನಲನನ್ನು ನಿಶ್ಚಯವಾಗಿಯೂ ನೀವು ನೋಡಿರುವಿರಾ?"

ದಮಯಂತಿಯ ವೇದನಾಯುಕ್ತವಾದ ಆ ಮಾತುಗಳನ್ನು ಕೇಳಿ 'ಶುಚಿ' ಎಂಬ ಹೆಸರಿನ ವರ್ತಕರ ನಾಯಕನು ದಮಯಂತಿಯನ್ನು ಕುರಿತು ಹೇಳಿದನು:

"ಶುಚಿಸ್ಮಿತೇ! ನಾನೇ ಈ ವರ್ತಕರ ಸಮೂಹಕ್ಕೆ ನಾಯಕ ನಾಗಿರುವೆನು. ಯಶಸ್ವಿನಿ! ನೀನು ಹೇಳಿದ ನಲನನ್ನು ನಾನು ಇದುವರೆಗೂ ಈ ಕಾಡಿನಲ್ಲಿ ಕಂಡಿರುವುದಿಲ್ಲ. ಈ ಘೋರಾರಣ್ಯವು ಕಾಡಾನೆಗಳಿಂದಲೂ, ತೋಳಗಳಿಂದಲೂ, ಕರಡಿಗಳಿಂದಲೂ, ಕಾಡುಕೋಣಗಳಿಂದಲೂ, ಹುಲಿ-ಚಿರತೆಗಳಿಂದಲೂ ನಿಬಿಡವಾಗಿರುವುದು. ಇಂತಹ ದುಷ್ಟಪ್ರಾಣಿಗಳಿಂದ ನಿಬಿಡವಾಗಿರುವ ಈ ಅರಣ್ಯವು ಮನುಷ್ಯಸಂಚಾರಕ್ಕೂ ಯೋಗ್ಯವಾಗಿರುವುದಿಲ್ಲ. ನಿನ್ನೊಬ್ಬಳ ಹೊರತಾಗಿ ನಾವು ಯಾವ ಮನುಷ್ಯ ನನ್ನೂ ಈ ಅರಣ್ಯದಲ್ಲಿ ನೋಡಲಿಲ್ಲ. ಯಕ್ಷರಾಜನಾದ ಮಣಿಭದ್ರನು ಪ್ರಸನ್ನನಾಗಿ ನಮ್ಮೆಲ್ಲರನ್ನೂ ರಕ್ಷಿಸಲಿ."

ವರ್ತಕರ ನಾಯಕನಾದ ಶುಚಿಯು ಹೇಳಿದ ಮಾತುಗಳನ್ನು ಕೇಳಿ ದಮಯಂತಿಯು ಪುನಃ ಅವನನ್ನು ಪ್ರಶ್ನಿಸಿದಳು :

"ವಣಿಕ್‌ಶ್ರೇಷ್ಠರೇ! ನೀವು ನಿಮ್ಮ ಸರಕುಗಳನ್ನು ತೆಗೆದುಕೊಂಡು ವ್ಯಾಪಾರಕ್ಕಾಗಿ ಯಾವ ದೇಶಕ್ಕೆ ಹೋಗುತ್ತಿರುವಿರಿ?"

"ಶುಭಾಂಗಿ! ನಾವು ಲಾಭಗಳಿಸುವ ಸಲುವಾಗಿ ಸತ್ಯದರ್ಶಿಯಾದ ಸುಬಾಹುವಿನ ರಾಜ್ಯವಾದ ಚೇದಿದೇಶದ ಕಡೆಗೆ ಹೋಗುತ್ತಿದ್ದೇವೆ."

ಅಳನೆಯ ಅಧ್ಯಾಯವು ಮುಗಿಯಿತು.

## ಮದಿಸಿದ ಆನೆಗಳಿಂದ ವ್ಯಾಪಾರಿಗಳ ಸರ್ವವಸ್ತುವಿನಾಶ : ಚೇದಿರಾಜನ ಅರಮನೆಯಲ್ಲಿ ದಮಯಂತಿಯ ಸುಖನಿವಾಸ

ಬೃಹದಶ್ವರು ಹೇಳುತ್ತಾರೆ :

**ಸಾ ತಚ್ಛ್ರುತ್ವಾನವದ್ಯಾಙ್ಗೀ ಸಾರ್ಥವಾಹವಚಸ್ತದಾ ।**
**ಜಗಾಮ ಸಹ ತೇನೈವ ಸಾರ್ಥೇನ ಪತಿಲಾಲಸಾ ॥೧॥**

"ಧರ್ಮಜ! ವರ್ತಕರ ನಾಯಕನು ಹೇಳಿದ ಮಾತುಗಳನ್ನು ಕೇಳಿ ಅಕಳಂಕಳಾದ ದಮಯಂತಿಯು ಪತಿಯನ್ನು ಕಾಣುವ ಆಶಯದಿಂದ ಅವರ ಜೊತೆಯಲ್ಲಿಯೇ ತಾನೂ ಚೇದೀದೇಶದ ಕಡೆ ಹೊರಟಳು. ಕೆಲವು ದಿನಗಳು ಪ್ರಯಾಣಮಾಡಿದನಂತರ ವರ್ತಕರು ಕಾಡಿನ ಮಧ್ಯದಲ್ಲಿರುವ ಒಂದು ದಿವ್ಯವಾದ ಸರೋವರದ ಬಳಿಗೆ ಬಂದರು. ಆ ಸರೋವರವು ನೋಡಲು ಬಹಳ ಸುಂದರವಾಗಿದ್ದಿತು. ಸರೋವರದ ಸುತ್ತಲೂ ಹುಲ್ಲು, ಸೌದೆ ಮತ್ತು ಹೂ-ಹಣ್ಣುಗಳು ಅಪರಿಮಿತವಾಗಿದ್ದುವು. ಅನೇಕವಿಧವಾದ ಪಕ್ಷಿಗಳು ಅಲ್ಲಿ ವಾಸವಾಗಿದ್ದುವು. ಸರೋವರದ ನೀರು ನಿರ್ಮಲವಾಗಿಯೂ, ಸ್ವಾದುವಾಗಿಯೂ, ಶೀತಲವಾಗಿಯೂ ಇದ್ದಿತು. ಮಾರ್ಗಾಯಾಸದಿಂದ ಪರಿಶ್ರಾಂತರಾಗಿದ್ದ ವರ್ತಕರು ಆ ದಿವ್ಯಸರೋವರದ ದಂಡೆಯಲ್ಲಿ ತಂಗಿ ವಿಶ್ರಮಿಸಿಕೊಳ್ಳಲು ನಿಶ್ಚಯಿಸಿದರು. ತಮ್ಮ ನಾಯಕನ ಅನುಮತಿಯನ್ನು ಪಡೆದು ಸರೋವರದ ಪಶ್ಚಿಮದಿಕ್ಕಿನ ಕಾಡಿನಲ್ಲಿ ವರ್ತಕರು ಬಿಡಾರಮಾಡಿದರು. ಆ ವೇಳೆಗಾಗಲೇ ರಾತ್ರಿಯಾಗಿದ್ದುದರಿಂದ ಎಲ್ಲರೂ ಮಲಗಿ ನಿದ್ರಿಸಿದರು. ಅರ್ಧರಾತ್ರಿಯಾಯಿತು. ಎಲ್ಲೆಡೆಗಳಲ್ಲಿಯೂ ನಿಶ್ಶಬ್ದತೆಯಿದ್ದಿತು. ವರ್ತಕರು ಗಾಢನಿದ್ರೆಯಲ್ಲಿದ್ದರು. ಆ ಸಮಯಕ್ಕೆ ಸರಿಯಾಗಿ ಮದಿಸಿದ ಆನೆಗಳ ಗುಂಪೊಂದು ಮದೋದಕವನ್ನು ಕಪೋಲಗಳಿಂದ ಸುರಿಸುತ್ತಾ, ಗಿರಿಯ ಸಮೀಪದಲ್ಲಿದ್ದ ನದಿಯಲ್ಲಿ ನೀರು ಕುಡಿಯುವ ಸಲುವಾಗಿ ಬರುತ್ತಿದ್ದಿತು. ಆದರೆ ಮಾರ್ಗಮಧ್ಯದಲ್ಲಿ ಕಾಡಾನೆಗಳ ಸಮೂಹವು ವರ್ತಕರ ಸಮೀಪದಲ್ಲಿದ್ದ ಊರಾನೆಗಳನ್ನು ಕಂಡಿತು. ಅವುಗಳನ್ನು ನೋಡಿದೊಡನೆಯೇ ಕೋಪಗೊಂಡ ಕಾಡಾನೆಗಳು ಊರಾನೆಗಳನ್ನು ಧ್ವಂಸ

ಮಾಡುವ ಸಲುವಾಗಿ ಮದೋದಕವನ್ನು ಸುರಿಸುತ್ತಾ ವರ್ತಕರ ಸಮೀಪ ದಲ್ಲಿದ್ದ ಆನೆಗಳ ಬಳಿಗೆ ಧಾವಿಸಿದುವು. ಕಳಚಿಹೋದ ಪರ್ವತದ ಶಿಖರ ಗಳು ರಭಸದಿಂದ ಭೂಮಿಯ ಮೇಲೆ ಬೀಳುವಂತೆ–ಕಾಡಾನೆಗಳು ರಭಸ ದಿಂದ ಊರಾನೆಗಳ ಕಡೆಗೆ ನುಗ್ಗಿದುವು. ಅವುಗಳು ರಭಸದಿಂದ ಹೋಗು ತ್ತಿದ್ದ ಮಾರ್ಗದಲ್ಲಿಯೇ ವರ್ತಕರು ತಮ್ಮ ಹೇರಳವಾದ ವಸ್ತುಗಳನ್ನಿಟ್ಟಿ



ದ್ದರು. ಆ ವಸ್ತುಗಳಿಂದುಂಟಾದ ತಡೆಯು ಆನೆಗಳ ಕೋಪವನ್ನು ಮತ್ತಷ್ಟು ಕೆರಳಿಸಿತು. ಒಡನೆಯೇ ಕಾಡಾನೆಗಳು ರಭಸದಿಂದ ವರ್ತಕರು ಹಾಕಿದ್ದ ಗುಡಾರಗಳೆಲ್ಲವನ್ನೂ ಕ್ಷಣಮಾತ್ರದಲ್ಲಿ ಧ್ವಂಸಮಾಡಿ ಮಲಗಿದ್ದ ಅನೇಕ ವರ್ತಕರ ಮೇಲೆ ಕಾಲಿಟ್ಟು ಅವರನ್ನು ಸೀಳಿಬಿಟ್ಟುವು. ಅವರ ಸರಕುಗಳೆಲ್ಲವೂ ಕ್ಷಣಮಾತ್ರದಲ್ಲಿ ನಾಶವಾಗಿ ಹೋದುವು. ಆನೆಗಳ

ಗಲಾಟೆಯಿಂದ ಎಚ್ಚೆತ್ತ ಕೆಲವು ವರ್ತಕರು 'ಅಯ್ಯೋ', 'ಅಯ್ಯೋ' ಎಂದು ಕಿರುಚಿಕೊಳ್ಳುತ್ತಾ ರಕ್ಷಣೆಗಾಗಿ ಅರಣ್ಯದ ಕಡೆಗೆ ಧಾವಿಸಿದರು. ಆ ಆನೆಗಳು ಅಷ್ಟಕ್ಕೇ ಸುಮ್ಮನಾಗಲಿಲ್ಲ. ವರ್ತಕರ ಅನೇಕ ಕುದುರೆಗಳನ್ನೂ, ಒಂಟೆಗಳನ್ನೂ ಕೊಂದುಹಾಕಿದುವು. ಅಳಿದುಳಿದ ಕೆಲವು ವರ್ತಕರು ಭೀತಿಯಿಂದ ನಡೆಯಲು ಕೂಡ ಸಾಧ್ಯವಾಗದೇ ತತ್ತರಿಸುತ್ತಾ ಅಲ್ಲಿಯೇ ಬಿದ್ದು ಪ್ರಜ್ಞಾಹೀನರಾದರು. ಮತ್ತೆ ಕೆಲವರು ಮರಗಳನ್ನೇರಿ ಕುಳಿತರು. ಹಳ್ಳಗಳಲ್ಲಿ ಬಚ್ಚಿಟ್ಟುಕೊಂಡರು. ಧರ್ಮಜ! ಆಕಸ್ಮಿಕವಾಗಿ ಪ್ರಾಪ್ತವಾದ ಆ ಘಟನೆಯಿಂದಾಗಿ ಅನೇಕ ವರ್ತಕರು ಮಡಿದರಲ್ಲದೆ–ಅನೇಕರಿಗೆ ಬಹಳ ನಷ್ಟವೂ ಉಂಟಾಯಿತು. ಆ ಸಮಯದಲ್ಲಿ ವರ್ತಕರ ಕೂಗು ನಿಶ್ಚಯವಾಗಿಯೂ ಆಕಾಶವನ್ನೇ ಭೇದಿಸುವುದಾಗಿದ್ದಿತು. "ಅಯ್ಯೋ! ಬೆಂಕಿಯು ಹತ್ತಿಬಿಟ್ಟಿದೆ. ನಮ್ಮನ್ನು ರಕ್ಷಿಸಿರಿ!" "ನೀವು ಬೇಗ ಓಡಿರಿ!" "ಏಕೆ ಓಡುವಿರಿ? ಕೆಳಗೆ ಚೆಲ್ಲಿಹೋಗಿರುವ ರತ್ನಗಳನ್ನಾರಿಸಿರಿ" "ರತ್ನವೂ ಬೇಡ ; ಹಣವೂ ಬೇಡ. ಜೀವವೊಂದುಳಿದರೆ ಸಾಕಾಗಿದೆ." "ನಾನಾಗಲೇ ಹೇಳಿಲ್ಲವೇ? ಆಪತ್ತೊಂದು ಕಾದಿದೆಯೆಂಬುದನ್ನು!" ಹೀಗೆಲ್ಲಾ ಕೂಗಿಕೊಳ್ಳುತ್ತಾ ವರ್ತಕರು ಭ್ರಾಂತರಾಗಿ ಅತ್ತಲಿತ್ತ ಓಡಾಡುತ್ತಿದ್ದರು. ಆ ಸಮಯಕ್ಕೆ ಸರಿಯಾಗಿ ದಮಯಂತಿಗೂ ಎಚ್ಚರವಾಯಿತು. ಹಾಹಾಕಾರ ಶಬ್ದಗಳನ್ನು ಕೇಳಿ ಭೀತ-ಭೀತಳಾಗಿ ಮೇಲೆದ್ದಳು. ಪ್ರಪಂಚಕ್ಕೇ ಭೀತಿಯನ್ನುಂಟುಮಾಡುವ ದಾರುಣವಾದ ದೃಶ್ಯವನ್ನು ಕಂಡಳು. ಅಂತಹ ಭಯಾನಕದೃಶ್ಯವನ್ನೇ ದಮಯಂತಿಯು ಹಿಂದೆಂದೂ ಕಂಡಿರಲಿಲ್ಲ. ಭಯವಿಹ್ವಲಳಾದ ದಮಯಂತಿಯು ಕಂದಿದ ಮುಖದಿಂದ ಕೂಡಿದವಳಾಗಿ ಅಳಿದುಳಿದಿದ್ದ ವರ್ತಕರು ನಿಂತಿದ್ದ ಕಡೆಗೆ ತಾನೂ ಬಂದು ನಿಂತಳು. ಆ ವರ್ತಕರು ಪರಸ್ಪರವಾಗಿ ಮಾತನಾಡಿಕೊಳ್ಳುತ್ತಿದ್ದರು :

"ನಾವು ಮಾಡಿದ ಯಾವ ಮಹಾಪರಾಧಕ್ಕಾಗಿ ಇಂದು ಈ ಶಿಕ್ಷೆಯನ್ನನುಭವಿಸಬೇಕಾಯಿತೋ ತಿಳಿಯದಲ್ಲಾ! ನಿಶ್ಚಯವಾಗಿಯೂ ನಾವು ನಮ್ಮ ಸ್ವಾಮಿಯಾದ ಮಣಿಭದ್ರನನ್ನೂ–ಕುಬೇರನನ್ನೂ ಚೆನ್ನಾಗಿ ಆರಾಧಿಸಿರುವುದಿಲ್ಲ. ಈ ಕಾರಣದಿಂದಲೇ ನಾವಿಂದು ಈ ಆಘಾತಕ್ಕೆ ಸಿಕ್ಕಿ

ಕೊಳ್ಳಬೇಕಾಯಿತು. ಅಥವಾ ಇಂತಹ ಆಘಾತಗಳ ಅಧಿದೇವತೆಗಳನ್ನು ನಾವು ಪೂಜಿಸದಿರುವ ಕಾರಣದಿಂದ ಮತ್ತು ಆ ದೇವತೆಗಳಿಗೆ ಬಲಿಗಳನ್ನು ಕೊಡದ ಕಾರಣದಿಂದಾಗಿಯಾದರೂ ಈ ವಿಪತ್ತು ನಮಗುಂಟಾಗಿರಬಹುದು."

ಮತ್ತೊಬ್ಬನು ಹೇಳಿದನು :

"ನನಗೆ ಹೀಗೆನ್ನಿಸುತ್ತದೆ. ನಾವು ಪ್ರಯಾಣಹೊರಟಾಗ ಕೆಲವು ಪಕ್ಷಿಗಳು ನಮ್ಮೆದುರಾಗಿ ಹಾರಿಬಂದುವು. ಅದರಿಂದೇನಾದರೂ ಈ ಆಘಾತವು ನಮಗೆ ಪ್ರಾಪ್ತವಾಯಿತೋ?"

"ಇದಾವುದೂ ಕಾರಣವೆಂದು ನನಗನ್ನಿಸುವುದಿಲ್ಲ. ನಾವು ಪ್ರಯಾಣ ಹೊರಟ ನಕ್ಷತ್ರವು ಕೆಟ್ಟ ನಕ್ಷತ್ರವೆಂದು ನಾನು ಭಾವಿಸುತ್ತೇನೆ."

ಬಂಧು-ಮಿತ್ರರನ್ನೂ, ಅಪಾರವಾದ ಐಶ್ವರ್ಯವನ್ನೂ ಕಳೆದುಕೊಂಡ ಒಬ್ಬ ವರ್ತಕನು ಹೇಳಿದನು :

"ನಮಗೊದಗಿರುವ ಈ ವಿಪತ್ತಿಗೆ ಕಾರಣವು ನಮ್ಮ ಕಣ್ಣೆದುರಿನಲ್ಲಿಯೇ ಇರುವಾಗ ಬೇರೆಯ ಕಾರಣವನ್ನೇಕೆ ಊಹಿಸುವಿರಿ? ಹುಚ್ಚಿಯಂತೆ ನಮ್ಮ ಸಮೂಹದಲ್ಲಿ ಬಂದು ಸೇರಿಕೊಂಡಿರುವ ಆ ಹೆಂಗಸೇ ನಮ್ಮ ಈ ವಿಪತ್ತಿಗೆ ಕಾರಣವೆಂದು ನಾನು ನಿರ್ಧರಿಸಿ ಹೇಳುತ್ತೇನೆ. ಅವಳು ಖಂಡಿತವಾಗಿಯೂ ಮನುಷ್ಯಳಲ್ಲ ; ಮಾಯಾವಿನೀ. ಅವಳ ಮಾಯೆಯಿಂದಾಗಿಯೇ ನಮಗಿಂದು ಈ ಅಪಾರವಾದ ನಷ್ಟವುಂಟಾಗಿರುವುದು. ಅವಳು ನಿಶ್ಚಯವಾಗಿಯೂ ಯಕ್ಷಿಯೋ, ರಾಕ್ಷಸಿಯೋ, ಪಿಶಾಚಿಯೋ ಆಗಿರಬೇಕು. ಮನುಷ್ಯಳಂತೂ ಅಲ್ಲ. ಇವಳ ವಿರೂಪವನ್ನು ನೋಡಿದರೇ ಕಾಣುವುದಿಲ್ಲವೇ? ನಮಗೆ ಈ ಮಹಾವಿಪತ್ತನ್ನುಂಟುಮಾಡಿರುವ ಮಹಾ ಪಾಪಿಷ್ಠೆಯಾದ ಅವಳನ್ನು ನಾವೇನಾದರೂ ಪುನಃ ಕಂಡರೆ ಕಲ್ಲಿನಿಂದಲೂ, ಹೆಂಟೆಗಳಿಂದಲೂ, ಮುಷ್ಟಿಗಳಿಂದಲೂ, ಕಟ್ಟಿಗೆಯಿಂದಲೂ ಹೊಡೆದು ಸಾಯಿಸಬೇಕು. ಅವಳನ್ನು ಹಾಗೆಯೇ ಬಿಟ್ಟುಬಿಟ್ಟರೆ ನಮ್ಮ ಸರ್ವವಿನಾಶ ವಾಗುವುದು."

ಅವರ ಮಾತುಗಳನ್ನು ವೃಕ್ಷದ ಮರೆಯಲ್ಲಿ ನಿಂತು ಕೇಳುತ್ತಿದ್ದ

ದಮಯಂತಿಗೆ ಭಯವಾಯಿತು; ನಾಚಿಕೆಯೂ ಆಯಿತು. ತಾನಲ್ಲಿ ನಿಲ್ಲುವುದು ಅಪಾಯವೆಂದು ನಿಶ್ಚಯಿಸಿ ಅರಣ್ಯದ ಕಡೆ ಓಡಿದಳು. ಯಾರಿಗೂ ಕಾಣದ ಗೂಢವಾದ ಸ್ಥಳಕ್ಕೆ ಧಾವಿಸಿ ತನಗೆ ತಾನೇ ಹೇಳಿಕೊಂಡಳು :

"ದುರ್ವಿಧಿಯೇ! ದೈವವು ನಿಶ್ಚಯವಾಗಿಯೂ ನನ್ನ ಮೇಲೆ ಬಹಳ ಕೋಪಗೊಂಡಿರುವುದು. ನಾನೆಲ್ಲಿಗೇ ಹೋದರೂ ನನಗೆ ಶಾಂತಿಯು ಸಿಗದಾಗಿದೆ. ಈ ವಿಧವಾದ ಕಷ್ಟಗಳನ್ನನುಭವಿಸಲು ನಾನು ಮಾಡಿರುವ ಅಪರಾಧವಾದರೂ ಏನಿರಬಹುದು? ನನಗೆ ಸ್ಮರಣೆಯಲ್ಲಿರುವಂತೆ ಮನಸಾ-ವಾಚಾ-ಕರ್ಮಣಾ ನಾನು ಯಾರೊಬ್ಬರಿಗೂ, ಯಾವ ಕಾಲದಲ್ಲಿಯೂ, ಯಾವ ಅಪರಾಧವನ್ನೂ ಮಾಡಿರುವುದಿಲ್ಲ. ಹೀಗಿರುವಾಗ ಯಾವ ಕಾರಣದಿಂದಾಗಿ ನಾನಿಷ್ಟೊಂದು ಕಷ್ಟಗಳನ್ನು ಅನುಭವಿಸಬೇಕಾಗಿದೆ? ನಿಜ!

**ನೂನಂ ಜನ್ಮಾನ್ತರಕೃತಂ ಪಾಪಮಾಪತಿತಂ ಮಹತ್ ।**
**ಅಪಶ್ಚಿಮಾಮಿಮಾಂ ಕಷ್ಟಾಮಾಪದಂ ಪ್ರಾಪ್ತವತ್ಯಹಮ್ ॥೩೩॥**

ನಾನು ನನ್ನ ಹಿಂದಿನ ಜನ್ಮದಲ್ಲಿ ಮಾಡಿರಬಹುದಾದ ಮಹಾಪಾಪಗಳ ರಾಶಿಯೇ ನನ್ನ ಮೇಲೆ ಬಿದ್ದಿದೆ. ಅದರ ಪರಿಣಾಮವಾಗಿಯೇ ನಾನಿಂದು ಈ ಅಪಾರವಾದ ಕಷ್ಟಗಳನ್ನು ಅನುಭವಿಸುತ್ತಿದ್ದೇನೆ. ನನ್ನ ಪತಿಯು ರಾಜ್ಯವನ್ನು ಕಳೆದುಕೊಂಡುದು ; ಅವನು ತನ್ನ ದಾಯಾದನಿಂದಲೇ ಪಗಡೆಯಾಟದಲ್ಲಿ ಪರಾಜಿತನಾದುದು ; ನಾನು ಸುತ-ಸುತೆಯರನ್ನು ಅಗಲಿ, ಕಟ್ಟಕಡೆಗೆ ಪತಿಯನ್ನೂ ಅಗಲಿದುದು ; ಈಗ ಈ ಮೃಗಾಶ್ರಯವಾದ ಅರಣ್ಯದಲ್ಲಿ ಆಶ್ರಯರಹಿತಳಾಗಿ ಅಲೆದಾಡುತ್ತಿರುವುದು–ಇವೆಲ್ಲವೂ ನನ್ನ ಪೂರ್ವಜನ್ಮದ ಕರ್ಮಪರಿಪಾಕವೇ ಇರಬೇಕು."

ಧರ್ಮಜ! ಮರುದಿನ ಬೆಳಿಗ್ಗೆ ಅಳಿದುಳಿದ ವರ್ತಕರು ಸತ್ತುಹೋದ ತಮ್ಮ ತಂದೆ, ಮಗ, ಅಳಿಯ, ಸೋದರ, ಮಿತ್ರ–ಇವರಿಗಾಗಿ ಶೋಕಿಸುತ್ತಾ, ನಾಶವಾಗದಿದ್ದ ಸರಕುಗಳನ್ನು ತುಂಬಿಕೊಂಡು ಮುಂದಕ್ಕೆ ಪ್ರಯಾಣ ಮಾಡಿದರು. ದಮಯಂತಿಯು ವರ್ತಕರೊಡನೆ ಬಂದಿದ್ದ ಬ್ರಾಹ್ಮಣರ ಗುಂಪಿನಲ್ಲಿ ಸೇರಿಕೊಂಡು ಪ್ರಯಾಣಮಾಡಿದಳು. ಪ್ರಯಾಣಮಾಡುತ್ತಿದ್ದಾ

ಗಲೂ, ಅವಳಿಗೆ ಹಿಂದಿನ ರಾತ್ರಿ ನಡೆದ ಮದಗಜಗಳ ಧ್ವಂಸಕ್ರಿಯೆಯು ಕಣ್ಣಿಗೆ ಕಟ್ಟಿದಂತಿತ್ತು. ಅದನ್ನೇ ಕುರಿತು ಯೋಚಿಸುತ್ತಿದ್ದಳು. "ಅಯ್ಯೋ ವಿಧಿಯೇ! ನಾನೇನು ಅಪರಾಧ ಮಾಡಿರುವೆನು? ನನಗೆ ಈ ಘೋರಾರಣ್ಯದಲ್ಲಿ ರಕ್ಷಣೆಯನ್ನಿತ್ತ ಅನೇಕ ಜನರು ಆನೆಗಳ ತುಳಿತಕ್ಕೆ ಸಿಕ್ಕಿ ಅಸುವನ್ನು ತೊರೆದರು. ನಿಶ್ಚಯವಾಗಿಯೂ ಇದು ನನ್ನ ದುರದೃಷ್ಟದಿಂದಲೇ ಉಂಟಾಗಿರಬೇಕು. ನಾನು ಇನ್ನೂ ಹೆಚ್ಚುಕಾಲ ಇದೇ ವಿಧವಾದ ಸಂಕಟವನ್ನು ಅನುಭವಿಸಿಯೇ ತೀರಬೇಕಾಗಿದೆ. ಇದು ನಿಶ್ಚಯ.

**ನಾಪ್ರಾಪ್ತಕಾಲೋ ಮ್ರಿಯತೇ ಶ್ರುತಂ ವೃದ್ಧಾನುಶಾಸನಮ್ ।**
**ಯಾ ನಾಹಮದ್ಯ ಮೃದಿತಾ ಹಸ್ತಿಯೂಥೇನ ದುಃಖಿತಾ ॥೬೯॥**

**ನ ಹ್ಯದೈವಕೃತಂ ಕಿಂಚಿನ್ನರಾಣಾಮಿಹ ವಿದ್ಯತೇ ।**
**ನ ಚ ಮೇ ಬಾಲಭಾವೇಽಪಿ ಕಿಂಚಿತ್ಪಾಪಕೃತಂ ಕೃತಮ್ ।**
**ಕರ್ಮಣಾ ಮನಸಾ ವಾಚಾ ಯದಿದಂ ದುಃಖಮಾಗತಮ್ ॥೭೦॥**

ವಿಧಿಯಿಂದ ನಿಯಮಿತವಾದ ಕಾಲವು ಪ್ರಾಪ್ತವಾಗುವವರೆಗೂ ಯಾರಿಗೂ ಸಾಯುವ ಸಾಧ್ಯತೆಯೇ ಇಲ್ಲವೆಂದು ಹಿರಿಯರು ಹೇಳುವುದನ್ನು ಕೇಳಿದ್ದೇನೆ. ಈ ಕಾರಣದಿಂದಲೇ ದುಃಖಿತೆಯಾದ ಮತ್ತು ಜೀವಿಸಿರುವುದೇ ಬೇಡವೆಂದು ನಿಶ್ಚಯಿಸಿರುವ ನನ್ನನ್ನು ಮದಗಜಗಳು ತುಳಿದು ಸಂಹರಿಸಲಿಲ್ಲ. ಆದುದರಿಂದ ಮನುಷ್ಯನಿಗೆ ಪ್ರಾಪ್ತವಾಗುವುದೆಲ್ಲವೂ ವಿಧಿನಿಶ್ಚಿತಗಳೇ ಆಗಿವೆ. ಸುಖ, ಕಷ್ಟ, ಮರಣ–ಇತ್ಯಾದಿಗಳು ಮನುಷ್ಯನ ಹತೋಟಿಗೆ ಸಿಕ್ಕ ತಕ್ಕುವುಗಳಲ್ಲ. ಏಕೆಂದರೆ : ನಾನು ನನ್ನ ಬಾಲ್ಯದಲ್ಲಿಯೂ ಮನಸಾ-ವಾಚಾ-ಕರ್ಮಣಾ ಯಾರಿಗೂ ಯಾವ ವಿಧವಾದ ತೊಂದರೆಯನ್ನೂ ಉಂಟು ಮಾಡಿದವಳಲ್ಲ. ಆದರೂ ನಾನಿಂದು ಇಂತಹ ದಾರುಣವಾದ ಕಷ್ಟವನ್ನು ಅನುಭವಿಸಬೇಕಾಗಿದೆ. (ಸ್ವಲ್ಪಕಾಲ ಹಿಂದಿನ ದಿನಗಳನ್ನು ಸ್ಮರಿಸಿಕೊಂಡು ದಮಯಂತಿಯು ಪುನಃ ತನಗೆ ತಾನೇ ಹೇಳಿಕೊಂಡಳು) ನಿಜ! ನಾನು ಯಾರಿಗೂ ಅಪಚಾರವೆಸಗದಿದ್ದರೂ ನಲನನ್ನು ಪಡೆಯುವ ಸಲುವಾಗಿ– ನನ್ನ ಸ್ವಯಂವರಕ್ಕಾಗಿ ಬಂದ ಲೋಕಪಾಲರನ್ನು ನಿರಾಕರಣೆ ಮಾಡಿದೆನು. ಪ್ರಾಯಶಃ ಅವರ ಪ್ರಭಾವದಿಂದಲೇ ನಾನಿಂದು ಪತಿಯನ್ನಗಲಿ ಈ ಘೋರಾ

ರಣ್ಯದಲ್ಲಿ ಅನಾಥಳಂತೆ ಸಂಚರಿಸಬೇಕಾಯಿತೆಂದು ತೋರುತ್ತದೆ."–ಇದೇ ಮುಂತಾಗಿ ಯೋಚಿಸುತ್ತಾ, ಪ್ರತಿಕ್ಷಣದಲ್ಲಿಯೂ ನಿಟ್ಟುಸಿರುಬಿಡುತ್ತಾ, ಕಂಬನಿಗರೆಯುತ್ತಾ ಪಾತಿವ್ರತ್ಯಪರಾಯಣೆಯಾದ ದಮಯಂತಿಯು– ವೇದ-ವೇದಾಂಗಪಾರಂಗತರಾದ ಬ್ರಾಹ್ಮಣರ ಜೊತೆಯಲ್ಲಿ ಶರತ್ಕಾಲದ ಚಂದ್ರನ ಪ್ರಭೆಯಂತೆ ಕಂಗೊಳಿಸುತ್ತಾ ಪ್ರಯಾಣಮಾಡಿದಳು. ಸಾಯಂಕಾಲದ ವೇಳೆಗೆ ಸತ್ಯನಿಷ್ಠನಾದ, ಚೇದಿಯ ರಾಜನಾದ ಸುಬಾಹುವಿನ ರಾಜಧಾನಿಗೆ ಆಗಮಿಸಿದಳು.

ಧರ್ಮಜ! ದಮಯಂತಿಯಿನ್ನೂ ಅರ್ಧವಸ್ತ್ರಧಾರಿಣಿಯಾಗಿಯೇ ಇರುವಳಲ್ಲವೇ! ಅರ್ಧವಸ್ತ್ರವನ್ನು ಧರಿಸಿ, ಕೆದರಿದ ಕೇಶರಾಶಿಯಿಂದ ಕೂಡಿ ದವಳಾಗಿ, ಭೀತ-ಭೀತಳಾಗಿ, ಕೃಶಳಾಗಿ, ದೀನಳಾಗಿ, ಧೂಳಿನಿಂದ ಕಲುಷಿತ ವಾದ ಶರೀರವುಳ್ಳವಳಾಗಿ, ಉನ್ಮತ್ತಳಂತೆ ರಾಜಮಾರ್ಗದಲ್ಲಿ ಹೆಂಗಸೊಬ್ಬಳು ಹೋಗುತ್ತಿದ್ದುದನ್ನು ಆ ನಗರದ ನಾಗರಿಕರು ನೋಡಿದರು. ಅವಳ ಆ ದುಃಸ್ಥಿತಿಯು ಬಾಲಕರಿಗೆ ಹಾಸ್ಯಪ್ರದವಾಗಿದ್ದಿತು. ಕುತೂಹಲಾವಿಷ್ಟರಾದ ಅನೇಕ ಬಾಲಕರು ಅವಳನ್ನನುಸರಿಸಿ ನಡೆದರು. ಕೇಕೆಹಾಕಿಕೊಂಡು ನಗುತ್ತಿದ್ದ ಬಾಲಕರಿಂದ ಪರಿವೃತಳಾದ ದಮಯಂತಿಯು ಮೆಲ್ಲ-ಮೆಲ್ಲನೆ ಹೆಜ್ಜೆಗಳನ್ನಿಡುತ್ತಾ ಅರಮನೆಯ ಮುಂಭಾಗಕ್ಕೆ ಬಂದಳು. ಅರಮನೆಯ ಮೇಲ್ಭಾವಣಿಯಲ್ಲಿದ್ದ ರಾಜಮಾತೆಯು ದಮಯಂತಿಯನ್ನು ನೋಡಿ ಒಡನೆಯೇ ತನ್ನ ಸೇವಕಿಯನ್ನು ಕರೆದು ಹೇಳಿದಳು :

"ಧಾತ್ರಿ! ನೀನೀಗಲೇ ಹೋಗಿ ಅರಮನೆಯ ಮುಂದೆ ನಿಂತಿರುವ ಆ ಸ್ತ್ರೀಯನ್ನು ಕರೆದುಕೊಂಡು ಬಾ. ಅವಳು ಬಹಳ ದುಃಖಿತೆಯಾಗಿರುವಂತೆ ಕಾಣುತ್ತಾಳೆ. ಆ ಬಾಲಕರು ಸುಮ್ಮನೆ ಅವಳನ್ನು ಕ್ಲೇಶಪಡಿಸುತ್ತಿದ್ದಾರೆ. ಅವಳು ನಮ್ಮಿಂದ ರಕ್ಷಣೆಪಡೆಯಲು ಇಲ್ಲಿಗೆ ಬಂದಿರುವಂತೆ ಕಾಣುತ್ತದೆ. ಅತ್ಯಂತದುಃಖಿತೆಯಾಗಿರುವ ಅವಳ ಮುಖವು ಕುಂದಿದ್ದರೂ ರೂಪವು ಅಸಾಧಾರಣವಾಗಿದೆ. ನಮ್ಮ ಅರಮನೆಯನ್ನು ತನ್ನ ಸೌಂದರ್ಯದ ಕಾಂತಿಯಿಂದ ಬೆಳಗುತ್ತಿರುವಂತೆ ಕಾಣುತ್ತಿದ್ದಾಳೆ. ತೋರಿಕೆಗೆ ಅವಳು ಹುಚ್ಚಿಯಂತಿದ್ದರೂ ವಿಶಾಲನೇತ್ರೆಯಾದ ಅವಳು ಸಾಕ್ಷಾತ್ ಲಕ್ಷ್ಮಿ

ಯಂತೆಯೇ ಕಾಣುತ್ತಾಳೆ. ಆದುದರಿಂದ ನೀನು ಒಡನೆಯೇ ಹೋಗಿ ಅವಳನ್ನು ಕರೆದುಕೊಂಡು ಬಾ."

ರಾಜಮಾತೆಯ ಆಜ್ಞಾನುಸಾರವಾಗಿ ಸೇವಕಿಯು ಒಡನೆಯೇ ದಮಯಂತಿಯಿದ್ದ ಸ್ಥಳಕ್ಕೆ ಹೋಗಿ, ಅವಳನ್ನು ಸುತ್ತುವರಿದು ನಿಂತಿದ್ದ ಜನರನ್ನು ಪಕ್ಕಕ್ಕೆ ಸರಿಸಿ, ದಮಯಂತಿಯ ಕೈಹಿಡಿದು ರಾಜಮಾತೆಯಿದ್ದ ಮೇಲ್ಮಾವಣಿಗೆ ಕರೆದೊಯ್ದಳು. ತನ್ನ ಸಮೀಪಕ್ಕೆ ಬಂದ ದಮಯಂತಿಯನ್ನು ಕಂಡು ರಾಜಮಾತೆಯು ಆಶ್ಚರ್ಯಭರಿತಳಾಗಿ ಹೇಳಿದಳು :



"ಶುಭಾಂಗಿ! ಹೀಗೆ ಇಷ್ಟು ಕಷ್ಟಗಳಿಗೆ ಗುರಿಯಾಗಿದ್ದರೂ ನೀನು ಶ್ರೇಷ್ಠವಾದ ಸುಂದರದೇಹವನ್ನು ಹೊಂದಿರುವೆ. ಕಪ್ಪಾದ ಮೋಡಗಳಲ್ಲಿ

ಮಿಂಚು ಬೆಳಗುವಂತೆ–ನೀನು ಅಪಾರವಾದ ಕಷ್ಟಗಳಿಂದ ಪೀಡಿತಳಾಗಿದ್ದರೂ ನಿನ್ನ ಸುಕೋಮಲವಾದ ಶರೀರಕಾಂತಿಯಿಂದ ಪ್ರಕಾಶಿಸುತ್ತಿರುವೆ. ಕಲ್ಯಾಣಿ! ಮಂಗಳಾಂಗಿ! 'ನೀನಾರು! ಯಾರವಳು?'–ಎಂಬುದೆಲ್ಲವನ್ನೂ ನಿಸ್ಸಂಕೋಚವಾಗಿ ನನ್ನೊಡನೆ ಹೇಳು. ನಿಶ್ಚಯವಾಗಿಯೂ ನಿನಗಿರುವುದು ಮಾನವಸೌಂದರ್ಯವಲ್ಲ. ದಿವ್ಯವಾದ ಸೌಂದರ್ಯದಿಂದ ನೀನು ಕೂಡಿದವ ಳಾಗಿರುವೆ. ಆಭರಣಗಳಿಲ್ಲದೇ ಇದ್ದರೂ ನಿನ್ನ ಸೌಂದರ್ಯವು ದಿವ್ಯವಾಗಿದೆ. ಅಮರಪ್ರಭೆಯುಳ್ಳವಳೇ! ನೀನು ಅಬಲೆಯಾಗಿದ್ದರೂ–ಅಸಹಾಯಕ ಳಾಗಿದ್ದರೂ ನಿನ್ನನ್ನು ಸುತ್ತುವರಿದು ನಿನಗ ಉಪಟಳಕೊಡುತ್ತಿದ್ದ ಬಾಲಕರನ್ನು ಲೆಕ್ಕಿಸದೆಯೇ ಧೈರ್ಯವಾಗಿ ನೀನು ಮುಂದೆ ಮುಂದೆ ನಡೆದು ಬರುತ್ತಿದ್ದುದನ್ನು ನಾನು ಕಂಡೆನು. ನೀನಾರೆಂಬುದನ್ನು ಸಂಕೋಚವಿಲ್ಲದೇ ಹೇಳು, ಮಗಳೇ!"

ರಾಜಮಾತೆಯ ಮಾತುಗಳನ್ನು ಕೇಳಿ ದಮಯಂತಿಯು ಯಥೋ ಚಿತವಾಗಿ ಉತ್ತರಿಸಿದಳು :

"ರಾಜಮಾತೆಯೇ! ನಾನು ಮನುಷ್ಯಜಾತಿಗೆ ಸೇರಿದ ಸ್ತ್ರೀಯಾಗಿ ದ್ದೇನೆ. ಯಾವಾಗಲೂ ನನ್ನ ಪತಿಯ ಹಿತಚಿಂತನೆಯಲ್ಲಿಯೇ ಆಸಕ್ತ ಳಾಗಿದ್ದೇನೆ. ನಾನು ಸೈರಂಧ್ರೀ. (ಅಂತಃಪುರದಲ್ಲಿ ರಾಣಿಯ ಅಥವಾ ರಾಜಕುಮಾರಿಯ ಸೇವೆ ಮಾಡುವವಳು.) ಇಚ್ಛೆಬಂದಲ್ಲಿ ನಾನು ವಾಸ ಮಾಡುತ್ತೇನೆ. ಕಂದ-ಮೂಲ-ಫಲಗಳನ್ನೇ ತಿಂದು ಜೀವಿಸುತ್ತೇನೆ. ನಾನು ಏಕಾಕಿನಿಯಾಗಿದ್ದೇನೆ. ಹಗಲೆಲ್ಲಾ ನಡೆಯುತ್ತಲಿದ್ದು ಎಲ್ಲಿ ಸಾಯಂಕಾಲ ವಾಗುವುದೋ ಅಲ್ಲಿಯೇ ತಂಗುತ್ತೇನೆ. ಇದು ನನ್ನ ಇಂದಿನ ಚರ್ಯೆ ಯಾಗಿದೆ. ನನ್ನ ಪತಿಯಾದರೋ ಸಕಲಸದ್ಗುಣಗಳಿಗೂ ಸಾಗರಪ್ರಾಯನು. ನನ್ನಲ್ಲಿಯೇ ಹೆಚ್ಚು ಅನುರಾಗವುಳ್ಳವನಾಗಿದ್ದನು. ನಾನೂ ಅವನ ವಿಷಯದಲ್ಲಿ ಹೆಚ್ಚು ಅನುರಾಗವುಳ್ಳವಳಾಗಿದ್ದೆನು. ಹೆಚ್ಚೇನು ಹೇಳಲಿ? ಅವನ ಸುಖ-ಕಷ್ಟಗಳಲ್ಲಿ ಅವನ ಛಾಯೆಯಂತೆಯೇ ಅವನನ್ನೇ ಅನುಸರಿಸಿ ನಡೆಯುತ್ತಿದ್ದೆನು. ನಾವೀರ್ವರೂ ಸುಖದಿಂದಲೇ ಇದ್ದೆವು. ಕಾಲಕರ್ಮ ಸಂಯೋಗದಿಂದ ನನ್ನ ಪತಿಯು ಒಮ್ಮೆ ಪಗಡೆಯಾಡಿ ಸರ್ವಸ್ವವನ್ನೂ ಕಳೆದುಕೊಂಡು ಏಕಾಕಿಯಾಗಿ ಅರಣ್ಯಕ್ಕೆ ಹೊರಟನು. ಏಕವಸ್ತ್ರವನ್ನು

ಧರಿಸಿ, ಆಪತ್ತಿಗೊಳಗಾಗಿ, ಉನ್ಮತ್ತನಂತೆ ಕಾಡಿಗೆ ಹೊರಟ ನನ್ನ ಪತಿಯ ಸೇವೆಮಾಡಲು ನಾನೂ ಅವನನ್ನನುಸರಿಸಿಯೇ ಹೊರಟೆನು. ದಾರಿನಡೆದ ಆಯಾಸದಿಂದಲೂ, ಹಸಿವು-ಬಾಯಾರಿಕೆಗಳಿಂದಲೂ ಬಳಲಿದ್ದ ನನ್ನ ಪತಿಯು ತಾನುಟ್ಟಿದ್ದ ಒಂದು ವಸ್ತ್ರವನ್ನೂ ಕಾರಣಾಂತರದಿಂದ ಕಾಡಿನಲ್ಲಿ ಕಳೆದುಕೊಳ್ಳಬೇಕಾಯಿತು. ಇದ್ದ ಒಂದು ಬಟ್ಟೆಯನ್ನೂ ಕಳೆದುಕೊಂಡು ಹುಚ್ಚನಂತೆ ನಗ್ನನಾಗಿ ಅಲೆಯುತ್ತಿದ್ದ ನನ್ನ ಪತಿಯನ್ನು ನಾನು ಹಿಂಬಾಲಿಸುತ್ತಲೇ ಇದ್ದೆನು. ಇದೇ ರೀತಿಯಲ್ಲಿ ಹಿಂದೆಯೇ ನಡೆದು ಹೋಗುತ್ತಿದ್ದಾಗ ಅನೇಕ ರಾತ್ರಿಗಳು ನಿದ್ದೆಯಿಲ್ಲದೆಯೇ ಕಳೆದುಹೋದುವು. ಅನೇಕಾನೇಕ ಯೋಜನಗಳ ದೂರ ನಡೆದು, ಬಳಲಿ ಬೆಂಡಾಗಿ ನಾವಿಬ್ಬರೂ ಆಯಾಸಪರಿಹಾರಕ್ಕಾಗಿ ಒಂದು ಕಲ್ಲಿನ ಮಂಟಪದಲ್ಲಿ ಮಲಗಿದ್ದೆವು. ಅನೇಕ ದಿನಗಳಿಂದಲೂ ನಿದ್ರೆಯಿಲ್ಲದಿದ್ದ ಕಾರಣದಿಂದಾಗಿ ಅಂದು ನನಗೆ ಗಾಢವಾದ ನಿದ್ರೆಯು ಹತ್ತಿತು. ನಾನು ಗಾಢನಿದ್ರೆಯಲ್ಲಿದ್ದಾಗ ನನ್ನ ಪತಿಯು ತಾನು ಹೊದೆದಿದ್ದ ನನ್ನ ಸೀರೆಯ ಅರ್ಧಭಾಗವನ್ನೇ ಕತ್ತರಿಸಿಕೊಂಡು ನಿರಪರಾಧಿನಿಯಾದ ನನ್ನನ್ನು ಅಲ್ಲಿಯೇ ಬಿಟ್ಟು ಹೊರಟುಹೋದನು. ಅಂದಿನಿಂದ ನಾನು ಅವನನ್ನು ಹುಡುಕುತ್ತಲೇ ಇರುವೆನು."

ದಮಯಂತಿಯ ಕಣ್ಣುಗಳಲ್ಲಿ ಧಾರಾವಾಹಿಯಾಗಿ ಕಂಬನಿಯು ಹರಿಯುತ್ತಿದ್ದಿತು. ಗಂಡನನ್ನು ನೆನೆದು ಉನ್ಮತ್ತೆಯಾದಳು. ಬಿಕ್ಕಿ-ಬಿಕ್ಕಿ ಅಳುತ್ತಾ ಹೇಳಿದಳು :

"ಅಯ್ಯೋ! ಕಮಲದ ಒಳಭಾಗದಂತೆ ಕಾಂತಿಯುಳ್ಳ ನನ್ನ ಪತಿಯ ವಿರಹವೇದನೆಯು ನನ್ನ ಹೃದಯವನ್ನು ದಹಿಸುತ್ತಿದೆ. ನನಗೆ ಹೃದಯಾನಂದವನ್ನುಂಟುಮಾಡುವ, ದೇವತೆಗಳಿಗೆ ಸಮಾನನಾದ, ಪ್ರಿಯನಾದ, ಪ್ರಾಣೇಶ್ವರನಾದ ಪ್ರಭುವನ್ನು ಕಾಣದೇ ಹಗಲಿನಲ್ಲಿಯೂ, ರಾತ್ರಿಯಲ್ಲಿಯೂ ಬಹಳ ಸಂಕಟಪಡುತ್ತಿದ್ದೇನೆ, ಮಹಾರಾಣಿ!"

ಹೀಗೆಂದು ಹೇಳಿಕೊಂಡು ಬಿಕ್ಕಿ-ಬಿಕ್ಕಿ ಅಳುತ್ತಿದ್ದ ಭೀಮರಾಜನಂದಿನಿಯನ್ನು ಸಂತೈಸುತ್ತಾ ರಾಜಮಾತೆಯು ಹೇಳಿದಳು :

"ಮಂಗಳಾಂಗಿ! ನೀನು ನನ್ನೊಡನೆ ಈ ಅರಮನೆಯಲ್ಲಿಯೇ ಇರು.

ನಿನ್ನ ವಿಷಯದಲ್ಲಿ ನನಗೆ ಅಪಾರವಾದ ಮಮತೆಯುಂಟಾಗಿದೆ. ನನ್ನ ಸೇವಕರು ನಿನ್ನ ಪತಿಯನ್ನು ದೇಶ-ವಿದೇಶಗಳಲ್ಲಿ ಹುಡುಕುವರು. ಅಥವಾ ನಿನ್ನ ಪತಿಯು ಅಲ್ಲಲ್ಲಿ ಸುತ್ತಾಡುತ್ತಾ ಕಟ್ಟಕಡೆಗೆ ತಾನಾಗಿಯೇ ಇಲ್ಲಿಗಾದರೂ ಬರಬಹುದು. ಆದುದರಿಂದ ನೀನು ನನ್ನ ಅರಮನೆಯಲ್ಲಿಯೇ ಇದ್ದರೆ ಅಗಲಿರುವ ನಿನ್ನ ಪತಿಯೊಡನೆ ಪುನಃ ಸೇರಿಕೊಳ್ಳುವೆ. ನಿಶ್ಚಿಂತಳಾಗಿರು."

ರಾಜಮಾತೆಯ ಆ ಮಾತುಗಳನ್ನು ಕೇಳಿ ದಮಯಂತಿಯು ವಿನಯಪೂರ್ವಕವಾಗಿ ಉತ್ತರಿಸಿದಳು :

"ವೀರಮಾತೆಯೇ! ನೀವು ಹೇಳಿದಂತೆಯೇ ನಾನು ತಮ್ಮ ಆಶ್ರಯದಲ್ಲಿ ಈ ಅರಮನೆಯಲ್ಲಿರಬಹುದು. ಆದರೆ ನನ್ನ ಕೆಲವು ನಿಯಮಗಳಿವೆ."

"ಯಾವ ನಿಯಮಗಳಿದ್ದರೂ ನಿಸ್ಸಂಕೋಚವಾಗಿ ಹೇಳು, ಮಗಳೇ!"

**ಉಚ್ಛಿಷ್ಟಂ ನೈವ ಭುಞ್ಜೀಯಾಂ ನ ಕುರ್ಯಾಂ ಪಾದಧಾವನಮ್ ।**
**ನ ಚಾಹಂ ಪುರುಷಾನನ್ಯಾನ್ಪ್ರಭಾಷೇಯಂ ಕಥಂಚನ ॥೬೮॥**

**ಪ್ರಾರ್ಥಯೇದ್ಯದಿ ಮಾಂ ಕಶ್ಚಿದ್ದಣ್ಡ್ಯಸ್ತೇ ಸ ಪುಮಾನ್ಭವೇತ್ ।**
**ವಧ್ಯಶ್ಚ ತೇಽಸಕೃನ್ಮನ್ದ ಇತಿ ಮೇ ವ್ರತಮಾಹಿತಮ್ ॥೬೯॥**

**ಭರ್ತುರನ್ವೇಷಣಾರ್ಥಂ ತು ಪಶ್ಯೇಯಂ ಬ್ರಾಹ್ಮಣಾನಹಮ್ ।**
**ಯದ್ಯೇವಮಿಹ ವತ್ಸ್ಯಾಮಿ ತ್ವತ್ಸಕಾಶೇ ನ ಸಂಶಯಃ ।**
**ಅತೋಽನ್ಯಥಾ ನ ಮೇ ವಾಸೋ ವರ್ತತೇ ಹೃದಯೇ ಕ್ವಚಿತ್ ॥೭೦॥**

"ರಾಜಮಾತೆಯೇ! ನಾನು ಉಚ್ಛಿಷ್ಟಾನ್ನವನ್ನು ತಿನ್ನುವವಳಲ್ಲ. ಯಾರ ಕಾಲುಗಳನ್ನೂ ತೊಳೆಯುವುದಿಲ್ಲ. (ಪಾದಸೇವೆಯನ್ನೂ ಮಾಡುವುದಿಲ್ಲ.) ಯಾವ ಪರಪುರುಷರೊಡನೆಯೂ ಮಾತನಾಡುವುದಿಲ್ಲ. ನನ್ನನ್ನು ಯಾರಾದರೂ ಮೋಹಿಸಿ ನನ್ನ ಪಾಣಿಗ್ರಹಣಮಾಡಿಕೊಳ್ಳಲು ಇಚ್ಛಿಸಿದರೆ– ಅಂತಹವರನ್ನು ನೀನು ಒಡನೆಯೇ ಶಿಕ್ಷಿಸಬೇಕು. ನನ್ನನ್ನು ಪುನಃ ಪುನಃ ಮದುವೆಯಾಗುವಂತೆ ಬಲಾತ್ಕರಿಸುವವನಿಗೆ ನೀನು ಮರಣಶಿಕ್ಷೆಯನ್ನು ವಿಧಿಸಬೇಕಾಗುವುದು. ಇವೇ ನನ್ನ ನಿಬಂಧನೆಗಳು. ನನ್ನ ಪತಿಯನ್ನು ಕಂಡುಹಿಡಿಯಲು ಹೋಗುವ ಬ್ರಾಹ್ಮಣರನ್ನು ಮಾತ್ರ ನಾನು ಸಂದರ್ಶಿಸುತ್ತೇನೆ. ಇವಿಷ್ಟನ್ನು ನೀನು ನಡೆಸಿಕೊಡುವೆಯಾದರೆ ನಾನು ನಿನ್ನ ಆಶ್ರಯ

ದಲ್ಲಿ ಉಳಿಯುವೆನು. ಇದರಲ್ಲಿ ಸಂಶಯವಿಲ್ಲ. ಹಾಗಿಲ್ಲದಿದ್ದರೆ ನನ್ನ ಮನಸ್ಸು ನಿನ್ನ ಆಶ್ರಯದಲ್ಲಿರಲು ಇಷ್ಟಪಡಲಾರದು."

ದಮಯಂತಿಯ ಮಾತುಗಳನ್ನು ಕೇಳಿ ನಸುನಗುತ್ತಾ ರಾಜಮಾತೆಯು ಹೇಳಿದಳು :

"ಮಗಳೇ! ನಿನ್ನ ಅಪೇಕ್ಷೆಯಂತೆಯೇ ಎಲ್ಲವನ್ನೂ ಮಾಡುತ್ತೇನೆ. ಇಲ್ಲಿ ನೀನಿರಬಹುದಾಗಿದೆ. ನೀನು ಇಂತಹ ನಿಯಮಗಳನ್ನು ಮಾಡಿಕೊಂಡಿರುವುದು ನಿನ್ನ ಶ್ರೇಯಸ್ಸಿಗಾಗಿಯೇ ಎಂಬುದನ್ನು ನಾನೂ ಮನಗಂಡಿದ್ದೇನೆ."

ಬೃಹದಶ್ವರು ಮುಂದುವರಿದು ಹೇಳಿದರು :

"ಧರ್ಮಜ! ರಾಜಮಾತೆಯು ದಮಯಂತಿಯನ್ನು ಸಮಾಧಾನಪಡಿಸಿ ತನ್ನ ಮಗಳಾದ ಸುನಂದೆಯನ್ನು ಕರೆಯಿಸಿ ಅವಳೊಡನೆ ಹೇಳಿದಳು:

"ಮಗಳೇ! ದೇವರೂಪಳಾಗಿರುವ ಇವಳನ್ನು ನೀನು ಸೈರಂಧ್ರಿ ಯನ್ನಾಗಿ ಅಂಗೀಕರಿಸು. ನಿನ್ನ ಸಮಾನವಯಸ್ಕಳಾಗಿರುವ ಇವಳನ್ನು ನಿನ್ನ ಗೆಳತಿಯನ್ನಾಗಿ ಭಾವಿಸು. ಯಾವ ವಿಧವಾದ ಸಂಕೋಚವೂ ಇಲ್ಲದೇ ನೀನು ಇವಳೊಡನೆ ಆಟ-ಪಾಟಗಳನ್ನಾಡಿಕೊಂಡು ಸಂತೋಷದಿಂದಿರು."

ತಾಯಿಯ ಮಾತುಗಳನ್ನು ಕೇಳಿ ಸುನಂದೆಗೆ ಬಹಳ ಆನಂದವಾಯಿತು. ಒಡನೆಯೇ ತಾಯಿಯೊಡನೆ 'ಹಾಗೆಯೇ ಆಗಲಮ್ಮ'–ಎಂದು ಹೇಳಿ ಪ್ರೇಮಪುರಸ್ಸರವಾಗಿ ದಮಯಂತಿಯ ಕೈಹಿಡಿದುಕೊಂಡು ಇತರ ಗೆಳತಿಯರೊಡನೆ ದಮಯಂತಿಯನ್ನು ತನ್ನ ಅಂತಃಪುರಕ್ಕೆ ಕರೆದೊಯ್ದಳು. ದಮಯಂತಿಯನ್ನು ಎಲ್ಲರೂ ಬಹಳ ಮರ್ಯಾದೆಯಿಂದಲೇ ಕಾಣುತ್ತಿದ್ದರು. ಇದರಿಂದಾಗಿ ದಮಯಂತಿಗೂ ಬಹಳ ಸಂತೋಷವಾಗಿ ಯಾವ ವಿಧವಾದ ತೊಂದರೆಯೂ ಇಲ್ಲದೇ ತನ್ನ ನಿಯಮಾನುಸಾರವಾಗಿ ನಡೆಯುತ್ತಾ ಪತಿಯನ್ನೇ ಮನದಲ್ಲಿ ಚಿಂತಿಸುತ್ತಾ ಕಾಲಕಳೆಯುತ್ತಿದ್ದಳು.

೬೫ನೆಯ ಅಧ್ಯಾಯವು ಮುಗಿಯಿತು.

## ಕಾಡುಗಿಚ್ಚಿನಿಂದ ಕರ್ಕೋಟಕನ ರಕ್ಷಣೆ : ಕರ್ಕೋಟಕನು ನಲನನ್ನು ಸಂತೈಸಿದುದು

ಬೃಹದಶ್ವರು ಹೇಳುತ್ತಾರೆ :

“ಧರ್ಮಜ! ಇತ್ತಲಾಗಿ ದಮಯಂತಿಯನ್ನು ಬಿಟ್ಟುಬಂದ ನಲ ಮಹಾರಾಜನು ಅರಣ್ಯದಲ್ಲಿ ಅಲೆದಾಡುತ್ತಿದ್ದಾಗ ಒಂದೆಡೆಯಲ್ಲಿ ಮಹತ್ತರವಾದ ಕಾಡುಗಿಚ್ಚನ್ನು ಕಂಡನು. ಅದರ ಮಧ್ಯದಿಂದ ಆರ್ತಧ್ವನಿಯು ಕೇಳಿ ಬರುತ್ತಿದ್ದಿತು. ದಯಾಮಯನಾದ ನಲನು ಆ ಕಿಚ್ಚಿನ ಸಮೀಪಕ್ಕೆ ಹೋದಂತೆಲ್ಲಾ ಆರ್ತಧ್ವನಿಯು ಇನ್ನೂ ಸ್ಪಷ್ಟವಾಗಿ ಕೇಳಿಸಿತು. ‘ಧರ್ಮಾತ್ಮನಾದ ನಲನೇ! ಬೇಗ ಬಾ, ತಡಮಾಡಬೇಡ’. ಈ ಕರೆಯನ್ನು ಕೇಳಿದೊಡನೆಯೇ ನಲನು ‘ಭಯಪಡಬೇಡ! ನಾನೀಗಲೇ ಬರುವೆನು’– ಎಂದು ಗಟ್ಟಿಯಾಗಿ ಕೂಗಿ ಹೇಳಿ ಕಾಡುಗಿಚ್ಚಿನೊಳಗೆ ನುಗ್ಗಿದನು. ಅಲ್ಲವನು ಘಟಸರ್ಪವೊಂದು ಸುತ್ತಿಕೊಂಡು ಮಲಗಿರುವುದನ್ನು ಕಂಡನು. ಆ ಘಟಸರ್ಪದ ಹತ್ತಿರಕ್ಕೆ ಹೋಗುತ್ತಲೇ ತಲೆಯೆತ್ತಿ ಕುಳಿತಿದ್ದ ಸರ್ಪವು ತಲೆಬಾಗಿ ನಲನಿಗೆ ನಮಸ್ಕರಿಸಿ, ಅವನನ್ನು ಕುರಿತು ನಡುಗುತ್ತಾ ಹೇಳಿತು: “ಮಹಾರಾಜ! ನಾನು ಕರ್ಕೋಟಕನೆಂಬ ಹೆಸರಿನ ಸರ್ಪವಾಗಿದ್ದೇನೆ. ನಾನೊಮ್ಮೆ ಮಹಾಮಹಿಮರಾದ, ತಪಸ್ವಿಗಳಾದ ನಾರದರನ್ನು ವಂಚಿಸಿದೆನು. ಅದರಿಂದ ಅವರು ಕುಪಿತರಾಗಿ ನನ್ನನ್ನು ಶಪಿಸಿದರು. ಕರುಣಾಮಯರಾದ ಅವರು ಶಾಪದೊಡನೆಯೇ ಪ್ರತಿಶಾಪವನ್ನೂ ಕೊಟ್ಟರು.

**ತಿಷ್ಠ ತ್ವಂ ಸ್ಥಾವರ ಇವ ಯಾವದೇವ ನಲಃ ಕ್ವಚಿತ್ ।**
**ಇತೋ ನೇತಾ ಹಿ ತತ್ರ ತ್ವಂ ಶಾಪಾನ್ಮೋಕ್ಷ್ಯಸಿ ಮತ್ಕೃತಾತ್ ॥೬॥**

‘ನಲನೆಂಬ ಒಬ್ಬ ರಾಜನು ಈ ಸ್ಥಳಕ್ಕೆ ಬರುವವರೆಗೂ ಇಲ್ಲಿಯೇ ನೀನು ಸ್ಥಾವರದಂತೆ ( ಕಲ್ಲಿನಂತೆ ) ಬಿದ್ದಿರು. ನಲನು ಬಂದು ನಿನ್ನನ್ನು ಇಲ್ಲಿಂದ ಒಯ್ದನಂತರ ನಾನು ಕೊಟ್ಟಿರುವ ಈ ಶಾಪದಿಂದ ವಿಮುಕ್ತನಾಗುವೆ.’

ನಲರಾಜ! ಇದೇ ನಾರದರು ಕೊಟ್ಟ ಶಾಪ ಮತ್ತು ಪ್ರತಿಶಾಪಗಳು. ಅಂದಿನಿಂದಲೂ ನಾನು ಅಹರ್ನಿಶಿ ನಿನ್ನ ಆಗಮನದ ನಿರೀಕ್ಷಣೆಯಲ್ಲಿಯೇ ಇರುವೆನು. ನಾರದರ ಶಾಪದ ಕಾರಣದಿಂದಾಗಿ ಒಂದು ಹೆಜ್ಜೆ ಮುಂದೆ ಸರಿಯಲೂ ಅಸಮರ್ಥನಾಗಿದ್ದೇನೆ. ನಾನು ನಿನ್ನ ಉಪಕಾರಕ್ಕೆ



ಪ್ರತ್ಯುಪಕಾರವನ್ನು ಮಾಡಲಾರನೆಂದು ಭಾವಿಸಬೇಡ. ಖಂಡಿತವಾಗಿಯೂ ನಿನಗೆ ಮುಂದೆ ಶ್ರೇಯಸ್ಸುಂಟಾಗುವ ಮಾರ್ಗವನ್ನು ಸೂಚಿಸುತ್ತೇನೆ. ಆದುದರಿಂದ ನೀನೀಗಲೇ ನನ್ನನ್ನು ಈ ಅಗ್ನಿಯಿಂದ ಪಾರುಮಾಡು. ನಾನು ನಿನ್ನ ಆಪ್ತಮಿತ್ರನಾಗುತ್ತೇನೆ. ನನಗೆ ಸಮಾನರಾದ ಪನ್ನಗರು ಬೇರಾರೂ ಇರುವುದಿಲ್ಲ. ನನ್ನ ಬೃಹದಾಕಾರವನ್ನು ಕಂಡು ನನ್ನನ್ನು ಎತ್ತುವುದು

ಹೇಗೆಂದು ನೀನು ಪರ್ಯಾಲೋಚಿಸುತ್ತಿರಬಹುದು. ನಲರಾಜ! ನಾನು ಬಹಳ ಸೂಕ್ಷ್ಮರೂಪವನ್ನು ತಾಳುತ್ತೇನೆ ಮತ್ತು ಹಗುರವಾಗುತ್ತೇನೆ. ನನ್ನನ್ನು ಈ ಕ್ಷಣದಲ್ಲಿಯೇ ಎತ್ತಿಕೊಂಡು ಹೋಗು"–ಹೀಗೆಂದು ಹೇಳಿ ಕರ್ಕೋಟಕ ಸರ್ಪವು ಅಂಗುಷ್ಠದಷ್ಟೇ ಸಣ್ಣದಾದ ಸ್ವರೂಪವನ್ನು ತಾಳಿತು. ಅಂಗುಷ್ಠಮಾತ್ರದ ಕರ್ಕೋಟಕಸರ್ಪವನ್ನು ನಲನು ಅಂಗೈಯಲ್ಲಿಟ್ಟುಕೊಂಡು ಬೆಂಕಿಯಿಲ್ಲದ ಸ್ಥಳಕ್ಕೆ ಬಂದು ನಿಂತನಂತರ, ನಲನು ಕರ್ಕೋಟಕನನ್ನು ಕೆಳಗಿಡಲು ಹೋದನು. ಕೆಳಗಿಡುವುದರೊಳಗಾಗಿ ಕರ್ಕೋಟಕನು ನಲನಿಗೆ ಹೇಳಿದನು :

**ಪದಾನಿ ಗಣಯನ್ಗಚ್ಛ ಸ್ವಾನಿ ನೈಷಧ ಕಾನಿಚಿತ್ ।**
**ತತ್ರ ತೇಽಹಂ ಮಹಾಬಾಹೋ ಶ್ರೇಯೋ ಧಾಸ್ಯಾಮಿ ಯತ್ಪರಮ್ ॥**

"ನಲರಾಜ! ನನ್ನನ್ನೀಗಲೇ ಕೆಳಗಿಡಬೇಡ. ನೀನು ಮುಂದಿಡುವ ಹೆಜ್ಜೆಗಳನ್ನು ಎಣಿಸುತ್ತಲೇ ಹೋಗು. ಸ್ವಲ್ಪದೂರ ಹೆಜ್ಜೆಗಳನ್ನು ಎಣಿಸುತ್ತಾ ಹೋದನಂತರ ನಿನಗೆ ಪರಮಶ್ರೇಯಸ್ಸನ್ನೇ ನಾನು ಮಾಡುತ್ತೇನೆ. ಅನಂತರ ನನ್ನನ್ನು ಕೆಳಗಿಡು. ನೀನು ಹಾಗೆ ಮಾಡಿದಲ್ಲಿ ನಾನು ನಿಶ್ಚಯವಾಗಿಯೂ ನಿನಗೆ ಒಳ್ಳೆಯದನ್ನು ಮಾಡುವೆನು."

ಬೆಂಕಿಯೊಳಗೆ ನುಗ್ಗಿ ಘಟಸರ್ಪವನ್ನು ಹೊರತಂದವನಿಗೆ ಇನ್ನೂ ಕೆಲವು ಹೆಜ್ಜೆಗಳು ಮುಂದೆ ನಡೆದು ಸರ್ಪವನ್ನು ಕೆಳಗಿಳಿಸುವುದು ಕಷ್ಟವಾದೀತೇ! ನಲನು ಕರ್ಕೋಟಕನು ಹೇಳಿದಂತೆಯೇ ಎಣಿಕೆಮಾಡುತ್ತಾ ಹತ್ತು ಹೆಜ್ಜೆಗಳನ್ನಿಟ್ಟನು. ಏಕಂ, ದ್ವೇ, ತ್ರೀಣಿ–ಎಂದು ಎಣಿಕೆಮಾಡುತ್ತಾ ಹತ್ತನೆಯ ಹೆಜ್ಜೆಯನ್ನಿಟ್ಟು ನಲನು 'ದಶ' ಎಂದು ಹೇಳಿದೊಡನೆಯೇ ಕರ್ಕೋಟಕನು ನಲನನ್ನು ಬಲವಾಗಿ ಕಚ್ಚಿಬಿಟ್ಟನು.

(ನಲನಿಗೆ ಅನುಕೂಲಮಾಡುವ ಸಲುವಾಗಿ ಕರ್ಕೋಟಕನಿಗೆ ನಲನನ್ನು ಕಚ್ಚಬೇಕೆಂಬ ಅಭಿಲಾಷೆಯುಂಟಾಯಿತು. ತನಗೆ ಉಪಕಾರಮಾಡಿ ದವನನ್ನು ವೃಥಾ ಕಚ್ಚುವುದಾದರೂ ಹೇಗೆಂದು ಯೋಚಿಸಿದ ಕರ್ಕೋಟ ಕನು ಎಣಿಕೆಮಾಡಿ ಕೆಲವು ಹೆಜ್ಜೆಗಳನ್ನಿಡುವಂತೆ ನಲನಿಗೆ ಹೇಳಿದನು. ನಲನು ದಶ ( ಹತ್ತು ) ಅಥವಾ ( ಕಚ್ಚು ) ಎಂದು ಹೇಳಿದೊಡನೆಯೇ ಕಚ್ಚಲು

ನಲನ ಆಜ್ಞೆಯೇ ಆಗಿದೆಯೆಂಬ ಸಮಾಧಾನದಿಂದ ಕಚ್ಚಿಬಿಟ್ಟನು. 'ದಶ' ಎಂಬುದಕ್ಕೆ–ಹತ್ತು ಎಂಬ ಸಂಖ್ಯಾರ್ಥವೂ ಮತ್ತು ಕಚ್ಚು–ಎಂಬ ಕ್ರಿಯಾರ್ಥವೂ ಇದೆ.)

ಕರ್ಕೋಟಕನು ಕಚ್ಚಿದೊಡನೆಯೇ ನಲನ ಸುಂದರಾಕಾರವು ವಿಕಾರ ವಾಯಿತು. ಯಾರಿಗೂ ಅವನು ನಲನೆಂದು ಹೇಳಲಾಗದಷ್ಟು ವಿಕಾರ ವಾಯಿತು. ನಲನು ಅದನ್ನು ಕಂಡು ಖಿನ್ನನಾದನು. ಕರ್ಕೋಟಕನೂ ಶಾಪದಿಂದ ವಿಮುಕ್ತನಾಗಿ ತನ್ನ ನಿಜಸ್ವರೂಪವನ್ನು ತಾಳಿ ನಲನನ್ನು ಸಂತೈಸುತ್ತಾ ಹೇಳಿದನು :

"ನಲರಾಜ! ನಿನ್ನ ಸುಂದರಾಕಾರವು ವಿಕಾರವಾದುದಕ್ಕಾಗಿ ದುಃಖಿತ ನಾಗಬೇಡ. ನೀನು ಯಾರಿಂದಲೂ ಗುರುತಿಸಲು ಸಾಧ್ಯವಾಗಕೂಡದೆಂದೇ ನಾನು ಹೀಗೆ ಮಾಡಿರುವೆನು. ನನ್ನ ವಿಷವೂ ನಿನ್ನನ್ನು ಏನೂ ಮಾಡಲಾರದು. ಆದರೆ ನಿನ್ನನ್ನು ಇಷ್ಟು ದುರವಸ್ಥೆಗೆ ತಂದ ಮತ್ತು ನಿನ್ನಲ್ಲಿಯೇ ಅಡಗಿಕೊಂಡಿರುವ ಕಲಿಯನ್ನು ಈ ನನ್ನ ವಿಷವು ಸಂಕಟಪಡಿಸುತ್ತದೆ. ಎಂದಿನವರೆಗೆ ಅವನು ನಿನ್ನ ಶರೀರಾಂತರ್ಗತನಾಗಿರುವನೋ ಅಂದಿನ ವರೆಗೂ ಅವನು ನನ್ನ ವಿಷದಿಂದ ಆವರಿಸಲ್ಪಟ್ಟವನಾಗಿ ದಾರುಣವಾದ ಯಾತನೆಯನ್ನನುಭವಿಸುವನು.

ನಲರಾಜ! ನಿನ್ನನ್ನಿಂದು ನಾನು ಕಲಿಪುರುಷನ ಉಪಟಳದಿಂದ ಪಾರುಮಾಡಿರುವೆನು. ಆ ಕಲಿಪುರುಷನು ದಮಯಂತಿಯು ತನಗೆ ಸಿಕ್ಕದ ಕೋಪದಿಂದಾಗಿ ನಿರ್ದೋಷಿಯಾದ ನಿನಗೆ ಮೋಸಮಾಡಿ, ನಿನ್ನಲ್ಲಿಯೇ ಸೇರಿಕೊಂಡು, ನಾನಾವಿಧವಾದ ಉಪಟಳವನ್ನು ಕೊಡುತ್ತಿದ್ದಾನೆ. ಇನ್ನು ಮುಂದೆ ಅವನು ನಿನಗೆ ಯಾವ ವಿಧವಾದ ಉಪಟಳವನ್ನೂ ಕೊಡಲಾರನು. ಇಷ್ಟು ಮಾತ್ರವಲ್ಲ, ಮಹಾರಾಜ! ನನ್ನ ಅನುಗ್ರಹದಿಂದಾಗಿ ನಿನಗೆ ವಿಷಜಂತುಗಳಿಂದಲೂ ಮತ್ತು ಶತ್ರುಗಳಿಂದಲೂ ಯಾವ ಭಯವೂ ಇರುವುದಿಲ್ಲ. ವೇದಾಧ್ಯಯನಸಂಪನ್ನರಾದ ಬ್ರಾಹ್ಮಣರೂ ನಿನಗೆ ಶಾಪವನ್ನು ಕೊಟ್ಟು ತೊಂದರೆ ಮಾಡಲಾರರು. ನನ್ನ ವಿಷವು ನಿನ್ನ ಶರೀರಾದ್ಯಂತವಾಗಿ ವ್ಯಾಪ್ತವಾಗಿದ್ದರೂ ನಿನಗೆ ಅದರಿಂದ ಯಾವ ವಿಧವಾದ ತೊಂದರೆಯೂ

ಉಂಟಾಗುವುದಿಲ್ಲ. ನೀನು ಇನ್ನು ಮುಂದೆ ಯಾರೊಡನೆ ಯಾವಾಗ ಯುದ್ಧಮಾಡಿದರೂ ಜಯಶಾಲಿಯಾಗುವೆ.

ನಲರಾಜ! ಇನ್ನು ಮುಂದೆ ನೀನು ಕಾಡಿನಲ್ಲಿ ಅಲೆದಾಡಬೇಡ. ಅಯೋಧ್ಯೆಯಲ್ಲಿ ಋತುಪರ್ಣನೆಂಬ ಅರಸನಿದ್ದಾನೆ. ಅವನು ಅಕ್ಷವಿದ್ಯೆಯಲ್ಲಿ ನಿಷ್ಣಾತನು. ಅವನ ಬಳಿಗೆ ನೀನೀಗಲೇ ಹೋಗು. ಅಲ್ಲಿ ಹೋಗಿ ಅವನ ಸಾರಥಿಯಾಗಿರು. ನಿನ್ನ ನಾಮಧೇಯವೇನೆಂದು ಕೇಳಿದರೆ 'ಬಾಹುಕ'ನೆಂದು ಹೇಳು. ನಿನ್ನಲ್ಲಿರುವ ಅಶ್ವವಿದ್ಯೆಯ ಪ್ರಾವೀಣ್ಯವನ್ನು ಅವನಿಗೆ ತೋರ್ಪಡಿಸು. ಅಶ್ವವಿದ್ಯೆಗೆ ವಿನಿಮಯರೂಪವಾಗಿ ಅವನಿಂದ ನೀನು ಅಕ್ಷವಿದ್ಯೆಯ ರಹಸ್ಯವನ್ನು ಸ್ವೀಕರಿಸು. ಇಕ್ಷ್ವಾಕುಕುಲಪ್ರಸೂತನಾದ, ಶ್ರೀಮಂತನಾದ ಋತುಪರ್ಣನು ನಿನಗೆ ಯೋಗ್ಯಮಿತ್ರನಾಗುವನು. ನೀನು ಪಗಡೆಯಾಟದಲ್ಲಿ ನಿಷ್ಣಾತನಾದೆಯಾದರೆ ನಿನಗೆ ಶ್ರೇಯಸ್ಸುಂಟಾಗುತ್ತದೆ. ನಿನ್ನ ಪತ್ನಿಯನ್ನೂ, ಮಕ್ಕಳನ್ನೂ ಪುನಃ ನೀನು ಸೇರುವೆ. ನಿನ್ನ ಸಾಮ್ರಾಜ್ಯವೂ ಪುನಃ ನಿನಗೆ ಲಭ್ಯವಾಗುವುದು. ಮಹಾರಾಜ! ನಾನು ಹೇಳಿದ್ದೆಲ್ಲವೂ ಸತ್ಯವಾಗಿ ಪರಿಣಮಿಸುವುದು. ಇದರಲ್ಲಿ ನೀನು ಸ್ವಲ್ಪವಾದರೂ ಸಂಶಯಪಡುವ ಕಾರಣವಿಲ್ಲ. ಆದುದರಿಂದ ನೀನೀಗಲೇ ದುಃಖವನ್ನು ದೂರಮಾಡಿ ಕಾರ್ಯೋನ್ಮುಖನಾಗು. ತಾತ್ಕಾಲಿಕವಾಗಿ ಮತ್ತು ನಿನ್ನ ಅನುಕೂಲಕ್ಕಾಗಿಯೇ ಪ್ರಾಪ್ತವಾಗಿರುವ ಈ ವಿಕಾರಸ್ವರೂಪವು ಶಾಶ್ವತವಾಗಿರುವುದೆಂದು ಭ್ರಾಂತನಾಗಬೇಡ. ನೀನು ನಿಜಸ್ವರೂಪವನ್ನು ಯಾವಾಗ ಅಪೇಕ್ಷಿಸು ವೆಯೋ–ಆಗ ನನ್ನನ್ನು ಸ್ಮರಿಸು ಮತ್ತು ಈ ದಿವ್ಯಾಂಬರಗಳನ್ನು ಧರಿಸು. ಒಡನೆಯೇ ನಿನಗೆ ನಿನ್ನ ಪೂರ್ವರೂಪವು ಪ್ರಾಪ್ತವಾಗುವುದು."

ಹೀಗೆಂದು ಹೇಳಿ ಕರ್ಕೋಟಕನು ಎರಡು ದಿವ್ಯಾಂಬರಗಳನ್ನು ನಲನಿಗೆ ಕೊಟ್ಟನು.

ಯುಧಿಷ್ಠಿರ! ಕರ್ಕೋಟಕನು ನಾನು ವಿವರಿಸಿದ ರೀತಿಯಲ್ಲಿ ನಲನಿಗೆ ಸಲಹೆಕೊಟ್ಟನಂತರ ದಿವ್ಯವಸ್ತ್ರಗಳನ್ನು ಕೊಟ್ಟು ನಲನ ಸಮ್ಮುಖದಲ್ಲಿಯೇ ಅಂತರ್ಧಾನಹೊಂದಿದನು."

೬೬ನೆಯ ಅಧ್ಯಾಯವು ಮುಗಿಯಿತು.

## ನಲನು ಋತುಪರ್ಣನಲ್ಲಿ ಅಶ್ವಾಧ್ಯಕ್ಷನಾಗಿ ಸೇರಿಕೊಂಡುದು : ದಮಯಂತಿಯ ವಿಷಯವಾಗಿ ನಲನ ಚಿಂತೆ : ಜೀವಲನೊಡನೆ ಸಂಭಾಷಣೆ

ಬೃಹದಶ್ವರು ಹೇಳುತ್ತಾರೆ :

"ಧರ್ಮಜ! ಕರ್ಕೋಟಕನು ಅಂತರ್ಹಿತನಾದನಂತರ ನಿಷಧಾಧಿಪತಿಯಾದ ನಲನು ಸರ್ಪದ ಮಾತಿನಂತೆಯೇ ಅಯೋಧ್ಯಾಪಟ್ಟಣಕ್ಕೆ ಅಭಿಮುಖವಾಗಿ-ಹತ್ತು ದಿನಗಳ ಪರ್ಯಂತವಾಗಿ ನಡೆದು–ಹತ್ತನೆಯ ದಿವಸ ಋತುಪರ್ಣನ ರಾಜಧಾನಿಯಾದ ಅಯೋಧ್ಯಾಪಟ್ಟಣವನ್ನು ತಲುಪಿದನು. ಋತುಪರ್ಣನ ಅರಮನೆಗೆ ಹೋಗಿ ಅವನನ್ನು ಸಂಧಿಸಿ ರಾಜನಿಗೆ ತನ್ನ ಪರಿಚಯವನ್ನು ಮಾಡಿಕೊಟ್ಟನು.

"ಮಹಾರಾಜ! ನನ್ನನ್ನು 'ಬಾಹುಕ' ಎಂದು ಕರೆಯುತ್ತಾರೆ. ಅಶ್ವಗಳನ್ನು ಹತೋಟಿಯಲ್ಲಿಡುವ ವಿದ್ಯೆಯಲ್ಲಿ ನನಗೆ ಸಮಾನರಾದವರು ಈ ಭೂಮಿಯಲ್ಲಿಯೇ ಯಾರೂ ಇರುವುದಿಲ್ಲ. ರಾಜೇಂದ್ರ! ದೇಶದ ಆರ್ಥಿಕವಿಷಯಗಳಲ್ಲಿ ಮತ್ತು ದೇಶಕ್ಕೆ ಉಪದ್ರವವು ಒದಗಿದಾಗ ನನ್ನ ಸಲಹೆಗಳನ್ನು ಪಡೆಯಬಹುದಾಗಿದೆ. ಪಾಕಶಾಸ್ತ್ರದಲ್ಲಿಯೂ ನಾನು ನಿಷ್ಣಾತನಾಗಿದ್ದೇನೆ. ಈ ಪ್ರಪಂಚದಲ್ಲಿರುವ ಸಕಲಕಲೆಗಳಲ್ಲಿಯೂ ನನಗೆ ಪರಿಶ್ರಮವಿರುವುದು. ಕಷ್ಟಸಾಧ್ಯವೆನಿಸಿದ ಕಾರ್ಯವನ್ನೂ ಸಾಧಿಸುವ ಸಾಮರ್ಥ್ಯವು ನನಗಿರುವುದು. ನೀನು ನನಗೆ ಒಡೆಯನಾಗುವೆಯಾ?"

"ಬಾಹುಕ! ನೀನು ನನ್ನಲ್ಲಿರಬಹುದು. ನಿನಗೆ ಮಂಗಳವಾಗಲಿ. ನಿನ್ನ ವಿದ್ಯಾನಿಪುಣತೆಯನ್ನು ನೀನು ತೋರಿಸಬಹುದಾಗಿದೆ, ಬಾಹುಕ! ನನ್ನದೊಂದು ಆಶಯವಿದೆ. ಈ ಆಶಯವೂ ನಿನ್ನಿಂದ ಪೂರ್ಣವಾಗುವುದೆಂದು ಭಾವಿಸುತ್ತೇನೆ. ನನ್ನ ಕುದುರೆಗಳು ಅತಿವೇಗವಾಗಿ ಹೋಗಬೇಕೆನ್ನುವ ಆಶಯವು ಬಹಳ ದಿನಗಳಿಂದಲೂ ಇದೆ. ನೀನು ನನ್ನ ಅಶ್ವಶಾಲೆಗೆ ಅಧ್ಯಕ್ಷನಾಗಿ, ಕುದುರೆಗಳನ್ನು ನಿನ್ನ ಹತೋಟಿಗೆ ತೆಗೆದುಕೊಂಡು ಅವು ಬಹುಶೀಘ್ರವಾಗಿ ಓಡುವಂತೆ ಅವುಗಳಿಗೆ ಶಿಕ್ಷಣವನ್ನು ಕೊಡು. ನಿನ್ನ

ವರ್ಷಾಶನ ಹತ್ತು ಸಾವಿರ ಸುವರ್ಣಮುದ್ರೆಗಳು. ಆಗಬಹುದೇ? ಈಗ ನನ್ನ ಅಶ್ವಶಾಲೆಯ ಮೇಲ್ವಿಚಾರಣೆಯನ್ನು ನೋಡಿಕೊಳ್ಳುತ್ತಿರುವ ವಾರ್ಷ್ಣೇಯ ಮತ್ತು ಜೀವಲರು ಇನ್ನು ಮುಂದೆ ನಿನ್ನ ಆಜ್ಞಾಪಾಲಕರಾಗಿ ಕಾರ್ಯಮಾಡುತ್ತಾರೆ. ಅವರ ಜೊತೆಯಲ್ಲಿ ನೀನೂ ಸುಖದಿಂದಿರಬಹುದಾಗಿದೆ. ನೀನು ನಿಸ್ಸಂಕೋಚವಾಗಿ ನನ್ನಲ್ಲಿರಬಹುದು, ಬಾಹುಕ!"



ಧರ್ಮಜ! ಋತುಪರ್ಣನು ಹೇಳಿದಂತೆ ನಲನು ಅಯೋಧ್ಯೆಯಲ್ಲಿ ಸಕಲರಿಂದಲೂ ಸಮ್ಮಾನಿತನಾಗಿ ವಾರ್ಷ್ಣೇಯ ಮತ್ತು ಜೀವಲರೊಡನೆ ಕಾಲಕಳೆಯುತ್ತಿದ್ದನು.

ನಲನು ಅಯೋಧ್ಯೆಯಲ್ಲಿ ವಾಸಮಾಡುತ್ತಿರುವಾಗ ಅನುದಿನವೂ ಸಾಯಂಕಾಲವಾಯಿತೆಂದರೆ ತನ್ನ ಹೃದಯದ ರಾಣಿಯಾದ ವಿದರ್ಭರಾಜ ಕುಮಾರಿಯನ್ನು ನೆನೆದು ಒಂದು ಶ್ಲೋಕವನ್ನು ಹಾಡುತ್ತಿದ್ದನು.

**ಕ್ವ ನು ಸಾ ಕ್ಷುತ್ಪಿಪಾಸಾರ್ತಾ ಶ್ರಾನ್ತಾ ಶೇತೇ ತಪಸ್ವಿನೀ ।**
**ಸ್ಮರನ್ತೀ ತಸ್ಯ ಮನ್ದಸ್ಯ ಕಂ ವಾ ಸಾದ್ಯೋಪತಿಷ್ಠತಿ ॥೧೦॥**

"ಹಸಿವು-ಬಾಯಾರಿಕೆಗಳಿಂದಲೂ, ದಾರಿನಡೆದ ಶ್ರಮದಿಂದಲೂ ಬಳಲಿ ಬೆಂಡಾದ ಆ ತಪಸ್ವಿನಿಯು ಎಲ್ಲಿ ಮಲಗಿರುವಳೋ? ಮೂಢನಾದ ಅವನನ್ನು ಸ್ಮರಿಸುತ್ತಾ ಎಲ್ಲಿಗೆ ಹೋದಳೋ? ಎಲ್ಲಿರುವಳೋ? ಏನು ಮಾಡುತ್ತಿರುವಳೋ? ಯಾವನ ಸೇವೆಮಾಡುತ್ತಾ ಕಾಲಕಳೆಯುತ್ತಿರು ವಳೋ?"

ಒಂದು ದಿನ ಸಾಯಂಕಾಲ ಎಂದಿನಂತೆ ಅದೇ ಶ್ಲೋಕವನ್ನು ಹೇಳುತ್ತಿರುವಾಗ ಜೀವಲನು ಬಾಹುಕನನ್ನು ಕೇಳಿದನು :

"ಬಾಹುಕ! ನೀನು ಯಾರನ್ನು ಕುರಿತು ಅನುದಿನವೂ ಹೀಗೆ ಪ್ರಲಾಪಿಸುತ್ತಿರುವೆ? ಈ ವಿಷಯವನ್ನು ಕೇಳಲು ನನಗೆ ಬಹಳ ಉತ್ಸುಕತೆ ಯುಂಟಾಗಿದೆ. ಆಯುಷ್ಮಂತನೇ! ನೀನು ಯಾರನ್ನು ನೆನೆದು ಅನುದಿನವೂ ಪ್ರಲಾಪಮಾಡುತ್ತಿರುವೆಯೋ–ಆ ನಾರಿಯು ಯಾರು? ಯಾರ ಹೆಂಡತಿ ಎಂಬುದನ್ನು ದಯೆಯಿಟ್ಟು ಹೇಳುವೆಯಾ?"

ಬಾಹುಕನೊಮ್ಮೆ ಗಹ-ಗಹಿಸಿ ನಕ್ಕು ಕಥೆಯನ್ನು ಹೇಳಲುಪಕ್ರಮಿ ಸಿದನು. "ಜೀವಲ! ನನಗೆ ತಿಳಿದಂತೆ ಒಬ್ಬಾನೊಬ್ಬ ಮೂಢನಿದ್ದನು. ಅವನಿಗೆ ಒಬ್ಬಳು ಹೆಂಡತಿಯಿದ್ದಳು. ಅವಳು ಅವನಲ್ಲಿ ಬಹಳ ಪ್ರೀತಿ ಯುಕ್ತಳಾಗಿದ್ದಳು. ಆದರೆ ಅವನ ಮಾತುಗಳು ಸತ್ಯದಿಂದ ಕೂಡಿರಲಿಲ್ಲ. ಆ ಮೂಢನು ತನ್ನ ಹೆಂಡತಿಗೆ ಅನೇಕವಿಧವಾದ ಪ್ರಮಾಣವಚನಗಳನ್ನಿತ್ತಿ ದ್ದನು. ಆದರೆ ಅದರಂತೆ ಅವನು ನಡೆದುಕೊಳ್ಳಲಿಲ್ಲ. ಕೆಲವು ಕಾರಣಗಳಿಂದಾಗಿ ಆ ಮಂಕನು ಅವಳನ್ನು ಬಿಟ್ಟು ಹೊರಟೇಹೋದನು. ಆದರೆ ಆ ಮೂಢನಿಗೆ ಅವಳ ಮೇಲಿನ ವ್ಯಾಮೋಹವು ಮಾತ್ರ ಹೋಗಲಿಲ್ಲ. ಅವಳನ್ನು ಬಾರಿ-ಬಾರಿಗೂ ಸ್ಮರಿಸುತ್ತಾ ವಿರಹವೇದನೆಯ ಸಂಕಟವನ್ನು

ಅನುಭವಿಸುತ್ತಾ ದೇಶ-ದೇಶಾಂತರಗಳಲ್ಲಿಯೂ, ಗಿರಿ-ದುರ್ಗ-ಪರ್ವತಗಳಲ್ಲಿಯೂ ಅಲೆದಾಡಿದನು. ಹಗಲಿನಲ್ಲಿಯೇ ಆಗಲೀ, ರಾತ್ರಿಯಲ್ಲಿಯೇ ಆಗಲೀ ಆ ಮೂಢನಿಗೆ ಮಾನಸಿಕ ಶಾಂತಿಯೆಂಬುದೇ ಇರಲಿಲ್ಲ. ರಾತ್ರಿಯಲ್ಲಿ ತನ್ನ ಹೆಂಡತಿಯನ್ನೇ ಸ್ಮರಿಸುತ್ತಾ ಈ ಶ್ಲೋಕವನ್ನು ಹಾಡುವನು. '**ಕ್ವ ನು ಸಾ ಕ್ಷುತ್ಪಿಪಾಸಾರ್ತಾ**' ಎಂದು ಆ ಮೂಢನು ಹಾಡಿಕೊಂಡು ಅನೇಕ ದಿನಗಳ ಕಾಲ ಅಲೆದಾಡುತ್ತಿದ್ದು ಕಟ್ಟಕಡೆಗೆ ಒಂದೆಡೆಯಲ್ಲಿ ಆಶ್ರಯವನ್ನು ಪಡೆದನು. ಅಂತಹ ದಾರುಣಕಷ್ಟಗಳನ್ನು ಅನುಭವಿಸಲು ಅನರ್ಹನಾದ ಆ ಮೂಢನು ತನ್ನ ಹೆಂಡತಿಯನ್ನು ಈಗಲೂ ಅನುದಿನವೂ ಸ್ಮರಿಸುತ್ತಾ ದುಃಖದಿಂದ ಕಾಲ ಕಳೆಯುತ್ತಿರುವನು.

ಜೀವಲ! ಆ ಮಂಕನಿಗೆ ಸಂಕಟವು ಪ್ರಾಪ್ತವಾದಾಗ ಅವನ ಹೆಂಡತಿಯು ಅವನ ಕಷ್ಟದಲ್ಲಿ ಪಾಲ್ಗೊಳ್ಳಬೇಕೆಂಬ ಆಶಯದಿಂದ ಅವನನ್ನು ಹಿಂಬಾಲಿಸಿ ನಡೆದಳು. ಆದರೆ ಅಲ್ಪನಾದ ಅವನಿಂದ ಪರಿತ್ಯಕ್ತಳಾದ ಅವಳು ನಿಶ್ಚಯವಾಗಿಯೂ ಮಹತ್ತರವಾದ ಪ್ರಾಣಾಪಾಯಕ್ಕೆ ಸಿಕ್ಕಿರುತ್ತಾಳೆ. ನೋಡು, ಜೀವಲ! ಅವಳು ಆ ಮಹಾರಣ್ಯದಲ್ಲಿ ಏಕಾಕಿನೀ ; ಹಾದಿ ತಿಳಿಯದವಳು ; ಕಷ್ಟವನ್ನು ಸಹಿಸಲು ಅಸಮರ್ಥಳಾದವಳು ; ಮೇಲಾಗಿ ಹಸಿವು-ಬಾಯಾರಿಕೆಗಳಿಂದ ಸಂಕಟಪಡುತ್ತಿರುವವಳು. ಇಂತಹ ಒಬ್ಬ ಹೆಂಗಸು ತನ್ನನ್ನು ರಕ್ಷಿಸಿಕೊಳ್ಳಲು ಸಮರ್ಥಳಾಗುವಳೇ? ದುರದೃಷ್ಟಶಾಲಿಯಾದ, ಮಂದಬುದ್ಧಿಯವನಾದ ಆ ಪತಿಯಿಂದ ಅವಳು ದುಷ್ಟಪ್ರಾಣಿಗಳಿಂದ ನಿಬಿಡವಾದ ಆ ಮಹಾರಣ್ಯದಲ್ಲಿ ಪರಿತ್ಯಜಿಸಲ್ಪಟ್ಟಳು. ಅವಳಿನ್ನೂ ಜೀವಿಸಿರುವಳೇ? ಬದುಕಿದ್ದರೆ ಅದೊಂದು ದುಷ್ಕರ ಕಾರ್ಯವೇ ಸರಿ, ಜೀವಲ!"

ದಾರುಣವಾದ ಆ ಕಥೆಯನ್ನು ಕೇಳಿ ಜೀವಲನೂ ನಿಟ್ಟುಸಿರುಬಿಟ್ಟನು. ಆದರೆ ಬಾಹುಕನೇ ನಲನೆಂಬುದು ಮಾತ್ರ ಅವನಿಗೆ ತಿಳಿಯಲಿಲ್ಲ.

ಈ ರೀತಿಯಲ್ಲಿ ನಲನು ಯಾರಿಂದಲೂ ಗುರುತಿಸಲ್ಪಡದವನಾಗಿ ಅನುದಿನವೂ ದಮಯಂತಿಯನ್ನೇ ಸ್ಮರಿಸುತ್ತಾ ದೀರ್ಘವಾಗಿ ನಿಟ್ಟುಸಿರು ಬಿಡುತ್ತಾ ಕಾಲಕಳೆಯುತ್ತಿದ್ದನು.

೬೭ನೆಯ ಅಧ್ಯಾಯವು ಮುಗಿಯಿತು.

೬೮ನೆಯ ಅಧ್ಯಾಯ ನಲೋಪಾಖ್ಯಾನಪರ್ವ (ಮುಂದುವರಿದಿದೆ.)

## ವಿದರ್ಭದರಸನಾದ ಭೀಮರಾಜನು ದಮಯಂತಿಯನ್ನು ಹುಡುಕಲು ಬ್ರಾಹ್ಮಣರನ್ನು ಕಳುಹಿಸಿದುದು : ಸುದೇವನೆಂಬ ಬ್ರಾಹ್ಮಣನು ಚೇದಿರಾಜನ ಅರಮನೆಯಲ್ಲಿ ದಮಯಂತಿಯನ್ನು ಸಂಧಿಸಿದುದು

ಬೃಹದಶ್ವರು ಹೇಳುತ್ತಾರೆ :

"ಧರ್ಮಜ! ನಲನು ತನ್ನ ರಾಜ್ಯ-ಕೋಶಾದಿಗಳೆಲ್ಲವನ್ನೂ ಕಳೆದು ಕೊಂಡು ಅಕಿಂಚನನಾಗಿ ಭಾರ್ಯೆಯೊಡನೆ ರಾಜ್ಯದಿಂದ ಹೊರಟುಹೋದ ನೆಂಬ ವಾರ್ತೆಯು ದಮಯಂತಿಯ ತಂದೆಯಾದ ಭೀಮರಾಜನಿಗೆ ತಿಳಿಯಿತು. ಭೀಮರಾಜನು ಅತಿದುಃಖಿತನಾಗಿ ನಲ-ದಮಯಂತಿಯರನ್ನು ಹೇಗಾದರೂ ಮಾಡಿ ತನ್ನ ಪಟ್ಟಣಕ್ಕೆ ಕರೆತರಬೇಕೆಂಬ ಆಶಯದಿಂದ ಗೂಢಚರ್ಯೆಯಲ್ಲಿ ನಿಷ್ಣಾತರಾದ ಬ್ರಾಹ್ಮಣರನ್ನು ಅರಮನೆಗೆ ಕರೆಯಿಸಿ ಅವರಿಗೆ ಹೇರಳವಾದ ಧನವನ್ನಿತ್ತು ಹೇಳಿದನು :

"ಬ್ರಾಹ್ಮಣೋತ್ತಮರೇ! ನೀವೀಗಲೇ ದೇಶ-ವಿದೇಶಗಳಲ್ಲಿ ಸುತ್ತಿ ನಲ-ದಮಯಂತಿಯರು ಎಲ್ಲಿರುವರೆಂಬುದನ್ನು ತಿಳಿಯಿರಿ. ನಲ-ದಮ ಯಂತಿಯರಿರುವ ಸ್ಥಳವನ್ನು ತಿಳಿದು ಅವರನ್ನು ನಮ್ಮ ದೇಶಕ್ಕೆ ಕರೆತರಲು ನಿಮ್ಮಲ್ಲಿ ಯಾರು ಸಮರ್ಥರಾಗುವಿರೋ—ಅವರಿಗೆ ನಾನು ಒಂದು ಸಾವಿರ ಗೋವುಗಳನ್ನೂ, ಅಗ್ರಹಾರಗಳನ್ನೂ, ನಗರಸದೃಶವಾದ ಗ್ರಾಮಗಳನ್ನೂ ಬಹುಮಾನವಾಗಿ ಕೊಡುವೆನು. ಒಂದು ವೇಳೆ ನಲ-ದಮಯಂತಿಯರನ್ನು ಕರೆತರಲಾಗದಿದ್ದರೂ ಅವರಿಬ್ಬರೂ ಇರುವ ಸ್ಥಳವನ್ನಾದರೂ ತಿಳಿದು ಬಂದವರೂ ನನ್ನಿಂದ ಒಂದು ಸಾವಿರ ಗೋವುಗಳನ್ನು ಬಹುಮಾನ ರೂಪವಾಗಿ ಪಡೆಯುತ್ತಾರೆ."

ಭೀಮರಾಜನ ಮಾತುಗಳನ್ನು ಕೇಳಿ ಬ್ರಾಹ್ಮಣರು ಸಂತೋಷಭರಿತ ರಾಗಿ ನಲ-ದಮಯಂತಿಯರನ್ನರಸಲು ಎಲ್ಲ ದಿಕ್ಕುಗಳಿಗೂ ಹೊರಟರು. ಅಗ್ರಹಾರಗಳಲ್ಲಿ, ಊರುಗಳಲ್ಲಿ, ನಗರಗಳಲ್ಲಿ ಸತತವಾಗಿ ಸುತ್ತಾಡಿದರೂ ಅವರಿಗೆ ನಲ-ದಮಯಂತಿಯರ ವೃತ್ತಾಂತವು ತಿಳಿಯಲಿಲ್ಲ.

ಸುದೇವನೆಂಬ ಬ್ರಾಹ್ಮಣನು ಅನೇಕ ನಗರಗಳನ್ನೂ, ಹಳ್ಳಿಗಳನ್ನೂ, ಊರುಗಳನ್ನೂ ಸುತ್ತಾಡಿ ಕಡೆಗೆ ಚೇದಿರಾಜ್ಯಕ್ಕೆ ಬಂದನು. ಅವನು ಬಂದ ದಿವಸ ಅರಮನೆಯಲ್ಲಿ ಮಂಗಳಕಾರ್ಯವೊಂದರ ಅಂಗವಾಗಿ ಪುಣ್ಯಾಹವು ನಡೆಯುತ್ತಿದ್ದಿತು.

ರಾಜರ ಅರಮನೆಗಳಲ್ಲಿ ವಿಶೇಷಕಾರ್ಯವಿದ್ದ ದಿನ ಆಹ್ವಾನಿತರಾಗ ದಿದ್ದರೂ ಬ್ರಾಹ್ಮಣರು ಅರಮನೆಗೆ ಹೋಗಲು ಅವಕಾಶವಿದ್ದಿತು. ಅವರನ್ನು ಪಹರೆಯವರು ತಡೆಯುತ್ತಿರಲಿಲ್ಲ. ರಾಜನ ಅರಮನೆಯಲ್ಲಿ ವಿಶೇಷ ಕಾರ್ಯವೊಂದರ ಅಂಗವಾಗಿ ಪುಣ್ಯಾಹವಾಚನವು ನಡೆಯುತ್ತಿದೆಯೆಂಬು ದನ್ನು ತಿಳಿದು ಸುದೇವನೂ ಬ್ರಾಹ್ಮಣರ ಜೊತೆಯಲ್ಲಿ ಅರಮನೆಯೊಳಗೆ ನುಸುಳಿದನು. ಪುಣ್ಯಾಹವಾಚನ ನಡೆಯುತ್ತಿದ್ದಾಗ ರಾಜಕುಮಾರಿಯಾದ ಸುನಂದೆಯ ಜೊತೆಯಲ್ಲಿದ್ದ ದಮಯಂತಿಯನ್ನು ಸುದೇವನು ಕಂಡನು. ದಮಯಂತಿಯ ಅನುಪಮವಾದ ರೂಪವು ಹಿಂದಿನಂತೆ ಸ್ಪಷ್ಟವಾಗಿ ತೋರದಿದ್ದರೂ ಗಮನಿಸಿ ನೋಡಿದಾಗ ಅವಳು ದಮಯಂತಿ ಎಂಬುದನ್ನು ತಿಳಿಯಬಹುದಾಗಿದ್ದಿತು. ಅವಳು ಹೊಗೆಯಿಂದ ಸುತ್ತುವರಿಯಲ್ಪಟ್ಟ ಅಗ್ನಿಯ ಜ್ವಾಲೆಯಂತಿದ್ದಳು. ವಿಶಾಲನೇತ್ರೆಯಾದ, ಕೃಶಳಾಗಿದ್ದ ಮತ್ತು ಕುಂದಿದ ಮುಖಾರವಿಂದದಿಂದ ಕೂಡಿದ್ದ ಆ ತರುಣಿಯನ್ನು ದಿಟ್ಟಿಸಿ ನೋಡಿದ ಸುದೇವನು ಇವಳು ದಮಯಂತಿಯೇ ಇರಬೇಕೆಂದು ತಕ್ಕ ಕಾರಣಗಳಿಂದ ನಿಶ್ಚಯಿಸಿಕೊಂಡನು.

ಮಹಾಮೇಧಾವಿಯಾದ ಸುದೇವನು ತಾನೇ ಮಾತನಾಡಿಕೊಂಡನು: "ನಾನು ಹಿಂದೆ ವಿದರ್ಭದಲ್ಲಿ ನೋಡಿದ್ದಾಗ ದಮಯಂತಿಯು ಹೇಗಿದ್ದಳೋ ಇವಳೂ ಅಂತಹ ರೂಪವತಿಯೇ ಆಗಿದ್ದಾಳೆ. ಲೋಕಕಾಂತೆಯಾದ ಶ್ರೀದೇವಿಯನ್ನೇ ಇಂದು ನೋಡಿದಂತಾಯಿತು. ನಿಶ್ಚಯವಾಗಿಯೂ ನಾನೇ ಧನ್ಯನು. ಇವಳು ಪೂರ್ಣಚಂದ್ರನಿಗೆ ಸದೃಶಳಾಗಿದ್ದಾಳೆ. * ಶ್ಯಾಮೆಯಾಗಿದ್ದಾಳೆ. ನಿತ್ಯಯೌವ್ವನೆಯಾಗಿದ್ದಾಳೆ. ದುಂಡಾಗಿಯೂ, ಮನೋಹರವಾಗಿಯೂ ಇರುವ ಪಯೋಧರಗಳುಳ್ಳವಳಾಗಿದ್ದಾಳೆ. ಇವಳು ತನ್ನ ಪ್ರಭೆಯಿಂದ

---

* 'ಶ್ಯಾಮಾ' ಎಂದರೆ 'ಯೌವನಮಧ್ಯಸ್ಥಾ' = ಸರ್ವದಾ ಹದಿನಾರು ವರ್ಷ ಪ್ರಾಯದವಳಂತೆಯೇ ಕಾಣುವವಳು ಎಂದು ಅರ್ಥವಿದೆ.

ದಿಕ್ಕು-ದಿಕ್ಕುಗಳಲ್ಲಿಯೂ ಇರುವ ಕತ್ತಲೆಯನ್ನು ಹೋಗಲಾಡಿಸುವ ಸಾಮರ್ಥ್ಯವುಳ್ಳವಳಾಗಿದ್ದಾಳೆ. ಇವಳು ಮನೋಹರವಾದ ಕಮಲದಂತೆ ವಿಶಾಲವಾದ ನೇತ್ರವುಳ್ಳವಳಾಗಿದ್ದಾಳೆ. ಹೆಚ್ಚೇನು ವರ್ಣಿಸಲಿ? ಇವಳು ನಿಶ್ಚಯವಾಗಿಯೂ ಕಾಮನ ಹೆಂಡತಿಯಾದ ಸಾಕ್ಷಾತ್ ರತೀದೇವಿ ಯಂತೆಯೇ ಇದ್ದಾಳೆ. ಪೂರ್ಣಚಂದ್ರನನ್ನು ನೋಡಿದರೆ ಎಷ್ಟೊಂದು ಆನಂದವಾಗುವುದೋ ಅಷ್ಟೇ ಆನಂದವು ಇವಳ ಮುಖಚಂದ್ರನನ್ನು ನೋಡುವುದರಿಂದ ಉಂಟಾಗುತ್ತದೆ. ಕಿತ್ತುಹಾಕಲ್ಪಟ್ಟ ಕಮಲಕಾಂಡವು ಕೆಸರಿನಿಂದ ಕೂಡಿ ಮಲಿನವಾಗಿರುವಂತೆ–ವಿದರ್ಭವೆಂಬ ಸರೋವರದಲ್ಲಿದ್ದ ಕಮಲಕಾಂಡಸದೃಶಳಾದ ದಮಯಂತಿಯು ದೈವದೋಷದಿಂದ ಕಿತ್ತುಹಾಕ ಲ್ಪಟ್ಟವಳಾಗಿ ಕಾಂತಿಹೀನಳಾಗಿದ್ದಾಳೆ. ಮೇಲಾಗಿ ಗಂಡನಿಂದಲೂ ಬೇರ್ಪಟ್ಟಿ ರುವ ಇವಳು ಪತಿವಿರಹಶೋಕದಿಂದ ದೀನಳಾಗಿ–ರಾಹುಗ್ರಸ್ತನಾದ ಚಂದ್ರ ನನ್ನು ಹೊಂದಿರುವ ಹುಣ್ಣಿಮೆಯ ರಾತ್ರಿಯಂತೆ–ಕಾಣುತ್ತಿದ್ದಾಳೆ. ನಯನ ಮನೋಹರವಾದ ಕಮಲಗಳಿಂದ ಅಲಂಕೃತವಾಗಿರುವ, ನಾನಾವಿಧವಾದ ಪಕ್ಷಿಗಳಿಂದ ಕೂಡಿರುವ ಸರೋವರಕ್ಕೆ ಆನೆಯು ಧುಮುಕಿ ಕಮಲದ ಕಾಂಡಗಳೆಲ್ಲವನ್ನೂ ಕಿತ್ತು, ಪಕ್ಷಿಗಳನ್ನು ಹೆದರಿಸಿ ಓಡಿಸಿದಾಗ ಕದಡಿದ ನೀರುಳ್ಳ ಸರೋವರದಂತಾಗಿರುವುದು ದಮಯಂತಿಯ ಈಗಿನ ಸ್ಥಿತಿ. ಸುಕುಮಾರಿಯಾದ ಮತ್ತು ನಿಷ್ಕಳಂಕಳಾದ ಇವಳು ನಿಶ್ಚಯವಾಗಿಯೂ ರತ್ನಖಚಿತವಾದ ಅರಮನೆಯಲ್ಲಿರಲು ಯೋಗ್ಯಳಾಗಿರುವಳು. ಆದರೆ ಇಂದು ದುರ್ವಿಧಿಯಿಂದಾಗಿ ಸರೋವರದಿಂದ ಕಿತ್ತು ಹೊರಕ್ಕೆ ಹಾಕಿದ ಕೋಮಲವಾದ ಕಮಲಕಾಂಡವು ಸೂರ್ಯನ ಬೇಗೆಗೆ ಸಿಕ್ಕಿ ಕಾಂತಿಹೀನ ವಾಗುವಂತೆ–ಇವಳು ಕಾಂತಿಹೀನಳಾಗಿದ್ದಾಳೆ.

ದಮಯಂತಿಯು ಅತಿಶಯವಾದ ರೂಪಿನಿಂದ ಪರಿಶೋಭಿಸುತ್ತಿದ್ದಾಳೆ. ಇವಳು ಉದಾರಗುಣವುಳ್ಳವಳು. ರತ್ನಾಭರಣಗಳನ್ನು ಧರಿಸಲು ಯೋಗ್ಯ

---

ಶೀತೇ ಚೈವೋಷ್ಮಲಾ ನಿತ್ಯಂ ಗ್ರೀಷ್ಮೇ ಚಾತೀವ ಶೀತಲಾ ।
ಮಧ್ಯಃ ಕ್ಷೀಣಸ್ತು ಯಸ್ಯಾಸ್ತು ಸಾ ಶ್ಯಾಮೇತ್ಯಭಿಧೀಯತೇ ॥

ಎಂಬಂತೆ ಯಾವ ಸ್ತ್ರೀಯು ಬೇಸಿಗೆಯಲ್ಲಿ ಶೀತಲವಾದ ಶರೀರವುಳ್ಳವಳಾಗಿರುವಳೋ, ಶೀತಕಾಲದಲ್ಲಿ ಶಾಖವಾದ ಶರೀರವುಳ್ಳವಳಾಗಿರುವಳೋ ಮತ್ತು ಕೃಶವಾದ ಸೊಂಟದಿಂದ ಕೂಡಿರುವಳೋ–ಅವಳಿಗೆ 'ಶ್ಯಾಮಾ' ಎಂದು ಹೆಸರು.

ಳಾಗಿದ್ದರೂ ಆಭರಣರಹಿತಳಾಗಿದ್ದಾಳೆ. ಇವಳು ಮೋಡದಿಂದ ಆವೃತವಾದ ಚಂದ್ರಲೇಖೆಯಂತೆಯೇ ಕಾಣುತ್ತಿದ್ದಾಳೆ.

ಕಾಮೋಪಭೋಗಗಳೆಲ್ಲವೂ ಇವಳಿಂದ ದೂರಸರಿದು ನಿಂತಿವೆ. ಇವಳನ್ನು ಪ್ರೀತಿಸುವವರಾಗಲೀ, ಬಂಧುಜನಗಳಾಗಲೀ ಇವಳ ಸಮೀಪ ದಲ್ಲಿರುವುದಿಲ್ಲ. ಆದರೂ ದೀನಳಾದ ಇವಳು ಪತಿದರ್ಶನಾಕಾಂಕ್ಷೆಯಿಂದಾಗಿ ದೇಹಧಾರಣೆಯನ್ನು ಮಾಡಿಕೊಂಡಿರುತ್ತಾಳೆ.

**ಭರ್ತಾ ನಾಮ ಪರಂ ನಾರ್ಯಾ ಭೂಷಣಂ ಭೂಷಣೈರ್ವಿನಾ ।**
**ಏಷಾ ಹಿ ರಹಿತಾ ತೇನ ಶೋಭಮಾನಾ ನ ಶೋಭತೇ ॥೧೯॥**

ಸತಿಗೆ ಯಾವ ಆಭರಣಗಳಿಲ್ಲದಿದ್ದರೂ ಪತಿಯೇ ಆಭರಣಪ್ರಾಯ ನಾಗುತ್ತಾನೆ. ಪತಿಯೊಡನಿರುವುದೇ ಸ್ತ್ರೀಗೆ ಭೂಷಣ. ಪತಿಯ ಜೊತೆಯಲ್ಲಿಲ್ಲದ ಈ ದಮಯಂತಿಯು ಎಷ್ಟೇ ಚೆಲುವೆಯಾಗಿದ್ದರೂ ಪರಿಶೋಭಿ ಸುತ್ತಿಲ್ಲ.

ಇವಳಿಂದ ಬೇರ್ಪಟ್ಟ ನಲನೂ ದುಸ್ಸಾಧ್ಯವಾದ ರೀತಿಯಲ್ಲಿ ವರ್ತಿಸಿದ ನೆಂದೇ ಹೇಳಬೇಕಾಗಿದೆ. ಏಕೆಂದರೆ : ಇಂತಹ ತ್ರಿಲೋಕಸುಂದರಿಯನ್ನು ಬಿಟ್ಟು ನಲನು ಪ್ರಾಣವುಳಿಸಿಕೊಂಡಿರುವುದೂ ಹೆಚ್ಚಿನದೇ ಆಗಿದೆ. ಕಪ್ಪಾದ ಕೇಶರಾಶಿಯಿಂದ ಕೂಡಿರುವ ಕಮಲದಳನೇತ್ರೆಯಾದ ಸುಖೋಪಭೋಗ ಯೋಗ್ಯಳಾದ ಇವಳು ಇಂತಹ ದಾರುಣವಾದ ಕಷ್ಟದಲ್ಲಿರುವುದನ್ನು ನೋಡಿ ನನ್ನ ಹೃದಯವೇ ಬೆಂದುಹೋಗುತ್ತಿದೆ.

ಅಯ್ಯೋ! ಸರ್ವಲಕ್ಷಣಸಂಪನ್ನೆಯಾದ, ಪತಿವ್ರತಾಶಿರೋಮಣಿ ಯಾದ, ಸಾಧ್ವಿಯಾದ ಈ ದಮಯಂತಿಯು–ರೋಹಿಣಿಯು ಚಂದ್ರನನ್ನು ಸೇರುವಂತೆ–ತನ್ನ ಗಂಡನನ್ನು ಸೇರಿ ಈ ದುಃಖಸಾಗರದ ಕೊನೆಯನ್ನು ಎಂದು ಮುಟ್ಟುವಳೋ?

**ಅಸ್ಯಾ ನೂನಂ ಪುನರ್ಲಾಭಾನ್ನೈಷಧಃ ಪ್ರೀತಿಮೇಷ್ಯತಿ ।**
**ರಾಜಾ ರಾಜ್ಯಪರಿಭ್ರಷ್ಟಃ ಪುನರ್ಲಬ್ಧ್ವಾ ಚ ಮೇದಿನೀಮ್ ॥೨೩॥**

ರಾಜ್ಯಭ್ರಷ್ಟನಾದ ಒಬ್ಬ ರಾಜನು ಕೆಲಕಾಲಾನಂತರ ತನ್ನ ಮಿತ್ರರ ಸಹಾಯದಿಂದ ಪುನಃ ರಾಜ್ಯವನ್ನು ಶತ್ರುಗಳಿಂದ ವಶಪಡಿಸಿಕೊಂಡಾಗ ಎಷ್ಟು ಆನಂದಪಡುವನೋ–ಅಷ್ಟೇ ಆನಂದವನ್ನು ನಿಷಧಾಧಿಪತಿಯಾದ ನಲ ರಾಜನೂ ದಮಯಂತಿಯ ಪುನರ್ಮಿಲನವಾದಾಗ ಅನುಭವಿಸುವನು.

ಸೌಂದರ್ಯದಲ್ಲಿ, ಸ್ವಭಾವದಲ್ಲಿ, ವಯಸ್ಸಿನಲ್ಲಿ ಮತ್ತು ವಂಶದಲ್ಲಿಯೂ ದಮಯಂತಿಯು ನಲನಿಗೆ ಅನುರೂಪಳಾದ ಭಾರ್ಯೆಯಾಗಿದ್ದಾಳೆ. ಅಂತೆಯೇ ದಮಯಂತಿಗೆ ನಲನೂ ಅನುರೂಪನಾದ ಪತಿಯಾಗಿದ್ದಾನೆ.

ಪತಿದರ್ಶನಾಕಾಂಕ್ಷೆಯಿಂದಿರುವ ಇವಳನ್ನು ಸಂತೈಸುವುದು ನನ್ನ ಕರ್ತವ್ಯವಾಗಿದೆ. ಪೂರ್ಣಚಂದ್ರನಿಗೆ ಸದೃಶವಾದ ಮುಖಕಾಂತಿಯುಳ್ಳ, ಹುಟ್ಟಿದಂದಿನಿಂದ ದುಃಖವೆಂಬುದನ್ನೇ ಅರಿಯದ ಇವಳು ಈಗ ದುಃಖಸಾಗರ ದಲ್ಲಿಯೇ ಮುಳುಗಿಹೋಗಿರುವಳು. ಯಾವಾಗಲೂ ಪತಿಯ ಸ್ಮರಣೆ ಯಲ್ಲಿಯೇ ಕಾಲಕಳೆಯುತ್ತಿರುವ ದಮಯಂತಿಯನ್ನು ಸಂಧಿಸಿ ಸುಮಧುರ ವಾದ ಮಾತುಗಳಿಂದ ಸಂತೈಸುತ್ತೇನೆ.''

ಸುದೇವನು ಹೀಗೆ ಮನಸ್ಸಿನಲ್ಲಿಯೇ ನಿರ್ಧರಿಸಿ, ದಮಯಂತಿಯು ಅಲ್ಲಿಯೇ ಇರುವಳೆಂಬುದನ್ನು ಅನೇಕ ಕಾರಣಗಳಿಂದಲೂ, ಅವಳೇ ದಮಯಂತಿಯೆಂಬುದನ್ನು ಅವಳಲ್ಲಿದ್ದ ಶುಭಲಕ್ಷಣಗಳಿಂದಲೂ ನಿರ್ಧರಿಸಿ ದವನಾಗಿ, ಅವಳನ್ನು ಏಕಾಂತದಲ್ಲಿ ಸಂಧಿಸಿ, ಅವಳೊಡನೆ ಹೇಳಿದನು : ``ವಿದರ್ಭರಾಜಪುತ್ರಿಯೇ! ನಾನು ನಿನ್ನ ಸೋದರರನ ಸ್ನೇಹಿತನಾದ ಸುದೇವ ನಾಗಿರುತ್ತೇನೆ. ನಿನ್ನ ತಂದೆಯಾದ ಭೀಮರಾಜನ ಆಶಯದಂತೆ ಮತ್ತು ಆಜ್ಞೆಯಂತೆ ನಿನ್ನನ್ನು ಹುಡುಕುವ ಸಲುವಾಗಿ ನಾನಿಲ್ಲಿಗೆ ಬಂದಿರುವೆನು. ನಿನ್ನ ತಾಯಿ-ತಂದೆಗಳೂ ಮತ್ತು ಸಹೋದರರೂ ಕುಶಲಿಗಳಾಗಿರುವರು. ಆಯುಷ್ಮಂತರಾದ ನಿನ್ನ ಮಕ್ಕಳೂ ಕುಶಲಿಗಳಾಗಿರುವರು. ಆದರೆ, ರಾಜಪುತ್ರಿ! ನಿನ್ನ ಬಂಧುಗಳು ಜೀವಿಸಿದ್ದರೂ ನಿನ್ನ ಕಾರಣದಿಂದಾಗಿ ಸತ್ವಹೀನರಾಗಿದ್ದಾರೆ. ಕುಂದಿದ ಮುಖಕಾಂತಿಯುಳ್ಳವರಾಗಿರುತ್ತಾರೆ. (ಜೀವ ವಿಲ್ಲದವರಂತಿರುತ್ತಾರೆ.) ನೂರಾರು ಬ್ರಾಹ್ಮಣರು ನಿನ್ನನ್ನು ಹುಡುಕುವ ಸಲುವಾಗಿ ದೇಶ-ವಿದೇಶಗಳಲ್ಲಿ ಸಂಚರಿಸುತ್ತಿದ್ದಾರೆ.''

ಬೃಹದಶ್ವರು ಕಥೆಯನ್ನು ಮುಂದುವರಿಸಿ ಹೇಳುತ್ತಾರೆ :

``ಧರ್ಮಜ! ಸುದೇವನು ತನ್ನ ಪರಿಚಯಮಾಡಿಕೊಟ್ಟನಂತರ ದಮ ಯಂತಿಗೆ ಸುದೇವನ ಗುರುತು ಸಿಕ್ಕಿತು. ಅವನು ತನ್ನ ಸೋದರರನ ಮಿತ್ರ ನೆಂಬುದೂ ದಮಯಂತಿಯ ಸ್ಮರಣೆಗೆ ಬಂದಿತು. ಅನಂತರದಲ್ಲಿ ಅವ ನೊಡನೆ ನಿರ್ಭೀತಳಾಗಿ ಮನಬಿಚ್ಚಿ ಮಾತನಾಡಿದಳು. ತನ್ನ ಬಂಧುಗಳೆಲ್ಲರ

ಯೋಗ-ಕ್ಷೇಮಸಮಾಚಾರಗಳನ್ನು ಇನ್ನೂ ವಿಶದವಾಗಿ ಕೇಳಿ ತಿಳಿದು ಕೊಂಡಳು. ಅದುವರೆಗೂ ತನ್ನ ಪರಿಚಯಸ್ಥರಾದವರಾರನ್ನೂ ಕಾಣದಿದ್ದ ದಮಯಂತಿಗೆ ತನ್ನ ಸೋದರನ ಮಿತ್ರನಾದ, ಚಿರಪರಿಚಿತನಾದ ಸುದೇವ ನನ್ನು ನೋಡಿದೊಡನೆಯೇ ಅಪಾರವಾದ ದುಃಖವು ಉಕ್ಕಿಯುಕ್ಕಿ ಬಂದಿತು. ದಮಯಂತೀ-ಸುದೇವರು ಮಾತನಾಡುತ್ತಿರುವುದನ್ನೂ ಮತ್ತು ದಮ ಯಂತಿಯು ಬಿಕ್ಕಿ-ಬಿಕ್ಕಿ ಅಳುತ್ತಿರುವುದನ್ನೂ ರಾಜಪುತ್ರಿಯಾದ ಸುನಂದೆಯು ಕಂಡು, ತಾನೂ ಶೋಕಪೀಡಿತೆಯಾಗಿ, ತನ್ನ ತಾಯಿಯ ಬಳಿಗೆ ಹೋಗಿ ಹೇಳಿದಳು : “ಅಮ್ಮ! ಸೈರಂಧ್ರಿಯು ಬ್ರಾಹ್ಮಣನೊಬ್ಬನ ಸಮ್ಮುಖದಲ್ಲಿ ಗಟ್ಟಿಯಾಗಿ ಅಳುತ್ತಿರುವಳು. ಈಗಲೇ ಹೋಗಿ ಅದರ ಕಾರಣವನ್ನು ತಿಳಿದುಕೊಳ್ಳಮ್ಮ.”

ಮಗಳ ಮಾತನ್ನು ಕೇಳಿದೊಡನೆಯೇ ಚೇದಿರಾಜಮಾತೆಯು ತನ್ನ ಅಂತಃಪುರದಿಂದ ಹೊರಬಂದು ದಮಯಂತಿಯೊಡನೆ ಮಾತನಾಡುತ್ತಾ ಕುಳಿತಿದ್ದ ಸುದೇವನನ್ನು ಕರೆಯಿಸಿ ಹೇಳಿದಳು : “ಬ್ರಾಹ್ಮಣೋತ್ತಮನೇ! ಈ ಸುಂದರಾಂಗಿಯು ಯಾರ ಭಾರ್ಯೆ? ಇವಳು ಬಂಧುಗಳಿಂದಲೂ, ತಾಯಿ-ತಂದೆಗಳಿಂದಲೂ, ಪತಿಯಿಂದಲೂ ಬೇರ್ಪಡಲು ಕಾರಣವಾದರೂ ಏನು? ಇವಳು ಈ ದುಃಸ್ಥಿತಿಯಲ್ಲಿ ಇಲ್ಲಿರುವಳೆಂಬ ವಿಷಯವು ನಿನಗೆ ತಿಳಿದುದು ಹೇಗೆ? ನಾನು ಈ ವಿಷಯಗಳೆಲ್ಲವನ್ನೂ ವಿಶದವಾಗಿ ನಿನ್ನಿಂದ ಕೇಳಿ ತಿಳಿಯುವ ಆಶಯದಿಂದಿರುವೆನು. ದೇವರೂಪಿಣಿಯಾದ ಈ ಸುಂದರಾಂಗಿಯ ವಿಷಯವಾಗಿ ಕೇಳುತ್ತಿರುವ ನನಗೆ ನೀನೆಲ್ಲವನ್ನೂ ವಿಶದವಾಗಿ ತಿಳಿಸುವೆಯಾ?”

ರಾಜಮಾತೆಯು ಹೀಗೆ ಹೇಳಿದನಂತರ ಸುದೇವನು ದಮಯಂತಿಯ ಪೂರ್ವೇತಿಹಾಸವನ್ನು ಹೇಳಲು ಸಮ್ಮತಿಸಿ, ಸುಖಾಸನದಲ್ಲಿ ಕುಳಿತು ದಮಯಂತಿಯ ನಿಜಚರಿತ್ರೆಯನ್ನು ಹೇಳಲು ಉಪಕ್ರಮಿಸಿದನು.

೬೮ನೆಯ ಅಧ್ಯಾಯವು ಮುಗಿಯಿತು.

## ನಾಲ್ಕನೆಯ ಸಂಪುಟವು ಮುಗಿಯಿತು.

ಶ್ರೀಕೃಷ್ಣಾರ್ಪಣಮಸ್ತು ಶ್ರೀಸದ್ಗುರುಚರಣಾರವಿಂದಾರ್ಪಣಮಸ್ತು

ಓಂ ತತ್ಸತ್

